**VOL III.** ಓಂ [3ನೇ ಸಂಚಿಕೆ.

॥ ಶ್ರೀ ಮಧ್ವನಾಥೋ ವಿಜಯತೇ ॥

# ಶ್ರೀಮನ್ಮಧ್ವಾಚಾರ್ಯರ

ಮೂಲಗ್ರಂಥಗಳ ಮಾಲಿಕೆಯ ತೃತೀಯ ಗುಚ್ಛದಲ್ಲಿ

**ಸೂತ್ರಪ್ರಸ್ಥಾನದಲ್ಲಿ ಮೂರನೆಯದಾದ**

**(ಸನ್ನ್ಯಾಯರತ್ನಾವಳೀ, ನಯಚಂದ್ರಿಕಾ, ನ್ಯಾಯಸುಧಾ,–ಇವುಗಳ ತಾತ್ಪರ್ಯ ಸಹಿತ)**

## ಶ್ರೀಮತ್

# ಬ್ರಹ್ಮಸೂತ್ರಾನುವ್ಯಾಖ್ಯಾನವು.

**ಸಮನ್ವಯಾಧ್ಯಾಯ, ಅವಿರೋಧಾಧ್ಯಾಯ, ಸಾಧನಾಧ್ಯಾಯ,**
**ಫಲಾಧ್ಯಾಯ ಈ ನಾಲ್ಕು ಅಧ್ಯಾಯಗಳು**

ದ್ವೈತ ವೇದಾಂತ ವಿದ್ವಾನ್, ದ್ವೈತವೇದಾಂತಶಿರೋಮಣಿ,
ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲಾ ಪಂಡಿತ
ಅಗ್ರಹಾರ **ನಾರಾಯಣ** ತಂತ್ರಿಗಳಿಂದ ವಿರಚಿತವಾದ

**ಕನ್ನಡಟೀಕಾ ಭಾಷಾಂತರ ಸಹಿತ.**




1860ನೇ ಇಸವಿಯ 21ನೇ ಆಕ್ಟಿನ ಮೇರೆಗೆ ರಿಜಿಸ್ಟ್ರಿಯಾಗಿರುವ
**ಶ್ರೀ ಮಧ್ವಮುನಿ ಸೇವಾಸಂಘ, ಉಡುಪಿ**
ಇವರಿಂದ ಪ್ರಕಾಶಿಸಲ್ಪಟ್ಟಿತು.

ಪ್ರಭಾಕರ ಪ್ರೆಸ್, ಲಿಮಿಟೆಡ್, ಉಡುಪಿ ಇವರಿಂದ ಮುದ್ರಿಸಲ್ಪಟ್ಟಿತು.



1939.

# ಶ್ರೀ ಮಧ್ವಮುನಿ ಸೇವಾಸಂಘದ ಪೋಷಕರು.

ಸ್ವಸ್ತಿ ಶ್ರೀಮತ್ಪರಮಹಂಸಪರಿವ್ರಾಜಕಾಚಾರ್ಯವರ್ಯತ್ವಾ-
ದ್ಯನೇಕಗುಣಸಂಪನ್ನರಾದ

1. ಶ್ರೀ ವಿಷ್ಣುಪದಂಗತ ಉಡುಪಿ ಶ್ರೀ ಅದಮಾರುಮಠದ ವಿಬುಧಪ್ರಿಯ ತೀರ್ಥ ಶ್ರೀಪಾದಂಗಳವರು.
2. ಶ್ರೀ ಪುತ್ತಿಗಾಮಠದ ಸುಧೀಂದ್ರತೀರ್ಥ ಶ್ರೀಪಾದಂಗಳವರು.
3. ಶ್ರೀ ವಿಷ್ಣುಪದಂಗತ ಶ್ರೀ ಕೃಷ್ಣಾಪುರಮಠದ ವಿದ್ಯಾಪೂರ್ಣತೀರ್ಥ ಶ್ರೀಪಾದಂಗಳವರು.
4. ಶ್ರೀ ಸೋದಾಮಠದ ವಿಶ್ವೇಂದ್ರತೀರ್ಥ ಶ್ರೀಪಾದಂಗಳವರು.
5. ಶ್ರೀ ಕಾಣೂರುಮಠದ ವಿದ್ಯಾಸಮುದ್ರತೀರ್ಥ ಶ್ರೀಪಾದಂಗಳವರು.
6. ಶ್ರೀ ಫಲಿಮಾರುಮಠದ ರಘುಮಾನ್ಯತೀರ್ಥ ಶ್ರೀ ಪಾದಂಗಳವರು.
7. ಶ್ರೀ ಶೀರೂರುಮಠದ ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರು.
8. ಶ್ರೀ ಪೇಜಾವರಮಠದ ವಿಶ್ವಮಾನ್ಯತೀರ್ಥ ಶ್ರೀಪಾದಂಗಳವರು.
9. ಶ್ರೀ ಕಾಶೀಮಠದ ಸುಕೃತೀಂದ್ರತೀರ್ಥ ಶ್ರೀಪಾದಂಗಳವರು.
10. ಶ್ರೀ ಉತ್ತರಾಧಿಮಠದ ಶ್ರೀ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರು.
11. ಕೀರ್ತಿಶೇಷ ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾವ್ ಅವರ್ಗಳ್,
    ಬಿ. ಎಸ್. ಸಿ., ಎಲ್. ಸಿ. ಇ., ಎಮ್. ಆರ್. ಎ. ಎಸ್.
    ರಿಟಾಯರ್ಡ್ ಚೀಫ್ ಎಂಜಿನಿಯರ್, ಮೈಸೂರು.
12. ಮ. ರಾ. ರಾ. ಡಾಕ್ಟರ್ ಉಡುಪಿ ರಾಮರಾವ್ ಅವರ್ಗಳ್,
    ಪ್ರೆಸಿಡೆಂಟ್, ಲೆಜಿಸ್ಲೇಟಿವ್ ಕೌನ್ಸಿಲ್, ಮದ್ರಾಸ್.
13. ,, ಮಣೆಲ್ ಕೃಷ್ಣ ನಾಯಕ್ ಮತ್ತು ಸನ್ಸ್,
    ಮರ್ಚಂಟ್ಸ್, ಮಂಗಳೂರು.
14. ,, ತಾಲೂರ್ ಶ್ಯಾಮರಾವ್ ಅವರ್ಗಳ್, ಬಿ. ಎ., ಬಿ. ಎಲ್.,
    ಮಾಜಿ ಪ್ರಿನ್ಸಿಪಾಲ್ ಸಬೋರ್ಡಿನೇಟ್ ಜಡ್ಜ್, ಬಳ್ಳಾರಿ.
15. ,, ಇಡ್ಯ ವೆಂಕಟರಾವ್ ಅವರ್ಗಳ್, ಎಲ್. ಎಮ್. ಎಂಡ್ ಎಸ್,
    ಸಿವಿಲ್ ಅಸಿಸ್ಟಾಂಟ್ ಸರ್ಜನ್.
16. ,, ಹರಿವನಂ ಹನುಮಂತಾಚಾರ್ಯ ಅವರ್ಗಳ್,
    ಹರಿವನಂ, ಎಡೋನಿ ತಾಲೂಕು, ಬಳ್ಳಾರಿಜಿಲ್ಲಾ.

|| ಶ್ರೀಃ ||

# ಉಪೋದ್ಘಾತವು.

1. ವಿದ್ಯೆಯು— ೧ ಪರವಿದ್ಯೆ, ೨ ಅಪರವಿದ್ಯೆ ಎಂದು ಎರಡು ವಿಧವು. ಅದರಲ್ಲಿ ೧ ವಿಷ್ಣು ಸರ್ವೋತ್ತಮತ್ವಾದಿ ಪ್ರತಿಪಾದಕವಾದ ನಿರ್ಣಾಯಕ ವಿದ್ಯೆಯು, ಪರವಿದ್ಯೆಯೆನ್ನಿಸುತ್ತದೆ. ೨ ಇತರವಾದ ನಿರ್ಣಯ ವಿದ್ಯೆಯು ಅಪರವಿದ್ಯೆಯು ಬ್ರಹ್ಮಸೂತ್ರವು ವಿಷ್ಣು ಸರ್ವೋತ್ತಮತ್ವಾದಿ ಸಕಲ ಸಿದ್ಧಾಂತ ತತ್ವಗಳನ್ನು ಬೋಧಿಸುವುದರಿಂದಲೂ, ಸರ್ವ ಶಾಸ್ತ್ರಾರ್ಥ ನಿರ್ಣಾಯಕವಾಗಿರುವುದರಿಂದಲೂ, ಸರ್ವೋತ್ಕೃಷ್ಟ ಪ್ರಮಾಣವಾಗಿರುವುದರಿಂದಲೂ ಪರವಿದ್ಯೆ ಎನ್ನಿಸುತ್ತದೆ. ಇಂತಹ ಪರವಿದ್ಯೆಯು ತತ್ವಾರ್ಥವನ್ನು ಪ್ರಚಾರಪಡಿಸಿ ಸಜ್ಜನರನ್ನುದ್ಧರಿಸುವುದಕ್ಕಾಗಿ ಶ್ರೀ ಹರಿಯು ಆಜ್ಞಾನುಸಾರವಾಗಿ ಅವತರಿಸಿರುವ ಶ್ರೀಮದಾನಂದತೀರ್ಥಾಚಾರ್ಯರು ಶ್ರೀಮದ್ಬ್ರಹ್ಮಸೂತ್ರಕ್ಕೆ ೧ ಭಾಷ್ಯ, ೨ ಅಣುಭಾಷ್ಯ, ೩ ಅನುವ್ಯಾಖ್ಯಾನ, ೪ ನ್ಯಾಯವಿವರಣವೆಂಬ ನಾಲ್ಕು ವ್ಯಾಖ್ಯಾನಗಳನ್ನು ನಿರ್ಮಿಸಿರುವರು. ಅವುಗಳಲ್ಲಿ ಶ್ರೀಮದಾಚಾರ್ಯರೊಡನೆ ಹದಿನೈದು ದಿನಗಳಲ್ಲಿ ವಾದಮಾಡಿ ಪರಾಜಯುವನ್ನು ಹೊಂದಿ ಶಿಷ್ಯಭಾವವನ್ನು ಹೊಂದಿದ ತ್ರಿವಿಕ್ರಮಪಂಡಿತಾಚಾರ್ಯರು ಬ್ರಹ್ಮಸೂತ್ರಾದಿಗಳು ಇದ್ದರೂ ಅಲ್ಲಿ ವಿಸ್ತರಭೀತಿಯಿಂದ ಹೇಳಲ್ಪಡದ, ದುರ್ವಾದಿಗಳ ಗರ್ವನನ್ನು ಭಂಗಮಾಡುವ ಯುಕ್ತಿರತ್ನಾಕರವಾಗಿರುವ ಗ್ರಂಥರತ್ನವನ್ನು ಮಾಡಬೇಕೆಂದು ಪ್ರಾರ್ಥಿಸಿದಮೇರೆಗೆ ಶ್ರೀಮದಾಚಾರ್ಯರು ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನವೆಂಬ ಗ್ರಂಥರತ್ನವನ್ನು ಮಾಡಿರುವರು. ಆಸ್ತಿಕ ಶಿರೋಮಣಿಗಳಲ್ಲಿ ತತ್ವಜ್ಞಾನವನ್ನು ದೃಢಪಡಿಸುವ, ಕ್ಷೀರಸಾಗರ ಮಥನದಿಂದ ದೊರೆತ ಅಮೃತಸದೃಶವಾದ ಈ ಗ್ರಂಥರತ್ನವು ದುರ್ಮತಗಳೆಲ್ಲವನ್ನು ಸಯುಕ್ತಿಕ ಪ್ರಮಾಣಗಳಿಂದ ಖಂಡಿಸಿ, ಶ್ರೀ ಹರಿಯ ಗುಣಪೂರ್ಣತ್ವ, ನಿರ್ದೋಷತ್ವಾದಿರೂಪವಾದ ಸಿದ್ಧಾಂತ ತತ್ವಗಳೆಲ್ಲವನ್ನು ಸ್ಪಷ್ಟವಾಗಿ ಬೋಧಿಸಿರುವುದು. ಆದುದರಿಂದ ಈ ಗ್ರಂಥವು ಸರ್ವೋತ್ಕೃಷ್ಟವಾದುದು

2. ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನಕ್ಕೆ ೧ ಪದ್ಮನಾಭತೀರ್ಥಾರ್ಯವಿರಚಿತ ಸನ್ನ್ಯಾಯರತ್ನಾವಳೀ, ೨ ನಾರಾಯಣಪಂಡಿತಾಚಾರ್ಯ ವಿರಚಿತ ನಯಚಂದ್ರಿಕಾ, ೩ ಜಯತೀರ್ಥಶ್ರೀಮಚ್ಚರಣವಿರಚಿತ ನ್ಯಾಯಸುಧಾ ಎಂಬ ಮೂರು ವ್ಯಾಖ್ಯಾನಗಳು ಇವೆ. ಅವುಗಳಲ್ಲಿ ನ್ಯಾಯಸುಧಾಕ್ಕೆ ಪರಿಮಳ, ಯಾದುಪತ್ಯ, ವಾಕ್ಯಾರ್ಥಚಂದ್ರಿಕಾ ಮೊದಲಾದ ಹದಿನೈದು ವ್ಯಾಖ್ಯಾನಗಳು ಪ್ರಸಿದ್ಧಗಳಾಗಿವೆ. ಈ ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನವನ್ನು **ಗ್ರಂಥೋಽಯಮಪಿ ಬಹ್ವರ್ಥಃ ಭಾಷ್ಯಂ ಚಾತ್ಯರ್ಥವಿಸ್ತರಂ । ಬಹುಜ್ಞಾ ಏವ ಜಾನಂತಿ ವಿಶೇಷೇಣಾರ್ಥಮೇತಯೋಃ ||** ಎಂದು ಶ್ರೀಮದಾಚಾರ್ಯರೇ ಅನೇಕಾರ್ಥವುಳ್ಳದ್ದೆಂದು ಹೇಳಿರುವರು. ಆದುದರಿಂದಲೇ ಜಯತೀರ್ಥಶ್ರೀಮಚ್ಚರಣರು ನ್ಯಾಯಸುಧಾಗ್ರಂಥದಲ್ಲಿ ಅಲ್ಲಲ್ಲಿ ಕೆಲವು ವಾಕ್ಯಗಳಿಗೆ ೧೦-೧೮ ಇತ್ಯಾದಿ ಅನೇಕಾರ್ಥಗಳನ್ನು ಹೇಳಿರುವರು.

3. ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನವು ಬ್ರಹ್ಮಸೂತ್ರದಂತೆ 1 ಸಮನ್ವಯಾಧ್ಯಾಯ, 2 ಅವಿರೋಧಾಧ್ಯಾಯ, 3 ಸಾಧನಾಧ್ಯಾಯ, 4 ಫಲಾಧ್ಯಾಯ ಎಂದು ಚತುರಧ್ಯಾಯಾತ್ಮಕವಾದುದು. ಅವುಗಳಲ್ಲಿ 1ನೇ ಅಧ್ಯಾಯದಲ್ಲಿ ಅನಂತಶಬ್ದಗಳನ್ನು ಮುಖ್ಯ ವೃತ್ತಿಯಿಂದ

ಶ್ರೀ ಹರಿಯಲ್ಲಿ ಸಮನ್ವಯಮಾಡಿ ಶ್ರೀ ನಾರಾಯಣನು ನಿಖಿಲ ಗುಣಪರಿಪೂರ್ಣನೆಂದೂ, 2ನೇ ಅಧ್ಯಾಯದಲ್ಲಿ ನಾಲ್ಕುವಿಧ ವಿರೋಧಗಳನ್ನು ಪರಿಹರಿಸಿ ದೋಷಲೇಶರಹಿತನೆಂದೂ, 3ನೇಅಧ್ಯಾಯದಲ್ಲಿ ವೈರಾಗ್ಯಾದಿಸಾಧನಗಳಿಂದುಂಟಾದ ಅಪರೋಕ್ಷಜ್ಞಾನವೆಂಬ ಸಾಧನದಿಂದ ಜ್ಞೇಯನೆಂದೂ, 4ನೇ ಅಧ್ಯಾಯದಲ್ಲಿ ಮುಕ್ತಪ್ರಾಪ್ಯನೆಂದೂ ಹೀಗೆ ನಾಲ್ಕು ಅಧ್ಯಾಯಗಳಲ್ಲಿ ನಾಲ್ಕು ವಿಷಯಗಳನ್ನು ಮುಖ್ಯವಾಗಿ ನಿರೂಪಿಸಿರುವರು.

4. 1ನೇ ಸಮನ್ವಯಾಧ್ಯಾಯ—ವೇದದಲ್ಲಿ ೧ ತತ್ರ ಪ್ರಸಿದ್ಧಗಳು, ೨ ಅನ್ಯತ್ರ ಪ್ರಸಿದ್ಧಗಳು, ೩ ಉಭಯತ್ರ ಪ್ರಸಿದ್ಧಗಳು, ೪ ಅನ್ಯತ್ರೈವ ಪ್ರಸಿದ್ಧಗಳು; ಹೀಗೆ ನಾಲ್ಕುವಿಧ ಶಬ್ದಗಳು ಇರುವವು. ಈ ನಾಲ್ಕೂ ನಾಮಾತ್ಮಕಗಳು(ಆಪಾತತಃ ರೂಢಗಳು) ಲಿಂಗಾತ್ಮಕಗಳು(ಆಪಾತತಃ ಯೌಗಿಕಗಳು)ಎಂದು ಎರಡು ವಿಧಗಳು. ಆ ನಾಲ್ಕರಲ್ಲಿ ೧ ತತ್ರ ಪ್ರಸಿದ್ಧಗಳಾದ ನಾರಾಯಣಾದಿ ಶಬ್ದಗಳಿಗೆ ಸಮನ್ವಯವನ್ನು ಹೇಳಬೇಕಾಗಿಲ್ಲ. ೨ ಅನ್ಯತ್ರ ಪ್ರಸಿದ್ಧಗಳಾದ ನಾಮಾತ್ಮಕಗಳಾದ ಆನಂದಮಯಾದಿ ಶಬ್ದಗಳಿಗೆ ವಿಷ್ಣುವಿನಲ್ಲಿಯೇ ಸಮನ್ವಯವನ್ನು 1ನೇ ಸಮನ್ವಯಾಧ್ಯಾಯದ ೧ನೇ ಪಾದದಲ್ಲಿ ಹೇಳಿರುವರು. ೨ನೇ ಪಾದದಲ್ಲಿ ಅನ್ಯತ್ರ ಪ್ರಸಿದ್ಧಗಳಾದ, ಲಿಂಗಾತ್ಮಕಗಳಾದ ಸರ್ವಗತತ್ವಾದಿಗಳಿಗೆ ಸಮನ್ವಯವನ್ನು ಹೇಳಿರುವರು. ೩ನೇ ಪಾದದಲ್ಲಿ ಉಭಯತ್ರ ಪ್ರಸಿದ್ಧಗಳಾದ ದ್ಯುಭ್ವಾದ್ಯಾಯತನತ್ವಾದಿ ಲಿಂಗಗಳಿಗೂ, ಭೂಮಾದಿ ನಾಮಗಳಿಗೂ ಸಮನ್ವಯವನ್ನು ನಿರೂಪಿಸಿರುವರು. ೪ನೇ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧಗಳಾದ ದುಃಖಿ, ಬದ್ಧ, ಅವರ ಇತ್ಯಾದಿ ಶಬ್ದಗಳಿಗೆ ಸಮನ್ವಯವನ್ನು ನಿರೂಪಿಸಿರುವರು. ಈ ಪ್ರಕಾರ ಪ್ರಥಮಾಧ್ಯಾಯದಲ್ಲಿ ನಾಲ್ಕು ಪಾದಗಳಿಂದ ಘೋಷ, ಸ್ವರ, ವರ್ಣ, ಪದ, ವಾಕ್ಯ, ಮಹಾವಾಕ್ಯ ಸ್ವರೂಪಗಳಾದ ಅಪರ್ಯಾಯ ಅನಂತಾನಂತ ಶಬ್ದಗಳಿಗೆ ಮಹಾಯೋಗ ವಿದ್ವದ್ರೂಢಿಗಳಿಂದ ಸಕಲಗುಣ ಪರಿಪೂರ್ಣನಾದ ಶ್ರೀ ಹರಿಯಲ್ಲಿಯೇ ಸಮನ್ವಯವನ್ನು ನಿರೂಪಿಸಿರುವರು.

5. 2ನೇ ಅವಿರೋಧಾಧ್ಯಾಯ — ಇದರಲ್ಲಿ ೧ನೇ ಯುಕ್ತಿಪಾದದಲ್ಲಿ ಹಿಂದೆ ಹೇಳಿದ ಸಮನ್ವಯದಲ್ಲಿ ಯುಕ್ತಿಗಳಿಂದ ವಿರೋಧವಿಲ್ಲವೆನ್ನುವುದನ್ನು ಸಮರ್ಥಿಸಿರುವರು. ಅಂದರೆ ಶ್ರುತಿ ವಿರುದ್ಧಸ್ಮೃತಿಗಳಿಗೆ ಅಪ್ರಾಮಾಣ್ಯ, ಶ್ರುತಿಗಳಿಗೂ ಶ್ರುತಿಸಂವಾದಿ ಸ್ಮೃತಿಗಳಿಗೂ ಪ್ರಾಮಾಣ್ಯ, ಪ್ರಾಮಾಣ್ಯಸ್ವತಸ್ತ್ವ, ಶ್ರೀ ಹರಿಗೆ ಸರ್ವ ಸ್ವಾತಂತ್ರ್ಯ, ಸರ್ವಗುಣಪರಿಪೂರ್ಣತ್ವ, ಸರ್ವ ದೋಷ ರಾಹಿತ್ಯ ಮೊದಲಾದ ಅರ್ಥಗಳನ್ನು ಪ್ರತಿಪಾದಿಸುತ್ತಾ ಸ್ಮೃತಿ, ಯುಕ್ತಿ, ಶ್ರುತ್ಯುಪ ಸರ್ಜನಯುಕ್ತಿ, ಬಹುಯುಕ್ತಿ ಈ ನಾಲ್ಕರ ವಿರೋಧವನ್ನು ನಿರಾಕರಿಸಿರುವರು. ೨ನೇ ಸಮಯ ಪಾದದಲ್ಲಿ ಸಾಂಖ್ಯಾದಿ ಸಮಯವಿರೋಧಾಭಾವವನ್ನು ಸಮರ್ಥಿಸಿರುವರು ಅಂದರೆ ಸಾಂಖ್ಯ, ಚಾರ್ವಾಕ, ವೈಶೇಷಿಕ, ವೈಭಾಷಿಕ, ಸೌತ್ರಾಂತಿಕ, ಮಾಧ್ಯಮಿಕ, ಯೋಗಾಚಾರ, ಜೈನ, ಪಾಶುಪತ, ಶಾಕ್ತ ಇತ್ಯಾದಿ ದುರ್ಮತಗಳನ್ನು ನಿರಾಕರಿಸಿರುವರು. ೩ನೇ ಶ್ರುತಿಪಾದದಲ್ಲಿ ಕೇವಲ ಶ್ರುತಿವಿರೋಧಾಭಾವವನ್ನು ಸಮರ್ಥಿಸಿರುವರು. ಅಂದರೆ ಅಧಿದೈವಾದಿ ವಿಷಯಕ ಶ್ರುತಿ ವಾಕ್ಯಗಳ ಪರಸ್ಪರ ವಿರೋಧವನ್ನು ಪರಿಹರಿಸಿರುವರು. ೪ನೇ ಸಯುಕ್ತಿಕ ಶ್ರುತಿಪಾದ ದಲ್ಲಿ ಸಯುಕ್ತಿಕ ಶ್ರುತಿವಿರೋಧಾಭಾವವನ್ನು ಸಮರ್ಥಿಸಿರುವರು. ಅಂದರೆ ಅಧ್ಯಾತ್ಮ ವಿಷಯ ದಲ್ಲಿ ಶ್ರುತಿಯುಕ್ತಿಗಳಿಂದ ವಿರುದ್ಧದಂತೆ ತೋರುವ ಶ್ರುತಿವಾಕ್ಯಗಳಿಗೆ ಬಲವತ್ತರಗಳಾದ ಶ್ರುತಿಯುಕ್ತಿಗಳಿಂದ ವಿರೋಧವನ್ನು ಪರಿಹರಿಸಿರುವರು. ಆದಕಾರಣ ಯುಕ್ತಿ, ಸಮಯ, ಶ್ರುತಿ, ನ್ಯಾಯೋಪೇತಶ್ರುತಿ ಇವುಗಳ ವಿರೋಧವೆಂಬ ಈ ನಾಲ್ಕು ವಿರೋಧಗಳನ್ನು ನಾಲ್ಕು

ಪಾದಗಳಲ್ಲಿ ಪರಿಹರಿಸಿದರಿಂದ ಶ್ರೀ ಹರಿಯು ಸರ್ವ ಜಗತ್ಕರ್ತನು, ಸರ್ವ ಗುಣಪರಿಪೂರ್ಣನು, ದೋಷಲೇಶರಹಿತನು ಎಂಬುವುದೇ ಮೊದಲಾದ ಅರ್ಥಗಳು ಸಮರ್ಥಿತಗಳಾಗಿವೆ.

6. 3ನೇ **ಸಾಧನಾಧ್ಯಾಯ**— 1ನೇ 2ನೇ ಅಧ್ಯಾಯಗಳಲ್ಲಿ ಸಮನ್ವಯ, ಅವಿರೋಧಗಳಿಂದ **ಅಥಾತೋ ಬ್ರಹ್ಮಜಿಜ್ಞಾಸಾ** ಎನ್ನುವಲ್ಲಿದ್ದ ಬ್ರಹ್ಮಶಬ್ದಾರ್ಥವನ್ನು ವಿಚಾರಮಾಡಿ, 3ನೇ ಸಾಧನಾಧ್ಯಾಯದಲ್ಲಿ 'ಅಥ ಜಿಜ್ಞಾಸಾ' ಶಬ್ದಗಳಿಂದ ಹೇಳಲ್ಪಟ್ಟ ವಿಷಯವೈರಾಗ್ಯ, ಭಕ್ತಿ, ಉಪಾಸನಾ, ಜ್ಞಾನರೂಪಗಳಾದ ಸಾಧನಗಳನ್ನು ವಿಚಾರಮಾಡಿರುವರು. ಅವುಗಳಲ್ಲಿ ೧ನೇ ವೈರಾಗ್ಯಪಾದದಲ್ಲಿ— ಜ್ಞಾನಕ್ಕೆ ಕಾರಣೀಭೂತವಾದ ಉಪಾಸನೆಗೆ ಅಂಗಭೂತವಾದ ಭಕ್ತಿಗೆ ದಾರ್ಢ್ಯವನ್ನು ಹೊಂದಿಸಿಕೊಡತಕ್ಕ ವಿಷಯವೈರಾಗ್ಯವು ಹುಟ್ಟುವುದಕ್ಕಾಗಿ ಪಂಚಭೂತಗಳ ಸಾಹಿತ್ಯದಿಂದ ಪರಲೋಕಗಮನ, ಆಗಮನ, ಸ್ವರ್ಗ, ನರಕ ಇತ್ಯಾದಿಗಳಿಗೆ ದುಃಖಸ್ವರೂಪತ್ವವನ್ನು ನಿರೂಪಿಸಿರುವರು. ೨ನೇ ಭಕ್ತಿಪಾದದಲ್ಲಿ ವೈರಾಗ್ಯದಿಂದ ಸಾಧ್ಯವಾದ ಉಪಾಸನೆಗೆ ಸಾಧನಭೂತವಾದ ಭಕ್ತಿಯು ಹುಟ್ಟುವುದಕ್ಕಾಗಿ ಸ್ವಪ್ನಾದ್ಯವಸ್ಥಾಪ್ರೇರಕತ್ವಾದಿ ರೂಪವಾದ ಶ್ರೀ ಹರಿಯ ಮಹಾ ಮಹಿಮೆಯನ್ನು ನಿರೂಪಿಸಿರುವರು. ೩ನೇ ಉಪಾಸನಾ ಪಾದದಲ್ಲಿ ನಿತ್ಯಾನಿತ್ಯವಸ್ತು ವಿವೇಕಾದಿಗಳಿಂದುಂಟಾಗತಕ್ಕ ವಿಷಯ ವೈರಾಗ್ಯದಿಂದಲೂ, ಭಗವದ್ಭಕ್ತಿದಾರ್ಢ್ಯದಿಂದಲೂ ಉಂಟಾಗತಕ್ಕ ಅವರವರಿಗೆ ಯೋಗ್ಯವಾದ ಉಪಾಸನೆಯನ್ನು ನಿರೂಪಿಸಿರುವರು. ೪ನೇ ಜ್ಞಾನಪಾದದಲ್ಲಿ— ಭಗವದುಪಾಸನೆಯಿಂದುಂಟಾಗತಕ್ಕ ಮೋಕ್ಷಕ್ಕೆ ಪ್ರಧಾನ ಸಾಧನವಾದ ಭಗವತ್ಪ್ರಸಾದಕ್ಕೆ ಸಾಧನವಾದ ಭಗವತ್ಸಾಕ್ಷಾತ್ಕಾರವನ್ನು ನಿರೂಪಿಸಿರುವರು.

7. 4ನೇ **ಫಲಾಧ್ಯಾಯ**— ಇದರಲ್ಲಿ ೧ನೇ ಕರ್ಮಕ್ಷಯಪಾದದಲ್ಲಿ ಕರ್ಮನಾಶಾಖ್ಯ ಫಲವನ್ನು ನಿರೂಪಿಸಿರುವರು. ೨ನೇ ಉತ್ಕ್ರಾಂತಿಪಾದದಲ್ಲಿ ಕೆಲವು ಜ್ಞಾನಿಗಳಿಗೆ ಉತ್ಕ್ರಾಂತಿಯನ್ನೂ, ದೇವತೆಗಳಲ್ಲಿಯೂ ದೇವೇತರರಲ್ಲಿಯೂ ಸಾಧಾರಣವಾದ ಅಂತಿಮ ದೇಹನಾಶವನ್ನೂ ನಿರೂಪಿಸಿರುವರು. ೩ನೇ ಮಾರ್ಗಪಾದದಲ್ಲಿ ಅರ್ಚಿರಾದಿ ಮಾರ್ಗವನ್ನೂ, ಬ್ರಹ್ಮಪ್ರಾಪ್ತಿಯನ್ನೂ ನಿರೂಪಿಸಿರುವರು. ಅಂದರೆ ಉತ್ಕ್ರಾಂತನಿಗೆ ತನಗೆ ಯೋಗ್ಯವಾದ ಮಾರ್ಗದಿಂದ ಬ್ರಹ್ಮನನ್ನು ಹೊಂದಿದವನಿಗೆ ಬ್ರಹ್ಮಪ್ರಾಪ್ತಿಯಾಗುತ್ತದೆ; ಅಂತೂ ಉತ್ಕ್ರಾಂತನಿಗೆ ಗಮ್ಯಮಾರ್ಗವನ್ನೂ, ಗಮ್ಯವಾದ ವಸ್ತುವನ್ನೂ ನಿರೂಪಿಸಿರುವರು. ೪ನೇ ಭೋಗಪಾದದಲ್ಲಿ ಬ್ರಹ್ಮಪ್ರಾಪ್ತಿಯಿಂದ ಭೋಗರೂಪವಾದ ಆನಂದಾನುಭವವನ್ನು ನಿರೂಪಿಸಿರುವರು.

8. ಈರೀತಿಯಲ್ಲಿ ಆತ್ಯಂತಿಕ ದುಃಖನಿವೃತ್ತಿಪೂರ್ವಕ ಸ್ವರೂಪಾನಂದಾವಿರ್ಭಾವರೂಪವಾದ ಪುರುಷಾರ್ಥೋತ್ತಮವಾದ ಮೋಕ್ಷಕ್ಕೆ ಸಾಧನೀಭೂತವಾದ, ಭಗವತ್ಪ್ರಸಾದಕ್ಕೆ ಪ್ರಯೋಜಕೀಭೂತವಾದ, ಭಗವತ್ಸಾಕ್ಷಾತ್ಕಾರವನ್ನು ಸಂಪಾದಿಸುವುದಕ್ಕಾಗಿ ವೈರಾಗ್ಯಾದಿಗಳುಳ್ಳ ಅಧಿಕಾರಿಯಿಂದ ನಿಖಿಲ ಜಗಜ್ಜನ್ಮಾದಿಕರ್ತನಾದ, ಅನಂತ ಅನವದ್ಯ ಕಲ್ಯಾಣಗುಣಪರಿಪೂರ್ಣನಾದ ದೋಷಲೇಶರಹಿತನಾದ ಶ್ರೀ ನಾರಾಯಣನೇ ಉಪಾಸ್ಯನು ಎಂದು ಸಿದ್ಧಾಂತರಹಸ್ಯವು.

9. ಮೇಲೆ ಹೇಳಿರುವ ಎಲ್ಲಾ ವಿಷಯಗಳನ್ನು ಕ್ರೋಡೀಕರಿಸಿ, ಏಕತ್ರ ಸಂಕ್ಷೇಪವಾಗಿ ಸರಳವಾದ ಪದ್ಯಶೈಲಿಯಲ್ಲಿ ಅನುಗ್ರಹಿಸಿರುವ ಶ್ರೀಮದಾಚಾರ್ಯರ ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನವೆಂಬ ಗ್ರಂಥರತ್ನವು ಶ್ರೀಮದಾಚಾರ್ಯರ ೩೭ ಗ್ರಂಥಗಳಿಗೂ ಶಿಖಾಮಣಿಯಂತೆ ವಿರಾಜಿಸುತ್ತಿದೆ. ಈ ಗ್ರಂಥರತ್ನಕ್ಕೆ ಅನೇಕ ವ್ಯಾಖ್ಯಾನಗಳು ಇದ್ದರೂ ಅತಿ ಸ್ಪಷ್ಟರೂಪ

ವಾಗಿಯೂ, ವಿಸ್ತೃತವಾಗಿಯೂ ಇರುವ **ನ್ಯಾಯಸುಧಾ** ಎಂಬ ಅತಿ ಪ್ರೌಢವಾದ ಗ್ರಂಥವನ್ನು ಜಯತೀರ್ಥ ಶ್ರೀಮಚ್ಚರಣರು ನಿರ್ಮಿಸಿರುವರು. ಇದರ ಮಹತ್ವವನ್ನು '**ಸುಧಾ ವಾ ಪಠನೀಯಾ ವಸುಧಾ ವಾ ಪಾಲನೀಯಾ**' ಎಂಬ ಮಹನೀಯರ ವಚನದಿಂದಲೇ ಅರಿಯ ಬಹುದು. ನಿಜವಾಗಿಯೂ ಸುಧಾ ಎಂಬುವುದು ಇಲ್ಲದಿದ್ದರೆ ಹೇಗೆ ದೇವತೆಗಳಿಗೆ ಅಮರತ್ವವು ಸಂಭವಿಸದೋ ಹಾಗೆಯೇ ಬ್ರಹ್ಮಸೂತ್ರಾನುವ್ಯಾಖ್ಯಾನಕ್ಕೆ, ವ್ಯಾಖ್ಯಾನವಾದ ನ್ಯಾಯಸುಧಾ ಎಂಬುವುದು ಇಲ್ಲದಿದ್ದರೆ ಸಮೀಚೀನ ಜ್ಞಾನರೂಪವಾದ ವಿಬುಧತ್ವವು ನಮಗೆ ಸಂಭವಿಸದು ಎಂಬುವ ಕಾರಣದಿಂದ ಈ ಗ್ರಂಥವು ಅತ್ಯಮೂಲ್ಯವಾದುದು. ಟೀಕಾಗ್ರಂಥಗಳಲ್ಲಿ ಅಥವಾ ವೇದಾಂತ ಗ್ರಂಥಗಳಲ್ಲಿಯೇ ಅತಿ ವಿಸ್ತಾರವಾದುದು; ಮತ್ತು ಅತಿ ಗಹನಾರ್ಥವಾದುದು.

10. ಈ ಗ್ರಂಥದ ಆದಿ ಭಾಗದಲ್ಲಿ ಶ್ರಿಯಃ ಪತ್ಯೇ ಎಂದು ಶ್ರೀ ಶಬ್ದಪ್ರಯೋಗವೂ, ಅಂತ್ಯದಲ್ಲಿ ಅನುವ್ಯಾಖ್ಯಾನೋಕ್ತ ಭೂತಿ ಶಬ್ದವಿವರಣರೂಪವಾದ ಮಹಾಲಕ್ಷ್ಮೀ ಶಬ್ದ ಪ್ರಯೋಗವೂ ಇದ್ದುದರಿಂದ ಈ ಗ್ರಂಥದ ತತ್ವಜ್ಞಾನದಿಂದ ಐಹಿಕಗಳಾದ ಧನಧಾನ್ಯಾದಿ ಸಕಲ ಸಂಪತ್ತುಗಳೂ, ಆಮುಷ್ಮಿಕವಾದ ನಿತ್ಯ ಸುಖಾಭಿವ್ಯಕ್ತಿರೂಪವಾದ ಮೋಕ್ಷರೂಪ ಫಲವೂ ಲಭಿಸುವುದು ಎನ್ನುವದನ್ನು ಭಾವೀಸಮೀರ ಶ್ರೀಮದ್ವಾದಿರಾಜ ಶ್ರೀಮಚ್ಚರಣರು ತಮ್ಮ ಗುರ್ವರ್ಥದೀಪಿಕಾ ಎಂಬ ಟಿಪ್ಪಣಿಯಲ್ಲಿ ನಿರೂಪಿಸಿರುವರು. ಅಂತು ಈ ಗ್ರಂಥವನ್ನು ಸಕಲ ಸಜ್ಜನರೂ ಭಕ್ತಿಪೂರ್ವಕವಾಗಿ ಪಠನಮಾಡಿ, ವಿಷ್ಣುಸರ್ವೋತ್ತಮತ್ವಾದಿ ತತ್ವಜ್ಞಾನವನ್ನು ಸಂಪಾದಿಸಿ ಐಹಿಕ ನಿಖಿಲಾಭೀಷ್ಟವನ್ನು ಮತ್ತು ಜಿಜ್ಞಾಸಾ, ನಿದಿಧ್ಯಾಸನ, ಪರಮೇಶ್ವರಾನುಗ್ರಹ, ಶ್ರೀ ಹರಿದರ್ಶನ, ಪರಮಭಕ್ತಿ, ಪರಮಾನುಗ್ರಹದ್ವಾರಾ ಆಮುಷ್ಮಿಕವಾದ ಮೋಕ್ಷರೂಪ ಪುರುಷಾರ್ಥವನ್ನು ಹೊಂದುವರು ಎನ್ನುವಲ್ಲಿ ಸಂದೇಹವಿಲ್ಲ.

11 ಇಂತಹ ಅಮೂಲ್ಯವಾದ ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನವೆಂಬ ಗ್ರಂಥರತ್ನಕ್ಕೆ ಸಂಸ್ಕೃತದಲ್ಲಿ ಮೇಲೆ ಸೂಚಿಸಿದ ಮಹತ್ತಾದ ಅನೇಕ ಟೀಕಾ-ಟಿಪ್ಪಣಿಗಳು ಇದ್ದರೂ ಸಂಸ್ಕೃತ ಅರಿಯದವರಿಗೂ, ಸಾಮಾನ್ಯವಾಗಿ ಸಂಸ್ಕೃತವರಿತವರಿಗೂ ಗ್ರಂಥದ ಪರಿಚಯವೇ ದುರ್ಲಭ ವಾಗಿ ಅದರಿಂದುಂಟಾಗುವ ಅಜ್ಞಾನಾಂಧಕಾರವನ್ನು ಹೋಗಲಾಡಿಸಿ, ಗ್ರಂಥತತ್ವಜ್ಞಾನದಿಂದುಂ ಟಾಗುವ ಐಹಿಕಾಮುಷ್ಮಿಕ ಸಕಲ ಸಂಪತ್ತುಗಳನ್ನೂ, ಮತಾಭಿಮಾನಿಗಳೆಲ್ಲರೂ ಅನುಭವಿಸಬೇ ಕೆನ್ನುವ ಸದುದ್ದೇಶದಿಂದ ಶ್ರೀಮಧ್ವಮುನಿಸೇವಾಸಂಘದವರು ಈ ಗ್ರಂಥರತ್ನವನ್ನು ಕನ್ನಡ ಭಾಷೆಯಲ್ಲಿ ತರ್ಜುಮೆ ಮಾಡಬೇಕೆಂದು ನನಗೆ ಆಜ್ಞಾಪಿಸಿದ ಮೇರೆಗೆ ನಾನು ಯಥಾಶಕ್ತಿ ಮೂಲ, ಟೀಕಾ ಟಿಪ್ಪಣಿಗಳನ್ನು ವಿಚಾರಮಾಡಿ ತಿಳಿಗನ್ನಡದಲ್ಲಿ ಈ ಟೀಕೆಯನ್ನು ಬರೆದಿರುವೆನು. ಇದನ್ನು ಶ್ರೀಮನ್ಮಧ್ವಸಿದ್ಧಾಂತಚಂದ್ರಿಕಾ ಪಾಠಶಾಲಾ ಪ್ರಧಾನಪಂಡಿತರಾದ, ಶ್ರೀಮನ್ನ್ಯಾಯ ಸುಧಾದಿಪ್ರೌಢ ಗ್ರಂಥಗಳನ್ನು ಅನೇಕಾವರ್ತಿ ಪ್ರವಚನಮಾಡಿರುವ ವಿದ್ವನ್ಮಣಿಗಳಾದ ಶ್ರೀಯುತ ಕಟ್ಟಿ ಶ್ರೀನಿವಾಸಾಚಾರ್ಯರವರು ಪರಿಶೋಧನಮಾಡಿರುತ್ತಾರೆ. ಆದರೂ ಈ ಟೀಕೆಯಲ್ಲಿ ನ್ಯೂನಾಧಿಕ್ಯಮೊದಲಾದ ದೋಷಗಳು ಇದ್ದಲ್ಲಿ ಮಹನೀಯರು ದಯವಿಟ್ಟು ಸೂಚಿಸಿದ್ದಲ್ಲಿ ದ್ವಿತೀಯಸಂಸ್ಕರಣದಲ್ಲಿ ಪರಿಶೋಧಿಸಲಾದೀತು. ಈ ಗ್ರಂಥವು ಬಹಳ ಗಹನವಾದುದರಿಂದ ಅವಸರದಿಂದ ಮಾಡುವರೆ ಅಸಾಧ್ಯವಾಗಿ ನಮ್ಮ ನಿರೀಕ್ಷಣೆಗೆ ಮಿಕ್ಕಿ ಸ್ವಲ್ಪವಿಳಂಬವಾಗಲು ಕಾರಣವಾಯಿತು.

12. ಈ ಸಂಸಾರಾರ್ಣವವನ್ನು ದಾಟ ಮೋಕ್ಷ ಸುಖಾನುಭವವನ್ನು ಹೊಂದಲಿಚ್ಛಿಸುವವರೆಲ್ಲರೂ ಈ ಗ್ರಂಥಾಮೃತವನ್ನು ಪಾನಮಾಡಿ ತಮ್ಮ ಜನ್ಮವನ್ನು ಸಾರ್ಥಿಕ್ಯಮಾಡಿಕೊಳ್ಳುವುದೇ ಶ್ರೀಮಧ್ವಮುನಿಸೇವಾಸಂಘದವರ ವಿಶೇಷವಾದ ಪರಿಶ್ರಮದ ಸಾಫಲ್ಯವೆಂದು ನಾನು ದೃಢವಾಗಿ ನಂಬಿರುವುದರಿಂದ, ಮಧ್ವಮತಾಭಿಮಾನಿಗಳೆಲ್ಲರೂ ಈ ಗ್ರಂಥಾನುಭವದಿಂದ ಕೃತಾರ್ಥರಾಗಿ ಈ ಗ್ರಂಥಪ್ರಕಾಶಕರಾದ ಶ್ರೀ ಮಧ್ವಮುನಿಸೇವಾಸಂಘದವರ ಅವಶಿಷ್ಟ ಉದ್ದೇಶ್ಯವು ಸಂಪೂರ್ಣ ನೆರವೇರುವಂತೆ ಶ್ರೀ ಹರಿವಾಯುಗಳು ಅನುಗ್ರಹಿಸಲಿ! ಎಂದು ಬೇಡಿಕೊಳ್ಳಬೇಕಾಗಿ ನಾನು ಸಂಪ್ರಾರ್ಥಿಸುವೆನು.

ಶ್ರೀಶಸ್ತೇ ಸುಶ್ರಿಯಂ ದದ್ಯಾದಾಯುರ್ವಾಯುಸುತಃ ಪ್ರಿಯಃ ।
ಭೂಮಿಂ ತೇ ವಾಮನೋ ದದ್ಯಾದರೀನ್ ಹಂತು ನೃಕೇಸರೀ ॥

ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ
ಮನೋವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ ।
ಸುರಾದ್ಯಾ ನರಾಂತಾ ಮುಕುಂದಪ್ರಸಾದಾ
ದಿಮಂ ಮೋಕ್ಷಮೇತೇ ಭಜಂತೇ ಸದೇತಿ ॥

ಇತಿ ಸುಜನ ವಿಧೇಯ,

ಶ್ರೀ ಶಾಲಿವಾ. ಶಕ ವರ್ಷ ೧೮೬೦ನೇ
ಶ್ರೀ ಬಹುಧಾನ್ಯ ಸಂವತ್ಸರದ
ಫಾಲ್ಗುಣ ಬಹುಳ ಶ್ರವಣ ದ್ವಾದಶೀ
ಶುಕ್ರವಾರ, ತಾ 17—3—1939.

ಅಗ್ರಹಾರ ನಾರಾಯಣತಂತ್ರೀ,
ದ್ವೈತವೇದಾಂತ ವಿದ್ವಾನ್, ದ್ವೈತವೇದಾಂತ
ಶಿರೋಮಣಿ.

# ವಿಷಯಾನುಕ್ರಮಣಿಕೆ.

ಪುಟ.



## ಅಧ್ಯಾ. ೩. ಪಾ. ೧.



ಪುಟ.

## ಅಧ್ಯಾ. ೩. ಪಾ. ೨.



## ಅಧ್ಯಾ. ೩. ಪಾ. ೩.

| | | | |
|---|---|---|---|
| ಅಧ್ಯಾಯ ೧. | ಪಾದ ೧. | ಸೂತ್ರ ೩೧. | ಅಧಿಕರಣ ೧೨. |
| ,, | ಪಾದ ೨. | ,, ೩೨. | ,, ೭. |
| ,, | ಪಾದ ೩. | ,, ೪೩. | ,, ೧೪. |
| ,, | ಪಾದ ೪. | ,, ೨೯. | ,, ೭. |
| | | ೧೩೫. | ೪೦. |
| ಅಧ್ಯಾಯ ೨. | ಪಾದ ೧. | ಸೂತ್ರ ೩೮. | ಅಧಿಕರಣ ೧೧. |
| ,, | ಪಾದ ೨. | ,, ೪೫. | ,, ೧೨. |
| ,, | ಪಾದ ೩. | ,, ೫೩. | ,, ೧೯. |
| ,, | ಪಾದ ೪. | ,, ೨೩. | ,, ೧೩. |
| | | ೧೫೯. | ೫೫. |
| ಅಧ್ಯಾಯ ೩. | ಪಾದ ೧. | ಸೂತ್ರ ೨೯. | ಅಧಿಕರಣ ೨೦. |
| ,, | ಪಾದ ೨. | ,, ೪೨. | ,, ೨೦. |
| ,, | ಪಾದ ೩. | ,, ೬೮. | ,, ೪೨. |
| ,, | ಪಾದ ೪. | ,, ೫೧. | ,, ೧೧. |
| | | ೧೯೦. | ೯೩. |
| ಅಧ್ಯಾಯ ೪. | ಪಾದ ೧. | ಸೂತ್ರ ೧೯. | ಅಧಿಕರಣ ೮. |
| ,, | ಪಾದ ೨. | ,, ೨೨. | ,, ೧೦. |
| ,, | ಪಾದ ೩. | ,, ೧೬. | ,, ೬. |
| ,, | ಪಾದ ೪. | ,, ೨೩. | ,, ೧೧. |
| | | ೮೦. | ೩೫. |
| ನಾಲ್ಕು ಅಧ್ಯಾಯಗಳಲ್ಲಿ ಒಟ್ಟು | | ೫೬೪. | ೨೨೩. |

# ಶ್ರೀಮದನುವ್ಯಾಖ್ಯಾನವು.

**ಶ್ರೀಮದಾನಂದತೀರ್ಥಾರ್ಯ ಹೃದಯಾಮಲಮಂದಿರಂ ।**
**ಜಾನಕೀ ಜಾನಿಮಾನಂದಸಾಂದ್ರಂ ವಂದೇ ನಿರಂತರಂ ॥**
**ವ್ಯಾಸಂ ಮಧ್ವಂ ಜಯಾರ್ಯಾದೀನ್ನತ್ವಾ ಕರ್ನಾಟಭಾಷಯಾ ।**
**ವ್ಯಾಖ್ಯಾಸ್ಯೇಽಹಂ ಯಥಾಬೋಧಂ ತಂತ್ರಿನಾರಾಯಣಾಭಿಧಃ ॥**

**ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ**
**ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥**

## ಅರೂಪಾಧಿಕರಣವು.

### "ಓಂ ಅರೂಪದೇವ ಹಿ ತತ್ಪ್ರಧಾನತ್ವಾತ್ ಓಂ" ॥ ಸೂ. ೧೪ ॥

ಆ ಪರಬ್ರಹ್ಮನು ಪ್ರಾಕೃತದೇಹಾದಿಗಳು ಇಲ್ಲದಿರುವವನು, ಬ್ರಹ್ಮನಿಗೆ ಪ್ರಕೃತ್ಯಾದಿಗಳಿಂದ ಉತ್ತಮತ್ವವಿದ್ದಪ್ರಯುಕ್ತವೂ '**ಅಸ್ಥೂಲಮನಣು**' ಇತ್ಯಾದಿ ಶ್ರುತಿಗಳು ಇದ್ದಪ್ರಯುಕ್ತವೂ,

### "ಓಂ ಪ್ರಕಾಶವಚ್ಚಾ ವೈಯರ್ಥ್ಯಾ೯ಂ ಓಂ" ॥ ಸೂ. ೧೫ ॥

ಬ್ರಹ್ಮನಿಗೆ ರೂಪವಿದ್ದಪ್ರಯುಕ್ತ ೧ '**ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ** ೨ **ಶ್ಯಾಮಾಚ್ಛಬಲಂ ಪ್ರಪದ್ಯೇ** ೩ **ಸುವರ್ಣಜ್ಯೋತಿಃ**' ಇದು ಮೊದಲಾದರೂಪಿತ್ವ ಪ್ರತಿಪಾದಕ ಶ್ರುತಿಗಳಿಗೆ ವೈಯರ್ಥ್ಯವೂ, ಅಪ್ರಾಮಾಣ್ಯವೂ ಇಲ್ಲ. ಹಾಗಾದರೆ ಅರೂಪಿತ್ವ ಪ್ರತಿಪಾದಕ ಶ್ರುತಿವಿರೋಧವು ಬರುತ್ತದೆಂದರೆ— ಹೇಗೆ ಮನೆಯೊಳಗೆ ಚಾಕ್ಷುಷಾದಿ ಪ್ರಕಾಶ ವಿದ್ದರೂ ಆ ಪ್ರಕಾಶಕ್ಕೆ ಸೌರಾದಿ ಲೌಕಿಕ ಪ್ರಕಾಶದಿಂದ ವೈಲಕ್ಷಣ್ಯವಿದ್ದಪ್ರಯುಕ್ತ 'ನಾಸ್ತಿ ಪ್ರಕಾಶಃ' ಎನ್ನುವ ಉಕ್ತಿಯಿದೆಯೋ ಹಾಗೆಯೇ ರೂಪವಿದ್ದರೂ ಬ್ರಹ್ಮನಿಗೆ ವಿಲಕ್ಷಣವಾದ, ಅಪ್ರಾಕೃತವಾದ ರೂಪವಿದ್ದಪ್ರಯುಕ್ತ ಅರೂಪಶ್ರುತಿಗೆ ಅಪ್ರಾಮಾಣ್ಯವಿಲ್ಲ.

### "ಓಂ ಆಹ ಚ ತನ್ಮಾತ್ರಂ ಓಂ" ॥ ಸೂ. ೧೬ ॥

'**ಐಕಾತ್ಮ್ಯಪ್ರತ್ಯಯಸಾರಂ ಆನಂದರೂಪಮಜರಂ**' ಎನ್ನುವ ಶ್ರುತಿಯು ವಿಷ್ಣುವಿನ ರೂಪವನ್ನು ಜ್ಞಾನಾನಂದಾದ್ಯಾತ್ಮಕವನ್ನಾಗಿಯೇ ಹೇಳುತ್ತದೆ. ಪ್ರಾಕೃತರೂಪವನ್ನಾಗಿ ಹೇಳುವುದಿಲ್ಲ.

### "ಓಂ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ಓಂ" ॥ ಸೂ. ೧೭ ॥

'**ಆನಂದರೂಪಮಮೃತಂ ಯದ್ವಿಭಾತಿ**' ಎನ್ನುವ ಶ್ರುತಿಯು ಆನಂದಾತ್ಮಕ ರೂಪವನ್ನು ತೋರಿಸುತ್ತದೆ. ಮತ್ತು ಜ್ಞಾನಾತ್ಮಕರೂಪವು '**ಶುದ್ಧಸ್ಫಟಿಕಸಂಕಾಶಂ ವಾಸುದೇವಂ ನಿರಂಜನಂ । ಚಿಂತಯೀತ ಯತಿ ರ್ನಾನ್ಯಂ ಜ್ಞಾನರೂಪಾದೃತೇ ಹರೇಃ**' ಎನ್ನುವ ಸ್ಮೃತಿಸಿದ್ಧವೂ ಆಗಿದೆ ॥ ಸೂ. ॥ ೧೪ ॥ ೧೫ ॥ ೧೬ ॥ ೧೭ ॥ ಅಧಿ ॥ ೯ ॥

**ಅರೂಪಾಧಿಕರಣವು ಸಮಾಪ್ತವಾಯಿತು.**

# ಉಪಮಾಧಿಕರಣವು

## "ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ"

|| ಸೂ. ೧೮ ||

ಈಶ, ಈಶರೂಪಗಳಿಗೆ ಅಭೇದವನ್ನು 'ನ ಸ್ಥಾನತಃ' ಎನ್ನುವಲ್ಲಿ ಹೇಳಿದರಿಂದಲೇ ಚೇತನತ್ವ ಅಂಶಾಂಶಿತ್ವಾದಿ ಹೇತುವಿನಿಂದಲೇ ಈ ಜೀವನಿಗೆ ಮತ್ಸ್ಯಾದಿಗಳಂತೆ ಈಶನಿಂದ ಅಭೇದವು, ಎಂದರೆ— ಹೀಗೆ ಹೇಳಕೂಡದು. ಸೂರ್ಯಾದಿಗಳ ಪ್ರತಿಬಿಂಬದಂತೆಯೂ, ಸೂರ್ಯಕ ಚ್ಛಾಯಾದಿಗಳಂತೆಯೂ ಜೀವನು ಈಶನಿಂದ ಅಭಿನ್ನನಲ್ಲ.

ಈ ಪರಮೇಶ್ವರನಲ್ಲಿ ಜೀವನಿಗೆ ಅತ್ಯಂತವಾಗಿ ಭಕ್ತಿಯು ಸಿದ್ಧಿಸುವುದಕ್ಕಾಗಿ ಭೇದಾಭೇದ ಮತವನ್ನು ನಿರಾಕರಿಸುತ್ತಾರೆ. ಹೇಗೆಂದರೆ—ಜೀವಬ್ರಹ್ಮರ ಭೇದವನ್ನಾದರೂ ಸಿದ್ಧಾಂತಿಯು ಅಂಗೀಕರಿಸುವನು. ಅಭೇದವಾದರೂ ಅನುಮಾನಸಿದ್ಧವಾಗಿದೆ. (೧) 'ಜೀವಃ ಬ್ರಹ್ಮಾಭಿನ್ನಃ ಚೇತನತ್ವಾತ್ ಬ್ರಹ್ಮವತ್ ಬ್ರಹ್ಮಾಂಶತ್ವಾತ್ ಯೋ ಯದಂಶಃ ಸಃ ತದಭಿನ್ನಃ ಯಥೇಶ್ವರಾಂಶೋ ಮತ್ಸ್ಯಾದಿಃ ತದಭಿನ್ನಃ'=ಜೀವನು ಬ್ರಹ್ಮನಿಂದ ಅಭಿನ್ನನು, ಚೇತನನಾದಪ್ರಯುಕ್ತ ಬ್ರಹ್ಮನಂತೆ. ಬ್ರಹ್ಮನ ಅಂಶನಾದಪ್ರಯುಕ್ತ, ಯಾರು ಯಾರ ಅಂಶನೋ ಆತನು ಅವನಿಂದ ಅಭಿನ್ನನು. ಉದಾ— ಈಶ್ವರನ ಅಂಶಭೂತರಾದ ಮತ್ಸ್ಯಾದಿಗಳು ಈಶ್ವರನಿಂದ ಅಭಿನ್ನರು. ಆದಕಾರಣ ಜೀವನು ಬ್ರಹ್ಮನಿಂದ ಭಿನ್ನಾಭಿನ್ನನು, ಹೀಗೆ ಪೂರ್ವಪಕ್ಷವು ಪ್ರಾಪ್ತವಾದರೆ ಸೂತ್ರಕಾರರು ಸೂರ್ಯಕಾದಿವತ್ ಎನ್ನುವ ಸೂತ್ರಖಂಡದಿಂದ ತಿರಸ್ಕರಿಸಿರುವರು. ಈ ದೃಷ್ಟಾಂತವಚನ ಮಾತ್ರವು ಯಾವ ಅರ್ಥವನ್ನೂ ಸಾಧಿಸಲಾರದು, ಅಥವಾ ಬಾಧಿಸಲಾರದು, ಎಂದರೆ ಪೂರ್ವ ಪಕ್ಷವನ್ನು ನಿಷೇಧಮಾಡುತ್ತಾ ಪ್ರತಿಜ್ಞಾ ಹೇತುಗಳನ್ನು ತೋರಿಸುತ್ತಾರೆ—

**ಮೂ || ನ ಚ ಚಿತ್ತ್ವಾದಭಿನ್ನತ್ವಂ ಜೀವಸ್ಯೇಶವದಾಪ್ಯತೇ || ೧೨೦ ||**
**ಯತ ಆಭಾಸತಾಮೇವ ಶ್ರುತಿರಸ್ಯ ವದತ್ಯಲಂ ।**
**ಯಥೈಷಾ ಪುರುಷೇ ಚ್ಛಾಯಾ ಏತಸ್ಮಿನ್ನೇತದಾತತಂ || ೧೨೧ ||**
**ಚ್ಛಾಯಾ ಯಥಾ ಪುಂಸದೃಶೀ(ಶಾ) ಪುಮಧೀನಾ ಚ ದೃಶ್ಯತೇ ।**
**ಏವಮೇವಾತ್ಮಕಾಃ ಸರ್ವೇ ಬ್ರಹ್ಮಾದ್ಯಾಃ ಪರಮಾತ್ಮನಃ || ೧೨೨ ||**
**ಸತ್ತಾ ಪ್ರತೀತಿಕಾರ್ಯೇಷು ಪುಮಧೀನಾ ಯಥೇಯತೇ ।**
**ಆಭಾಸಾ ಏವ ಪುರುಷಾ ಮುಕ್ತಾಶ್ಚ ಪರಮಾತ್ಮನಃ || ೧೨೩ ||**

ಅ || ಜೀವಸ್ಯ=ಜೀವನಿಗೆ, ಚಿತ್ತ್ವಾತ್ = ಚೇತನತ್ವವಿದ್ದಪ್ರಯುಕ್ತವೂ (ಅಂಶತ್ವ ವಿದ್ದಪ್ರಯುಕ್ತವೂ), ಅಭಿನ್ನತ್ವಂ=ಬ್ರಹ್ಮನಿಂದ ಅಭೇದವು, ಈಶವತ್ = ಶ್ರೀಹರಿಯಂತೆಯೂ, ಈಶ್ವರಾವತಾರದಂತೆಯೂ, ನ ಚ ಆಪ್ಯತೇ = ಕೂಡುವುದಿಲ್ಲ. ಯತಃ = ಯಾವಕಾರಣ ದ್ದೆಶೆಯಿಂದ, ಅಸ್ಯ=ಬ್ರಹ್ಮನ, ಆಭಾಸತಾಂ = ಪ್ರತಿಬಿಂಬತ್ವವನ್ನೇ, ಅಸ್ಯ = ಈ ಜೀವನಿಗೆ, ಶ್ರುತಿಃ=ಶ್ರುತಿಯು, ಏವ=ನಿಃಸಂದೇಹವಾಗಿ, ಅಲಂ=ಸ್ಪಷ್ಟವಾಗಿ, ವದತಿ=ಪ್ರತಿಪಾದಿಸುತ್ತದೆ. (ಚೇತನತ್ವಾದ್ಯನುಮಾನದಿಂದ ಜೀವನಿಗೆ ಬ್ರಹ್ಮಾಭೇದವನ್ನು ಸಾಧಿಸಲಿಕ್ಕೆ ಕೂಡದು. 'ಜೀವಃ ಬ್ರಹ್ಮಾಭಿನ್ನೋ ನ ಭವತಿ ತದಾಭಾಸತ್ವಾತ್ ಯೋ ಯದಾಭಾಸಃ ನಾಸೌ ತದಭಿನ್ನಃ ಯಥಾ ಸೂರ್ಯಕಾದಿಃ ಸೂರ್ಯಾದಿನಾ=' ಜೀವನು ಬ್ರಹ್ಮನಿಂದ ಅಭಿನ್ನನು ಆಗುವುದಿಲ್ಲ. ಬ್ರಹ್ಮನ

ಆಭಾಸನಾದಪ್ರಯುಕ್ತ, ಯಾರು ಯಾರ ಆಭಾಸನೋ ಇವನು ಅವನಿಂದ ಅಭಿನ್ನನಾಗುವುದಿಲ್ಲ. ಉದಾ—ಸೂರ್ಯಪ್ರತಿಬಿಂಬ ಸೂರ್ಯಛಾಯಾದಿಗಳು ಸೂರ್ಯಾದಿಗಳಿಂದ ಅಭಿನ್ನಗಳಲ್ಲ, ಎನ್ನುವ ಅನುಮಾನವಿರೋಧವದೆ. ಸ್ಪಷ್ಟಶ್ರುತಿಸಿದ್ಧವಾದಪ್ರಯುಕ್ತ ಆಭಾಸತ್ವ ಹೇತುವು ಅಸಿದ್ಧವೂ ಅಲ್ಲ.) (ಜೀವರಿಗೆ ಪರಮಾತ್ಮಪ್ರತಿಬಿಂಬತ್ವವನ್ನು ಪ್ರತಿಪಾದಿಸತಕ್ಕ ಶ್ರುತಿಯನ್ನು ದಾಹರಿಸುತ್ತಾರೆ.) ಯಥಾ=ಹೇಗೆ, ಏಷಾ ಛಾಯಾ=ಈ ನೆರಳು, ಪುರುಷೇ = ಜೀವನಲ್ಲಿ, (ಆತತಾ=ಅಧೀನವಾಗಿದೆಯೋ) (ಹಾಗೆಯೇ) ಏತಸ್ಮಿನ್=ಈ ಪರಮಾತ್ಮನಲ್ಲಿ, ಏತತ್=ಈ ಜೀವರ ಸಮುದಾಯವು, ಆತತಂ=ಅಧೀನವಾಗಿದೆ. (ಇದನ್ನೇ ಸ್ಪಷ್ಟವಾಗಿ ಶ್ರುತಿಗಳಿಂದ ತೋರಿಸುತ್ತಾರೆ ) ಯಥಾ=ಹೇಗೆ, ಛಾಯಾ=ನೆರಳು, ಪುಂಸದೃಶೀ = ಪುರುಷರಿಗೆ ಸದೃಶ ವಾಗಿಯೂ, ಪುಮಧೀನಾ ಚ=ಪುರುಷರ ಅಧೀನವಾಗಿಯೂ, ದೃಶ್ಯತೇ=ಕಾಣಲ್ಪಡುತ್ತದೋ, ಏವಮೇವ=ಹೀಗೆಯೇ, ಆತ್ಮಕಾಃ=ಅಲ್ಪಚೇತನರಾದ, ಬ್ರಹ್ಮಾದ್ಯಾಃ=ಬ್ರಹ್ಮನೇ ಮೊದಲಾದ, ಸರ್ವೇ=ಎಲ್ಲರೂ, ಪರಮಾತ್ಮವಃ = ಪರಬ್ರಹ್ಮನಿಗೆ, (ಆಭಾಸಭೂತರು ಅಧೀನರು.) ಸತ್ತಾ ಪ್ರತೀತಿಕಾರ್ಯೇಷು=ಸ್ಥಿತಿಯೂ ಜ್ಞಾನವೂ ಕಾರ್ಯವೂ ಇವುಗಳಲ್ಲಿ, ಯಥಾ = ಹೇಗೆ, (ಛಾಯಾ=ನೆರಳು), ಪುಮಧೀನಾ=ಪುರುಷಾಧೀನವಾಗಿ, ಈಯತೇ=ತಿಳಿಯಲ್ಪಡುತ್ತದೋ, ಏವಂ=ಹೀಗೆಯೇ, ಪುರುಷಾಃ=ಸಂಸಾರಿಗಳು, ಮುಕ್ತಾಶ್ಚ = ಮುಕ್ತರೂ ಕೂಡ, ಪರಮಾತ್ಮನಃ=ಪರಬ್ರಹ್ಮನಿಗೆ, ಆಭಾಸಾಃ ಏವ=ಆಭಾಸಭೂತರೇ ಸರಿ ॥೧೨೦॥ ೧೨೧ ॥ ೧೨೨ ॥೧೨೩॥

ಪರಬ್ರಹ್ಮನ ಆಭಾಸತ್ವವಾದರೂ ಎಲ್ಲಾ ಜೀವರಿಗೆ ಸಾಕ್ಷಾತ್ತಾಗಿ ಅಲ್ಲ. ಮತ್ತೆ ಪರಂಪರೆ ಯಾಗಿ ಎಂದು ಆಭಾಸತ್ವ ಸ್ವರೂಪವನ್ನು ಹೇಳುವುದಕ್ಕಾಗಿ ಎರಡು ಶ್ರುತಿಗಳನ್ನು ಹೇಳುತ್ತಾರೆ—

**ಮೂ ॥ ಛಾಯಾ ವಿಷ್ಣೋಃ ರಮಾ ತಸ್ಯಾಃ ಛಾಯಾ ಧಾತಾ ವಿಶೇಷಕೌ ।**
**ತಸ್ಯೇಂದ್ರಕಾಮೌ ಚ ತಯೋಸ್ತಯೋರನ್ಯೇಽಖಿಲಾ ಅಪಿ ॥ ೧೨೪ ॥**
**ಹರೇರ್ಬ್ರಹ್ಮಾಸ್ಯ ಗೀಸ್ತಸ್ಯಾ ವಿಶೇಷಾವಿಂದ್ರ ಏತಯೋಃ ।**
**ಮಾರಶ್ಚಾಭಾಸಕಾಃ ಸರ್ವ ಏತಯೋಸ್ತದಧೀನತಃ ॥ ೧೨೫ ॥**
**ಸರ್ವೇಽಲ್ಪಶಕ್ತಯಶ್ಚೈವ ಪೂರ್ಣಶಕ್ತಿಃ ಪರೋ ಹರಿಃ ।**
**ಚೇತನತ್ವೇಽಪಿ ಭಿನ್ನಾಸ್ತೇ ತಸ್ಮಾದೇತೇನ ಸರ್ವದಾ ।**
**ಇತ್ಯಾದಿ ಶ್ರುತಿವಾಕ್ಯೇಭ್ಯೋ ಜ್ಞಾಯತೇ ಭೇದ ಏವ ಹಿ ॥ ೧೨೬ ॥**

ಅ ॥ ವಿಷ್ಣೋಃ = ಶ್ರೀ ಪರಮಾತ್ಮನಿಗೆ, ರಮಾ = ಲಕ್ಷ್ಮೀದೇವಿಯು, ಛಾಯಾ = ಛಾಯಾಸದೃಶಳು. ತಸ್ಯಾಃ = ಲಕ್ಷ್ಮೀದೇವಿಗೆ, ಧಾತಾ = ಬ್ರಹ್ಮನು, ಛಾಯಾ = ಛಾಯಾ ಸದೃಶನು. ತಸ್ಯ = ಆ ಬ್ರಹ್ಮನಿಗೆ, ವಿಶೇಷಕೌ = ಗರುಡ-ಶೇಷರು, (ಛಾಯಾಸದೃಶರು). ತಯೋಃ=ಆ ಗರುಡ-ಶೇಷರಿಗೆ, ಇಂದ್ರಕಾಮೌ ಚ=ದೇವೇಂದ್ರ-ಮನ್ಮಥರಿಬ್ಬರು, (ಛಾಯಾ ಸದೃಶರು). ತಯೋಃ=ಆ ದೇವೇಂದ್ರ-ಮನ್ಮಥರಿಗೆ, ಅನ್ಯೇ=ಇತರರಾದ, ಅಖಿಲಾ ಅಪಿ= ಎಲ್ಲರೂ ಕೂಡ, (ಆಭಾಸಭೂತರು). ಹರೇಃ=ಶ್ರೀ ಪರಬ್ರಹ್ಮನಿಗೆ, ಬ್ರಹ್ಮಾ=ಚತುರ್ಮುಖ ಬ್ರಹ್ಮನು, (ಆಭಾಸಭೂತನು). ಅಸ್ಯ = ಈ ಬ್ರಹ್ಮನಿಗೆ, ಗೀಃ = ಸರಸ್ವತಿಯು, (ಆಭಾಸ ಭೂತಳು). ತಸ್ಯಾಃ = ಆ ಸರಸ್ವತಿಗೆ, ವಿಶೇಷೌ = ಗರುಡ-ಶೇಷರು, (ಆಭಾಸಭೂತರು). ಏತಯೋಃ=ಈ ಗರುಡ-ಶೇಷರಿಗೆ, ಇಂದ್ರಃ=ದೇವೇಂದ್ರನು, ಮಾರಶ್ಚ=ಮನ್ಮಥನೂ ಕೂಡ,

(ಆಭಾಸ (ಪ್ರತಿಬಿಂಬ)ಭೂತರು). ಏತಯೋಃ=ಈ ಇಂದ್ರ-ಮನ್ಮಥರಿಗೆ, ಸರ್ವೇ=ಎಲ್ಲಾ ದೇವತೆಗಳೂ, ತದಧೀನತಃ = ಅವರ ಅಧೀನತ್ವವಿದ್ದುದರಿಂದ, ಆಭಾಸಕಾಃ = (ಅವರ ಅಧೀನರೂ ಅವರಿಗೆ ಸದೃಶರೂ, ಆಭಾಸರೂ) ಆಗಿರುವರು. ಸರ್ವೇ=ಎಲ್ಲರೂ, ಅಲ್ಪಶಕ್ತಯಶ್ಚೈವ= ಅಲ್ಪವಾದ ಸಾಮರ್ಥ್ಯವುಳ್ಳವರು, ಪರಃ = ಸರ್ವೋತ್ತಮನಾದ, ಹರಿಃ = ಶ್ರೀ ಹರಿಯು, ಪೂರ್ಣಶಕ್ತಿಃ = ಪರಿಪೂರ್ಣ ಸಾಮರ್ಥ್ಯವುಳ್ಳವನು, ಚೇತನತ್ವೇಽಪಿ = ಚೇತನತ್ವವಿದ್ದಾಗ್ಯೂ, ಅಂಶತ್ವವಿದ್ದಾಗ್ಯೂ, ತೇ = ಜೀವರು, ತಸ್ಮಾತ್ = ಆಭಾಸತ್ವವಿದ್ದ ಪ್ರಯುಕ್ತ, ಏತೇನ=ಈ ಪರಬ್ರಹ್ಮನಿಂದ, ಸರ್ವದಾ=ಯಾವಾಗಲೂ, ಭಿನ್ನಾಃ=ಭೇದವುಳ್ಳವರೇ. (ಹಿಂದೆ ಉದಾಹರಿಸಿರುವ ಶ್ರುತಿಗಳಿಗೆ ಫಲವನ್ನು ಹೇಳುತ್ತಾರೆ). ಇತ್ಯಾದಿ ಶ್ರುತಿವಾಕ್ಯೇಭ್ಯಃ=ಇದು ಮೊದಲಾದ ಶ್ರುತಿವಾಕ್ಯಗಳಿಂದ, ಭೇದ ಏವ ಹಿ=ಭೇದವೇ, ಜ್ಞಾಯತೇ=ತಿಳಿಯಲ್ಪಡುತ್ತದೆ. (ಅಂದರೆ ಜೀವನಿಗೆ ಪರಮೇಶ್ವರನ ಆಭಾಸತ್ವವು ತಿಳಿಯಲ್ಪಡುತ್ತದೆ. ಅದರಿಂದ ಅತ್ಯಂತ ಭೇದವೂ ತಿಳಿಯಲ್ಪಡುತ್ತದೆ). ಹಿ=ಶ್ರುತ್ಯಾದಿ ಪ್ರಸಿದ್ಧವು ॥ ೧೨೪ ॥ ೧೨೫ ॥ ೧೨೬ ॥

ಈಗ 'ಅತ ಏವ ಚೋಪಮಾ' ಎನ್ನುವ ಸೂತ್ರಾವಯವವನ್ನು ವ್ಯಾಖ್ಯಾನ ಮಾಡುವುದಕ್ಕಾಗಿ, ಅದರಿಂದ ಪರಿಹಾರ್ಯವಾದ ಆಶಂಕೆಯನ್ನು ಹೇಳುತ್ತಾರೆ—

**ಮೂ ॥ ಆಭಾಸತ್ವಂ ಹಿ ನಿರ್ಣೀತಂ ಜೀವಸ್ಯ ಪರಮಾತ್ಮನಃ ॥ ೧೨೭ ॥**
**ತನ್ನ ಯುಕ್ತಂ ಯದಾಭಾಸಃ ಉಪಾಧ್ಯಾಯತ್ತ ಈಯತೇ ।**
**ಉಪಾಧ್ಯಾಯತ್ತತಾಭಾವಾದಾಭಾಸತ್ವ ವಿರೋಧತಃ ॥ ೧೨೮ ॥**
**ಚೇತನತ್ವೇನ ಚಾಂಶತ್ವಾತ್ ಸಮುದಾಯ್ಯೈಕ್ಯಮಾಪತೇತ್ ।**
**ಅತಃ ಪೃಥಕ್ತ್ವಮುದಿತಂ ಸಮುದಾಯಾಂಶಯೋರ್ಭವೇತ್ ॥ ೧೨೯ ॥**
**ಈಶಾಖ್ಯಾ ಸಮುದಾಯೇ ಸ್ಯಾದೀಶರೂಪೇಷ್ವಿವೋದಿತಾ ।**
**ಅತೋ ದೇಹಾದ್ಯುಪಾಧೀನಾಮುಪಾಯೇ ಸಮತಾ ಭವೇತ್ ॥ ೧೩೦ ॥**
**ಈಶರೂಪೈರಥಾಭಾಸಾ ಮುಖ್ಯತಃ ಸೂರ್ಯಕಾದಿವತ್ ।**
**ಯದಾ ತದೋಪಾಧ್ಯಾಯತ್ತರೂಪಾಣಾಂ ನಾಶಿತಾ ಭವೇತ್ ॥ ೧೩೧ ॥**

ಅ ॥ (ಯತ್=ಯಾವುದು) ಜೀವಸ್ಯ = ಜೀವನಿಗೆ, ಪರಮಾತ್ಮನಃ = ಪರಬ್ರಹ್ಮನ, ಆಭಾಸತ್ವಂ = ಅಧೀನತ್ವಾದಿರೂಪವಾದ ಆಭಾಸತ್ವವು, ನಿರ್ಣೀತಂ = (ಶ್ರುತಿಬಲದಿಂದ) ನಿಶ್ಚಯಿಸಲ್ಪಟ್ಟದೋ, ತತ್ = ಆಭಾಸತ್ವವು, ಯುಕ್ತಂ=ಯುಕ್ತಿಸಿದ್ಧವಾದುದು, ನ=ಅಲ್ಲ. (ಅಂದರೆ ನಿರವಕಾಶವಾದ ಯುಕ್ತಿಯಿಂದ ವಿರುದ್ಧವಾದ ಅರ್ಥವನ್ನು ಶ್ರುತಿಯಿಂದಲೂ ಪ್ರತಿಪಾದಿಸಲಿಕ್ಕೆ ಸಾಧ್ಯವಲ್ಲ). (ಹೇಗೆ ಯುಕ್ತಿ ಸಿದ್ಧವಲ್ಲವೆಂದರೆ) ಯತ್=ಯಾವ ಕಾರಣದೆಶೆಯಿಂದ, ಆಭಾಸಃ=ಸೂರ್ಯನ ಪ್ರತಿಬಿಂಬವಾದ ಸೂರ್ಯಕಾದಿಯು, ಉಪಾಧ್ಯಾಯತ್ತಃ= ಜಲಮೊದಲಾದ ಉಪಾಧಿಗಳ ಅಧೀನವಾಗಿ, ಈಯತೇ=ತಿಳಿಯಲ್ಪಡುತ್ತದೋ, (ಆಭಾಸಕ್ಕೆ ಉಪಾಧ್ಯಾಯತ್ತತ್ವವು ವ್ಯಾಪಕವೆಂದು ಎಲ್ಲಾ ಕಡೆಗಳಲ್ಲಿಯೂ ನಿಶ್ಚಿತವಾಗಿದೆ). (ಆದಾಗ್ಯೂ ಏಕೆ ಯುಕ್ತವಲ್ಲವೆಂದರೆ—) ಉಪಾಧ್ಯಾಯತ್ತತಾಭಾವಾತ್=(ಜೀವರಿಗೆ) ಉಪಾಧ್ಯಧೀನತ್ವವು ಇಲ್ಲದಿರುವುದರಿಂದ, (ಅಂದರೆ ವ್ಯಾಪಕವಾದ ಉಪಾಧ್ಯಧೀನತ್ವವು ಜೀವರಲ್ಲಿಲ್ಲದಿರುವುದರಿಂದ ವ್ಯಾಪ್ಯವಾದ ಆಭಾಸತ್ವವೂ ಯುಕ್ತವಲ್ಲ. ಆದ ಕಾರಣ ಹೇತುವೇ ಅಸಿದ್ಧವಾಗಿರುವುದರಿಂದ

ಆಭಾಸತ್ವಾನುಮಾನವು ದುಷ್ಟವಾಯಿತು). ಮತ್ತು ಆಭಾಸತ್ವವಿರೋಧತಃ = ಆಭಾಸತ್ವಕ್ಕೆ (ಪ್ರತಿಬಿಂಬತ್ವಕ್ಕೆ ) ಬಿಂಬಭಿನ್ನತ್ವದಿಂದ ವಿರೋಧವಿರೋಣದರಿಂದಲೂ, ಅನುಮಾನವು ದುಷ್ಟವು. ಅಂದರೆ ಜೀವರಲ್ಲಿ ಆಭಾಸತ್ವ ವ್ಯಾಪಕವಾದ ಉಪಾಧ್ಯಾಯತ್ತತ್ವವು ಜೀವರಲ್ಲಿ ಇಲ್ಲವಿರುವುದರಿಂದ ಆಭಾಸತ್ವವು ಜೀವರಲ್ಲಿ ಇರುವುದಿಲ್ಲ. ಪ್ರತಿಬಿಂಬಕ್ಕೆ ಬಿಂಬೈಕ್ಯವೇ ಲೋಕದಲ್ಲಿ ಕಂಡಿರುವುದ ರಿಂದ ಪ್ರತಿಬಿಂಬತ್ವರೂಪವಾದ ಆಭಾಸತ್ವ ಹೇತುವಿನಿಂದ ಬಿಂಬರೂಪನಾದ ಶ್ರೀಹರಿಯಿಂದ ಜೀವರಿಗೆ ಭೇದಸಾಧನವು ಅಯುಕ್ತವು. (ಹೀಗೆ ಆಭಾಸತ್ವಾನುಮಾನವು ದುಷ್ಟವಾಗೋಣ ಏನಾಯಿತೆಂದರೆ— ನಿರ್ಬಾಧವಾಗಿ ಹಿಂದೆ ಹೇಳಿದ ಎರಡು ಅನುಮಾನಗಳಿಂದ ಐಕ್ಯವು ಸಿದ್ಧವಾಯಿತೆನ್ನುತ್ತಾರೆ). ಚೇತನತ್ವೇನ=ಚೇತನತ್ವವಿದ್ದುದರಿಂದಲೂ, ಅಂಶತ್ವಾಚ್ಚ=ಅಂಶತ್ವ ವಿದ್ದುದರಿಂದಲೂ, ಸಮುದಾಯೈಕ್ಯಂ=ಸಮುದಾಯಕ್ಕೆ ಐಕ್ಯವು, ಆಪತೇತ್=ಪ್ರಾಪ್ತವಾಗು ವುದು. (ಮಾಯಾವಾದಿಗಳು ಜೀವರಿಗೆ ಪ್ರತ್ಯೇಕವಾಗಿಯೂ, ಬ್ರಹ್ಮನಿಂದಲೂ ಅತ್ಯಂತಾಭೇದ ವನ್ನು ಅಂಗೀಕರಿಸುತ್ತಾರೆ. ಹೀಗೆ ಭೇದಾಭೇದವಾದಿಗಳ ಮತವು ಹೀಗೆ ಅಲ್ಲ. ಏಕೆಂದರೆ— ಸಮುದಾಯಕ್ಕೆ ಐಕ್ಯವಿದ್ದರೂ ಭೇದವೂ ಕೂಡ ಇದೆ). (ಅತ್ಯಂತಾಭೇದವನ್ನು ಬಿಟ್ಟು ಸಮು ದಾಯಕ್ಕೆ ಐಕ್ಯವನ್ನು ಏಕೆ ಅಂಗೀಕರಿಸುವುದು ಎಂದರೆ—) ಅತಃ=ಸಮುದಾಯಕ್ಕೆ ಐಕ್ಯ ವನ್ನು ಅಂಗೀಕರಿಸಿದರಿಂದ, ಉದಿತಂ=ಶ್ರುತ್ಯಾದಿಗಳಲ್ಲಿ ಹೇಳಲ್ಪಟ್ಟ, ಪೃಥಕ್ತ್ವಂ=ಭೇದವು, ಸಮುದಾಯಾಂಶಯೋಃ=ಚೇತನ ಸಮುದಾಯರೂಪನಾದ ಬ್ರಹ್ಮನೂ, ಬ್ರಹ್ಮನ ಅಂಶರೂಪ ನಾದ ಜೀವನೂ ಇವರಿಗೆ, ಭವೇತ್=ಆಗಬೇಕಾಗುವುದು. ಅಥವಾ ಸಮುದಾಯಕ್ಕೆ ಯಾವ ಜೀವೇಶ್ವರರು ಅಂಶಭೂತರೋ ಅವರಿಗೆ ಆಗಬೇಕಾಗುವುದು. (ಅಂದರೆ, ಮಾಯಾವಾದಿಗಳಂತೆ ಜೀವನಿಗೆ ಬ್ರಹ್ಮನಿಂದ ಅತ್ಯಂತಾಭೇದವನ್ನು ಹೇಳಿದರೆ ಆಗ ಭೇದಶ್ರುತಿಗಳು ಕೂಡದೆ ಹೋಗ ಬೇಕಾಗುವವು. ಆ ಶ್ರುತಿಗಳಿಗೆ ಮಾಯಿಕಭೇದಪರತ್ವವನ್ನು ಹೇಳಿದರೆ ಅವುಗಳು ಅಪ್ರಮಾಣ ಗಳಾಗಬೇಕಾಗುವವು. ಈ ದೋಷವು ಭೇದವನ್ನು ಒಪ್ಪತಕ್ಕ ನಮಗೆ ಇಲ್ಲ. ಹೇಗೆಂದರೆ— ಜೀವಬ್ರಹ್ಮರಿಗೂ ಜೀವೇಶ್ವರರಿಗೂ ಭೇದವಿದ್ದಪ್ರಯುಕ್ತ ಭೇದಶ್ರುತಿಗೆ ಜೀವಬ್ರಹ್ಮಭೇದ ಜೀವೇ ಶ್ವರಭೇದಪರತ್ವವು ಕೂಡಬಹುದು.) (ಸಮುದಾಯಕ್ಕೆ ಐಕ್ಯವೆಂದು ಹಿಂದೆ ಹೇಳಲ್ಪಟ್ಟದೆ. ಅದನ್ನು ಸ್ವಲ್ಪ ವಿಸ್ತರಿಸುತ್ತಾರೆ.) ಈಶಾಖ್ಯಾ = ಬ್ರಹ್ಮ ಎನ್ನುವ ಹೆಸರು, ಸಮುದಾಯೇ= (ಚೇತನಗಳ) ಸಮುದಾಯದಲ್ಲಿ, ಸ್ಯಾತ್=ಆಗುವುದು. (ಅಂದರೆ— ಪರಬ್ರಹ್ಮ ಒಂದೇ ಸ್ವಭಾವ ಸಿದ್ಧವಾದ ತತ್ವವು, ಆ ಪರಮಾರ್ಥಭೂತನಾದ ಬ್ರಹ್ಮನು ಮಾಯಾಸಂಬಂಧದಿಂದ ಈಶ್ವರತ್ವ ವನ್ನು ಹೊಂದುತ್ತಾನೆ. ಆ ಈಶ್ವರನು ಸರ್ವಜ್ಞನು, ಸರ್ವೇಶ್ವರನು, ಜಗಜ್ಜನ್ಮಾದಿಗಳನ್ನು ಮಾಡುವವನು. ಜೀವರಾದರೂ ಬ್ರಹ್ಮನ ಅಂಶಭೂತರು; ಚಿತ್ಸ್ವಭಾವಭೂತರು; ಬೆಂಕಿಯಿಂದ ಅಗ್ನಿಕಣಗಳಂತೆಯೇ ಹೊರಟವರು. ಆದುದರಿಂದಲೇ ಬ್ರಹ್ಮನಿಂದ ಜೀವರು ಭಿನ್ನಾಭಿನ್ನರು. ಪರಸ್ಪರವಾಗಿಯೂ ಈಶ್ವರನಿಂದಲೂ ಭಿನ್ನರೇ. ಬ್ರಹ್ಮನಾದರೂ ಸರ್ವಚೇತನರ ಸಮುದಾಯ ರೂಪನು; ಅತಿರಿಕ್ತನೂ ಆಗಿರುತ್ತಾನೆ, ಎನ್ನುತ್ತಾರೆ. ಈ ವಿಷಯದಲ್ಲಿ ದೃಷ್ಟಾಂತವನ್ನು ಹೇಳು ತ್ತಾರೆ. ಈಶರೂಪೇಷ್ವಿವ=ಶ್ರೀ ಹರಿಯ ಮತ್ಸ್ಯಾದಿರೂಪಗಳಲ್ಲಿದ್ದಂತೆಯೇ, ಉದಿತಾ=ಹೇಳ ಲ್ಪಟ್ಟದೆ. (ಅಂದರೆ— ಹೇಗೆ ಮತ್ಸ್ಯ ಮೊದಲಾದ ಭಗವದ್ರೂಪಗಳ ಸಮುದಾಯದಲ್ಲಿ 'ಭಗವಾನ್'' ಎನ್ನುವ ಸಂಜ್ಞೆಯು 'ನಸ್ಥಾನತೋಽಪಿ' ಇತ್ಯಾದಿಗಳಲ್ಲಿ ಸಿದ್ಧಾಂತಿಯಿಂದ ಹೇಳ ಲ್ಪಟ್ಟದೋ ಹಾಗೆಯೇ ಬ್ರಹ್ಮನೆನ್ನುವ ಹೆಸರು ಚೇತರ ಸಮುದಾಯದಲ್ಲಿದೆ.) (ಮತ್ಸ್ಯಾದಿಗಳು ಹೇಗೆ ಪರಮಾತ್ಮನ ಅಂಶಭೂತರೋ ಹಾಗೆಯೇ ಜೀವರು ಬ್ರಹ್ಮನ ಅಂಶಭೂತರಾಗಿರುವರು ಆಗುವುದಾದರೆ ಆಗ ಮತ್ಸ್ಯಾದಿಗಳಿಗೆ ಐಶ್ವರ್ಯಾದಿಗಳು ಇದ್ದಂತೆಯೇ ಜೀವರಿಗೆ ನಿರ್ದುಃಖ ತ್ವಾದಿಗಳು ಬರಬೇಕಾಗುವವು. ಅಂಶಗಳಲ್ಲಿ ಅಂಶಿಸಾಧರ್ಮ್ಯವು ಇದ್ದೇ ಇದೆ.) (ಮತ್ತು ಜೀವನಿಗೆ

ಬ್ರಹ್ಮನಿಂದ ಭೇದವೂ ಕೂಡ ಪರಮಾರ್ಥವಾಗಿದ್ದರೆ ಆಗ 'ಬ್ರಹ್ಮೈವ ಭವತಿ' ಎಂದು ಹೇಳಿದ ಮುಕ್ತಿಯು ಅಯುಕ್ತವಾಗಬೇಕಾಗುವುದು ಎಂದರೆ—) ಅತಃ=ಆದಕಾರಣ, (ಜ್ಞಾನಕರ್ಮ ಗಳಿಂದ) ದೇಹಾದ್ಯುಪಾಧೀನಾಂ=ಶರೀರವೊದಲಾದ ಉಪಾಧಿಗಳಿಗೆ, ಅಪಾಯೇ=ಸಂಪೂರ್ಣ ನಾಶವು ಬರುತ್ತಿರಲು (ಜೀವರಿಗೆ) ಈಶರೂಪೈಃ=ಶ್ರೀ ಹರಿಯ ರೂಪಗಳಿಂದ, ಸಮತಾ= ಸಾಮ್ಯವು, ಭವೇತ್=ಬರುವುದು. (ಉಪಾಧ್ಯಧೀನತ್ವವಿಲ್ಲದಿರುವುದರಿಂದ ಜೀವರಿಗೆ ಆಭಾಸತ್ವ ವಿಲ್ಲವೆಂದು ಹೇಳಿದ್ದು ಅಯುಕ್ತವು. ಜೀವರಿಗೂ ಕೂಡ ಸೂರ್ಯನ ಪ್ರತಿಬಿಂಬಾದಿಗಳಂತೆ ಆಭಾಸತ್ವವನ್ನು ಅಂಗೀಕರಿಸಿದರೆ ಬಾಧಕವಿಲ್ಲವೆಂದು ಶಂಕಿಸುತ್ತಾರೆ.) ಅಥ = ಹಾಗೆಯೇ, ಯದಾ=ಯಾವಾಗ, (ಜೀವರು) ಮುಖ್ಯತಃ=ಉಪಾಧ್ಯಧೀನತ್ವದಿಂದ, ಸೂರ್ಯಕಾದಿವತ್= ಸೂರ್ಯಛಾಯಾದಿಗಳಂತೆ, ಆಭಾಸಾಃ=ಆಭಾಸಭೂತರೋ, ತದಾ=ಆಗ, ಉಪಾಧ್ಯಾಯು ತ್ತರೂಪಾಣಾಂ=ಉಪಾಧ್ಯಧೀನಗಳಾದ ರೂಪಗಳಿಗೆ, ನಾಶಿತಾ=ನಾಶವು, ಭವೇತ್=ಬರುವುದು.

**ತಾ || ನ್ಯಾಯಸುಧಾ—** (1) ಜೀವರಿಗೆ ಬ್ರಹ್ಮನಿಂದ ಭೇದಾಭೇದಗಳು ಸ್ವಾಭಾವಿಕ ಗಳಲ್ಲ. ಮತ್ತೆ ಅಭೇದವು ಸ್ವಾಭಾವಿಕವು. ಭೇದವಾದರೂ ಔಪಾಧಿಕವು. ಹೇಗೆಂದರೆ, ಈಶ್ವರನ ಅಂಶಭೂತರಾದ ಮತ್ಸ್ಯಾದಿಗಳಿಗೆ ಈಶ್ವರನಿಂದ. ಆದರೆ ಇಷ್ಟು ವಿಶೇಷವು. ಮತ್ಸ್ಯಾದಿಗಳು ಜಗತ್ತಿನ ಅನುಗ್ರಹಕ್ಕಾಗಿ ಕ್ರೀಡಾರ್ಥವಾಗಿ ತೆಗೆದುಕೊಂಡ ಶರೀರರೂಪವಾದ ಉಪಾಧಿಯಿಂದ ಭಿನ್ನರು. ವ್ಯಕ್ತ ಐಶ್ವರ್ಯಗಳುಳ್ಳವರು. ಜೀವರಾದರೂ ಅನಾದಿಯಾದ ಅವಿದ್ಯಾಕಾಮ-ಕರ್ಮಾದಿಗಳೇ ನಿಬಂಧನವಾಗಿವುಳ್ಳ ಶರೀರ ಇಂದ್ರಿಯಾದಿರೂಪ ಉಪಾಧಿಗಳಿಂದ ಭಿನ್ನರಾದವರು, ಅವ್ಯಕ್ತವಾದ ಬ್ರಹ್ಮಸ್ವಭಾವವುಳ್ಳವರು. ಉಪಾಧಿನಿಮಿತ್ತಕ ದುಃಖಾದಿಗಳನ್ನು ಹೊಂದಿರುವರು, ಎನ್ನುವರು. ಯಾವಕಾರಣದಿಂದ ಹೀಗೆ ಔಪಾಧಿಕ ಭೇದವೇ ಇದೆಯೋ, ಆದಕಾರಣ ಜ್ಞಾನಕರ್ಮಗಳಿಂದ ಶರೀರಾದ್ಯುಪಾಧಿಗಳಿಗೆ ಸಂಪೂರ್ಣ ನಾಶವು ಬರುತ್ತಿರಲು ಜೀವರಿಗೆ ಶ್ರೀಹರಿಯ ರೂಪಗಳಿಂದ ಸಾಮ್ಯವು ಬರುವುದು. ಉದಾ=ಮತ್ಸ್ಯಾದಿ ಈಶ್ವರ ರೂಪಗಳು, ಅವತಾರ ಕಾರ್ಯವು ಅವಸಾನವಾಗೋಣ, ತನ್ನ ಇಚ್ಛೆಯಿಂದಲೇ ಲೀಲಾವಿಗ್ರಹ ವನ್ನು ಬಿಟ್ಟು ಈಶ್ವರತ್ವವನ್ನು ಹೊಂದುತ್ತವೆ. ಹಾಗೆಯೇ ಜೀವರೂ ಕೂಡ ಜ್ಞಾನಕರ್ಮಗಳನ್ನು ಮಾಡಿದವರಾಗಿ ಪ್ರಾರಬ್ಧಕರ್ಮವು ಸಮಾಪ್ತಿಯಾದಾಗ ದೇಹಾದ್ಯುಪಾಧಿಗಳಿಂದ ಅತ್ಯಂತವಾಗಿ ಬಿಡಲ್ಪಟ್ಟವರಾಗಿ ಸ್ವಾಭಾವಿಕವಾದ ಬ್ರಾಹ್ಮಣತ್ವವನ್ನು ಹೊಂದುತ್ತಾರೆ. (2) ಜೀವರಿಗೆ ಉಪಾಧ್ಯಧೀನತ್ವವಿದ್ದರೆ ಉಪಾಧಿ ನಾಶವಾದಾಗ ಸೂರ್ಯಪ್ರತಿಬಿಂಬಾದಿಗಳಂತೆ ಜೀವರಿಗೆ ನಾಶವು ಬರುವುದು. ಉಪಾಧಿಗಳಿಗೆ ನಾಶವಿಲ್ಲದಿದ್ದರೆ ಆಗ ಪ್ರತ್ಯಕ್ಷಾದಿ ವಿರೋಧವು. ಸರ್ವದಾ ಸಂಸಾರಿತ್ವವೂ ಬರಬೇಕಾಗುವುದು. ಅಂತೂ ಎರಡು ಪ್ರಕಾರದಿಂದಲೂ ಮೋಕ್ಷ ಶಾಸ್ತ್ರಕ್ಕೆ ವೈಯ್ಯರ್ಥ್ಯವು ಬರುವುದು. ಆದಕಾರಣ ಉಪಾಧ್ಯಧೀನತ್ವವನ್ನು ಅಂಗೀಕರಿಸಲಿಕ್ಕೆ ಅಶಕ್ಯವಾಗುತ್ತಿರಲು ಆಭಾಸತ್ವಕ್ಕೆ ಅಸಿದ್ಧಿಯು ಸ್ಥಿರವಾಯಿತು. || ೧೨೭ || ೧೨೮ || ೧೨೯ || || ೧೩೦ || ೧೩೧ ||

ಈ ಆಶಂಕೆಯನ್ನು ನಿವಾರಣೆಮಾಡುತ್ತಾ ಸೂತ್ರಾಂಶವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ || ಇತ್ಯಾಶಂಕಾನಿವೃತ್ತ್ಯರ್ಥಮಾಹ ವೇದಾಧಿಪಃ ಪ್ರಭುಃ |**
**ಅತ ಏವೋಪಮೇತ್ಯೇವ ಚಾನ್ಯಾಭಾಸವಿಶೇಷಿತಾಂ || ೧೩೨ ||**

ಅ|| ವೇದಾಧಿಪಃ=ವೇದಗಳಿಗೆ ಅಧಿಪತಿಯಾದ, ಸರ್ವಸಮರ್ಥರಾದ ವೇದವ್ಯಾಸರು, ಇತಿ= ಪೂರ್ವೋಕ್ತ ಪ್ರಕಾರವಾದ, ಆಶಂಕಾನಿವೃತ್ತ್ಯರ್ಥಂ = ಆಶಂಕೆಯನ್ನು ಪರಿಹರಿಸುವುದಕ್ಕಾಗಿ,

'ಅತ ಏವ್ಹೋಪಮಾ' ಇತ್ಯೇವ ಚ = ಅತ ಏವ್ಹೋಪಮಾ ಎಂದು, ಆಹ = ಹೇಳಿರುವರು. (ಸೂತ್ರಖಂಡದ ತಾತ್ಪರ್ಯವನ್ನು ಹೇಳುತ್ತಾರೆ)— ಅನ್ಯಾಭಾಸವಿಶೇಷಿತಾಂ = ಇತರವಾದ ಸೂರ್ಯಪ್ರತಿಬಿಂಬ ಮೊದಲಾದ ಆಭಾಸದೆಶೆಯಿಂದ (ಜೀವರಿಗೆ) ವೈಲಕ್ಷಣ್ಯವನ್ನು, (ಈ ಸೂತ್ರ ಖಂಡದಿಂದ ಸೂತ್ರಕಾರರು ಹೇಳುತ್ತಾರೆ). ॥ ೧೩೨ ॥

ಹಿಂದೆ ಹೇಳಿದ ತಾತ್ಪರ್ಯವು ಸೂತ್ರಾಕ್ಷರಗಳಿಂದ ಹೇಗೆ ಸಿಗುತ್ತದೆಂದರೆ— 'ಅತಏವ' ಎನ್ನುವ ಶಬ್ದದಿಂದ ಪರಾಮೃಷ್ಟವಾದ ಅರ್ಥವನ್ನು ತೋರಿಸುತ್ತಾರೆ—

**ಮೂ ॥ ಯದುಕ್ತಂ ತದಧೀನತ್ವಂ ಸರ್ವಾವಸ್ಥಾಸ್ವಶೇಷತಃ ।**
**ಜೀವಸ್ಯ ಸದೃಶತ್ವಂ ಚ ಚಿತ್ವಮಾತ್ರಂ ನ ಚಾಪರಂ ॥ ೧೩೩ ॥**

ಅ ॥ ಜೀವಸ್ಯ=ಜೀವನಿಗೆ, ಅಶೇಷತಃ=ಎಲ್ಲಾ ವ್ಯಾಪಾರಗಳಲ್ಲಿ, ಸರ್ವಾವಸ್ಥಾಸು= ಎಲ್ಲಾ ಅವಸ್ಥೆಗಳಲ್ಲಿಯೂ, ತದಧೀನತ್ವಂ=ಪರಮಾತ್ಮನ ಅಧೀನತ್ವವು, ಯತ್=ಯಾವುದು, ('ಸಂಧ್ಯೇ ಸೃಷ್ಟಿರಾಹ ಹಿ' ಇತ್ಯಾದಿಗಳಲ್ಲಿ) ಉಕ್ತಂ = ಹೇಳಲ್ಪಟ್ಟದೋ, ಸದೃಶತ್ವಂ ಚ= ಪರಮಾತ್ಮನಿಂದ ಸಾದೃಶ್ಯವೂ ಕೂಡ, ಉಕ್ತಂ=ಹೇಳಲ್ಪಟ್ಟದೋ,('ಪುಂಸ್ತ್ವಾದಿವತ್' ಇತ್ಯಾದಿ ಗಳಲ್ಲಿ) (ಅಂತಹ ಸದೃಶತ್ವವು) ಚಿತ್ತ್ವಮಾತ್ರಂ=ಕೇವಲ ಚೇತನರೂಪವೇ. ಅಪರಂ=ಇತರ ವಾದ ಸ್ವಾತಂತ್ರ್ಯಾದಿರೂಪವಾದುದು, ನ ಚ=ಅಲ್ಲ. ॥ ೧೩೩ ॥

ಈಗ 'ಅತಏವ ಚೋಪಮಾ' ಎನ್ನುವ ವಾಕ್ಯವನ್ನು ಕೂಡಿಸುತ್ತಾರೆ—

**ಮೂ ॥ ತಾವನ್ಮಾತ್ರೇಣ ಚಾಭಾಸೋ ರೂಪಮೇಷಾಂ ಚಿದಾತ್ಮನಾಂ ।**
**ನೋಪಾಧ್ಯಧೀನತಾದ್ಯೈಶ್ಚ ನಾತಿಸಾಮ್ಯಂ ನಿದರ್ಶನೇ ॥ ೧೩೪ ॥**

ಅ ॥ ತಾವನ್ಮಾತ್ರೇಣ=ತದಧೀನತ್ವ ತತ್ಸದೃಶತ್ವಮಾತ್ರದಿಂದ, ಏಷಾಂ ಚಿದಾತ್ಮನಾಂ= ಈ ಚಿದ್ರೂಪರಾದ ಜೀವರಿಗೆ, ರೂಪಂ=ಸ್ವರೂಪವು, (ನಮ್ಮಿಂದ) ಆಭಾಸಃ = ಆಭಾಸವು (ಎಂದು ಹೇಳಲ್ಪಟ್ಟದೆ.) ಚ=ಅಷ್ಟರಿಂದಲೇ ಸೂರ್ಯಾದ್ಯುಪಮಾನವನ್ನು ತೆಗೆದುಕೊಂಡದ್ದು. (ಏವಶಬ್ದವ್ಯಾವರ್ತ್ಯವನ್ನು ತೋರಿಸುತ್ತಾರೆ.) ಉಪಾಧ್ಯಧೀನತಾದ್ಯೈಶ್ಚ = ಉಪಾಧ್ಯಧೀನತ್ವ, ಉಪಾಧಿನಾಶನಾಶತ್ವ ಜಡತ್ವಾದಿ ಹೇತುಗಳಿಂದಲೂ, ನ=ಅಲ್ಲ. (ಹಾಗಾದರೆ ಹೀಗೆ ಸರ್ವಾಂಶ ದಿಂದ ಸಾಮ್ಯವಿಲ್ಲದಿದ್ದರೆ ಸೂರ್ಯಕಾದಿಗಳಿಗೂ ಜೀವನಿಗೂ ದೃಷ್ಟಾಂತ ದಾರ್ಷ್ಟಾಂತಿಕ ಭಾವವು ಕೂಡದೆ ಹೋಗಬೇಕಾಗುವುದು. ಅತ್ಯಂತ ಸಾಮ್ಯವಿದ್ದರೇನೇ ದೃಷ್ಟಾಂತ ದಾರ್ಷ್ಟಾಂ ತಿಕ ಭಾವವು ಕೂಡುತ್ತದೆ. ಇಲ್ಲವಾದರೆ ಕೇವಲ ಪ್ರಮೇಯತ್ವಾದಿಗಳಿಂದ ಸಾಮ್ಯವು ಎಲ್ಲಾ ಕಡೆಗಳಲ್ಲಿಯೂ ಕೂಡುವುದರಿಂದ ಮಶಕ (ನೊಣ)ವೂ ಕೂಡ ಮಾತಂಗಕ್ಕೆ (ಆನೆಗೆ)ದೃಷ್ಟಾಂತ ವಾಗಬೇಕಾಗುವುದು, ಎಂದರೆ—) ನಿದರ್ಶನೇ=('ನಿದರ್ಶ್ಯತೇ ಸಾಧ್ಯೇನ ಸಾಧನಸ್ಯ ವ್ಯಾಪ್ತಿರತ್ರ' ಎನ್ನುವ ವ್ಯುತ್ಪತ್ತಿಯಿಂದ) ಸಾಧ್ಯದಿಂದ ಹೇತುವಿಗೆ ವ್ಯಾಪ್ತಿಯನ್ನು ತೋರಿಸುವ ದೃಷ್ಟಾಂತ ಸ್ಥಳ ದಲ್ಲಿ ಸಾಧ್ಯಸಾಧನ ಧರ್ಮದಿಂದ ಸಾಮ್ಯವೇ ದಾರ್ಷ್ಟಾಂತಿಕದಿಂದ ಇರಬೇಕು. ಅತಿಸಾಮ್ಯಂ= ಅತ್ಯಂತ ಸಾಮ್ಯವು, ನ=ಅಗತ್ಯವಿರುವುದಿಲ್ಲ. (ನೊಣಕ್ಕೂ ಆನೆಗೂ ಕೂಡ ವಿವಕ್ಷಿತಧರ್ಮ ದಿಂದ ಸಾಮ್ಯವಿದ್ದರೆ ದೃಷ್ಟಾಂತ ದಾರ್ಷ್ಟಾಂತಿಕಭಾವವು ಕೂಡಬಹುದು.) ॥ ೧೩೪ ॥

ಜೀವನಿಗೆ ಸದೃಶ್ಯತ್ವವು ಚಿತ್ತ್ವಮಾತ್ರವು ಎಂದು ಹೇಳಿದ್ದು ಅಯುಕ್ತವು. ಮುಕ್ತಿಯಲ್ಲಿ ಸುಖಾದಿಗಳನ್ನು ಅಂಗೀಕರಿಸಿದರಿಂದ ವಿರೋಧವು ಬರುವುದು, ಎಂದರೆ—

ಮೂ ॥ ಕಿಂಚಿತ್ಸುಖಾದಿಸಾದೃಶ್ಯಮಪೀಶೇನಾಸುರಾನ್ಯತೇ ।
ತತ ಆಭಾಸತೇ ನಿತ್ಯಂ ತದ್ವದಾಭಾಸತೇಽಪಿ ಚ ॥ ೧೩೫ ॥
ಭಾನಮಸ್ತಿತ್ವಮಪಿ ಚೈವಾಸಮಂತಾದ್ಯತಸ್ತತಃ ।
ಜೀವ ಆಭಾಸ ಉದ್ದಿಷ್ಟಃ ಸದೈವ ಪರಮಾತ್ಮನಃ ॥
ನ ಜಲಾಯತ್ತಸೂರ್ಯಾದಿಪ್ರತಿಬಿಂಬೋಪಮತ್ವತಃ ॥ ೧೩೬ ॥

ಅ ॥ ಅಸುರಾನ್=ಅಸುರರನ್ನು, ಋತೇ=ಹೊರತು, (ಇತರ ಜೀವರಿಗೆ,) ಈಶೇನ= ಶ್ರೀ ಹರಿಯಿಂದ, ಕಿಂಚಿತ್=ಸ್ವಲ್ಪ, ಸುಖಾದಿಸಾದೃಶ್ಯಮಪಿ=ಸುಖಾದಿಗಳಿಂದ ಸಾದೃಶ್ಯವೂ ಕೂಡ, (ಉಂಟೇ ಉಂಟು.) (ಸುಖಾದಿಸಾದೃಶ್ಯವು ಇದ್ದರೂ ಅದು ಅಸುರಾದಿ ಎಲ್ಲಾ ಚೇತನರಲ್ಲಿ ಇಲ್ಲದಿರುವುದರಿಂದ ಅದನ್ನು ಹೇಳಲಿಲ್ಲ. ಚಿತ್ತ್ವಸಾದೃಶ್ಯವಾದರೂ ಅಸುರಾದಿ ಎಲಾ ಚೇತನರಲ್ಲಿಯೂ ಇದ್ದಪ್ರಯುಕ್ತ ಅದನ್ನೇ ಹೇಳುತ್ತಾರೆ.) ('ಬ್ರಹ್ಮಾಭಾಸತ್ವಾತ್' ಎನ್ನುವ ಹೇತುವಿಗೆ ಬ್ರಹ್ಮನ ಅಧೀನತ್ವವಿದ್ದಪ್ರಯುಕ್ತವೂ ಬ್ರಹ್ಮನ ಸಾದೃಶ್ಯವಿದ್ದಪ್ರಯುಕ್ತವೂ ಎಂದು ಅರ್ಥವು. ಸೂರ್ಯಪ್ರತಿಬಿಂಬಾದಿಗಳಂತೆಯೇ ಪ್ರತಿಬಿಂಬತ್ವವಿದ್ದಪ್ರಯುಕ್ತ ಎಂದು ಅರ್ಥವಲ್ಲ, ಎಂದು ಹೇಳಿದಂತೆಯೇ (ಆಯಿತು). (ಬ್ರಹ್ಮಾಭಾಸಶಬ್ದವು ಜೀವನಿಗೆ ಬ್ರಹ್ಮಾಧೀನತ್ವವನ್ನೂ ಬ್ರಹ್ಮಸಾದೃಶ್ಯವನ್ನೂ ಯೋಗವೃತ್ತಿಯಿಂದ ಹೇಳುತ್ತದೆನ್ನುತ್ತಾರೆ.) ತತಃ = ಪರಮಾತ್ಮನಿಂದ, (ಜೀವನು) ನಿತ್ಯಂ=ನಿತ್ಯದಲ್ಲಿಯೂ, ಆಭಾಸತೇ = ಪ್ರತೀತನಾಗುತ್ತಾನೆ. ಇದರಿಂದ (ಪ್ರತೀತಿಯಲ್ಲಿಯೂ ಪರಮಾತ್ಮಾಧೀನತ್ವವು ಹೇಳಲ್ಪಡುತ್ತದೆ). ಅಪಿ ಚ=ಮತ್ತು, ತದ್ವತ್=ಬ್ರಹ್ಮನಂತೆ, ಆಭಾಸತೇ=ತೋರುತ್ತಾನೆ. (ಎನ್ನುವುದರಿಂದ ಬ್ರಹ್ಮನ ಸಾದೃಶ್ಯವು ಉಕ್ತವಾಯಿತು.) ಯತಃ= ಯಾವಕಾರಣದೆಶೆಯಿಂದ, ಭಾನಂ=ಜ್ಞಾನವು, ಅಸ್ತಿತ್ವಂ ಅಪಿ=ಸತ್ವವೂ ಕೂಡ, ಆಸಮಂತಾತ್=ಚೆನ್ನಾಗಿ, ತತ ಏವ=ಪರಮಾತ್ಮನಿಂದಲೇ (ಜೀವನಿಗೆ ಆಗುತ್ತದೋ), ತತಃ = ಆದ ಕಾರಣದಿಂದ, ಜೀವಃ=ಜೀವನು, ಸದೈವ = ಯಾವಾಗಲೂ, ಪರಮಾತ್ಮನಃ = ಶ್ರೀ ಹರಿಗೆ, ಆಭಾಸಃ=ಪ್ರತಿಬಿಂಬನೆಂದು, ಉದ್ದಿಷ್ಟಃ=ಹೇಳಿಸಿಕೊಳ್ಳಲ್ಪಟ್ಟದ್ದಾನೆ. (ಭಾಚ ಸಾಚ ಜ್ಞಾನವೂ, ಸತ್ವವೂ ಭಾಸೇ. ಆ ಸರ್ವಕಾಲವರ್ತಿನ್ಯೌ ಭಾಸೇ ಆಭಾಸೇ. ಪರಮಾತ್ಮಾಧೀನೇ ಆಭಾಸೇ ಯಸ್ಯಾಸೌ ಪರಮಾತ್ಮಾಭಾಸಃ ಎಂದು ವ್ಯುತ್ಪತ್ತಿಯು ) ಜಲಾಯತ್ತಸೂರ್ಯಾದಿಪ್ರತಿಬಿಂಬೋಪಮತ್ವತಃ=ಜಲಾಧೀನಗಳಾದ ಸೂರ್ಯನೇ ಮೊದಲಾಗಿವುಳ್ಳ ಪ್ರತಿಬಿಂಬಗಳ ಸಾದೃಶ್ಯವಿದ್ದ ಪ್ರಯುಕ್ತ, ಆಭಾಸಃ=ಪ್ರತಿಬಿಂಬನು, ನ=ಅಲ್ಲ. (ಅಂದರೆ ಸೂರ್ಯಾದಿ ಪ್ರತಿಬಿಂಬಗಳು ಹೇಗೆ ಜಲಮೊದಲಾದ ಉಪಾಧಿಗಳ ಅಧೀನಗಳಾಗಿವೆಯೋ, ಹಾಗೆಯೇ ಜೀವನು ಉಪಾಧ್ಯಧೀನಗಳಾಗಿರುವುದರಿಂದ ಆಭಾಸಭೂತನಲ್ಲ) ॥ ೧೩೫ ॥ ೧೩೬ ॥

ಸೂತ್ರದಲ್ಲಿದ್ದ ಪದಗಳ ಅರ್ಥವನ್ನು ಹೇಳುತ್ತಾರೆ—

ಮೂ ॥ ತದಧೀನತ್ವಮೇವೇತಿ ಕಿಂಚಿತ್ಸಾದೃಶ್ಯಮೇವ ಚಃ ॥ ೧೩೭ ॥
ಸಂಪ್ರಕಾಶಯುತಃ ಸೂತ್ರಗತಾವಖಿಲಮಾನತಃ ।
ಜೀವೇಶಭೇದದೃಷ್ಟ್ಯೈವ ಸಮುದಾಯೈಕತಾ ಕುತಃ ॥ ೧೩೮ ॥
ಅಶೇಷದೋಷರಾಹಿತ್ಯಂ ಸರ್ವಶಕ್ತಿತ್ವತೋ ಹರೇಃ ॥
ಸರ್ವೋಪೇತೇತಿ ಕಥಿತ ಮತ ಐಕ್ಯಂ ಕ್ವ ದೋಷಿಣಾ ॥ ೧೩೯ ॥

ಅ ॥ ಏವೇತಿ=ಏವ ಎನ್ನುವ ಶಬ್ದವು, ತದಧೀನತ್ವಮೇವ=ಪರಬ್ರಹ್ಮನ ಅಧೀನತ್ವವೇ ಎನ್ನುವ ಅರ್ಥವನ್ನೂ, ಚಃ=ಚ ಶಬ್ದವು, ಕಿಂಚಿತ್ ಸಾದೃಶ್ಯಮೇವ=ಸ್ವಲ್ಪ ಸಾದೃಶ್ಯವೇ ಎನ್ನುವ ಅರ್ಥವನ್ನೂ ಹೀಗೆ, ಸೂತ್ರಗತೌ=ಸೂತ್ರದಲ್ಲಿರುವ ಏವ, ಚ ಶಬ್ದಗಳು, ಅಖಿಲ ಮಾನತಃ= (ಕೇವಲ ಆಭಾಸತ್ವಾನುಮಾನದಿಂದ ಅಲ್ಲ.) ಎಲ್ಲಾ ಪ್ರಮಾಣಗಳಿಂದಲೂ, ಸಂಪ್ರಕಾಶಯತಃ= ತೋರಿಸಿಕೊಡುತ್ತವೆ. ಜೀವೇಶಭೇದದೃಷ್ಟ್ಯೈವ=ಜೀವರಿಗೂ ಶ್ರೀ ಹರಿಗೂ ಭೇದವು ಕಂಡು ದರಿಂದಲೇ, ಸಮುದಾಯೈಕತಾ=ಸಮುದಾಯಕ್ಕೆ ಏಕತ್ವವು, ಕುತಃ=ಯಾವ ಪ್ರಮಾಣ ದಿಂದ ಸಿದ್ಧವಾಗುತ್ತದೆ? ಹರೇಃ=ಶ್ರೀ ಹರಿಗೆ, ಸರ್ವ ಶಕ್ತಿತ್ವತಃ=ಸಂಪೂರ್ಣ ಶಕ್ತಿಯಿದ್ದ ಪ್ರಯುಕ್ತ, ಅಶೇಷದೋಷರಾಹಿತ್ಯಂ=ಸರ್ವ ದೋಷಗಳ ಅಭಾವವು, ಸರ್ವೋಪೇತೇತಿ='ಸರ್ವೋ ಪೇತಾ ಚ ತದ್ದರ್ಶನಾತ್' ಎಂದು ಸರ್ವಶಕ್ತಿಮತ್ವರೂಪಹೇತುವಿನಿಂದ, ಕಥಿತಂ=ಹೇಳಲ್ಪಟ್ಟದೆ. ಅತಃ=ಆದ ಕಾರಣ, ದೋಷಿಣಾ=ದೋಷವುಳ್ಳ ಜೀವನಿಂದ, ಐಕ್ಯಂ=ಐಕ್ಯವು, ಕ್ವ=ಎಲ್ಲಿ? ಅಂದರೆ— 'ಸರ್ವೋಪೇತಾ ಚ ತದ್ದರ್ಶನಾತ್' ಎಂದು ಸರ್ವಶಕ್ತಿಯಿದ್ದ ಪ್ರಯುಕ್ತ ಬ್ರಹ್ಮನಿಗೆ ಅಶೇಷದೋಷರಾಹಿತ್ಯವನ್ನು ಸಮರ್ಥಿಸಿರುವರು. ಜೀವನಿಗೆ ದುಃಖಾದಿ ದೋಷಗಳು ಅನುಭವ ಸಿದ್ಧವಾಗಿವೆ. ವಿರುದ್ಧಧರ್ಮವುಳ್ಳವುಗಳಿಗೂ ಐಕ್ಯವಿರುವುದಾದರೆ ಸ್ತಂಭ-ಕುಂಭಗಳಿಗೂ ಐಕ್ಯವು ಬರಬೇಕಾಗುವುದು. ॥ ೧೩೭ ॥ ೧೩೮ ॥ ೧೩೯ ॥

ಹಾಗಾದರೆ ಶ್ರೀ ಹರಿಯು ಸರ್ವಶಕ್ತಿಯುಳ್ಳವನೂ ಅಶೇಷದೋಷವಿದೂರನೂ ಆಗಲಿ. ಆದಾಗ್ಯೂ ಉಪಾಧಿಯಿಂದ ಭಿನ್ನನಾದ ಶ್ರೀ ಹರಿಯ ಅಂಶನಾದ ಜೀವನು ಉಪಾಧಿನಿಮಿತ್ತಕ ವಾದ ದೋಷವುಳ್ಳವನೂ ಆಗುವನು. ವಿರೋಧವೇನು? ಪ್ರಕಾರಭೇದವು ವಿರೋಧಶಾಂತಿಗೆ ಕಾರಣವಾಗಿದೆ ಎಂದರೆ—

**ಮೂ ॥ ಅಶೇಷಶಕ್ತಿಯುಕ್ತಶ್ಚೇತ್ ಸ್ವಾತಂತ್ರ್ಯಾದ್ದೋಷವಾನ್ ಕಥಂ ।**
**ಅನುಸಂಧಾನರಹಿತಮೈಕ್ಯಂ ಚೇದೇಕತಾ ನ ತತ್ ॥ ೧೪೦ ॥**
**ಚೇತನೈಕ್ಯೇನುಸಂಧಾನಂ ಪ್ರಮಾಣಂ ನೈವ ಚಾಪರಂ ।**
**ಅನುಸಂಧಾನರಹಿತಂ ಸಮುದಾಯೈಕ್ಯಮೇವ ಚೇತ್ ॥**
**ಚೇತನೇಷ್ವಸ್ತು ತನ್ನಾಮ ಮಾತ್ರಮೇವ ಯತಸ್ತತಃ ॥ ೧೪೧ ॥**

ಅ ॥ ಅಶೇಷಶಕ್ತಿಯುಕ್ತಶ್ಚೇತ್=ಶ್ರೀ ಹರಿಯು ಎಲ್ಲಾ ಶಕ್ತಿಗಳಿಂದಲೂ ಕೂಡಿ ದವನು ಎಂದಂಗೀಕರಿಸಲ್ಪಡುವುದಾದರೆ, (ಆಗ ಶ್ರೀ ಹರಿಗೆ ಅಂತಃಕರಣಾದಿ ರೂಪವಾದ ಉಪಾಧಿಯಲ್ಲಿಯೂ ಅವಿದ್ಯಾದಿ ನಿಮಿತ್ತದಲ್ಲಿಯೂ) ಸ್ವಾತಂತ್ರ್ಯಾತ್=ಸರ್ವ ಸ್ವಾತಂತ್ರ್ಯವಿದ್ದ ಪ್ರಯುಕ್ತ, ಕಥಂ=ಹೇಗೆ, ದೋಷವಾನ್=ತನ್ನಿಮಿತ್ತಕ ದೋಷವುಳ್ಳವನು, (ಆಗುವನು.) (ತಥಾಚ ಶ್ರೀಹರಿಗೆ ಯಾವಪ್ರಕಾರದಿಂದಲೂ ದೋಷಸಂಸರ್ಗವು ಕೂಡಲಾರದು. ಆದಕಾರಣ ದೋಷವುಳ್ಳ ಜೀವನಿಂದ ಬ್ರಹ್ಮನಿಗೆ ಐಕ್ಯವು ಕೂಡಲಾರದು.) (ಜೀವಬ್ರಹ್ಮರಿಗೆ ಐಕ್ಯವಿದ್ದರೂ ಬ್ರಹ್ಮನಿಗೆ ಜೀವನಲ್ಲಿರತಕ್ಕ ದುಃಖಾದ್ಯನುಸಂಧಾನವಿಲ್ಲದಿರುವುದರಿಂದ ಜೀವನಂತೆ ದೋಷಿತ್ವಾದಿ ಗಳು ಬರುವುದಿಲ್ಲವೆಂದು ಶಂಕಿಸುತ್ತಾರೆ.) ಅನುಸಂಧಾನರಹಿತಂ ಅನುಸಂಧಾನ = ತನ್ನದು ಎನ್ನುವ ದುಃಖಾದಿಸಾಕ್ಷಾತ್ಕಾರದಿಂದ ರಹಿತವಾದ, ಐಕ್ಯಂ ಚೇತ್ = ಐಕ್ಯವಾದರೆ, ತತ್= ಹಾಗಾದರೆ, ಏಕತಾ=ಐಕ್ಯವು, ನ = ಇಲ್ಲ. (ಅಂದರೆ ಜೀವನಾದರೂ ಬ್ರಹ್ಮಸ್ವರೂಪವಾದ ನಿರ್ದುಃಖತ್ವಾದಿಗಳನ್ನು ಅನುಸಂಧಾನಮಾಡುವುದಿಲ್ಲವೆನ್ನುವಲ್ಲಿ ವಿವಾದವಿಲ್ಲ. ಬ್ರಹ್ಮನೂ ಕೂಡ

ಜೀವನಲ್ಲಿರತಕ್ಕ ದುಃಖಾದಿಗಳನ್ನು ಅನುಸಂಧಾನಮಾಡದೆ ಇದ್ದರೆ ಆಗ ಅವರಿಗೆ ಏಕತ್ವವಿಲ್ಲ ವೆಂದೇ ಹೇಳಿದಂತೆ ಆಯಿತು. ಹೇಗೆಂದರೆ) ಚ = ಯಾವ ಕಾರಣದಿಂದ, ಚೇತನೈಕ್ಯೇ= ಚೇತನಗಳಿಗೆ ಐಕ್ಯವಿಷಯದಲ್ಲಿ, ಅನುಸಂಧಾನಂ=ಅನುಸಂಧಾನವೇ,ಪ್ರಮಾಣಂ=ಪ್ರಮಾಣವೋ, ಅಪರಂ=ಬೇರೆ ಪ್ರಮಾಣವು, ನೈವ ಚ=ಇಲ್ಲವೇ ಇಲ್ಲವೋ, ಯತಃ=ಯಾವಕಾರಣದೆಶೆಯಿಂದ ಅನುಸಂಧಾನರಹಿತಂ=ಅನುಸಂಧಾನವಿಲ್ಲದಿರುವ, ಸಮುದಾಯೈಕ್ಯಮೇವ ಚೇತ್ = ಸಮುದಾ ಯಕ್ಕೆ ಐಕ್ಯವೇ ಆದರೆ, (ಅಂದರೆ ಯಾವ ಕಾರಣದಿಂದ ಸಮುದಾಯಕ್ಕೆ ಐಕ್ಯವೇ ನನ್ನಿಂದ ಹೇಳಲ್ಪಡುತ್ತದೋ, ಅತ್ಯಂತ ಐಕ್ಯವಲ್ಲವೋ, ಆದಕಾರಣ) ಚೇತನೇಷು=ಜೀವರಲ್ಲಿ, ತತ್= ಅನುಸಂಧಾನರಹಿತವಾದ ಸಮುದಾಯೈಕ್ಯವು, ಅಸ್ತು = ಯುಕ್ತವಾಗಲಿ. (ವಿಪ್ರತಿಪನ್ನವಾದ ಅರ್ಥವನ್ನು ಅಂಗೀಕರಿಸಿದರೆ, ಪ್ರತಿಜ್ಞಾಹಾನಿರೂಪವಾದ ನಿಗ್ರಹಸ್ಥಾನವು ಬರಬೇಕಾಗುವುದು ಎಂದರೆ) ಯತಃ=ಯಾವ ಕಾರಣದಿಂದ, ತತ್=ಆ ಸಮುದಾಯೈಕ್ಯವು, ನಾಮಮಾತ್ರಮೇವ= ಕೇವಲ ನಾಮಧೇಯವೇ. (ವಾಸ್ತವವಾದ ಐಕ್ಯವಲ್ಲ) ತತಃ=ಆದಕಾರಣ, (ಅದನ್ನು ಅಂಗೀ ಕರಿಸುವುದು ದೂಷಣವಲ್ಲ.) ॥ ೧೪೦ ॥ ೧೪೧ ॥

ಚೇತನೈಕ್ಯದಲ್ಲಿ ಅನುಸಂಧಾನವಂದೇ ಪ್ರಮಾಣವಾಗಲಿ, ಅನುಸಂಧಾನವು ಕೆಲವುವೇಳೆ ಇರತಕ್ಕದ್ದೂ ಕೂಡ ಐಕ್ಯವನ್ನು ಸಾಧಿಸುತ್ತದೆ. ಮುಕ್ತಿಯಲ್ಲಿ ಅನುಸಂಧಾನವಿದೆ; ಆದುದರಿಂದ ಐಕ್ಯವು ಸಿದ್ಧಿಸುತ್ತದೆ. ಮುಕ್ತರ ಸ್ವರೂಪವು ದುಃಖಾದಿ ದೋಷದಿಂದ ದೂರವಾದಪ್ರಯುಕ್ತ ಹಿಂದೆ ಹೇಳಿದ ದೋಷವೂ ಇಲ್ಲ. ಎಂದರೆ—

**ಮೂ ॥ ಮುಕ್ತೌ ಸ್ಯಾದನುಸಂಧಾನಮಿತ್ಯಪಿ ಸ್ಯಾತ್ಸುದುಷ್ಕರಂ ।**
**ಸರ್ವಜ್ಞ ಏಕತಾಂ ನಾನುಸಂಧತ್ತೇ ನೈವ ಸಾ ಯತಃ ॥ ೧೪೨ ॥**

ಅ ॥ ಮುಕ್ತೌ=ಮುಕ್ತಿಯಲ್ಲಿ, ಅನುಸಂಧಾನಂ=ಅನುಸಂಧಾನವು, ಸ್ಯಾತ್=ಆಗು ವುದು. ಇತ್ಯಪಿ=ಈ ವಚನವೂ ಕೂಡ, ಸುದುಷ್ಕರಂ=(ಪ್ರಮಾಣವಿಲ್ಲದಿರುವುದರಿಂದ ಸಂದಿಗ್ಧ ವಾದಪ್ರಯುಕ್ತ) ಅತ್ಯಂತವಾಗಿ ಮಾಡಲಸಾಧ್ಯವಾದುದು, ಸ್ಯಾತ್=ಆಗುವುದು. (ಮುಕ್ತಿಯಲ್ಲಿ ಅನುಸಂಧಾನವಾಗುವುದು ಎಂದು ಹೇಳುವವನ ಹತ್ತಿರ ಈಗ ಏಕೆಅನುಸಂಧಾನವೇ ಇಲ್ಲ ಎಂದು ಕೇಳಬೇಕು? ಅವಿದ್ಯಾ-ಕಾಮ-ಕರ್ಮ ಮೊದಲಾದ ಪ್ರತಿಬಂಧಕಗಳು ಇದ್ದಪ್ರಯುಕ್ತ ಎಂದು ಹೇಳಿದರೆ ಪ್ರತಿಬಂಧಕಗಳು ಇದ್ದಪ್ರಯುಕ್ತವೇ ಈಗ ಅನುಸಂಧಾನಾಭಾವವು ಐಕ್ಯಾಭಾವ ಪ್ರಯುಕ್ತವಲ್ಲ ಎಂದು ನಿನಗೆ ಯಾವುದರಿಂದ ನಿಶ್ಚಯವು ಆಯಿತು? ನಾವಾದರೂ ಈಗ ಅನು ಸಂಧಾನಾಭಾವವು ಐಕ್ಯಾಭಾವಪ್ರಯುಕ್ತವೇ; ಅಜ್ಞಾನಾದಿನಿಮಿತ್ತಕವಲ್ಲವೆನ್ನುತ್ತೇವೆ. ಈ ನಿಶ್ಚಯವು ನಿಮಗೆ ಯಾವುದರಿಂದ ಎಂದರೆ) ಯತಃ = ಯಾವ ಕಾರಣದಿಂದ, ಸರ್ವಜ್ಞಃ= ಸರ್ವಜ್ಞನು, ಏಕತಾಂ = ಐಕ್ಯವನ್ನು, ನಾನುಸಂಧತೇ = ಅನುಸಂಧಾನಮಾಡುವುದಿಲ್ಲವೋ, (ಆದಕಾರಣ) ಸಾ=ಏಕತ್ವವು, ನೈವ=ಇಲ್ಲವೇ ಇಲ್ಲ.

ತಾ ॥ **ನ್ಯಾಯಸುಧಾ—** ಈ ಅನುಸಂಧಾನಾಭಾವವು ಅಜ್ಞಾನಾದಿ ನಿಮಿತ್ತಕವಾಗು ವುದಾದರೆ ಆಗ ಜೀವರಿಗೇನೇ ಅಜ್ಞಾನಾದಿಸಂಬಂಧಗಳು ಇದ್ದ ಪ್ರಯುಕ್ತ ಅನುಸಂಧಾನಾ ಭಾವವು ಆಗುವುದು. ಶ್ರೀ ಹರಿಯಾದರೂ ಸರ್ವಜ್ಞನಾದ ಪ್ರಯುಕ್ತ ಅನುಸಂಧಾನಮಾಡು ವವನೇ; ಆತನಿಗೆ ಅಜ್ಞಾನಾದಿಗಳು ಇಲ್ಲ. **'ಯಸ್ಮಾತ್ ಕ್ಷರಮತೀತೋಽಹಂ'** ಇದು ಮೊದ ಲಾದ ಶ್ರೀಕೃಷ್ಣನ ವಾಕ್ಯಗಳಿಂದ ಶ್ರೀ ಹರಿಗೆ ಜೀವನಿಂದ ಭೇದಾನುಭವವೇ ತಿಳಿದು ಬರುತ್ತದೆ.

ಆದ ಪ್ರಯುಕ್ತ ಶ್ರೀ ಹರಿಯು ಐಕ್ಯವನ್ನು ಅನುಸಂಧಾನ ಮಾಡುವುದಿಲ್ಲ. ಅದರಿಂದ ಅನುಸಂಧಾನಾಭಾವವು ಅಜ್ಞಾನಾದಿ ಪ್ರತಿಬಂಧಕ ನಿಮಿತ್ತಕವಲ್ಲ. ಐಕ್ಯಾಭಾವಪ್ರಯುಕ್ತವೇ ಎಂದು ನಿಶ್ಚಯಿಸುವೆವು. ॥ ೧೪೨ ॥

ಪರಮಾತ್ಮನಿಗೆ ಐಕ್ಯಾನುಸಂಧಾನವಿಲ್ಲವೆನ್ನುವುದು ಸಿದ್ಧವಲ್ಲ. ಏಕೆಂದರೆ—ಈಗ ಅನುಸಂಧಾನ ಮಾಡದೆ ಇದ್ದರೂ ಮುಂದಕ್ಕೆ ಅನುಸಂಧಾನಮಾಡಿಕೊಳ್ಳುವನು. ಸಾರ್ವಕಾಲಿಕಾನುಸಂಧಾನವು ಐಕ್ಯ ವ್ಯಾಪಕವಲ್ಲವೆಂದು ಶಂಕಿಸುತ್ತಾರೆ—

**ಮೂ ॥ ಪಶ್ಚಾತ್ಸ್ಯಾದನುಸಂಧಾನಂ ಚೇನ್ಮಿಥ್ಯಾ ಜ್ಞಾನಿತಾ ಭವೇತ್ ।**
**ವಿದ್ಯಮಾನಾನುಸಂಧಾನಂ ನ ಚೇದಜ್ಞತ್ವಮಾಪತೇತ್ ॥ ೧೪೩ ॥**

ಅ ॥ (ಪರಮಾತ್ಮನಿಗೆ ಜೀವೈಕ್ಯದ) ಅನುಸಂಧಾನಂ=ಅನುಸಂಧಾನವು, ಪಶ್ಚಾತ್ಸ್ಯಾಚ್ಚೇತ್=ಮುಂದಕ್ಕೆ ಆಗುವುದಾದರೆ, (ಪರಮಾತ್ಮನಿಗೆ) ಮಿಥ್ಯಾಜ್ಞಾನಿತಾ=ಮಿಥ್ಯಾಜ್ಞಾನವುಳ್ಳತನವು, ಭವೇತ್=ಆಗುವುದು. (ಅಂದರೆ ಸರ್ವಜ್ಞನು ಈಗ ಜೀವೈಕ್ಯವನ್ನು ಅನುಸಂಧಾನ ಮಾಡಿಕೊಳ್ಳದಿದ್ದರೆ ಆಗ ಆ ಜೀವೈಕ್ಯವು ಏಳನೇ ರಸಾದಿಗಳಂತೆಯೇ ಅಸತ್ತೇ ಆಗುವುದು. ಅಂತಹ ಸುಳ್ಳಾದ ಐಕ್ಯವನ್ನು ಮುಂದಕ್ಕೆ ಅನುಸಂಧಾನಮಾಡಿಕೊಳ್ಳುವುದಾದರೆ ಶ್ರೀ ಹರಿಯು ಮಿಥ್ಯಾಜ್ಞಾನಿಯು ಆಗಬೇಕಾಗುವನು.) (ಹಾಗಾದರೆ ಇಲ್ಲದಿರುವುದನ್ನು ಉಂಟೆಂದು ಅನುಸಂಧಾನ ಮಾಡಿಕೊಳ್ಳುವವನು ಮಿಥ್ಯಾಜ್ಞಾನಿಯಾಗುತ್ತಾನೆ. ಐಕ್ಯವು ಇರತಕ್ಕದ್ದಲ್ಲ. ಆದ ಕಾರಣ ಪರಮಾತ್ಮನಿಗೆ ಮಿಥ್ಯಾಜ್ಞಾನಿತ್ವವು ಹೇಗೆಬರುವುದು ಎನ್ನುವ ಆಶಂಕೆಯನ್ನು ಪರಿಹರಿಸುತ್ತಾರೆ.) ವಿದ್ಯಮಾನಾನುಸಂಧಾನಂ=ಇರತಕ್ಕ ವಸ್ತುವಿನ ಅನುಸಂಧಾನವು, ನ ಚೇತ್=ಇಲ್ಲದೆ ಹೋದರೆ, ಅಜ್ಞತ್ವಂ=ಅಜ್ಞಾನಿತ್ವವು, ಆಪತೇತ್=ಪ್ರಾಪ್ತವಾಗುವುದು.

ತಾ ॥ ಐಕ್ಯವು ಇದ್ದು ಈಗ ಅದರ ಅನುಸಂಧಾನ ಮಾಡಿಕೊಳ್ಳದಿದ್ದರೆ ಅಸರ್ವಜ್ಞನಾಗಬೇಕಾಗುವನು. ಅದು ಯುಕ್ತವಲ್ಲ. ಆದ ಪ್ರಯುಕ್ತ ಐಕ್ಯವು ಇಲ್ಲವೆನ್ನಬೇಕು. ಅಂತೂ ಅದನ್ನು ಅನುಸಂಧಾನಮಾಡತಕ್ಕವನು ಮಿಥ್ಯಾಜ್ಞಾನಿಯು ಹೇಗೆ ಆಗಲಾರನು? ॥ ೧೪೩ ॥

ಐಕ್ಯವು ಇಲ್ಲದಿರುವುದೇ ಆದರೆ ಆಗ ಹಿಂದೆ ಹೇಳಿದ ಎರಡು ದೋಷಗಳೂ ಬರಬೇಕಾಗುವುವು. ಹೀಗೆ ಅಲ್ಲ. ಮತ್ತೆ ಈಗ ಅಸತ್ತೇ ಆದ ಐಕ್ಯವು ಮೇಲೆ ಜ್ಞಾನೋತ್ತರಕಾಲದಲ್ಲಿ ಬರುವುದು. ಈಗ ಐಕ್ಯವು ಇಲ್ಲದಿರುವುದರಿಂದ ಪರಮಾತ್ಮನಿಗೆ ಆ ಐಕ್ಯವನ್ನು ಅನುಸಂಧಾನ ಮಾಡಿಕೊಳ್ಳದಿದ್ದರೂ ಆತನಿಗೆ ಸರ್ವಜ್ಞತ್ವಕ್ಕೆ ಹಾನಿಯು ಬರುವುದಿಲ್ಲ. ಐಕ್ಯವು ಮೇಲೆ ಉಂಟಾಗುವ ಪ್ರಯುಕ್ತ ಅಂತಹ ಮೇಲೆ ಬರತಕ್ಕ ಐಕ್ಯವನ್ನು ಅನುಸಂಧಾನ ಮಾಡಿದರೆ ಮಿಥ್ಯಾಜ್ಞಾನಿತ್ವವು ಬರುವುದಿಲ್ಲ, ಎನ್ನುವ ಕೆಲವರ ಮತವನ್ನು ಶಂಕಿಸುತ್ತಾರೆ—

**ಮೂ ॥ ಅಸದೈಕ್ಯಂ ಭವೇತ್ಪಶ್ಚಾದ್ಯದಿ ಸ್ಯಾತ್ಸಪ್ತಮೋ ರಸಃ ।**
**ಸಮುದಾಯ್ಯೈಕ್ಯಮೇತಸ್ಮಾದ್ದೂರತೋಽಪಾಕೃತಂ ಸದಾ ॥ ೧೪೪ ॥**

ಅ ॥ ಅಸತ್=ಅವಿದ್ಯಮಾನವಾದ, ಐಕ್ಯಂ=ಐಕ್ಯವು, ಪಶ್ಚಾತ್=ಮೇಲೆ, ಯದಿ=ಯಾವ ಪಕ್ಷದಲ್ಲಿ, ಭವೇತ್=ಆಗುವುದೋ, (ತರ್ಹಿ=ಹಾಗಾದರೆ) ಸಪ್ತಮಃ=ಏಳನೇದ್ದಾದ,

ರಸಃ=ರಸವು, ಸ್ಯಾತ್=ಮುಂದೆ ಆಗಬೇಕಾಗುವುದು. ಜೀವಬ್ರಹ್ಮರಿಗೆ ಸಂಸಾರದಲ್ಲಿ ಭೇದಾಭೇದಗಳು, ಮೋಕ್ಷದಲ್ಲಿ ಆದರೂ ಅಭೇದವೇ, (ಸಂಸಾರದಲ್ಲಿ ಕೇವಲ ಭೇದವು, ಮುಕ್ತಿಯಲ್ಲಿ ಅತ್ಯಂತಾಭೇದವು ಹೀಗೆ ಎರಡು ಭೇದಾಭೇದ ಮತಗಳ ದೋಷವನ್ನು ಅತಿದೇಶ ಮಾಡಿ ಎರಡು ಅವಸ್ಥೆಗಳಲ್ಲಿಯೂ ಭೇದಾಭೇದಗಳು ಎನ್ನುವ ಮೂರನೇ ಮತವನ್ನು ತಿರಸ್ಕರಿಸುತ್ತಾರೆ.) ಸದಾ=ಯಾವಾಗಲೂ, ಸಮುದಾಯೈಕ್ಯಂ=ಸಮುದಾಯಕ್ಕೆ ಏಕತ್ವವು, ಏಕಸ್ಮಾತ್=ಪ್ರಮಾಣವಿಲ್ಲದಿರುವುದರಿಂದಲೂ, ಆಭಾಸತ್ವ ಮೊದಲಾದ ಪ್ರಮಾಣ ವಿರೋಧವಿದ್ದ ಪ್ರಯುಕ್ತವೂ, ದೂರತಃ=ದೂರದಿಂದಲೇ, ಅಪಾಕೃತಂ=ತಿರಸ್ಕರಿಸಲ್ಪಟ್ಟದೆ.

**ತಾ ||** (1) ಅನಾದಿಯಾದ ಸಂಸಾರದಲ್ಲಿ ಯಾರಿಗೆ ಯಾರಿಂದ ಐಕ್ಯವಿಲ್ಲವೋ ಅದು ಅದರಿಂದ ಐಕ್ಯವನ್ನು ಹೊಂದಿದೆ ಎಂದು ಉಪಲಬ್ಧವಾಗಲಿಲ್ಲ, ಐಕ್ಯವಾಗುವುದು ಎನ್ನುವಲ್ಲಿ ಪ್ರಮಾಣವೂ ಇಲ್ಲ. **'ಪರೇವ್ಯಯೇ ಸರ್ವ ಏಕೀ ಭವಂತಿ' 'ಯಾವನ್ಮೋಕ್ಷಂ ತು ಭೇದಃಸ್ಯಾಜ್ಜೀವಸ್ಯ ಪರಮಸ್ಯ ಚ । ತತಃ ಪರಂ ನ ಭೇದೋಽಸ್ತಿ ಭೇದಹೇತೋರಭಾವತಃ' ।** ಇದು ಮೊದಲಾದ ಶ್ರುತಿ ಸ್ಮೃತಿಗಳು ಸ್ಥಾನೈಕ್ಯಾದಿ ವಿಷಯಕಗಳು. ಆದ ಕಾರಣ ಏಳನೇ ರಸದಂತೆಯೇ ಈ ಐಕ್ಯಾಶೆಯೂ ಅತ್ಯಂತವಾಗಿ ಅಸಂಭಾವಿತವಾಗಿದೆ. ॥ ೧೪೪ ॥

ಹೀಗೆ ಸಕಲಚೇತನರ ಸಮುದಾಯರೂಪನು ಪರಮಾತ್ಮನು ಆಗದಿದ್ದರೆ ಪರಮಾತ್ಮತ್ವಕ್ಕೆ ಅವಧಿ ಯಾವುದು ಎಂದರೆ—

**ಮೂ ॥ ಅತೋಽಶೇಷಗುಣೋನ್ನದ್ಧಂ (ದ್ಧ) ನಿರ್ದೋಷಂ ಯಾವದೇವ ಹಿ ।**
**ತಾವದೇವೇಶ್ವರೋ ನಾಮ ತತ್ರ ಭೇದೋಽಪಿ ನ ಕ್ವಚಿತ್ ॥ ೧೪೫ ॥**
**ನೇಹನಾನಾಸ್ತಿ ಕಿಮಪಿ ಹರಯೋಽಯಮಯಂ ಹಿ ಸಃ ।**
**ಇತ್ಯಾದಿ ಶ್ರುತಿಮಾನೇನ ಜೀವಾಂಶಾಃ ಸರ್ವ ಏವ ಚ ॥**
**ನಿಯಮೇನಾನುಸಂಧಾನವಂತೋ ಯದ್ಯೇಕತಾ ಸ್ವತಃ ॥ ೧೪೬ ॥**

**ಅ ||** ಅತಃ=ಜೀವಬ್ರಹ್ಮರ ವಿಷಯದಲ್ಲಿ ಐಕ್ಯಸಾಧಕವಾದ ಏಕತ್ವಾನುಸಂಧಾನವು ಎಲ್ಲಾ ಕಡೆಯಲ್ಲಿಲ್ಲದಿರುವುದರಿಂದಲೂ, ಐಕ್ಯಬಾಧಕವಾದ ಆಭಾಸತ್ವಾದಿಗಳು ಇದ್ದಪ್ರಯುಕ್ತವೂ, ಭಗವದ್ರೂಪಗಳಲ್ಲಿ ಆದರೂ ಐಕ್ಯಸಾಧಕವಿದ್ದುದರಿಂದಲೂ, ಐಕ್ಯಬಾಧಕವಿಲ್ಲದಿರುವುದರಿಂದಲೂ, ಅಶೇಷಗುಣೋನ್ನದ್ಧಂ=ಎಲ್ಲಾ ಗುಣಗಳಿಂದ ಪರಿಪೂರ್ಣವಾದುದು, ನಿರ್ದೋಷಂ=ದೋಷಲೇಶರಹಿತವಾದುದು, ಯಾವದೇವ=ಎಷ್ಟು ರೂಪ ಸಮುದಾಯವಿದೆಯೋ, ತಾವದೇವ=ಅಷ್ಟು ರೂಪ ಸಮುದಾಯವು, ಈಶ್ವರೋ ನಾಮ = ಈಶ್ವರನೆನ್ನಿಸುತ್ತದೆ. ಕಿಮಪಿ=ಯಾವುದೊಂದೂ, ಇಹ=ಇಲ್ಲಿ, ನಾನಾ=ಭಿನ್ನವಾದುದು, ನಾಸ್ತಿ=ಇಲ್ಲ. ಅಯಂ=ಈ ರೂಪಸಮುದಾಯವು, ಹರಯಃ=ಹರಿನಾಮಕವಾದುದು, ಅಯಂ ಹಿ=ಇವನೇ, ಸಃ=ಆ ಹರಿಯು, ಇತ್ಯಾದಿ ಶ್ರುತಿಮಾನೇನ=ಇದುಮೊದಲಾದ ಶ್ರುತಿರೂಪಪ್ರಮಾಣದಿಂದ, ತತ್ರ=ಆ ರೂಪಸಮುದಾಯದಲ್ಲಿ, ಕ್ವಚಿತ್ = ಎಲ್ಲಿಯೂ, ಪರಸ್ಪರವಾಗಿಯೂ, ಪರಮಾತ್ಮನಿಂದಲೂ, ಭೇದೋಽಪಿ= ಭೇದವೂ ಕೂಡ, ನ=ಇಲ್ಲ. ಸರ್ವ ಏವ=ಎಲ್ಲಾ, ಜೀವಾಂಶಾಃ ಜೀವ=ಇಂದ್ರಾದಿಗಳ, ಅಂಶಾಃ=ಅಂಶಭೂತರಾದ ಅರ್ಜುನಾದಿಗಳು, ನಿಯಮದಿಂದ ಪರಸ್ಪರ ಸುಖದುಃಖಾದ್ಯನುಸಂಧಾನವುಳ್ಳವರು. (ಆದುದರಿಂದ ಅನುಸಂಧಾನವು ಐಕ್ಯಕ್ಕೆ ವ್ಯಾಪಕವಾದುದು) (ಹಾಗಾದರೆ

**'ಆತ್ಮಾವೈ ಪುತ್ರನಾಮಾಸೀತ್'** ಇದು ಮೊದಲಾದ ವಚನದ್ದೆಶೆಯಿಂದ ತಂದೆಗೂ ಮಗನಿಗೂ ಐಕ್ಯವಿದ್ದರೂ ಅನುಸಂಧಾನವಿಲ್ಲದೆ ಇರುವುದರಿಂದ ಅದು ವ್ಯಾಪಕವು ಹೇಗೆ ಆಗುವುದು ಎಂದರೆ) ಯದಿ=ಯಾವ ಪಕ್ಷದಲ್ಲಿ, ಸ್ವತಃ=ಸ್ವಾಭಾವಿಕವಾಗಿ, ಏಕತಾ=ಐಕ್ಯವ್ರೋ, ತರ್ಹಿ= ಹಾಗಾದರೆ, ನಿಯಮೇನ=ನಿಯಮದಿಂದ, ಅನುಸಂಧಾನವಂತಃ=ಅನುಸಂಧಾನವುಳ್ಳವರು.

**ತಾ ||** (1) (೧) **'ನೇಹ ನಾನಾಸ್ತಿ ಕಿಂಚನ'** (೨) **'ಅಯಂ ವೈ ಹರಯಃ'** (೩) **'ಅಯಮೇವ ಸ ಯೋಽಯಮಾತ್ಮಾ'** ಇತ್ಯಾದಿ ಶ್ರುತಿಗಳು ಅಭೇದಪರಗಳಾಗಿ ಇರುವುದರಿಂದ ವಿವಕ್ಷಿತವಾದ ಅರ್ಥದಲ್ಲಿ ಪ್ರಮಾಣವಲ್ಲ ಎನ್ನುವ ಆಶಂಕೆಯನ್ನು ನಿರಾಕರಣೆಮಾಡುವುದ ಕ್ಕೋಸ್ಕರ ಮಾನೇನ ಎಂದು ಹೇಳಿದ್ದು. ಅಂದರೆ, ಒಂದನೇ ಶ್ರುತಿಯಲ್ಲಿ ಈಶ್ವರ ರೂಪಗಳಲ್ಲಿ ಭೇದ ವನ್ನು ನಿರಾಕರಣೆ ಮಾಡಿದೆ. ಮೂರನೇ ಶ್ರುತಿಯಲ್ಲಿ ಏವ ಶಬ್ದವಿದ್ದ ಪ್ರಯುಕ್ತ ಅದನ್ನು ಅನುಸರಿಸಿ ಎರಡನೇ ಶ್ರುತಿಯಲ್ಲಿಯೂ ವೈ ಎನ್ನುವ ಶಬ್ದಕ್ಕೆ ಏವ ಎನ್ನುವ ಅರ್ಥವು ಕೂಡುವ ಪ್ರಯುಕ್ತ ಈ ಶ್ರುತಿಗಳು ವಿವಕ್ಷಿತವಾದ ಅರ್ಥದಲ್ಲಿ ಪ್ರಮಾಣಗಳಾಗುತ್ತವೆ. (2) ವಾಸ್ತವ ವಾದ ಐಕ್ಯಕ್ಕೆ ಅನುಸಂಧಾನವು ವ್ಯಾಪಕವೆಂದು ಇಷ್ಟವಾಗಿದೆ; ಉಪಚರಿತಕ್ಕೆ ಅಲ್ಲ. ಆದುದ ರಿಂದ ತಂದೆಗೂ ಮಗನಿಗೂ ಐಕ್ಯವು ಗೌಣವೇ; ವಾಸ್ತವವಾದುದು ಅಲ್ಲ. ಆದುದರಿಂದ ಅಲ್ಲಿ ಅನುಸಂಧಾನವಿಲ್ಲದಿದ್ದರೂ ವಾಸ್ತವ ಐಕ್ಯಕ್ಕೆ ಅನುಸಂಧಾನವು ವ್ಯಾಪಕವು ಎಂದು ಹೇಳಿದ ವ್ಯಾಪ್ತಿಗೆ ವ್ಯಭಿಚಾರವಿರುವುದಿಲ್ಲ. (3) ಹಾಗಾದರೆ ತಂದೆಗೂ ಮಗನಿಗೂ ಅಂಶಾಂಶಿಭಾವ ಇದ್ದರೂ, ಅನುಸಂಧಾನ ಇಲ್ಲದೆ ಇರುವುದರಿಂದ ಅದಕ್ಕೆ ವ್ಯಾಪಕವಾಗುವುದು ಹೇಗೆಂದರೆ— ಏಕ ದೇಶತ್ವರೂಪವಾದ ಅಂಶತ್ವವಾಗಿದ್ದರೆ ಆಗುತ್ತಿತ್ತು. ತಂದೆಗೂ ಮಗನಿಗೂ ಅಂಶಾಂಶಿಭಾವವು ಏಕತ್ವಾದಿ ರೂಪವಲ್ಲ || ೧೪೫ || ೧೪೬ ||

ಹಾಗಾದರೆ ಇಂದ್ರ ಅರ್ಜುನಾದಿಗಳಿಗೆ ಅನುಸಂಧಾನವಿದ್ದರೆ ಅರ್ಜುನನು ಇಂದ್ರನಿಗೆ ಅಭಿಮತವಾಗದಿರುವ ಖಾಂಡವ ವನ ದಾಹಾದಿಗಳನ್ನು ಹೇಗೆ ಮಾಡಿದನು? ಇಂದ್ರನು ಅರ್ಜುನ ನಿಗೆ ಅಭಿಮತವಾಗದಿರುವ ದಹನಶಮನಾದಿಗಳನ್ನೂ ಹೇಗೆ ಮಾಡಿದನು? —

**ಮೂ ||** **ಅಂಶಿನೋಽಶೇಷಸಂಧಾನಮತ್ಯಲ್ಪಸ್ಯಾಪಿ ವಿದ್ಯತೇ || ೧೪೭ ||**
**ಭುವಿ ಜಾತೇನ ಚಾಂಶೇನ ಸುಖದುಃಖಾದಿತದ್ಗತಂ |**
**ಅನುಭೂಯತೇ ವಿಶೇಷಸ್ತು ಕಶ್ಚಿದೀಶಕೃತೋ ಭವೇತ್ || ೧೪೮ ||**

**ಅ ||** ಅತ್ಯಲ್ಪಸ್ಯಾಪಿ=ಅತ್ಯಂತ ಅಲ್ಪನಾದ, ಅಂಶಿನಃ=ಅಂಶಿಗೆ, ಅಶೇಷಸಂಧಾನಂ= ಅಂಶಗತವಾದ ಅಶೇಷಾನುಸಂಧಾನವು, ವಿದ್ಯತೇ=ಉಂಟೇ ಉಂಟು. (ಆದಾಗ್ಯೂ) ಕಶ್ಚಿತ್ ವಿಶೇಷಃ=ಅಂಶಕ್ಕೆ ಅಭಿಮತವಾಗದಿರುವ ಕಾರ್ಯ-ಕರಣಾದಿರೂಪವಾದುದು, ಈಶಕೃತಃ= ಈಶ್ವರನಿಂದ ಮಾಡಲ್ಪಟ್ಟದ್ದು, ಭವೇತ್=ಆಗುವುದು. (ಅಂಶಕ್ಕೆ ಕೀರ್ತ್ಯಾದಿಗಳು ಬರುವುದ ಕ್ಕಾಗಿ ಈಶ್ವರನಿಂದ ಪ್ರೇರಿತನಾದ ಅಂಶಿಯಿಂದ ಮಾಡಲ್ಪಡುತ್ತದೆ.) ಭುವಿ = ಭೂಲೋಕದಲ್ಲಿ, ಜಾತೇನ=ಹುಟ್ಟಿದ, ಅಂಶೇನ ಚ=ಅಂಶದಿಂದ, ತದ್ಗತಂ ಅಂಶಿಯಲ್ಲಿರತಕ್ಕ, ಸುಖದುಃಖಾದಿ= ಸುಖ-ದುಃಖಮೊದಲಾದುದೇ, ಅನುಭೂಯತೇ = ಅನುಭವಿಸಲ್ಪಡುತ್ತದೆ. (ಸರ್ವವೂ ಅನು ಭವಿಸಲ್ಪಡುವುದಿಲ್ಲ.) (ಐಕ್ಯವಿದ್ದರೂ) ಕಶ್ಚಿತ್ ವಿಶೇಷಃ = ಸರ್ವಾನನುಸಂಧಾನರೂಪವಿಶೇಷ ವಾದರೂ, ಈಶಕೃತಃ=ಈಶ್ವರನಿಂದ ಮಾಡಲ್ಪಟ್ಟದ್ದು, ಭವೇತ್=ಆಗುವುದು.

ತಾ || ಭೂಮಿ ಮೊದಲಾದ ಅಪಕೃಷ್ಟ ದೇಶವನ್ನೂ, ಗರ್ಭವಾಸಾದ್ಯವಸ್ಥೆಯನ್ನೂ, ಮಾನುಷಾನ್ನೋಪಭೋಗಾದಿಗಳನ್ನೂ ನಿಮಿತ್ತೀಕರಿಸಿಕೊಂಡು ಈಶ್ವರನು ಈ ವಿಶೇಷವನ್ನು ಅಂಶಕ್ಕೆ ಕೊಡುತ್ತಾನೆ. ಆದಪ್ರಯುಕ್ತ ಅಂಶವು ಅಂಶಿಗೆ ಅಭಿಮತವಾಗದಿರುವ ಕಾರ್ಯವನ್ನು ಮಾಡುತ್ತದೆ. ಇತ್ಯಾದಿಗಳು ಉಪಪನ್ನಗಳಾಗುತ್ತವೆ. ನಾವು ಅಶೇಷಾನುಸಂಧಾನವನ್ನು ಚೇತನೈಕ್ಯಾದಿಗಳಿಗೆ ವ್ಯಾಪಕವನ್ನಾಗಿ ಹೇಳಲಿಲ್ಲ. ಮತ್ತೆ ಅನುಸಂಧಾನ ಮಾತ್ರವೇ ವ್ಯಾಪಕ ವೆಂದು ಹೇಳಿರುವೆವು. ಅದು ಇಂದ್ರಾರ್ಜುನಾದಿಗಳಲ್ಲಿ ಉಂಟೇ ಉಂಟು. || ೧೪೭ ||

ಹಾಗಾದರೆ ಈಶ್ವರನೂ ಕೂಡ ಅಂಶಾಂಶಿಗಳಿಗೆ ಅಭಿಮತವಾಗದಿರುವುದನ್ನು ಹೇಗೆ ಮಾಡಿಸುತ್ತಾನೆ? ಮತ್ತು ಅಭಿನ್ನಗಳಾದ ಅಂಶಾಂಶಿಗಳಲ್ಲಿ ಕೆಲವು ಅನುಸಂಧಾನವನ್ನು ಹೇಗೆ ಪ್ರತಿಬಂಧಿಸುತ್ತಾನೆ ಎಂದರೆ—)

**ಮೂ || ಈಶಸ್ಯಾಚಿಂತ್ಯಶಕ್ತಿತ್ವಾನ್ನಾಶಕ್ಯಂ ಕ್ವಾಪಿ ವಿದ್ಯತೇ |**
**ನೇಶತಾನುಪಪನ್ನೈವ ಯದಿ ಜೀವೈಕತಾಸ್ಯ ಹಿ || ೧೪೮ ||**

ಅ || ಈಶಸ್ಯ=ಶ್ರೀ ಹರಿಗೆ, ಅಚಿಂತ್ಯಶಕ್ತಿತ್ವಾತ್=ಅಪರಿಮಿತ ಶಕ್ತಿಯಿದ್ದ ಪ್ರಯುಕ್ತ, ಅಶಕ್ಯಂ=ಶಕ್ಯವಾಗದಿರುವುದು, ಕ್ವಾಪಿ=ಎಲ್ಲೆಲ್ಲಿಯೂ, ನ ವಿದ್ಯತೇ=ಇರುವುದಿಲ್ಲ. (ಆದುದ ರಿಂದ ಈಶ್ವರನು ಇಂತಹ ಅಘಟಿತ ಕಾರ್ಯವನ್ನು ಮಾಡಿಸುತ್ತಾನೆ. ಲೋಕದಲ್ಲಿ ಅಘಟಿತ ವಾದುದನ್ನು ಕೂಡಿಸತಕ್ಕ ಈಶ್ವರ ಶಕ್ತಿಯಿಂದ ಪ್ರೇರಿಸಿಕೊಳ್ಳಲ್ಪಟ್ಟ ಕಾಮ-ಕ್ರೋಧಾದಿಗಳ ಅಧೀನರಾದ ಜನರು ಐಹಿಕ ಆಮುಷ್ಮಿಕ ದುಃಖಕ್ಕೆ ಕಾರಣವಾದ ತನ್ನ ಶಿರಃಛೇದಾದಿ ಪಾತಕ ಗಳನ್ನೂ ಕೂಡ ಮಾಡತಕ್ಕವರು ಕಾಣಲ್ಪಡುತ್ತಾರಷ್ಟೆ.) (ಹಾಗಾದರೆ ನನಗೂ ಹೇಳಲಿಕ್ಕೆ ಶಕ್ಯವಾಗುತ್ತದೆ. ಹೇಗೆ ಅರ್ಜುನನಿಗೆ ಐಕ್ಯವಿದ್ದರೂ ಇಂದ್ರನಲ್ಲಿರತಕ್ಕ ಅಶೇಷಾನುಸಂಧಾನವು ಅಚಿಂತ್ಯವಾದ ಈಶ್ವರಶಕ್ತಿಯಿಂದಲೇ ಪ್ರತಿಬದ್ಧವಾಗಿಯದೋ, ಹಾಗೆಯೇ ಜೀವ ಪರಮಾತ್ಮ ರಿಗೆ ಅಭೇದವಿದ್ದರೂ ಈಶ್ವರನ ಶಕ್ತಿಯಿಂದ ಅನುಸಂಧಾನವು ಪ್ರತಿಬದ್ಧವಾಗುತ್ತದೆ. ತಥಾ ಚ ಅನುಸಂಧಾನವಿಲ್ಲದಿರುವುದರಿಂದ ಐಕ್ಯವಿಲ್ಲವೆನ್ನುವುದು ಅಯುಕ್ತವು. ಅನುಸಂಧಾನವು ಐಕ್ಯ ವ್ಯಾಪಕವೂ ಎನ್ನುವುದೂ ಕೂಡ ಪ್ರತಿಬಂಧಕವಿಲ್ಲದಿದ್ದರೇನೇ, ಎಂದೂ ಕಲ್ಪಿಸುತ್ತೇವೆ ಎಂದರೆ— ಅಸ್ಯ=ಈ ಪರಮಾತ್ಮನಿಗೆ, ಯದಿ=ಯಾವ ಪಕ್ಷದಲ್ಲಿ, ಜೀವೈಕತಾ=ಜೀವೈಕ್ಯವೋ (ಹಾಗಾದರೆ) ಸಾ = ಅಘಟಿತಘಟನಾರೂಪವಾದ, ಈಶತಾ=ಈಶ್ವರತ್ವವು, ಅನುಪಪನ್ನೈವ = ಉಪಪನ್ನವೇ ಆಗುವುದಿಲ್ಲ.

ತಾ || (1) ನಿಮ್ಮ ಮತದಲ್ಲಿ ಪರಬ್ರಹ್ಮನಿಗೆ ಅಚಿಂತ್ಯಶಕ್ತಿಮತ್ವರೂಪವಾದ ಈಶ್ವರತ್ವವು ಕೂಡಿದ್ದರೆ ಇದಾಗುತ್ತಿತ್ತು. ಜೀವನಿಂದ ಅಭಿನ್ನನಾದವನಿಗೆ ಈಶ್ವರತ್ವವೇ ಅಯುಕ್ತವು. ಆದುದರಿಂದ ಅಚಿಂತ್ಯಶಕ್ತಿಯೇ ಪ್ರತಿಬಂಧಕವೆಂದು ಹೇಳಿದ್ದು ಕೂಡುವುದಿಲ್ಲ. (2) 'ಯೋ ಜೀವೇನಾಭಿನ್ನಃ ನಾಸೌ ಅಚಿಂತ್ಯಶಕ್ತಿರೂಪೇಶತೋಪೇತಃ ಯಥಾ ದೇವದತ್ತಃ ' ಯಾರು ಜೀವ ನಿಂದ ಅಭಿನ್ನನೋ ಇವನು ಅಚಿಂತ್ಯಶಕ್ತಿರೂಪವಾದ ಈಶ್ವರತ್ವದಿಂದ ಯುಕ್ತನಲ್ಲ. ದೇವದತ್ತ ನಂತೆ ಎನ್ನುವ ವ್ಯಾಪ್ತಿಯನ್ನು ಹಿ ಶಬ್ದದಿಂದ ಸೂಚಿಸಿದರು. || ೧೪೮ ||

ಜೀವನಿಂದ ಪರಮಾತ್ಮನು ಐಕ್ಯವನ್ನು ಹೊಂದಿದವನಾದಾಗ್ಯೂ ಈಶತ್ವದಿಂದ ಯುಕ್ತ ನಾಗಲಿ, ವಿಪಕ್ಷೇ ಬಾಧಕವೇನು? ಎಂದರೆ—

ಮೂ ॥ ಅನೀಶಸ್ಯೇಶತೇತ್ಯೇವ ವಿರುದ್ಧಂ ಸರ್ವಮಾನತಃ ।
ಈಶತ್ವೇನೈವ ವಿಜ್ಞಾತಮನೀಶತ್ವೇನ ಚೇಚ್ಛ್ರುತಿಃ ॥ ೧೫೦ ॥
ಅನೀಶತ್ವೇನ ವಿಜ್ಞಾತಮೀಶತ್ವೇನಾಥ ವಾದಿಶೇತ್ ।
ಉಪಜೀವ್ಯವಿರೋಧೇನ ನೈವ ಮಾನತ್ವಮೇಷ್ಯತಿ ॥ ೧೫೧ ॥

ಅ ॥ ಅನೀಶಸ್ಯ=ಈಶ್ವರನಲ್ಲದೆ ಇದ್ದ ಜೀವನಿಗೆ, ಈಶತೇತ್ಯೇವ=ಈಶತ್ವವಿದೆ ಎನ್ನುವುದೇ, ಸರ್ವಮಾನತಃ=ಎಲ್ಲಾ ಪ್ರಮಾಣಗಳಿಂದ, ವಿರುದ್ಧಂ=ವಿರುದ್ಧವಾಗಿದೆ, (ಶ್ರುತಿಗಳಿಗೆ ಐಕ್ಯಪರತ್ವವಿಲ್ಲವೆನ್ನುತ್ತಾರೆ.) ಶ್ರುತಿಃ=ಕೆಲವು ಶ್ರುತಿಯು, (ಪ್ರಮಾಣಾಂತರದಿಂದ) ಈಶತ್ವೇನೈವ=ಈಶ್ವರತ್ವದಿಂದಲೇ, ವಿಜ್ಞಾತಂ = ತಿಳಿಯಲ್ಪಟ್ಟ ಪರಮಾತ್ಮನನ್ನುದ್ದೇಶಿಸಿ, ಅನೀಶತ್ವೇನ=ಪ್ರಮಿತವಾದ ಈಶ್ವರತ್ವಾಭಾವರೂಪವಾದ ಜೀವಭಾವದಿಂದ, ಆದಿಶೇತ್ ಚೇತ್=ಉಪದೇಶಿಸುವುದಾದರೂ, ಶ್ರುತಿಃ=ಕೆಲವು ಶ್ರುತಿಯು, ಅನೀಶತ್ವೇನ=ಈಶ್ವರತ್ವಾಭಾವದಿಂದ, ವಿಜ್ಞಾತಂ=ಪ್ರಮಿತನಾದ ಜೀವನನ್ನುದ್ದೇಶಿಸಿ, ಈಶತ್ವೇನ=ಪ್ರಮಿತವಾದ ಈಶಭಾವರೂಪವಾದ ಪರಮಾತ್ಮತ್ವದಿಂದ, ಆದಿಶೇತ್=ಉಪದೇಶಿಸುವುದಾದರೂ, ಅಥವಾ=ಅಲ್ಲವಾದರೆ, ಕೆಲವು ಶ್ರುತಿಯು, ಜೀವೇಶರಿಬ್ಬರೂ ಹಾಗೆಯೇ ಪ್ರಮಿತರಾಗಿರುತ್ತಾರೆಂದು ಅವರನ್ನುದ್ದೇಶಿಸಿ, ಆದಿಶೇಚ್ಚೇತ್=ಉಪದೇಶಿಸುವುದಾದರೂ, (ತರ್ಹಿ=ಹಾಗಾದರೆ) ಸರ್ವಥಾಽಪಿ ಉಪಜೀವ್ಯವಿರೋಧೇನ=ಉಪಜೀವ್ಯಪ್ರಮಾಣವಿರೋಧವಿದ್ದುದರಿಂದ, ಮಾನತ್ವಂ = ಪ್ರಾಮಾಣ್ಯವನ್ನು, ನೈವ ಏಷ್ಯತಿ=ಹೊಂದುವುದೇ ಇಲ್ಲ.

ಟಾ ॥ (1) ಜೀವನಾದರೂ ಅನೀಶನೆನ್ನುವುದು ಅನುಭವಸಿದ್ಧವು. ಈಶ್ವರನಿಗೆ ಆ ಜೀವನ ಅಭೇದವಿದ್ದರೆ ಪರಮಾತ್ಮನೂ ಅನೀಶನೆಂದು ಹೇಳಿದಂತೆ ಆಯಿತು. ತಥಾ ಚ ಅನೀಶನಿಗೆ ಈಶತ್ವವಾಗಲಿ ಎಂದು ಶಂಕಿಸಿದಂತೆ ಆಗುವುದು. ಇದಾದರೂ ಸರ್ವಪ್ರಮಾಣಗಳಿಂದ ವಿರುದ್ಧವೂ ಸ್ವವ್ಯಾಹತವೂ ಆಗಿದೆ. ಇಂತಹುದನ್ನು ಉನ್ಮತ್ತನಾಗದೆ ಇದ್ದವನು ಶಂಕಿಸಲಾರನು. ಶಂಕೆಯೇ ಹುಟ್ಟದಿದ್ದಮೇಲೆ ಬಾಧಕೋಪನ್ಯಾಸಕ್ಕೆ ಅವಕಾಶವು ಯಾವುದರಿಂದ? (2) ಆ ಈಶತ್ವವು ಅನುಪಪನ್ನವೇ ಎನ್ನುವುದು ೧ ತರ್ಕವೋ, ೨ ಅನುಮಾನವೋ? ೧ ತರ್ಕವಲ್ಲ. ಐಕ್ಯವು ಶ್ರುತಿಸಿದ್ಧವಾದ ಪ್ರಯುಕ್ತ ವಿಪರ್ಯಯು ಪರ್ಯವಸಾನವು ಕೂಡಲಾರದು. ೨ ಅನುಮಾನವೆನ್ನುವುದು ಕೂಡಲಾರದು. ನಿಮಗೆ ಜೀವೈಕ್ಯವೇ ಸಿದ್ಧವಾಗಲಿಲ್ಲ. ಯದಿ ಪದವೂ ವ್ಯರ್ಥವೇ, ಎಂದರೆ— ಹೀಗೆ ಹೇಳಕೂಡದು. ಯಾರಿಗೆ ಜೀವೈಕ್ಯವು ಸಿದ್ಧವಾಗಿದೆಯೋ ಆತನಿಗೆ ಅನೀಶತ್ವವಿಷಯಕವಾದ ಸ್ವಾರ್ಥಾನುಮಾನಾಪಾದನವು ಅಭಿಮತವಾಗಿದೆ. ತರ್ಕವೆನ್ನುವ ಪಕ್ಷದಲ್ಲಿಯೂ ದೋಷವಿಲ್ಲ. ಶ್ರುತಿಗಳಿಗೆ ಐಕ್ಯಪರತ್ವವೇ ಇಲ್ಲವೆನ್ನುವ ಅಭಿಪ್ರಾಯದಿಂದ ಈಶತ್ವೇನೈವ ಎನ್ನುವ ಮೂಲವು ಹೊರಟದೆ. (3) ಹಿಂದೆ ಹೇಳಿದ ಪ್ರಕಾರ ಶ್ರುತಿಯು ಮೂರು ಪ್ರಕಾರದಿಂದ ಉಪದೇಶಿಸುತ್ತದೆ ಎಂದು ಹೇಳಿದರೆ ಸರ್ವಥಾ ಉಪಜೀವ್ಯ ಪ್ರಮಾಣವಿರೋಧವು ಬರಬೇಕಾಗುವುದರಿಂದ ಐಕ್ಯದಲ್ಲಿ ಯಾವ ಶ್ರುತಿಯೂ ಪ್ರಮಾಣವಾಗಲಾರದು.॥ ೧೫೦ ॥ ೧೫೧ ॥

ಹಾಗಾದರೆ ಪರಮಾತ್ಮನಿಗೆ ಅಘಟಿತಘಟನಾಸ್ವರೂಪವಾದ ಶಕ್ತಿಯಿಂದಲೇ ಈಶ್ವರತ್ವ ಅನೀಶತ್ವಗಳು ವಿರುದ್ಧಗಳಾದಾಗ್ಯೂ ಅವುಗಳು ಏಕತ್ರ ಕೂಡಬಹುದು; ಆದಕಾರಣ ಉಪಜೀವ್ಯ ವಿರೋಧವು ಹೇಗೆ ಎಂದರೆ—

ಮೂ ॥ ಅತ ಏವೇಶತಾಸಿದ್ಧೇರ್ನಕಿಂಚಿಚ್ಛಕ್ಯಮಸ್ಯ ಚ ।
ಈಶತ್ವೇಽನೀಶಭೇದೇನ ಶ್ರುತ್ಯಾ ಸಮ್ಯಕ್ಪ್ರಕಾಶಿತೇ ॥ ೧೫೨ ॥
ಅಯುಕ್ತಮಪಿ ಚಾನ್ಯತ್ರ ಯುಕ್ತಂ ಭವತಿ ತದ್ಬಲಾತ್ ।
ಅತೋಽನ್ಯತ್ರಾಪಿ ಯದ್ದೃಷ್ಟಂ ತದೀಶೇನೈವ ಕಲ್ಪ್ಯತೇ ॥
ಶ್ರುತ್ಯಾಭಾಸಾಪ್ತಮಪಿ ನ ಹೀಶತ್ವಪರಿಪಂಥಿ ಯತ್ ॥ ೧೫೩ ॥

ಅ ॥ ಅತ ಏವ=ಜೀವೈಕ್ಯವಿದ್ಧಪ್ರಯುಕ್ತವೇ, ಈಶತಾಸಿದ್ಧೇಃ = ಉಕ್ತರೂಪವಾದ ಶಕ್ತಿಯು ಸಿದ್ಧಿಸದೆ ಇರುವುದರಿಂದ, ಕಿಂಚಿತ್ = ಈಶತ್ವ - ಅನೀಶತ್ವಗಳಿಗೆ ಒಂದು ಕಡೆ ಅವ ಸ್ಥಿತಿಯು, ಅಸ್ಯ ಚ=ಪರಮಾತ್ಮನಿಗೂ ಕೂಡ, ನ ಶಕ್ಯಂ=ಶಕ್ಯವಲ್ಲ. (ಅಂದರೆ ಜೀವೈಕ್ಯ ದಿಂದ ಈಶತ್ವವಿಲ್ಲವೆಂದು ಅನುಮೇಯಿಸುವುದು ಅಶಕ್ಯವು. ಈಶತ್ವವು 'ಪರಾಸ್ಯ ಶಕ್ತಿಃ' ಇತ್ಯಾದಿ ಶ್ರುತಿಸಿದ್ಧವಾಗಿದೆ.) (ಮತ್ತು ಜೀವೈಕ್ಯವಿದ್ದರೂ ಭೇದವಿದ್ಧಪ್ರಯುಕ್ತ ಈಶತ್ವವು ಉಪಪನ್ನವಾಗು ತ್ತದೆ, ಎನ್ನುವ ಆಶಂಕೆಯನ್ನು ಪರಿಹರಿಸುತ್ತಾ ಪರಮಾತ್ಮನು ತನ್ನ ಶಕ್ತಿಯಿಂದ ಅಘಟಿತವಾದು ದನ್ನು ಘಟನೆಮಾಡುತ್ತಾನೆ. ಎನ್ನುವ ಕಲ್ಪನೆಗೆ ಅವಧಿಯು ಎಲ್ಲಿ ಎಂದು ಮುಂದನು ವಿಚಾರ ಮಾಡುತ್ತಿರಲು ಹೇಳುತ್ತಾರೆ.) ಅನೀಶ ಭೇದೇನ=ಈಶನಲ್ಲದ ಜೀವನ ಭೇದದಿಂದ, ಈಶತ್ವೇ= ಈಶತ್ವವು, ಶ್ರುತ್ಯಾ=ಶ್ರುತಿಯಿಂದ, ಸಮ್ಯಕ್=ಚೆನ್ನಾಗಿ, ಪ್ರಕಾಶಿತೇ = ಪ್ರಕಾಶಿಸಿಕೊಳ್ಳಲ್ಪಡು ತ್ತಿರಲು, ಅನ್ಯತ್ರ = ಈಶ್ವರನದೆಶೆಯಿಂದ ಬೇರೆ ಕಡೆ, ಅಯುಕ್ತಮಪಿ=ಪರಸ್ಪರವಾಗಿ ಬಿಟ್ಟು ಕೊಂಡು ಇದ್ದಾಗ್ಯೂ, (ಈಶ್ವರನಲ್ಲಿ) ಯುಕ್ತಂ ಭವತಿ = ಯುಕ್ತವಾಗುತ್ತದೆ. ತದ್ಬಲಾತ್= ಈಶತ್ವಬಲದಿಂದ, ಅತಃ=ಪರಮೇಶ್ವರನಿಂದ, ಅನ್ಯತ್ರ=ಬೇರೆ ಕಡೆಯಲ್ಲಿ, ಯತ್=ಯಾವುದು, ದೃಷ್ಟಂ=ಕಾಣಲ್ಪಟ್ಟದೋ, ತತ್=ಅದು, ಈಶೇನೈವ=ಈಶತ್ವದಿಂದಲೇ, ಕಲ್ಪ್ಯತೇ=ಯುಕ್ತ ವೆಂದು ಕಲ್ಪಿಸಲ್ಪಡುತ್ತದೆ. ಶ್ರುತ್ಯಾಭಾಸಾಪ್ತಮಪಿ=ಶ್ರುತ್ಯಾಭಾಸದಿಂದ ಪ್ರಾಪ್ತವಾದಾಗ್ಯೂ, ಯತ್=ಯಾವುದೋ, (ಅದು) ಈಶತ್ವಪರಿಪಂಥಿ ಚ=ಈಶ್ವರನ ಐಶ್ವರ್ಯಕ್ಕೆ ವಿರೋಧಿಯಾ ದುದು, ನ=ಆಗುವುದಿಲ್ಲ.

ತಾ ॥ **ನ್ಯಾಯಸುಧಾ—** (1) ಅನೀಶಭೇದವನ್ನು ಅಂಗೀಕರಿಸಿದುದರಿಂದಲೇ ಈಶ ತ್ವವು ಶ್ರುತಿಯಿಂದ ಚೆನ್ನಾಗಿ ಪ್ರಕಾಶಿತವಾಯಿತು, ಎಂದು ಹೇಳುವವನ ಶ್ರುತಿವಿರೋಧವನ್ನು ಪರಿ ಹರಿಸಿದರು. ಹೇಗೆಂದರೆ— ಜೀವಪರಮಾತ್ಮೈಕ್ಯವು ತಾತ್ವಿಕವಾಗಿದ್ದರೆ ಆಗ ನಿರವಕಾಶವಾದ ಅನುಮಾನದಿಂದ ವಿರುದ್ಧವಾದ ಶ್ರುತಿಯು ಅಮುಖ್ಯವಾದ ಅರ್ಥವುಳ್ಳದ್ದಾಗಿ ಈಶತ್ವವನ್ನು ಸಮರ್ಥಿಸಲಾರದು, ಹೀಗೆ ಸ್ವಾರ್ಥಾನುಮಾನ ಪ್ರಸಂಗವು ತಪ್ಪಲಾರದು. (2) ಯತ್ಕಿಂಚಿತ್ ವಿರುದ್ಧದಂತೆ ತೋರಿದರೂ ಈಶ್ವರನಲ್ಲಿ ಆಗಲೀ, ಈಶ್ವರನು ಹೊರತು ಬೇರೆಕಡೆಯಲ್ಲಿ ಆಗಲೀ ಪ್ರಮಾಣಸಿದ್ಧವಾದುದೂ, ಈಶ್ವರನ ಐಶ್ವರ್ಯಕ್ಕೆ ವಿರೋಧಿಯಾದುದೂ ಆಗುವುದಿಲ್ಲ. ಉದಾ— ಅಣುತ್ವ - ಮಹತ್ವ - ಯೌಗಪದ್ಯಾದಿಗಳು ಅರ್ಜುನಾದಿಗಳಿಗೆ ಅಶೇಷ ಅನುಸಂಧಾನವಿಲ್ಲ. ಅವೆಲ್ಲವೂ ಈಶ್ವರನ ಐಶ್ವರ್ಯಬಲದಿಂದ ಕೂಡುತ್ತದೆಂದಂಗೀಕರಿಸಬೇಕು. ನಿರಾಕರಿಸಲು ಅರ್ಹವಲ್ಲ. ಯಾವುದು ಪ್ರಮಿತವಲ್ಲವೋ ಅದು ಈಶ್ವರನ ಐಶ್ವರ್ಯಕ್ಕೆ ವಿರುದ್ಧವಾಗದೆ ಇದ್ದರೂ ಕಲ್ಪಿಸ ಕೂಡದು. ಹಾಗಾದರೆ ಶಶವಿಷಾಣಾದಿಗಳನ್ನು ಕಲ್ಪಿಸಬೇಕಾಗುವುದು. ಯಾವುದು ಪ್ರಮಿತ ವಾದಾಗ್ಯೂ ಈಶ್ವರನ ಐಶ್ವರ್ಯಕ್ಕೆ ವಿರೋಧಿಯೋ ಅಂತಹುದನ್ನು ಕಲ್ಪಿಸಲಿಕ್ಕೇನೇ ಕೂಡದು. ಕಲ್ಪಕಕ್ಕೇನೇ ವಿಘಾತವು ಬರುತ್ತದೆ. ಮತ್ತೆ ಆ ಪ್ರಮಾಣಕ್ಕೆ ಯಥಾ ಯೋಗ್ಯವಾಗಿ ಆಭಾಸತ ವನ್ನು ವರ್ಣಿಸಬೇಕು. ॥ ೧೫೨ ॥ ೧೫೩ ॥

ಅನೀಶನಿಗೆ ಈಶತ್ವವೆನ್ನುವುದೇ ಸರ್ವಪ್ರಮಾಣಗಳಿಂದಲೂ ವಿರುದ್ಧವಾಗಿದೆ ಎಂದು ಹೇಳಿದ್ದನ್ನುಪಪಾದಿಸುವುದಕ್ಕಾಗಿ ಸ್ಮೃತಿಯನ್ನೇ ಹೇಳುತ್ತಾರೆ—

**ಮೂ ॥ ಈಶೋಽನೀಶೋ ಜಗನ್ಮಿಥ್ಯಾ ದುಃಖೀ ಮುಕ್ತೋ ಭಿದಾ ನ ಹಿ ॥**
**॥ ೧೫೪ ॥**

**ಇತಿ ಪ್ರತಿಜ್ಞಾವ್ಯಾಘಾತಃ ಸರ್ವದೋಷಾಧಿಕಾಧಿಕಃ ।**
**ಇತಿ ಹಿ ಬ್ರಹ್ಮತರ್ಕೋಕ್ತಿರತಿಹೇಯಮತೋಽಖಿಲೈಃ ॥**
**ಬುಭೂಷುಭಿರ್ಮತಮಿದಂ ಜೀವೇಶಾಭೇದವಾದಿನಃ ॥ ೧೫೫ ॥**

ಅ ॥ ಈಶಃ=ಸ್ವಾಮಿಯಾದ ಶ್ರೀಹರಿಯು, ಅನೀಶಃ = ಸ್ವಾಮಿಯಲ್ಲ, ಜಗತ್= ಪ್ರಪಂಚವು, ಮಿಥ್ಯಾ=ಮಿಥ್ಯೆಯಾದುದು, ಮುಕ್ತಃ=ಮುಕ್ತನು, ದುಃಖೀ=ದುಃಖವುಳ್ಳವನು, ಭಿದಾ=ಭೇದವು, ನ ಹಿ=ಇಲ್ಲ. ಇತಿ=ಹೀಗೆ, ಪ್ರತಿಜ್ಞಾವ್ಯಾಘಾತಃ = ಪ್ರತಿಜ್ಞಾವಿರೋಧವು, ಸರ್ವದೋಷಾಧಿಕಾಧಿಕಃ = ಎಲ್ಲಾ ದೋಷಗಳಿಂದಲೂ ಅತ್ಯಂತಾಧಿಕವು, ಇತಿ ಹಿ=ಹೀಗೆ, ಬ್ರಹ್ಮತರ್ಕೋಕ್ತಿಃ = ಬ್ರಹ್ಮತರ್ಕದ ಉಕ್ತಿಯು. ಅತಃ=ಆದಕಾರಣ, ಅಖಿಲೈಃ = ಎಲ್ಲಾ, ಬುಭೂಷುಭಿಃ=ತಿಳಿಯಲಿಚ್ಛಿಸುವವರಿಂದ, ಜೀವೇಶಾಭೇದವಾದಿನಃ = ಜೀವರಿಗೂ, ಈಶನಿಗೂ ಅಭೇದವನ್ನು ಹೇಳುವವನ, ಇದಂ ಮತಂ = ಈಶನಿಗೆ ಅನೀಶತ್ವರೂಪವಾದ ಮತವು, ಅತಿ ಹೇಯಂ=ಅತ್ಯಂತ ಬಿಡಲರ್ಹವು.

ತಾ ॥ (1) ೧ ಪ್ರಮಾಣವಿರೋಧ ೨ ಸ್ವವಾಕ್ಯವಿರೋಧವೆಂದು. ಪ್ರತಿಜ್ಞಾ ವಿರೋಧವು ಎರಡು ವಿಧವು. ಅದರಲ್ಲಿ ೧ 'ಈಶಃ ಅನೀಶಃ' ೨ 'ದುಃಖೀ ಮುಕ್ತಃ' ಎಂದು ಸ್ವವಾಕ್ಯ ವಿರೋಧಕ್ಕೆ ಎರಡು ಉದಾಹರಣೆಗಳು. ೩ 'ಜಗನ್ಮಿಥ್ಯಾ' ೪ 'ಭಿದಾ ನ ಹಿ' ಎನ್ನುವುದು ಪ್ರಮಾಣ ವಿರೋಧಕ್ಕೆ ಉದಾಹರಣವು. ಅಥವಾ ೧ ಈಶಃ ಅನೀಶಃ, ೨ ದುಃಖೀ ಮುಕ್ತಃ ಎನ್ನುವವುಗಳು ಸ್ವವಾಕ್ಯ ವಿರೋಧಕ್ಕೆ ಉದಾಹರಣೆಗಳು. ೩ ಜಗನ್ಮಿಥ್ಯಾ ಎನ್ನುವುದು ಸ್ವನ್ಯಾಯ ವಿರೋಧಕ್ಕೆ ಉದಾಹರಣೆಯು ಜಗತ್ತಿಗೆ ಮಿಥ್ಯಾತ್ವವಿದ್ದರೆ ಅದೇ ನ್ಯಾಯದಿಂದ ಮಿಥ್ಯಾತ್ವಕ್ಕೂ ಮಿಥ್ಯಾತ್ವವು ಬರಬೇಕಾಗುವುದರಿಂದ ಜಗತ್ತಿಗೆ ಸತ್ಯತ್ವವು ಪ್ರಸಕ್ತವಾಗುವುದು. ೫ ಭಿದಾ ನ ಹಿ ಎಂದು ಸ್ವಕ್ರಿಯಾ ವಿರೋಧಕ್ಕೆ ಉದಾಹರಣೆಯು. ಈ ಪ್ರತಿಜ್ಞಾಕ್ರಿಯೆಯಿಂದ ಸಾಧ್ಯಧರ್ಮ ಧರ್ಮಿ ಗಳಿಗೆ ಭೇದವು ಪ್ರಾಪ್ತವಾಗುತ್ತದೆ. ॥ ೧೫೪ ॥ ೧೫೫ ॥

'ಈಶತ್ವೇಽನೀಶಭೇದೇನ' ಇತ್ಯಾದಿಗಳಿಂದ ಹೇಳಲ್ಪಟ್ಟ ಅರ್ಥದಲ್ಲಿ ಸ್ಮೃತಿಯನ್ನೂ ಹೇಳು ತ್ತಾರೆ—

**ಮೂ ॥ ನಾಯುಕ್ತಮೀಶಿತುಃ ಕಿಂಚಿದೀಶತ್ವಸ್ಯಾವಿರೋಧಿ ಯತ್ ॥ ೧೫೬ ॥**
**ಯದೀಶತ್ವವಿರೋಧಿ ಸ್ಯಾತ್ತದೇವಾಯುಕ್ತಮಂಜಸಾ ।**
**ಈಶ (ಶಿ) ತ್ವಸ್ಯಾವಿರೋಧೇನ ಯೋಜಯಿತ್ವಾಖಿಲಾಃ ಪ್ರಮಾಃ ॥೧೫೭॥**
**ಸಿದ್ಧೇಶ (ಶಿ) ತ್ವೇನ ಚಾಯುಕ್ತಮಪಿ ಹೀಶೇನ ಯೋಜಯೇತ್ ।**
**ಮಾನತಃ ಪ್ರಾಪ್ತಮಖಿಲಂ ನಾಮಾನಂ ಯೋಜಯೇತ್ಕ್ವಚಿತ್ ॥**
**ಇತಿ ಹಿ ಬ್ರಹ್ಮತರ್ಕೋಕ್ತಿರತೋ ಯುಕ್ತಮಿಹೋದಿತಂ ॥ ೧೫೮ ॥**
**॥ ಸೂ ೧೮ ॥ ಅಧಿ ೧೦ ॥**

ಅ ॥ ಯತ್=ಯಾವ ಕಾರಣದೆಶೆಯಿಂದ, ಈಶಿತುಃ=ಸರ್ವ ಸ್ವಾಮಿಯಾದ ಶ್ರೀಹರಿಗೆ, ಕಿಂಚಿತ್ = ಯಾವುದು ಅಣುತ್ವ-ಮಹತ್ವಾದಿಗಳು, ಈಶತ್ವಸ್ಯ = ಈಶ್ವರತ್ವಕ್ಕೆ, ಅವಿರೋಧಿ=ವಿರೋಧಿಯಾಗದಿರುವುದೋ, ತತ್=ಅದು, ಅಯುಕ್ತಂ=ಅಯುಕ್ತವಾದುದು, ನ=ಅಲ್ಲ. ಯತ್=ಯಾವ ಐಕ್ಯವು, ಈಶತ್ವವಿರೋಧಿ=ಈಶ್ವರತ್ವಕ್ಕೆ ವಿರೋಧಿಯಾದುದು, ಸ್ಯಾತ್=ಆಗುವುದೋ, ತದೇವ=ಅದೇವೇ, ಅಂಜಸಾ=ಚೆನ್ನಾಗಿ, ಅಯುಕ್ತಂ=ಅಯುಕ್ತವಾಗುವುದು, ಈಶಿತ್ವಸ್ಯ=ಈಶ್ವರತ್ವಕ್ಕೆ, ಅವಿರೋಧೇನ=ವಿರೋಧಾಭಾವದಿಂದ, ಅಖಿಲಾಃ ಪ್ರಮಾಃ=ಎಲ್ಲಾ ಪ್ರಮಾಣಗಳನ್ನು, ಯೋಜಯಿತ್ವಾ=ಕೂಡಿಸಿ, ಸಿದ್ಧೇಶತ್ವೇನ=ಸಿದ್ಧವಾದ ಈಶ್ವರತ್ವವುಳ್ಳ, ಈಶೇನಾಪಿ = ಈಶ್ವರನಿಂದಲೂ, ಅಯುಕ್ತಮಪಿ = ಲೋಕದೃಷ್ಟಿಯಿಂದ, ಅಯುಕ್ತವಾದಾಗ್ಯೂ ಮಾನತಃ=ಪ್ರಮಾಣದಿಂದ, ಪ್ರಾಪ್ತಂ=ಪ್ರಾಪ್ತವಾದ, ಅಖಿಲಂ=ಎಲ್ಲವನ್ನೂ, ಯೋಜಯೇತ್=ಕೂಡಿಸತಕ್ಕದು.(ಈಶ್ವರನಲ್ಲಿ ಇದೆ ಎಂದು ತಿಳಿಯತಕ್ಕದ್ದು.)ಅಥವಾ ಸಿದ್ಧವಾದ ಈಶತ್ವ ನಿಮಿತ್ತದಿಂದ ಕೂಡಿಸತಕ್ಕದು. ಅಮಾನಂ=ಪ್ರಮಾಣವಿಲ್ಲದಿರುವ ಐಕ್ಯಾದಿಗಳನ್ನು, ಕ್ವಚಿತ್=ಎಲ್ಲಿಯೂ, ನ ಯೋಜಯೇತ್=ಕೂಡಿಸತಕ್ಕದಲ್ಲ. ಇತಿ=ಹೀಗೆ, ಬ್ರಹ್ಮತರ್ಕೋಕ್ತಿಃ=ಬ್ರಹ್ಮತರ್ಕದ ವಚನವು, ಹಿ=ಪ್ರಸಿದ್ಧವು. ಅತಃ=ಆದಕಾರಣ, ಇಹ=ಇಲ್ಲಿ, ಉದಿತಂ=ಹೇಳಲ್ಪಟ್ಟ, ಜೀವೇಶ ಭೇದ ಮೊದಲಾದುದು, ಯುಕ್ತ=ಯುಕ್ತವು ಆದಕಾರಣ ಜೀವನು ಬ್ರಹ್ಮನಿಂದ ಅತ್ಯಂತಭಿನ್ನನೇ,ಎಂದು ಸಿದ್ಧವಾಯಿತು ) ॥ ೧೫೬ ॥ ೧೫೭ ॥ ೧೫೮ ॥ ಸೂ ॥ ೧೮ ॥ ಅಧಿ ॥ ೧೦ ॥

**ಉಪಮಾಧಿಕರಣವು ಸಮಾಪ್ತವಾಯಿತು.**

## ಅರೂಪಾಧಿಕರಣವು.

### "ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ" ॥ ಸೂ. ೧೪ ॥

ಬ್ರಹ್ಮನು ಪ್ರಾಕೃತಾದಿ ದೋಷವಿಲ್ಲದಿರುವವನೇ. ಬ್ರಹ್ಮನಿಗೆ ಪ್ರಕೃತ್ಯಾದಿಗಳಿಂದ ಉತ್ತಮತ್ವವಿದ್ದಪ್ರಯುಕ್ತ 'ಅಸ್ಥೂಲಂ ಅನಣು' ಇತ್ಯಾದಿ ಶ್ರುತಿಪ್ರಸಿದ್ಧವು ॥ ೧೪ ॥

### "ಓಂ ಪ್ರಕಾಶವಚ್ಚಾವೈಯರ್ಥ್ಯಂ ಓಂ" ॥ ಸೂ. ೧೫ ॥

'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ । ಶ್ಯಾಮಾಚ್ಛಬಲಂ ಪ್ರಪದ್ಯೇ । ಸುವರ್ಣಜ್ಯೋತಿಃ' ಇತ್ಯಾದಿ ರೂಪಿತ್ವಪ್ರತಿಪಾದಕ ಶ್ರುತಿಗಳಿಗೆ ವೈಯರ್ಥ್ಯವೂ, ಅಪ್ರಾಮಾಣ್ಯವೂ ಇಲ್ಲ. ಬ್ರಹ್ಮನಿಗೆ ರೂಪವಿದೆ. ಮನೆಯೊಳಗೆ ಚಾಕ್ಷುಷಾದಿ ಪ್ರಕಾಶವಿದ್ದರೂ ಸೌರಾದಿ ಲೌಕಿಕ ಪ್ರಕಾಶಕ್ಕಿಂತ ವೈಲಕ್ಷಣ್ಯವಿದ್ದ ಪ್ರಯುಕ್ತ 'ನಾಸ್ತಿ ಪ್ರಕಾಶಃ' ಎನ್ನುವ ವ್ಯವಹಾರದಂತೆ ಅರೂಪಿತ್ವವಿದ್ದರೂ ಬ್ರಹ್ಮನಿಗೆ ವಿಲಕ್ಷಣವಾದ ಅಪ್ರಾಕೃತವಾದ ರೂಪವಿದ್ದ ಪ್ರಯುಕ್ತ ಅರೂಪ ಶ್ರುತಿಗೆ ಅಪ್ರಾಮಾಣ್ಯವಿಲ್ಲ ॥ ೧೫ ॥

### "ಓಂ ಆಹ ಚ ತನ್ಮಾತ್ರಂ ಓಂ" ॥ ಸೂ. ೧೬ ॥

ರೂಪವನ್ನು ಜ್ಞಾನಾನಂದಾದಿ ಮಾತ್ರವನ್ನಾಗಿ ಪ್ರತಿಪಾದಿಸುತ್ತದೆ. **'ಐಕಾತ್ಮ್ಯಪ್ರತ್ಯಯ ಸಾರಂ' 'ಆನಂದಮಾತ್ರಮಜರಂ'** ಇತ್ಯಾದಿ ಶ್ರುತಿಯು ಪ್ರಾಕೃತರೂಪವನ್ನು ಹೇಳುವುದಿಲ್ಲ. ॥ ೧೬ ॥

## " ಓಂ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ಓಂ " ॥ಸೂ.೧೭॥

**'ಆನಂದರೂಪಮಮೃತಂ ಯದ್ವಿಭಾತಿ'** ಎನ್ನುವ ಶ್ರುತಿಯು ಆನಂದಾತ್ಮಕವಾದ ರೂಪವನ್ನು ತೋರಿಸುತ್ತದೆ. **'ಶುದ್ಧಸ್ಫಟಿಕ ಸಂಕಾಶಂ ವಾಸುದೇವಂ ನಿರಂಜನಂ । ಚಿಂತಯೀತ ಯತಿರ್ನಾನ್ಯಂ ಜ್ಞಾನರೂಪಾದೃತೇ ಹರೇಃ'** ಎನ್ನುವ ಸ್ಮೃತಿಸಿದ್ಧವೂ ಆಗಿದೆ.

(1) ಈ ಅಧಿಕರಣದಲ್ಲಿ ಪ್ರಥಮಸೂತ್ರದಿಂದ ಬ್ರಹ್ಮನಿಗೆ ರೂಪಗಳಿಲ್ಲವೆಂದುಪಪಾದಿಸಿ, **'ಪ್ರಕಾಶವಚ್ಚಾವೈಯರ್ಥ್ಯಂ'** ಎನ್ನುವ ಎರಡನೇ ಸೂತ್ರದಿಂದ ರೂಪವತ್ವವಿಷಯಕಗಳಾದ ಶ್ರುತಿಗಳಿಗೆ ವೈಯರ್ಥ್ಯವನ್ನು ಆಶಂಕಿಸಿಕೊಂಡು ವಿಲಕ್ಷಣವಾದ ರೂಪವಿದೆ ಎಂದಂಗೀಕರಿಸಿಕೊಂಡು ಪರಿಹರಿಸಿದರು. (2) ವಿಲಕ್ಷಣರೂಪವಾದರೂ **'ಆಹ ಚ ತನ್ಮಾತ್ರಂ' 'ದರ್ಶಯತಿ ಚಾಥೋ ಅಪಿಸ್ಮರ್ಯತೇ'** ಎನ್ನುವ ಎರಡು ಸೂತ್ರಗಳಿಂದ ಸಮರ್ಥಿಸಿದರೆಂದು ಭಾಷ್ಯದಿಂದ ತೋರುತ್ತದೆ. ಅದು ಅಯುಕ್ತವು ಕೊನೆಗೆ ರೂಪವನ್ನು ಅಂಗೀಕರಿಸಿದರೆ **'ಅರೂಪವದೇವತತ'** ಎನ್ನುವುದನ್ನು ಹೇಳದೆ ಹೋಗಬೇಕಾಗುವುದು. ಈ ವಿಚಾರದಿಂದ ಪ್ರಯೋಜನವೂ ಇಲ್ಲ, ಎಂದರೆ ನಾಲ್ಕು ಸೂತ್ರದ ತಾತ್ಪರ್ಯವನ್ನು ಹೇಳುತ್ತಾರೆ—

**ಮೂ ॥ ಸಚಾಪ್ರಾಕೃತರೂಪತ್ವಾದರೂಪಃ ಸ್ವಗುಣಾತ್ಮಕಂ ॥ ೧೫೯ ॥**
**ರೂಪಮಸ್ಯ ಶಿರಃ ಪಾಣಿಪಾದಾದ್ಯಾತ್ಮಕಮಿಷ್ಯತೇ ।**
**ಅತೋ ನಾನಿತ್ಯತಾ ನೈವ ಶ್ರುತಿದ್ವಯವಿರೋಧಿತಾ ॥ ೧೬೦ ॥**
**ಯಥಾ ಹಿ ತೈಜಸಸ್ಯೈವ ಪ್ರಕಾಶಸ್ಯೋಜ್ಝಿತಾವಪಿ ।**
**ಆತ್ಮೈವ ಜ್ಯೋತಿರಿತ್ಯಾಹ ಜೀವಸ್ಯೇಶಂ ಶ್ರುತಿಸ್ತಥಾ ॥೧೬೧॥**

ಅ ॥ ಸ ಚ=ಆ ಪರಮಾತ್ಮನಾದರೂ, ಅಪ್ರಾಕೃತರೂಪತ್ವಾತ್ = ಪ್ರಾಕೃತರೂಪವಿಲ್ಲದವನಾದುದರಿಂದ, ಅರೂಪಃ=ರೂಪವಿಲ್ಲದಿರುವವನು ಎನ್ನಿಸುತ್ತಾನೆ. ಅಸ್ಯ=ಈ ಬ್ರಹ್ಮನ, ಶಿರಃ ಪಾಣಿಪಾದಾದ್ಯಾತ್ಮಕಂ = ಶಿರಸ್ಸು, ಹಸ್ತ, ಪಾದಮೊದಲಾದ ಸ್ವರೂಪವುಳ್ಳ, ರೂಪಂ= ಸ್ವರೂಪವು, ಸ್ವಗುಣಾತ್ಮಕಂ=ಪರಬ್ರಹ್ಮನ ಸ್ವರೂಪಭೂತಗಳಾದ ಆನಂದಮೊದಲಾದ ಗುಣಸ್ವರೂಪವೆಂದು, ಇಷ್ಯತೇ=ಅಂಗೀಕರಿಸಲ್ಪಡುತ್ತದೆ. (ಆದಕಾರಣ ರೂಪವುಳ್ಳವನು.) (ವಿಚಾರಪ್ರಯೋಜನವನ್ನು ತೋರಿಸುತ್ತಾರೆ.) ಅತಃ=ಆದಕಾರಣ, ಅನಿತ್ಯತಾ=ಜನ್ಮ ಮರಣವತ್ವವೂ, (ಸೌಂದರ್ಯಾದ್ಯಭಾವವೂ ಕೂಡ) ನ=ಇಲ್ಲ. ಶ್ರುತಿದ್ವಯವಿರೋಧಿತಾ = ಎರಡು ಶ್ರುತಿಗಳಿಂದ ವಿರೋಧವೂ, ನೈವ=ಇಲ್ಲವೇ ಇಲ್ಲ. (ಪರಬ್ರಹ್ಮನಿಗೆ ರೂಪವಿದ್ದರೆ ಪ್ರಾಕೃತರೂಪಾದಿರಾಹಿತ್ಯದಿಂದ ಅರೂಪತ್ವ ವ್ಯವಹಾರವು ಹೇಗೆ ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 'ಪ್ರಕಾಶವತ್' ಎನ್ನುವ ಸೂತ್ರಾವಯವವನ್ನು ಭಾಷ್ಯದಲ್ಲಿ ವ್ಯಾಖ್ಯಾನಮಾಡಿರುವರು. ಈಗ ಈಶ್ವರರೂಪವು ಲೋಕವಿಲಕ್ಷಣವಾದರೆ ಆಗ ಅಲ್ಲಿ ರೂಪಶಬ್ದಪ್ರವೃತ್ತಿಯು ದುರ್ಘಟ

ವಾಗಬೇಕಾಗುವುದು. ತಥಾಚ ರೂಪವತ್ವಪ್ರತಿಪಾದಕ ಶ್ರುತಿಗಳಿಗೆ ವೈಯರ್ಥ್ಯವನ್ನು ಪರಿಹರಿಸಲು ಸಾಧ್ಯವಿಲ್ಲವೆನ್ನುವ ಆಶಂಕಾಪರಿಹಾರಕವಾಗಿಯೂ ವ್ಯಾಖ್ಯಾನಮಾಡುತ್ತಾರೆ.) ಯಥಾ= ಹೇಗೆ, ತೈಜಸಸ್ಯ=ಸೂರ್ಯಾದಿ ತೇಜಸ್ಸಂಬಂಧಿಯಾದ, ಪ್ರಕಾಶಸ್ಯ=ಪ್ರಕಾಶಕ್ಕೆ, ಉಜ್ಝಿತಾವಪಿ = ರಾಹಿತ್ಯವಿದ್ದರೂ, (ಅಂದರೆ ಪರಮೇಶ್ವರನಿಗೆ ಪ್ರಕಾಶತ್ವಪ್ರಸಿದ್ಧಿಯಿಲ್ಲದಿದ್ದರೂ) ಆತ್ಮೈವ=ಪರಬ್ರಹ್ಮನೇ, (ಅಸ್ಯ=ಜೀವನಿಗೆ) ಜ್ಯೋತಿಃ=ಜೋತಿಸ್ಸು, (ಆಗುತ್ತದೆ) ಇತಿ=ಹೀಗೆ, ಶ್ರುತಿಃ = ಶ್ರುತಿಯು, ಜೀವಸ್ಯ=ಜೀವನಿಗೆ, ಈಶಂ=ಶ್ರೀ ಹರಿಯನ್ನು, (ಪ್ರಕಾಶಕನನ್ನಾಗಿ) ಆಹ=ಹೇಳುತ್ತದೆ. ತಥಾ=ಹಾಗೆಯೇ, ಲೋಕವಿಲಕ್ಷಣವಾದಾಗ್ಯೂ ಭಗವದ್ರೂಪದಲ್ಲಿ ರೂಪಶಬ್ದಪ್ರವೃತ್ತಿಯು ಯುಕ್ತವು.

ತಾ || ಹಾಗಾದರೆ ಈ ೯ನೇ ಅಧಿಕರಣವನ್ನು 'ಅತ ಏವ ಚೋಪಮಾ' ಎನ್ನುವ ೧೧ನೇ ಅಧಿಕರಣಕ್ಕಿಂತ ಮೊದಲು ವ್ಯಾಖ್ಯಾನಮಾಡಬೇಕಿತ್ತು. ಮೇಲೆ ವ್ಯಾಖ್ಯಾನಮಾಡಿದ್ದು ಹೇಗೆ ಎಂದರೆ— 'ಅತ ಏವ ಚ' ಎನ್ನುವ ಸೂತ್ರವು 'ನ ಸ್ಥಾನತೋಽಪಿ' ಎನ್ನುವ ೮ನೇ ಅಧಿಕರಣದಿಂದ ಸಂಗತವಾಗಿದೆ, ಎಂದು ತಿಳಿಸುವುದಕ್ಕಾಗಿ ಕ್ರಮಭೇದವು. || ೧೫ || ೧೬ || ೧೭ || || ಸೂ ೧೪ || ೧೫ || ೧೬ || ೧೭ || ಅಧಿ. ೧೧ ||

**ಅರೂಪಾಧಿಕರಣವು ಸಮಾಪ್ತವಾಯಿತು.**



# ಅಂಬುವದಧಿಕರಣವು.

## " ಓಂ ಅಂಬುವದಗ್ರಹಣಾತ್ತು ನ ತಥಾತ್ವಂ ಓಂ "

|| ಸೂ. ೧೯ || ಅಧಿ. || ೧೨ ||

ಸ್ನೇಹಯುಕ್ತವಾದ ಜ್ಞಾನವು ಇಲ್ಲದಿರುವುದರಿಂದ (ಅಂದರೆ ಭಕ್ತಿಯಿಲ್ಲದಿರುವುದರಿಂದ) ನಿತ್ಯಜ್ಞಾನ ಸುಖಾದಿಸಾದೃಶ್ಯವು ಅಭಿವ್ಯಕ್ತವಾಗುವುದಿಲ್ಲ. || ೧೯ || ಅಧಿ ೧೨ ||

**ಅಂಬುವದಧಿಕರಣವು ಸಮಾಪ್ತವಾಯಿತು.**

---

# ವೃದ್ಧಿಹ್ರಾಸಾಧಿಕರಣವು.

## " ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯ ಸಾಮಂಜಸ್ಯಾದೇವಂ ಓಂ " || ಸೂ. ೨೦ ||

ಭಕ್ತಿಗೆ ಆಧಿಕ್ಯ ನ್ಯೂನತಾರೂಪವಾದ ತಾರತಮ್ಯವು ಇದೆ, ಬ್ರಹ್ಮಾದಿಗಳಿಗೂ, ಅಸ್ಮದಾದಿಗಳಿಗೂ, ಭಕ್ತತ್ವದಲ್ಲಿಯೇ ಅಂತರ್ಭಾವವು. ಅವರಿಗೆ ಮಹಾಫಲವಿದೆ. ನಮಗೆ ಅಲ್ಪಫಲವು. ಹೀಗೆ ಭಕ್ತಿತಾರತಮ್ಯವನ್ನು ಅಂಗೀಕರಿಸಿದರೇನೇ ಶ್ರೀ ಹರಿಗೆ ಬ್ರಹ್ಮಾದಿಗಳನ್ನೂ ಅಸ್ಮದಾದಿಗಳನ್ನೂ ಕುರಿತು ಸಾಮಂಜಸ್ಯವು ಕೂಡುತ್ತದೆ. || ೨೦ ||

"ಓಂ ದರ್ಶನಾಚ್ಚ ಓಂ" ॥ ಸೂ ೨೧ ॥

'ಅಥಾತ ಆನಂದಸ್ಯ ಮೀಮಾಂಸಾ' ಇತ್ಯಾದಿಗಳಲ್ಲಿ ಫಲತಾರತಮ್ಯವೂ ದೃಷ್ಟವಾಗಿದೆ. 'ಯಥಾ ಭಕ್ತಿವಿಶೇಷೋsತ್ರ' ಇತ್ಯಾದಿ ಸ್ಮೃತಿಯೂ ಇದೆ ॥ ೨೧ ॥

ಯಾವುದಕ್ಕಾಗಿ ಶ್ರೀಭಗವಂತನ ಮಹಿಮೆಯು ಇಲ್ಲಿ ಹೇಳಲ್ಪಡುತ್ತದೋ ಅಂತಹ ಭಕ್ತಿಯು ಪುರುಷರಲ್ಲಿ ತಾರತಮ್ಯದಿಂದ ಇರುತ್ತದೆ, ಎಂದು ಇಲ್ಲಿ ಉಪಪಾದಿಸುತ್ತೇವೆ. ಹೇಗೆಂದರೆ— ಭಕ್ತಿಯಲ್ಲಿ ಹೆಚ್ಚು ಕಡಿಮೆ ಇವೆ. ಬ್ರಹ್ಮಾದಿಗಳು ಹೆಚ್ಚು ಭಕ್ತಿಯಿದ್ದವರು. ನಾವು ಕಡಿಮೆ ಭಕ್ತಿಯದ್ದವರು. ಹೀಗೆ ಭಕ್ತಿಯಲ್ಲಿ ತಾರತಮ್ಯವನ್ನು ಅಂಗೀಕರಿಸಿದರೇನೇ ಫಲವೈಷಮ್ಯವನ್ನು ಕೊಡತಕ್ಕ ಈಶ್ವರನಿಗೆ ಉಭಯರನ್ನು ಕುರಿತು ಸಾಮಂಜಸ್ಯವು ಕೂಡುತ್ತದೆ, ಎಂದು ಸೂತ್ರದಲ್ಲಿ ಹೇಳಿದ ಭಕ್ತಿತಾರತಮ್ಯಕ್ಕೆ ಫಲತಾರತಮ್ಯಪ್ರಯೋಜಕತ್ವವನ್ನು ಉಪಪಾದಿಸುತ್ತಾರೆ—

ಮೂ ॥ ತದ್ಭಕ್ತಿತಾರತಮ್ಯೇನ ತಾರತಮ್ಯಂ ವಿಮುಕ್ತಿಗಂ ।
ಬ್ರಹ್ಮಾದೀನಾಂ ಚ ಸರ್ವೇಷಾಮಾನಂದಾದೇರ್ಯಥಾಕ್ರಮಂ॥೧೩೩॥

ಅ ॥ ಬ್ರಹ್ಮಾದೀನಾಂ ಚ ಸರ್ವೇಷಾಂ=ಬ್ರಹ್ಮನೇ ಮೊದಲಾದ ಎಲ್ಲಾ ದೇವತೆಗಳಿಗೂ ನಮಗೆಲ್ಲರಿಗೂ ಶ್ರುತಿಯಲ್ಲಿದ್ದ ಕ್ರಮವನ್ನು ಬಿಡದೆ (ಯಾವುದು,) ವಿಮುಕ್ತಿಗಂ=ಮೋಕ್ಷದಲ್ಲಿರತಕ್ಕ, ಆನಂದಾದೇಃ=ಆನಂದ ಮೊದಲಾದವುಗಳ, ತಾರತಮ್ಯಂ=ನೀಚೋಚ್ಚಭಾವವೋ, ತತ್= ಅದು, ಭಕ್ತಿತಾರತಮ್ಯೇನ=ಭಗವಂತನ ಭಕ್ತಿಯು ನೀಚೋಚ್ಚಭಾವದಿಂದಲೇ, (ಆಗುತ್ತದೆ.)

ತಾ ॥ ಮುಕ್ತಿಯಲ್ಲಿರುವ ಆನಂದಾದಿರೂಪಫಲಕ್ಕೆ ಭಕ್ತಿಸಾಧ್ಯತ್ವವು 'ಅಂಬುವದ ಗ್ರಹಣಾತ್' ಎನ್ನುವ ಸೂತ್ರದಲ್ಲಿ ಸಾಧಿಸಲ್ಪಟ್ಟದೆ. ಆ ಆನಂದಾದಿಫಲಕ್ಕೆ 'ಅಥಾತ ಆನಂದಸ್ಯ ಮೀಮಾಂಸಾ ಭವತಿ' ಇತ್ಯಾದಿ ಶ್ರುತಿಯಿಂದ ತಾರತಮ್ಯವು ಅವಗತವಾಗುತ್ತದೆ. ಫಲತಾರತಮ್ಯದಲ್ಲಿ ಸಾಧನತಾರತಮ್ಯವು ಆವಶ್ಯಕವು ಆದುದರಿಂದ ಮೋಕ್ಷಾನಂದಾದಿ ಫಲಕ್ಕೆ ಸಾಧನೀಭೂತವಾದ ಭಕ್ತಿಯಲ್ಲಿ ತಾರತಮ್ಯವನ್ನು ಅವಶ್ಯವಾಗಿ ಒಪ್ಪಲೇಬೇಕು. ॥ ೧೩೩ ॥ ಸೂ. ೨೦ ॥ ॥ ೨೧ ॥ ಅಧಿ ೧೨ ॥

ವೃದ್ಧಿಹ್ರಾಸಾಧಿಕರಣವು ಸಮಾಪ್ತವಾಯಿತು.

---

# ಪ್ರಕೃತೈತಾವತ್ವಾಧಿಕರಣವು.

## 'ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ' ॥ ಸೂ. ೨೨ ॥

ಶ್ರೀ ಹರಿಯು ಜಗತ್ತನ್ನು ರಕ್ಷಿಸತಕ್ಕವನಲ್ಲ. ರಕ್ಷಣೆಯು ಸ್ವಾಭಾವಿಕವಾಗಿಯೇ ಸಿದ್ಧಿಸುತ್ತದೆ ಎಂದಾಶಂಕಿಸಿದರೆ— 'ನೈತಾವದೇನಾ ಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾ ಬಿಭರ್ತಿ' ಎನ್ನುವ ಶ್ರುತಿಯೂ, 'ಸೃಷ್ಟಿಂ ಚ ಪಾಲನಂ ಚೈವ' ಎನ್ನುವ ಸ್ಮೃತಿಯೂ ಶ್ರೀಹರಿಗೆ ಸೃಷ್ಟಿ-ಲಯಕರ್ತೃತ್ವವನ್ನು ಸೂತ್ರ ನಿಷೇಧಿಸುತ್ತದೆ. ಅದಕ್ಕಿಂತ ಅಧಿಕವಾದ ರಕ್ಷಕತ್ವವನ್ನು ಹೇಳುತ್ತದೆ. ॥ ಸೂ. ॥ ೨೨ ॥ ಅಧಿ. ॥ ೧೩ ॥

ಪ್ರಕೃತೈತಾವತ್ವಾಧಿಕರಣವು ಸಮಾಪ್ತವಾಯಿತು.

---

# ತದವ್ಯಕ್ತಾಧಿಕರಣವು.

**'ಓಂ ತದವ್ಯಕ್ತಮಾಹ ಹಿ ಓಂ'** ॥ ಸೂ. ೨೩ ॥

ಆ ಬ್ರಹ್ಮನು ಅವ್ಯಕ್ತನು. ಏಕೆಂದರೆ— **'ಅರೂಪಮಕ್ಷರಂ ಬ್ರಹ್ಮ ಸದಾವ್ಯಕ್ತಂ ಚ ನಿಷ್ಕಲಂ'** ಎನ್ನುವ ಶ್ರುತಿಯು ಅವ್ಯಕ್ತತ್ವವನ್ನು ಹೇಳುತ್ತದೆ. ॥ ೨೩ ॥

**'ಓಂ ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಂ ಓಂ'** ॥ ಸೂ. ೨೪ ॥

ಭಕ್ತಿಯಿಲ್ಲದೆ ಪೂಜಿಸಿದರೂ ಆ ಬ್ರಹ್ಮನು ವ್ಯಕ್ತನಾಗುವುದಿಲ್ಲ. ಅವ್ಯಕ್ತತ್ವವು ಜ್ಞಾನಿಗಳ ಪ್ರತ್ಯಕ್ಷದಿಂದಲೂ ಸೂಕ್ಷ್ಮತ್ವಾನುಮಾನದಿಂದಲೂ ಸಿದ್ಧವಾಗಿದೆ. ॥ ೨೪ ॥

**'ಓಂ ಪ್ರಕಾಶವಚ್ಚಾವೈಶೇಷ್ಯಂ ಓಂ'** ॥ ಸೂ. ೨೫ ॥

ಅಗ್ನ್ಯಾದಿಗಳಂತೆಯೋ ಆ ಬ್ರಹ್ಮನಿಗೆ ಸ್ಥೂಲತ್ವ, ಸೂಕ್ಷ್ಮತ್ವರೂಪ ವಿಶೇಷವಿಲ್ಲ. ಅವ್ಯಕ್ತನೇ. ॥ ಸೂ. ೨೫ ॥

**'ಓಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ಓಂ'** ॥ ಸೂ. ೨೬ ।

ವಿಷಯಭೂತನಾದ ಬ್ರಹ್ಮನಲ್ಲಿ ಶ್ರವಣಾದಿಗಳಿಗೆ ಅಭ್ಯಾಸವಿದ್ದ ಪ್ರಯುಕ್ತ ಅಂದರೆ ಬ್ರಹ್ಮ ವಿಷಯಕ ಶ್ರವಣಾದಿಗಳನ್ನು ಮತ್ತೂ ಮತ್ತೂ ಮಾಡೋಣದರಿಂದ ಬ್ರಹ್ಮನ ಅಪರೋಕ್ಷ ಜ್ಞಾನವಾಗುತ್ತದೆ. ॥ ೨೬ ॥

**'ಓಂ ಅತೋಽನಂತೇನ ತಥಾ ಹಿ ಲಿಂಗಂ ಓಂ'** ॥ ಸೂ. ೨೭ ॥

ಅವ್ಯಕ್ತನಾದ ಬ್ರಹ್ಮನು ಅಪರಿಚ್ಛಿನ್ನಶಕ್ತಿಯುಳ್ಳ ಈಶ್ವರನ ಪ್ರಸಾದದಿಂದ ಅಪರೋಕ್ಷ ವಿಷಯನಾಗುತ್ತಾನೆ. ಅವ್ಯಕ್ತತ್ವವಿಷಯದಲ್ಲಿಯೂ, ಪ್ರತ್ಯಕ್ಷತ್ವವಿಷಯದಲ್ಲಿಯೂ ಪ್ರಮಾಣ ವಿದೆ.' **ಭೂಯಶ್ಚಾಂತೇ ವಿಶ್ವಮಾಯಾ ನಿವೃತ್ತಿಃ'** ಎನ್ನುವ ಲಿಂಗವೂ ಇದೆ. ॥ ಸೂ. ೨೩ ॥ ॥ ೨೪ ॥ ೨೫ ॥ ೨೬ ॥ ೨೭ ॥ ಅಧಿ ॥ ೧೪ ॥

**ತದವ್ಯಕ್ತಾಧಿಕರಣವು ಸಮಾಪ್ತವಾಯಿತು.**

---

# ಅಹಿಕುಂಡಲಾಧಿಕರಣವು.

**"ಓಂ ಉಭಯವ್ಯಪದೇಶಾತ್ತ್ವಹಿಕುಂಡಲವತ್ ಓಂ"** ॥ ಸೂ. ೨೮ ।

ಬ್ರಹ್ಮನಿಗೆ ಆನಂದಾದಿ ಗುಣಸ್ವರೂಪತ್ವವೂ, ಆನಂದಾದಿಗುಣ ವೈಶಿಷ್ಟ್ಯವೂ ಕೂಡುತ್ತದೆ. ಆನಂದಾದಿ ಧರ್ಮ ರೂಪದಿಂದಲೂ, ಆನಂದ್ಯಾದಿ ಧರ್ಮಿರೂಪದಿಂದಲೂ **'ಸ ಏಷ ಪರಮ ಆನಂದಃ' 'ಆನಂದಂ ಬ್ರಹ್ಮಣಃ'** ಎನ್ನುವ ಶ್ರುತಿಯಲ್ಲಿ ವ್ಯವಹಾರವಿದೆ. ಉಭಯ ವ್ಯವಹಾ

ಪ್ರಯೋಜಕವಾದ ವಿಶೇಷಾಖ್ಯ ಧರ್ಮವೂ ಇದೆ. ಸರ್ಪನಿಗೆ ಕುಂಡಲರೂಪಧರ್ಮ, ಕುಂಡಲಿ ರೂಪಧರ್ಮಿಸ್ವರೂಪದಂತೆ.

**'ಓಂ ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ ಓಂ'** ‖ ಸೂ. ೨೯ ‖

ಆ ಬ್ರಹ್ಮನಿಗೆ ಗುಣರೂಪತ್ವವೂ, ಗುಣಿರೂಪತ್ವವೂ ಕೂಡುತ್ತದೆ. ಪ್ರಕಾಶಕ್ಕೆ ಆಶ್ರಯ ಭೂತವಾದ ಸೂರ್ಯಬಿಂಬಕ್ಕೆ ಪ್ರಕಾಶತ್ವ, ಪ್ರಕಾಶಿತ್ವ ಎರಡರಂತೆ, ತೇಜೋರೂಪತ್ವವಿದ್ದ ಪ್ರಯುಕ್ತ ‖ ೨೯ ‖

**'ಓಂ ಪೂರ್ವವದ್ವಾ ಓಂ'** ‖ ಸೂ. ೩೦ ‖

ಆ ಬ್ರಹ್ಮನಿಗೆ **'ಆನಂದಂ ಬ್ರಹ್ಮಣಃ'** ಇತ್ಯಾದಿಗಳಲ್ಲಿ ವಿಶೇಷಣತ್ವವೂ, ವಿಶೇಷ್ಯತ್ವವೂ ಕೂಡುತ್ತದೆ. 'ಪೂರ್ವಃ ಕಾಲಃ' ಇತ್ಯಾದಿಗಳಲ್ಲಿ ಒಂದೇ ಕಾಲಕ್ಕೆ ವಿಶೇಷಣತ್ವವೂ, ವಿಶೇಷ್ಯತ್ವವೂ ಇದ್ದಂತೆಯೇ ‖ ೩೦ ‖

**'ಓಂ ಪ್ರತಿಷೇಧಾಚ್ಚ ಓಂ'** ‖ ಸೂ. ೩೧ ‖

**'ನೇಹ ನಾನಾಸ್ತಿ ಕಿಂಚನ'** ಇತ್ಯಾದಿ ಶ್ರುತಿಯಲ್ಲಿ ಗುಣ್ಯಾದಿಗಳು ಭಿನ್ನವಾದುದು ಇಲ್ಲ. ಗುಣಗುಣ್ಯಾದಿಗಳಿಗೆ ಭೇದವು ನಿಷಿದ್ಧವಾಗಿದೆ. ‖ ಸೂ. ‖ ೨೮ ‖ ೨೯ ‖ ೩೦ ‖ ೩೧ ‖ ಅಧಿ. ‖ ೧೫ ‖

**ಅಹಿಕುಂಡಲಾಧಿಕರಣವು ಸಮಾಪ್ತವಾಯಿತು.**

---

## ಪರಮತೋಽಧಿಕರಣವು.

**'ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ'** ‖ ಸೂ. ೩೨ ‖

ಬ್ರಹ್ಮನ ಆನಂದಾದಿ ಗುಣಗಳ ಸಮುದಾಯವು ಲೌಕಿಕಾನಂದಾದಿಗಳ ದೆಶೆಯಿಂದ ವಿಲಕ್ಷಣವು, **'ಏಷ ಸೇತುರ್ವಿಧೃತಿಃ'** ಎಂದು ಆನಂದಾದಿಗಳಿಗೆ ಸೇತುತ್ವವು ವ್ಯಪದಿಷ್ಟವಾಗಿದೆ. **'ಯತೋ ವಾಚಃ'** ಎನ್ನುವುದರಿಂದ ಪೂರ್ಣತ್ವವನ್ನು ಹೇಳಿಯದೆ. 'ಏತಸ್ಯೈವಾನಂದಸ್ಯ' ಎಂದು ಜೀವಾನಂದದಿಂದ ಬಿಂಬಪ್ರತಿಬಿಂಬಭಾವ ರೂಪವಾದ ಸಂಬಂಧವನ್ನು ಹೇಳಿಯದೆ. **'ಅನ್ಯ ಜ್ಞಾನಂ ತು ಜೀವಾನಾಂ'** ಎಂದು ಜೀವಾನಂದಾದಿಗಳಿಂದ ಭೇದವನ್ನು ಹೇಳಿಯದೆ.

**'ಓಂ ದರ್ಶನಾತ್ ಓಂ'** ‖ ಸೂ. ೩೩ ‖

ಲೌಕಿಕಾನಂದಾದಿಗಳು ಮನೋವಾಗ್ಗೋಚರಗಳಾಗಿರುವುದರಿಂದಲೂ, ಬ್ರಹ್ಮನ ಗುಣ ಸಮುದಾಯವು ಮನೋವಚನಗಳಿಗೆ ಅಗೋಚರವಾಗಿರುವುದರಿಂದಲೂ, ಬ್ರಹ್ಮನ ಗುಣಸಮುದಾಯವು ಲೌಕಿಕಾನಂದಾದಿಗಳ ದೆಶೆಯಿಂದ ವಿಲಕ್ಷಣವು ‖ ೩೩ ‖

'ಓಂ ಬುದ್ಧ್ಯರ್ಥಃ ಪಾದವತ್ ಓಂ' ಸೂ ೩೪ ॥

ಹೇಗೆ ಲೋಕಪಾದ ವಿಲಕ್ಷಣಗಳಾದ ಭೂತಗಳಲ್ಲಿ 'ಪಾದೋಽಸ್ಯ ವಿಶ್ವಾ ಭೂತಾನಿ' ಎಂದು ಪಾದ ಎನ್ನುವ ಪದಪ್ರಯೋಗವು ಭೂತಗಳಿಗೆ ಈಶಾಂಶತ್ವವನ್ನು ತಿಳಿಸಿ ಕೊಡುವುದಕ್ಕಾಗಿ ಆಗುತ್ತದೋ, ಹಾಗೆಯೇ ಅಲೌಕಿಕವಾದ ಆನಂದಾದಿಯಲ್ಲಿಯೂ, ಆನಂದಾದಿಪದಪ್ರಯೋಗವು ಅನುಕೂಲ ವೇದ್ಯತ್ವಾದಿಗಳನ್ನು ತಿಳಿಸಿಕೊಡುತ್ತದೆ ॥ ಸೂ. ೩೨ ॥ ೩೩ ॥ ೩೪ ॥ಅಧಿ ೧೬ ॥

**ಪರವುತೋಽಧಿಕರಣವು ಸಮಾಪ್ತವಾಯಿತು.**

---

# ಸ್ಥಾನವಿಶೇಷಾಧಿಕರಣವು.

'ಓಂ ಸ್ಥಾನವಿಶೇಷಾತ್ಪ್ರಕಾಶಾದಿವತ್ ಓಂ' ॥ ಸೂ ॥ ೩೫ ॥

ಹೇಗೆ ಸೂರ್ಯಾದಿಪ್ರತಿಬಿಂಬದಲ್ಲಿ ಸೂರ್ಯಕಾಂತಾದಿಸ್ಥಾನವಿಶೇಷದೆಶೆಯಿಂದ ಅಗ್ನಿ ಜನಕತ್ವ ಮೊದಲಾದ ವೈಚಿತ್ರ್ಯವಿದೆಯೋ ಹಾಗೆಯೇ ಬ್ರಹ್ಮಾದಿಸ್ಥಾನಗಳಲ್ಲಿರತಕ್ಕ ಅನಾದಿಯಾದ ಭಕ್ತಿಮೊದಲಾದಗುಣಗಳ ವಿಶೇಷದೆಶೆಯಿಂದ ಪ್ರತಿಬಿಂಬದಲ್ಲಿಯೂ ವೈಚಿತ್ರ್ಯವು ಕೂಡುವುದರಿಂದ ಬ್ರಹ್ಮಾದ್ಯಾನಂದಾದಿಗಳು ಈಶಾನಂದಾದಿಗಳಿಗೆ ಪ್ರತಿಬಿಂಬವು. ॥ ಸೂ. ೩೫ ॥

ಬಿಂಬಭೂತವಾದ ಭಗವದಾನಂದದಲ್ಲಿ ವೈಚಿತ್ರ್ಯ (ತಾರತಮ್ಯ) ವಿಲ್ಲದಿರುವುದರಿಂದ ಭಗವಂತನ ಆನಂದಪ್ರತಿಬಿಂಬ ಎಂದು ಅಂಗೀಕರಿಸಿ ಬ್ರಹ್ಮಾದಿಗಳ ಆನಂದದಲ್ಲಿ ತಾರತಮ್ಯವು ಕೂಡಲಾರದು. ಬಿಂಬದಲ್ಲಿ ತಾರತಮ್ಯವಿಲ್ಲವೆಂದು 'ನ ಸ್ಥಾನತೋಽಪಿ' ಎನ್ನುವಲ್ಲಿ ಹೇಳಿಯದೆ. ಅಥವಾ 'ಬ್ರಹ್ಮಾದ್ಯಾನಂದೋ ಭಗವಾನಂದ ಪ್ರತಿಬಿಂಬೋ ನ ಪರಸ್ಪರಂ ವಿಚಿತ್ರತ್ವಾತ್' ಬ್ರಹ್ಮಾದಿಗಳ ಆನಂದವು ಭಗವಂತನ ಆನಂದಕ್ಕೆ ಪ್ರತಿಬಿಂಬವಲ್ಲ, ಪರಸ್ಪರವಾಗಿ ವಿಚಿತ್ರವಾದ ಪ್ರಯುಕ್ತ, ಬಿಂಬಾಭಿಮತದಲ್ಲಿ ವೈಚಿತ್ರ್ಯವಿಲ್ಲವೆಂದರೆ— ಇದನ್ನು ವಿಶದೀಕರಿಸುತ್ತಾರೆ.—

**ಮೂ ॥ ಪ್ರತಿಬಿಂಬವದಪ್ಯೇಷಾ ಮಾನಂದೋಽನ್ಯಗುಣಾ ಯಥಾ ॥ ೧೬೩ ॥**

ಅ ॥ ಯಥಾ=ಹೇಗೆ, ಅನ್ಯಗುಣಾಃ = ಬೇರೆಗುಣಗಳೋ ಹಾಗೆಯೇ, ಏಷಾಂ = ಈ ಬ್ರಹ್ಮಾದಿಗಳ, ಆನಂದಃ=ಆನಂದವು, ಪ್ರತಿಬಿಂಬವತ್=ಪ್ರಸಿದ್ಧ ಪ್ರತಿಬಿಂಬಗಳಿಂದ ತುಲ್ಯವಾಗಿರುತ್ತದೆ. ಅಂದರೆ ಭಗವದಾನಂದ ಪ್ರತಿಬಿಂಬವಾಗುತ್ತದೆ. ಆದರೂ ಪರಸ್ಪರ ವಿಚಿತ್ರವು ಆಗುತ್ತದೆ.

ತಾ ॥ (1) ಯದ್ಯಪಿ ಈ ಬ್ರಹ್ಮಾದಿಗಳ ಆನಂದವು ಭಗವಂತನ ಆನಂದಕ್ಕೆ ಪ್ರತಿಬಿಂಬವಾಗುತ್ತದೆ. ಆದಾಗ್ಯೂ ಸಾದನಭೂತಗಳಾದ ಉಪಾಧಿಗುಣಗಳಾದ ಭಕ್ತ್ಯಾದಿಗ ವೈಚಿತ್ರ್ಯಾನುಸಾರವಾಗಿ ಪರಸ್ಪರವಾಗಿ ವಿಚಿತ್ರವಾಗುತ್ತದೆ. ಹೇಗೆಂದರೆ— ಸೂರ್ಯಕಾಂತ ಜಲಾದಿಗಳಲ್ಲಿರತಕ್ಕ ಸೂರ್ಯಾದಿ ಪ್ರತಿಬಿಂಬಗಳಿಗೆ ಸೂರ್ಯಾದಿ ಬಿಂಬದಲ್ಲಿ ವೈಚಿತ್ರ್ಯವಿಲ್ಲವಾದರೂ ಸೂರ್ಯಕಾಂತಾದಿ ಸ್ಥಾನಗುಣ ವೈಚಿತ್ರ್ಯದಿಂದ ವೈಚಿತ್ರ್ಯವಿದೆಯೋ, ಹಾಗೆಯೆ ಸ್ಥಾನಗುಣ ವೈಚಿತ್ರ್ಯದಿಂದ ವೈಚಿತ್ರ್ಯವು ಕೂಡುತ್ತದೆ. ॥ ೧೩೪ ॥

"ಓಂ ಉಪಪತ್ತೇಶ್ಚ ಓಂ" ॥ ಸೂ. ೩೬ ॥

ಬಿಂಬಭೂತನಾದ ಈಶ್ವರನ ಸಾಮರ್ಥ್ಯದಿಂದಲೇ ಬ್ರಹ್ಮಾದ್ಯಾನಂದಾದಿಗಳಲ್ಲಿ ವೈಚಿತ್ರ್ಯವು ಕೂಡುವಪ್ರಯುಕ್ತ ಬ್ರಹ್ಮಾದಿಗಳ ಆನಂದಾದಿಗಳು ಈಶಾನಂದಪ್ರತಿಬಿಂಬಗಳು ॥ ಸೂ ॥ ೩೬ ॥

ವೈಚಿತ್ರ್ಯವಿಷಯದಲ್ಲಿ ಹೇತ್ವಂತರವನ್ನು ಹೇಳುತ್ತಾರೆ—

ಮೂ ॥ ನಾರಾಯಣಗುಣಾಧೀನಶ್ಚಾತ್ಯಲ್ಪಸ್ತದಪೇಕ್ಷಯಾ ।
ತಸ್ಮಾದ್ಭಿನ್ನಶ್ಚ ಸತತಮನ್ಯಜ್ಜ್ಞಾನಂ ಪರಸ್ಯ ಚ ।
ಅನ್ಯಜ್ಜ್ಞಾನಂ ತು ಜೀವಾನಾಂ ಅನ್ಯ ಆನಂದ ಈಶತಾ ॥ ೧೬೪ ॥
ಮುಖ್ಯೇಶತಾ ಪರೇಶಸ್ಯ ಗೌಣೀ ಜೀವಸ್ಯ ಸಾ ಯತಃ ॥
ಇತಿ ಶ್ರುತೇಃ [ಸೃಷ್ಟಿನಾಶೌ ತದಧೀನಾವಿತೀರಿತೇ] ॥ ೧೬೫ ॥

ಅ ॥ (ಯದ್ಯಪಿ ಈ ಅಧಿಕರಣವನ್ನು ಪರಮತಾಧಿಕರಣದ ಮೇಲೆಯೇ ಹೇಳಬೇಕಿತ್ತು. ಆದರೂಕೂಡ ಅದರಿಂದ ಹೇಗೆ ಸಂಗತಿಯಿದೆಯೋ ಹಾಗೆಯೇ ೧೨ನೇ ಅಧಿಕರಣದಿಂದಲೂ ಸಂಗತಿಯಿದ್ದಪ್ರಯುಕ್ತ ಇಲ್ಲಿ ವ್ಯಾಖ್ಯಾನ ಮಾಡಿರುತ್ತಾರೆ.) (ಬ್ರಹ್ಮಾದಿಗಳ ಆನಂದವು) ನಾರಾಯಣಗುಣಾಧೀನಃ = ಶ್ರೀ ನಾರಾಯಣನ ಆನಂದದ ಅಧೀನವಾದುದು, ಚ = ಶ್ರೀ ಹರಿಯ ಆನಂದಸದೃಶವೂ ಆಗಿದೆ. (ಬಿಂಬದಿಂದ ಅಭಿನ್ನವೇ ಏಕೆ ಆಗಲಾರದೆಂದರೆ) ಚ = ಯಾವ ಕಾರಣದೆಶೆಯಿಂದ, ಈಶ್ವರನ ಆನಂದಕ್ಕಿಂತ, ಅತ್ಯಲ್ಪಃ = ಅತ್ಯಂತ ಅಲ್ಪವಾದುದೋ, ತಸ್ಮಾತ್ = ಆದಕಾರಣ, ಸತತಂ = ನಿರಂತರದಲ್ಲಿಯೂ, ಭಿನ್ನಃ = ಭಿನ್ನವಾದುದು, (ಈಶ್ವರನ ಆನಂದಕ್ಕಿಂತ ಜೀವರ ಆನಂದಕ್ಕೆ ಅತ್ಯಲ್ಪತ್ವವು ಯಾವುದರಿಂದ ಎನ್ನುವ ಆಕಾಂಕ್ಷೆಯನ್ನು ಪರಿಹರಿಸುತ್ತಾ ಈ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ.) ಪರಸ್ಯ ಚ = ಶ್ರೀ ಹರಿಯ, ಜ್ಞಾನಂ = ಜ್ಞಾನವು, ಅನ್ಯತ್ = ವಿಲಕ್ಷಣವು. ಜೀವಾನಾಂ = ಜೀವರ, ಜ್ಞಾನಂ ತು = ಜ್ಞಾನವಾದರೂ, ಅನ್ಯತ್ = ವಿಲಕ್ಷಣವು. ಆನಂದಃ = ಆನಂದವು, ಅನ್ಯಃ = ವಿಲಕ್ಷಣವಾದುದು, ಈಶತಾ = ಈಶ(ನಿಯಾಮಕ)ತ್ವವೂ, ವಿಲಕ್ಷಣವಾದುದು. ಯತಃ = ಯಾವಕಾರಣದ್ದೆಶೆಯಿಂದ, ಪರೇಶಸ್ಯ = ಶ್ರೀ ಹರಿಗೆ, ಈಶತಾ = ಈಶತ್ವವು, ಮುಖ್ಯಾ = ಮುಖ್ಯವಾದುದು, ಜೀವಸ್ಯ = ಜೀವನಿಗೆ, ಸಾ = ಈಶತ್ವವು, ಗೌಣೀ = ಅಪ್ರಧಾನವಾದುದು, ಇತಿ = ಹೀಗೆ, ಶ್ರುತೇಃ = ಶ್ರುತಿಯದ್ದೆಶೆಯಿಂದ (ಹಿಂದಿನ ಅರ್ಥವು ಸಿದ್ಧಿಸುತ್ತದೆ.) ॥ ೧೬೪ ॥ ೧೬೫ ॥ ಸೂ. ೩೫ ॥ ೩೬ ॥ ಅ. ೧೭ ॥

ಸ್ಥಾನವಿಶೇಷಾಧಿಕರಣವು ಸಮಾಪ್ತವಾಯಿತು.

---

## ಪ್ರಕೃತೈತಾವತ್ತ್ವಾಧಿಕರಣವು.

'ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ' ॥ ಸೂ. ॥ ೨೨ ॥

(ಸೂತ್ರಾರ್ಥವು ಮೊದಲೇ ಉಕ್ತವಾಗಿದೆ.)

‘ಓಂ ಬುದ್ಧ್ಯರ್ಥಃ ಪಾದವತ್ ಓಂ’ ಸೂ ೩೪ ॥

ಹೇಗೆ ಲೋಕಪಾದ ವಿಲಕ್ಷಣಗಳಾದ ಭೂತಗಳಲ್ಲಿ ‘ಪಾದೋಽಸ್ಯ ವಿಶ್ವಾ ಭೂತಾನಿ’ ಎಂದು ಪಾದ ಎನ್ನುವ ಪದಪ್ರಯೋಗವು ಭೂತಗಳಿಗೆ ಈಶಾಂಶತ್ವವನ್ನು ತಿಳಿಸಿ ಕೊಡುವುದಕ್ಕಾಗಿ ಆಗುತ್ತದೋ, ಹಾಗೆಯೇ ಅಲೌಕಿಕವಾದ ಆನಂದಾದಿಯಲ್ಲಿಯೂ, ಆನಂದಾ ದಿಪದಪ್ರಯೋಗವು ಅನುಕೂಲ ವೇದ್ಯತ್ವಾದಿಗಳನ್ನು ತಿಳಿಸಿಕೊಡುತ್ತದೆ ॥ ಸೂ. ೩೨ ॥ ೩೩ ॥ ೩೪ ॥ಅಧಿ ೧೬ ॥

**ಪರಮತೋಽಧಿಕರಣವು ಸಮಾಪ್ತವಾಯಿತು.**

---

## ಸ್ಥಾನವಿಶೇಷಾಧಿಕರಣವು.

‘ಓಂ ಸ್ಥಾನವಿಶೇಷಾತ್ಪ್ರಕಾಶಾದಿವತ್ ಓಂ’ ॥ ಸೂ ॥ ೩೫ ॥

ಹೇಗೆ ಸೂರ್ಯಾದಿಪ್ರತಿಬಿಂಬದಲ್ಲಿ ಸೂರ್ಯಕಾಂತಾದಿಸ್ಥಾನವಿಶೇಷದೆಶೆಯಿಂದ ಅಗ್ನಿ ಜನಕತ್ವ ಮೊದಲಾದ ವೈಚಿತ್ರ್ಯವಿದೆಯೋ ಹಾಗೆಯೇ ಬ್ರಹ್ಮಾದಿಸ್ಥಾನಗಳಲ್ಲಿರತಕ್ಕ ಅನಾದಿಯಾದ ಭಕ್ತಿಮೊದಲಾದಗುಣಗಳ ವಿಶೇಷದೆಶೆಯಿಂದ ಪ್ರತಿಬಿಂಬದಲ್ಲಿಯೂ ವೈಚಿತ್ರ್ಯವು ಕೂಡುವುದರಿಂದ ಬ್ರಹ್ಮಾದ್ಯಾನಂದಾದಿಗಳು ಈಶಾನಂದಾದಿಗಳಿಗೆ ಪ್ರತಿಬಿಂಬವು. ॥ ಸೂ. ೩೫ ॥

ಬಿಂಬಭೂತವಾದ ಭಗವದಾನಂದದಲ್ಲಿ ವೈಚಿತ್ರ್ಯ (ತಾರತಮ್ಯ) ವಿಲ್ಲದಿರುವುದರಿಂದ ಭಗವಂತನ ಆನಂದಪ್ರತಿಬಿಂಬ ಎಂದು ಅಂಗೀಕರಿಸಿ ಬ್ರಹ್ಮಾದಿಗಳ ಆನಂದದಲ್ಲಿ ತಾರತಮ್ಯವು ಕೂಡಲಾರದು. ಬಿಂಬದಲ್ಲಿ ತಾರತಮ್ಯವಿಲ್ಲವೆಂದು ‘ನ ಸ್ಥಾನತೋಽಪಿ’ ಎನ್ನುವಲ್ಲಿ ಹೇಳಿಯದೆ. ಅಥವಾ ‘ಬ್ರಹ್ಮಾದ್ಯಾನಂದೋ ಭಗವಾನಂದ ಪ್ರತಿಬಿಂಬೋ ನ ಪರಸ್ಪರಂ ವಿಚಿತ್ರತ್ವಾತ್’ ಬ್ರಹ್ಮಾದಿಗಳ ಆನಂದವು ಭಗವಂತನ ಆನಂದಕ್ಕೆ ಪ್ರತಿಬಿಂಬವಲ್ಲ, ಪರಸ್ಪರವಾಗಿ ವಿಚಿತ್ರವಾದ ಪ್ರಯುಕ್ತ, ಬಿಂಬಾಭಿಮತದಲ್ಲಿ ವೈಚಿತ್ರ್ಯವಿಲ್ಲವೆಂದರೆ— ಇದನ್ನು ವಿಶದೀಕರಿಸುತ್ತಾರೆ.—

**ಮೂ ॥ ಪ್ರತಿಬಿಂಬವದಪ್ಯೇಷಾ ಮಾನಂದೋಽನ್ಯಗುಣಾ ಯಥಾ ॥ ೧೬೩ ॥**

ಅ ॥ ಯಥಾ=ಹೇಗೆ, ಅನ್ಯಗುಣಾಃ = ಬೇರೆಗುಣಗಳೋ ಹಾಗೆಯೇ, ಏಷಾಂ = ಈ ಬ್ರಹ್ಮಾದಿಗಳ, ಆನಂದಃ=ಆನಂದವು, ಪ್ರತಿಬಿಂಬವತ್=ಪ್ರಸಿದ್ಧ ಪ್ರತಿಬಿಂಬಗಳಿಂದ ತುಲ್ಯ ವಾಗಿರುತ್ತದೆ. ಅಂದರೆ ಭಗವದಾನಂದ ಪ್ರತಿಬಿಂಬವಾಗುತ್ತದೆ. ಆದರೂ ಪರಸ್ಪರ ವಿಚಿತ್ರವು ಆಗುತ್ತದೆ.

ತಾ ॥ (1) ಯದ್ಯಪಿ ಈ ಬ್ರಹ್ಮಾದಿಗಳ ಆನಂದವು ಭಗವಂತನ ಆನಂದಕ್ಕೆ ಪ್ರತಿಬಿಂ ವಾಗುತ್ತದೆ. ಆದಾಗ್ಯೂ ಸಾಧನಭೂತಗಳಾದ ಉಪಾಧಿಗುಣಗಳಾದ ಭಕ್ತ್ಯಾದಿಗ ವೈಚಿತ್ರ್ಯಾನುಸಾರವಾಗಿ ಪರಸ್ಪರವಾಗಿ ವಿಚಿತ್ರವಾಗುತ್ತದೆ. ಹೇಗೆಂದರೆ— ಸೂರ್ಯಕಾಂತ ಜಲಾದಿಗಳಲ್ಲಿರತಕ್ಕ ಸೂರ್ಯಾದಿ ಪ್ರತಿಬಿಂಬಗಳಿಗೆ ಸೂರ್ಯಾದಿ ಬಿಂಬದಲ್ಲಿ ವೈಚಿತ್ರ್ಯವಿ ವಾದರೂ ಸೂರ್ಯಕಾಂತಾದಿ ಸ್ಥಾನಗುಣ ವೈಚಿತ್ರ್ಯದಿಂದ ವೈಚಿತ್ರ್ಯವಿದೆಯೋ, ಹಾಗೆಯೆ ಸ್ಥಾನಗುಣ ವೈಚಿತ್ರ್ಯದಿಂದ ವೈಚಿತ್ರ್ಯವು ಕೂಡುತ್ತದೆ. ॥ ೧೬೪ ॥

"ಓಂ ಉಪಪತ್ತೇಶ್ಚ ಓಂ" ॥ ಸೂ. ೩೬ ॥

ಬಿಂಬಭೂತನಾದ ಈಶ್ವರನ ಸಾಮರ್ಥ್ಯದಿಂದಲೇ ಬ್ರಹ್ಮಾದ್ಯಾನಂದಾದಿಗಳಲ್ಲಿ ವೈಚಿತ್ರ್ಯವು ಕೂಡುವಪ್ರಯುಕ್ತ ಬ್ರಹ್ಮಾದಿಗಳ ಆನಂದಾದಿಗಳು ಈಶಾನಂದಪ್ರತಿಬಿಂಬಗಳು ॥ ಸೂ ॥ ೩೬ ॥

ವೈಚಿತ್ರ್ಯವಿಷಯದಲ್ಲಿ ಹೇತ್ವಂತರವನ್ನು ಹೇಳುತ್ತಾರೆ—

ಮೂ ॥ ನಾರಾಯಣಗುಣಾಧೀನಶ್ಚಾತ್ಯಲ್ಪಸ್ತದಪೇಕ್ಷಯಾ ।
ತಸ್ಮಾದ್ಭಿನ್ನಶ್ಚ ಸತತಮನ್ಯಜ್ಜ್ಞಾನಂ ಪರಸ್ಯ ಚ ।
ಅನ್ಯಜ್ಜ್ಞಾನಂ ತು ಜೀವಾನಾಂ ಅನ್ಯ ಆನಂದ ಈಶತಾ ॥ ೧೬೪ ॥
ಮುಖ್ಯೇಶತಾ ಪರೇಶಸ್ಯ ಗೌಣೀ ಜೀವಸ್ಯ ಸಾ ಯತಃ ॥
ಇತಿ ಶ್ರುತೇಃ [ಸೃಷ್ಟಿನಾಶೌ ತದಧೀನಾವಿತೀರಿತೇ] ॥ ೧೬೫ ॥

ಅ ॥ (ಯದ್ಯಪಿ ಈ ಅಧಿಕರಣವನ್ನು ಪರಮತಾಧಿಕರಣದ ಮೇಲೆಯೇ ಹೇಳಬೇಕಿತ್ತು. ಆದರೂಕೂಡ ಅದರಿಂದ ಹೇಗೆ ಸಂಗತಿಯಿದೆಯೋ ಹಾಗೆಯೇ ೧೨ನೇ ಅಧಿಕರಣದಿಂದಲೂ ಸಂಗತಿಯಿದ್ದಪ್ರಯುಕ್ತ ಇಲ್ಲಿ ವ್ಯಾಖ್ಯಾನ ಮಾಡಿರುತ್ತಾರೆ.) (ಬ್ರಹ್ಮಾದಿಗಳ ಆನಂದವು) ನಾರಾಯಣಗುಣಾಧೀನಃ = ಶ್ರೀ ನಾರಾಯಣನ ಆನಂದದ ಅಧೀನವಾದುದು, ಚ = ಶ್ರೀ ಹರಿಯ ಆನಂದಸದೃಶವೂ ಆಗಿದೆ. (ಬಿಂಬದಿಂದ ಅಭಿನ್ನವೇ ಏಕೆ ಆಗಲಾರದೆಂದರೆ) ಚ = ಯಾವ ಕಾರಣದೆಶೆಯಿಂದ, ಈಶ್ವರನ ಆನಂದಕ್ಕಿಂತ, ಅತ್ಯಲ್ಪಃ = ಅತ್ಯಂತ ಅಲ್ಪವಾದುದೋ, ತಸ್ಮಾತ್ = ಆದಕಾರಣ, ಸತತಂ = ನಿರಂತರದಲ್ಲಿಯೂ, ಭಿನ್ನಃ = ಭಿನ್ನವಾದುದು, (ಈಶ್ವರನ ಆನಂದಕ್ಕಿಂತ ಜೀವರ ಆನಂದಕ್ಕೆ ಅತ್ಯಲ್ಪತ್ವವು ಯಾವುದರಿಂದ ಎನ್ನುವ ಆಕಾಂಕ್ಷೆಯನ್ನು ಪರಿಹರಿಸುತ್ತಾ ಈ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ.) ಪರಸ್ಯ ಚ = ಶ್ರೀ ಹರಿಯ, ಜ್ಞಾನಂ = ಜ್ಞಾನವು, ಅನ್ಯತ್ = ವಿಲಕ್ಷಣವು. ಜೀವಾನಾಂ = ಜೀವರ, ಜ್ಞಾನಂ ತು = ಜ್ಞಾನವಾದರೂ, ಅನ್ಯತ್ = ವಿಲಕ್ಷಣವು. ಆನಂದಃ = ಆನಂದವು, ಅನ್ಯಃ = ವಿಲಕ್ಷಣವಾದುದು, ಈಶತಾ = ಈಶ(ನಿಯಾಮಕ)ತ್ವವೂ, ವಿಲಕ್ಷಣವಾದುದು. ಯತಃ = ಯಾವಕಾರಣದ್ದೆಶೆಯಿಂದ, ಪರೇಶಸ್ಯ = ಶ್ರೀ ಹರಿಗೆ, ಈಶತಾ = ಈಶತ್ವವು, ಮುಖ್ಯಾ = ಮುಖ್ಯವಾದುದು, ಜೀವಸ್ಯ = ಜೀವನಿಗೆ, ಸಾ = ಈಶತ್ವವು, ಗೌಣೀ = ಅಪ್ರಧಾನವಾದುದು, ಇತಿ = ಹೀಗೆ, ಶ್ರುತೇಃ = ಶ್ರುತಿಯದ್ದೆಶೆಯಿಂದ (ಹಿಂದಿನ ಅರ್ಥವು ಸಿದ್ಧಿಸುತ್ತದೆ.) ॥ ೧೬೪ ॥ ೧೬೫ ॥ ಸೂ. ೩೫ ॥ ೩೬ ॥ ಅ. ೧೭ ॥

ಸ್ಥಾನವಿಶೇಷಾಧಿಕರಣವು ಸಮಾಪ್ತವಾಯಿತು.

---

## ಪ್ರಕೃತೈತಾವತ್ತ್ವಾಧಿಕರಣವು.

'ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ' ॥ ಸೂ. ॥ ೨೨ ॥

(ಸೂತ್ರಾರ್ಥವು ಮೊದಲೇ ಉಕ್ತವಾಗಿದೆ.)

ಶ್ರೀ ಹರಿಗೆ ಸೃಷ್ಟಿಸಂಹಾರ ಕರ್ತೃತ್ವಮಾತ್ರವೇ ಇರುವುದು. ಪಾಲಕತ್ವವು ಇಲ್ಲ. ಅದು ಸ್ವತಃ ಸಿದ್ಧವಾಗಿಯದೆಂದು ಭಾಷ್ಯದಲ್ಲಿ ಮಾಡಿದ ಪೂರ್ವಪಕ್ಷವು ಅಯುಕ್ತವು. ಏಕೆಂದರೆ— ಅದೂ ಸ್ವಭಾವವಾದವನ್ನು ಆಶ್ರಯಿಸಿ ಪಾಲಕತ್ವವನ್ನು ಅಪಲಾಪಮಾಡಿದರೆ ಆ ನ್ಯಾಯವು ಸೃಷ್ಟಿಸಂಹಾರಗಳಲ್ಲಿಯೂ ಸಮವಾದಪ್ರಯುಕ್ತ ಸೃಷ್ಟಿಸಂಹಾರಕರ್ತೃತ್ವಾಂಗೀಕಾರವು ಅನುಪಪನ್ನವಾಗಬೇಕಾಗುವುದು. ಎಂದರೆ— ಪೂರ್ವಪಕ್ಷವನ್ನು ವಿಶದೀಕರಿಸುತ್ತಾರೆ—

**ಮೂ ॥ [ಇತಿ ಶ್ರುತೇಃ] ಸೃಷ್ಟಿನಾಶೌ ತದಧೀನಾವಿತೀರಿತೇ ।**
**ಸ್ವಭಾವತ್ವಾತ್ಸ್ಥಿತೇರ್ನೈತದಪೇಕ್ಷೇತಿ ನ ಯುಜ್ಯತೇ ॥**
**ಯತಃ ಸ್ವಭಾವೋऽಪ್ಯಖಿಲ ಈಶಾಯತ್ತೋऽಖಿಲಸ್ಯ ಚ ॥ ೧೬೬ ॥**

ಅ ॥ ಸೃಷ್ಟಿನಾಶೌ=ಸೃಷ್ಟಿನಾಶಗಳು, ತದಧೀನೌ=ಈಶ್ವರನ ಅಧೀನಗಳು, ಇತಿ= ಈ ಪ್ರಕಾರ, ಈರಿತೇ ಸತಿ=ಸಿದ್ಧಾಂತಿಯಿಂದ ಅಂಗೀಕರಿಸಲ್ಪಡುತಿರಲು, ಸ್ಥಿತೇಃ=ಸ್ಥಿತಿಗೆ, ಸ್ವಭಾವತ್ವಾತ್ = ಸ್ವಭಾವಸಿದ್ಧತ್ವವಿದ್ದಪ್ರಯುಕ್ತ, ಏತದಪೇಕ್ಷಾ = ಈಶ್ವರನ ಅಪೇಕ್ಷೆಯು, ನ=ಇಲ್ಲ. ಇತಿ=ಎಂದಾಶಂಕೆಯು, ನ ಯುಜ್ಯತೇ=ಕೂಡುವುದಿಲ್ಲ. ಯತಃ=ಯಾವ ಕಾರಣದಿಂದ, ಅಖಿಲಸ್ಯ=ಎಲ್ಲಾ ಪದಾರ್ಥಗಳ, ಅಖಿಲಃ=ಸಮಸ್ತವಾದ, ಸ್ವಭಾವೋऽಪಿ=ಸ್ವಭಾವವೂ ಕೂಡ, ಈಶಾಯತ್ತಃ=ಈಶ್ವರನ ಅಧೀನವಾದುದು.

ತಾ ॥ (1) ಈಶ್ವರನಿಗೆ ಪಾಲಕತ್ವವು ಕೂಡಲಾರದು. ಸ್ಥಿತಿಯು ಪಾಲಕತ್ವಕ್ಕೆ ಪ್ರಯೋಜನವು. ಸ್ಥಿತಿಯಾದರೂ ಸ್ವಭಾವಸಿದ್ಧವಾದ ಪ್ರಯುಕ್ತ ಈಶ್ವರನ ಅಪೇಕ್ಷೆಯಿಲ್ಲ. ಈಶ್ವರನೇ ಜಗತ್ತಿಗೆ ಸೃಷ್ಟಿಸಂಹಾರಗಳನ್ನು ಮಾಡತಕ್ಕವನು, ಮತ್ತೊಬ್ಬನಲ್ಲವೆಂದು ಅಂಗೀಕೃತವಾಗಿದೆ. ತಥಾ ಚ ಸೃಷ್ಟಿಸಿ ಸಂಹಾರಮಾಡದೆ ಇರುವ ತನಕ ಸ್ಥಿತಿಯು ಸ್ವಾಭಾವಿಕವಾಗಿಯೇ ಸಿದ್ಧವಾಗಿದೆ. ಪರರ ವ್ಯಾಪಾರವನ್ನು ಅಪೇಕ್ಷಿಸುವುದಿಲ್ಲ (2) ಸೃಷ್ಟಿ ಸಂಹಾರಗಳನ್ನು ಮಾಡತಕ್ಕವನು ಮತ್ತೊಬ್ಬನು ಇದ್ದರೆ ಆಗ ಉದಾಸೀನನಾದ ಪುರುಷನಿಗೆ ಸೃಷ್ಟಿಯಲ್ಲಿ ಪ್ರೇರಣಾ, ಸಾಮಗ್ರೀ ಸಂಪಾದನ ಮೊದಲಾದವುಗಳಾಗಿಯೂ, ಸಂಹಾರದಲ್ಲಿ ಪ್ರವೃತ್ತನಾದವನಿಗೆ ನಿವಾರಣಕ್ಕಾಗಿಯೂ, ಸ್ಥಿತಿಗೆ ಈಶ್ವರನ ಅಪೇಕ್ಷೆಯೂ ಕೂಡುತ್ತಿತ್ತು. ಅದೇವೇ ಇಲ್ಲ. ಆದಕಾರಣ ಸಂಹಾರದಲ್ಲಿ ಉದಾಸೀನತ್ವದಿಂದ ಅತಿರಿಕ್ತವಾದ ಪಾಲಕತ್ವವು ಕೂಡಲಾರದು. ಎಂದೇ ಇಲ್ಲಿ ಪೂರ್ವ ಪಕ್ಷವು. ಹೀಗಾದರೆ ಸಿದ್ಧಾಂತವೂ ಯುಕ್ತವಲ್ಲ. ಸ್ವಭಾವತ್ವಯುಕ್ತಿಯು ಪರಿಹೃತವಾಗಲಿಲ್ಲ. ಎಂದರೆ— ಎಲ್ಲಾ ಪದಾರ್ಥಗಳಿಗೆ ಪರರ ಅಪೇಕ್ಷೆಯಿಲ್ಲದೆ ತೋರತಕ್ಕ ಸ್ವರೂಪವು ಧರ್ಮವಾಗಲೀ ಸ್ವಭಾವವೆಂದು ಹೇಳಲ್ಪಡುತ್ತದೆ. ಅದೆಲ್ಲವೂ ಈಶ್ವರನ ಅಧೀನವೇ. ಹೀಗೆ ಅಂಗೀಕರಿಸದೆ ಇದ್ದರೆ ಅವುಗಳಿಗೇನೇ ಸ್ವಾತಂತ್ರ್ಯವು ಬರಬೇಕಾಗುವುದರಿಂದ ಶ್ರೀ ಹರಿಗೆ ಈಶ್ವರತ್ವವೇ ಕೂಡದೆ ಹೋಗುವುದು. 'ಸರ್ವಂ ಖಲ್ವಿದಂ' ಇತ್ಯಾದಿ ಸರ್ವಕ್ಕೂ ಪರಮಾತ್ಮನ ಅಧೀನತ್ವವನ್ನು ಪ್ರತಿಪಾದಿಸತಕ್ಕ ಶ್ರುತಿವಿರೋಧವೂ ಬರಬೇಕಾಗುವುದು. ಸಂಹಾರ ಮಾಡತಕ್ಕವನಿಗೆ ಅಸಂಹಾರದಿಂದ ಅತಿರಿಕ್ತವಾದ ಅನ್ನಾದಿಗಳನ್ನು ಕೊಟ್ಟು ಪಾಲನರೂಪವಾದ ಸ್ಥಿತಿಕರ್ತೃತ್ವವೂ ಪ್ರತ್ಯೇಕವಾಗಿ ಪ್ರಸಿದ್ಧವಾಗಿದೆ. ಆದುದರಿಂದ ಶ್ರೀ ಹರಿಗೆ ಸೃಷ್ಟಿಸಂಹಾರ ಕರ್ತೃತ್ವಮಾತ್ರವಲ್ಲ; ಪಾಲಕತ್ವವೂ ಇದ್ದೇ ಇದೆ. ॥ ೧೬೬ ॥ ಸೂ. ೨೨ ॥ ಅಧಿ. ೧೩ ॥

**ಪ್ರಕೃತ್ಯೈತಾವತ್ವಾಧಿಕರಣವು ಸಮಾಪ್ತವಾಯಿತು.**

---

# ತದವ್ಯಕ್ತಾಧಿಕರಣವು.

**'ಓಂ ತದವ್ಯಕ್ತಮಾಹ ಹಿ ಓಂ' ॥ ಸೂ. ೨೩ ॥**

**(ಸೂತ್ರಾರ್ಥವು ಮೊದಲೇ ಉಕ್ತವಾಗಿದೆ.)**

ಈ ಅಧಿಕರಣದಲ್ಲಿ ಶ್ರೀ ಹರಿಗೆ ಅವ್ಯಕ್ತತ್ವವನ್ನು ಆದಿಯಲ್ಲಿ ವಿಸ್ತರವಾಗಿ ಸಮರ್ಥಿಸಿರುವರು. ಹಾಗಾದರೆ ಭಕ್ತ್ಯಾದಿ ಸಾಧನಗಳಿಗೆ ವೈಯರ್ಥ್ಯವೆಂದಾಶಂಕಿಸಿ 'ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್' ಎನ್ನುವುದರಿಂದ ದೃಶ್ಯತ್ವವನ್ನೂ ಹೇಳಿದರು. ಇವೆರಡೂ ವಿರುದ್ಧವು ಎಂದಾಶಂಕಿಸಿ 'ಅತೋಽನಂತೇನ ತಥಾ ಹಿ ಲಿಂಗಂ' ಎನ್ನುವ ಸೂತ್ರದಿಂದ ವಿರೋಧವನ್ನು ಪರಿಹರಿಸಿದರು. ಆ ವಿರೋಧ ಪರಿಹಾರವು ಸ್ಪಷ್ಟವಾಗಿ ತೋರುವುದಿಲ್ಲ ಎಂದರೆ ಅದರ ತಾತ್ಪರ್ಯವನ್ನು ಹೇಳುತ್ತಾರೆ.

**ಮೂ ॥ ಅವ್ಯಕ್ತೋಽಪಿ ಸ್ವಶಕ್ತ್ಯೈವ ಭಕ್ತಾನಾಂ ದೃಶ್ಯತೇ ಹರಿಃ ॥ ೧೬೭ ॥**

ಅ ॥ ಭಕ್ತಾನಾಂ=ಭಕ್ತರಿಗೆ, ಹರಿಃ=ಶ್ರೀ ಹರಿಯು, ಅವ್ಯಕ್ತೋಽಪಿ=ಜೀವರ ಶಕ್ತಿಯನ್ನಪೇಕ್ಷಿಸಿ ಅವ್ಯಕ್ತನಾದಾಗ್ಯೂ, ಭಕ್ತಾನಾಂ=ಭಕ್ತರ ಅನುಗ್ರಹಕ್ಕಾಗಿ, ಸ್ವಶಕ್ತ್ಯೈವ=ತನ್ನ ಶಕ್ತಿಯಿಂದಲೇ, ದೃಶ್ಯತೇ=ಕಾಣಿಸಿಕೊಳ್ಳಲ್ಪಡುತ್ತಾನೆ.

ತಾ ॥ ಜೀವನ ಶಕ್ತ್ಯಪೇಕ್ಷೆಯಿಂದ ಶ್ರೀಹರಿಗೆ ಅವ್ಯಕ್ತತ್ವವನ್ನು ಹೇಳಿದರೂ ಶ್ರೀಹರಿಯು ಅಚಿಂತ್ಯಾದ್ಭುತ ಶಕ್ತಿಯಿಂದ ವ್ಯಕ್ತತ್ವವು ಕೂಡುವುದು. ಆದುದರಿಂದ ವಿರೋಧವಿಲ್ಲ ॥ ೧೬೭ ॥ ಸೂ. ೨೩ ॥ ಅಧಿ ೧೪ ॥

**ತದವ್ಯಕ್ತಾಧಿಕರಣವು ಸಮಾಪ್ತವಾಯಿತು.**

---

# ಅಹಿಕುಂಡಲಾಧಿಕರಣವು.

**'ಓಂ ಉಭಯವ್ಯಪದೇಶಾತ್ತ್ವ ಹಿ ಕುಂಡಲವತ್ ಓಂ'**

**(ಸೂತ್ರಾರ್ಥವು ಮೊದಲೇ ಉಕ್ತವಾಗಿದೆ.)**

ಈಶ್ವರನ ಗುಣಕ್ರಿಯಾದಿ ಧರ್ಮಗಳು ಈಶ್ವರನಿಂದ ಭಿನ್ನಗಳಾದರೆ ಆಗ ಸಮವಾಯವನ್ನು ನಿರಾಕರಿಸಿದುದರಿಂದ ಗುಣಾದಿಮತ್ತ್ವವು ಅಯುಕ್ತವಾಗಬೇಕಾದೀತು. ಅಭಿನ್ನಗಳಾದರೆ ಆಗ ಜ್ಞಾನಾದಿಮತ್ತ್ವವು ಆನಂದಾದಿಭೋಕ್ತೃತ್ವವು ಇತ್ಯಾದಿಗಳು ಅಯುಕ್ತವಾಗಬೇಕಾದೀತು. ಹೀಗೆ ಎರಡುಪ್ರಕಾರದಿಂದಲೂ ಅಲ್ಲಿ ಭಕ್ತಿಯು ಕೂಡಲಾರದು, ಎಂದು ಪೂರ್ವಪಕ್ಷ ಬಂದರೆ ಈ ಸೂತ್ರದಲ್ಲಿ ಹೇತುದೃಷ್ಟಾಂತಗಳನ್ನು ಮಾತ್ರ ಸೂಚಿಸಿದ್ದಾರೆ. ಪಕ್ಷಪರಿಗ್ರಹರೂಪವಾದ ಪ್ರತಿಜ್ಞೆಯನ್ನು ತೋರಿಸಲಿಲ್ಲ. ಆದಕಾರಣ ಪ್ರತಿಜ್ಞೆಯನ್ನು ತೋರಿಸುತ್ತಾರೆ—

**ಮೂ ॥ ತದಭಿನ್ನಾ ಗುಣಾ ನಿತ್ಯಮಪಿ ಸರ್ವೇ ವಿಶೇಷತಃ ।**
**ಗುಣತ್ವೇನ ಗುಣಿತ್ವೇನ ಭೋಕ್ತೃಭೋಗ್ಯತಯಾ ಸ್ಥಿತಃ (ತಾಃ) ॥೧೬೮॥**

ಅ || ಸರ್ವೇ ಗುಣಾಃ = ಪರಮೇಶ್ವರನ ಸಂಬಂಧಿಗಳಾದ ಎಲ್ಲಾ ಧರ್ಮಗಳೂ, ನಿತ್ಯಂ=ನಿಯಮವಾಗಿ, ತದಭಿನ್ನಾಃ=ಶ್ರೀ ಪರಮೇಶ್ವರನಿಂದ ಅತ್ಯಂತಾಭಿನ್ನಗಳು, (ಆದಾಗ್ಯೂ) ವಿಶೇಷತಃ=ವಿಶೇಷಶಕ್ತಿಯಿಂದ, ಗುಣತ್ವೇನ=ಗುಣಭಾವದಿಂದಲೂ, ಗುಣಿತ್ವೇನ = ಗುಣವುಳ್ಳ ತನದಿಂದಲೂ, ಭೋಕ್ತೃಭೋಗ್ಯತಯಾ = ಭೋಕ್ತೃತ್ವದಿಂದಲೂ, ಭೋಗ್ಯತನದಿಂದಲೂ, ಸ್ಥಿತಾಃ=ಇರುತ್ತಾವೆ. || ೧೬೮ ||

ಯಾವದ್ದ್ರವ್ಯಭಾವಿಗಳಾದ ಪರಿಮಾಣಾದಿಗಳಿಗೆ ಶ್ರೀ ಹರಿಯಿಂದ ಅಂತ್ಯತಾಭೇದವು ಇರಲಿ; ಕ್ರಿಯೆಗಳೂ, ಜ್ಞಾನಾದಿಗುಣಗಳೂ, ಅಸ್ರಾಕ್ಷೀತ್=ಹಿಂದೆ ಸೃಷ್ಟಿಮಾಡಿದನು, ಸೃಜತಿ=ಈಗ ಸೃಷ್ಟಿಮಾಡುತ್ತಾನೆ, ಸ್ರಕ್ಷ್ಯತಿ=ಮುಂದಕ್ಕೆ ಸೃಷ್ಟಿಮಾಡುವನು, ವ್ಯಜ್ಞಾಸೀತ್ = ಹಿಂದೆ ತಿಳಿದಿದ್ದನು, ಜಾನಾತಿ=ಈಗ ತಿಳಿಯುತ್ತಾನೆ, ಜ್ಞಾಸ್ಯತಿ=ಮುಂದಕ್ಕೆ ತಿಳಿಯುವನು, ಇದು ಮೊದಲಾದ ಶ್ರೌತವ್ಯವಹಾರಗಳಿಂದ ಅನಿತ್ಯಗಳೆಂದು ತಿಳಿಯಲ್ಪಟ್ಟರುವುದರಿಂದ ಇವುಗಳಿಗೆ ಅತ್ಯಂತಾಭೇದವು ಕೂಡಲಾರದು ಎಂದರೆ—

**ಮೂ|| ವಿಶೇಷಾತ್ಮತಯಾ ತೇಷಾಂ ನಿತ್ಯಶಕ್ತ್ಯಾತ್ಮನಾ ತಥಾ |**
**ನಿತ್ಯಂ(ತ್ಯ) ಸ್ಥಿತೇರ್ನ ಧರ್ಮಾಣಾಂ ಕ್ರಿಯಾದೀನಾಮನಿತ್ಯತಾ||೧೬೯||**

ಅ || ತೇಷಾಂ=ಪರಮೇಶ್ವರನ ಸಂಬಂಧಿಗಳಾದ, ಕ್ರಿಯಾದೀನಾಂ = ಕ್ರಿಯೆಮೊದಲಾದ, ಧರ್ಮಾಣಾಂ=ಧರ್ಮಗಳಿಗೆ, ನಿತ್ಯಶಕ್ತ್ಯಾತ್ಮನಾ=ನಿತ್ಯದಲ್ಲಿಯೂ ಶಕ್ತಿರೂಪದಿಂದ, ನಿತ್ಯಂಸ್ಥಿತೇಃ=ನಿರಂತರದಲ್ಲಿಯೂ ಇದ್ದಪ್ರಯುಕ್ತವೂ, ತಥಾ=ಹಾಗೇಯೇ, ವಿಶೇಷಾತ್ಮತಯಾ= ವ್ಯಕ್ತರೂಪದಿಂದ, (ವ್ಯವಹಾರವಿಷಯತ್ವವು ಕೂಡುವುದರಿಂದ) ಅನಿತ್ಯತಾ=ಅನಿತ್ಯತ್ವವು, ನ= ಕೂಡುವುದಿಲ್ಲ. || ೧೬೯ ||

ಹಾಗಾದರೆ ಕ್ರಿಯಾದಿಗಳಿಗೆ ಯಾವುದು ವ್ಯಕ್ತತ್ವವಿದೆಯೋ ಅದಾದರೂ ಅನಿತ್ಯವೇ. ಆದಕಾರಣ ಆ ವ್ಯಕ್ತತ್ವವು ಭಗವದ್ಧರ್ಮಭೂತವಾದಾಗ್ಯೂ ಅದಕ್ಕೆ ಅತ್ಯಂತಾಭೇದವು ಕೂಡದೆ ಹೋಗಬೇಕಾಗುವುದು. ಎಂದರೆ—

**ಮೂ || ನ ವಿಶೇಷಾತ್ಮತಾ ಚೇಯಮನಿತ್ಯಾ ಶಕ್ತಿರೂಪತಾ |**
**ಸೈವ ಯತ್ಸವಿಶೇಷಾ ಸ್ಯಾದ್ವಿಶೇಷೋಽನ್ಯೋ ನ ಚಾಸ್ಯಯಂ ||**
**ಸ್ವನಿರ್ವಾಹಕತಾ ಹೇತೋಸ್ತಥಾಪಿ ಸ್ಯಾದ್ವಿಶೇಷತಾ(ತಃ) || ೧೭೦ ||**

ಅ || ಯತ್=ಯಾವಕಾರಣದೆಶೆಯಿಂದ, ಇಯಂ = ವ್ಯವಹಾರಕ್ಕೆ ವಿಷಯವಾಗಿ ಹೇಳಲ್ಪಟ್ಟ, ವಿಶೇಷಾತ್ಮತಾ=ವ್ಯಕ್ತತ್ವವು, ಅನಿತ್ಯಾ=ಅನಿತ್ಯವಾದುದು, ನ=ಅಲ್ಲ. ಯತ್= ಯಾವಕಾರಣದ್ದೆಶೆಯಿಂದ, ಸಾ=ಆ ದಾವ, ವಿಶೇಷಾತ್ಮತಾ=ವಿಶೇಷಸ್ವರೂಪತ್ವವು, ಶಕ್ತಿರೂಪತೈವ=ಶಕ್ತಿರೂಪತ್ವವೇ,(ಶಕ್ತಿಯಾದರೂ ನಿತ್ಯನೆಂದು ಹೇಳಲ್ಪಟ್ಟದೋ, ಆದಕಾರಣ) ಅನಿತ್ಯಾ= ಅನಿತ್ಯವಾದುದು, ನ=ಅಲ್ಲ. (ಹೀಗಾದರೆ ಶಕ್ತಿಯು ವ್ಯಕ್ತಿಯು ಎಂದು ವ್ಯವಹಾರವಿಶೇಷವು ಬಾರದೆ ಹೋಗಬೇಕಾಗುವುದು ಹಿಂದಿನವ್ಯವಹಾರಗಳಿಗೆ ನಿರಾಲಂಬನತ್ವವು ಪರಿಹೃತವಾಗದೆ ಹೋಗಬೇಕಾಗುವುದು ಎಂದರೆ—) ಸೇಯಂ=ಆ ಈ ವ್ಯಕ್ತಿಯು, (ಶಕ್ತಿಯಿಂದ ನಿರ್ವಿಶೇಷಾಭಿನ್ನವಲ್ಲ ಮತ್ತೆ) ಸವಿಶೇಷಾ ಸ್ಯಾತ್ = ಸವಿಶೇಷಾಭಿನ್ನವೇ ಆಗುವುದು. (ಸರ್ವವನ್ನೂ

ನಿರ್ವಾಹಮಾಡಲಿಕ್ಕೆ ಕಾರಣವಾದ ವಿಶೇಷವು ಶ್ರೀ ಹರಿಯಿಂದ ಭಿನ್ನವಾದರೆ ಆಗ ಎಲ್ಲಾ ಭಗವದ್ಧರ್ಮಗಳಿಗೆ ಶ್ರೀ ಹರಿಯಿಂದ ಅತ್ಯಂತಾಭೇದವು ಎನ್ನುವ ಪ್ರತಿಜ್ಞೆಯು ಭಗ್ನವಾಗುವುದು. ಅಭಿನ್ನವೆಂದಾದರೆ ವಿಶೇಷಕ್ಕೆ ವಿಶೇಷತ್ವವೇ ಬಾರದೆ ಹೋಗಬೇಕಾಗುವುದು. ಸ್ವರೂಪಮಾತ್ರದಲ್ಲಿಯೇ ಪರ್ಯವಸಾನವಾಗುವುದರಿಂದ ವಿಶೇಷವೂ ಇಲ್ಲದೆ ಹೋಗಬೇಕಾಗುವುದು. ಎಂದರೆ-) ಅಯಂ ವಿಶೇಷಃ=ಈ ವಿಶೇಷವು, ಅನ್ಯಃ ನ ಚ= ಶ್ರೀ ಹರಿಯಿಂದ ಭಿನ್ನವಾದುದು ಅಲ್ಲವೇ ಅಲ್ಲ. (ಆದುದರಿಂದ ಪ್ರತಿಜ್ಞಾಹಾನಿಯಿಲ್ಲ) ತಥಾಪಿ = ಆದಾಗ್ಯೂ, ಸ್ವನಿರ್ವಾಹಕತಾ ಹೇತೋಃ = ಸ್ವನಿರ್ವಾಹಕತ್ವರೂಪವಾದ ಹೇತುವಿನದ್ದೆಶೆಯಿಂದ, ತಸ್ಯ = ಆ ವಿಶೇಷಕ್ಕೆ, ವಿಶೇಷತಾ=ವಿಶೇಷತ್ವವು, ಸ್ಯಾತ್=ಬರುವುದು. ಈ ವಿಶೇಷವಾದರೂ ಶ್ರೀ ಹರಿಯಿಂದ ಭಿನ್ನವಲ್ಲ. ಆದುದರಿಂದ ಆ ಪ್ರತಿಜ್ಞಾಹಾನಿಯಿಲ್ಲ. ಆದರೂ ವಿಶೇಷಕ್ಕೆ ವಿಶೇಷತ್ವವು ಕೂಡುವುದು. ಆ ವಿಶೇಷವು ಅಭಿನ್ನವಾದರೂ ನಿರ್ವಿಶೇಷಾಭಿನ್ನವಲ್ಲ. ಹೀಗಾದರೆ ವಿಶೇಷಪರಂಪರೆಯಿಂದ ಅನವಸ್ಥೆಯು ಬರಬೇಕಾಗುವುದು, ಅಂದರೆ ಆಗಲಾರದು. ಏಕೆಂದರೆ— ವಿಶೇಷಕ್ಕೆ ಸ್ವನಿರ್ವಾಹಕತ್ವವಿದೆ. ॥ ೧೭೦ ॥

ಹೀಗೆ ಪ್ರತಿಜ್ಞೆಯನ್ನು ತೋರಿಸಿ ಬಾಧಕಗಳನ್ನು ಪರಿಹರಿಸಿದರು. ಈ ಅರ್ಥಗಳಲ್ಲಿ ಪ್ರಮಾಣವಿರುತ್ತಿದ್ದರೆ ಹೀಗೆ ಆಗುತ್ತಿತ್ತು. ಆ ಪ್ರಮಾಣವನ್ನೇ ನೋಡಲಾರೆವು, ಎಂದರೆ— ಸೂತ್ರದಲ್ಲಿರತಕ್ಕ 'ಉಭಯವ್ಯಪದೇಶಾತ್' ಎನ್ನುವ ಹೇತುವನ್ನೂ ವ್ಯಾಖ್ಯಾನಮಾಡುತ್ತಾರೆ—

**ಮೂ ॥ ವಿಶೇಷತ್ವೇನ ವಿಜ್ಞಾತೇಃ ಪ್ರಮಾಣೈರಖಿಲೈರಪಿ ।**
**ಸಸರ್ಜ ಸಂಜಹಾರೇತಿ ವಿಶೇಷೋ ಹ್ಯವಗಮ್ಯತೇ ॥**
**ಶ್ರುತ್ಯೈವ ಸ ಸ ಏವೇತಿ ತದಭೇದಶ್ಚ ಗಮ್ಯತೇ ॥ ೧೭೧ ॥**

**ಅ ॥** ಅಖಿಲೈಃ ಪ್ರಮಾಣೈಃ=ಉಭಯ ವಿಧಗಳಾದ ವೇದವಾಕ್ಯಗಳಿಂದ, (ಜ್ಞಾನಾದಿ ಧರ್ಮಗಳಿಗೆ) ವಿಶೇಷತ್ವೇನ ಚ=ಶ್ರೀ ಹರಿಯ ವಿಶೇಷತ್ವದಿಂದಲೂ, ಶ್ರೀ ಹರಿಯ ಅಭಿನ್ನತ್ವದಿಂದಲೂ, ವಿಜ್ಞಾತೇಃ=ವಿಜ್ಞಾನ ದೆಶೆಯಿಂದ, ಸಃ=ಆ ಶ್ರೀ ಹರಿಯು, ಸಸರ್ಜ=ಸೃಷ್ಟಿ ಮಾಡಿದನು. ಸಂಜಹಾರ = ಸಂಹರಿಸಿದನು. ಇತಿ=ಹೀಗೆ, ಶ್ರುತ್ಯೈವ = ಶ್ರುತಿಯಿಂದಲೇ, ವಿಶೇಷಃ=ವಿಶೇಷವು, ಅವಗಮ್ಯತೇ = ತಿಳಿಯಲ್ಪಡುತ್ತದೆ. ಸಃ=ಆನಂದಾದಿಯು, ಸ ಏವ= ಆ ಶ್ರೀಹರಿಯೇ, ಇತಿ=ಹೀಗೆ, ಶ್ರುತ್ಯೈವ = ಶ್ರುತಿಯಿಂದಲೇ, ತದಭೇದಶ್ಚ = ವಿಶೇಷದಿಂದ ಅಭೇದವೂ ಕೂಡ, ಗಮ್ಯತೇ=ತಿಳಿಯಲ್ಪಡುತ್ತದೆ.

**ತಾ ॥** (1) ಸಸರ್ಜ ಎನ್ನುವುದರಿಂದ **'ಸ ಇದಂ ಸರ್ವಮಸೃಜತ ಉಕ್ತ್ವಾ ಸ ದ್ಯಾವಾ ಪೃಥಿವೀ ಬಿಭರ್ತಿ'** ಆ ಶ್ರೀ ಹರಿಯು ಇವೆಲ್ಲವನ್ನೂ ಸೃಷ್ಟಿಮಾಡಿದನು. ಭಕ್ತಾಭೀಷ್ಟಸೇಚಕನಾದ ಶ್ರೀಹರಿಯು ಸ್ವರ್ಗಭೂಮಿಗಳನ್ನು ಧರಿಸುತ್ತಾನೆ ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು. (2) ಸಂಜಹಾರ ಎನ್ನುವುದರಿಂದ **'ತತ್ತದತ್ತು ಮಧ್ರಿಯತ ಸ ಐಕ್ಷತ'** ಇತ್ಯಾದಿ ಶ್ರುತಿಯನ್ನು ಇಟ್ಟುಕೊಳ್ಳಬೇಕು. (3) **'ಸ ಸ ಏವ'** ಎನ್ನುವುದರಿಂದ ಆನಂದೋ ಬ್ರಹ್ಮ ಇತ್ಯಾದಿ ಶ್ರುತಿಯನ್ನು ಇಟ್ಟುಕೊಳ್ಳಬೇಕು. (4) **'ಸ ಇದಂ ಸರ್ವಮಸೃಜತ ತತ್ತದತ್ತುಮಧ್ರಿಯತ ಆನಂದಂ ಬ್ರಹ್ಮಣೋ ವಿದ್ವಾನ್'** ಇತ್ಯಾದಿ ಶ್ರುತಿಯಿಂದ ಸರ್ಜನ ಮೊದಲಾದುದು ಬ್ರಹ್ಮನ ವಿಶೇಷವು. (ಅಂದರೆ ಅತಿಶಯವು) ಬ್ರಹ್ಮನು ಮಾತ್ರವಲ್ಲವೆಂದು ತಿಳಿಯುತ್ತದೆ. (5) **'ಆನಂದೋ ಬ್ರಹ್ಮೇತಿವ್ಯಜಾನಾತ್ ಸತ್ಯಂ ಜ್ಞಾನಂ ಏಕಧೈವಾನುದ್ರಷ್ಟವ್ಯಂ'** ಇತ್ಯಾದಿ ಶ್ರುತಿಯಿಂದಲೇ

ಆನಂದಾದಿಗಳಿಗೆ ಶ್ರೀಹರಿಯಿಂದ ಅಭೇದವು ತಿಳಿಯಲ್ಪಡುತ್ತದೆ. ಹೀಗೆ ಉಭಯವ್ಯಪದೇಶಾನ್ಯಥಾನುಪಪತ್ತಿಯಿಂದ ಎಲ್ಲಾ ಬ್ರಹ್ಮಧರ್ಮಗಳಿಗೆ ಬ್ರಹ್ಮನಿಂದ ಸವಿಶೇಷಾತ್ಯಂತಾಭೇದವು ಕ್ರಿಯಾದಿಗಳಿಗೆ ನಿತ್ಯತ್ವವೂ, ಶಕ್ತಿವ್ಯಕ್ತಿರೂಪತ್ವವೂ, ವ್ಯಕ್ತಿರೂಪಕ್ಕೆ ನಿತ್ಯತ್ವವೂ, ಶಕ್ತಿರೂಪಾಭಿನ್ನತ್ವವೂ, ಸವಿಶೇಷತ್ವವೂ ವಿಶೇಷಕ್ಕೆ ಅಭೇದವೂ, ಸ್ವನಿರ್ವಾಹಕತ್ವವೂ, ಕಲ್ಪಿಸಲ್ಪಡುತ್ತದೆ ॥ ೧೭೧ ॥

(1) ಹಾಗಾದರೆ ಬ್ರಹ್ಮಧರ್ಮಗಳಿಗೆ ಬ್ರಹ್ಮನಿಂದ ಭೇದವೇ ಇರಲಿ, ಸಮವಾಯದಿಂದ ವಿಶೇಷಣವಿಶೇಷ್ಯಭಾವವು ಬರುವುದು. ಸಮವಾಯದೂಷಣಗಳಾದರೂ ಶ್ರುತಿವಿರೋಧದಿಂದ ಆಭಾಸತ್ವವನ್ನು ಹೊಂದುತ್ತವೆ. ಸಮವಾಯವಿಲ್ಲವಾದರೂ ಧರ್ಮ-ಧರ್ಮಿಗಳಿಗೇನೇ ಯಾವುದಾದರೊಂದು ವಿಲಕ್ಷಣಮಹಿಮೆಯನ್ನು ಕಲ್ಪಿಸುತ್ತೇವೆ. ಔಪಚಾರಿಕತ್ವವು ಕೂಡುವುದರಿಂದ ಅಭೇದಶ್ರುತಿವಿರೋಧವೂ ಇಲ್ಲ. ಆದುದರಿಂದ ಅಭೇದವನ್ನು ಇಟ್ಟುಕೊಂಡು ವಿಶೇಷಾದಿಗಳನ್ನು ಅಂಗೀಕರಿಸಿದುದರಿಂದ ಏನು ಪ್ರಯೋಜನವು? (2) ಇನ್ನೊಬ್ಬನು ಹೇಳುವನು— ಬ್ರಹ್ಮನು ಅಖಂಡನೇ. ಅಲ್ಲಿ ಯಾವ ವಿಶೇಷವೂ ಇಲ್ಲ. ಇತರ ಶ್ರುತಿವಿರೋಧವೂ ಇಲ್ಲ. ಕ್ರಿಯಾದಿಗಳನ್ನು ಪ್ರತಿಪಾದಿಸತಕ್ಕ ಶ್ರುತಿಗಳು ಸಗುಣವಿಷಯಕಗಳಾಗಿವೆ. ಆ ಸಗುಣನು ಮಾಯಾಮಯನು. 'ಆನಂದಂ ಬ್ರಹ್ಮಣಃ' ಇತ್ಯಾದಿ ಶ್ರುತಿಗಳು 'ರಾಹೋಃ ಶಿರಃ' ಇತ್ಯಾದಿಗಳಂತೆ ಔಪಚಾರಿಕಗಳು. (3) ಇನ್ನೊಬ್ಬನು ಹೇಳುವನು. ಭೇದಾಭೇದಗಳಿಂದಲೇ ಉಭಯವ್ಯಪದೇಶವೂ ಸಮಂಜಸವಾಗುವಾಗ ಈ ಸವಿಶೇಷಾಭೇದಕಲ್ಪನೆಯಿಂದ ಪ್ರಯೋಜನವೇನು? ಎಂದರೆ— ಹೀಗೆ ಹೇಳಕೂಡದು ಈ ಮೂರು ವಾದಿಗಳೂ ಕೂಡ ಕೊನೆಗೆ ಅಭಿನ್ನದಲ್ಲಿ ವಿಶೇಷವನ್ನು ಅಂಗೀಕರಿಸಲೇ ಬೇಕು. ಅದಕ್ಕಿಂತ ಆದಿಯಲ್ಲಿಯೇ ವಿಶೇಷವನ್ನು ಅಂಗೀಕರಿಸುವುದು ಪ್ರಶಸ್ತವು ಎನ್ನುವ ಅಭಿಪ್ರಾಯದಿಂದ ಭೇದವಾದಿಯನ್ನು ಕುರಿತು ವಿಶೇಷವನ್ನು ಅಂಗೀಕಾರಮಾಡಿಸುತ್ತಾರೆ.

ಮೂ ॥ ಭೇದೋ ಯದಿ ವಿಶೇಷಸ್ಯ ಸ ಭೇದೋ ಭೇದಿನಾ ಕಥಂ ॥ ೧೭೨ ॥
ಭಿನ್ನಶ್ಚೇದನವಸ್ಥಾ ಸ್ಯಾದಭಿನ್ನಶ್ಚೇತ್ಪುರಾ ನ ಕಿಂ ।
ವಿಶೇಷೋ ಭಿನ್ನ ಏವೇತಿ ತೇನ ಸಾಭ್ಯುಪಗಮ್ಯತೇ ॥
ಅಭಿನ್ನೋ ನಿರ್ವಿಶೇಷಶ್ಚೇದ್ಭೇದಸ್ತದ್ಭೇದತಾ ಕುತಃ ॥ ೧೭೩ ॥

ಅ ॥ ವಿಶೇಷಸ್ಯ=ಜ್ಞಾನ ಮೊದಲಾದ ಬ್ರಹ್ಮಧರ್ಮಕ್ಕೆ, ಯದಿ=ಯಾವ ಪಕ್ಷದಲ್ಲಿ, (ಬ್ರಹ್ಮನ ದೆಶೆಯಿಂದ) ಭೇದಃ=ಭೇದವು, (ಅಂಗೀಕರಿಸಲ್ಪಡುತ್ತದೋ, ಆಗ ಕೇಳುವೆವು) ಸ ಭೇದಃ=ಆ ಭೇದವು, ಭೇದಿನಾ=ಭೇದವುಳ್ಳ ಬ್ರಹ್ಮನಿಂದಲೂ ಜ್ಞಾನಾದಿಗಳಿಂದಲೂ ಕೂಡಿಕೊಂಡು, ಕಥಂ=ಯಾವ ಪ್ರಕಾರವುಳ್ಳದ್ದೆಂದು ತಿಳಿಯತಕ್ಕುದು? (ಭಿನ್ನವೋ ಅಭಿನ್ನವೋ, ೧ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ) ಭಿನ್ನಶ್ಚೇತ್=ಭೇದವುಳ್ಳದ್ದೆಂದಾದರೆ, ಅನವಸ್ಥಾ ಸ್ಯಾತ್=ಅನವಸ್ಥೆಯು ಬರುವುದು. (ಅಂದರೆ ಭೇದವು ಭೇದಿಗಳಿಂದ ಭಿನ್ನವಾದರೆ ಆಗ ಆ ಭೇದವು ಭೇದಿಗಳಿಂದ ಭಿನ್ನವು, ಹೀಗೆ ಅನವಸ್ಥೆಯು ಬರುವುದು. ವಿಶೇಷಣ ವಿಶೇಷ್ಯಭಾವಾದಿಗಳ ಜ್ಞಾನಕ್ಕಾಗಿ ಧರ್ಮ-ಧರ್ಮಿಗಳಿಗೆ ಭೇದವನ್ನು ಅಂಗೀಕರಿಸಬೇಕು. ಅದಾದರೂ ತೋರತಕ್ಕದಾಗಿಯೇ ಅದಕ್ಕೆ ಕಾರಣವಾಗುತ್ತದೆ. ಅಭೇದ ಪ್ರತೀತಿಯಾದರೂ ವಿಶೇಷಣಾದಿಭಾವದಿಂದಲೇ ಆಗುತ್ತದೆ. ಹೀಗೆ ಉತ್ತರೋತ್ತರ ಭೇದಪ್ರತೀತಿಯು ಆವಶ್ಯಕವಾದುದರಿಂದ ಅನವಸ್ಥೆಯು ತಪ್ಪಿದ್ದಲ್ಲ.) (ಅಭಿನ್ನವೆನ್ನುವ ಕಲ್ಪದಲ್ಲಿಯೂ ಸವಿಶೇಷಾಭಿನ್ನವೋ ನಿರ್ವಿಶೇಷಾ

ಭಿನ್ನವೋ ೧ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ) ಅಭಿನ್ನಶ್ಚೇತ್=ಅಭಿನ್ನವೆಂದಾದರೆ, ಪುರಾನ ಕಿಂ=ಮೊದಲು ಇಲ್ಲವೋ ಏನು? (ಅಂದರೆ ಧರ್ಮಗಳಿಗೆ ಧರ್ಮಿಯಿಂದ ಸವಿಶೇಷಾಭೇದವು ಏಕೆ ಅಂಗೀಕರಿಸಲ್ಪಡುವುದಿಲ್ಲ? ಅಂಗೀಕರಿಸಲಿಕ್ಕೆ ಯೋಗ್ಯವೇ ಆಗಿದೆ. ತಥಾ ಚ=ಭೇದದಂತೆಯೇ ಭೇದವಿಲ್ಲವಾದರೂ ವಿಶೇಷದಿಂದಲೇ ಕೂಡುತ್ತಿರಲು ವ್ಯರ್ಥವಾಗಿ ಪರಂಪರೆಯನ್ನು ಕಲ್ಪಿಸಿದರೆ ಗೌರವವು ಬರುವುದು. ಆದುದರಿಂದ ಧರ್ಮಗಳಿಗೇನೇ ಸವಿಶೇಷಾಭೇದವನ್ನು ಅಂಗೀಕರಿಸುವುದು ಪ್ರಶಸ್ತವು.) (ಹೀಗೆಆಗಲಿ ಎಂದರೆ—) ವಿಶೇಷಃ=ವಿಶೇಷವು (ಧರ್ಮವು) ಅಭಿನ್ನ ಇತ್ಯೇವ=ಅಭಿನ್ನ ಎಂತೆಂದೇ, ತೇನ= ಭೇದವಾದಿಯಿಂದ, ನಾಭ್ಯುಪಗಮ್ಯತೇ=ಅಂಗೀಕರಿಸಲ್ಪಡುವುದಿಲ್ಲ (ಸವಿಶೇಷತ್ವಾಂಗೀಕಾರವು ಸುತರಾಂ ಕೂಡಲಾರದು. ಅಪಸಿದ್ಧಾಂತವು ಬರಬೇಕಾಗುವುದು. ಇಷ್ಟಸಿದ್ಧಿಯೂ ಆಗದೆಹೋಗುವುದು) (ನಿರ್ವಿಶೇಷಾಭಿನ್ನಃ ಎನ್ನುವ ೨ನೇ ಪಕ್ಷವನ್ನು ದೂಷಿಸುತ್ತಾರೆ) ಭೇದಃ = ಭೇದವು, ಅಭಿನ್ನಃ = ಭೇದಗಳಿಂದ ಅಭಿನ್ನವೂ ನಿರ್ವಿಶೇಷಶ್ಚ=ನಿರ್ವಿಶೇಷವೂ, ಸ್ಯಾಚ್ಚೇತ್=ಆಗುವುದಾದರೆ ಆಗ, ತದ್ಭೇದತಾ = ಅವುಗಳಿಗೆ ಇದುಭೇದವು ಎನ್ನುವ ಭಾವವು, ಕುತಃ=ಯಾವುದರಿಂದ, (ಯಾವುದರಿಂದಲೂ ಆಗಲಾರದು.) ಅದರ ಸಂಬಂಧಿತ್ವವು ಭೇದದಿಂದಲಾಗಲೀ, ವಿಶೇಷದಿಂದಲಾಗಲೀ ಇಲ್ಲದೆ ಕೂಡಲಾರದು. ಅವುಗಳು ಮಾತ್ರ ಇರುವುದಾದರೆ ಧರ್ಮ-ಧರ್ಮಿಗಳೇ ಇರುತ್ತವೆ. ಭೇದವು ಇರುವುದಿಲ್ಲ. ತಥಾಚ ಧರ್ಮ-ಧರ್ಮಿಗಳು ಎನ್ನುವ ವ್ಯವಹಾರವೂ ಇಲ್ಲದೇ ಹೋಗಬೇಕಾಗುವುದು. ಅಥವಾ ಭೇದವೇ ಇದೆ ಧರ್ಮ-ಧರ್ಮಿಗಳ ಇಲ್ಲವೆಂದಾಗಲೀ ಆಗಬೇಕಾಗುವುದು. ಅಂತೂ ಭೇದವು ಇಲ್ಲದೆ ಹೋಗುವುದು. ॥ ೧೭೨ ॥ ೧೭೩ ॥

ಭೇದಕ್ಕೆ ಭೇದಿಸ್ವರೂಪತ್ವವನ್ನು ಅಂಗೀಕರಿಸಿ ವಿಶೇಷವನ್ನು ಅಂಗೀಕರಿಸದೆ ಇರುವವನನ್ನು ಕುರಿತು ದೂಷಣಾಂತರವನ್ನು ಹೇಳುತ್ತಾರೆ.

**ಮೂ ॥ ಅನೇನಾನೇನ ಭಿನ್ನೋಽಯಮಿತಿ ಯತ್ಸವಿಶೇಷತಃ ।**
**ಭೇದ ಏವೈಷ ಬಹುಧಾ ದೃಶ್ಯತೇ ತತ್ಕಿಮುತ್ತರಂ ॥ ೧೭೪ ॥**

ಅ ॥ ಭಿನ್ನಃ ಅಯಂ ಇತಿ = ಭಿನ್ನವಾದುದು ಈ ಘಟವು ಎಂದು, ಸಃ=ಆ ಭೇದನೇ, ವಿಶೇಷತಃ=ವಿಶೇಷಣವಾಗಿ, ದೃಶ್ಯತೇ=ಕಾಣಲ್ಪಡುತ್ತದೆ. ಘಟವು ವಿಶೇಷಣವಾಗಿ ಕಾಣಲ್ಪಡುವುದಿಲ್ಲ. ಮತ್ತೆ ವಿಶೇಷ್ಯವಾಗಿ ಕಾಣಲ್ಪಡುತ್ತದೆ. ಹಾಗೆಯೇ ಅನೇನ ಅನೇನ ಭಿನ್ನಃ=ಘಟವು ಪಟದೆಶೆಯಿಂದ ಭಿನ್ನವು,ಸ್ತಂಭದೆಶೆಯಿಂದ ಭಿನ್ನವು, ಏಷಃ ಭೇದ ಏವ=ಈ ಭೇದವೇ, ಸವಿಶೇಷತಃ=ಪ್ರತಿಯೋಗಿವಿಶೇಷಸಾಹಿತ್ಯನಿಮಿತ್ತದಿಂದ, ದೃಶ್ಯತೇ=ಕಾಣಲ್ಪಡುತ್ತದೆ. ಹಾಗೆಯೇ, ಅಯಂ=ಈ ಪದಾರ್ಥವು, ಅನೇನ=ವಕ್ರತನದಿಂದ, ಅನೇನ=ಬಿಲವಿದ್ಧಪ್ರಯುಕ್ತ, (ಪುರುಷರದ್ದೆಶೆಯಿಂದ) ಭಿನ್ನ ಇತಿ=ಭೇದವುಳ್ಳದ್ದೆಂದು, ಸ ಏಷ ಭೇದಃ = ಆ ಈ ಭೇದವೇ, ವಿಶೇಷತಃ=ವ್ಯಾವರ್ತಕ ಧರ್ಮದಿಂದ, ದೃಶ್ಯತೇ=ಕಾಣಲ್ಪಡುತ್ತದೆ. (ಪದಾರ್ಥವಾದರೂ ಇಂದ್ರಿಯಸನ್ನಿಕರ್ಷಮಾತ್ರದಿಂದ ತಿಳಿಯುತ್ತದೆ.) ಹಾಗೆಯೇ, ಅನೇನ=ಈ ಪಟದ್ದೆಶೆಯಿಂದ, ಅನೇನ=ಈ ಸ್ತಂಭದೆಶೆಯಿಂದ, ಅನೇನ=ಈ ಕುಡ್ಯದೆಶೆಯಿಂದ, ಅಯಂ=ಈ ಘಟವು, ಭಿನ್ನಃ=ಭೇದವುಳ್ಳದ್ದು, ಇತ್ಯೇಷಃ ಭೇದ ಏವ=ಈ ಭೇದವೇ, ಸವಿಶೇಷತಃ=ಪ್ರತಿಯೋಗಿವಿಶೇಷಸಾಹಿತ್ಯನಿಮಿತ್ತದಿಂದ, ಬಹುಧಾ=ಅನೇಕ ಪ್ರಕಾರವಾಗಿ, ದೃಶ್ಯತೇ=ಕಾಣಲ್ಪಡುತ್ತದೆ. (ಘಟವಾದರೂ ಏಕಪ್ರಕಾರವಾಗಿಯೇ ಕಾಣಲ್ಪಡುತ್ತದೆ.) (ಆದಕಾರಣ ಭೇದವು ಘಟದಸ್ವರೂಪವಲ್ಲ, ಎಂದು) ಯತ್=ಯಾವುದು ಸ್ವರೂಪ ಭೇದಕ್ಕೆ ದೂಷಣವು, (ಪರರಿಂದ ಹೇಳಲ್ಪಡುತ್ತದೋ) ತತ್=ಅದಕ್ಕೆ, ಕಿಮುತ್ತರಂ = ಯಾವ

ಉತ್ತರವು, (ನಿನ್ನಿಂದ ಹೇಳಲ್ಪಡುತ್ತದೆ.) (ವಿಶೇಷವನ್ನು ಅಂಗೀಕರಿಸದೆ ಇದ್ದರೆ ಆಗ ಭೇದವು ಭೇದಿಯಿಂದ ಅಭಿನ್ನವೆಂದೂ ಅಂಗೀಕರಿಸಲಿಕ್ಕೆ ಶಕ್ಯವಾಗುವುದಿಲ್ಲ. ಭೇದಕ್ಕೂ ಭೇದಿಗೂ ಭೇದವನ್ನು ಸಾಧಿಸತಕ್ಕವುಗಳು ಅನೇಕವಿರುತ್ತವೆ ॥ ೧೭೪ ॥

ದೂಷಣಾಂತರವನ್ನು ಹೇಳುತ್ತಾರೆ—

**ಮೂ ॥ ಅಭೇದಭೇದಯೋಶ್ಚೈವ ಸ್ವರೂಪತ್ವಂ ಹಿ ಭೇದಿನಃ (ನಾ) ॥೧೭೫॥**
**ತಯೋರಪ್ಯವಿಶೇಷತ್ವೇ ಪರ್ಯಾಯತ್ವಂ ಹಿ ಶಬ್ದಯೋಃ ।**
**ಅಭೇದಭೇದಶಬ್ದೌ ಚ ಪರ್ಯಾಯಾವಿತಿ ಕೋ ವದೇತ್ ॥೧೭೬॥**
**ಭೇದೋಽನ್ಯೋನ್ಯಮಭೇದಶ್ಚ ಭೇದಿನಾ ಚೇದ್ವಿಶೇಷಿತಾ ।**
**ಅವಿಶೇಷೇ ಕಥಂ ಭೇದೋ ಭೇದಿನ್ಯೈಕಸ್ತಥಾ ಭಿದಾ ॥**
**ಪುನಸ್ತಯೋರ್ವಿಭೇದಶ್ಚ ಭೇದಿಮಾತ್ರಸ್ತತೋ ಭವೇತ್ ॥ ೧೭೭ ॥**

ಅ ॥ ಅಭೇದಭೇದಯೋಶ್ಚ = ಭೇದಕ್ಕೆ ಮಾತ್ರ ಅಲ್ಲ, ಮತ್ತೆ ಅಭೇದಕ್ಕೂ ಕೂಡ, ಭೇದಿನಃ=ಭೇದಿಯು, ಸ್ವರೂಪತ್ವಮೇವ=ಸ್ವರೂಪತ್ವವೇ, ಹಿ=ಪ್ರಸಿದ್ಧವು. (ಅಂದರೆ ಯಾರು ಭೇದಕ್ಕೆ ಭೇದಿಯಾದ ಘಟದಿಂದ ಅಭೇದವನ್ನು ಅಂಗೀಕರಿಸುತ್ತಾನೋ, ಆತನು ಆ ಅಭೇದಕ್ಕೂ ಘಟಸ್ವರೂಪತ್ವವನ್ನೇ ಅಂಗೀಕರಿಸಬೇಕು. ಭೇದದ್ದೇ ಸಮಾನನ್ಯಾಯವು, ಎಂದು ಪ್ರಸಿದ್ಧವು. (ಅದರಿಂದ ಪ್ರಕೃತವೇನಾಯಿತೆಂದರೆ) ತಯೋರಪಿ=ಭೇದಾಭೇದಗಳಿಗೂ ಕೂಡ, (ಅಭೇದವನ್ನು ಅಂಗೀಕರಿಸಲೇಬೇಕು.) (ಒಂದು ಘಟದಿಂದ ಅತ್ಯಂತಾಭಿನ್ನಗಳಾದ ಅಭೇದ ಭೇದಗಳಿಗೆ ಅಭೇದವಿರಲಿ. ಅದರಿಂದಲೂ ಪ್ರಕೃತವೇನಾಯಿತು ಎಂದರೆ) ಅವಿಶೇಷತ್ವೇ = ಅಭೇದಭೇದಗಳಿಗೆ ಅತ್ಯಂತಾಭೇದವೂ ವಿಶೇಷವೂ ಇಲ್ಲದೆ ಇರಲು, ಶಬ್ದಯೋಃ = ಅಭೇದ-ಭೇದಶಬ್ದಗಳಿಗೆ, ಪರ್ಯಾಯತ್ವಂ=ಸಹಪ್ರಯೋಗಾನರ್ಹತ್ವವು, ಸ್ಯಾತ್=ಬರಬೇಕಾಗುವುದು. ಹಿ=ಏಕಾರ್ಥವನ್ನೇ ಹೇಳತಕ್ಕದಾದ ಪ್ರಯುಕ್ತ ಘಟಕಲಶಶಬ್ದದಂತೆ, ಎಂದು ಪ್ರಸಿದ್ಧವು. (ಹಾಗೆ ಆಗಲಿ ಎಂದರೆ) ಅಭೇದಭೇದಶಬ್ದೌ ಚ=ಅಭೇದ-ಭೇದಶಬ್ದಗಳನ್ನು, ಪರ್ಯಾಯಾವಿತಿ=ಸಹಪ್ರಯೋಗಾನರ್ಹಗಳೆಂದು, ಕಃ=ಯಾವನು, ವದೇತ್=ಹೇಳಿಯಾನು? (ಯಾರೂ ಹೇಳಲಾರರು. ಮತ್ತೆ ಅಪರ್ಯಾಯಗಳೆಂದೇ ಎಲ್ಲರೂ ಹೇಳುತ್ತಾರೆ. ಅಪ್ರಾಮಾಣಿಕವೂ ಪ್ರಮಾಣವಿರುದ್ಧವೂ ಆಗಿದೆ.) (ಹಾಗಾದರೆ ಭೇದ್ಯಭೇದಿಶಬ್ದಗಳಿಗೂ ಪರ್ಯಾಯತ್ವವನ್ನು ಹೇಳಲಿಕ್ಕೆಬರುವುದು. ಆದರೂ ಅದನ್ನು ಶಿಷ್ಯರೇ ಊಹಿಸಿಕೊಳ್ಳಲಿ ಎನ್ನುವ ಅಭಿಪ್ರಾಯದಿಂದ ಅದನ್ನು ಹೇಳಲಿಲ್ಲ.) (ಶಂಕಿಸುತ್ತಾರೆ) (ಯದ್ಯಪಿ ಭೇದಾಭೇದಗಳಿಗೆ) ಭೇದಿನಾ=ಭೇದವುಳ್ಳ ಘಟದಿಂದಕೂಡಿಕೊಂಡು, ಅಭೇದಃ=ಅಭೇದವಿರಲಿ, (ಆದಾಗ್ಯೂ ಅವುಗಳಿಗೆ) ಅನ್ಯೋನ್ಯಂ=ಪರಸ್ಪರವಾಗಿ, ಭೇದಃ=ಭೇದವು, ಅಸ್ತಿ=ಇದೆ. (ಆದಕಾರಣ ಆ ಶಬ್ದಗಳಿಗೆ ಪರ್ಯಾಯತ್ವವು ಬರುವುದಿಲ್ಲ. ಆದಕಾರಣ ವಿಶೇಷವನ್ನು ಏತಕ್ಕೆ ಅಂಗೀಕರಿಸಬೇಕು? ಎಂದಾಶಂಕಿಸಿದರೆ— ಪರಿಹರಿಸುತ್ತಾರೆ.) ಚೇತ್=ಹಾಗಾದರೆ, ವಿಶೇಷಿತಾ=ಹೀಗೆ ಅಂಗೀಕರಿಸುವವನೂ ಕೂಡ ಅಭಿನ್ನವಾದವಸ್ತುವಿನಲ್ಲಿ ವಿಶೇಷಿತ್ವವನ್ನು ಅಂಗೀಕರಿಸಲೇಬೇಕು.) (ಅದು ಹೇಗೆಂದರೆ) ಅವಿಶೇಷೇ = ವಿಶೇಷವಿಲ್ಲವಾದರೆ, ಭೇದಃ=ಭೇದವು, ಭೇದಿನಾ=ಭೇದಿಯಿಂದ, ಏಕಃ=ಅಭಿನ್ನವು, ತಥಾ=ಹಾಗೆಯೇ, ಅಭಿದಾ=ಅಭೇದವು, ಭೇದಿನಾ=ಭೇದವುಳ್ಳ ಘಟದಿಂದ, (ಅಭಿನ್ನವು.) ಪುನಃ=ಮತ್ತು, ತಯೋಃ=ಆ ಭೇದಾಭೇದಗಳಿಗೆ, ವಿಭೇದಶ್ಚ=ಪರಸ್ಪರವಾಗಿ ಭೇದವೂ, ಇತಿ=ಹೀಗೆ, ತಯೋಃ=ಭೇದಾಭೇದಿಗಳಿಗೆ,

ಭೇದಿಮಾತ್ರತ್ವತಃ=ಕೇವಲಭೇದಿಸ್ವರೂಪತ್ವವಿದ್ದಪ್ರಯುಕ್ತ, ಕಥಂ=ಹೇಗೆ, ಭವೇತ್=ಯುಕ್ತವಾಗುವುದು. (ಅಂದರೆ ಘಟದಿಂದ ಅಭಿನ್ನಗಳಾದ ಭೇದಾಭೇದಗಳಿಗೆ ಪರಸ್ಪರವಾಗಿ ಭೇದಕಾರ್ಯವನ್ನು ನಿರ್ವಾಹವಮಾಡುವುದಕ್ಕಾಗಿ ಘಟದಿಂದ ಸವಿಶೇಷಾಭೇದವನ್ನೇ ಅಂಗೀಕರಿಸಬೇಕು.)

**ತಾ** || ಭೇದವು ಭೇದಿಯಿಂದ ಅಭಿನ್ನವು. ಆ ನ್ಯಾಯದಿಂದಲೇ ಆ ಅಭೇದವೂ ಕೂಡ ಅಭಿನ್ನವೇ. ಆದಕಾರಣ ಆ ಭೇದಾಭೇದಗಳು ಪರಸ್ಪರವಾಗಿಯೂ ಅಭಿನ್ನಗಳೆಂದು ತತ್ವವು. ತಥಾಚ ಭೇದ-ಅಭೇದ ಶಬ್ದಗಳಿಗೆ ಪರ್ಯಾಯತ್ವವು ಪ್ರಾಪ್ತವಾಗಲು ವಿಶೇಷ ಬಲದಿಂದಲೇ ಅದನ್ನು ಪರಿಹರಿಸಬೇಕು. ವಿಶೇಷವನ್ನು ಅಂಗೀಕರಿಸದೆ ಇದ್ದರೆ ಪರ್ಯಾಯತ್ವವನ್ನು ಪರಿಹರಿಸಲು ಸಾಧ್ಯವೇ ಇಲ್ಲವೆಂದಾಗುವುದು. || ೧೭೫ || ೧೭೬ || ೧೭೭ ||

ಪುನಃ ಶಂಕಿಸುತ್ತಾರೆ—

**ಮೂ** || **ಭೇದಿನಶ್ಚೈವ ಭೇದಸ್ಯ ವಿಶೇಷೋ ಯದಿ ಗಮ್ಯತೇ || ೧೭೮ ||**
**ಅಭೇದಾಭೇದಿನೋಶ್ಚೈವ ಕಿಂ ಭೇದೋಽಭೇದಭೇದಯೋಃ |**
**ವಿಶೇಷೇಣೈವ ಸರ್ವತ್ರ ಯದಿ ವ್ಯವಹೃತಿರ್ಭವೇತ್ |**
**ಕಲ್ಪನಾಗೌರವಾಯೈವ ಕಿಂ ಭೇದಃ ಕಲ್ಪ್ಯತೇ ತದಾ || ೧೭೯ ||**

**ಅ** || ಭೇದಿನಶ್ಚ=ಭೇದಿಗೂ, ಭೇದಸ್ಯ ಚ=ಭೇದಕ್ಕೂ, ವಿಶೇಷಃ=ವಿಶೇಷವು, ಯದಿ=ಯಾವ ಪಕ್ಷದಲ್ಲಿ, ಗಮ್ಯತೇ=ಅಂಗೀಕರಿಸಲ್ಪಡುತ್ತದೋ, (ಅಂದರೆ ಭೇದಕ್ಕೂ, ಭೇದಿಯಾದ ಘಟಕ್ಕೂ ಅಭೇದವೂ ವಿಶೇಷವೂ ನನ್ನಿಂದ ಅಂಗೀಕರಿಸಲ್ಪಡುತ್ತದೆ.) ಅಭೇದಾಭೇದಿನೋಶ್ಚೈವ=ಅಭೇದಕ್ಕೂ ಅಭೇದಿಗೂ, (ಸವಿಶೇಷವಾದ ಅಭೇದವು ಅಂಗೀಕರಿಸಲ್ಪಡುತ್ತದೆ) (ತಥಾಚ ಭೇದಾಭೇದಗಳಿಗೆ ಘಟದಿಂದ ನಿರ್ವಿಶೇಷಾಭೇದವಿಲ್ಲದಿರುವುದರಿಂದ ಪರಸ್ಪರವಾಗಿ ಭೇದವು ಕೂಡುವುದರಿಂದ ಶಬ್ದಗಳಿಗೆ ಪರ್ಯಾಯತ್ವವಿಲ್ಲ. ಅಂತೂ ಭೇದಾಭೇದಗಳಿಗೆ ಪರಸ್ಪರವಾಗಿ ಅಭೇದವನ್ನೂ, ಅವಿಶೇಷವನ್ನೂ ಅಂಗೀಕರಿಸಬೇಕೆಂದು ಹೇಳಿದ್ದು ಅಯುಕ್ತವು.)(ಹೀಗಾದಾಗ್ಯೂ ಧರ್ಮ-ಧರ್ಮಿಗಳಿಗೆ ಭೇದವನ್ನು ಅಂಗೀಕರಿಸುವವರಿಗೂ ಅದರಿಂದ ಅಭಿನ್ನವಾದ ವಸ್ತುವಿನಲ್ಲಿ ವಿಶೇಷವನ್ನು ಅಂಗೀಕರಿಸಬೇಕೆಂಬ ಅಭಿಮತವಾದ ಪ್ರಮೇಯವು ಯದ್ಯಪಿ ಸಿದ್ಧವೇ. ಆದಾಗ್ಯೂ ಹಿಂದೆ ಹೇಳಿದ ತತ್ವವನ್ನು ಬಿಡಬಾರದೆನ್ನುವ ಅಭಿಪ್ರಾಯದಿಂದ ಪರಿಹರಿಸುತ್ತಾರೆ.) ಹೀಗಾದರೆ, ಅಭೇದಭೇದಯೋಃ=ಅಭೇದಕ್ಕೂ ಭೇದಕ್ಕೂ, ಭೇದಃ=ಭೇದವು, ಕಿಂ=ಯಾವುದರಿಂದ ಕಲ್ಪಿಸಲ್ಪಡುತ್ತದೆ? (ಅವುಗಳಿಗೂ ಸವಿಶೇಷಾಭೇದವನ್ನೇ ಅಂಗೀಕರಿಸಬೇಕು.) (ಈ ವಿಷಯದಲ್ಲಿ ಯುಕ್ತಿಯನ್ನು ಹೇಳುತ್ತಾರೆ.) ಸರ್ವತ್ರ=ಭೇದ-ಭೇದಿಗಳಿಗೂ, ಅಭೇದಾಭೇದಿಗಳಿಗೂ ಅಭೇದವಿದ್ದರೂ, ವಿಶೇಷೇಣೈವ=ವಿಶೇಷದಿಂದಲೇ, ವ್ಯವಹೃತಿಃ=ನಿರ್ವಿಶೇಷಾಭೇದಾಭಾವಪ್ರಯುಕ್ತವಾದ ಭೇದವ್ಯವಹಾರವು, ಭವೇತ್=ಆಗುವುದು, ಇತಿ ಯದಿ=ಹೀಗೆ ಅಂಗೀಕರಿಸಲ್ಪಡುವುದಾದರೆ, ತದಾ=ಆಗ, ಭೇದಃ=ಭೇದಾಭೇದಗಳಿಗೆ ಭೇದವು, ಕಿಂ ಕಲ್ಪನಾಗೌರವಾಯೈವ ಕಲ್ಪ್ಯತೇ=ಕಲ್ಪನಾಗೌರವಕ್ಕಾಗಿಯೇ ಕಲ್ಪಿಸಲ್ಪಡುತ್ತದೋ ಏನು? (ಅಂದರೆ ಭೇದಾಭೇದಗಳಿಗೆ ಘಟದಿಂದ ಲೆಂಬಂತೆ ಪರಸ್ಪರವಾಗಿಯೂ ಸವಿಶೇಷತ್ವದಿಂದಲೇ ಎಲ್ಲವೂ ಕೂಡುವಾಗ ಭೇದವನ್ನು ಕಲ್ಪಿಸಿದರೆ ಅನೇಕ ಪದಾರ್ಥಗಳನ್ನು ಕಲ್ಪಿಸಿದುದರಿಂದ ಕಲ್ಪನಾಗೌರವವು ಬರಬೇಕಾಗುವುದು. ಹೀಗೆ ಆಗಲಿ, ಅದರಿಂದ ಪ್ರಕೃತವೇನಾಯಿತೆಂದರೆ—) ಭೇದಕ್ಕೆ ಭೇದಿಯಿಂದ ಅಭೇದವಿದ್ದರೂ ತತ್ಸಂಬಂಧಿತ್ವಾದಿವ್ಯವಹಾರವು, ಭೇದಾಭೇದಗಳಿಗೆ ಘಟದಿಂದ ಅಭೇದವಿದ್ದರೂ ಅಪರ್ಯಾಯ

ಶಬ್ದವ್ಯವಹಾರವು ವಿಶೇಷದಿಂದಲೇ ಆಗುವುದಾದರೆ ಆಗ ಧರ್ಮ-ಧರ್ಮಿಗಳಿಗೂ ಭೇದವು ಕಲ್ಪನಾಗೌರವಕ್ಕಾಗಿಯೇ ಕಲ್ಪಿಸಲ್ಪಡುತ್ತದೋ ಏನು? (ಧರ್ಮ-ಧರ್ಮಿಗಳಿಗೆ ಭೇದವನ್ನು ಅಂಗೀಕರಿಸಿಯೂ ಕೊನೆಗೆ ವಿಶೇಷವನ್ನು ಅಂಗೀಕರಿಸಬೇಕೆಂದಾದರೆ ಅದಕ್ಕಿಂತ ಆದಿಯಲ್ಲಿಯೇ ವಿಶೇಷವನ್ನು ಅಂಗೀಕರಿಸುವುದು ಪ್ರಶಸ್ತವು. ಇಲ್ಲವಾದರೆ ಕಲ್ಪನಾಗೌರವವು ಬರಬೇಕಾಗುವುದು.) ॥ ೧೭೮ ॥ ೧೭೯ ॥

ಕಲ್ಪನಾಗೌರವವು ಬರುತ್ತದೆನ್ನುವ ಹೆದರಿಕೆಯಿಂದ ಧರ್ಮ-ಧರ್ಮಿಗಳಿಗೆ ಅಭೇದವನ್ನು ಅಂಗೀಕರಿಸಿ ವ್ಯವಹಾರವಿಶೇಷಕ್ಕಾಗಿ ವಿಶೇಷವನ್ನು ಅಂಗೀಕರಿಸುವುದಾದರೆ ವಿಶೇಷದಿಂದಲೇ ನಿರ್ವಾಹವಾಗುತ್ತದೆಂದು ಇಟ್ಟುಕೊಂಡು ಗವಾಶ್ವಗಳಲ್ಲಿಯೂ ಭೇದವನ್ನು ಬಿಡಬೇಕಾಗುವುದು. ತಥಾಚ ಜಗತ್ತಿನಲ್ಲಿ ಭೇದವೇ ಇಲ್ಲದೆ ಹೋಗಬೇಕಾಗುವುದು ಎಂದರೆ—

**ಮೂ ॥ ಐಕ್ಯಪ್ರತೀತ್ಯಭಾವೇನ ಭೇದ ಏವ ಗವಾಶ್ವಯೋಃ ।**
**ಸ ಏವೇತಿ ಪ್ರತೀತೌ ಹಿ ವಿಶೇಷೋ ನಾಮ ಭಣ್ಯತೇ ॥ ೧೮೦ ॥**

ಅ ॥ ಗವಾಶ್ವಯೋಃ=ಗೋವು-ಕುದುರೆ ಇವುಗಳಿಗೆ, ಐಕ್ಯಪ್ರತೀತ್ಯಭಾವೇನ=ಅಭೇದ ಪ್ರತೀತಿಯಿಲ್ಲದಿರುವುದರಿಂದ, ಭೇದ ಏವ=ಭೇದವೇ, (ಸ್ವೀಕರಿಸಲ್ಪಡುತ್ತದೆ; ವಿಶೇಷವು ಸ್ವೀಕರಿಸಲ್ಪಡುವುದಿಲ್ಲ.) (ಐಕ್ಯಪ್ರತೀತಿಯಿಲ್ಲದಿದ್ದರೂ ವಿಶೇಷವನ್ನು ಏಕೆ ಅಂಗೀಕರಿಸುವುದಿಲ್ಲವೆಂದರೆ—) ಸ ಏವೇತಿ ಪ್ರತೀತೌ ಹಿ=ಅದೇವೇ ಎನ್ನುವ ಅಭೇದಪ್ರತೀತಿಯಿದ್ದಲ್ಲಿಯೇ, ವಿಶೇಷೋ ನಾಮ=ವಿಶೇಷವೆನ್ನುವುದು, ಭಣ್ಯತೇ=ಹೇಳಲ್ಪಡುತ್ತದೆ.

ತಾ ॥ ಧರ್ಮ ಧರ್ಮಿಗಳ ದೃಷ್ಟಾಂತದಿಂದ ಗವಾಶ್ವಗಳಿಗೆ ವಿಶೇಷವನ್ನು ಪರರು ಆಪಾದಿಸಬೇಕು. ಗವಾಶ್ವಗಳಿಗೆ ಧರ್ಮ-ಧರ್ಮಿಗಳ ಸಾಮ್ಯವಿರುವುದಿಲ್ಲ. ಏಕೆಂದರೆ— ಧರ್ಮ-ಧರ್ಮಿಗಳಿಗೆ ಅಭೇದಪ್ರತೀತಿಯಿದೆ. ಗವಾಶ್ವಗಳಿಗೆ ಅಭೇದಪ್ರತೀತಿಯಿರುವುದಿಲ್ಲ. ಗವಾಶ್ವಗಳಿಗೆ ಭೇದವು ಪ್ರತೀತಿ ಸಿದ್ಧವಾದಪ್ರಯುಕ್ತ ಕಲ್ಪನಾಗೌರವವೂ ಇಲ್ಲ ॥ ೧೮೦ ॥

ಈಗ ಅಭೇದವಾದಿಯೂ ಕೂಡ ವಿಶೇಷವನ್ನು ಅಂಗೀಕರಿಸಲೇ ಬೇಕೆನ್ನುತ್ತಾರೆ—

**ಮೂ ॥ ಸಚ್ಚಿದಾದೇರಪರ್ಯಾಯಸಿದ್ಧ್ಯರ್ಥಂ ಮಾಯಿನಾಪಿ ಹಿ ॥ ೧೮೧ ॥**
**ಅಂಗೀಕಾರ್ಯೋ ವಿಶೇಷೋಽಯಂ ಯದ್ಯಸತ್ಯವಿಶೇಷಣಂ ।**
**ಪೃಥಕ್ಪೃಥಗ್ವಾರಯಿತುಂ ಶಬ್ದಾಂತರಮಿತೀಷ್ಯತೇ ॥ ೧೮೨ ॥**
**ಮಾಯಾ ವಿಶೇಷರಾಹಿತ್ಯವಿಶೇಷೇಣ ವಿಶೇಷಿತಾ ।**
**ಸತ್ಯಸ್ಯಾಪಿ ಭವೇತ್ಸಾ ಚ ತಥಾ ಚೇದನವಸ್ಥಿತಿಃ ॥ ೧೮೩ ॥**

ಅ ॥ ಸಚ್ಚಿದಾದೇಃ=ಸತ್ ಚಿತ್ ಮೊದಲಾದ ಪದಸಮುದಾಯಕ್ಕೆ, ಅಪರ್ಯಾಯಸಿದ್ಧ್ಯರ್ಥಂ=ಅಪರ್ಯಾಯತ್ವವು ಸಿದ್ಧಿಸುವುದಕ್ಕಾಗಿ, ಮಾಯಿನಾಪಿ=ಕ್ರಿಯಾದಿ ವಿಷಯಕಗಳಾದ ವಾಕ್ಯಗಳಿಗೆ ಮಾಯಿಕ ವಿಷಯತ್ವವನ್ನು ಅಂಗೀಕರಿಸತಕ್ಕ ಮಾಯಾವಾದಿಯಿಂದಲೂ ಕೂಡ, ಅಯಂ=ಅಪರ್ಯಾಯಶಬ್ದಪ್ರವೃತ್ತಿಗೆ ಕಾರಣವಾದ, ವಿಶೇಷಃ=ವಿಶೇಷವು, ಅಂಗೀಕಾರ್ಯಃ = ಅಂಗೀಕರಿಸಲಿಕ್ಕೆ ಯೋಗ್ಯವಾದುದು, ಹಿ=ವಿಶೇಷಕ್ಕೆ ತಥಾಭಾವವು ಪ್ರಮಿತವಾಗಿದೆ. (ಅಪೋಹ ವಾದವನ್ನು ಆಶ್ರಯಿಸಿ ಶಂಕಿಸುತ್ತಾರೆ). ಅಸತ್ಯ ವಿಶೇಷಣಂ=ಅಸತ್ಯತ್ವಾದಿ

ವಿಶೇಷಣವನ್ನು ಅಥವಾ ಆರೋಪಿತ ವಿಶೇಷಣವನ್ನು, ಪೃಥಕ್ ಪೃಥಕ್ ವಾರಯಿತುಂ=ಪ್ರತ್ಯೇಕ ಪ್ರತ್ಯೇಕವಾಗಿ ತಡೆಯುವುದಕ್ಕಾಗಿ, ಶಬ್ದಾಂತರಂ = ಬೇರೆ ಶಬ್ದವು, ಇತಿ = ಪೂರ್ವೋಕ್ತ ಪ್ರಕಾರ, ಇಷ್ಯತೇ ಯದಿ = ಅಂಗೀಕರಿಸಲ್ಪಡುವುದಾದರೆ, ಮಾಯಾ ವಿಶೇಷರಾಹಿತ್ಯ ವಿಶೇಷೇಣ = ಆರೋಪಿತವಾದ ಅಸತ್ಯತ್ವಾದಿ ವಿಶೇಷಣದ ರಾಹಿತ್ಯರೂಪವಾದ ವಿಶೇಷದಿಂದ, ಸತ್ಯಸ್ಯಾಪಿ=ಸತ್ಯವಾದುದಕ್ಕೂ, ವಿಶೇಷಿತಾ=ವಿಶೇಷವತ್ವವು, ಭವೇತ್=ಆಗುವುದು. (ಹೀಗೆ ಕುಸೃಷ್ಟಿಯನ್ನು ಕಲ್ಪಿಸಿದರೂ ಸತ್ಯಕ್ಕೆ ಅಖಂಡತ್ವವು ಸಿದ್ಧಿಸುವುದಿಲ್ಲ. ಕಲ್ಪಿತಗಳಾದ ಅಸತ್ಯತ್ವಾದಿ ವಿಶೇಷಣಗಳ ರಾಹಿತ್ಯರೂಪವಾದ ವಿಶೇಷಣದಿಂದ ವಿಶೇಷಿತ್ವವನ್ನು ಬಿಡಲು ಸಾಧ್ಯವಿಲ್ಲ). (ಪುನಃ ಶಂಕಿಸುತ್ತಾರೆ—) (ಆರೋಪಿತವಾದ, ವಿಶೇಷ ರಾಹಿತ್ಯರೂಪವಾದ ವಿಶೇಷಣದಿಂದ ವಿಶೇಷಿತ್ವವು ಸತ್ಯವಾಗಿದ್ದರೆ ಅಖಂಡತ್ವಖಂಡನವು ಆಗುತ್ತಿತ್ತು. ಹೀಗೆ ಇಲ್ಲ. ಮತ್ತೆ) ಸಾ ಚ = ಆರೋಪಿತ ವಿಶೇಷರಾಹಿತ್ಯರೂಪವಾದ ವಿಶೇಷಣ-ವಿಶೇಷಿತ್ವವೂ ಕೂಡ, (ಅಸತ್ಯತ್ವಾದಿಗಳಂತೆ ಆರೋಪಿತವೇ ಆಗಿದೆ.) (ಆರೋಪಿತವಾದ ರೂಪದಿಂದ ಆಕಾಶಕ್ಕೆ ನೀರೂಪತ್ವವು ತಪ್ಪುವುದಿಲ್ಲ.) (ಪರಿಹರಿಸುತ್ತಾರೆ—) ತಥಾ ಚೇತ್=ಹಾಗಾದರೆ, (ವಾಕ್ಯಾರ್ಥಕ್ಕೆ) ಅನವಸ್ಥಿತಿಃ=ಅನವಸ್ಥೆಯು. ವ್ಯವಸ್ಥಾಭಾವವು (ಆಗುವುದು).

ತಾ ॥ (1) ಸತ್ಯಾದಿಪದಗಳು ಸತ್ಯತ್ವಾದಿ ವಿಧಾಯಕಗಳಾದರೆ ವಿಧಿಸಲ್ಪಡತಕ್ಕ ಸತ್ಯತ್ವಾದಿ ವಿಶೇಷಣಗಳು ಬ್ರಹ್ಮನಲ್ಲಿಲ್ಲದಿರುವುದರಿಂದ ಕೇವಲ ಸ್ವರೂಪವು ಒಂದೇಯಾದುದರಿಂದ ಪರ್ಯಾಯತ್ವವು ಬರಬೇಕಾಗುವುದು. ಹೀಗೆ ಸತ್ಯಾದಿಪದಗಳು ಸತ್ಯತ್ವಾದಿಗಳನ್ನು ವಿಧಿಸುವುದಿಲ್ಲ. ಮತ್ತೆ ಬ್ರಹ್ಮನಲ್ಲಿ ಅಸತ್ಯತ್ವಾದಿ ವಿಶೇಷಣಗಳು ಭ್ರಾಂತಿಕಲ್ಪಿತಗಳಾದುದರಿಂದ ಅದನ್ನು ನಿವಾರಣ ಮಾಡುವುದಕ್ಕಾಗಿ ಅಸತ್ಯತ್ವಾದಿಗಳ ಅಭಾವವನ್ನು ಹೇಳುತ್ತವೆ. ಸತ್ಯಪದವು ಅಜ್ಞಾನಕ್ಕೂ ವ್ಯಾವೃತ್ತಿಯನ್ನು ಹೇಳುವುದಿಲ್ಲ. ಆದುದರಿಂದ ಸತ್ಯಜ್ಞಾನಾದಿಪದಗಳಿಗೆ ಪರ್ಯಾಯತ್ವವೂ ಇಲ್ಲ; ವೈಯರ್ಥ್ಯವೂ ಇಲ್ಲ. ಅಥವಾ ಸತ್ಯಾದಿಪದಗಳು ಸತ್ಯತ್ವಮೊದಲಾದ ಪ್ರತ್ಯೇಕ ಅರ್ಥಗಳನ್ನು ಹೇಳತಕ್ಕವುಗಳಾದುದರಿಂದ ಪರ್ಯಾಯಗಳಾಗುವುದಿಲ್ಲ. ಬ್ರಹ್ಮನಲ್ಲಿ ಆದರೂ ಲಕ್ಷಣಾವೃತ್ತಿಯಿಂದ ಪ್ರವೃತ್ತಿಸುತ್ತವೆ. ಅಲ್ಲಿ ಸತ್ಯತ್ವಾದಿ ವಿಶೇಷಣಗಳನ್ನು ಬೋಧಿಸುವುದಿಲ್ಲ. ಹೀಗಾದರೆ ಒಂದರಿಂದಲೇ ಲಕ್ಷಿತಗಳಾದುದರಿಂದ ಇತರ ಪದಗಳಿಗೆ ವೈಯರ್ಥ್ಯವೆಂದು ಹೇಳ ಕೂಡದು. ಆರೋಪಿತಗಳಾದ ಅಸತ್ಯತ್ವಾದಿ ವಿಶೇಷಣಗಳನ್ನು ಪ್ರತ್ಯೇಕವಾಗಿ ನಿವಾರಿಸುವುದರಿಂದ ಸಾರ್ಥಕಗಳಾಗುತ್ತವೆ. ಆದಕಾರಣ ಪರ್ಯಾಯತ್ವವೂ ಇಲ್ಲ; ವೈಯರ್ಥ್ಯವೂ ಇಲ್ಲ. (2) ವಾಕ್ಯಾರ್ಥಕ್ಕೆ ಅನವಸ್ಥೆಯು ಬಂದರೆ ಯಾವುದೊಂದು ವಾಕ್ಯಾರ್ಥವೂ ವ್ಯವಸ್ಥಿತವಾಗದೆ ಹೋಗುವುದು. ಸತ್ಯತ್ವಾದಿ ವಿಶೇಷಣವುಳ್ಳತನದಿಂದಲೂ ಅಸತ್ಯತ್ವಮೊದಲಾದ ವ್ಯಾವೃತ್ತಿವಿಶಿಷ್ಟವಾಗಿಯೂ ಪ್ರತಿಪಾದಿತವಾಗಲಿಲ್ಲ. ಸಂಸರ್ಗಭೇದಗಳನ್ನು ಬಿಟ್ಟು ವಾಕ್ಯಾರ್ಥವಿಲ್ಲ. ಬ್ರಹ್ಮನೇ ವಾಕ್ಯಾರ್ಥನು ಎಂದು ಹೇಳಕೂಡದು. ಬ್ರಹ್ಮನು ಸ್ವಪ್ರಕಾಶನಾಗಿದ್ದಾನೆ. ವ್ಯಾವೃತ್ತಿಯು ಅಸತ್ಯವಾಗಿದೆ ॥ ೧೮೧ ॥ ೧೮೨ ॥ ೧೮೩ ॥

ಬ್ರಹ್ಮನು ನಿರ್ವಿಶೇಷನಾದರೆ ಪದಗಳಿಗೆ ಪೌನರುಕ್ತ್ಯಾದಿಗಳು ಮಾತ್ರ ಬರುವುದಲ್ಲ; ಮತ್ತೆ ಯಾವುದಾದರೊಂದು ಪದಕ್ಕೂ ಅಲ್ಲಿ ಪ್ರವೃತ್ತಿಯೇ ಆಗಲಾರದೆನ್ನುತ್ತಾರೆ.

**ಮೂ ॥ ಯದಿ ಸತ್ಯೇ ವಿಶೇಷೋ ನ ನ ತದುಕ್ತಿರ್ಭವೇತ್ತದಾ ।**

**ಲಕ್ಷ್ಯತೇ ಚೇತ್ತೇನ ಲಕ್ಷ್ಯಮಿತ್ಯಪಿ ಸ್ಯಾದ್ವಿಶೇಷಿತಾ ॥ ೧೮೪ ॥**

ಅ || ಯದಿ=ಯಾವಪಕ್ಷದಲ್ಲಿ, ಸತ್ಯೇ=ಸತ್ಯಪದದಲ್ಲಿ, ವಿಶೇಷಃ=ವಿಶೇಷವು, ನ=ಇಲ್ಲವೋ, ತದಾ = ಆಗ, (ಗುಣಕರ್ಮಾದಿ ನಿಮಿತ್ತವನ್ನು ಆಶ್ರಯಿಸದೆ ಯಾವಶಬ್ದಕ್ಕೂ ಪ್ರವೃತ್ತಿಯಿಲ್ಲದಿರುವುದರಿಂದ) ತದುಕ್ತಿಃ=ಆ ವಿಶೇಷದ ಉಕ್ತಿಯು, ನ ಭವೇತ್=ಆಗಲಾರದು. ತೇನ = ಆ ಶಬ್ದದಿಂದ, ಲಕ್ಷ್ಯತೇಚೇತ್ = ಲಕ್ಷಿಸಲ್ಪಡುತ್ತಾನೆಂದಾದರೆ, ಲಕ್ಷ್ಯಂ ಇತ್ಯಪಿ = ಲಕ್ಷ್ಯಂ ಎನ್ನುವುದೂ ಕೂಡ, ವಿಶೇಷಿತಾ = ಲಕ್ಷ್ಯತ್ವರೂಪವಾದ ವಿಶೇಷವತ್ವವು, ಸ್ಯಾತ್ = ಆಗುವುದು.

ತಾ || (1) ಬ್ರಹ್ಮನು ಶಬ್ದವಾಚ್ಯನೆಂದಾಗಿದ್ದರೆ ಈ ಹಿಂದೆ ಹೇಳಿದ ದೋಷವು ಬರುತ್ತಿತ್ತು. ಬ್ರಹ್ಮನು ಶಬ್ದದಿಂದ ವಾಚ್ಯನೇ ಅಲ್ಲ. ಮತ್ತೆ ಲಕ್ಷ್ಯನೇ ಆಗಿರುತ್ತಾನೆ. ಲಕ್ಷಣಾವೃತ್ತಿಗೆ ಗುಣಕ್ರಿಯಾದಿಗಳ ಅಪೇಕ್ಷೆಯಿಲ್ಲ. ಅಪೇಕ್ಷೆಯಿರುತ್ತಿದ್ದರೆ ಶಕ್ತಿವೃತ್ತಿಯೇ ಬರುವುದು. ಹೀಗೆ ಅಂಗೀಕರಿಸಿದರೂ ಬ್ರಹ್ಮನಿಗೆ ಲಕ್ಷ್ಯತ್ವರೂಪವಿಶೇಷವು ಬರುವುದು. ಮತ್ತು ಮುಖ್ಯಾರ್ಥಯೋಗಾದಿರೂಪವಾದ ವಿಶೇಷವೂ ಬರುವುದು. || ೧೮೪ ||

ಹಾಗಾದರೆ ಬ್ರಹ್ಮನಿಗೆ ಲಕ್ಷ್ಯತ್ವವೂ ಇಲ್ಲವೇ ಇಲ್ಲ. ಲಕ್ಷ್ಯಂ ಎನುವುದೂ ಕೂಡ ಲಕ್ಷಣಾವೃತ್ತಿಯಿಂದಲೇ ಹೇಳಲ್ಪಡುತ್ತದೆ. ಶಕ್ತಿವೃತ್ತಿಯಿಂದ ಅಲ್ಲ ಎಂದರೆ ಹಾಗೆ ಹೇಳಕೂಡದು. ಈ ವಾಕ್ಯದಲ್ಲಿಯೂ ಪರರು ಲಕ್ಷ್ಯಪದವನ್ನು ಪ್ರಯೋಗಮಾಡುವುದರಿಂದ ಲಕ್ಷ್ಯತ್ವರೂಪವಾದ ವಿಶೇಷವು ಲಭಿಸುತ್ತದೆ. ಅದರಿಂದಲೇ ಲಕ್ಷ್ಯವೇ ಎಂದರೆ—

**ಮೂ || ಪುನಃ ಪುನರ್ಲಕ್ಷಣಾಯಾಮಪಿ ಸ್ಯಾದನವಸ್ಥಿತಿಃ ।**
**ಯದ್ಯಭಾವವಿಶೇಷಿತ್ವಂ ಸ್ಯಾದಂಗೀಕೃತಮೇವ ತೇ ||**
**ಅಸಾರ್ವಜ್ಞಾದಿರಾಹಿತ್ಯಮಪ್ಯೇವಂ ತೇ ಭವಿಷ್ಯತಿ || ೧೮೫ ||**

ಅ || ಪುನಃ ಪುನಃ=ಮತ್ತೂ ಮತ್ತೂ, ಲಕ್ಷಣಾಯಾಮಪಿ=ಲಕ್ಷಣಾವೃತ್ತಿಯು ಆಶ್ರಯಿಸಲ್ಪಟ್ಟರೂ, ಅನವಸ್ಥಿತಿಃ=ಅನವಸ್ಥೆಯು, ಸ್ಯಾತ್=ಬರುವುದು. ತೇ=ನಿನ್ನ ಮತದಲ್ಲಿ, ಅಭಾವವಿಶೇಷಿತ್ವಂ = ಅಭಾವರೂಪವಿಶೇಷವುಳ್ಳತನವು, ಅಂಗೀಕೃತಮೇವ ಸ್ಯಾದ್ಯದಿ = ಅಂಗೀಕರಿಸಲ್ಪಟ್ಟದ್ದೇ ಆದರೆ, ಏವಂ=ಹೀಗಾದರೆ, ಅಸಾರ್ವಜ್ಞಾದಿರಾಹಿತ್ಯಮಪಿ = ಅಸರ್ವಜ್ಞತ್ವಾದಿಗಳ ರಾಹಿತ್ಯವೂ ಕೂಡ, ತೇ=ನಿನ್ನಿಂದ, ಭವಿಷ್ಯತಿ=ಅಂಗೀಕರಿಸಲು ಯೋಗ್ಯವಾಗುವುದು.

ತಾ || (1) ಮಾಯಾವಿಶೇಷರಾಹಿತ್ಯರೂಪವಾದ ವಿಶೇಷಣದಿಂದ ವಿಶೇಷವತ್ವವು ಸತ್ಯವಾದುದಕ್ಕೂ ಆಗುವುದು ಎಂದು ಯಾವುದು ಹೇಳಲ್ಪಟ್ಟದೋ ಅದು ಅನಿಷ್ಟವಲ್ಲ. ಅಭಾವರೂಪವಾದ ವಿಶೇಷವದೆ ಎಂದು ನಾನು ಅಂಗೀಕರಿಸಿರುವೆನು. **ನೇಹನಾ ನಾಸ್ತಿ** ಎನ್ನುವ ಶ್ರುತಿಯು ಈ ಭೂತಲದಲ್ಲಿ ಘಟವು ಇಲ್ಲ ಎನ್ನುವುದರಂತೆ ಬ್ರಹ್ಮನಲ್ಲಿ ಅಭಾವವನ್ನು ಬೋಧಿಸುತ್ತದೆ. (2) ಅಭಾವ ಧರ್ಮವಿದೆಯೆಂದಂಗೀಕರಿಸಿದರಿಂದ ಭಾವನಿಮಿತ್ತವಿಲ್ಲದಿದ್ದರೂ ಅಭಾವನಿಮಿತ್ತದಿಂದ ಪದಪ್ರವೃತ್ತಿಯು ಕೂಡುತ್ತದೆ. (3) ಇಲ್ಲಿ ಇಷ್ಟು ಕೇಳಬೇಕು; ಪರರು ಸಿದ್ಧಾಂತವಾದ ಅಖಂಡತ್ವವನ್ನು ಬಿಟ್ಟು ಅಭಾವರೂಪಧರ್ಮವಿದೆಯೆಂದು ಏಕೆ ಅಂಗೀಕಾರಮಾಡುತ್ತಿ? ಎಂದು ಕೇಳಬೇಕು. ಆಗ **'ಸತ್ಯಂ ಜ್ಞಾನಮನಂತಂ ಬ್ರಹ್ಮ ವಿಜ್ಞಾನಮಾನಂದಂ'** ಇದುಮೊದಲಾದ ಪದಗಳಾದರೂ ಬ್ರಹ್ಮನಲ್ಲಿ ಶ್ರುತಗಳಾಗಿವೆ. **'ನೇಹ ನಾನಾಸ್ತಿ'** ಇತ್ಯಾದಿ ಶ್ರುತಿ ವಿರೋಧ

ಬರುವಪ್ರಯುಕ್ತ ಅವುಗಳಿಗೆ ವಿಧಿರೂಪವಾದ ಅರ್ಥವನ್ನು ಸ್ವೀಕರಿಸಲಿಕ್ಕೆ ಶಕ್ಯವಾಗುವುದಿಲ್ಲ. ಅಭಾವಧರ್ಮವನ್ನು ಅಂಗೀಕರಿಸಿದರೆ ವಿರೋಧವಿಲ್ಲ ಎಂದು ಹೇಳಿದರೆ— ಹೇಗೆ ಸತ್ಯಜ್ಞಾನವೊದಲಾದ ಪದಗಳು ಬ್ರಹ್ಮನಲ್ಲಿ ಶ್ರುತಗಳಾಗುತ್ತವೋ, ಹಾಗೆಯೇ '**ಏಷ ಸರ್ವಜ್ಞಃ ಏಷ ಸರ್ವೇಶ್ವರಃ**' ಎಂದು ಸರ್ವಜ್ಞತ್ವಾದಿಗಳನ್ನು ಬೋಧಿಸತಕ್ಕ ಪದಗಳೂ ಶ್ರುತಗಳಾಗುತ್ತವೆ. ತಥಾಚ ಹೇಗೆ ಅವುಗಳು ಅನೃತತ್ವವೊದಲಾದ ಅಭಾವವನ್ನು ಹೇಳುತ್ತವೋ ಹಾಗೆಯೇ ಇವುಗಳೂ ಕೂಡ ಅಸರ್ವಜ್ಞತ್ವಾದ್ಯಭಾವಗಳನ್ನು ಹೇಳುತ್ತವೆಂದು ನೀನು ಅಂಗೀಕರಿಸಲೇಬೇಕು. ಅಂತೂ ಸತ್ಯಜ್ಞಾನಾದಿವಾಕ್ಯವು ಯಥಾರ್ಥವನ್ನು ತಿಳಿಸಿಕೊಡುತ್ತದೆ. ಸಾರ್ವಜ್ಞಾದಿವಾಕ್ಯವು ಮಾಯಾಶಬಲಬ್ರಹ್ಮಪರವು ಎನ್ನುವ ವಿಭಾಗವು ಯುಕ್ತವಲ್ಲ. ॥ ೧೮೫ ॥

ಈ ವಿಭಾಗವು ಬೇಡ. ಅಸರ್ವಜ್ಞತ್ವಾದ್ಯಭಾವವನ್ನೂ ಬ್ರಹ್ಮನಲ್ಲಿ ಅಂಗೀಕರಿಸುತ್ತೇವೆ ಎಂದರೆ—

**ಮೂ ॥ ತದಾ ಸಾರ್ವಜ್ಞ (ಜ್ಞ್ಯ) ಮೇವ ಸ್ಯಾದ್ಭಾವಾರ್ಥತ್ವಾನ್ನಞೋ-ರ್ದ್ವಯೋಃ ॥ ೧೮೬ ॥**

**ಯದಿ ನೈತಾದೃಶಂ ಗ್ರಾಹ್ಯಮಸುಖತ್ವಾನಿವರ್ತನಾತ್ ।**
**ಅಸತ್ವಾಜ್ಞಾನತಾದೇಶ್ಚ ಸ್ಯಾದಸತ್ವಾದಿಕಂ ತದಾ ॥ ೧೮೭ ॥**

ಅ ॥ ನಞೋರ್ದ್ವಯೋಃ = ಎರಡು ನಞ್‌ಗಳಿಗೆ, ಭಾವಾರ್ಥತ್ವಾತ್ = ಭಾವರೂಪವಾದ ಅರ್ಥವಿದ್ದಪ್ರಯುಕ್ತ, ಆಗ, ಸಾರ್ವಜ್ಞಮೇವ = ಸರ್ವಜ್ಞತ್ವವೇ, ಸ್ಯಾತ್ = ಬರುವುದು. ಅಸುಖತ್ವಾನಿವರ್ತನಾತ್ = ಅಸುಖತ್ವಕ್ಕೆ ನಿವೃತ್ತಿಯಿಲ್ಲದಿರುವುದರಿಂದಲೂ, ಅಸತ್ವಾಜ್ಞಾನತಾದೇಶ್ಚ = ಅಸತ್ಯತ್ವ, ಅಜ್ಞಾನತ್ವ ವೊದಲಾದುದಕ್ಕೂ ನಿವೃತ್ತಿಯಾಗದಿರುವುದರಿಂದ, ಏತಾದೃಶಂ = ಇಂತಹ ಪ್ರಮೇಯವು, ನ ಗ್ರಾಹ್ಯಂ ಯದಿ = ಸ್ವೀಕರಿಸಲ್ಪಡದೆ ಇದ್ದರೆ, ತದಾ = ಆಗ, ಅಸತ್ವಾದಿಕಂ = ಅಸತ್ವ ವೊದಲಾದುದು, ಸ್ಯಾತ್ = ಆಗುವುದು.

ತಾ ॥ (1) ಬ್ರಹ್ಮನಲ್ಲಿ ಸಾರ್ವಜ್ಞಾದಿಗಳ ಅಭಾವವನ್ನು ಅಂಗಿಕರಿಸಿದರೆ '**ದ್ವೌ ನಞೌ ಪ್ರಕೃತಮರ್ಥಂ ಸಾತಿಶಯಂ ಗಮಯತಃ**' ಎನ್ನುವ ನ್ಯಾಯದಿಂದ ಸರ್ವಜ್ಞತ್ವವೊದಲಾದ ಭಾವಧರ್ಮಗಳನ್ನು ಅಂಗೀಕರಿಸಲೇಬೇಕು. (2) '**ಅಸಾರ್ವಜ್ಞಾದಿರಾಹಿತ್ಯಮಪ್ಯೇವಂ ತೇ ಭವಿಷ್ಯತಿ**' ಎಂದು ಹೇಳಿದ್ದನ್ನು ಅಂಗೀಕರಿಸದೆ ಇದ್ದರೆ ಬಾಧಕವನ್ನು ಯದಿ ಇತ್ಯಾದಿಗಳಿಂದ ಹೇಳಿದರು. ಹೇಗೆಂದರೆ— ಸರ್ವಜ್ಞಾದಿಪದವು ಬ್ರಹ್ಮನಲ್ಲಿ ಶ್ರುತವಾದದ್ದು ಅಸರ್ವಜ್ಞತ್ವಾದಿಗಳ ನಿವೃತ್ತಿಯನ್ನು ತಿಳಿಸುತ್ತದೆ ಎನ್ನುವ ಪ್ರಮೇಯವನ್ನು ಅಂಗೀಕರಿಸದೆ ಇದ್ದರೆ ಆಗ ಆನಂದಪದವೂ ಕೂಡ ಅಸುಖತ್ವವನ್ನು ನಿವರ್ತಿಸಲಾರದು. ಸತ್ಯಪದವು ಅಸತ್ಯತ್ವವನ್ನೂ, ಜ್ಞಾನಪದವು ಅಜ್ಞಾನತ್ವವನ್ನೂ, ಆತ್ಮಪದವು ಅನಾತ್ಮತ್ವವನ್ನೂ ನಿವರ್ತಿಸಲಾರದು. (3) ಆನಂದಾದಿಪದಗಳಿಗೆ ಅಸುಖತ್ವಾದಿ ವ್ಯಾವರ್ತಕತ್ವವು ಬೇಡ. ದೋಷವೇನೆಂದರೆ ಬ್ರಹ್ಮನಲ್ಲಿ ಯಾದರೂ ಅಸತ್ವಾದಿಗಳು ಪ್ರಸಕ್ತಗಳಾಗಿವೆ. ಅದನ್ನು ಹೋಗಲಾಡಿಸುವುದಕ್ಕಾಗಿ ಸತ್ಯಜ್ಞಾನಾದಿವಾಕ್ಯಗಳು ಪ್ರವೃತ್ತಗಳಾಗಿವೆ. ಅವುಗಳೂ ಕೂಡ ಅಸತ್ವಾದಿಗಳನ್ನು ವ್ಯಾವರ್ತಿಸದಿದ್ದರೆ ಆಗ ಬ್ರಹ್ಮನಿಗೆ ಅಸತ್ವಾದಿಗಳು ತಾತ್ವಿಕವೇ ಎಂದು ಪ್ರಾಪ್ತವಾಯಿತು. ॥ ೧೮೬ ॥ ೧೮೭ ॥

ಪುನಃ ಶಂಕಿಸುತ್ತಾರೆ—

**ಮೂ ॥ ಅನೃತಾದಿವಿರೋಧಿತ್ವಂ ಯದ್ಯಸ್ಯಾಭ್ಯುಪಗಮ್ಯತೇ ।**
**ಅನ್ಯೈಶ್ವರ್ಯವಿರೋಧಿತ್ವಮಪ್ಯೇವಂ ಕಿಂ ನಿವಾರ್ಯತೇ ॥ ೧೮೮ ॥**
**ಅಖಂಡಖಂಡನಾದೇವಂ ವಿಶೇಷೋಽಖಂಡವಾದಿನಾ ।**
**ಖಂಡಿತೇನಾಪಿ ಮನಸಾ ಸ್ವೀಕಾರ್ಯೋಽನನ್ಯಥಾಗತೇಃ ॥ ೧೮೯ ॥**
**ಅಖಂಡಖಂಡವಾದಿಭ್ಯಾಂ ಖಂಡಾಖಂಡೇನ ಚೈವ ತತ್ ।**
**ಮಹಾದರೇಣ ಶಿರಸಿ ವಿಶೇಷೋ ಧಾರ್ಯ ಏವ ಹಿ ॥ ೧೯೦ ॥**

ಅ ॥ ಅಸ್ಯ = ಸತ್ಯತ್ವಾದಿಗಳಿಗೆ, ಅನೃತಾದಿವಿರೋಧಿತ್ವಂ = ಅನೃತಾದಿಗಳಿಂದ ವಿರೋಧಿತ್ವವು, ಯದಿ = ಯಾವ ಪಕ್ಷದಲ್ಲಿ, ಅಭ್ಯುಪಗಮ್ಯತೇ = ಅಂಗೀಕರಿಸಲ್ಪಡುತ್ತದೋ, ಏವಮಪಿ = ಹೀಗಾದರೆ, ಅನ್ಯೈಶ್ವರ್ಯವಿರೋಧಿತ್ವಮಪಿ = ಸರ್ವೇಶ್ವರಾದಿ ಪದಗಳಿಂದ ಸಮರ್ಪಿತವಾದ ಐಶ್ವರ್ಯಮೊದಲಾದುದಕ್ಕೆ, ಅನ್ಯೈಶ್ವರ್ಯದ ವಿರೋಧಿತ್ವವೂ ಕೂಡ, ಕಿಂ ನಿವಾರ್ಯತೇ = ಏಕೆ ನಿವಾರಿಸಲ್ಪಡುತ್ತದೆ? (ಯಾವ ಕಾರಣದೆಶೆಯಿಂದ) ಏವಂ = ಹೀಗೆ, ಅಖಂಡಖಂಡನಾತ್ = ಭೇದವಿಲ್ಲವೆನ್ನುವುದನ್ನು ಖಂಡಿಸಿದರಿಂದ, ಅಖಂಡವಾದಿನಾಽಪಿ = ಅಖಂಡವಾದಿಯಿಂದಲೂ ಕೂಡ, ಅನನ್ಯಥಾಗತೇಃ = ಬೇರೆ ಗತಿಯಿಲ್ಲದಿರುವುದರಿಂದ, ಖಂಡಿತೇನ = ಮೇಲೆ ಉತ್ಪ್ರೇಕ್ಷಾರಹಿತವಾದ, ಮನಸಾ = ಮನಸ್ಸಿನಿಂದ, ವಿಶೇಷಃ = ವಿಶೇಷವು, ಸ್ವೀಕಾರ್ಯಃ = ಸ್ವೀಕರಿಸಲಿಕ್ಕೆ ಯೋಗ್ಯವಾದುದು. (ಈಗ ಭೇದಾಭೇದವಾದಿಯೂ ವಿಶೇಷವನ್ನು ಅಂಗೀಕರಿಸಬೇಕೆನ್ನುತ್ತಾರೆ.) ಹಿ = ಯಾವ ಕಾರಣದಿಂದ, ಹೀಗೆ ಅಖಂಡಖಂಡವಾದಿಭ್ಯಾಂ = ಅಖಂಡವಾದಿಯೂ ಖಂಡವಾದಿಯೂ ಇವರಿಂದ, ವಿಶೇಷಃ = ವಿಶೇಷವು, ಅಂಗೀಕಾರ್ಯಃ = ಅಂಗೀಕರಿಸಲು ಯೋಗ್ಯವಾದುದೋ, ತತ್ ಏವ = ಆದಕಾರಣದಿಂದಲೇ, ಖಂಡಾಖಂಡೇನ ಚ = ಖಂಡಾಖಂಡವಾದಿಯಿಂದಲೂ ಕೂಡ, ಶಿರಸಿ = ಶಿರಸ್ಸಿನಲ್ಲಿ, ಮಹಾದರೇಣ = ಮಹಾವಿಶ್ವಾಸದಿಂದ, ವಿಶೇಷಃ = ವಿಶೇಷವು, ಧಾರ್ಯ ಏವ = ಧರಿಸಲು ಶಕ್ಯವೇ ಆಗಿದೆ. ॥ ೧೮೮ ॥ ೧೮೯ ॥ ೧೯೦ ॥

ಇದು ಸೂತ್ರಕಾರರ ಅಭಿಪ್ರಾಯವು ಆಗಲು ಯೋಗ್ಯವಾಗುವುದಿಲ್ಲ. ಸೂತ್ರಕಾರರು ಹೀಗೆ ಅಲ್ಲದಿರುವ (೧) '**ಉಭಯವ್ಯಪದೇಶಾತ್ತ್ವಹಿಕುಂಡಲವತ್**, (೨) **ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್** (೩) **ಪೂರ್ವವದ್ವಾ**' ಎಂದು ಅಹಿಕುಂಡಲಾದಿಗಳನ್ನು ದೃಷ್ಟಾಂತಗಳೆಂದು ಹೇಳಿರುವರು. (೧) ಸರ್ಪನ ಅವಯವಗಳಿಗೆ ಪರಸ್ಪರ ಸಂಯೋಗವಿಶೇಷವೇ ಅಹಿಕುಂಡಲವೆನ್ನಿಸುತ್ತದೆ. ಆ ಸಂಯೋಗವಿಶೇಷವು ಸರ್ಪನಿಂದ ಅತ್ಯಂತಾಭಿನ್ನವಲ್ಲ. (೨) ಪ್ರಕಾಶವು ದ್ರವ್ಯಾಂತರವು. ಸೂರ್ಯನಿಂದ ಅಭಿನ್ನವಲ್ಲ. ಎಂದಾದ ಕಾರಣ 'ಪ್ರಕಾಶಾಶ್ರಯವದ್ವಾ' ಎನ್ನುವ ದೃಷ್ಟಾಂತವೂ ಕೂಡ ಅತ್ಯಂತಾಭೇದಕ್ಕೆ ಉಪಯುಕ್ತವಾದುದಲ್ಲ. (೩) ಕಾಲದಲ್ಲಿ ಪೂರ್ವತ್ವವೆಂದರೆ ಮುಗಿದುಹೋದ ಕ್ರಿಯೆಯ ಸಂಬಂಧವು ಆದ ಪ್ರಯುಕ್ತ 'ಪೂರ್ವವದ್ವಾ' ಎನ್ನುವುದೂ ಪ್ರಕೃತೋಪಯುಕ್ತವಲ್ಲ ಎಂದರೆ—

**ಮೂ ॥ ನಿದರ್ಶನತ್ರಯೇಣಾತೋ ಭಗವಾನತ್ಯಭಿನ್ನತಾಂ ॥**
**ಗುಣಾನಾಮಾದರೇಣಾಹ ತಚ್ಚ ನಾಭಿಹಿತಾನ್ವಯಃ ॥ ೧೯೧ ॥**

ಅ ॥ (ಯಾವ ಕಾರಣದಿಂದ ಹೀಗೆ ಉಭಯವ್ಯಪದೇಶಾನ್ಯಥಾನುಪಪತ್ತಿರೂಪವಾದ ಅರ್ಥಾಪತ್ತಿಯಿಂದ ಶ್ರೀ ಹರಿಯ ಗುಣಗಳಿಗೆ ಶ್ರೀ ಹರಿಯಿಂದ ಸವಿಶೇಷವಾದ ಅತ್ಯಂತಾಭೇದವು

ಸಿದ್ಧವಾಗಿದೆಯೋ, ಅತಃ=ಆದಕಾರಣ, ಭಗವಾನ್=ಶ್ರೀವೇದವ್ಯಾಸರು, ನಿದರ್ಶನತ್ರಯೇಣ=ಮೂರು ದೃಷ್ಟಾಂತದಿಂದ, ಗುಣಾನಾಂ=ಭಗವದ್ಗುಣಗಳಿಗೆ, ಅತ್ಯಭಿನ್ನತಾಂ=ಸವಿಶೇಷವಾದ ಅತ್ಯಂತಾಭೇದವನ್ನು, ಆದರೇಣ=ವಿಶ್ವಾಸದಿಂದ, ಆಹ=ಹೇಳಿದರು. (ಹೀಗೆ ಸಾಕ್ಷಾತ್ತಾಗಿ ಅಧಿಕರಣಾರ್ಥವನ್ನು ವ್ಯಾಖ್ಯಾನ ಮಾಡಿ ಈಗ ಅನುಂಷಗಸಿದ್ಧವಾದ ಅರ್ಥವನ್ನು ತೋರಿಸ್ತುತ್ತಾರೆ.) ತಚ್ಚ=ಭಗವಂತನ ಧರ್ಮಗಳಿಗೆ ಶ್ರೀ ಹರಿಯಿಂದ ಸವಿಶೇಷಾಭೇದವನ್ನು ಸಮರ್ಥಿಸಿರುವುದರಿಂದಲೇ, ಅಭಿಹಿತಾನ್ವಯಃ=ಪದಗಳಿಂದ ಹೇಳಲ್ಪಟ್ಟ ಪದಾರ್ಥಗಳಿಂದ ಅನ್ವಯಜ್ಞಾನವಾಗುತ್ತದೆ ಎನ್ನುವ ಮತವು, ನ=ಕೂಡುವುದಿಲ್ಲ.

ತಾ || (1) ನಿರವಕಾಶವಾದ ಪ್ರಮಾಣವನ್ನು ಅನುಸರಿಸಿ ಮೂರು ದೃಷ್ಟಾಂತಗಳೂ ಸವಿಶೇಷಾಭೇದಕ್ಕೆ ಉಪಯುಕ್ತಗಳಾಗಿರುವುದರಿಂದ ಸೂತ್ರಕಾರರಿಗೆ ಇಷ್ಟವೇ ಆಗಿದೆ ಎಂದು ತಿಳಿಯತಕ್ಕದ್ದು. ಅದರಲ್ಲಿ (೧) ಅಹಿಕುಂಡಲವು ಯದ್ಯಪಿ ಭೇದಾಭೇದವುಳ್ಳದ್ದು. ಆದಾಗ್ಯೂ ಅಲ್ಪಜ್ಞರಿಗೆ ಅಭೇದದಲ್ಲಿ ಬುದ್ಧಿಯನ್ನು ತೋರಿಸುವುದಕ್ಕಾಗಿ ಹೇಳಿದ್ದು. (೨) ಪ್ರಕಾಶ ಶಬ್ದದಿಂದ ಭಾಸ್ವರರೂಪವನ್ನು ಇಟ್ಟುಕೊಳ್ಳಬೇಕು. ಅದು ಯಾವದ್ದ್ರವ್ಯಭಾವಿಯಾದುದರಿಂದ ಸೂರ್ಯಮಂಡಲದಿಂದ ಅತ್ಯಂತಾಭಿನ್ನವೇ. (೩) ಪೂರ್ವತ್ವವಾದರೂ ಪೂರ್ವಕಾಲಸಂಬಂಧವು ಎಂದು ಸಕಲಲೋಕಸಿದ್ಧವಾದುದು. (2) ಒಂದೇ ದೃಷ್ಟಾಂತದಿಂದ ಈ ಅರ್ಥವು ಸಿಗುವುದಾದರೂ ಅತ್ಯಾದರದಿಂದ ಮೂರು ದೃಷ್ಟಾಂತಗಳನ್ನು ಹೇಳಿದರು. ॥ ೧೯೧ ॥

ಅಭಿಹಿತಾನ್ವಯವಾದವು ಅನುಪಪನ್ನವಾದರೆ ಸೂತ್ರಕಾರರಿಗೆ ಅಭಿಮತವಾದುದು ಯಾವುದು? ಉಪಾಯವಿಲ್ಲದೆ ಅನ್ವಯಜ್ಞಾನವು ಕೂಡಲಾರದು. ಅನ್ವಿತಾಭಿಧಾನವೆನ್ನುತ್ತೇವೆ. ಅಲ್ಲಿಯೂ ವಿಶೇಷವದೆ ಎನ್ನುತ್ತಾರೆ.

**ಮೂ || ಯದಾಶೇಷವಿಶೇಷಾಣಾಮುಕ್ತಿಃ ಸಾಮಾನ್ಯತೋ ಭವೇತ್ ||**
**ಪದೈಕೇನಾಪ್ಯುತ್ತರೇಣ ವಿಶೇಷಾವಗತಿರ್ಭವೇತ್ || ೧೯೨ ||**

ಅ || ಯದಾಪಿ=ಯದ್ಯಪಿ, ಅಶೇಷವಿಶೇಷಾಣಾಂ=ಎಲ್ಲಾ ವಿಶೇಷಣಗಳಿಂದ ಅನ್ವಿತವಾದ ಪದಾರ್ಥಕ್ಕೆ, ಉಕ್ತಿಃ=ವಚನವು, ಪದೈಕೇನ=ಪದಗಳಲ್ಲಿ ಮುಖ್ಯವಾದ ಆದ್ಯಪದದಿಂದ, ಸಾಮಾನ್ಯತಃ=ಸಾಮಾನ್ಯವಾಗಿ, ಭವೇತ್=ಆಗುತ್ತದೋ, ಅಪಿ=ಆದಾಗ್ಯೂ, ಉತ್ತರೇಣ=ಮೇಲಿನ ಪದಸಮುದಾಯದಿಂದ, ವಿಶೇಷಾವಗತಿಃ = ಅನ್ವಯವಿಶೇಷಜ್ಞಾನವು, ಭವೇತ್=ಆಗುವುದು.

ತಾ || **'ಸತ್ಯಂ ಜ್ಞಾನಮನಂತಂ ಬ್ರಹ್ಮ' 'ಯಃ ಸರ್ವಜ್ಞಃ ಸರ್ವವಿತ್'** ಇದುಮೊದಲಾದ ಬ್ರಹ್ಮನನ್ನು ಪ್ರತಿಪಾದಿಸತಕ್ಕ ವಾಕ್ಯದಲ್ಲಿರತಕ್ಕ ಎಲ್ಲಾ ಪದಗಳೂ ಅನ್ವಿತವಾದ ಅರ್ಥವನ್ನು ಹೇಳುತ್ತವೆ. ಅಲ್ಲಿ ಬ್ರಹ್ಮಪದವು ಸತ್ಯತ್ವ-ಸರ್ವಜ್ಞತ್ವ ಮೊದಲಾದ ಅಶೇಷವಿಶೇಷಗಳಿಂದ ಕೂಡಿದ ಬ್ರಹ್ಮನನ್ನು ಪ್ರತಿಪಾದಿಸುತ್ತವೆ. ಹೀಗೆ ಸತ್ಯಾದಿಪದಗಳಿಗೆ ವೈಯರ್ಥ್ಯವಿಲ್ಲ. ಏಕೆಂದರೆ— ಸಾಮಾನ್ಯವಾಗಿಯೇ ಪದಗಳಿಗೆ ಅನ್ವಿತಾಭಿಧಾನದಲ್ಲಿ ಶಕ್ತಿಯು; ಅನ್ವಯವಿಶೇಷವನ್ನು ಹೇಳುವುದರಲ್ಲಿ ಶಕ್ತಿಯಿಲ್ಲ. ಆದಕಾರಣ ಬ್ರಹ್ಮಪದದಿಂದ ಸಾಮಾನ್ಯವಾಗಿ ಎಲ್ಲಾ ಯೋಗ್ಯಧರ್ಮಗಳಿಂದ ಕೂಡಿದ ಬ್ರಹ್ಮನು ಪ್ರತೀತನಾಗುತ್ತಿರಲು ಸತ್ಯತ್ವದಿಂದ ಯುಕ್ತನಾದವನು, ಜ್ಞಾನತ್ವದಿಂದ ಯುಕ್ತನಾದವನು ಹೀಗೆ ವಿಶೇಷಾನ್ವಯವನ್ನು ತಿಳಿಸಿಕೊಡುವುದಕ್ಕಾಗಿ ಸತ್ಯಾದಿಪದಗಳು. ॥ ೧೯೨ ॥

ಹಾಗಾದರೆ (1) ಅಭಿಹಿತಾನ್ವಯಾದಿ ವಾದಿಗಳು ಉಪಪನ್ನಗಳಲ್ಲವೆಂದೂ, ಅನ್ವಿತಾಭಿಧಾನವು ಉಪಪನ್ನವೆಂದೂ ಸೂತ್ರಕಾರರು ಪ್ರಥಮ ಸೂತ್ರದಲ್ಲಿಯೇ ಹೇಳಿರುತ್ತಾರೆ. ಆದಕಾರಣ ಇಲ್ಲಿ ಅಧಿಕರಣಸಿದ್ಧಾಂತವಾಗಿ ಅದನ್ನು ಹೇಳಿದರಿಂದ ಏನು ಪ್ರಯೋಜನವು? ಎಂದರೆ— ಅತಃ ಶಬ್ದದಿಂದ ಅನ್ವಯಜ್ಞಾನವಾಗಲಿಕ್ಕೆ ಉಪಾಯವಿದೆ ಎಂದು ಇಷ್ಟುಮಾತ್ರ ತೋರುತ್ತದೆ. ಪುನಃ ಪದಗಳೇ ಪದಗಳಿಂದ ಹೇಳಲ್ಪಟ್ಟ ಅರ್ಥವುಳ್ಳವುಗಳಲ್ಲ ಎನ್ನುವ ವಿಶೇಷವಿಲ್ಲ. ಅದರಲ್ಲಿ ಸೂತ್ರಕಾರರದ್ದು ಈ ಅಭಿಪ್ರಾಯವು ಹೇಗೆ ಎಂದು ವ್ಯಾಖ್ಯಾನಮಾಡತಕ್ಕವನನ್ನು ಕುರಿತು ಪೂರ್ವಪಕ್ಷವು. ಅದನ್ನು ಸಮಾಧಾನಪಡಿಸುವುದಕ್ಕಾಗಿ ಅಧಿಕರಣ ಸಿದ್ಧಾಂತವನ್ನು ಹೇಳಿದ್ದು ಯುಕ್ತವೇ. ಯದ್ಯಪಿ ಸೂತ್ರಕಾರರ ಅಭಿಪ್ರಾಯವು ಯುಕ್ತವೆಂದು ಹೇಳಲು ಶಕ್ಯವಾಗುತ್ತದೆ. ಆದಾಗ್ಯೂ ಅಧಿಕರಣಸಿದ್ಧಾಂತವನ್ನು ಹೇಳುವಿಕೆ ಎನ್ನುವ ವ್ಯಸನದಿಂದ ಅಲ್ಲಿ ಸಂಕ್ಷೇಪವಾಗಿ ಹೇಳಿದ ಉಪಪತ್ತಿಗಳನ್ನು ವಿಸ್ತರಿಸುವುದಕ್ಕಾಗಿ ಈ ಪ್ರಯತ್ನವು. ಆದಕಾರಣ ದೋಷವಿಲ್ಲ. (2) 'ತಚ್ಚ ನಾಭಿಹಿತಾನ್ವಯಃ' ಎನ್ನುವಲ್ಲಿ 'ತತ್' ಎನ್ನುವುದರಿಂದ ಪರಾಮೃಷ್ಟವಾದ ಹೇತುವನ್ನು ತೋರಿಸುತ್ತಾರೆ—

**ಮೂ || ಯತೋಽಶೇಷವಿಶೇಷಾಣಾಂ ವಸ್ತುನಾಸ್ತ್ಯೇವ ಚೈಕತಾ |**
**ಅತಃ ಸಾಮಾನ್ಯತೋ ಜ್ಞಾತಃ ಪದಾಂತರಬಲಾತ್ಪುನಃ |**
**ಭವೇದ್ವಿಶೇಷತೋ ಜ್ಞಾತಸ್ತೇನ ಸ್ಯಾದನ್ವಿತೋಕ್ತಿತಾ || ೧೯೩ ||**

ಅ || ಯತಃ=ಯಾವ ಕಾರಣದೆಶೆಯಿಂದ, ಅಶೇಷವಿಶೇಷಾಣಾಂ = ಎಲ್ಲಾ ವಿಶೇಷಗಳಿಗೆ, ವಸ್ತುನಾ=ಬ್ರಹ್ಮನಿಂದ, ಏಕತಾ ಚ=ಏಕತ್ವವೂ ವಿಶೇಷವೂ ಕೂಡ, ಅಸ್ತ್ಯೇವ= ಉಂಟೇ ಉಂಟೋ, ಅತಃ=ಆದಕಾರಣ, (ಒಂದೊಂದು ಪದಗಳಿಂದ) ಸಾಮಾನ್ಯತಃ=ಸಾಮಾನ್ಯವಾಗಿ, ಜ್ಞಾತಃ=ಅನ್ವಿತನೆಂದು ತಿಳಿಯಲ್ಪಟ್ಟ ಅರ್ಥವು, ಪುನಃ=ಮತ್ತು, ಪದಾಂತರಬಲಾತ್= ಪದಾಂತರಸನ್ನಿಧಾನರೂಪವಾದ ಸಾಮಗ್ರ್ಯಂತರ ಬಲದಿಂದ, ವಿಶೇಷತಃ=ವಿಶೇಷಾಕಾರವಾಗಿ, ಜಾತಃ=ಅನ್ವಿತವೆಂದು ತಿಳಿಯಲ್ಪಟ್ಟದ್ದು, ಭವೇತ್=ಆಗುವುದು. ತೇನ=ಆ ಕಾರಣದಿಂದ, ಅನ್ವಿತೋಕ್ತಿತಾ=ಪದಗಳಿಗೆ ಅನ್ವಿತಾಭಿಧಾಯಿತ್ವವು, ಸ್ಯಾತ್=ಉಪಪನ್ನವಾಗುವುದು.

ತಾ || (1) ಸತ್ಯತ್ವಾದಿಧರ್ಮಗಳಿಗೆ ಬ್ರಹ್ಮನಿಂದ ಅತ್ಯಂತಾಭೇದವನ್ನು ಸಮರ್ಥಿಸಿರುವರು. ಆದುದರಿಂದ ಬ್ರಹ್ಮನನ್ನು ಹೇಳತಕ್ಕ ಬ್ರಹ್ಮಪದಕ್ಕೆ ಸತ್ಯತ್ವಾದಿವಾಚಕತ್ವವು ಆವಶ್ಯಕವೇ. ಆದರೆ ಅಭೇದದಲ್ಲಿ ಅನ್ವಯವೇ ಇಲ್ಲ. ಅಭೇದಾನ್ವಯವನ್ನು ಹೇಳುತ್ತದೆ ಎಂದೂ ವಿಶೇಷತಃ ಅಭಿಧಾನಪ್ರಸಂಗವೂ ಹೇಗೆ? ಎನ್ನುವ ಶಂಕೆಗೆ ಅದರಲ್ಲಿ ಸವಿಶೇಷತ್ವಾಂಗೀಕಾರವೇ ಸಮಾಧಾನವು. ಅಭೇದವಿದ್ದರೂ ವಿಶೇಷಶಕ್ತಿಯಿಂದ ಅನ್ವಿತತ್ವವೂ, ವಿಶೇಷಾನಭಿಧಾನವೂ ಯುಕ್ತವಾಗುವುದು. (2) ಇದೆಲ್ಲಾ ಆಗಬಹುದು. ಆದರೆ ಈ ಅನ್ವಿತಾಭಿಧಾನ ವಾದದಲ್ಲಿ ವಿಶೇಷಾನ್ವಯಪ್ರತಿಪತ್ತಿಯು ನಿಷ್ಕಾರಣವೇ. ಎಲ್ಲಾ ಪದಗಳಿಗೆ ಸಾಮಾನ್ಯವಾಗಿ ಅನ್ವಿತಾಭಿಧಾನದಲ್ಲಿ ಸಾಮರ್ಥ್ಯವಿರುವುದು. ಒಂದನೇ ಪದವು ಸಾಮಾನ್ಯವಾಗಿ ಅನ್ವಿತಾರ್ಥವನ್ನು ಹೇಳುತ್ತದೆ; ಉತ್ತರ ಪದವು ವಿಶೇಷವಾಗಿ ಅನ್ವಿತಾರ್ಥವನ್ನು ಹೇಳುತ್ತದೆ ಎಂದು ಹೇಳಕೂಡದು. ಒಂದನೇ ಪದವು ಎರಡನೇ ಪದವು ಎನ್ನುವುದಕ್ಕೆ ವ್ಯವಸ್ಥೆಯೇ ಇಲ್ಲ. ವೇದವಾಕ್ಯದಲ್ಲಿಯೂ ಕೂಡ ಕೆಲವುಕಡೆ ಬ್ರಹ್ಮಪದವು ಆದಿಯಲ್ಲಿದೆ. ಕೆಲವುಕಡೆ ಮೇಲೆ ಇದೆ ಎಂದರೆ—

ಒಂದೊಂದು ಪದಗಳಿಂದ ಸಾಮಾನ್ಯವಾಗಿ ಅನ್ವಿತವಾಗಿ ತಿಳಿಯಲ್ಪಟ್ಟ ಅರ್ಥವು ಪದಾಂತರ ಸನ್ನಿಧಾನದಿಂದ ವಿಶೇಷವಾಗಿ ಅನ್ವಿತವೆಂದು ತಿಳಿಯಲ್ಪಡುವುದು. ಆ ಕಾರಣದಿಂದ ಪದಗಳಿಗೆ ಅನ್ವಿತಾಭಿಧಾಯಿತ್ವವು ಯುಕ್ತವಾಗುವುದು. ॥ ೧೯೩ ॥

ಅನುಭವದಿಂದಲೂ ಈ ಅರ್ಥವು ನಿಶ್ಚಿತವಾಗಿದೆ ಎನ್ನುತ್ತಾರೆ.

**ಮೂ ॥ ಸ್ವಾರ್ಥ ಏವಾನ್ವಿತೋ ಯಸ್ಮಾತ್ಕೇನಚಿತ್ ತದ್ವಿಶೇಷತಃ ।**
**ಅನೇನೇತಿ ತದುಕ್ತ್ಯೈವ ಜ್ಞಾಯತೇಽನುಭವೇನ ಹಿ ॥ ೧೯೪ ॥**

ಅ ॥ ಯಸ್ಮಾತ್=ಯಾವಕಾರಣದೆಶೆಯಿಂದ, ಕೇನಚಿತ್=ಯಾವುದರಿಂದಲಾದರೂ, ಅನ್ವಿತ ಏವ=ಸಂಬದ್ಧವೇ ಆದ, ಸ್ವಾರ್ಥಃ=ಪದಗಳ ಸ್ವಾರ್ಥವು, ಇತಿ = ಎಂದು, ಅನೇನ= ಸತ್ಯತ್ವದಿಂದಲಾಗಲೀ ಜ್ಞಾನತ್ವದಿಂದಲಾಗಲೀ, ಅನ್ವಿತಃ = ಸಂಬದ್ಧವಾದ ಸ್ವಾರ್ಥವು, ತದ್ವಿಶೇಷತಃ = ಧರ್ಮವಿಶೇಷದಿಂದ ಅನ್ವಯವು, ತದುಕ್ತ್ಯೈವ=ಸತ್ಯಮೊದಲಾದ ಪದಗಳ ಉಕ್ತಿಯಿಂದಲೇ, ಜ್ಞಾಯತೇ=ತಿಳಿಯಲ್ಪಡುತ್ತದೆ. ಇತಿ=ಹೀಗೆ, ಅನುಭವೇನ=ಅನುಭವದಿಂದ, (ಸಿದ್ಧವಾಗಿದೆ.) ಹಿ=ಪ್ರಸಿದ್ಧವು ಆದುದರಿಂದ ಹಿಂದೆಹೇಳಿದ್ದು ಯುಕ್ತವು.

ತಾ ॥ ಪ್ರತ್ಯೇಕವಾಗಿ ಪದಗಳು ಸಾಮಾನ್ಯವಾಗಿ ಅನ್ವಿತಾರ್ಥವನ್ನು ಹೇಳತಕ್ಕವು ಗಳು. ವಿಶೇಷವಾಗಿ ಅನ್ವಿತಾರ್ಥಪ್ರತೀತಿಯಾದರೂ ಪರಸ್ಪರಸನ್ನಿಧಾನರೂಪವಾದ ಸಾಮಗ್ರ್ಯಂತರದಿಂದ ಆಗುತ್ತದೆ ಎನ್ನುವುದು ಅನುಭವಸಿದ್ಧವಾಗಿದೆ ॥ ೧೯೪ ॥

ಹೀಗೆ ಪ್ರತಿಜ್ಞಾತವಾದ ಅನ್ವಿತಾಭಿಧಾನವನ್ನುಪಪಾದಿಸಿ ಅಭಿಹಿತಾನ್ವಯಾದಿ ಪಕ್ಷಗಳಿಗೆ ಯಾವುದು ಅಯುಕ್ತತ್ವವು ಹೇಳಲ್ಪಟ್ಟದೋ, ಅದನ್ನು ಅನ್ವಿತಾಭಿಧಾನವನ್ನು ಅಂಗೀಕರಿಸದೆ ಇದ್ದರೆ ಬಾಧಕವನ್ನು ತೋರಿಸುತ್ತಾ ಉಪಪಾದಿಸುತ್ತಾರೆ—

**ಮೂ ॥ ಯದ್ಯನನ್ವಿತಮೇವೈತತ್ಪದಂ ಸ್ವಾರ್ಥಂ ವದೇದಿಹ ।**
**ತಥಾನ್ಯಾನ್ಯಪಿ ಸರ್ವಾಣಿ ಕಃ ಕುರ್ಯಾದನ್ವಯಂ ಪುನಃ ॥ ೧೯೫ ॥**

ಅ ॥ ಯದಿ=ಯಾವಪಕ್ಷದಲ್ಲಿ, ಏತತ್ಪದಂ=ಬ್ರಹ್ಮಎನ್ನುವುದೇ ಮೊದಲಾದ ಒಂದನೇ ಪದವು, ಅನನ್ವಿತಮೇವ=ಅನ್ವಿತವಾಗದೇನೇಯಿರುವ, ಸ್ವಾರ್ಥಂ=ತನ್ನ ಅರ್ಥವನ್ನು, ಇಹ= ಸತ್ಯ ಜ್ಞಾನಾದಿವಾಕ್ಯಗಳಲ್ಲಿ, ವದೇತ್=ಹೇಳುವುದೋ, ತಥಾ=ಹಾಗೆಯೇ, ಅನ್ಯಾನ್ಯಪಿ ಸರ್ವಾಣಿ= ಬೇರೆ ಉತ್ತರ ಪದಗಳೂಕೂಡ, ತಥಾ=ಹಾಗೆಯೇ ಅನನ್ವಿತಗಳೇ ಆದ ಸ್ವಾರ್ಥಗಳನ್ನೂ ಹೇಳಿದರೆ, ಪುನಃ=ಮತ್ತೂ, ಅನ್ವಯಂ=ಅನ್ವಯಜ್ಞಾನವನ್ನು, ಕಃ=ಯಾವನು, ಕುರ್ಯಾತ್= ಮಾಡಿಯಾನು?

ತಾ ॥ ಒಂದನೇ ಪದವು ಸಹಾಯವನ್ನು ಹೊಂದದೆ ಇದ್ದಪ್ರಯುಕ್ತ, ಪ್ರಥಮದಲ್ಲಿಯೇ ಸಾಮಾನ್ಯವಾಗಿ ಅನ್ವಿತಾರ್ಥವನ್ನು ಹೇಳುತ್ತದೆ. ಉತ್ತರಪದಗಳಾದರೂ ಆದಿಯಲ್ಲಿಯೇ ಪದಾಂತರ ಸನ್ನಿಧಾನರೂಪವಾದ ಸಹಾಯವನ್ನು ಹೊಂದಿರುವುದರಿಂದ ವಿಶೇಷವಾಗಿಯೇ ಅನ್ವಿತಾರ್ಥವನ್ನು ಹೇಳುತ್ತವೆ ಈ ವೈಲಕ್ಷಣ್ಯವನ್ನು ಸೂಚಿಸುವುದಕ್ಕಾಗಿ, 'ಏತತ್ ಅನ್ಯಾನಿ' ಎಂದು ವಿಭಾಗಮಾಡಿ ಹೇಳಿದರು ॥ ೧೯೫ ॥

ಇದನ್ನೇ ವಿಸ್ತರಿಸುತ್ತಾರೆ—

**ಮೂ ॥ ವ್ಯಾಪಾರೋ ನ ಹಿ ಶಬ್ದಸ್ಯ ಪರಃ ಸ್ವಾರ್ಥಪ್ರಕಾಶನಾತ್ ॥ ೧೯೬ ॥**
**ಪುಮಾನಪ್ಯೇಕವಾರೋಕ್ತ್ಯಾ ಕೃತಕೃತ್ಯೋ ಯದಾ ಭವೇತ್ ।**
**ಅನ್ವಯಸ್ಯ ಕಥಂ ಜ್ಞಾನಂ ಶಬ್ದಾರ್ಥತ್ವಂ ಯದಾಸ್ಯ ನ ॥ ೧೯೭ ॥**
**ಯದೈವಾನನ್ವಿತಾರ್ಥಸ್ಯ ವಚನಂ ತೈಃ ಪದೈರ್ಭವೇತ್ ।**
**ಅನನ್ವಿತಃ ಸ್ಯಾಚ್ಛಬ್ದಾರ್ಥೋ ನ ತದರ್ಥೋ ಹಿ ಸೋಽನ್ವಯಃ ॥**
**॥ ೧೯೮ ॥**

ಅ ॥ ಯದಾ=ಯಾವಪಕ್ಷದಲ್ಲಿ ಅಸ್ಯ ಅನ್ವಯಸ್ಯ=ಈ ಅನ್ವಯಕ್ಕೆ, ಶಬ್ದಾರ್ಥತ್ವಂ=ಪದಾಭಿಧೇಯತ್ವವು, ನ ಸ್ಯಾತ್=ಆಗದೆಹೋದರೆ, (ಹಾಗಾದರೆ) ಅನ್ವಯಸ್ಯ=ಅನ್ವಯದ, ಜ್ಞಾನಂ=ಜ್ಞಾನವು, ಕಥಂ=ಹೇಗೆ, (ಆಗುವುದು? ಯಾವರೀತಿಯಿಂದಲೂ ಆಗಲಾರದು ಬೇರೆ ಉಪಾಯವಿಲ್ಲ. ಹೇಗೆಂದರೆ— ಅನ್ವಯಜ್ಞಾನದೆಶೆಯಿಂದ ಮೊದಲು ಇರತಕ್ಕುದೆನ್ನುವುದರಿಂದಲಾಗಲೀ, ವಾದಿಗಳ ಅಂಗೀಕಾರದಿಂದಲಾಗಲೀ ಪ್ರಸಕ್ತಗಳಾದ (೧) ಪದಗಳೋ, (೨) ಹೇಳುವವನೋ, (೩) ಪದಗಳಿಂದ ಹೇಳಲ್ಪಟ್ಟ ಪದಾರ್ಥಗಳೋ, (೪) ವಾಕ್ಯವೋ, (೫) ವಾಕ್ಯಾಂತ್ಯವರ್ಣವೋ, (೬) ವರ್ಣಮಾಲೆಯೋ, (೭) ಸ್ಫೋಟವೋ, (೮) ಕೇಳುವವನೋ, ಅದರಲ್ಲಿ ಆದರೂ ಅನ್ವಿತಾಭಿಧಾನವನ್ನು ಅಂಗೀಕರಿಸದೆ ಇದ್ದರೆ ಪದಗಳಿಗೆ ಉಪಾಯತ್ವವು ಕೂಡುವುದಿಲ್ಲವೆನ್ನುತ್ತಾರೆ.) (೧) ಶಬ್ದಸ್ಯ=ಪದಕ್ಕೆ, ಸ್ವಾರ್ಥಪ್ರಕಾಶನಾತ್=ತನ್ನ ಅರ್ಥವನ್ನು ಪ್ರಕಾಶಿಸುವುದರಿಂದ, ಪರಃ=ಇತರವಾದ, ವ್ಯಾಪಾರಃ=ವ್ಯಾಪಾರವು, ನ ಹಿ=ಇಲ್ಲವೆಂದು ಪ್ರಸಿದ್ಧವು. (ಅಂದರೆ ಅನ್ವಯವು ಪದದಿಂದ ವಾಚ್ಯವಲ್ಲ. ಆದುದರಿಂದ ಪದವು ಅನ್ವಯಜ್ಞಾನಕ್ಕೆ ಉಪಾಯವು ಹೇಗೆ ಆಗುವುದು?) (೨) (ಹೇಳುವವನಿಗೂ ಉಪಾಯತ್ವವಿಲ್ಲವೆನ್ನುತ್ತಾರೆ.) ಯದಾ=ಯಾವ ಕಾರಣದೆಶೆಯಿಂದ, ಪುಮಾನಪಿ = ಪುರುಷನೂ ಕೂಡ, ಏಕವಾರೋಕ್ತ್ಯಾ=ಒಂದಾವರ್ತಿ ಹೇಳಿದುದರಿಂದಲೇ, ಕೃತಕೃತ್ಯಃ=ಕೃತಾರ್ಥನು, ಭವೇತ್=ಆಗುವನೋ, (ಆದ ಕಾರಣ ಆ ಪುರುಷನೂ ಕೂಡ, ಉಪಾಯನಲ್ಲ) (೩) ಪದಗಳಿಂದ ಹೇಳಲ್ಪಟ್ಟ ಪದಾರ್ಥಗಳು ಅನ್ವಯವನ್ನು ತಿಳಿಸಿಕೊಡುತ್ತವೆ. ಎನ್ನುವ ಪಕ್ಷದಲ್ಲಿ ದೋಷವನ್ನು ಹೇಳುತ್ತಾರೆ.) ಯದಾ = ಯಾವಾಗ, ಅನನ್ವಿತಾರ್ಥಸ್ಯೈವ=ಅನನ್ವಿತವಾದ ಅರ್ಥಕ್ಕೇನೇ, ವಚನಂ=ವಚನವು, ತೈಃ=ವಾಕ್ಯದಲ್ಲಿರತಕ್ಕ, ಪದೈಃ=ಪದಗಳಿಂದ, ಭವೇತ್=ಆಗುವುದು. (ಹಾಗಾದರೆ) ಶಬ್ದಾರ್ಥಃ=ಶಬ್ದಾರ್ಥವು, ಅನನ್ವಿತಃ=ಅನನ್ವಿತವಾಗದೆ ಇದ್ದುದು, ಸ್ಯಾತ್=ಆಗುವುದು. (ಅಂದರೆ ಪದಗಳು ಅನನ್ವಿತಗಳೇ ಆದ ಸ್ವಾರ್ಥಗಳನ್ನು ಮಾತ್ರ ಪ್ರತಿಪಾದಿಸುತ್ತವೆ. ಅನಂತರದಲ್ಲಿ ಪದಾರ್ಥಗಳೇ ಆಕಾಂಕ್ಷಾದಿಗಳುಳ್ಳವುಗಳಾಗಿ ಅನ್ವಯವನ್ನು ತಿಳಿಸಿಕೊಡುವುದಾದರೆ ಶಬ್ದಾರ್ಥವು ಅನನ್ವಿತವೇ ಆಗುವುದು. ಅಂತೂ ಅನ್ವಯಕ್ಕೆ ಶಾಬ್ದತ್ವವು ಇಲ್ಲದೆಹೋಗುವುದು. ಪದಾರ್ಥವೆನ್ನುವ ಪ್ರಮಾಣಾಂತರವೂ ಪ್ರಾಪ್ತವಾಗುವುದು.) (ಪದಾರ್ಥಗಳಿಗೇನೇ ಅನ್ವಯ ಬೋಧಕತ್ವವನ್ನು ಹೇಳಿದ್ದರೆ ಹೀಗಾಗುತ್ತಿತ್ತು. ಹೀಗೆ ಇಲ್ಲ. ಮತ್ತೆ ಪದಗಳಿಂದ ಹೇಳಲ್ಪಟ್ಟ ಪದಾರ್ಥಗಳಿಗೇನೇ ಅನ್ವಯಬೋಧಕತ್ವವು. ಆದುದರಿಂದ ಅನ್ವಯಕ್ಕೆ ಅಶಾಬ್ದತ್ವವು ಹೇಗೆ ಎಂದರೆ—) ಸಃ ಅನ್ವಯಃ=ಪದಾರ್ಥಗಳಿಂದ ಹೇಳಲ್ಪಟ್ಟ ಆ ಅನ್ವಯವು, ತದರ್ಥಃ=ಆ ಪದಗಳ ಅರ್ಥವು, ನ ಹಿ=ಅಲ್ಲವಷ್ಟೆ. (ಹಾಗೆ ಇದ್ದರೆ ಪ್ರತ್ಯಕ್ಷದಿಂದತಿಳಿಯಲ್ಪಟ್ಟ ಧೂಮದಿಂದ ಅನುಮಿತವಾದ ಅಗ್ನಿಗೆ ಪ್ರತ್ಯಕ್ಷಪ್ರಮೇಯತ್ವವು ಬರಬೇಕಾಗುವುದು.) ॥ ೧೯೬ ॥ ೧೯೭ ॥ ೧೯೮ ॥

ಹಾಗಾದರೆ ೪ ವಾಕ್ಯವು ಅನ್ವಯವನ್ನು ತಿಳಿಸಿಕೊಡುತ್ತದೆ, ಎನ್ನುವ ಪಕ್ಷವಾಗಲಿ ಎಂದರೆ —

**ಮೂ ॥ ನಿರಾಕಾಂಕ್ಷಪದಾನ್ಯೇವ ವಾಕ್ಯಮಿತ್ಯುಚ್ಯತೇ ಬುಧೈಃ ।**
**ತತ್ತದರ್ಥಾಭಿಧಾನೇನ ಸ್ಯಾನ್ನಿರಾಕಾಂಕ್ಷತಾ ಚ ಸಾ ॥**
**ಅಪೂರ್ತೇಸ್ತಾವದರ್ಥಾನಾಮಾಕಾಂಕ್ಷಾ ಪೂರ್ವಮಿಷ್ಯತೇ ॥೧೯೪॥**

ಅ ॥ (ಪದಗಳಿಗೆ ಅನ್ವಿತಾಭಿಧಾನಸಾಮರ್ಥ್ಯವನ್ನು ಅಂಗೀಕರಿಸದೆ ಇದ್ದವನಿಗೆ ವಾಕ್ಯಕ್ಕೆ ಅನ್ವಯಬೋಧಕತ್ವವನ್ನು ಅಂಗೀಕರಿಸುವುದು ಅಶಕ್ಯವು. ಏಕೆಂದರೆ—)ನಿರಾಕಾಂಕ್ಷ ಪದಾನ್ಯೇವ=ಆಕಾಂಕ್ಷಾರಹಿತಗಳಾದ ಪದಗಳೇವೇ, ವಾಕ್ಯಮಿತಿ=ವಾಕ್ಯವೆಂತೆಂದು, ಬುಧೈಃ= ಜ್ಞಾನಿಗಳಿಂದ, ಉಚ್ಯತೇ=ಹೇಳಲ್ಪಡುತ್ತದೆ. (ಪದವ್ಯತಿರಿಕ್ತವಾದ ವಾಕ್ಯವಿಲ್ಲ) (ಹಾಗಾದರೆ ಹೀಗೆ ಹೇಳತಕ್ಕ ನಿನ್ನಿಂದಲೇ ಪದವ್ಯತಿರಿಕ್ತವಾದ ವಾಕ್ಯವು ಅಂಗೀಕೃತವಾಗಿದೆ. ಹೇಗೆ ತಂತು ಗಳ ಕ್ರಿಯಾವಿಶೇಷವೇ ಪಟವು ತಂತುಮಾತ್ರವಲ್ಲವೋ, ಹಾಗೆಯೇ ಪದಗಳಿಗೆ ಯಾವುದು ನಿರಾಕಾಂಕ್ಷತ್ವರೂಪವಾದ ಏಕ್ರಿಯಾವಿಶೇಷವೋ ಅದು ವಾಕ್ಯವು. ಅಂತಹ ವಾಕ್ಯವು ಪದಾತಿ ರಿಕ್ತವೇ ಎಂದರೆ—) ತತ್ತದರ್ಥಾಭಿಧಾನೇನ = ಆಯಾವ ಅರ್ಥಗಳನ್ನು ಹೇಳಿದುದರಿಂದ, ನಿರಾಕಾಂಕ್ಷತಾ=ನಿವೃತ್ತಜಿಜ್ಞಾಸಾತ್ವವು, ಸ್ಯಾತ್=ಆಗುವುದು. (ಅಂದರೆ ತಂತುಗಳಿಗೆ ಪಟ ದಂತೆಯೇ ಪದಗಳಿಗೆ ನಿರಾಕಾಂಕ್ಷತ್ವವು ವಿಕಾರವಲ್ಲ. ಆದುದರಿಂದ ವಾಕ್ಯವು ಪದಾತಿರಿಕ್ತ ವಾದುದು ಹೇಗೆ ಆಗುವುದು? ಮತ್ತೆ ಶ್ರೋತೃಪುರುಷಧರ್ಮವೇ. ಜಿಜ್ಞಾಸಾ ಎಂದರೆ— ಆಕಾಂಕ್ಷೆಯು. ನಿರಾಕಾಂಕ್ಷತ್ವವೆಂದರೆ— ನಿವೃತ್ತವಾದ ಜಿಜ್ಞಾಸಾ ಇರುವಿಕೆಯು.) ಸಾ ಚ= ಆ ನಿರಾಕಾಂಕ್ಷತ್ವವೂ, (ಪದಗಳಿಂದ ಆಗುವುದು. ಆದುದರಿಂದ ಪದಗಳು ನಿರಾಕಾಂಕ್ಷಗಳು ಎಂದು ಹೇಳಲ್ಪಡುತ್ತವೆ. ನಿರಾಕಾಂಕ್ಷತ್ವವನ್ನು ಮಾಡುವಿಕೆಯು ಪದಗಳ ಕ್ರಿಯಾವಿಶೇಷವಲ್ಲ. ಪದಗಳು ಜಿಜ್ಞಾಸಿತವಾದ ಅರ್ಥವನ್ನು ಹೇಳೋಣಮಾತ್ರದಿಂದ ನಿರಾಕಾಂಕ್ಷತ್ವಕ್ಕೆ ಹೇತುಗಳಾ ಗುತ್ತವೆ; ಅದಾದರೂ ಸ್ವಭಾವವಾಗಿದೆ. ತಥಾಚ ಜಿಜ್ಞಾಸಿತವಾದ ಅರ್ಥಗಳನ್ನು ಹೇಳತಕ್ಕ ಜಿಜ್ಞಾಸೆಯನ್ನು ನಿವರ್ತಿಸತಕ್ಕ ಪದಗಳು ನಿರಾಕಾಂಕ್ಷಗಳು ಎಂದು ಹೇಳಿದಹಾಗಾಯಿತು. ಜಿಜ್ಞಾಸಿತವಾದ ಅರ್ಥವನ್ನು ಹೇಳಿದರಿಂದಲೇ ಶ್ರೋತೃವಿಗೆ ನಿರಾಕಾಂಕ್ಷತ್ವವು ಬರುವುದು ಎನ್ನುವುದನ್ನುಪಪಾದಿಸುತ್ತಾರೆ.) ('ಆನಯ' ಎಂದಿಷ್ಟು ಹೇಳಿದಾಗ ಗವಾದಿಪದಗಳನ್ನು ಪ್ರಯೋಗಮಾಡುವುದಕ್ಕಿಂತ) ಪೂರ್ವಂ=ಮೊದಲು, ಆಕಾಂಕ್ಷಾ=ಯಾವುದನ್ನು ತರುವುದು ಇದುಮೊದಲಾದ ಯಾವುದು ಜಿಜ್ಞಾಸೆಯಿದೆಯೋ ಅದು, ತಾವದರ್ಥಾನಾಂ=ಅಷ್ಟು ಜಿಜ್ಞಾಸಿತ ಗಳಾದ ಕರ್ಮಾದ್ಯರ್ಥಗಳನ್ನು, ಅಪೂರ್ತೇಃ= ಗವಾದಿಪದಗಳಿಂದ ಹೇಳದೆ ಇದ್ದುದರಿಂದ, ಇಷ್ಯತೇ=ಅಂಗೀಕರಿಸಲ್ಪಡುತ್ತದೆ.

ಟೀ ॥ ಎಷ್ಟರತನಕ ಪದಗಳು ಜಿಜ್ಞಾಸಿತಗಳಾದ ಅರ್ಥಗಳನ್ನು ಹೇಳುತ್ತವೋ ಅಷ್ಟರ ಪರ್ಯಂತ ಶಬ್ದಸಂಬಂಧಿಯಾದ ಜಿಜ್ಞಾಸೆಯು ನಿವೃತ್ತವಾಗುವುದಿಲ್ಲ. ಪದಗಳಿಂದ ಅರ್ಥಗಳು ಹೇಳಲ್ಪಡುತ್ತಿರಲು ನಿವೃತ್ತವಾಗುತ್ತದೆ. ಆದಕಾರಣ ಅನ್ವಯವ್ಯತಿರೇಕಗಳಿಂದ ಆಯಾವ ಅರ್ಥಗಳನ್ನು ಹೇಳಿದರಿಂದಲೇ ನಿರಾಕಾಂಕ್ಷತ್ವವು ಬರುವುದೆಂದು ತಿಳಿಯಲ್ಪಡುತ್ತದೆ ॥ ೧೯೪ ॥

(೫) ವಾಕ್ಯಾಂತ್ಯವಾದ ವರ್ಣವೂ, (೬) ವರ್ಣಮಾಲೆಯೂ ಈ ಪಕ್ಷಗಳೆರಡು ಅನ್ವಯ ಬೋಧಕಗಳು ಎನ್ನುವ ಪಕ್ಷವು ಅತಿ ದುರ್ಬಲವಾದಪ್ರಯುಕ್ತ ಅದನ್ನು ದೂಷಿಸಲಿಲ್ಲ.

ಹಾಗಾದರೆ (೭) ವರ್ಣಪದ ವಿಭಾಗವಿಲ್ಲದಿರುವ ಸ್ಫೋಟಾಖ್ಯವಾದ ವಾಕ್ಯವೇ ಅನ್ವಯವನ್ನು ಪ್ರತಿಪಾದಿಸುತ್ತದೆ. ಪದಗಳಾದರೂ ಸ್ಫೋಟಕ್ಕೆ ಅಭಿವ್ಯಂಜಕವಾಗಿ ಉಪಯುಕ್ತಗಳಾಗುತ್ತವೆ ಎನ್ನುವ ಪಕ್ಷವಾಗಲಿ ಎಂದರೆ—

**ಮೂ ॥ ಕರ್ಮಕರ್ತೃಕ್ರಿಯಾಣಾಂ ತು ಪ್ರೋಕ್ತೌ ಕೋಽನ್ಯೋಽನ್ವಯೋ ಭವೇತ್ ।**
**ಅಪ್ರೋಕ್ತಿಶ್ಚೇತ್ಪದೈರುಕ್ತೈಃ ಕಿಂ ನೃಶೃಂಗೇಣ ಪ್ರೋಚ್ಯತೇ ॥ ೨೦೦ ॥**

ಅ ॥ ಕರ್ಮಕರ್ತೃಕ್ರಿಯಾಣಾಂ ತು = ಕರ್ಮ-ಕರ್ತೃ-ಕ್ರಿಯೆಗಳನ್ನು (ಅಂದರೆ ಪರಸ್ಪರ ಸಂಸೃಷ್ಟಗಳಾದ ಜಿಜ್ಞಾಸಿತಗಳಾದ ಪದಾರ್ಥಗಳನ್ನು, ಪ್ರೋಕ್ತೌ = (ಪದಗಳಿಂದ) ಹೇಳುತ್ತಿರಲು, ಅನ್ಯಃ ಅನ್ವಯಃ=ಇತರವಾದ ಅನ್ವಯವು, ಕಃ=ಯಾವುದು, ಭವೇತ್= ಪ್ರತಿಪಾದಿಸಲು ಯೋಗ್ಯವಾದುದು ಆಗುವುದು. (ಅಂದರೆ ಸ್ಫೋಟವು ಅನ್ವಯವನ್ನು ಪ್ರತಿಪಾದಿಸುತ್ತದೆ ಎಂದು ಹೇಳುವವನು ಸ್ಫೋಟವದೆ ಎನ್ನುವಲ್ಲಿ ಪ್ರಮಾಣವನ್ನು ಹೇಳಬೇಕು. ಅನ್ವಯಪ್ರತೀತ್ಯನ್ಯಥಾನುಪಪತ್ತಿಯೇ ಪ್ರಮಾಣವು ಎಂದು ಹೇಳಕೂಡದು. ಪದಗಳಿಗೇನೇ ಸಂಸೃಷ್ಟಾರ್ಥಪ್ರತಿಪಾದಕತ್ವವು ಕೂಡುತ್ತದೆ. ಅದರಿಂದ ಅತಿರಿಕ್ತವಾದ ಅನ್ವಯವನ್ನು ಪ್ರತಿ ಪಾದಿಸಬೇಕಾಗಿಲ್ಲ. ಏಕೆ ಸ್ಫೋಟವನ್ನು ಅಂಗೀಕರಿಸುವುದು?) (ಹೀಗೆ ಅಂಗೀಕರಿಸದೆ ಇದ್ದರೆ ಬಾಧಕವನ್ನು ಹೇಳುತ್ತಾರೆ.) ಉಕ್ತೈಃಪದೈಃ=ಪ್ರಮಿತಗಳಾದ ಪದಗಳಿಂದ, ಅಪ್ರೋಕ್ತಿಶ್ಚೇತ್= ಅನ್ವಯವನ್ನು ಹೇಳದೆ ಇದ್ದರೆ, ನೃಶೃಂಗೇಣ=ಮನುಷ್ಯನಕೋಡಿಗೆ ಸದೃಶವಾದ, ಅಂದರೆ ಅಪ್ರಾಮಾಣಿಕವಾದ ಸ್ಫೋಟದಿಂದ, ಅನ್ವಯಃ=ಅನ್ವಯವು, ಪ್ರೋಚ್ಯತೇ ಕಿಂ=ಹೇಳಲ್ಪಡು ತ್ತದೋ ಏನು?

ತಾ ॥ ಪ್ರಮಿತಗಳಾದ ಪದಗಳಿಗೆ ಅನ್ವಿತಾರ್ಥಾಭಿಧಾನವನ್ನು ಕಲ್ಪಿಸಿದರಿಂದ ಪದವಾದಿಗೆ ಕಲ್ಪನಾಲಾಘವವು. ಸ್ಫೋಟವಾದಿಗಾದರೂ ಗೌರವವು. ಏಕೆಂದರೆ— ಅಪ್ರಾಮಾಣಿಕವಾದ ಸ್ಫೋಟವನ್ನು ಸ್ಫೋಟಕ್ಕೇನೇ ಅನ್ವಯಪ್ರತಿಪಾದಕತ್ವವನ್ನು ಹೀಗೆ ಎರಡನ್ನೂ ಕಲ್ಪಿಸ ಬೇಕು ॥ ೨೦೦ ॥

ಹಾಗಾದರೆ ನವೀನವಾದ ಅಭಿಹಿತಾನ್ವಯಪಕ್ಷವಿರಲಿ, ಪದಗಳು ಪದಾರ್ಥಗಳನ್ನು ಪ್ರತಿಪಾದಿಸಿಯೇ ನಿವೃತ್ತಗಳಾಗುತ್ತವೆ. ಪದಾರ್ಥಗಳೇ ಅನ್ವಯವನ್ನು ತಿಳಿಸಿಕೊಡುತ್ತವೆ, ಎಂದಾಗಿದ್ದರೆ ಆಗ ಹಿಂದೆ ಹೇಳಿದ ಅನ್ವಯಕ್ಕೆ ಶಾಬ್ದತ್ವಾಭಾವರೂಪವಾದ ದೋಷವೂ, ಪದಾ ರ್ಥಾಖ್ಯವಾದ ಪ್ರಮಾಣಾಂತರಾಪತ್ತಿರೂಪವಾದ ದೋಷವೂ ಬರುತ್ತಿತ್ತು. ಹೀಗೆ ಇಲ್ಲ, ಮತ್ತೆ ಪದಗಳೇ ಪದಾರ್ಥಪ್ರತಿಪಾದನರೂಪವಾದ ಅವಾಂತರವ್ಯಾಪಾರವುಳ್ಳವುಗಳಾಗಿ ಅನ್ವಯವನ್ನು ತಿಳಿಸಿಕೊಡುತ್ತವೆ. ಎಂದರೆ— ಹೀಗೆ ಹೇಳಕೂಡದು. ಹಾಗಿದ್ದರೆ ಪದಗಳಿಗೆ ವಿರಮ್ಯ ವ್ಯಾಪಾರವು ಬರಬೇಕಾಗುವುದು. ಅದರಿಂದ ದೋಷವೇನೆಂದರೆ—

**ಮೂ ॥ ವ್ಯಾಪಾರಶ್ಚೇತ್ಪುನಸ್ತೇಷಾಮನುಕ್ತಾವಪಿ ಕಿಂ ನ ಸಃ ॥ ೨೦೧ ॥**
**ಉಕ್ತೇ ಬುದ್ಧಿಸ್ಥತಾ ಹೇತೋರ್ಯದಿ ವ್ಯಾಪಾರ ಇಷ್ಯತೇ ।**
**ಬುದ್ಧಿಸ್ಥತ್ವಾಯ ಯತ್ನಂ ನ ಕಥಂ ಕುರ್ಯುಃ ಪುರೈವ ಚ ॥**
**ಪುರುಷಾಧೀನತಾ ತೇಷಾಂ ಯದಿ ಪಶ್ಚಾಚ್ಚ ಸಾ ಸಮಾ ॥ ೨೦೨ ॥**

ಅ ॥ (ಅಚೇತನಗಳಾದ ಪದಗಳಿಗೂ) ಪುನಃ=ಮತ್ತೂ, ವ್ಯಾಪಾರಃ=ವಿರಮ್ಯವ್ಯಾಪಾರವು, (ಅಂದರೆ ಚೇತನದಲ್ಲಿರತಕ್ಕ ಒಂದು ವ್ಯಾಪಾರವನ್ನುಮಾಡಿ ಸ್ವಲ್ಪಹೊತ್ತಿನಮೇಲೆ ಮತ್ತೊಂದು ವ್ಯಾಪಾರಮಾಡುವಿಕೆಯು) ಇಷ್ಯತೇ ಚೇತ್=ಅಂಗೀಕರಿಸಲ್ಪಡುವುದಾದರೆ, (ಆಗ) ತೇಷಾಂ= ಆ ಪದಗಳನ್ನ, ಅನುಕ್ತಾನಪಿ=ಹೇಳದೆ ಇದ್ದರೂ, ಸಃ=ಪದಾರ್ಥಾದಿಗಳನ್ನು ಪ್ರತಿಪಾದಿಸುವ ವಿಷಯದಲ್ಲಿ ವ್ಯಾಪಾರವು, ಕಿಂ ನ=ಏಕೆ ಆಗುವುದಿಲ್ಲ? (ಉತ್ತರವನ್ನು ಆಶಂಕಿಸುತ್ತಾರೆ) ಉಕ್ತೇ = ಉಕ್ತಿಯಲ್ಲಿ, ಬುದ್ಧಿಸ್ಥತಾಹೇತೋಃ = ಬುದ್ಧಿವಿಷಯತ್ವರೂಪವಾದ ಹೇತುವಿನದೆಶೆಯಿಂದ, ವ್ಯಾಪಾರಃ=ವ್ಯಾಪಾರವು, ಇಷ್ಯತೇ ಯದಿ=ಅಂಗೀಕರಿಸಲ್ಪಡುವುದಾದರೆ, (ಅಂದರೆ ಪದಗಳಾದರೂ ಜ್ಞಾತಗಳಾಗಿಯೇ ಜ್ಞಾನವನ್ನು ಹುಟ್ಟಿಸುತ್ತವೆ. ಚಕ್ಷುರಾದಿಗಳಂತೆ ಸ್ಥಿತಿಮಾತ್ರದಿಂದ ಜ್ಞಾನವನ್ನು ಹುಟ್ಟಿಸುವುದಿಲ್ಲ. ಉಕ್ತಿಯು ಅದರ ಜ್ಞಾನಬರಲಿಕ್ಕೆ ಉಪಾಯವು. ಆದಕಾರಣ ಹೇಳದೆ ಇದ್ದರೆ ಜ್ಞಾನತ್ವವೇ ಇಲ್ಲದಿರುವುದರಿಂದ ವ್ಯಾಪಾರವೇ ಇಲ್ಲ. ಹೀಗೆ ಅಂಗೀಕರಿಸಲ್ಪಡುವುದಾದರೆ) (ಪುನಃ ಸಿದ್ಧಾಂತಿಯು ಪ್ರಶ್ನಿಸುತ್ತಾನೆ.) ಬುದ್ಧಿಸ್ಥತ್ವಾಯ= ಪದಾರ್ಥಗಳ ಬೋಧನ ರೂಪವಾದ ವ್ಯಾಪಾರಕ್ಕೋಸ್ಕರ, (ಯಾವುದು ಪದಗಳಿಗೆ ಜ್ಞಾತತ್ವವು ಅವಶ್ಯಕವೆಂದು ಹೇಳಲ್ಪಟ್ಟದೋ ಅದಕ್ಕಾಗಿ ಆ ಪದಗಳು) ಪುರೈವ = ಹೇಳುವುದಕ್ಕಿಂತ ಮೊದಲೇ, ಯತ್ನಂ=ಪ್ರಯತ್ನವನ್ನು, ಕಥಂ=ಹೇಗೆ, ನ ಕುರ್ಯುಃ=ಮಾಡಲಾರವು. (ಎಂದೂ ನಿನ್ನನ್ನು ಕೇಳುತ್ತೇವೆ. ಅಂದರೆ ಉಕ್ತಿಯಿಲ್ಲದಿದ್ದರೂ ಬುದ್ಧಿವಿಷಯತ್ವಕ್ಕಾಗಿ ಏಕೆ ಪ್ರಯತ್ನವನ್ನು ಮಾಡಲಾರವು? ಅಥವಾ ಬುದ್ಧಿವಿಷಯತ್ವಕ್ಕಾಗಿ ಯಾವುದು ಉಚ್ಚಾರಣವೋ ಅದಕ್ಕಾಗಿ ಸುಮ್ಮನೆ ಕುಳಿತಿರತಕ್ಕವನನ್ನು ಏಕೆ ಪ್ರೇರಿಸುವುದಿಲ್ಲ? ಎಂದು ಪ್ರಶ್ನೆಯು ಅರ್ಥವು.) (ಉತ್ತರವನ್ನು ಶಂಕಿಸುತ್ತಾರೆ.) ತೇಷಾಂ=ಆ ಪದಗಳಿಗೆ, ಪುರುಷಾಧೀನತಾ ಯದಿ=ಪುರುಷರ ಅಧೀನತ್ವವಿರುವುದಾದರೆ, (ಅಂದರೆ— ಪದಗಳು ಚೇತನಗಳಾಗಿದ್ದರೆ, ಇದಾಗುತ್ತಿತ್ತು. ಚೇತನಗಳಲ್ಲ. ಆದಕಾರಣ ವಕ್ತೃಪುರುಷನ ಅಧೀನಗಳೇ. ವಕ್ತೃಪುರುಷನು ಯಾವಾಗ ಉಚ್ಚಾರಣದಿಂದ ಅಭಿವ್ಯಕ್ತೀಕರಿಸುತ್ತಾನೋ ಆಗ ಶ್ರೋತೃಪುರುಷನ ಬುದ್ಧಿಯಲ್ಲಿರತಕ್ಕವುಗಳು ಆಗಿ ಪದಾರ್ಥ ಪ್ರತಿಪಾದನ ಮೊದಲಾದ ವ್ಯಾಪಾರವುಳ್ಳವುಗಳು ಆಗುತ್ತವೆ. ತಾವು ಏನೂಮಾಡುವುದಿಲ್ಲ.) (ಹೀಗಾದರೆ ಅನ್ವಯಬೋಧನರೂಪವಾದ ವಿರಮ್ಯವ್ಯಾಪಾರವು ಆ ಶಬ್ದಗಳಿಗೆ ಕೂಡುವುದಿಲ್ಲವೆನ್ನುತ್ತಾರೆ.) ಪಶ್ಚಾತ್ = ಮೇಲೆ, (ಅನ್ವಯವನ್ನು ತಿಳಿಸಿಕೊಡುವ ವಿಷಯದಲ್ಲಿ) ಸಾ= ಪುರುಷಾಧೀನತ್ವವು, ಸಮಾ=ಸಮಾನವಾದುದು.

ತಾ ॥ ಪದಗಳಿಗೆ ಚೈತನ್ಯವಿದ್ದರೆ ಅನ್ವಯವನ್ನು ತಿಳಿಸಿಕೊಡುವುದಕ್ಕಾಗಿ ಸಮುಭಿವ್ಯಾಹೃತಗಳಾದ ನಮಗೆ (ಅಂದರೆ ಪದಗಳಿಗೆ) ಪದಾರ್ಥಗಳನ್ನು ಪ್ರತಿಪಾದನಮಾತ್ರ ಮಾಡಿದರಿಂದ ಕೃತಾರ್ಥತ್ವವಿಲ್ಲ. ಆದಕಾರಣ ನಾವು ಅನ್ವಯವನ್ನು ಪ್ರತಿಪಾದಿಸಬೇಕು, ಹೀಗೆ ವಿಚಾರಮಾಡಿ ಪದಗಳಿಗೆ ವಿರಮ್ಯವ್ಯಾಪಾರವು ಕೂಡುತ್ತದೆ. ಹೀಗೆ ಪದಗಳಿಗೆ ಚೈತನ್ಯವಿಲ್ಲ. ಇಲ್ಲವಾದರೆ— 'ಅನುಕ್ತಾನಪಿ ಕಿಂ ನ ಸಃ, ಬುದ್ಧಿಸ್ಥತ್ವಾಯ ಚ' ಎಂದು ಹಿಂದೆ ಹೇಳಿದ ಅತಿಪ್ರಸಂಗವು— ॥ ೨೦೧ ॥ ೨೦೨ ॥

(ಅ) ಶ್ರೋತೃಪುರುಷನು ಅನ್ವಯಜ್ಞಾನದಲ್ಲಿ ಕಾರಣನೆಂದಾದರೂ ಆಗುವುದು. ಆದರೂ ಅವನು ಅನ್ವಯಜ್ಞಾನಕ್ಕೆ ಕರ್ತನೇ. ಅವನಿಗೆ ಅನ್ವಯಜ್ಞಾನವು ಹುಟ್ಟುವುದರಲ್ಲಿ ಕಾರಣವು ಯಾವುದೆಂದರೆ— ಅನನ್ವಿತವಾದ ಅರ್ಥವನ್ನು ಹೇಳುವ ಪದಗಳನ್ನೇ ಕರಣಗಳನ್ನಾಗಿ ಮಾಡಿ ಶ್ರೋತೃಪುರುಷನು ಪದಗಳಿಂದ ಸ್ಮರಿಸಲ್ಪಡತಕ್ಕ ಅರ್ಥಗಳ ಅನ್ವಯಜ್ಞಾನಕ್ಕಾಗಿ ಪ್ರಯತ್ನ ಮಾಡುತ್ತಾನೆ ಎಂದರೆ—

ಮೂ || ಪುಮಾನೇವಾನ್ವಯಾಯೈಷಾಂ ಯದಿ ಪಶ್ಚಾತ್ (ಪಶ್ಚಾದ್ಯದಿ) ವಿಚೇಷ್ಟತೇ || ೨೦೩ ||
ಅನನ್ವಿತಾಭಿಧಾನಾನಾಂ ಸ ಏವಾರ್ಥಾಂತರೋಕ್ತಿಷು ।
ಯತತಾಂ ಶಬ್ದಶಕ್ತಿಶ್ಚೇತ್ತತ್ರ ನೈವಾನ್ವಯೇ ಕಥಂ || ೨೦೪ ||
ತತ್ಕಲ್ಪನಾಗುರುತ್ವಾದಿದೋಷೇತೋಽಭಿಹಿತಾನ್ವಯಃ ।
ಅನುಭೂತಿವಿರುದ್ಧಶ್ಚ ತ್ಯಾಜ್ಯ ಏವ ಮನೀಷಿಭಿಃ || ೨೦೫ ||

ಅ || ಅನ್ವಯಾಯ ಏವ = ಅನ್ವಯಜ್ಞಾನಕ್ಕೋಸ್ಕರವೇ, ಪಶ್ಚಾತ್ = ಪದಗಳಿಂದ ಪದಾರ್ಥಸ್ಮರಣವಾದ ಮೇಲೆ, ಅನನ್ವಿತಾಭಿಧಾನಾನಾಂ=ಅನ್ವಿತವಾಗದಿರುವುದನ್ನೂ ಹೇಳುವ, ಏಷಾಂ = ಈ ಪದಗಳ (ಸಾಹಾಯ್ಯದಿಂದ) ಸಃ ಪುಮಾನೇವ = ಆ ಪುರುಷನೇ, ವಿಚೇಷ್ಟತೇ ಯದಿ=ವ್ಯಾಪಾರಮಾಡುತ್ತಾನೆ ಎಂದಾದರೆ — ಸ ಏವ=ಆ ಪುರುಷನೇ, ಅರ್ಥಾಂತರೋಕ್ತಿಷು= ಅರ್ಥಾಂತರವಿಷಯಕವಾದ ಉಕ್ತಿಕಾರ್ಯಗಳಾದ ಜ್ಞಾನಗಳಲ್ಲಿ, ಯತತಾಂ = ಪ್ರಯತ್ನಿಸಲಿ. (ಅಂದರೆ ಅನ್ವಯವನ್ನು ಹೇಳದೆ ಇದ್ದ ಪದಗಳೂ ಅನ್ವಯವನ್ನು ಪ್ರತಿಪಾದಿಸುವುದಾದರೆ ಆಗ ಗವಾದಿಪದಗಳಿಂದ ಅಶ್ವಮೊದಲಾದವುಗಳೂ ಪ್ರತಿಪಾದಿಸಲ್ಪಡಬೇಕಾಗುವುವು.) (ಪುನಃ ಶಂಕಿಸುವರು ) ತತ್ರ=ಅದರಲ್ಲಿ, ಶಬ್ದಶಕ್ತಿಃ ನೈವ ಚೇತ್ = ಶಬ್ದಶಕ್ತಿಯಿಲ್ಲದಿರುವುದಾದರೆ, (ಅಂದರೆ ಗವಾದಿಪದಗಳಿಗೆ ಅಶ್ವಾದಿಗಳಲ್ಲಿ ಶಕ್ತಿಯೇ ಇಲ್ಲ. ಆದಕಾರಣ ಗವಾದಿಪದಗಳು ಅಶ್ವಾದಿಗಳನ್ನು ಹೇಗೆ ಪ್ರತಿಪಾದಿಸುವವು? ಕಣ್ಣಿನಿಂದ ಶಬ್ದಜ್ಞಾನವು ಬರುವುದಿಲ್ಲವಷ್ಟೆ! ಎಂದರೆ- ಹಾಗಾದರೆ ಪ್ರಕೃತದಲ್ಲಿಯೂ ಸಮವೆನ್ನುತ್ತಾರೆ.) ಅನ್ವಯೇ = ಅನ್ವಯಜ್ಞಾನದಲ್ಲಿ, ಕಥಂ= ಹೇಗೆ? (ಅಂದರೆ ಅನ್ವಯದಲ್ಲಿ ಶಕ್ತಿಯಿಲ್ಲದಿರುವ ಆ ಶಬ್ದಗಳಿಂದ ಅನ್ವಯಜ್ಞಾನಕ್ಕಾಗಿ ಹೇಗೆ ಪ್ರಯತ್ನಪಡುವನು?) ('ಯದ್ಯನನ್ವಿತಂ' ಇತ್ಯಾದಿಗಳಿಂದ ಹೇಳಲ್ಪಟ್ಟ ಅರ್ಥವನ್ನುಪಸಂಹಾರ ಮಾಡುತ್ತಾರೆ.) ತತ್=ಆದಕಾರಣ, ಕಲ್ಪನಾಗುರುತ್ವಾದಿದೋಷೇತಃ=ಕಲ್ಪನಾಗೌರವ ಮೊದಲಾದ ದೋಷಗಳಿಂದ ಕೂಡಿದ, ಅಭಿಹಿತಾನ್ವಯಃ = ಅಭಿಹಿತಾನ್ವಯಪಕ್ಷವು, (ಬೇರೆ ಪಕ್ಷಗಳೆಲ್ಲವೂ) ಅನುಭೂತಿವಿರುದ್ಧಶ್ಚ = ಅನುಭವವಿರುದ್ಧವಾದುದು, ಮನೀಷಿಭಿಃ=ಜ್ಞಾನಿಗಳಿಂದ, ತ್ಯಾಜ್ಯ ಏವ=ಬಿಡಲರ್ಹವೇ ಆಗಿದೆ || ೨೦೩ || ೨೦೪ || ೨೦೫ ||

ಅನುಭವವಿರೋಧವು ಹೇಗೆ ಎಂದರೆ—

ವ.ೂ || ಕರ್ತೃಶಬ್ದೇ ಹ್ಯಭಿಹಿತೇ ಧರ್ಮಸಾಮಾನ್ಯವೇದನಾತ್ ।
ವಿಶೇಷಧರ್ಮಮನ್ವಿಚ್ಛನ್ ಕಿಮಿತ್ಯೇವ ಹಿ ಪೃಚ್ಛತಿ || || ೨೦೬ ||

ಅ || ಕರ್ತೃಶಬ್ದೇ=ಸಂಬಂಧಿ ಅರ್ಥಕ ಶಬ್ದವು, ಅಭಿಹಿತೇ ಸತಿ=ಹೇಳಲ್ಪಡುತ್ತಿರಲು, ಧರ್ಮಸಾಮಾನ್ಯವೇದನಾತ್ ಹಿ=ಧರ್ಮಸಾಮಾನ್ಯವನ್ನು ತಿಳಿದುದರಿಂದಲೇ, ವಿಶೇಷಧರ್ಮಂ= ವಿಶೇಷಧರ್ಮಜ್ಞಾನವನ್ನು , ಅನ್ವಿಚ್ಛನ್=ಇಚ್ಛಿಸುವವನಾಗಿ, ಕಿಮಿತ್ಯೇವ=ಏನನ್ನು ಎಂತೆಂದೇ, ಪೃಚ್ಛತಿ=ಪ್ರಶ್ನಿಸುತ್ತಾನೆ. ಹಿ=ಪ್ರಸಿದ್ಧವು.

ತಾ || ದೇವದತ್ತನು ಎಂದು ಕರ್ತೃವಾಚಕವಾದ ಶಬ್ದವನ್ನು ಪ್ರಯೋಗಿಸುತ್ತಿರಲು ಶ್ರೋತೃಪುರುಷನು ಯಾವುದನ್ನು ಎಂದು ಪ್ರಶ್ನಿಸುತ್ತಾನೆಂದು ನಿಶ್ಚಿತವು. ಆತನು ಪಚನಮೊದಲಾದ ಧರ್ಮವಿಶೇಷಜ್ಞಾನವನ್ನು ಇಚ್ಛಿಸಿಕೊಂಡೇ ಪ್ರಶ್ನೆಮಾಡುತ್ತಾನೆ. ವಿಶೇಷ ಜಿಜ್ಞಾಸೆಯು

ಧರ್ಮಸಾಮಾನ್ಯ ಜ್ಞಾನದಿಂದಲೇ ಹುಟ್ಟುತ್ತದೆ. ಆಗ ಆತನಿಗೆ ಧರ್ಮಸಾಮಾನ್ಯಜ್ಞಾನೋ ಪಾಯವು ಪದದಿಂದ ಬೇರೆಯಾದುದು ಇಲ್ಲ. ಆದುದರಿಂದ ಪದದಿಂದ ಧರ್ಮಸಾಮಾನ್ಯಗಳಿಂದ ಕೂಡಿದ ವಸ್ತುವೇ ಪ್ರತಿಪಾದಿಸಲ್ಪಡುತ್ತದೆ ಎಂದು ತಿಳಿಯುತ್ತದೆ ॥ ೨೦೬ ॥

ಕಿಂ=ಯಾವುದನ್ನು ಎನ್ನುವ ಪ್ರಶ್ನೆಯು ವಿಶೇಷ ಜಿಜ್ಞಾಸೆಯಿಂದ ಎನ್ನುವುದು ಏಕೆ ಇಟ್ಟುಕೊಳ್ಳಬೇಕೆಂದರೆ—

**ಮೂ ॥ ಗುಣಕ್ರಿಯಾದಿಧರ್ಮಾಣಾಂ ವಿಶೇಷೇ ಕಥಿತೇ ಪುನಃ ।**
**ನಿರಾಕಾಂಕ್ಷೋ ಭವೇದ್ಯಸ್ಮಾತ್ ಶಬ್ದಾ ಅನ್ವಿತವಾಚಕಾಃ ॥ ೨೦೭ ॥**
**ಅತೋಽನಂತಗುಣಾತ್ಮೈಕೋ ಭಗವಾನೇಕ ಏವ ತು ।**
**ಉಚ್ಯತೇ ಸರ್ವವೇದೈಶ್ಚ [ತೇಚಾಖಿಲವಿಲಕ್ಷಣಾಃ] ॥ ೨೦೮ ॥**

ಅ ॥ ಪುನಃ=ಮತ್ತು, ಗುಣಕ್ರಿಯಾದಿಧರ್ಮಾಣಾಂ=ಗುಣಕ್ರಿಯಾಮೊದಲಾದ ಧರ್ಮ ಗಳಿಗೆ, ವಿಶೇಷೇ=ವಿಶೇಷವು, ಕಥಿತೇಸತಿ=ಹೇಳಲ್ಪಡುತ್ತಿರಲು, ಯಸ್ಮಾತ್=ಯಾವಕಾರಣ ದೆಶೆಯಿಂದ ನಿರಾಕಾಂಕ್ಷಃ=ನಿವೃತ್ತವಾದ ಜಿಜ್ಞಾಸಾವುಳ್ಳವನು, ಭವೇತ್=ಆಗುವನೋ, (ಆದ ಕಾರಣ ವಿಶೇಷಧರ್ಮವನ್ನು ಇಚ್ಛಿಸತಕ್ಕವನು, ಯಾವುದನ್ನು ಎಂದೇ ಪ್ರಶ್ನೆಮಾಡುತ್ತಾನೆ.) (೧ ಅಂದರೆ ಕರ್ತ್ರಾದಿ ಪದಶ್ರವಣಾನಂತರ ಭಾವೀ ಕಿಮಿತ್ಯಾದಿಪ್ರಶ್ನಃ=ಕರ್ತ್ರಾದಿ ಪದಗಳನ್ನು ಕೇಳಿದಮೇಲೆ ಉಂಟಾಗತಕ್ಕ ಕಿಂ ಇತ್ಯಾದಿ ಪ್ರಶ್ನೆಯು, ಜಿಜ್ಞಾಸಾಮೂಲಕಃ=ಜಿಜ್ಞಾಸಾ ಮೂಲಕವು, ಪ್ರಶ್ನತ್ವಾತ್ ಸಂಮತವತ್=ಪ್ರಶ್ನೆಮಾಡುವುದರಿಂದ ಸಮ್ಮತವಾದ ಪ್ರಶ್ನೆಯಂತೆ. ೨ ಸಾ ಚ ಜಿಜ್ಞಾಸಾ ಧರ್ಮವಿಶೇಷವಿಷಯಾ ತದುಕ್ತ್ಯಾ ನಿವರ್ತಮಾನತ್ವಾತ್ ಸಂಮತವತ್= ಆ ಜಿಜ್ಞಾಸೆಯು, ಧರ್ಮವಿಶೇಷವನ್ನು ವಿಷಯೀಕರಿಸತಕ್ಕದು, ಧರ್ಮವಿಶೇಷವನ್ನು ಹೇಳು ವುದರಿಂದ ನಿವೃತ್ತಿಯನ್ನು ಹೊಂದುವುದರಿಂದ, ಸಮ್ಮತದಂತೆ. ೩ ವಿಶೇಷಜಿಜ್ಞಾಸಾ ಸಾಮಾನ್ಯ ಜ್ಞಾನಪೂರ್ವಿಕಾ ವಿಶೇಷಜಿಜ್ಞಾಸಾತ್ವಾತ್ ಸಮ್ಮತವತ್=ವಿಶೇಷವಿಚಾರವು ಸಾಮಾನ್ಯಜ್ಞಾನ ಪೂರ್ವಕವಾದುದು, ವಿಶೇಷವಿಚಾರವಾದುದರಿಂದ ಸಮ್ಮತವಾದುದಂತೆ. ೪ 'ಸಾಮಾನ್ಯ ಜ್ಞಾನಂ ಚ ಇದಮೇತತ್ಪದಜನ್ಯಂ ತದನಂತರಭಾವಿತ್ವಾತ್ ಸಮ್ಮತವತ್' ಸಾಮಾನ್ಯಜ್ಞಾನವು ಈ ಪದದಿಂದ ಹುಟ್ಟತಕ್ಕದು, ಆಮೇಲೆ ಹುಟ್ಟತಕ್ಕದಾದುದರಿಂದ ಸಮ್ಮತದಂತೆ. ಕರ್ತೃ ಪದವನ್ನು ಹೇಳಿದರೂ ವ್ಯಾಪ್ತಿಬಲದಿಂದಲೇ ಧರ್ಮಸಾಮಾನ್ಯಜ್ಞಾನವು ಎಂದರೆ ಹಾಗೆ ಹೇಳ ಕೂಡದು. ದೃಷ್ಟವಾದ ಪದವನ್ನು ಬಿಟ್ಟು, ಅದೃಷ್ಟವಾದ ಅನುಮಾನವನ್ನು ಕಲ್ಪಿಸುವುದು ಕೂಡ ಲಾರದು.) (ಅಭಿಹಿತಾನ್ವಯಾದಿ ಪಕ್ಷಗಳು ತ್ಯಾಜ್ಯಗಳಾದರೆ ಪ್ರಕೃತವೇನಾಯಿತೆಂದರೆ—) ಶಬ್ದಾಃ=ಎಲ್ಲಾ ಶಬ್ದಗಳೂ, ಅನ್ವಿತವಾಚಕಾಃ=ಸಾಮಾನ್ಯವಾಗಿ ಅನ್ವಿತವಾದ ಸ್ವಾರ್ಥವನ್ನು ಹೇಳುತ್ತವೆ ಎನ್ನುವ ಪಕ್ಷವನ್ನೇ ಇಟ್ಟುಕೊಳ್ಳಬೇಕು. (ಅಧಿಕರಣದಲ್ಲಿ ಸಾಕ್ಷಾತ್ ಪ್ರತಿಪಾದ್ಯ ಮಾನವಾದ ಅರ್ಥವನ್ನುಪಸಂಹಾರಮಾಡುತ್ತಾರೆ.) ಅತಃ=ಆದುದರಿಂದ, ಏಕಃ ಭಗವಾನ್= ಶ್ರೀಹರಿಯೊಬ್ಬನು, ಅನಂತಗುಣಾತ್ಮಾ=ಅನಂತಾನಂತಗುಣಸ್ವರೂಪನು, ಏಕ ಏವ=ಒಬ್ಬನೇ, ತು=ವಿಶೇಷವಾಗಿ, ಸರ್ವವೇದೈಃ ಚ=ಎಲ್ಲಾ ವೇದಗಳಿಂದಲೂ, ಉಚ್ಯತೇ=ಹೇಳಿಸಿಕೊಳ್ಳಲ್ಪಡು ತ್ತಾನೆ. ತು=ಸಕಲಧರ್ಮಗಳಿಂದಲೂ ಕೂಡಿದವನು. ॥ ೨೦೭ ॥ ೨೦೮ ॥

## ಅಧಿಕರಣ ಸಾರಾಂಶವು.

**ಸ. ರ. ವಿ.—** (1) ಶ್ರೀ ಹರಿಯು ಅನಂತ ಗುಣವುಳ್ಳವನು ಎಂದು ಹೇಳುವುದಕ್ಕಾಗಿ ಏನು ಪ್ರತಿಪಾದಿತವಾಗಿದೆಯೋ, ಅದು ಅಯುಕ್ತವು. ಗುಣಗಳಿಗೂ ಶ್ರೀ ಹರಿಗೂ ಪರಸ್ಪರ ವಾಗಿ ಭೇದವನ್ನು ಅಂಗೀಕರಿಸದೆ ಇರುವುದರಿಂದ ಗುಣ-ಗುಣ್ಯಾದಿಭಾವವೇ ಕೂಡಲಾರದು. ಎಂದರೆ— ಗುಣ-ಗುಣ್ಯಾದಿಭಾವವು ವಿಶೇಷಬಲದಿಂದಲೇ ಕೂಡುತ್ತದೆ. (2) ಹಾಗಾದರೆ— ಶ್ರೀ ಹರಿಗೆ ಸಾರ್ವಕಾಲಿಕಗಳಾದ ಆನಂದಾದಿಗಳಿಂದ ಅಭೇದವಿರಲಿ, ಕೆಲವು ವೇಳೆಯೇ ಇರತಕ್ಕ ಜಗತ್ಸ್ರಷ್ಟೃತ್ವಾದಿ ಧರ್ಮಗಳಿಂದಲೂ, ಸರ್ಜನಾದಿ ಕರ್ಮಗಳಿಂದಲೂ ಅಭೇದವು ಕೂಡಲಾರದು. ಅನಿತ್ಯಧರ್ಮಗಳಿಂದ ಅಭಿನ್ನನಾದ ಶ್ರೀ ಹರಿಗೂ ಅನಿತ್ಯತ್ವವು ಬರಬೇಕಾಗುವುದು. ಎಂದರೆ— ಸರ್ಜನ ಶಕ್ತಿರೂಪದಿಂದ ಶ್ರೀ ಹರಿಯಲ್ಲಿ ನಿತ್ಯದಲ್ಲಿಯೂ ಇರತಕ್ಕ ಸರ್ಜನಾದಿ ಕ್ರಿಯಾದಿಗಳಿಗೆ ಮತ್ತೂ ಮತ್ತು ಅಭಿವ್ಯಕ್ತಗಳಾಗುವುದರಿಂದ ಅನಿತ್ಯತ್ವವಿಲ್ಲ. ಅಭಿವ್ಯಕ್ತ ರೂಪಕ್ಕೆ ಅನಿತ್ಯತ್ವವನ್ನು ಆಶಂಕಿಸಕೂಡದು. ಅದು ನಿತ್ಯಶಕ್ತಿರೂಪದಿಂದ ಅಭಿನ್ನವೇ ಆಗಿದೆ. ಶಕ್ತಿರೂಪವು, ವ್ಯಕ್ತಿರೂಪವು ಎನ್ನುವ ಪ್ರತ್ಯೇಕ ವ್ಯವಹಾರವಾದರೂ ವಿಶೇಷ ಪ್ರಯುಕ್ತವು. (3) ವಿಶೇಷಕ್ಕೂ, ವಿಶೇಷವುಳ್ಳದ್ದಕ್ಕೂ ಅಭೇದವಿದ್ದರೂ ವಿಶೇಷ್ಯ ವಿಶೇಷ ಭಾವವು ಸ್ವನಿರ್ವಾಹಕವಾದುದರಿಂದ ಸಿದ್ಧಿಸುತ್ತದೆ. (4) ಅಭಿನ್ನವಾದ ವಸ್ತುವಿನಲ್ಲಿ ಇದು ವಿಶೇಷ್ಯಾಂಶವು, ಇದೇ ವಿಶೇಷಣಾಂಶವು ಎನ್ನುವುದು ಪ್ರಮಾಣಗಳಿಂದ ತಿಳಿಯಲ್ಪಡುವುದರಿಂದ ವ್ಯವಸ್ಥೆಯೂ ಸಿದ್ಧಿಸುತ್ತದೆ. (5) ನಿರ್ಭಿನ್ನನಾದ ಶ್ರೀ ಹರಿಯಲ್ಲಿ ವಿಶೇಷವಿಲ್ಲವೆಂದು ಹೇಳಕೂಡದು. **'ಸ ಇಮಾನ್ ಲೋಕಾನಸೃಜತ'** ಇದು ಮೊದಲಾದ ಶ್ರುತಿಗಳಿಂದ ಜಗತ್ಸ್ರಷ್ಟೃತ್ವ ಮೊದಲಾದ ವಿಶೇಷವು ಪ್ರತೀತವಾಗುತ್ತದೆ. 'ಸೋऽಸೃಜತ' ಎಂದು ಸಾಮಾನಾಧಿಕರಣ್ಯವಿದ್ದ ಪ್ರಯುಕ್ತ 'ಸಃ' ಎನ್ನುವ ಶಬ್ದದಿಂದ ಹೇಳಲ್ಪಟ್ಟ ಶ್ರೀ ಹರಿಗೆ ಸ್ರಷ್ಟೃ ರೂಪದಿಂದ ಅಭೇದವು ತೋರುತ್ತದೆ. (6) ಯಾರು ಇಲ್ಲಿ ಸವಿಶೇಷಾಭೇದವನ್ನು ಸಹಿಸಲಾರದೆ ಧರ್ಮ-ಧರ್ಮಿಗಳಿಗೆ ಭೇದವನ್ನು ಹೇಳುತ್ತಾನೋ, ಆತನ ಹತ್ತಿರ ಪ್ರಶ್ನಿಸಬೇಕು. ಈ ಭೇದಕ್ಕೂ ಧರ್ಮಿಗಳಿಂದ ೧ ಭೇದವೋ, ೨ ಅಭೇದವೋ, ೩ ನಿರ್ವಿಶೇಷಾಭೇದವೋ? ೧ನೇದ್ದು ಕೂಡಲಾರದು. ಭೇದಕ್ಕೂ ಧರ್ಮಿಯಿಂದ ಭೇದವಿದ್ದರೆ ಅದಕ್ಕೂ ಭೇದವು. ಹೀಗೆ ಅನವಸ್ಥೆಯು ಬರುವುದು. ೨ನೇದ್ದು ಕೂಡಲಾರದು. ಭೇದದಂತೆ ಧರ್ಮಕ್ಕೂ ಧರ್ಮಿಯಿಂದ ಅಭೇದವು ಬರಬೇಕಾಗುವುದು. ಆ ಭೇದವನ್ನು ಅಂಗೀಕರಿಸುವುದು ಅಶಕ್ಯವು. ೩ನೇದ್ದು ಕೂಡಲಾರದು. ಧರ್ಮ-ಧರ್ಮಿಗಳಿಂದ ಭೇದಕ್ಕೆ ನಿರ್ವಿಶೇಷಾಭೇದವಿದ್ದರೆ ಅದಕ್ಕೂ ಅಭೇದವು ಎನ್ನುವ ವ್ಯವಹಾರವು ಇಲ್ಲವೆಂದಾಗಬೇಕಾಗುವುದು. ವಿಶೇಷವಿಲ್ಲವಾದರೆ 'ಘಟಸ್ಯ ಭೇದಃ' ಎನ್ನುವುದರಿಂದ 'ಘಟಸ್ಯ ಘಟಃ' ಎಂದು ಹೇಳಿದಂತೆ ಆಯಿತು. ಆದುದರಿಂದ ನಿರ್ವಿಶೇಷತ್ವವು ಕೂಡಲಾರದು. (7) ಮತ್ತು ಭೇದಕ್ಕೆ ಧರ್ಮಿಯಿಂದ ಭೇದವು. ಅದಕ್ಕೆ ಅದರಿಂದ ಭೇದವು ಅದಕ್ಕೂ ಭೇದವು. ಹೀಗೆ ಅನವಸ್ಥೆಯು ಬರುವುದರಿಂದ ಅಭೇದವೆಂದು ಹೇಳಬೇಕು. ಅಂತೂ ಆ ಭೇದಾಭೇದಗಳು ಒಂದೇ ವಸ್ತುವಿನ ಸ್ವರೂಪಗಳಾಗಿರುವುದರಿಂದ ಪರಸ್ಪರ ವಾಗಿಯೂ ಅಭಿನ್ನಗಳಾದವುಗಳಿಗೆ ವಿಶೇಷವಿಲ್ಲವಾದರೆ ಭೇದಾಭೇದ ಶಬ್ದಗಳಿಗೆ ಪರ್ಯಾಯತ್ವವು ಬರಬೇಕಾಗುವುದು. ಯಾವ ವಾದಿಯೂ ಭೇದಾಭೇದ ಶಬ್ದಗಳಿಗೆ ಪರ್ಯಾಯತ್ವವನ್ನು ಅಂಗೀಕರಿಸಲಿಲ್ಲ. (8) ಹಾಗಾದರೆ— ಭೇದಾಭೇದಗಳಿಗೆ ವಿಶೇಷವಿಲ್ಲ. ಮತ್ತೆ ಭೇದವೇ ಅಭೇದವಾದರೂ ಭೇದಾಭೇದಗಳಿಗೆ ಧರ್ಮಿಯಿಂದ ಕೂಡಿಕೊಂಡು ಎಂದಾಶಂಕಿಸಿದರೆ—

ಹೀಗಾದರೂ ಭೇದಾಭೇದಗಳಿಗೆ ವಿಶೇಷತ್ವವು ಬಂದೇ ಬರುವುದು. ಆ ಭೇದಾಭೇದಗಳಿಗೆ ಧರ್ಮಿಯಿಂದ ನಿರ್ವಿಶೇಷಾಭೇದವಿದ್ದರೆ ಧರ್ಮಿಸ್ವರೂಪತ್ವಮಾತ್ರ ಬರುತ್ತದೆ. ಆಗ ಅಭೇದವು ಭೇದಿಯಿಂದ ಭಿನ್ನವು. ಭೇದವು ಭೇದಿಯಿಂದ ಭಿನ್ನವು ಭೇದಾಭೇದಗಳಿಗೆ ಪರಸ್ಪರ ಭೇದವು ಎನ್ನುವ ಅರ್ಥವು ಹೇಗೆ ಸಿದ್ಧಿಸುವುದು? ಮತ್ತೆ ಧರ್ಮಿಶಬ್ದವನ್ನೇ ಅನೇಕಾವರ್ತಿ ಉಚ್ಚರಿಸಿದಂತೆ ಆಗುವುದು. ಈ ದೋಷವನ್ನು ಪರಿಹರಿಸುವುದಕ್ಕಾಗಿ ಭೇದಾಭೇದಗಳಿಗೆ ಧರ್ಮಿಯಿಂದ ಭೇದವಿದ್ದರೂ ಕೇವಲ ಧರ್ಮಿಸ್ವರೂಪತ್ವವಲ್ಲ. ಮತ್ತೆ ವಿಶೇಷವದೆ ಎನ್ನಬೇಕು. ಹಾಗಾದರೆ ಅಭೇದಭೇದಗಳಿಗೂ ವಿಶೇಷವೇ ಬರುವುದು. ಭೇದವು ಏತಕ್ಕೆ? ವಿಶೇಷಬಲದಿಂದಲೇ ವ್ಯವಹಾರವು ಸಿದ್ಧಿಸಲು ಪದಾರ್ಥಗಳಿಗೆ ಬಾಹುಲ್ಯವನ್ನು ಕಲ್ಪಿಸುವುದು ಅನ್ಯಾಯವಾಗಿದೆ. ಕಲ್ಪನಾಗೌರವವು ಬರುವುದರಿಂದ ಗೋವಿನಂತೆಯೇ ಅಶ್ವಾದಿಗಳಿಗೂ ಧರ್ಮ-ಧರ್ಮಿಯಂತೆ ಸವಿಶೇಷಾಭೇದವೇ ಇರಲಿ ಎಂದು ಹೇಳಕೂಡದು ಅವುಗಳಿಗೆ ಐಕ್ಯಪ್ರತೀತಿಯಿಲ್ಲ. ಗೋವೇ ಅಶ್ವವು ಎನ್ನುವ ಪ್ರತೀತಿ ಇಲ್ಲ. ಧರ್ಮ-ಧರ್ಮಿಗಳಿಗಾದರೂ ಭೇದಪ್ರತೀತಿಯಿಲ್ಲದಿರುವುದರಿಂದ ಸವಿಶೇಷಾಭೇದವೇ ಯುಕ್ತವು. 'ಆನಂದೋ ಬ್ರಹ್ಮ' ಇದುಮೊದಲಾದ ಪ್ರಮಾಣವು ಇದೆ. (9) ಕೇವಲ ಸಚ್ಚಿದಾನಂದಾದಿಗಳಿಗೂ ಬ್ರಹ್ಮನಿಗೂ, ಧರ್ಮ ಧರ್ಮಿಭಾವವನ್ನು ಅಂಗೀಕರಿಸತಕ್ಕವನು ವಿಶೇಷವನ್ನು ಸ್ವೀಕರಿಸಬೇಕೆಂದಲ್ಲ. ಮತ್ತೆ ವಿಶೇಷವನ್ನು ಅಗೀಕರಿಸದಿರುವ ವೈದಿಕಾಭಾಸನೂ ಸ್ವೀಕರಿಸಲೇಬೇಕು. ಹೇಗೆಂದರೆ— 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎನ್ನುವಲ್ಲಿ ಅಖಂಡಾರ್ಥವನ್ನು ಪ್ರತಿಪಾದಿಸತಕ್ಕ ಮಾಯಾವಾದಿಯೂ ಕೂಡ ಸತ್ಯಾದಿಪದಗಳಿಗೆ ಅಪರ್ಯಾಯತ್ವವು ಸಿದ್ಧಿಸುವುದಕ್ಕಾಗಿ ಬ್ರಹ್ಮನಲ್ಲಿ ಅವಶ್ಯವಾಗಿ ವಿಶೇಷವನ್ನು ಅಂಗೀಕರಿಸಲೇಬೇಕು. ಇಲ್ಲದಿದ್ದರೆ ಸತ್ಯಪದದಿಂದಲೇ ಗತಾರ್ಥವಾದ ಜ್ಞಾನಾದಿಪದಗಳಿಗೆ ವೈಯರ್ಥ್ಯವು ಬರಬೇಕಾಗುವುದು. ಆದುದರಿಂದ ಸರ್ವವೇದಗಳಿಂದಲೂ ಶ್ರೀ ಹರಿಯೇ ಹೇಳಲ್ಪಡುತ್ತಾನೆ ॥ ಸೂ. ೨೮ ॥ ೨೯ ॥ ३೦ ॥ ३೧ ॥ ॥ ಅಧಿ. ೧೫ ॥

**ಅಹಿಕುಂಡಲಾಧಿಕರಣವು ಸಮಾಪ್ತವಾಯಿತು.**

---

# ಪರಮತೋऽಧಿಕರಣವು

## "ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ"

॥ ಸೂ. ३೨ ॥

**(ಸೂತ್ರಾರ್ಥವೇ ಮೊದಲೇ ಉಕ್ತವಾಗಿದೆ.)**

ಪರಮೇಶ್ವರನ ಆನಂದಾದಿಗುಣಗಳು ಲೌಕಿಕಾನಂದಾದಿಗಳಿಗೆ ಸಮಾನಗಳೋ, ಅಥವಾ ಲೌಕಿಕಾನಂದಾದಿಗಳಿಂದ ವಿಲಕ್ಷಣಗಳೋ? ಒಂದನೇ ಕಲ್ಪದಲ್ಲಿ ಆ ಆನಂದಾದಿ ಗುಣಗಳಲ್ಲಿ ಬಹುಮಾನವು (ಆದರವು) ಕೂಡುವುದಿಲ್ಲ. ೨ನೇದ್ದೂ ಕೂಡದು. ವೈಲಕ್ಷಣ್ಯಕ್ಕೆ ಬೀಜಭೂತಗಳಾದ ಪ್ರಕಾರವೂ ಪ್ರಮಾಣವೂ ಇಲ್ಲ. ವಿಮತಗಳಾದ ಆನಂದಾದಿಗಳು ಲೌಕಿಕ ಆನಂದಾದಿಗಳಿಗೆ ಸಮಾನಗಳು. ಆನಂದಾದಿಶಬ್ದವಾಚ್ಯತ್ವವಿದ್ದಪ್ರಯುಕ್ತವೆಂದು ಬಾಧಕವಿದ್ದಪ್ರಯುಕ್ತ ಇಲ್ಲದಿದ್ದರೆ ಅಲ್ಲಿ ಆನಂದಾದಿಶಬ್ದಪ್ರವೃತ್ತಿಯೇ ಇಲ್ಲದೆಹೋಗುವುದು. ವ್ಯುತ್ಪತ್ತಿಯೂ ಇಲ್ಲ. ಅತೀಂದ್ರಿಯವಾದುದರಿಂದ ಅಲ್ಲಿ ಉಪದೇಶಾದಿಗಳು ಇಲ್ಲದಿರಲು ಸಾದೃಶ್ಯಾನುಮಾನವನ್ನೇ ಅನುಸರಿಸಬೇಕಾಗಿದೆ. ಅದು ಅಸಿದ್ಧವು. ಅಂತೂ ಆನಂದಾದಿಗಳಿಗೆ ವೇದಗಳಿಂದ

**೧೭ನೇ ಸ್ಥಾನವಿಶೇಷಾಧಿಕರಣವು ಮೊದಲೇ ಉಕ್ತವಾಗಿದೆ.**

## ತಥಾನ್ಯತ್ವಾಧಿಕರಣವು.

**" ಓಂ ತಥಾನ್ಯಪ್ರತಿಷೇಧಾತ್ ಓಂ "** ॥ ಸೂ. ೩೭ ॥

ಚತುರ್ಮುಖಾದಿಗಳ ಆನಂದಾದಿಗಳಿಂದ ಪರಾನಂದಾದಿಗಳಿಗೆ ವೈಲಕ್ಷಣ್ಯವಿದ್ದಂತೆಯೇ ಆ ಬ್ರಹ್ಮನು ಧ್ಯಾನವಿಷಯೀಭೂತವಾದ ವಾಸನಾಮಯವಾದ ವಸ್ತುವಿನದೆಶೆಯಿಂದ ವಿಲಕ್ಷಣನು. **'ಯನ್ಮನಸಾ ನ ಮನುತೇ ತದೇವ ಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ'** ಎಂದು ಧ್ಯಾನದಲ್ಲಿ ಪ್ರತೀತವಾದುದಕ್ಕೆ ಬ್ರಹ್ಮತ್ವವನ್ನು ನಿಷೇಧಿಸಿದರಿಂದ ॥ ಸೂ. ೩೭ ॥ ॥ ಅಧಿ. ೧೮ ॥

**ತಥಾನ್ಯತ್ವಾಧಿಕರಣವು ಸಮಾಪ್ತವಾಯಿತು.**

---

## ಅನೇನ ಸರ್ವಗತತ್ವಾಧಿಕರಣವು.

**" ಓಂ ಅನೇನ ಸರ್ವಗತತ್ವಮಾಯಾಮಯ ಶಬ್ದಾದಿಭ್ಯಃ ಓಂ "** ॥ ಸೂ. ೩೮ ॥

**'ಏಷಃ ಸರ್ವಃ ಏಷ ಸರ್ವಗತಃ'** ಎಂದು ಸರ್ವಗತತ್ವಪ್ರತಿಪಾದಕವಾದ ಶ್ರುತಿಯಿಂದಲೂ, **'ಸರ್ವತ್ರ ಸರ್ವಮೇತಸ್ಮಾತ್'** ಎಂದು ಮಾಯಾಮಯ ಶಬ್ದವನ್ನು ವ್ಯಾಖ್ಯಾನ ಮಾಡತಕ್ಕ ಶ್ರುತಿಯಿಂದಲೂ ಪ್ರಕೃತನಾದ ಶ್ರೀ ಹರಿಯಿಂದಲೇ ಸರ್ವ ಜಗತ್ತಿನ ಸೃಷ್ಟ್ಯಾದಿಗಳು ಆಗುತ್ತವೆ. ದೇಶಾಂತರಾದಿಗಳಲ್ಲಿ ಮತ್ತೊಬ್ಬನಿಂದ ಆಗುವುದಿಲ್ಲ. ಮತ್ತೊಬ್ಬನು ಕಾರಣನು ಎನ್ನುವ ವಿಷಯದಲ್ಲಿ ಪ್ರಮಾಣವಿಲ್ಲ ॥ ಸೂ. ೩೮ ॥ ಅಧಿ. ೧೯ ॥

**ಅನೇನ ಸರ್ವಗತತ್ವಾಧಿಕರಣವು ಸಮಾಪ್ತವಾಯಿತು.**

---

## ಫಲಾಧಿಕರಣವು.

**" ಓಂ ಫಲಮತ ಉಪಪತ್ತೇಃ ಓಂ "** ॥ ಸೂ. ೩೯ ॥

ಪ್ರಸ್ತುತನಾದ ಈಶ್ವರನಿಂದಲೇ ಫಲವು. ಕರ್ಮದಿಂದ ಅಲ್ಲ. ಈಶ್ವರನು ಚೇತನನಾದುದರಿಂದ ಆತನಿಗೆ ಫಲದಾತೃತ್ವವು ಕೂಡುತ್ತದೆ. ಕರ್ಮವು ಅಚೇತನವಾದುದರಿಂದ ಅದಕ್ಕೆ ಫಲದಾತೃತ್ವವು ಕೂಡಲಾರದು.

"ಓಂ ಶ್ರುತತ್ವಾಚ್ಚ ಓಂ" ॥ ಸೂ. ೪೦ ॥

'ವಿಜ್ಞಾನಮಾನಂದಂ ಬ್ರಹ್ಮ ರಾತಿರ್ದಾತುಃ' ಎಂದು ಫಲದಾತೃತ್ವವು ಈಶ್ವರನಿಗೆ ಎಂದು ಶ್ರುತಿಯಲ್ಲಿ ಪ್ರತಿಪಾದಿಸಿದುದರಿಂದಲೂ ಈಶ್ವರನಿಂದಲೇ ಫಲವಾಗುತ್ತದೆ.

"ಓಂ ಧರ್ಮಂ ಜೈಮಿನಿರತ ಏವ ಓಂ" ॥ ಸೂ. ೪೧ ॥

'ಏಷ ಹ್ಯೇವ ಸಾಧು ಕರ್ಮ ಕಾರಯತಿ' ಇತ್ಯಾದಿ ಶ್ರುತಿಗಳಿಂದಲೇ ಈಶ್ವರನಿಂದಲೇ ಪುಣ್ಯ-ಪಾಪರೂಪವಾದ ಧರ್ಮಾಧರ್ಮವು ಮಾಡಿಸಲ್ಪಡುತ್ತದೆ. ಫಲವು ಕರ್ಮದಿಂದಲೇ ಆಗುತ್ತದೆ, ಎಂದೂ ಜೈಮಿನ್ಯಾಚಾರ್ಯರು ಹೇಳುತ್ತಾರೆ—

'ಓಂ ಪೂರ್ವಂತು ಬಾದರಾಯಣೋ ಹೇತುವ್ಯಪದೇಶಾತ್ ಓಂ' ॥ ಸೂ. ॥ ೪೨ ॥

ವೇದವ್ಯಾಸರು ಪೂರ್ವೋಕ್ತನಾದ ಬ್ರಹ್ಮನನ್ನು ಕರ್ತನನ್ನಾಗಿಯೂ ಧರ್ಮವನ್ನು ಕರಣವನ್ನಾಗಿಯೂ ಹೀಗೆ ಎರಡನ್ನೂ ಫಲಕಾರಣವನ್ನಾಗಿ ತಿಳಿಯುತ್ತಾರೆ. '**ಪುಣ್ಯೇನ ಪುಣ್ಯಂ ಲೋಕಂ ನಯತಿ**' ಎಂದು ಬ್ರಹ್ಮಕರ್ಮಗಳಿಗೆ ಕರ್ತೃತ್ವ- ಕರಣತ್ವರೂಪವಾದ ಹೇತುವನ್ನು ವ್ಯಪದೇಶಮಾಡುತ್ತಾರೆ.

ಈಶ್ವರನು ಧರ್ಮಾಧರ್ಮಗಳನ್ನು ಅಪೇಕ್ಷಿಸುತ್ತಾನೆಯೇ, ಅಷ್ಟರಿಂದ ಧರ್ಮಾಧರ್ಮಗಳಿಗೇನೇ ಫಲಹೇತುತ್ವವಿರಲಿ ಎನ್ನುವುದು ಯುಕ್ತವಲ್ಲ. ಧರ್ಮಾದಿಗಳಂತೆಯೇ ಈಶ್ವರನೂ ಫಲಕ್ಕೆ ಕಾರಣನೆಂದು ಶ್ರುತಿಸಿದ್ಧನಾದುದರಿಂದ ಬಿಡಕೂಡದು. ಬಾಧಕವಿಲ್ಲದಿರುವುದರಿಂದ ಶ್ರುತಿಗೆ ಅಮುಖ್ಯಾರ್ಥತ್ವವೂ ಕೂಡಲಾರದು. ಅಪ್ರಾಮಾಣಿಕವಾದ ಸ್ಥಳದಲ್ಲಿಯೇ ಗೌರವವು ದೋಷವು. ಸರ್ವೋತ್ತಮನಾದ ಶ್ರೀ ಹರಿಯೂ ಕರ್ಮವೂ ಎರಡೂ ಕಾರಣವಾದರೆ ಇಬ್ಬರಿಗೂ ಸಾಮ್ಯವು ಬರಬೇಕಾಗುವುದು ಎಂದೂ ಹೇಳಕೂಡದು. ಏಕೆಂದರೆ— ಫಲವನ್ನು ಕೊಡುವುದರಲ್ಲಿ ಪರಮೇಶ್ವರನು ಕರ್ತನೆಂದೂ, ಕರ್ಮವು ಕರಣವೆಂದೂ, '**ಪುಣ್ಯೇನ ಪುಣ್ಯಂ ಲೋಕಂ ನಯತಿ**' ಇತ್ಯಾದಿಗಳಲ್ಲಿ ಹೇಳಲ್ಪಡುತ್ತದೆ. ಕರಣವು ಕರ್ತೃಪ್ರಯೋಜ್ಯವು ಎನ್ನುವುದೂ ಪ್ರಸಿದ್ಧವೇ. ಅದರಲ್ಲಿ ಹೀಗೆ ಆಶಂಕಿಸಲ್ಪಡುತ್ತದೆ. ಆದಾಗ್ಯೂ ಈಶ್ವರನು ಕರ್ಮವನ್ನು ಅಪೇಕ್ಷಿಸಿಕೊಂಡು ಫಲವನ್ನು ಕೊಡುವುದಾದರೆ ಅನುಪಚರಿತವಾದ ಸ್ವಾತಂತ್ರ್ಯವು ಸಿದ್ಧಿಸುವುದಿಲ್ಲ. ಅಂತೂ ಶ್ರೀ ಹರಿಯಲ್ಲಿ ಬಹುಮಾನವು (ಭಕ್ತಿಯು) ಅತಿಶಯವಾಗಿ ಸಿದ್ಧಿಸುವುದಿಲ್ಲ. ಇದನ್ನು ಪರಿಹರಿಸುವುದಕ್ಕಾಗಿ ಪೂರ್ವಪದವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ ಸ ಏವಾಶೇಷಜೀವಸ್ಥ ನಿಃಸಂಖ್ಯಾನಾದಿಕಾಲಿಕಾನ್ ।**
**ಧರ್ಮಾಧರ್ಮಾನ್ ಸದಾ ಪಶ್ಯನ್ ಸ್ವೇಚ್ಛಯಾ ಬೋಧಯತ್ಯಜಃ ॥**
**॥ ೨೧೩ ॥**
**ಕಾಂಶ್ಚಿತ್ತೇಷಾಂ ಫಲಂ ಚೈವ ದದಾತಿ ಸ್ವಯಮಚ್ಯುತಃ ।**
**ನ ತೇ ವಿಶೇಷಂ ಕಮಪಿ ಪ್ರೇರಣಾದಿಕಮಚ್ಯುತೇ ॥**
**ಕುರ್ಯುಃ ಕದಾಪಿ ತೇನಾಯಂ ಸ್ವತಂತ್ರೋಽನುಪಚಾರತಃ ॥೨೧೪॥**

ಅ ॥ ಅಜಃ=ಉತ್ಪತ್ತಿರಹಿತನಾದ, ಸ ಏವ=ಆ ಶ್ರೀ ಹರಿಯೇ, ಅಶೇಷಜೀವಸ್ಥನಿಃ-ಸಂಖ್ಯಾನಾದಿಕಾಲಿಕಾನ್=ಎಲ್ಲಾ ಜೀವರಲ್ಲಿರತಕ್ಕ ನಿರವಧಿಕಗಳಾದ, ಪ್ರವಾಹತಃ = ಅನಾದಿ ಕಾಲದಲ್ಲಿರತಕ್ಕ, ಧರ್ಮಾಧರ್ಮಾನ್=ಧರ್ಮ-ಅಧರ್ಮಗಳನ್ನು, ಸದಾ = ಯಾವಾಗಲೂ, ಪಶ್ಯನ್ ಸನ್=ನೋಡುವವನಾಗಿ, ಸ್ವೇಚ್ಛಯಾ=ತನ್ನ ಇಚ್ಛೆಯಿಂದಲೇ, ಕಾಂಶ್ಚಿತ್=ಕೆಲವರನ್ನು, ಸ್ವಯಮೇವ=ತಾನೇವೇ, ಬೋಧಯತಿ=ಸವ್ಯಾಪಾರರನ್ನಾಗಿಮಾಡುತ್ತಾನೆ. (ಕ್ರೀಡೆಯಿಂದ ಕರ್ಮವನ್ನೂ ಕರಣವನ್ನಾಗಿ ಮಾಡುತ್ತಾನೆ. ಕರ್ಮವಿಲ್ಲದೆ ಕೊಡಲಿಕ್ಕೆ ಶಕ್ತನಾಗುವುದಿಲ್ಲ ವೆಂದಲ್ಲ.) ಅಚ್ಯುತಃ=ಶ್ರೀಹರಿಯು, ತೇಷಾಂ=ಅವರಿಗೆ, ಫಲಂಚ=ಫಲವನ್ನೂಕೂಡ, ದದಾತಿ= ಕೊಡುತ್ತಾನೆ. ತೇ=ಅವರು, ಪ್ರೇರಣಾದಿಕಂ=ಪ್ರೇರಣಾಮೊದಲಾದ, ಕಮಪಿ ವಿಶೇಷಂ=ಯಾವ ವಿಶೇಷವನ್ನು, ಅಚ್ಯುತೇ=ಶ್ರೀಹರಿಯಲ್ಲಿ, ಕದಾಪಿ=ಯಾವಾಗಲೂಕೂಡ, ನ ಕುರ್ಯುಃ= ಮಾಡಲಾರರು, ತೇನ=ಆದುದರಿಂದ, ಅಯಂ=ಶ್ರೀ ಹರಿಯು, ಅನುಪಚಾರತಃ=ಮುಖ್ಯವಾಗಿ, ಸ್ವತಂತ್ರಃ=ಸ್ವತಂತ್ರನು. ॥ ೨೧೩ ॥ ೨೧೪ ॥

ಧರ್ಮಾಧರ್ಮ ದರ್ಶನವು, ಧರ್ಮ ಅಧರ್ಮಗಳ ಪ್ರೇರಣೆಯು, ಧರ್ಮಾಧರ್ಮಗಳಿಗೆ ಫಲದಾನವು, ಧರ್ಮ ಅಧರ್ಮಗಳಿಂದ ಪ್ರೇರಿಸಲ್ಪಡದೆ ಇರುವಿಕೆಯು ಇದುಮೊದಲಾದುದು ಈಶ್ವರನಿಗೆ ಯಾವುದು ಹೇಳಲ್ಪಟ್ಟದೋ ಅದನ್ನು ವಿಚಾರಮಾಡುವಾಗ ಆ ಶ್ರೀ ಹರಿಯಲ್ಲಿ ಮಹತ್ತಾದ ಆದರವನ್ನು ಹುಟ್ಟಿಸುತ್ತದೆ. ಸಮಸ್ತ ಪದಾರ್ಥವೂ ಕರ್ತೃತ್ವವನ್ನು ವಿಚಾರಮಾಡುವಾಗ ಬಹುಮಾನವನ್ನು ಹುಟ್ಟಿಸುತ್ತದೆಂದು ಏನು ಹೇಳಬೇಕು? ಎನ್ನುವ ಅಭಿಪ್ರಾಯದಿಂದ ಕರ್ಮಗಳ ಸ್ವರೂಪವನ್ನು ವಿಸ್ತರಿಸುತ್ತಾರೆ—

**ಮೂ ॥ ಕರ್ಮಾಣಿ ತಾನಿ ಚ ಪೃಥಕ್ ಚೇತನಾನ್ಯೇವ ಸರ್ವಶಃ ॥ ೨೧೫ ॥**
**ಅಚೇತನಶರೀರಾಣಿ ಸ್ವಕರ್ಮಫಲಭಾಂಜಿ ಚ ।**
**ಪ್ರತ್ಯೇಕಂ ತೇಷು ಚಾನಂತಕರ್ಮಾಣ್ಯೇವಂವಿಧಾನಿ ಚ ।**
**ತಾನಿ ಚೈವಮಿತೀಶಸ್ಯ ನಿಃಸಿಮಾ ಶಕ್ತಿರುತ್ತಮಾ ॥ ೨೧೬ ॥**

ಅ ॥ ತಾನಿ ಚ ಕರ್ಮಾಣಿ=ಅಶೇಷ ಜೀವರಲ್ಲಿರತಕ್ಕ ಅವಧಿರಹಿತಗಳಾದ ಅನಾದಿಕಾಲದಲ್ಲಿರತಕ್ಕ ಕರ್ಮಗಳು, ಸರ್ವಶಃ ಪೃಥಕ್ ಚೇತನಾನ್ಯೇವ = ಎಲ್ಲವೂ ಒಂದೊಂದು ಧರ್ಮಾಧರ್ಮಾಧಿಷ್ಠಾತೃಭೂತಗಳು, ಅಚೇತನ ಶರೀರಾಣಿ=ಅಚೇತನಶರೀರವುಳ್ಳವುಗಳು, ಸ್ವಕರ್ಮಫಲಭಾಂಜಿ ಚ=ತಮ್ಮ ಕರ್ಮಗಳ ಫಲವನ್ನು ಹೊಂದುವುವುಗಳು, ತೇಷು ಚ=ಆ ಕರ್ಮಾಭಿಮಾನಿಗಳಲ್ಲಿಯೂ, ಪ್ರತ್ಯೇಕಂ=ಪ್ರತ್ಯೇಕವಾಗಿ, ಅನಂತಕರ್ಮಾಣಿ=ಅಪರಿಮಿತ ಕರ್ಮಗಳು ಇವೆ. ಏವಂ ವಿಧಾನಿ=ಚೇತನತ್ವ ಮೊದಲಾದ ಹಿಂದೆ ಹೇಳಿದ ಧರ್ಮಗಳುಳ್ಳ, ತಾನಿ ಕರ್ಮಾಭಿಮಾನಿಗಳು, ತೇಷ್ವಪಿ=ಆ ಕರ್ಮಗಳಲ್ಲಿರತಕ್ಕವರು, ಏವಂ ಇತಿ ಈಶಸ್ಯ=ಇಂತಹ ಕರ್ಮಗಳ ದರ್ಶನಾದಿಗಳುಳ್ಳ ಶ್ರೀ ಹರಿಗೆ, ನಿಃಸಿಮಾ=ನಿರವಧಿಕವಾದ, ಉತ್ತಮಾ=ಪ್ರತಿಬಂಧಾದಿಗಳು ಇಲ್ಲದಿರುವುದರಿಂದ ಉತ್ತಮವಾದ, ಶಕ್ತಿಃ=ಶಕ್ತಿಯಿದೆ. ॥ ೨೧೫ ॥ ೨೧೬ ॥

ಕರ್ಮಗಳು ಹೀಗೆ ಇವೆಯೆಂದು ಹೇಗೆ ಸಿದ್ಧವಾಗುತ್ತದೆ ಎಂದರೆ—

**ಮೂ ॥ ಏಕೈವ ಬ್ರಹ್ಮಹತ್ಯಾ ಹಿ ವರಾಹ ಹರಿಣೋದಿತಾ ॥ ೨೧೭ ॥**
**ಬ್ರಹ್ಮಹಾರಸ್ತ್ವನೇಕೈವ ನಿಷ್ಕ್ರಾಂತಾ ರಾಜದೇಹತಃ ।**

**ಸ್ತೋತ್ರಸ್ಯ ತಸ್ಯ ಮಾಹಾತ್ಮ್ಯಾದ್ವ್ಯಾಧತ್ವಂ ಗಮಿತಾ ಪುನಃ ॥ ೨೧೮ ॥**
**ಪ್ರಾಪ್ಯ ಜ್ಞಾನಂ ಪರಂ ಚಾಪ ತಥಾನ್ಯಾನ್ಯಪಿ ಸರ್ವಶಃ ।**
**ಅನಂತಾನ್ಯುದಿತಾನ್ಯೇವಂ ಪ್ರಭುಣಾ ಕಪಿಲೇನ ಹಿ ॥ ೨೧೯ ॥**

ಅ ॥ ಏಕಾ ಬ್ರಹ್ಮಹತ್ಯಾ=ಒಂದು ಬ್ರಹ್ಮಹತ್ಯೆಯು, ವರಾಹಹರಿಣ್ಯೈವ=ವರಾಹರೂಪಿಯಾದ ಶ್ರೀ ಹರಿಯಿಂದಲೇ (ವಾರಾಹ ಪುರಾಣದಲ್ಲಿ ಚೇತನತ್ವಾದಿ ರೂಪದಿಂದ), ಉದಿತಾ=ಹೇಳಲ್ಪಟ್ಟಿದೆ. (ಅದನ್ನೇ ತೋರಿಸುತ್ತಾರೆ.) ಬ್ರಹ್ಮಪಾರಸ್ತವೇನೈವ = ಬ್ರಹ್ಮಪಾರಸ್ತೋತ್ರದಿಂದಲೇ, ರಾಜದೇಹತಃ = ರಾಜನ ಶರೀರದೆಸೆಯಿಂದ, ಬ್ರಹ್ಮಹತ್ಯಾ = ಬ್ರಹ್ಮಹತ್ಯೆಯು, ನಿಷ್ಕ್ರಾಂತಾ=ಹೊರಟುಹೋಗಿದೆ. ತಸ್ಯ ಸ್ತೋತ್ರಸ್ಯ=ಆ ಸ್ತೋತ್ರದ, ಮಾಹಾತ್ಮ್ಯಾತ್=ಮಹಿಮೆಯ ದೆಸೆಯಿಂದ, ಪುನಃ=ಮತ್ತು, ವ್ಯಾಧತ್ವಂ=ವ್ಯಾಧತನವನ್ನು (ಚೇತನತ್ವ ಮೊದಲಾದುದನ್ನು) ಗಮಿತಾ=ಹೊಂದಲ್ಪಟ್ಟಿತು. ಜ್ಞಾನಂ=ಜ್ಞಾನವನ್ನು, ಪ್ರಾಪ್ಯ=ಹೊಂದಿ, ಪರಂ=ಉತ್ಕೃಷ್ಟವಾದ ಶ್ರೀ ಹರಿಯನ್ನು, ಆಪ=ಹೊಂದಿದನು. ತಥಾ=ಹಾಗೆಯೇ. ಅನ್ಯಾನಿ=ಬ್ರಹ್ಮಹತ್ಯೆಯಿಂದ ಇತರಗಳಾದ, ಸರ್ವಶಃ=ಎಲ್ಲಾ. ಅನಂತಾನಿ=ಅಪರಿಮಿತಗಳಾದ, ಕರ್ಮಗಳು ಉದಿತಾನಿ=ಪ್ರತ್ಯೇಕ ಪ್ರತ್ಯೇಕವಾಗಿ ಚೇತನಗಳೆಂದು ಹೇಳಲ್ಪಟ್ಟಿವೆ. ಏವಂ=ಹೀಗೆ ಚೇತನತ್ವಾದಿಗಳಿಂದ, ಪ್ರಭುಣಾ=ಸರ್ವಸಮರ್ಥನಾದ, ಕಪಿಲೇನ=ಕಪಿಲರೂಪಿಯಾದ ಶ್ರೀ ಹರಿಯಿಂದ, ಉದಿತಾನಿ=ಹೇಳಲ್ಪಟ್ಟಿವೆ. ಹಿ=ಪರಮಸಾಂಖ್ಯದಲ್ಲಿ ಪ್ರಸಿದ್ಧವಾಗಿದೆ. ॥ ೨೧೭ ॥ ೨೧೮ ॥ ೨೧೯ ॥

ಅವರಿಗೆ ಚೇತನತ್ವಾದಿ ಪ್ರತೀತಿಯು ಹೇಗೆ ಎಂದರೆ—

**ಮೂ ॥ ಸಂಸಾರೇ ಪಚ್ಯಮಾನಾನಿ ಕರ್ಮಾಣ್ಯಪಿ ಪೃಥಕ್ ಪೃಥಕ್ ।**
**ತಸ್ಮಾದನಂತಮಾಹಾತ್ಮ್ಯಗುಣಪೂರ್ಣೋ (ಗೋ) ಜನಾರ್ದನಃ ।**
**ಭಕ್ತ್ಯಾ ಪರಮಯಾರಾಧ್ಯ ಇತಿ ಪಾದಾರ್ಥ ಈಯತೇ ॥ ೨೨೦ ॥**

ಅ ॥ ಸಂಸಾರೇ=ಸಂಸಾರದಲ್ಲಿ, ಪಚ್ಯಮಾನಾನಿ=ಮಾಡಲ್ಪಡುವ, ಕರ್ಮಾಣ್ಯಪಿ=ಕರ್ಮಗಳೂ ಕೂಡ, ಪೃಥಕ್ ಪೃಥಕ್=ಪ್ರತ್ಯೇಕ ಪ್ರತ್ಯೇಕವಾಗಿ ಇವೆ. ತಸ್ಮಾತ್=ಆದುದರಿಂದ, ಅನಂತಮಾಹಾತ್ಮ್ಯಗುಣಪೂರ್ಣಃ (ಗಃ) = ಅಪರಿಮಿತ ಮಹಿಮೆಯುಳ್ಳ ಗುಣಗಳಿಂದ ಪೂರ್ಣನಾದ, ಅಥವಾ ಗುಣಗಳ ಸಮೂಹವುಳ್ಳ, ಜನಾರ್ದನಃ=ಶ್ರೀ ಹರಿಯು, ಪರಮಯಾ ಭಕ್ತ್ಯಾ=ಸರ್ವೋತ್ಕೃಷ್ಟವಾದ ಭಕ್ತಿಯಿಂದ, ಆರಾಧ್ಯಃ=ಪೂಜಿಸಿಕೊಳ್ಳಲ್ಪಡತಕ್ಕವನು, ಇತಿ=ಹೀಗೆ, ಪಾದಾರ್ಥಃ=ಪಾದಾರ್ಥವು, ಈಯತೇ=ಹೇಳಲ್ಪಡುತ್ತದೆ ॥ ೨೨೦ ॥

## ಅಧಿಕರಣ ಸಾರಾಂಶ.

**ಸ. ರ. ವಿ—** (1) ಹಾಗಾದರೆ ವಿಷ್ಣುವಿನಲ್ಲಿ ಅತಿಶಯಿತವಾದ ಭಕ್ತಿಯು ಸಿದ್ಧಿಸುವುದಕ್ಕಾಗಿ ಯಾವುದು ವಿಷ್ಣುವಿಗೆ ಸರ್ವಗುಣಾಢ್ಯತ್ವವು ಪ್ರತಿಪಾದಿಸಲ್ಪಡುತ್ತದೋ ಅದು ಯುಕ್ತವಲ್ಲ. ಕರ್ಮವೇ ಸ್ವರ್ಗಾದಿ ಫಲಗಳನ್ನು ಕೊಡತಕ್ಕದಾದುದರಿಂದ ವಿಷ್ಣುವಿಗೆ ಫಲದಾತೃತ್ವರೂಪವಾದ ಗುಣವಿಲ್ಲವೆಂದರೆ— ಶ್ರೀ ಹರಿಯೇ **'ಪುಣ್ಯೇನ ಪುಣ್ಯಂ ಲೋಕಂ ನಯತಿ'** ಇತ್ಯಾದಿ ಶ್ರುತಿಗಳಿಂದ ಅನಂತ ಜೀವರಿಗೆ ಆಯಾಯ ಕರ್ಮಗಳನ್ನು ಅನುಸರಿಸಿ ಫಲವನ್ನು ಕೊಡತಕ್ಕವನು. ಕರ್ಮವು ಅಚೇತನವಾಗುವುದರಿಂದ ಅದಕ್ಕೆ ಫಲದಾತೃತ್ವವು ಕೂಡಲಾರದು. ಸೇವೆಯಿಂದಲೇ

ಫಲವನ್ನು ಕೊಡುತ್ತಾನೆ. ರಾಜ ಮೊದಲಾದವರು ಸೇವೆಯನ್ನನುಸರಿಸಿಯೇ ಫಲವನ್ನು ಕೊಡ ತಕ್ಕವರು ಕಾಣಲ್ಪಟ್ಟಿರುತ್ತಾರೆ. ಆದಕಾರಣ ಪರಮ ಭಕ್ತಿಯಿಂದಲೇ ಶ್ರೀ ಹರಿಯು ಪೂಜಿಸಲ್ಪಡಬೇಕು.

ಫಲಾಧಿಕರಣವು ಸಮಾಪ್ತವಾಯಿತು.

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ ತೃತೀಯಾಧ್ಯಾಯಸ್ಯ
ದ್ವಿತೀಯಃ ಪಾದಃ ಸಮಾಪ್ತಃ

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಿಕೊಳ್ಳಲ್ಪಟ್ಟ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ ಮೂರನೇ ಅಧ್ಯಾಯದಲ್ಲಿ
ಎರಡನೇ ಪಾದವು ಮುಗಿಯಿತು.

ಇತಿ ಶ್ರೀಮತ್ಪೂರ್ಣಪ್ರಮತಿ ಭಗವತ್ಪಾದಸುಕೃತೇ-
ರನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ।
ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ
ತೃತೀಯೇಽಧ್ಯಾಯೇಽಸ್ಮಿನ್ ಭಜನಚರಣಃ ಪರ್ಯವಸಿತಃ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥



॥ ಶ್ರೀಃ ॥

# ಮೂರನೇ ಪಾದವು.

---

**ಓಂ ಶ್ರೀಮಧ್ವಸುಮಧ್ವೀಮ ಮಧ್ವಾಂತರ್ಗತ ರಾಮ-ಕೃಷ್ಣ ವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ ಹರಿಃ ಓಂ ॥**

**ಮೂ ॥ ಓಂ ವೈರಾಗ್ಯತೋ ಭಕ್ತಿದಾರ್ಢ್ಯಂ ತೇನೋಪಾಸಾ ಯದಾ ಭವೇತ್।**
**ಅಪರೋಕ್ಷ್ಯಂ ತಯಾ ವಿ (ಭವೇದ್ವಿ) ಷ್ಣೋ ರಿತಿ ಪಾದಕ್ರಮೋ ಭವೇತ್ ॥ ೧ ॥**

ಅ ॥ ವೈರಾಗ್ಯತಃ=ವೈರಾಗ್ಯದ್ದೆಶೆಯಿಂದ, ಭಕ್ತಿದಾರ್ಢ್ಯಂ=ಭಕ್ತಿದಾರ್ಢ್ಯವು,ಭವೇತ್= ಉಂಟಾಗುತ್ತದೆ. ತೇನ = ಆ ಭಕ್ತಿದಾರ್ಢ್ಯದಿಂದ, ಯದಾ = ಯಾವಕಾರಣದೆಶೆಯಿಂದ, ಉಪಾಸಾ = ಉಪಾಸನೆಯು, ಭವೇತ್ = ಆಗುವುದೋ, ತಯಾ = ಆ ಉಪಾಸನೆಯಿಂದ, ವಿಷ್ಣೋಃ = ಶ್ರೀ ಹರಿಯ, ಅಪರೋಕ್ಷ್ಯಂ = ಪ್ರತ್ಯಕ್ಷತ್ವವು, (ಅಂದರೆ ಶ್ರೀ ಹರಿಯ ಸಾಕ್ಷಾತ್ಕಾರವು) ಭವೇತ್ = ಆಗುವುದೋ, ಇತಿ=ಈ ಕಾರಣದಿಂದ, ಪಾದಕ್ರಮಃ = ನಾಲ್ಕು ಪಾದಗಳ ಪೌರ್ವಾಪರ್ಯಕ್ರಮವು, ಭವೇತ್=ಆಗುವುದು.

ತಾ ॥ **ನ್ಯಾಯಸುಧಾ—** (1) ಈ ಪಾದದಲ್ಲಿ ಉಪಾಸನೆಯು ಹೇಳಲ್ಪಡುತ್ತದೆ. ಅದರಲ್ಲಿ ಈ ಉಪಾಸನಾರ್ಥವಾದ ಈ ಪಾದಕ್ಕೆ ಪೂರ್ವಸಂಗತಿಯನ್ನೂ, ಉತ್ತರಸಂಗತಿಯನ್ನೂ ಹೇಳುತ್ತಾ ಪ್ರಸಂಗಸಂಗತಿಯಿಂದ, ಈ ಅಧ್ಯಾಯದಲ್ಲಿರತಕ್ಕ ನಾಲ್ಕುಪಾದಗಳಿಗೂ ಸಂಗತಿಯನ್ನು ಹೇಳಿದರು. (2) ವಿಚಾರಸಾಧ್ಯವಾದ ವೈರಾಗ್ಯದೆಶೆಯಿಂದ ಭಕ್ತಿಯು ಮೊದಲೇ ಆವಶ್ಯಕವಾದುದರಿಂದ ಭಕ್ತಿಯ ದಾರ್ಢ್ಯವೆಂದು ಹೇಳಿರುವರು. (3) ಈ ಅಧ್ಯಾಯವು ಮೋಕ್ಷಸಾಧನವನ್ನು ವಿಚಾರಮಾಡುವುದಕ್ಕಾಗಿ ಪ್ರವೃತ್ತವಾದುದು. ಭಗವತ್ಪ್ರಸಾದವೇ ಮೋಕ್ಷಕ್ಕೆ ಪ್ರಧಾನ ಸಾಧನವು. ಆ ಭಗವತ್ಪ್ರಸಾದಕ್ಕೆ ೧ ವಿಷಯ ವೈರಾಗ್ಯ, ೨ ಭಗವದ್ಭಕ್ತಿ, ೩ ಭಗವದುಪಾಸನೆ, ೪ ಭಗವತ್ಸಾಕ್ಷಾತ್ಕಾರ, ಹೀಗೆ ನಾಲ್ಕುಸಾಧನಗಳು. ಅವುಗಳು ಎಲ್ಲವೂ ಸಮಾನವಾಗಿ ಸಾಧನಗಳಲ್ಲ. ಅಂದರೆ ಒಂದಕ್ಕೊಂದು ಕಾರಣವಾಗಿ ಸಾಧನಗಳಾಗುವವು. ಹೇಗೆಂದರೆ— ಆದಿಯಲ್ಲಿ ನಿತ್ಯಾನಿತ್ಯವಿವೇಕಾದಿಗಳಿಂದ ವಿಷಯವೈರಾಗ್ಯವನ್ನು ಸಂಪಾದಿಸಬೇಕು. ಅದರಿಂದ ಭಕ್ತಿಯನ್ನು ಸಂಪಾದಿಸಬೇಕು. ಏಕೆಂದರೆ— ಹೇಯದಲ್ಲಿ ರಾಗವಿದ್ದವನಿಗೆ ಉಪಾದೇಯದಲ್ಲಿ ಪ್ರೇಮವು ಹುಟ್ಟುವುದಿಲ್ಲ. ಪ್ರೇಮವು ಮೊದಲೇ ಕಂಡದೆ ಎಂದರೆ— ಅದು ದೃಢವಾದಪ್ರೇಮವಲ್ಲ. ಆದುದರಿಂದ ದೃಢವಾದ ಪ್ರೇಮವು ವೈರಾಗ್ಯದಿಂದಲೇ ಹುಟ್ಟುವುದು. ಆ ವೈರಾಗ್ಯದಿಂದಲೂ ಭಕ್ತಿದಾರ್ಢ್ಯದಿಂದಲೂ ಉಪಾಸನೆಯು ಉಂಟಾಗುವುದು. ಹೇಯದಲ್ಲಿ ರಾಗವಿದ್ದವನಿಗೆ, ಶ್ರೀ ಹರಿಯಲ್ಲಿ ಭಕ್ತಿಯು ಇಲ್ಲದವನಿಗೆ ಆದರ ನೈರಂತರ್ಯಗಳಿಂದ ಧ್ಯಾನವು ಹುಟ್ಟುವುದಿಲ್ಲ. ಅತಿದೀರ್ಘಕಾಲದಲ್ಲಿ ಮಾಡಿದ ಉಪಾಸನೆಯಿಂದ ಪ್ರಸನ್ನನಾದ ಶ್ರೀ ಹರಿಯು ತನ್ನನ್ನು ತೋರಿಸಿಕೊಳ್ಳುತ್ತಾನೆ. ವೈರಾಗ್ಯಾದಿಗಳಲ್ಲಿ ಹೀಗೆ ಪೌರ್ವಾಪರ್ಯಕ್ರಮವಿದ್ದುದರಿಂದಲೇ ವೈರಾಗ್ಯಾದಿ ವಿಷಯಕಗಳಾದ ಈ ಪಾದಗಳಲ್ಲಿಯೂ ಈ ಪೌರ್ವಾಪರ್ಯಕ್ರಮವು ಕೂಡುವುದು. ॥ ೧ ॥

ಹೀಗೆ ಈ ಅಧ್ಯಾಯದಲ್ಲಿರತಕ್ಕ ನಾಲ್ಕುಪಾದಗಳಿಗೂ ಆನಂತರ್ಯರೂಪವಾದ ಸಂಗತಿಯನ್ನು ಹೇಳಿ ಸಂಗತಿಗಳನ್ನುಹೇಳುವ ಪ್ರಸಂಗದಿಂದ ಪ್ರಥಮಸೂತ್ರವನ್ನು ಆರಂಭಿಸಿ ಅತೀತಗಳಾದ ಎಲ್ಲಾ ಸೂತ್ರಗಳಿಗೂ ಪರಸ್ಪರ ಸಂಗತಿಯನ್ನು ಹೇಳಲಿಚ್ಛಿಸಿದವನಾಗಿ ಪ್ರಥಮಸೂತ್ರಾರ್ಥವನ್ನು ಅನುವಾದಮಾಡುತ್ತಾರೆ.—

**ಮೂ ॥ ಯುಕ್ತಿತೋ ಜ್ಞಾತವೇದಾರ್ಥೋ ನಿರಸ್ಯ ಸಮಯಾನ್ ಪರಾನ್ ।**
**ಪರಸ್ಪರವಿರೋಧಂ ಚ ಪ್ರಣುದ್ಯಾಶೇಷವಾಕ್ಯಗಂ ॥ ೨ ॥**
**ಅಧ್ಯಾತ್ಮಪ್ರವಣೋ ಭೂತ್ವಾ ತಸ್ಯ ಸಂನಿಹಿತತ್ವತಃ ।**
**ಬಹುಯುಕ್ತಿವಿರೋಧಾನಾಂ ಭಾನಾತ್ತತ್ಸಹಿತಶ್ರುತೇಃ ॥ ೩ ॥**
**ವಿರೋಧಂ ಚ ನಿರಾಕೃತ್ಯ ಶ್ರುತೀನಾಂ ಪ್ರಾಣತತ್ವಗಾನ್ ।**
**ಪರಿಹೃತ್ಯ ವಿರೋಧಾಂಶ್ಚ ತತ್ಪ್ರಸಾದಾನುರಂಜಿತಃ ॥ ೪ ॥**

ಅ ॥ (ಆಪಾತತಃ ಯುಕ್ತಿವಿರೋಧವು ಪ್ರತೀತವಾಗುತ್ತಿರಲು) ಯುಕ್ತಿತಃ = ಪ್ರಬಲಯುಕ್ತಿಯುದೆಶೆಯಿಂದ, (ಆ ಯುಕ್ತಿವಿರೋಧವನ್ನು ಪರಿಹರಿಸಿ) ಜ್ಞಾತ ವೇದಾರ್ಥಃ = ತಿಳಿಯಲ್ಪಟ್ಟ ಎಲ್ಲಾ ವೇದಗಳ ಅರ್ಥವುಳ್ಳವನಾಗಿ, ಪರಾನ್=ಇತರಗಳಾದ, ಸಮಯಾನ್=ಸಾಂಖ್ಯಾದಿದುಶ್ಶಾಸ್ತ್ರಗಳನು , ನಿರಸ್ಯ=ನಿರಾಕರಿಸಿ, ಅಶೇಷವಾಕ್ಯಗಂ=ಎಲ್ಲಾ ವೇದ ವಾಕ್ಯಗಳಲ್ಲಿರತಕ್ಕ, ಪರಸ್ಪರ ವಿರೋಧಂ ಚ = ಅನ್ಯೋನ್ಯ ವಿರೋಧವನ್ನೂ ಕೂಡ, ಪ್ರಣುದ್ಯ = ಪರಿಹಾರಮಾಡಿ, ಅಧ್ಯಾತ್ಮಪ್ರವಣಃ = ಜೀವನನ್ನು ಅಧಿಕರಿಸಿಕೊಂಡು ಇರತಕ್ಕ ಶರೀರ, ಇಂದ್ರಿಯ ಮೊದಲಾದುದರಲ್ಲಿ ಆಸಕ್ತನು, ಭೂತ್ವಾ = ಆಗಿ, ತಸ್ಯ =ಶರೀರೇಂದ್ರಿಯಕ್ಕೆ, ಸನ್ನಿಹಿತತ್ವತಃ = ವೇದವಿಚಾರ್ಯನಾದ ಆತ್ಮ - ಪರಮಾತ್ಮನಿಗೆ ಸ್ಥಾನವಾಗಿರುವುದರಿಂದ, ಜಿಜ್ಞಾಸಾ ಸನ್ನಿಧಾನವಿದ್ದುದರಿಂದ, (ಇಂದ್ರಿಯಾದಿಗಳಲ್ಲಿ ಯುಕ್ತಿಗಳು ಉಪಜೀವ್ಯ ಪ್ರಮಾಣಗಳಾದುದರಿಂದ ಅದರಲ್ಲಿ) ಬಹುಯುಕ್ತಿ ವಿರೋಧಾನಾಂ=ಅನೇಕ ಯುಕ್ತಿಗಳ ವಿರೋಧಗಳ, ಭಾನಾತ್ = ಪ್ರತೀತಿ ಇರೋಣದರಿಂದಲೂ, ಶ್ರುತೀನಾಂ=ಆ ಇಂದ್ರಿಯಾದಿಗಳನ್ನು ಪ್ರತಿಪಾದಿಸತಕ್ಕ ಶ್ರುತಿಗಳಿಗೆ, ತತ್ಸಹಿತಶ್ರುತೇಃ=ಯುಕ್ತಿಸಹಿತವಾದ ಶ್ರುತಿಯುದ್ದೆಶೆಯಿಂದ, ವಿರೋಧಂ ಚ=ವಿರೋಧವನ್ನೂ ಕೂಡ, ನಿರಾಕೃತ್ಯ = ಪರಿಹಾರಮಾಡಿ, ಪ್ರಾಣತತ್ವಗಾನ್=ಇಂದ್ರಿಯಾದಿಗಳ ಸ್ವರೂಪದಲ್ಲಿರತಕ್ಕ, ವಿರೋಧಾಂಶ್ಚ=ವಿರೋಧಗಳನ್ನೇ, ಪರಿಹೃತ್ಯ=ಪರಿಹರಿಸಿ, (ಅಧಿಕಾರಿಯು) ತತ್ಪ್ರಸಾದಾನುರಂಜಿತಃ=ಇಂದ್ರಿಯಾಭಿಮಾನಿ ದೇವತೆಗಳ ಪ್ರಸಾದದಿಂದ ಕೂಡಿದವನು ಆಗಬೇಕು.

ತಾ ॥ ನ್ಯಾಯಸುಧಾ— (1) ಸಂಗತಿಯನ್ನು ಹೇಳುವುದಕ್ಕಾಗಿ ಸಾಮಾನ್ಯವಾಗಿ ದ್ವಿತೀಯಾಧ್ಯಾಯ ಅಂದರೆ, ಅವಿರೋಧ್ಯಾಯದ ಯುಕ್ತಿ, ಸಮಯ ಶ್ರುತಿ, ನ್ಯಾಯೋಪೇತ ಶ್ರುತಿ ಇವುಗಳ ವಿರೋಧ ಪರಿಹಾರವನ್ನು ಪ್ರತಿಪಾದಿಸತಕ್ಕ ಈ ಯುಕ್ತ್ಯಾದಿ ನಾಲ್ಕು ಪಾದಗಳ ಅರ್ಥವನ್ನು ಸಂಕ್ಷೇಪವಾಗಿ ಅನುವಾದಮಾಡಿದರು ॥ ೨ ॥ ೩ ॥ ೪ ॥

**ಮೂ ॥ ದೇಹಕರ್ತೃತ್ವನಾಶಸ್ಯ ಜ್ಞಾತ್ವಾ ತತ್ಪಿತೃತಾಸ್ಮೃತೇಃ ।**
**ವಿಶೇಷಸ್ನೇಹಮಾಪಾದ್ಯ ಸರ್ವಕರ್ತೃತತೋಽಧಿಕಂ ॥ ೫ ॥**
**ನಿಷ್ಪಾದ್ಯ ಬಹುಮಾನಂ ಚ ತದನ್ಯತ್ರಾತಿದುಃಖತಃ ।**
**ಉತ್ಪಾದ್ಯಾಧಿಕವೈರಾಗ್ಯಂ ತದ್ಗುಣಾಧಿಕ್ಯವೇದನಾತ್ ॥ ೬ ॥**

**ಸರ್ವಸ್ಯ ತದ್ವಶತ್ವಾಚ್ಚ ದಾರ್ಢ್ಯಂ ಭಕ್ತೇರವಾಪ್ಯ ಚ ।**
**ಯತೇತೋಪಾಸನಾಯೈವ ವಿಶಿಷ್ಟಾಚಾರ್ಯಸಂಪದಾ ॥ ೭ ॥**

ಅ ॥ ಈಶಸ್ಯ=ಶ್ರೀ ಹರಿಗೆ, ದೇಹಕರ್ತೃತ್ವಂ=ಅಸ್ಮದಾದಿಗಳ ಶರೀರಕರ್ತೃತ್ವವನ್ನು, ಜ್ಞಾತ್ವಾ = ತಿಳಿದು, ತತ್ಪಿತೃತಾಸ್ಮೃತೇಃ = ಆ ಶ್ರೀ ಹರಿಗೆ ಪಿತೃತ್ವದ ಸ್ಮರಣೆದೆಶೆಯಿಂದ (ಅಂದರೆ ಶ್ರೀ ಹರಿಯೇ ನಮಗೆ ಮುಖ್ಯವಾಗಿ ತಂದೆಯೆಂದು ಸ್ಮರಿಸಿಕೊಂಡು) ವಿಶೇಷಸ್ನೇಹಂ= ವಿಶೇಷವಾಗಿ ಸ್ನೇಹವನ್ನು, ಆಪಾದ್ಯ = ಹೊಂದಿ, ಸರ್ವಕರ್ತೃತ್ವತಃ = ಸರ್ವಕರ್ತೃತ್ವವನ್ನು ತಿಳಿದು, ಅಧಿಕಂ=ಹೆಚ್ಚಾದ, ಬಹುಮಾನಂ ಚ=ಆದರವನ್ನು ಕೂಡ, ನಿಷ್ಪಾದ್ಯ=ಮಾಡಿ, ಅತಿದುಃಖತಃ=ಸಂಸಾರಕ್ಕೆ ಅತಿದುಃಖಸಾಧನತ್ವವನ್ನು ತಿಳಿದು, ತದನ್ಯತ್ರ=ಆ ಶ್ರೀಹರಿಯಿಂದ ಬೇರೆ ಕಡೆಯಲ್ಲಿ, ಅಧಿಕವೈರಾಗ್ಯಂ = ಅಧಿಕವಾದ ವೈರಾಗ್ಯವನ್ನು, ಉತ್ಪಾದ್ಯ = ಹುಟ್ಟಿಸಿ (ಅಂದರೆ ಹೊಂದಿ), ತದ್ಗುಣಾಧಿಕ್ಯವೇದನಾತ್=ಆ ಶ್ರೀಹರಿಗೆ ಗುಣಗಳಿಂದ ಆಧಿಕವನ್ನು ತಿಳಿದಿರುವುದರಿಂದಲೂ, ಸರ್ವಸ್ಯ=ಎಲ್ಲಾ ಜಗತ್ತಿಗೆ, ತದ್ವಶತ್ವಾಚ್ಚ=ಶ್ರೀ ಹರಿಯ ಅಧೀನತ್ವವನ್ನು ತಿಳಿದು, ಭಕ್ತೇಃ=ಭಕ್ತಿಗೆ, ದಾರ್ಢ್ಯಂ=ದೃಢತನವನ್ನು, ಅವಾಪ್ಯ ಚ=ಹೊಂದಿ, ವಿಶಿಷ್ಟಾಚಾರ್ಯಸಂಪದಾ=ಉತ್ತಮ ಆಚಾರ್ಯರ ಉಪದೇಶಾದಿ ಸಂಪತ್ತಿನಿಂದ, ಉಪಾಸನಾಯೈವ= ಉಪಾಸನೆಗೋಸ್ಕರವೇ, ಯತೇತ=ಪ್ರಯತ್ನಮಾಡತಕ್ಕದು.

ತಾ ॥ **ನ್ಯಾಯಸುಧಾ**— (1) ಜಿಜ್ಞಾಸಾ ಎಂದರೆ—ವಿಚಾರವೆಂಬ ಮನನವು. ಅದು ಶ್ರವಣಮಾಡದೆ ಕೂಡಲಾರದು. ಆದಕಾರಣ ಎಷ್ಟು ಅರ್ಥಗಳನ್ನು ಈ ಶಾಸ್ತ್ರದಲ್ಲಿ ವಿಚಾರ ಮಾಡಬೇಕೋ ಅಷ್ಟಕ್ಕೂ ಶ್ರವಣದಿಂದುಂಟಾದ ಜ್ಞಾನವು ಮೊದಲು ಬೇಕು. ಆ ಶ್ರವಣದಿಂದುಂಟಾದ ಜ್ಞಾನವು ಇದ್ದರೆ ಜನ್ಮಾಂತರದಲ್ಲಿ ಮಾಡಿದ ಸತ್ಕರ್ಮವುಳ್ಳ, ಸತ್ಕುಲದಲ್ಲಿ ಹುಟ್ಟಿದ ಸಾತ್ವಿಕ ಸ್ವಭಾವವುಳ್ಳ ಅಧಿಕಾರಿಗೆ ವೈರಾಗ್ಯಾದಿಗಳು ಅವಶ್ಯವಾಗಿ ಉಂಟಾಗುತ್ತವೆ. (2) ೧ ನಿತ್ಯಾನಿತ್ಯ ವಸ್ತುವಿವೇಕವು, ೨ ಶಮದಮಾದಿ ಸಾಧನಸಂಪತ್ತಿಯು, ೩ ಇಲ್ಲಿಯೂ ಪರಲೋಕದಲ್ಲಿಯೂ ಫಲಭೋಗದಲ್ಲಿ ವೈರಾಗ್ಯವು, ೪ ಮೋಕ್ಷವನ್ನು ಹೊಂದಲಿಕ್ಕೆ ಇಚ್ಛೆಯು, ಹೀಗೆ ಸಾಧನಗಳು ನಾಲ್ಕು ಇಲ್ಲಿಯೂ ಅಂತರ್ಭೂತವಾಗುತ್ತವೆ. ಆದುದರಿಂದ ವಿರೋಧವಿಲ್ಲ. (3) ಉತ್ತಮ (ಏಕಾಂತ) ಭಕ್ತರಿಗೆ ಮೋಕ್ಷೇಚ್ಛೆಯೇ ಇಲ್ಲ. ಆದಕಾರಣ ಆಚಾರ್ಯರು ಮುಮುಕ್ಷಾ ಎನ್ನುವ ಸಾಧನವನ್ನು ಕಂಠತಃ ಹೇಳಲಿಲ್ಲ. (4) ಸಾತ್ವಿಕ ಸ್ವಭಾವವುಳ್ಳವನಿಗೆ ಸಜ್ಜನರ ಸಹವಾಸವಶದಿಂದ ಸ್ವಲ್ಪ ವೈರಾಗ್ಯಾದಿಗಳನ್ನು ಹೊಂದಿದವನಿಗೆ ಶ್ರವಣದಿಂದ ವೈರಾಗ್ಯಾದಿಗಳಿಗೆ ಅಭಿವೃದ್ಧಿಯಾಗುತ್ತಿರಲು ಆ ಮೇಲೆ ಮಾಡಿದ ಮನನಾದಿಗಳಿಂದ ಮತ್ತು ವೈರಾಗ್ಯಾದಿಗಳಿಗೆ ಅಭಿವೃದ್ಧಿಯಾಗುತ್ತದೆ ॥ ೫ ॥ ೬ ॥ ೭ ॥

ಹೀಗೆ ಪ್ರಥಮ ಸೂತ್ರಾರ್ಥವನ್ನು ಹೇಳಿ ಅದರಿಂದ ಎರಡನೇ ಸೂತ್ರಕ್ಕೆ ಸಂಗತಿಯನ್ನು ಹೇಳುತ್ತಾರೆ—

ಮೂ ॥ **ಕರ್ತವ್ಯಾ ಬ್ರಹ್ಮಜಿಜ್ಞಾಸೇತ್ಯುಕ್ತೇ ಕಿಮಿತಿ ಸಂಶಯೇ ।**
**ಅತಃ ಇತ್ಯಾದಿತೇಽಸ್ಯಸ್ಯ ವಿಶೇಷಾನುಕ್ತಿತಃ ಪುನಃ ॥ ೮ ॥**
**ಸೃಷ್ಟಿಬಂಧನಮೋಕ್ಷಾದಿ ಕರ್ತೃತ್ವಸ್ಯ ಶ್ರುತತ್ವತಃ ।**
**ಯತೋ ಮೋಕ್ಷಾದಿದಾತಾಸಾವತೋ ಜಿಜ್ಞಾಸ್ಯ ಏವ ವಃ ॥**
**ಇತ್ಯಾಹ ತತ್ಪರಂ ಬ್ರಹ್ಮ ವ್ಯಾಸಾಖ್ಯಂ ಜ್ಞಾನರಶ್ಮಿಮತ್ ॥ ೯ ॥**

ಅ ॥ ಬ್ರಹ್ಮಜಿಜ್ಞಾಸಾ=ಬ್ರಹ್ಮನ ವಿಚಾರವು, ಕರ್ತವ್ಯಾ=ಮಾಡತಕ್ಕದ್ದು, ಇತ್ಯುಕ್ತೇ ಸತಿ=ಹೀಗೆಹೇಳುತ್ತಿರಲು, ಕಿಮಿತಿ=ಬ್ರಹ್ಮಜಿಜ್ಞಾಸೆಯು ಮಾಡತಕ್ಕದ್ದೇ ಪ್ರಯೋಜನವಿಲ್ಲದಿರುರಿಂದ ಮಾಡತಕ್ಕದ್ದಲ್ಲವೋ ಎಂದು, ಸಂಶಯೇ ಸತಿ=ಸಂಶಯವು ಹುಟ್ಟುತ್ತಿರಲು, ಅಥವಾ ಮಾಡಬೇಕೋ ಬೇಡವೋ ಎಂದು ಸಂಶಯವು ಹುಟ್ಟುತ್ತಿರಲು ಪ್ರಯೋಜನವಿಲ್ಲದಿರುವುದರಿಂದ ಮಾಡಬಾರದೆಂದು ಪೂರ್ವಪಕ್ಷವೂ ಬರುತ್ತಿರಲು (ಆ ಸಂಶಯವನ್ನೂ, ಪೂರ್ವಪಕ್ಷವನ್ನೂ, ಪರಿಹರಿಸುವುದಕ್ಕಾಗಿ 'ಜನ್ಮಾದ್ಯಸ್ಯಯತಃ' ಎಂದು ಹೇಳಿರುವರು.) (ಪ್ರಥಮ ಸೂತ್ರದಲ್ಲಿ 'ಅತಃ' ಶಬ್ದದಿಂದ ಜಿಜ್ಞಾಸೆಗೆ ಮೋಕ್ಷವು ಪ್ರಯೋಜನವೆಂದು ಹೇಳಿದುದರಿಂದ ಪುನಃ ಆಶಂಕೆಯು ಹೇಗೆಂದರೆ—)ಅತ ಇತ್ಯುದಿತೇಽಪಿ=ಅತಃಶಬ್ದದಿಂದ ಜಿಜ್ಞಾಸೆಗೆ ಮೋಕ್ಷವು ಪ್ರಯೋಜನವೆಂದು ಹೇಳಿದರೂ, ಅಸ್ಯ = ಜಿಜ್ಞಾಸೆಗೆ ಮೋಕ್ಷಸಾಧನತ್ವವನ್ನು, ವಿಶೇಷಾನುಕ್ತಿತಃ= ಪ್ರಮಾಣವಿಶೇಷದಿಂದ ಉಪಪಾದಿಸದೆ ಇದ್ದುದರಿಂದ, ಪುನಃ=ಮತ್ತೂ ಸಂಶಯವು ಹುಟ್ಟುತ್ತಿರಲು, ಸೃಷ್ಟಿಬಂಧನ ಮೋಕ್ಷಾದಿಕರ್ತೃತ್ವಸ್ಯ=ಸೃಷ್ಟಿಯು, ಬಂಧವು, ಮೋಕ್ಷವೊದಲಾದವುಗಳ ಕರ್ತೃತ್ವಕ್ಕೆ, ಶ್ರುತತ್ವತಃ=ಶ್ರುತಿಸಿದ್ಧತ್ವವಿದ್ದಪ್ರಯುಕ್ತ, ಯತಃ=ಯಾವ ಕಾರಣದೆಶೆಯಿಂದ, ಅಸೌ=ಶ್ರೀ ಹರಿಯು, ಮೋಕ್ಷಾದಿದಾತಾ=ಮುಕ್ತಿವೊದಲಾದವುಗಳನ್ನು ಕೊಡತಕ್ಕವನೋ, ಅತಃ=ಆದಕಾರಣ, ಅಸೌ=ಶ್ರೀ ಹರಿಯು, ವಃ=ನಿಮಗೆ, ಜಿಜ್ಞಾಸ್ಯ ಏವ= ವಿಚಾರಾರ್ಹನೇ ಆಗಿರುತ್ತಾನೆ. ಇತಿ=ಈ ಅರ್ಥವನ್ನು, ಜ್ಞಾನರಶ್ಮಿಮತ್=ಜ್ಞಾನಾಖ್ಯ ರಶ್ಮಿಗಳುಳ್ಳ, ವ್ಯಾಪ್ತವಾದ ಜ್ಞಾನವುಳ್ಳ, ವ್ಯಾಸಾಖ್ಯಂ=ವ್ಯಾಸನೆಂದು ಹೆಸರುಳ್ಳ, ತತ್ ಪರಂ ಬ್ರಹ್ಮ= ಆ ಪರಬ್ರಹ್ಮನು, ಆಹ=ಹೇಳಿರುತ್ತಾನೆ.

ತಾ ॥ (1) ಪರಮೇಶ್ವರನು ಮೋಕ್ಷವನ್ನು ಕೊಡುತ್ತಾನೆ ಎನ್ನುವ ವಿಷಯದಲ್ಲಿ ಶ್ರುತಿಯು ಪ್ರಮಾಣವು. (2) ಮತ್ತು ಇಲ್ಲಿ ಮೋಕ್ಷದಾತೃತ್ವವು ಪ್ರಧಾನವು. ಸೃಷ್ಟ್ಯಾದಿ ಕರ್ತೃತ್ವವು ಅಲ್ಲಿ ಹೇತುವಾಗಿ ಹೇಳಲ್ಪಟ್ಟಿದೆ. (3) ವ್ಯಾಸನು ಅಪಾಂತರತಮನೆನ್ನುವ ಒಬ್ಬಾನೊಬ್ಬ ಮುನಿಯು ಎಂದು ಪ್ರವಾದವು ತೋರುವುದರಿಂದ ಶಿಷ್ಯರಿಗೆ ಸೂತ್ರಕಾರರಲ್ಲಿ ಭಕ್ತಿಮಾಂದ್ಯವು ಆಗಬಾರದು ಅದಕಾರಣ, ಜ್ಞಾನರಶ್ಮಿಮತ್=ಪರಂ ಬ್ರಹ್ಮ ಎಂದು ವಿಶೇಷಣಗಳನ್ನು ಹೇಳಿದ್ದು. ॥ ೮ ॥ ೯ ॥

ಜಿಜ್ಞಾಸೆಗೆ ಮೋಕ್ಷಸಾಧನತ್ವವು ಪ್ರಮಾಣವಿಲ್ಲದಿರುವುದರಿಂದ ಕೂಡುವುದಿಲ್ಲವೆಂದು ಆಕ್ಷೇಪಬರುತ್ತಿರಲು ಅದನ್ನು ಪರಿಹರಿಸದೆ ಶ್ರೀ ಹರಿಗೆ ಮೋಕ್ಷಸಾಧನತ್ವವನ್ನು ಸಮರ್ಥಿಸಿದ್ದು ಅಸಂಗತವು ಎಂದರೆ—

**ಮೂ ॥ ಯೋಽನ್ನೈವ ಬಂಧಮೋಕ್ಷಃ ಸ್ಯಾತ್ಸ ಚ ಜಿಜ್ಞಾಸಯಾ ಗತಃ ॥ ೧೦ ॥**
**ಸುಪ್ರಸನ್ನೋ ಭವೇದೀಶೋ ಜಿಜ್ಞಾಸಾತೋಽಸ್ಯ ಮುಕ್ತಿದಾ ।**
**ಮೋಕ್ಷಾದಿದತ್ವವಿಶಾಸ್ಯ ಕಥಮೇವಾವಗಮ್ಯತೇ ॥**
**ಇತಿಚೇಚ್ಛಾಸ್ತ್ರಯೋನಿತ್ವಾಚ್ಛಾಸ್ತ್ರಗಮ್ಯೋ ಹಿ ಮೋಕ್ಷದಃ ॥ ೧೧ ॥**

ಅ ॥ ಯೋಽನ್ನೈವ = ಯಾವ ಪ್ರಸನ್ನನಾದ ಶ್ರೀ ಹರಿಯಿಂದಲೇ, ಬಂಧಮೋಕ್ಷಃ= ಸಂಸಾರಬಂಧದಿಂದ ಬಿಡುಗಡೆಯು, ಸ್ಯಾತ್=ಆಗುವುದೋ, ಚ=ಯಾವ ಕಾರಣದಿಂದ, ಸಃ ಈಶಃ=ಆ ಶ್ರೀ ಹರಿಯು, ಜಿಜ್ಞಾಸಯಾ = ವಿಚಾರದಿಂದ, ಗತಃ = ತಿಳಿಯಲ್ಪಟ್ಟವನಾಗಿ, ಸುಪ್ರಸನ್ನಃ=ಅತಿ ಸಂತುಷ್ಟನಾದವನು, ಭವೇತ್ = ಆಗುವನೋ, ಅಸ್ಯ=ಈ ಶ್ರೀ ಹರಿಯು,

ಜಿಜ್ಞಾಸಾ=ವಿಚಾರವು, ಅಸ್ಯ=ಈ ಜೀವನಿಗೆ, ಮುಕ್ತಿದಾ = ಮೋಕ್ಷವನ್ನು ಕೊಡತಕ್ಕದು. (ಮೂರನೇ ಸೂತ್ರದಿಂದ ನಿವರ್ತ್ಯವಾದ ಆಶಂಕೆಯನ್ನು ಹೇಳಿ ಅದಕ್ಕೆ ಪರಿಹಾರಕವಾಗಿ ಮೂರನೇ ಸೂತ್ರಾರ್ಥವನ್ನು ಹೇಳುತ್ತಾರೆ.) ಮೋಕ್ಷಾದಿದತ್ವಂ=ಮೋಕ್ಷಾದಿಗಳನ್ನು ಕೊಡುವಿಕೆಯು, ಅಂದರೆ ಪ್ರಧಾನವಾಗಿ ಮೋಕ್ಷವನ್ನು ಕೊಡುವಿಕೆಯು, ಮೋಕ್ಷಸಾಧನವಾದ ಸೃಷ್ಟ್ಯಾದಿಕರ್ತೃತ್ವವೂ ಕೂಡ, ಈಶಸ್ಯೈವ=ಶ್ರೀ ಹರಿಗೇನೇ ಎಂದು, ಕಥಂ=ಹೇಗೆ, ಅವಗಮ್ಯತೇ=ತಿಳಿಯಲ್ಪಡುತ್ತದೆ? (ಯಾವ ರೀತಿಯಿಂದಲೂ ತಿಳಿಯಲ್ಪಡುವುದಿಲ್ಲ. ಅನುಮಾನಗಳಿಂದಲೂ ಪಾಶುಪತಾದ್ಯಾಗಮಗಳಿಂದಲೂ ಶ್ರೀ ಹರಿಯಿಂದ ಇತರರಾದ ರುದ್ರಾದಿಗಳಿಗೇನೇ ಮೋಕ್ಷಸಾಧನತ್ವವು ಅವಗತವಾಗುತ್ತದೆ.) ಇತಿ ಚೇತ್=ಹೀಗೆ ಹೇಳಿದರೆ (ಆ ವಿಷಯದಲ್ಲಿ) ಶಾಸ್ತ್ರಯೋನಿತ್ವಾತ್ = ಶಾಸ್ತ್ರೈಕಸಮಧಿಗಮ್ಯನಾದಪ್ರಯುಕ್ತ, (ಎಂದು ಸಮಾಧಾನವಾದ ಸೂತ್ರವು ಹೇಳಲ್ಪಟ್ಟದೆ.) (ಈ ಸೂತ್ರವು ಹೇಗೆ ಈ ಆಶಂಕೆಯನ್ನು ಹೋಗಲಾಡಿಸುತ್ತದೆ ಎಂದರೆ—) ಮೋಕ್ಷದಃ=ಮುಕ್ತಿಯನ್ನು ಕೊಡತಕ್ಕವನು, ಶಾಸ್ತ್ರಗಮ್ಯಃ=ಶಾಸ್ತ್ರೈಕಸಮಧಿಗಮ್ಯನು. (ಅಂದರೆ ಯಾವ ಕಾರಣದೆಶೆಯಿಂದ ಮೋಕ್ಷಾದಿಗಳನ್ನು ಕೊಡತಕ್ಕ ಪುರುಷನು ಶಾಸ್ತ್ರಮಾತ್ರಕ್ಕೆ ವಿಷಯನೋ,ಆದಕಾರಣ ವೇದಮೊದಲಾದುದು ಯಾರನ್ನು ಮೋಕ್ಷಾದಿಗಳನ್ನು ಕೊಡತಕ್ಕವನನ್ನಾಗಿ ಪ್ರತಿಪಾದಿಸುತ್ತದೋ, ಆತನೇ ಮೋಕ್ಷಾದಿಗಳನ್ನು ಕೊಡತಕ್ಕವನೆಂದು ತಿಳಿಯಲರ್ಹನು. ಅನುಮಾನಾದಿಗಳಿಂದ ಯಾರೋ ಒಬ್ಬನು ಮೋಕ್ಷಾದಿಗಳನ್ನು ಕೊಡತಕ್ಕವನೆಂದು ಕಲ್ಪಿಸತಕ್ಕದಲ್ಲ.)

**ತಾ** ॥ (1) ಜಿಜ್ಞಾಸಾ ಎನ್ನುವುದು ಸಾಕ್ಷಾತ್ತಾಗಿ ಮೋಕ್ಷಸಾಧನವೆಂದು ನಮಗೆ ಅಭಿಮತವಲ್ಲ. ಅತಿಪ್ರಸನ್ನನಾದ ಶ್ರೀ ಹರಿಯೇ ಮೋಕ್ಷಸಾಧನನು. ಆ ಶ್ರೀ ಹರಿಯು ಸರ್ವೋತ್ಕೃಷ್ಟನೆಂದು ತಿಳಿಯಲ್ಪಟ್ಟವನಾಗಿ ಸುಪ್ರಸನ್ನನಾಗುತ್ತಾನೆ. ಉತ್ಕರ್ಷಜ್ಞಾನವು ಜಿಜ್ಞಾಸಾದಿಂದುಂಟಾಗುತ್ತದೆ, ಹೀಗೆ ಪರಂಪರೆಯಿಂದ ಆಗುತ್ತದೆ. ಅದರಲ್ಲಿ ಶ್ರೀ ಹರಿಯು ಮೋಕ್ಷವನ್ನು ಕೊಡತಕ್ಕವನೆಂದು ಪ್ರಮಾಣಗಳಿಂದ ಸಮರ್ಥಿಸಿರುವರು. (೧) ಪ್ರಸನ್ನನಾಗಿಯೇ ಕೊಡುತ್ತಾನೆ ಎನ್ನುವುದೂ, (೨) ಉತ್ಕರ್ಷಜ್ಞಾನದಿಂದ ಸಂತುಷ್ಟನಾಗುತ್ತಾನೆ ಎನ್ನುವುದೂ (೩) ವಿಚಾರದಿಂದ ಸರ್ವೋತ್ಕೃಷ್ಟನೆಂದೂ ತಿಳಿಯಲ್ಪಡುತ್ತಾನೆ ಎನ್ನುವುದೂ ಲೋಕನ್ಯಾಯದಿಂದಲೇ ಸಿದ್ಧವಾಗುತ್ತದೆ. ಆ ವಿಷಯದಲ್ಲಿ ಪ್ರಮಾಣಗಳ ಉಪನ್ಯಾಸವು ಬೇಕಾಗಿಲ್ಲ. ಆದುದರಿಂದ ಭಗವಂತನ ಜಿಜ್ಞಾಸಾಕ್ಕೆ ಮೋಕ್ಷಹೇತುತ್ವವು ಪ್ರಮಿತವಾಗಿದೆ ಎಂದು ಸೂತ್ರಕಾರರು ತಿಳಿಯುತ್ತಾರೆ— ॥ ೧೦ ॥ ೧೧ ॥

**ಸ. ರ. ವಿ—** ಮೋಕ್ಷವನ್ನು ಕೊಡತಕ್ಕವನು ವಿಷ್ಣುವೇ ಎಂದು ಶಾಸ್ತ್ರದಿಂದ ಸಿದ್ಧಿಸುವುದಿಲ್ಲ. ಪ್ರತ್ಯಕ್ಷಾದಿಗಳಿಂದ ವೇದ್ಯನಾದವನೂ ಮೋಕ್ಷವನ್ನು ಕೊಡುತ್ತಾನೆ ಎನ್ನುವುದು ಕೂಡಬಹುದು, ಎಂದಾಶಂಕಿಸಿದರೆ—

**ನ್ಯಾಯಸುಧಾ—** ಮೋಕ್ಷಾದಿಗಳನ್ನು ಕೊಡತಕ್ಕವನು ಪರಿಶೇಷಪ್ರಮಾಣದಿಂದ ಶಾಸ್ತ್ರೈಕಸಮಧಿಗಮ್ಯನು ಎಂದು ಸಿದ್ಧಿಸುತ್ತಾನೆ ಎನ್ನುವ ಅಭಿಪ್ರಾಯದಿಂದಮೋಕ್ಷಾದಿಗಳನ್ನು ಕೊಡತಕ್ಕವನಿಗೆ ಪ್ರತ್ಯಕ್ಷಗಮ್ಯತ್ವವನ್ನು ದೂಷಿಸುತ್ತಾರೆ—

**ಮೂ ॥ ಪ್ರತ್ಯಕ್ಷಾವಸಿತೇಭ್ಯಃ ಸ್ಯಾದ್ಯದಿ ಮೋಕ್ಷಃ ಕಥಂಚನ ॥ ೧೨ ॥**
**ಕಿಮಿತ್ಯನಾದಿಸಂಸಾರಮಗ್ನಾಃ ಸರ್ವಾಃ ಇಮಾಃ ಪ್ರಜಾಃ ।**
**ಯಸ್ಮಾನ್ನಿಯಮತೋ ದುಃಖಹಾನಿಃ ಪ್ರತ್ಯಕ್ಷತೋ ಭವೇತ್ ।**
**ಧಾವಂತೇವ ತಮುದ್ದಿಶ್ಯ ರಾಜಾದ್ಯಮಖಿಲಾಃ ಪ್ರಜಾಃ ॥ ೧೩ ॥**

ಅ ॥ ಪ್ರತ್ಯಕ್ಷಾವಸಿತೇಭ್ಯಃ = ಪ್ರತ್ಯಕ್ಷವಿಷಯೀಭೂತವಾದವರಿಂದ, ಕಥಂಚನ = ಅವರಸೇವಾದಿಗಳಿಂದ, ಮೋಕ್ಷಃ = ಮೋಕ್ಷವು, ಸ್ಯಾತ್ ಯದಿ=ಆಗುವುದಾದರೆ, ಅನಾದಿ ಸಂಸಾರಮಗ್ನಾಃ = ಅನಾದಿಯಾದ ಸಂಸಾರದಲ್ಲಿ ಮುಳುಗಿರುವ, ಇಮಾಃಸರ್ವಾಃಪ್ರಜಾಃ= ಈ ಎಲ್ಲಾ ಪ್ರಜೆಗಳು, ಕಿಮಿತಿ=ಏತಕ್ಕೆ ಮುಕ್ತರಾಗಲಿಲ್ಲ? (ಅಂದರೆ ಮೋಕ್ಷಾದಿಗಳನ್ನು ಕೊಡ ತಕ್ಕವನು ನಮ್ಮಂತೆಯೇ ಶಾಸ್ತ್ರವಿಚಾರಗಳು ಇಲ್ಲದೆ ಸಾಧಾರಣವಾಗಿ ಪ್ರತ್ಯಕ್ಷದಿಂದಲೇ ತಿಳಿಯ ಲಿಕ್ಕೆ ಸಿಗುವ ಸಾಧಾರಣ ಪುರುಷನಾಗಿದ್ದರೆ ಅವನ ಸೇವಾದಿಗಳಿಂದ ಎಲ್ಲರೂ ಮುಕ್ತರಾಗ ಬೇಕಾಗುವರು.) (ಮೋಕ್ಷವನ್ನು ಕೊಡತಕ್ಕವನು ಸಾಧಾರಣವಾಗಿ ಪ್ರತ್ಯಕ್ಷದಿಂದಲೇ ತಿಳಿಯ ಲರ್ಹನಾಗುವುದಾದರೆ ಏಕೆ ಸರ್ವರೂ ಮುಕ್ತರಾಗಬೇಕು ಎಂದರೆ—) ಪತ್ಯಕ್ಷತಃ=ಪ್ರತ್ಯಕ್ಷಗಮ್ಯ ನಾದ, ಯಸ್ಮಾತ್=ಯಾವಪುರುಷನದೆಶೆಯಿಂದ, ನಿಯಮತಃ=ನಿಯಮದಿಂದ, ದುಃಖಹಾನಿಃ= ಆತ್ಯಂತಿಕ ದುಃಖನಿವೃತ್ತಿಯು, ಭವೇತ್=ಆಗುವುದೋ, ತಂ=ಆತನನ್ನು, ಉದ್ದಿಶ್ಯ=ಉದ್ದೇಶ ಪಟ್ಟದ್ದು, ಅಖಿಲಾಃ ಪ್ರಜಾಃ=ಎಲ್ಲಾ ಪ್ರಜೆಗಳು, ರಾಜಾದ್ಯಂ=(ದಾರಿದ್ರ್ಯದುಃಖವನ್ನು ಹೋಗ ಲಾಡಿಸಲಿಚ್ಛಿಸುವ ಜನರು ದಾನಶೂರರಾದ) ರಾಜಾದಿಗಳನ್ನೆಂಬಂತೆ, ಧಾವಂತ್ಯೇವ=ಓಡಿಯೇ ಹೋಗುತ್ತಾರೆ.

ತಾ ॥ ಸ. ರ. ವಿ. (1) ಮೋಕ್ಷದಾಯಕನು ಪ್ರತ್ಯಕ್ಷ ಗಮ್ಯನೆಂದಾದರೆ ಸುಖದಿಂದ ಹೊಂದಲು ಶಕ್ಯನಾದ ಪ್ರಯುಕ್ತ ಪ್ರಜೆಗಳಿಗೆ ಅನಾದಿ ಲಾಗ್ಯಾತು ಸಂಸಾರಾನುವೃತ್ತಿಯೇ ಬಾರದೆ ಹೋಗಬೇಕಾಗುವುದು. ಆತನು ವೇದಗಳೂ ಉಪನಿಷತ್ತುಗಳೂ ಮೊದಲಾದ ಶಾಸ್ತ್ರಾದಿಗಳಿಂದಲೇ ತಿಳಿಯಲರ್ಹನಾದರೆ ಸುಖದಿಂದ ಹೊಂದಲು ಶಕ್ಯನಾಗದೆ ಇದ್ದುದರಿಂದ ಸಂಸಾರಾನುವೃತ್ತಿಯೂ ಕೂಡುತ್ತದೆ ॥ ೧೨ ॥ ೧೩ ॥

ಮೋಕ್ಷವನ್ನು ಕೊಡತಕ್ಕವನಿಗೆ ಅನುಮಾನಗಮ್ಯತ್ವವನ್ನು ದೂಷಿಸುತ್ತಾರೆ.—

**ಮೂ ॥ ಅನುಮಾ (ನ) ಗಮ್ಯತೋ ಮೋಕ್ಷೋ ಯದಿ ಸ್ಯಾದ (ತಸ್ಯಾ)ನು- ಮೈವ ಹಿ ॥ ೧೪ ॥**

**ದೃಷ್ಟಪೂರುಷವನ್ಮೋಕ್ಷದಾತೃತಾಂ ವಿನಿವಾರಯೇತ್ ।**
**ತಚ್ಛಾಸ್ತ್ರಗಮ್ಯ ಏವೈಕೋ ಮೋಕ್ಷದೋ ಭವತಿ ಧ್ರುವಂ ॥ ೧೫ ॥**

ಅ ॥ ಯದಿ=ಯಾವ ಪಕ್ಷದಲ್ಲಿ, ಅನುಮಾಗಮ್ಯತಃ=ಅನುಮಾನದಿಂದ ತಿಳಿಯಲ್ಪಡ ತಕ್ಕ ಪುರುಷನಿಂದ, ಮೋಕ್ಷಃ=ಮೋಕ್ಷವು, ಸ್ಯಾತ್=ಆಗುವುದೋ, (ಅಂದರೆ ಯಾವನಾದ ರೊಬ್ಬನು ಮೋಕ್ಷವನ್ನು ಕೊಡತಕ್ಕವನೆಂದು ಅನುಮೇಯಿಸಿದರೆ) 'ಶಿವಃ ಮೋಕ್ಷದಃ ಈಶ ತ್ವಾತ್'' ಇತ್ಯಾದಿ ರೀತಿಯಿಂದ ಅನುಮೇಯಿಸಲ್ಪಡುವುದಾದರೆ ಅನುಮೈವ=ಪುರುಷತ್ವಾದ್ಯನು ಮಾನವೇ, ದೃಷ್ಟಪೂರುಷವತ್=ಪ್ರತ್ಯಕ್ಷಸಿದ್ಧನಾದ ಸಾಧಾರಣ ಪುರುಷನಂತೆಯೇ, ಮೋಕ್ಷ ದಾತೃತಾಂ = ಮೋಕ್ಷಕ್ಕೆ ಕೊಡುಪಿಕೆಯನ್ನು, ವಿನಿವಾರಯೇತ್ = ತಡೆಯುವುದು. (ಶೈವಾ ದ್ಯಾಗಮಗಳಾದರೂ ಶಿಲಾದಿಗಳಲ್ಲಿ ಆಪ್ತಿ ನಿಶ್ಚಯವಿಲ್ಲದಿರುವುದರಿಂದ ಶಿವಾದಿಗಳಿಗೆ ಮೋಕ್ಷಸಾ ಧನತ್ವವನ್ನು ಸಾಧಿಸಿಕೊಡಲಾರವು. ಎನ್ನುವ ಅಭಿಪ್ರಾಯದಿಂದ ಪರಿಶೇಷಾನುಮಾನವನ್ನುಪ ಸಂಹಾರಮಾಡುತ್ತಾರೆ). ತತ್ = ಆದ ಕಾರಣದಿಂದ, ಮೋಕ್ಷದಃ = ಮುಕ್ತಿಯನ್ನು ಕೊಡ ತಕ್ಕ, ಏಕಃ=ಒಬ್ಬನು, ಧ್ರುವಂ = ನಿಶ್ಚಯವಾಗಿ, ಶಾಸ್ತ್ರಗಮ್ಯ ಏವ = ಶಾಸ್ತ್ರೈಕಸಮಧಿ ಗಮ್ಯನು, ಭವತಿ=ಆಗುತ್ತಾನೆ.

ತಾ || ಸ. ರ. ವಿ.— 'ವಿಮತಃ ಮೋಕ್ಷದೋ ನ ಪುರುಷತ್ವಾತ್ ಸಮ್ಮತವತ್' ವಿವಾದ ವಿಷಯೀಭೂತನಾದವನು ಮೋಕ್ಷದಾಯಕನಲ್ಲ. ಪುರುಷನಾದುದರಿಂದ ಸಮ್ಮತನಾದ ಪುರುಷನಂತೆ ಎನ್ನುವ ಪ್ರತ್ಯನುಮಾನದಿಂದ ಪರಾಹತವಾದ ಪ್ರಯುಕ್ತ ಮೋಕ್ಷದಾಯಕನನ್ನು ಅನುಮಾನದಿಂದಲೂ ಅನುಮೇಯಿಸಲಿಕ್ಕೆ ಶಕ್ಯವಾಗುವುದಿಲ್ಲ. ಆದುದರಿಂದ ಮೋಕ್ಷವನ್ನು ಕೊಡತಕ್ಕವನು ಶಾಸ್ತ್ರೈಕಸಮಧಿಗಮ್ಯನು ಎಂದುಪಸಂಹಾರ ಮಾಡಿರುತ್ತಾರೆ.

ನ. ಚ. ವಿ.— (1) 'ವಿಮತಂ ಸಕರ್ತೃಕಂ ಕಾರ್ಯತ್ವಾತ್ ಘಟವತ್' ಎಂದು ಕೇವಲಾನುಮಾನಗಮ್ಯನಾದ ಈಶ್ವರನ ದೆಶೆಯಿಂದ ಮೋಕ್ಷವು ಆಗುತ್ತದೆಂದು ಹೇಳುವುದಾದರೆ 'ವಿಮತೋ ಮೋಕ್ಷದೋ ನ ಭವತಿ ಪುರುಷತ್ವಾತ್ ದೃಷ್ಟಪುರುಷವತ್' ಎನ್ನುವ ಅನುಮಾನವೇ ಆತನಿಗೆ ಮೋಕ್ಷದಾತೃತ್ವವನ್ನು ತಡೆಯುವುದು. (2) 'ಪತಿಂ ವಿಶ್ವಸ್ಯಾತ್ಮೇಶ್ವರಂ' ಇತ್ಯಾದಿ ಶ್ರುತಿಗಳಿಂದ ಶ್ರೀ ಹರಿಗೇನೇ ಸ್ವಾತಂತ್ರ್ಯವು ಇರುವುದು ॥ ೧೪ ॥ ೧೫ ॥

ಸ. ರ. ವಿ.— ಶಾಸ್ತ್ರಗಮ್ಯರೂ ಬಹುಮಂದಿ ಇರುತ್ತಾರೆ. ಹೀಗೆ ಇರಲು ವಿಷ್ಣುವೇ ಮೋಕ್ಷವನ್ನು ಕೊಡತಕ್ಕವನೆಂದು ಹೇಗೆ ನಿಶ್ಚಯವಾಗುತ್ತದೆ ಎಂದರೆ—

ನ್ಯಾಯಸುಧಾ— ಹೀಗೇ ಆಗಲಿ, ಆದಾಗ್ಯೂ ಮೋಕ್ಷವನ್ನು ಕೊಡುತ್ತಾನೆ ಎಂಬುವುದಾಗಿ ಶಾಸ್ತ್ರಗಮ್ಯತ್ವವು ಇತರರಿಗೂ ಬರುವುದು. 'ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ' ಇತ್ಯಾದಿ ಶಾಸ್ತ್ರಗಳಲ್ಲಿ ರುದ್ರಾದಿಗಳಿಗೂ ಮೋಕ್ಷತ್ವವು ತೋರುತ್ತದೆ. ಹೀಗೆ ನಾಲ್ಕನೇ ಸೂತ್ರಕ್ಕೆ ಸಂಗತಿಯನ್ನು ಸೂಚಿಸುತ್ತಾ ತತ್ತು ಎನ್ನುವ ಎರಡು ಪದಗಳನ್ನು ವ್ಯಾಖ್ಯಾನ ಮಾಡುತ್ತಾರೆ—

ಮೂ || ಶಾಸ್ತ್ರಗಮ್ಯಶ್ಚ ನಾನ್ಯೋಽಸ್ತಿ ಮೋಕ್ಷದತ್ವೇನ ಕೇಶವಾತ್ ।
ಮೋಕ್ಷದೋ ಹಿ ಸ್ವತಂತ್ರಃ ಸ್ಯಾತ್ಪರತಂತ್ರಃ ಸ್ವಯಂ ಸ್ಮೃತೌ ॥ ೧೬ ॥
ವರ್ತಮಾನಃ ಕಥಂ ಶಕ್ತಃ ಪರಮೋಕ್ಷಾಯ ಕೇವಲಂ ।
ಅನ್ಯಾಶ್ರಯೇಣ ಯದ್ಯೇಷಃ ದದ್ಯಾನ್ಮೋಕ್ಷಂ ಸ ಏವ ಹಿ ॥ ೧೭ ॥
ತೇನಾನನುಸ್ಮೃತೋ ಮೋಕ್ಷಂ ನ ದದ್ಯಾದನ್ಯವಾಕ್ಯತಃ ।
ಅತಃಸ್ತದರ್ಥಮಪಿ ಸ ಜ್ಞೇಯೋ ವಿಷ್ಣುರ್ಮುಮುಕ್ಷುಭಿಃ ॥ ೧೮ ॥

ಅ || ಮೋಕ್ಷದತ್ವೇನ = ಮೋಕ್ಷದಾತೃತ್ವದಿಂದ, ಶಾಸ್ತ್ರಗಮ್ಯಶ್ಚ = ಶಾಸ್ತ್ರಸಮಧಿಗಮ್ಯನು, ಕೇಶವಾತ್=ಶ್ರೀಹರಿಯಿಂದ, ಅನ್ಯಃ=ಮತ್ತೊಬ್ಬನು, ನಾಸ್ತಿ=ಇಲ್ಲ. (ಆದರೆ ಕೇಶವನೇ ಏಕೆ ಆಗಬೇಕೆಂದರೆ ಸೂತ್ರದಲ್ಲಿದ್ದ ಹೇತುವನ್ನು ವ್ಯಾಖ್ಯಾನ ಮಾಡುತ್ತಾರೆ.) ಸ್ವತಂತ್ರಃ ಹಿ=ಸ್ವತಂತ್ರನಾದವನೇ, ಮೋಕ್ಷದಃ=ಮುಕ್ತಿಯನ್ನು ಕೊಡತಕ್ಕವನು, ಸ್ಯಾತ್= ಆಗುವನು. (ಸ್ವಾತಂತ್ರ್ಯವಾದರೂ ಶ್ರೀಹರಿಗೇನೇ; ಇತರರಿಗೆ ಇಲ್ಲ. ಯಾರಿಗೆ ಮೋಕ್ಷದಾತೃತ್ವವು ಶ್ರುತ್ಯಾದಿಗಳಲ್ಲಿ ಪ್ರತೀತವಾಗುತ್ತದೋ, ಆತನೇ ಪೂಜ್ಯನಾದ ವಿಷ್ಣುವು. ಅಂದರೆ ಆ ಶಬ್ದಗಳೂ ಶ್ರೀಹರಿಯಲ್ಲಿಯೇ ಪರಮ ಮುಖ್ಯವಾದವುಗಳು.) (ಪರತಂತ್ರನೇ ಮೋಕ್ಷವನ್ನು ಕೊಡುತ್ತಾನೆಂದು ಏಕೆ ಆಗಲಾರದು? ಎಂದರೆ ಆ ಪರತಂತ್ರನು ೧ ಸ್ವತಂತ್ರ ಪುರುಷನನ್ನು ಆಶ್ರಯಿಸದೆ ತಾನೇ ಮೋಕ್ಷವನ್ನು ಕೊಡುವನೋ, ೨ ಅಥವಾ ಸ್ವತಂತ್ರನಾದ ಮತ್ತೊಬ್ಬನನ್ನು ಆಶ್ರಯಿಸಿ ಮುಕ್ತಿಯನ್ನು ಕೊಡುವನೋ?, ೧ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ.)

ಪರತಂತ್ರಃ=ಪರತಂತ್ರನಾದವನೇ, ಸ್ವಯಂ=ತಾನು, ಸೃತೌ=ಸಂಸಾರದಲ್ಲಿ, ವರ್ತಮಾನಃ=ಇರತಕ್ಕವನಾಗಿ, ಕೇವಲಂ=ಪರರ ಅನಪೇಕ್ಷೆಯಿಂದ, ಪರಮೋಕ್ಷಾಯ=ಇತರರ ಮೋಕ್ಷಕ್ಕಾಗಿ, ಕಥಂ=ಹೇಗೆ, ಶಕ್ತಃ=ಸಮರ್ಥನಾಗುವನು. (ಅಂದರೆ ಈ ಪರತಂತ್ರನು ಸ್ವತಂತ್ರನನ್ನು ಅಪೇಕ್ಷಿಸದೇನೇ ತನ್ನ ಭಕ್ತನಿಗೆ ಮೋಕ್ಷ ಕೊಡುವುದಕ್ಕಾಗಿ ಶಕ್ತನಾಗಿದ್ದರೆ ತನ್ನನ್ನು ಸಂಸಾರದಿಂದ ಬಿಡಿಸಿಕೊಂಡಾನು. ಸಂಸಾರಿಯು ಆಗದೆ ಹೋದಾನು. **ಸ್ವಯಮುನವತೀರ್ಣಃ ಕಃ ಪರಾಂಸ್ತಾರಯೇತ್** ಎನ್ನುವ ನ್ಯಾಯದಿಂದ ತನ್ನ ಸಂಸಾರದುಃಖವನ್ನೇ ಪರಿಹರಿಸಿಕೊಳ್ಳಲಿಕ್ಕೆ ಅಶಕ್ಯನಾದವನು ಮತ್ತೊಬ್ಬರ ಸಂಸಾರದುಃಖವನ್ನೇ ಪರಿಹರಿಸಿ ಹೇಗೆ ಮೋಕ್ಷವನ್ನು ಕೊಟ್ಟಾನು) (ಇನ್ನೊಂದನ್ನು ದೂಷಿಸುತ್ತಾರೆ.) ಏಷಃ=ಈ ಅವಾಂತರೇಶ್ವರನು, ಅನ್ಯಾಶ್ರಯೇಣ=ಸ್ವತಂತ್ರನಾದ ವಿಷ್ಣುವಿನ ಆಶ್ರಯದಿಂದ, (ತನ್ನ ಭಕ್ತನಿಗೋಸ್ಕರ) ಮೋಕ್ಷಂ=ಮುಕ್ತಿಯನ್ನು, ದದ್ಯಾತ್=ಕೊಡುವನು. ಯದಿ (ಉಚ್ಯತೇ)=ಹೀಗೆ ಹೇಳಲ್ಪಡುವುದಾದರೆ ಆಗ, ಸಃ=ಆ ಸ್ವತಂತ್ರನು, ತೇನ=ಮೋಕ್ಷವನ್ನು ಇಚ್ಛಿಸತಕ್ಕವನಿಂದ, ಅನನುಸೃತಃ=ಸೇವಿಸಿಕೊಳ್ಳಲ್ಪಡದೆ ಇದ್ದವನಾಗಿ, ಅನ್ಯವಾಕ್ಯತಃ=ನನ್ನ ಭಕ್ತನಿಗೋಸ್ಕರ ಮುಕ್ತಿಯನ್ನು ಕೊಡು ಎನ್ನುವ ಅವಾಂತರೇಶ್ವರನ ಪ್ರಾರ್ಥನಾವಾಕ್ಯಮಾತ್ರದಿಂದ, ಮೋಕ್ಷಂ=ಮುಕ್ತಿಯನ್ನು, ನೈವ ದದ್ಯಾತ್=ಕೊಡಲಾರನು, ಎನ್ನುವುದೂ ಸಂಭಾವಿತವೇ ಆಗಿದೆ. ಹಿ = ಹಾಗೆ ಲೋಕದಲ್ಲಿ ದೃಷ್ಟಾಂತವಾಗಿದೆ. (ಅದರಿಂದ ಪ್ರಕೃತವೇನಾಯಿತೆಂದರೆ) ಅತಃ=ಆದುದರಿಂದ, ತದರ್ಥಮಪಿ=ಅವಾಂತರೇಶ್ವರನಿಂದ ಮೋಕ್ಷವನ್ನು ಹೊಂದುವುದಕ್ಕಾಗಿಯೂ ಕೂಡ, ಸಃ=ಸ್ವತಂತ್ರನಾದ, ವಿಷ್ಣುಃ=ಶ್ರೀಹರಿಯು, ಮುಮುಕ್ಷುಭಿಃ=ಮುಕ್ತಿಯನ್ನು ಇಚ್ಛಿಸುವವರಿಂದ, ಜ್ಞೇಯಃ=ತಿಳಿಯಲರ್ಹನು (ತಥಾ ಚ ಭಗವಂತನ ಜಿಜ್ಞಾಸೆಯನ್ನು ಬಿಡಲು ಸಾಧ್ಯವಿಲ್ಲದಿರುವುದರಿಂದ ಅವಾಂತರೇಶ್ವರನಿಗೆ ಮೋಕ್ಷದಾತೃತ್ವ ಕಲ್ಪನೆಯು ವ್ಯರ್ಥವೇ).

**ತಾ ॥ ಸ. ರ. ವಿ.—** (1) ಸ್ವತಂತ್ರನಾದುದರಿಂದ ವಿಷ್ಣುವೇ ಮೋಕ್ಷವನ್ನು ಕೊಡತಕ್ಕವನಾಗಿ ಶಾಸ್ತ್ರವೇದ್ಯನು. ಪರತಂತ್ರರಾದುದರಿಂದ ಬ್ರಹ್ಮಾದಿಗಳು ಶಾಸ್ತ್ರವೇದ್ಯರಲ್ಲ. ಪರತಂತ್ರರಾದವರು ತಾವೇ ಸಂಸಾರವನ್ನು ದಾಟದೆ ಇದ್ದವರು ಮತ್ತೊಬ್ಬರನ್ನು ಹೇಗೆ ಉದ್ಧರಿಸಲು ಶಕ್ತರಾದರು? (2) ಹಾಗಾದರೆ ಮೆಜಿಸ್ಟ್ರೇಟ ಮೊದಲಾದವರು ರಾಜನ ಅನುಜ್ಞೆಯಿಂದ ತನ್ನ ಸೇವಕರಿಗೆ ಜೈಲಿನಿಂದ ಹೇಗೆ ಬಿಡುಗಡೆಯನ್ನು ಮಾಡುತ್ತಾರೋ, ಹಾಗೆಯೇ ವಿಷ್ಣುವಿಗೆ ಅಂತರಂಗಭೂತನಾದವನು ಪರತಂತ್ರನಾದಾಗ್ಯೂ ಕೂಡ ಶ್ರೀವಿಷ್ಣುವಿನ ಅನುಜ್ಞೆಯಿಂದ ತನ್ನನ್ನು ಉಪಾಸನಾಮಾಡುವವರಿಗೆ ಮೋಕ್ಷವನ್ನು ಕೊಡುವನು ಆದುದರಿಂದ ವಿಷ್ಣುವಿನ ಜಿಜ್ಞಾಸೆಯೂ ವ್ಯರ್ಥವು ಎಂದರೆ— ಸರ್ವಜ್ಞನಾದ ಶ್ರೀ ಹರಿಯು ತನ್ನನ್ನು ಉಪಾಸನಾಮಾಡದಿದ್ದವರಿಗೂ, ಮತ್ತೊಬ್ಬರ ಪ್ರಾರ್ಥನೆಯನ್ನನುಸರಿಸಿ ಮುಕ್ತಿಯನ್ನು ಕೊಡುತ್ತಾನೆನ್ನುವುದು ಕೂಡಲಾರದು. ಶ್ರೀ ಹರಿಯು ಅಸ್ವತಂತ್ರನಲ್ಲ. ಆದಕಾರಣ ಅನ್ಯದ್ವಾರದಿಂದ ಮುಕ್ತಿಯನ್ನು ಹೊಂದುವುದಕ್ಕಾಗಿಯೂ, ಮುಕ್ತಿಯನ್ನು ಹೊಂದಲಿಚ್ಛಿಸುವವನು ವಿಷ್ಣುಜಿಜ್ಞಾಸೆಯನ್ನು ಮಾಡಲೇಬೇಕು.

**ನ. ಚ. ವಿ.—** (1) ಬ್ರಹ್ಮ ಮೊದಲಾದವರೂ ಕೂಡ ವಿಷ್ಣುವಿನ ಆಶ್ರಯದಿಂದ ತನ್ನ ಭಕ್ತರಿಗೆ ಮೋಕ್ಷವನ್ನು ಕೊಡುತ್ತಾರೆ, ಎಂದು ಹೇಳಿದರೆ ಆ ವಿಷಯದಲ್ಲಿ ಹೀಗೆ ಹೇಳುತ್ತೇವೆ. ಆ ವಿಷ್ಣುವು ಆ ಮುಮುಕ್ಷುವಿನಿಂದ ತಾನು ಸೇವಿಸಿಕೊಳ್ಳಲ್ಪಡದೆ ಇದ್ದವನಾಗಿ ಮೋಕ್ಷವನ್ನು ಸರ್ವಥಾ ಕೊಡಲಾರನು. ಏಕೆಂದರೆ— ೧ '**ಯಮೇವೈಷ ವೃಣುತೇ ತೇನ ಲಭ್ಯಃ**'

೨ 'ತಮೇವಂ ವಿದಿತ್ವಾಽತಿಮೃತ್ಯುಮೇತಿ' ೩ 'ನಾನ್ಯಃ ಪಂಥಾ ವಿದ್ಯತೇ ಅಯನಾಯ' ೪ 'ತಂ ವಿದಿತ್ವೈವ ಮೃತ್ಯುಮತ್ಯೇತಿ' ಇತ್ಯಾದಿ ಶ್ರುತಿಗಳಿಂದ ಸರ್ವ ಶಾಸ್ತ್ರಗಳಿಗೂ, ಸೃಷ್ಟ್ಯಾದಿಕರ್ತನಾದ, ಮೋಕ್ಷಪ್ರದನಾದ, ಬ್ರಹ್ಮಶಬ್ದವಾಚ್ಯನಾದ ಶ್ರೀ ಹರಿಯಲ್ಲಿಯೇ ತಾತ್ಪರ್ಯವು ॥ ೧೬ ॥ ೧೭ ॥ ೧೮ ॥

'ಅಯನಾಯ ವಿದ್ಯತೇ' ಎನ್ನುವ ಶ್ರುತಿಯಿಂದಲೂ ಸಿದ್ಧವಾಗಿದೆ ಎನ್ನುತ್ತಾರೆ.—

ಮೂ ॥ ಯಮೇವೈಷ ಇತಿ ಶ್ರುತ್ಯಾ ತಮೇವೇತಿ ಚ ಸಾದರಂ ।
ಶಾಸ್ತ್ರಯೋನಿತ್ವಮಸ್ಯೈವ ಜ್ಞಾಯತೇ ವೇದವಾದಿಭಿಃ ॥ ೧೯ ॥

ಅ ॥ ಯಮೇವೈಷ ಇತಿ ಶ್ರುತ್ಯಾ=ಯಮೇವೈಷಃ ಎನ್ನುವ ಶ್ರುತಿಯಿಂದಲೂ, ತಮೇವೇತಿ=ತಮೇವಂ ವಿದಿತ್ವಾ ಎನ್ನುವ ಶ್ರುತಿಯಿಂದಲೂ, ಸಾದರಂ = ಆದರಪೂರ್ವಕವಾಗಿ, ಶಾಸ್ತ್ರಯೋನಿತ್ವಂ = ಶಾಸ್ತ್ರೈಕಸಮಧಿಗಮ್ಯತ್ವವು, ಅಸ್ಯೈವ = ಶ್ರೀ ವಿಷ್ಣುವಿಗೇನೇ, ವೇದವಾದಿಭಿಃ=ವೇದಪ್ರಾಮಾಣ್ಯವಾದಿಗಳಿಂದ, ಜ್ಞಾಯತೇ=ತಿಳಿಯಲ್ಪಡುತ್ತದೆ.

ತಾ ॥ ಸ. ರ. ವಿ— (1) ಯಾವ ಪುರುಷನನ್ನು ಶ್ರೀ ಹರಿಯು ನನ್ನನ್ನು ಉಪಾಸನಾ ಮಾಡತಕ್ಕವನಾದುದರಿಂದ ಇವನು ನನ್ನವನೆಂದು ಸ್ವೀಕರಿಸುತ್ತಾನೋ ಸ್ವೀಕೃತನಾದ ಆತನಿಂದಲೇ ಲಭ್ಯನಾಗುತ್ತಾನೆ. ಸ್ವೀಕೃತನಾದ ಆತನಿಗೆ ಸ್ವರೂಪಭೂತವಾದ ಚಿದಾನಂದಾತ್ಮಕವಾದ ಶರೀರವನ್ನು ಶ್ರೀ ಹರಿಯು ತೋರಿಸಿಕೊಡುತ್ತಾನೆ. (2) ಶ್ರೀ ವಿಷ್ಣುವನ್ನೇ ತಿಳಿದವನು ಮುಕ್ತನಾಗುತ್ತಾನೆ. ಮುಕ್ತಿಗೆ ಬೇರೆ ಮಾರ್ಗವಿಲ್ಲ. ॥ ೧೯ ॥

ಈ ವಿಷಯದಲ್ಲಿ ಶ್ರುತ್ಯಂತರವನ್ನು ಹೇಳಿ ಈ ವಿಷ್ಣುಲಿಂಗವನ್ನೇ ಶ್ರುತಿಯಿಂದ ದೃಢೀಕರಿಸುತ್ತಾರೆ—

ಮೂ ॥ ಯ ಏನಂ ವಿದುರಮೃತಾ ಇತ್ಯುಕ್ತಸ್ತು ಸಮುದ್ರಗಃ ।
ತದೇವ ಬ್ರಹ್ಮ ಪರಮಮಿತಿ ಶ್ರುತ್ಯಾವಧಾರಿತಃ ॥ ೨೦ ॥

ಅ ॥ ಯೇ=ಯಾರು, ಏನಂ=ಶ್ರೀ ಹರಿಯನ್ನು, ವಿದುಃ=ತಿಳಿಯುತ್ತಾರೋ, (ತೇ=ಅವರು) ಅಮೃತಾಃ=ಮುಕ್ತರು, (ಭವಂತಿ=ಆಗುತ್ತಾರೆ.) ಇತಿ=ಈ ಶ್ರುತಿಯಿಂದಲೂ, (ಶ್ರೀ ಹರಿಗೇನೇ ಶಾಸ್ತ್ರಯೋನಿತ್ವವು ತಿಳಿಯಲ್ಪಡುತ್ತದೆ.) (ಏನಂ ಎಂದು ಹೇಳಲ್ಪಟ್ಟವನು ಶ್ರೀ ಹರಿಯು ಎನ್ನುವುದು ಯಾವುದರಿಂದ ಸಿದ್ಧವಾಗುತ್ತದೆ ಎಂದರೆ) ಇತ್ಯುಕ್ತಸ್ತು='ಯ ಏನಂ ವಿದುಃ' ಎನ್ನುವ ಶ್ರುತಿಯಲ್ಲಿ ಮೋಕ್ಷಕ್ಕೆ ಕಾರಣೀಭೂತವಾದ ಜ್ಞಾನವಿಷಯನೆಂದು ಹೇಳಲ್ಪಟ್ಟವನಾದರೂ, ಸಮುದ್ರಗಃ = ('ಯಮಂತಃ ಸಮುದ್ರೇ ಕವಯೋಽವಯಂತಿ' ಯಾರನ್ನು ಸಮುದ್ರದೊಳಗೆ ಜ್ಞಾನಿಗಳು ತಿಳಿಯುತ್ತಾರೋ, ಎಂದು) ಸಮುದ್ರದಲ್ಲಿರತಕ್ಕವನು (ಹೇಳಲ್ಪಟ್ಟಿದ್ದಾನೆ.) (ಆ ಸಮುದ್ರಸ್ಥತ್ವವಾದರೂ ಶ್ರೀಹರಿಯ ಲಿಂಗವು.) (ಪ್ರಮಾಣಾಂತರವನ್ನು ಹೇಳುತ್ತಾರೆ—) ತದೇವ ಬ್ರಹ್ಮ ಪರಮಮಿತಿ ಶ್ರುತ್ಯಾ=ಆ ಶ್ರೀಹರಿಯನ್ನೇ ಜ್ಞಾನಿಗಳ ಮಧ್ಯದಲ್ಲಿ ಪರಬ್ರಹ್ಮನನ್ನಾಗಿ ಹೇಳುತ್ತಾರೆ, ಎನ್ನುವ ಶ್ರುತಿಯಿಂದ, ಅವಧಾರಿತಃ=ಬ್ರಹ್ಮನೆಂದು ನಿರ್ಧರಿಸಿಕೊಳ್ಳಲ್ಪಟ್ಟಿದ್ದಾನೆ.

ತಾ ॥ ಸ. ರ. ವಿ— (1) 'ಯಮಂತಃ ಸಮುದ್ರೇ ಕವಯೋ ವಯಂತಿ' 'ಯತಃ ಪ್ರಸೂತಾ ಜಗತಃ ಪ್ರಸೂತೀ' ಇತ್ಯಾದಿಗಳಿಂದ ಕ್ಷೀರಾಬ್ಧಿಶಾಯಿಯೆಂದೂ, ಪ್ರಕೃತ್ಯಾದಿ

ಗಳಿಗೆ ಉತ್ಪಾದಕನೆಂದೂ ಪ್ರಕೃತನಾದವನು ಯಾವನೋ ಅವನೇವೇ 'ತದೇವ ಬ್ರಹ್ಮ ಪರಮಂ ಕವೀನಾಂ' ಎಂದು ಪರಬ್ರಹ್ಮನೆಂದು ನಿರ್ಧಾರಿತನಾಗಿರುತ್ತಾನೋ ಆ ಈ ಶ್ರೀ ಹರಿಯನ್ನು ಯಾರು ತಿಳಿಯುತ್ತಾರೋ ಅವರೇ ಮುಕ್ತರಾಗುತ್ತಾರೆ. ಆದುದರಿಂದ ವಿಷ್ಣುವೇ ಮೋಕ್ಷವನ್ನು ಕೊಡತಕ್ಕವನಾದುದರಿಂದ ಮುಖ್ಯಾರ್ಥನು; ಸರ್ವಶಾಸ್ತ್ರಗಮ್ಯನು ಮತ್ತೊಬ್ಬನಲ್ಲ.

**ನ್ಯಾಯಸುಧಾ**— ಏನಂ ಎಂದು ಹೇಳಿದಾಗ ಬ್ರಹ್ಮಪದವು ಶ್ರುತವಾದುದರಿಂದ ಬ್ರಹ್ಮ ಪದಕ್ಕೆ ಭಗವಂತನ ನಾಮಧೇಯತ್ವವಿದ್ದುದರಿಂದ ಭಗವಂತನೇ ಎಂದು ತಿಳಿಯಲ್ಪಡುತ್ತದೆ ॥ ೨೦ ॥

ಯುಕ್ತ್ಯಂತರವನ್ನು ಹೇಳುತ್ತಾರೆ—

**ಮೂ ॥ ಯತಃ ಪ್ರಸೂತೇತಿ ತತಃ ಸೃಷ್ಟಿಮಾಹ ತತೋ ಹರಿಃ ।**
**ಶಾಸ್ತ್ರಯೋನಿರ್ನಚಾನ್ಯೋಽಸ್ತಿ ಮುಖ್ಯತಸ್ತ್ವಿತಿ ಗಮ್ಯತೇ ॥ ೨೧ ॥**

**ಅ ॥** ಯತಃ ಪ್ರಸೂತೇತಿ=(**ಯತಃ ಪ್ರಸೂತಾ ಜಗತಃ ಪ್ರಸೂತೀ**=) ಯಾವ ಶ್ರೀ ಹರಿಯದೆಶೆಯಿಂದ ಜಗತ್ತಿಗೆ ಮೂಲಕಾರಣವಾದ ಮೂಲಪ್ರಕೃತಿಯು (ಹುಟ್ಟಿರುತ್ತದೊ) ಎನ್ನುವ ಶ್ರುತಿಯು, ತತಃ=ಯ ಏನಂ ಎಂದು ಹೇಳಲ್ಪಟ್ಟ ಪುರುಷನದೆಶೆಯಿಂದ (ಮೂಲಪ್ರಕೃತಿಗೆ,) ಸೃಷ್ಟಿಂ=ಸೃಷ್ಟಿಯನ್ನು, ಆಹ=ಹೇಳುತ್ತದೆ. (ಮೂಲಪ್ರಕೃತಿಯನ್ನು ಕುರಿತು ಕಾರಣತ್ವವು ಶ್ರೀಹರಿಯಿಂದ ಇತರರಿಗೆ ಕೂಡಲಾರದು. ಆದಕಾರಣ '**ಯ ಏನಂ ವಿದುರಮೃತಾಃ**' ಎಂದು ಮೋಕ್ಷಕಾರಣಜ್ಞಾನವಿಷಯಿಭೂತನಾದವನು ಶ್ರೀ ಹರಿಯು )(ಹೇತುವ್ಯಾಖ್ಯಾನವನ್ನುಪ ಸಂಹಾರಮಾಡುತ್ತಾರೆ.) ತತಃ=ಆದುದರಿಂದ, ಹರಿಃ=ಶ್ರೀ ಹರಿಯು, ಮುಖ್ಯತಃ=ಮುಖ್ಯ ವಾಗಿ (ಅಂದರೆ ಮೋಕ್ಷವನ್ನು ಕೊಡತಕ್ಕವನಾಗಿ) ಶಾಸ್ತ್ರಯೋನಿಃ=ಶಾಸ್ತ್ರೈಕಸಮಧಿಗಮ್ಯನು. ಅನ್ಯಃ=ಮತ್ತೊಬ್ಬನು, ನ ಚಾಸ್ತಿ=ಇಲ್ಲವೇಇಲ್ಲ. ಅಂದರೆ ಮುಖ್ಯವಾಗಿ ಮೋಕ್ಷವನ್ನು ಕೊಡತಕ್ಕವನಾಗಿ ಮತ್ತೊಬ್ಬನು ಶಾಸ್ತ್ರಸಮಧಿಗಮ್ಯನಲ್ಲ. ಇತಿ=ಹೀಗೆ, ಗಮ್ಯತೇ=ತಿಳಿಯ ಲ್ಪಡುತ್ತದೆ. ॥ ೨೧ ॥

ವಿಷ್ಣುವಿನಂತೆಯೇ ಇತರರಿಗೂ ಶಾಸ್ತ್ರಯೋನಿತ್ವವು ತೋರುತ್ತದೆ ಎಂದು ಯಾವುದು ಹೇಳಲ್ಪಡುತ್ತದೋ ಅದಕ್ಕೆ ಪರಿಹಾರಕವಾಗಿಯೂ ಸೂತ್ರದಲ್ಲಿದ್ದ ಹೇತುವನ್ನು ವ್ಯಾಖ್ಯಾನ ಮಾಡುತ್ತಾರೆ—

**ಮೂ ॥ ಶಾಸ್ತ್ರಯೋನಿತ್ವಮೇತಸ್ಯ ಜ್ಞಾಯತೇ ಹಿ ಸಮನ್ವಯಾತ್ ।**
**ಸಮಿತಿ ಹ್ಯುಪಸರ್ಗೇಣ ಪರಮುಖ್ಯಾರ್ಥತೋಚ್ಯತೇ ॥ ೨೨ ॥**
**ಏನಂ ಪರಮಮುಖ್ಯಾರ್ಥೋ ನಾರಾಯಣ ಇತಿ ಶ್ರುತೇಃ ।**
**ನಿರ್ಧಾರಣಾಯ ನಾಶಬ್ದಮಿತಿ ವೇದಪತಿರ್ಜಗೌ ॥ ೨೩ ॥**

**ಅ ॥** ಏತಸ್ಯ=ಈಪರಬ್ರಹ್ಮನಿಗೆ, ಸಮನ್ವಯಾತ್=ಉಪಕ್ರಮಾದಿ ಲಿಂಗಸಮುದಾಯ ದೆಶೆಯಿಂದ, ಶಾಸ್ತ್ರಯೋನಿತ್ವಂ=ಶಾಸ್ತ್ರೈಕಸಮಧಿಗಮ್ಯತ್ವವು, ಸಮ್=ಪರಮಮುಖ್ಯವೃತ್ತಿ ಯಿಂದ, ಜ್ಞಾಯತೇ=ತಿಳಿಯಲ್ಪಡುತ್ತದೆ. ('**ಯತೋ ವಾಚೋ ನಿವರ್ತಂತೇ**' ಇತ್ಯಾದಿ ಶ್ರುತಿಗಳಿಂದ ಬ್ರಹ್ಮನಿಗೆ ಅವಾಚ್ಯತ್ವವನ್ನು ಆಶಂಕಿಸಿಕೊಂಡು ಈಕ್ಷತ್ಯಧಿಕರಣದಲ್ಲಿ ವಾಚ್ಯತ್ವವು ಸಾಧಿಸಲ್ಪಡುತ್ತದೆ. ಅದು ಅಸಂಗತವು. ಮೊದಲು ವಾಚ್ಯತ್ವವನ್ನು ಹೇಳಲಿಲ್ಲ. ಶಾಸ್ತ್ರಪ್ರತಿಪಾದ್ಯ

ತ್ವವು ಲಕ್ಷಣಾದಿಗಳಿಂದಲೂ ಕೂಡಬಹುದು, ಎಂದರೆ ಅಧಿಕರಣವನ್ನು ಕೂಡಿಸುವುದಕ್ಕಾಗಿ ಸಂ ಶಬ್ದವನ್ನು ವ್ಯಾಖ್ಯಾನ ಮಾಡುತ್ತಾರೆ.) ಸಮಿತಿ ಉಪಸರ್ಗೇಣ ಹಿ=ಸಮ್ ಎನ್ನುವ ಉಪಸರ್ಗ ದಿಂದಲಾದರೂ, ಪರಮಮುಖ್ಯಾರ್ಥತಾ=ಪರಮ ಮುಖ್ಯಾರ್ಥತ್ವವು ಉಚ್ಯತೇ=ಹೇಳಲ್ಪಡುತ್ತದೆ. (ಸಂಕೋಚಕ್ಕೆ ಕಾರಣವಿಲ್ಲ.) (ಅದರಿಂದ ಪ್ರಕೃತವೇನಾಯಿತೆಂದರೆ) ಏವಂ=ಮೋಕ್ಷಾದಿ ಗಳನ್ನು ಕೊಡತಕ್ಕವನಾಗಿ, ನಾರಾಯಣಃ=ಶ್ರೀ ನಾರಾಯಣನು, ಶ್ರುತೇಃ=ಎಲ್ಲಾ ಶ್ರುತಿಗಳಿಗೆ, ಪರಮಮುಖ್ಯಾರ್ಥಃ = ಪರಮಮುಖ್ಯಾರ್ಥನು, ಇತಿ=ಈ ಅರ್ಥವನ್ನು, ನಿರ್ಧಾರಣಾಯ= ನಿರ್ಧಾರಿಸುವುದಕ್ಕಾಗಿ, ಅಶಬ್ದಂ ನ=ಶಬ್ದಾವಾಚ್ಯನಾದವನು ಅಲ್ಲ. ಇತಿ=ಹೀಗೆ, ವೇದಪತಿಃ= ವೇದವ್ಯಾಸರು, ಜಗೌ=ಹೇಳಿದರು. ॥ ೨೨ ॥ ೨೩ ॥

ಈ ಅಧಿಕರಣದಲ್ಲಿ 'ಗತಿಸಾಮಾನ್ಯಾತ್' ಎನ್ನುವ ಸೂತ್ರವು ಇದೆ. ಅದು ಮೊದಲು ಈಕ್ಷತ್ಯಧಿಕರಣವನ್ನು ವ್ಯಾಖ್ಯಾನ ಮಾಡುವ ಸಮಯದಲ್ಲಿ ವಾಚ್ಯತಾ ಸಮರ್ಥನಪರವಲ್ಲ ವೆನ್ನುವ ಹೇತುವಿನಿಂದ ವ್ಯಾಖ್ಯಾತವಾಗಲಿಲ್ಲ. ಅದಕ್ಕೆ ಈಗ ಸಂಗತಿಯನ್ನು ಹೇಳುತ್ತಾರೆ.—

**ಮೂ ॥ ಕಥಂ ಸಮನ್ವಯೋ ಜ್ಞೇಯಃ ಸ್ವಲ್ಪಶಾಖಾವಿದಾಂ ನೃಣಾಂ ॥**
**ವೇದಾ ಹ್ಯನಂತಾ ಇತಿ ಹಿ ಶ್ರುತಿರಾಹಾಪ್ಯನಂತತಾಂ ॥ ೨೪ ॥**

ಅ ॥ ಸ್ವಲ್ಪ ಶಾಖಾವಿದಾಂ=ಅಲ್ಪ ಶಾಖೆಯನ್ನು ಅಧ್ಯಯನ ಮಾಡಿದ, ನೃಣಾಂ= ಮನುಷ್ಯರಿಗೆ, ಸಮನ್ವಯಃ=ಸಕಲವೇದ ಸಮನ್ವಯವು, ಕಥಂ=ಹೇಗೆ, ಜ್ಞೇಯಃ=ತಿಳಿಯ ಲರ್ಹವಾಗುತ್ತದೆ. ವೇದಾಃ=ವೇದಗಳು, ಅನಂತಾಃ=ಅಪರಿಮಿತಗಳು, ಇತಿ ಹಿ=ಹೀಗೆಯೇ, ಶ್ರುತಿರಪಿ=ಶ್ರುತಿಯೂ ಕೂಡ, ಅನಂತತಾಂ=ವೇದಗಳಿಗೆ ಅನಂತತ್ವವನ್ನು, ಆಹ=ಹೇಳುತ್ತದೆ.

ತಾ ॥ ಸ. ರ. ವಿ— (1) ಮೋಕ್ಷಾದಿಗಳನ್ನು ಕೊಡತಕ್ಕ ವಿಷ್ಣುವಿನಲ್ಲಿಯೇ ಸರ್ವ ಶಾಸ್ತ್ರಗಳಿಗೂ ಸಮನ್ವಯವು ಹೇಗೆ ಕೂಡುತ್ತದೆ? ನಾವು ಕಲಿಯದೆ ಇದ್ದ ಶಾಸ್ತ್ರಭಾಗಗಳಲ್ಲಿ ಬೇರೆ ಪ್ರಕಾರವೂ ಹೇಳಿರಬಹುದು. ಅಸರ್ವಜ್ಞನಾದವನಿಗೆ ಅನಂತ ವೇದಗಳಿಂದ ವಿಷ್ಣುವು ಜಗಜ್ಜನ್ಮಾದಿ ಕಾರಣನಾಗಿ ಪ್ರತಿಪಾದ್ಯನು ಎಂದು ನಿಶ್ಚಯಮಾಡಿಕೊಳ್ಳಲಿಕ್ಕೆ ಸಾಧ್ಯವಾಗುವು ದಿಲ್ಲವೆಂದರೆ— ಸರ್ವಜ್ಞರಾದ ಆಪ್ತರಾದ ವೇದವ್ಯಾಸರು 'ಗತಿಸಾಮಾನ್ಯಾತ್' ಎನ್ನುವುದರಿಂದ ಅನಂತಾನಂತವೇದಗಳಿಂದುಂಟಾಗತಕ್ಕ ಜ್ಞಾನಸಾಮಾನ್ಯವನ್ನು ವಿಷ್ಣುವಿನಲ್ಲಿಯೇ ಹೇಳಿರುವುದ ರಿಂದ '**ಸರ್ವೇ ವೇದಾ ಯತ್ಪದಮಾಮನಂತಿ**' ಇತ್ಯಾದಿ ಶ್ರುತಿಗಳಿರದ ನಿಶ್ಚಯಿಸಲು ಶಕ್ಯ ವಾಗುವುದು. ಆದ ಕಾರಣ ನಿಖಿಲ ಶ್ರುತಿಗಳ ಸಮನ್ವಯವು ವಿಷ್ಣುವಿನಲ್ಲಿ ಸುಖದಿಂದ ಸಾಧ್ಯವೇ ಆಗಿದೆ. ॥ ೨೪ ॥

**ನ್ಯಾಯಸುಧಾ—** ಉಪಕ್ರಮಾದಿ ಲಿಂಗಗಳಿಂದ ಜಗಜ್ಜನ್ಮಾದಿ ಕಾರಣನಾಗಿ ಪರ ಮೇಶ್ವರನಲ್ಲಿ ಸರ್ವವೇದಗಳಿಗೆ ಸಮನ್ವಯವನ್ನು ತಿಳಿಯಲಿಕ್ಕೆ ಸಾಧ್ಯವಾಗುವುದಿಲ್ಲ. ಸ್ವಲ್ಪ ವಾದ ಆಯುಸ್ಸು ಪ್ರಜ್ಞಾದಿಗಳುಳ್ಳ ಮನುಷ್ಯರಿಗೆ, ಸ್ವಲ್ಪ ಶಾಖಾಜ್ಞಾನವೇ ಕೂಡುವುದರಿಂದ ಸರ್ವ ವೇದಗಳ ಜ್ಞಾನವು ಕೂಡಲಾರದು. ವೇದಗಳೂ ಸ್ವಲ್ಪಗಳೇ ಆಗಿದ್ದರೆ ನಮಗೂ ಆ ಅಲ್ಪ ವೇದಸಮನ್ವಯವನ್ನು ತಿಳಿಯಲಿಕ್ಕೆ ಸಾಧ್ಯವಾಗುವುದು ಎಂದರೆ, '**ಅನಂತಾ ವೈ ವೇದಾಃ**' ಎನ್ನುವ ಶ್ರುತಿಯು ವೇದಗಳು ಅನಂತಗಳೆಂದು ಹೇಳುತ್ತವೆ. ಆದುದರಿಂದ ಅನಂತ ವೇದಗಳ ಸಮನ್ವಯವನ್ನು ತಿಳಿಯುವುದು ಅಲ್ಪ ಪ್ರಜ್ಞೆಯುಳ್ಳ ಅಲ್ಪ ಶಾಖಾವೇದಿಗಳಿಗೆ ಸಾಧ್ಯವಲ್ಲ.

ಪುರುಷರು ಸ್ವಲ್ಪ ಜ್ಞಾನಿಗಳೇ ಆಗಲಿ, ವೇದಗಳು ಅನಂತಗಳೇ ಆಗಲಿ, ಆದರೂ ಸಮನ್ವಯ ಜ್ಞಾನವು ಅಶಕ್ಯವಾಗುವುದು ಹೇಗೆಂದರೆ—

**ಮೂ ॥ ಅನಂತವೇದನಿರ್ಣೀತಿರ್ಮಹಾಪ್ರಲಯವಾರಿಧೇಃ ।**
**ಉತ್ತಾರಣೋಪಮೇತ್ಯಸ್ಮಾನ್ನ ಜ್ಞೇಯೋತ್ರ ಸಮನ್ವಯಃ ॥**
**ಇತ್ಯಾಶಂಕಾಪನೋದಾರ್ಥಂ ಸ ಆಹ ಕರುಣಾಕರಃ ॥ ೨೫ ॥**

ಅ ॥ (ಸ್ವಲ್ಪ ಶಾಖೆಯನ್ನು ತಿಳಿದವರಿಗೆ) ಅನಂತವೇದ ನಿರ್ಣೀತಿಃ = ಅನಂತವೇದಗಳ ನಿರ್ಣಯವು; ಮಹಾಪ್ರಲಯವಾರಿಧೇಃ= ಮಹತ್ತಾದ ಪ್ರಲಯಸಮುದ್ರದ ದೆಶೆಯಿಂದ, ಉತ್ತಾರಣೋಪಮಾ=ದಾಟೋಣದರಿಂದ ಸದೃಶವಾದುದು. ಇತ್ಯಸ್ಮಾತ್=ಈ ಕಾರಣದಿಂದ, ಅತ್ರ=ಈ ವಿಷ್ಣುವಿನಲ್ಲಿ, ಸಮನ್ವಯಃ=ಸಕಲ ವೇದಸಮನ್ವಯವು, ನ ಜ್ಞೇಯಃ = ತಿಳಿಯಲಸಾಧ್ಯವು. ಇತ್ಯಾಶಂಕಾಪನೋದಾರ್ಥಂ=ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ, ಕರುಣಾಕರಃ = ಕೃಪಾಶ್ರಯರಾದ, ಸಃ=ಆ ವೇದವ್ಯಾಸದೇವರು, ('ಗತಿಸಾಮಾನ್ಯಾತ್' ಎನ್ನುವ ಸೂತ್ರವನ್ನು) ಆಹ=ಹೇಳಿದರು.

ತಾ ॥ ನ್ಯಾಯಸುಧಾ— (1) ಯಾರು ಯಾವ ವಾಕ್ಯದ ಸ್ವರೂಪವನ್ನೇ ತಿಳಿಯುವುದಿಲ್ಲವೋ, ಅವನು ಆ ವಾಕ್ಯದಲ್ಲಿ ಉಪಕ್ರಮಾದಿಗಳನ್ನು ಅನುಸಂಧಾನ ಮಾಡಿಕೊಂಡು ವಾಕ್ಯಾರ್ಥವನ್ನು ನಿಶ್ಚಯಿಸಿಕೊಳ್ಳುತ್ತಾನೆನ್ನುವುದು ಅಸಂಭಾವಿತವೇ ಆಗಿದೆ. (2) (೧) 'ವಿಮತಾಃ ಪುರುಷಾಃ ನ ಸರ್ವವೇದಸಮನ್ವಯಜ್ಞಾನಾರ್ಹಾಃ ಸರ್ವವೇದಾಜ್ಞತ್ವಾತ್ ಯೋ ಯದ್ವಾಕ್ಯಂ ನ ಜಾನಾತಿ ನಾಸೌ ತತ್ಸಮನ್ವಯಮಪಿ ಜಾನಾತಿ ಯಥಾ ಸಂಮತಃ' ವಿವಾದ ವಿಷಯೀಭೂತರಾದ ಪುರುಷರು ಸರ್ವ ವೇದಗಳ ಸಮನ್ವಯಜ್ಞಾನವನ್ನು ಸಂಪಾದಿಸಿಕೊಳ್ಳಲಿಕ್ಕೆ ಅರ್ಹರಲ್ಲ. ಸರ್ವ ವೇದಗಳ ಜ್ಞಾನವಿಲ್ಲದಿರುವುದರಿಂದ, ಯಾರು ಯಾರ ವಾಕ್ಯವನ್ನು ತಿಳಿಯುವುದಿಲ್ಲವೋ ಇವನು ಆ ವಾಕ್ಯಸಮನ್ವಯವನ್ನು ತಿಳಿಯುವುದಿಲ್ಲ. ಸಮ್ಮತನಾದ ಪುರುಷನಂತೆ. (೨) 'ವಿಮತಾಃ ನ ಸರ್ವವೇದ ವೇದನಾರ್ಹಾಃ ಅಲ್ಪಪ್ರಜ್ಞಾದಿಮತ್ವಾತ್ ಯೋ ಅಲ್ಪಪ್ರಜ್ಞಾದಿಮಾನ್ ನಾಸೌ ತದ್ವೇತ್ತಿ ಯಥಾ ಸಂಮತಃ' ವಿವಾದ ವಿಷಯೀಭೂತರಾದ ಪುರುಷರು ಸರ್ವವೇದಗಳನ್ನು ತಿಳಿಯಲಿಕ್ಕೆ ಅರ್ಹರಲ್ಲ; ಅಲ್ಪಪ್ರಜ್ಞಾದಿಗಳುಳ್ಳವರಾದಪ್ರಯುಕ್ತ ಯಾರು ಅಲ್ಪಪ್ರಜ್ಞಾದಿಗಳುಳ್ಳವರೋ ಅವರು ಸರ್ವವನು ತಿಳಿಯುವುದಿಲ್ಲ, ಸಮ್ಮತನಂತೆ. (೩) 'ವೇದಾ ವಾ ನೈತತ್ಪುರುಷವೇದ್ಯಾಃ ಏತತ್ಪ್ರಜ್ಞಾದ್ಯತಿಕ್ರಾಂತತ್ವಾತ್ ಯದೇವಂ ತದೇವಂ ಯಥಾ ಸಂಮತಃ' ವೇದಗಳು ಈ ಪುರುನಿಂದ ತಿಳಿಯಲ್ಪಡತಕ್ಕವುಗಳಲ್ಲ, ಈ ಪ್ರಜ್ಞಾದಿಗಳನ್ನು ಅತಿಕ್ರಮಿಸಿದರಿಂದ ಸಮ್ಮತನಂತೆ, ಆದಕಾರಣ ವಿಷ್ಣುವಿನಲ್ಲಿ ಸರ್ವವೇದಗಳ ಸಮನ್ವಯವನ್ನು ತಿಳಿಯಲಸಾಧ್ಯವು, ಎಂದರೆ— ಈ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 'ಗತಿಸಾಮಾನ್ಯಾತ್' ಎನ್ನುವ ಸೂತ್ರವನ್ನು ವೇದವ್ಯಾಸರು ಹೇಳಿರುತ್ತಾರೆ ॥ ೨೫ ॥

ಹಾಗಾದರೆ ವೇದಗಳು ಅನಂತಗಳಾಗಿರುವುದರಿಂದ ತಿಳಿಯಲು ಅಶಕ್ಯಗಳಾಗಿವೆ. ಆದುದರಿಂದ ಉಪಕ್ರಮಾದಿಗಳಿಂದ ವೇದಾರ್ಥ ನಿರ್ಣಯವು ಸರ್ವಥಾಕೂಡಲಾರದು, ಎನ್ನುವ ಆಕ್ಷೇಪಕ್ಕೆ 'ಗತಿಸಾಮಾನ್ಯಾತ್' ಎನ್ನುವ ಸೂತ್ರದಿಂದ ಏನು ಸಮಾಧಾನ ಹೇಳಿದಂತೆ ಆಯಿತು ಎಂದರೆ— ಸೂತ್ರಾಭಿಪ್ರಾಯವನ್ನು ಹೇಳುತ್ತಾರೆ—

ಮೂ ॥ ಅಶಕ್ಯೋತ್ತಾರಣತ್ವೇಽಪಿ ಹ್ಯಾಗಮಾಪಾರವಾರಿಧೇಃ ॥ ೨೬ ॥
ನಿರ್ಣೀಯತೇ ಮಯ್ಯೈವಾಯಂ ರೋಮಕೂಪಲಯೋದಿನಾ ।
ಯದ್ಯಪ್ಯಶೇಷವೇದಾರ್ಥೋ ದುರ್ಗಮೋಽಖಿಲಮಾನವೈಃ ॥ ೨೭ ॥
ಮಜ್ಞಾನಾವ್ಯಾಕೃತಾಕಾಶೇ ಪ್ರಾಪ್ನೋತಿ ಪರಮಾಣುತಾಂ ।
ಇತಿ ಪ್ರಕಾಶಯನ್ ವಿಶ್ವಪತಿರಾಹ ಪ್ರಮೇಯತಾಂ ।
ನಿಖಿಲಸ್ಯಾಪಿ ವೇದಸ್ಯ ಗತಿಸಾಮಾನ್ಯಮಂಜಸಾ ॥ ೨೮ ॥

ಅ ॥ ಆಗಮಾಪಾರವಾರಿಧೇಃ=ಆಗಮಗಳೆನ್ನುವ ದಾಟಲಿಕ್ಕೆ ಅಶಕ್ಯವಾದ ಸಮುದ್ರಕ್ಕೆ, (ನನ್ನದೆಶೆಯಿಂದ ಬೇರೆಯುವರಿಂದ) ಅಶಕ್ಯೋತ್ತಾರಣತ್ವೇಽಪಿ=ಆಚೆದಡಕ್ಕೆಹೋಗಲಿಕ್ಕೆ ಅಶಕ್ಯತ್ವವಿದ್ದಾಗ್ಯೂ, (ಅಂದರೆ ಬೇರೆಯುವರಿಗೆ ಉಪಕ್ರಮಾದಿಲಿಂಗಗಳಿಂದ ಎಲ್ಲಾ ಆಗಮಗಳ ತಾತ್ಪರ್ಯವನ್ನು ನಿರ್ಣಯಿಸಲಿಕ್ಕೆ ಅಶಕ್ಯವಾದಾಗ್ಯೂ) ರೋಮಕೂಪಲಯೋದಿನಾ=ರೋಮಕೂಪದಲ್ಲಿ ಪ್ರಳಯಕಾಲೀನವಾದ ಸಮುದ್ರವುಳ್ಳ, ಮಯ್ಯೈವ=ನನ್ನಿಂದಲೇ, ಅಯಂ=ವೇದವು, ನಿರ್ಣೀಯತೇ=ನಿಶ್ಚಯಿಸಲ್ಪಡುತ್ತದೆ. (ಅಂದರೆ ವೇದವು ಪ್ರಲಯಸಮುದ್ರಕ್ಕೆ ಸದೃಶವಾದಾಗ್ಯೂ, ನನ್ನ ಜ್ಞಾನದಲ್ಲಿಯೇ ಅಡಗಿಹೋಗುತ್ತದೆ.) (ಇದನ್ನೇ ವಿವರಿಸುತ್ತಾರೆ.) ಯದ್ಯಪಿ=ಯದ್ಯಪಿ, ಅಖಿಲಮಾನವೈಃ=ಎಲ್ಲಾ ಮನುಷ್ಯರಿಂದ, ಅಶೇಷವೇದಾರ್ಥಃ = ನಿಖಿಲ ವೇದಾರ್ಥವು, ದುರ್ಗಮಃ=ತಿಳಿಯಲಶಕ್ಯವು,(ತಥಾಪಿ)ಮಜ್ಞಾನಾವ್ಯಾಕೃತಾಕಾಶೇ=ನನ್ನಜ್ಞಾನವೆನ್ನುವ ಅವ್ಯಾಕೃತಾಕಾಶದಲ್ಲಿ, ಪರಮಾಣುತಾಂ = ಪರಮಾಣುತ್ವವನ್ನು, ಪ್ರಾಪ್ನೋತಿ = ಹೊಂದುತ್ತದೆ. (ಅಭಿಪ್ರಾಯವನ್ನುಪಸಂಹಾರ ಮಾಡುತ್ತಾರೆ.) ಇತಿ=ಹಿಂದೆಹೇಳಿದಪ್ರಕಾರ, ನಿಖಿಲಸ್ಯಾಪಿ ವೇದಸ್ಯ=ಎಲ್ಲಾ ವೇದಕ್ಕೂ, (ತನ್ನಿಂದ) ಅಂಜಸಾ=ಚೆನ್ನಾಗಿ, (ತನ್ನಪ್ರಸಾದದಿಂದ ತನ್ನ ಭಕ್ತರಿಂದಲೂ) ಪ್ರಮೇಯತಾಂ=ಪ್ರಮಾವಿಷಯತ್ವವನ್ನು, ಪ್ರಕಾಶಯನ್ = ಸೂಚಿಸತಕ್ಕ, ವಿಶ್ವಪತಿಃ=ವೇದವ್ಯಾಸರು, ಗತಿಸಾಮಾನ್ಯಂ=ಸರ್ವವೇದಗಳಿಂದ ಹುಟ್ಟತಕ್ಕ ಜ್ಞಾನಕ್ಕೆ ಸಾಮ್ಯವನ್ನು, ಆಹ=ಹೇಳಿರುತ್ತಾರೆ.

ತಾ ॥ ಸ. ಚ. ವಿ— ತನ್ನ ಪ್ರಸಾದದಿಂದ ತನ್ನ ಭಕ್ತರೂ ಕೂಡ ನಿಖಿಲ ವೇದಗಳನ್ನು ತಿಳಿದುಕೊಳ್ಳುತ್ತಾರೆ ಎಂದು ಪ್ರಕಾಶಪಡಿಸತಕ್ಕ ವೇದವ್ಯಾಸದೇವರು ಒಬ್ಬ ವಿಷ್ಣುವಿನ ಜ್ಞಾನಕ್ಕೇನೇ ಸರ್ವವೇದಗಳಲ್ಲಿಯೂ ಮಹಾತಾತ್ಪರ್ಯದಿಂದ ಪ್ರತಿಪಾದ್ಯತ್ವವಿದ್ದುದರಿಂದ ಸಮಾನತ್ವವನ್ನು ಹೇಳಿರುತ್ತಾರೆ—

**ನ್ಯಾಯಸುಧಾ—** (1) ಸರ್ವವೇದಗಳ ಜ್ಞಾನವಿದೆ ಎನ್ನುವಲ್ಲಿ 'ವಿಶ್ವಪತಿಃ' ಎನ್ನುವುದು ಪ್ರಮಾಣವು. ರಕ್ಷಿಸಲರ್ಹವಾದುದನ್ನು ತಿಳಿಯದವನು ಅದಕ್ಕೆ ರಕ್ಷಕನು ಆಗಲಾರನಷ್ಟೆ. ಸರ್ವವೇದಗಳೂ ವಿಶ್ವದಲ್ಲಿಯೇ ಅಂತರ್ಗತಗಳಾಗಿವೆ. (2) ಸರ್ವವೇದಗಳ ಜ್ಞಾನವು ಕೂಡದಿರುವುದರಿಂದ ಸರ್ವವೇದಗಳ ಸಮನ್ವಯ ಜ್ಞಾನವಿಲ್ಲವುವೆನ್ನುವುದು. ೧. ಮನುಷ್ಯಾದಿಗಳಿಗೆ ಹೇಳುತ್ತೀರೋ, ೨. ಸೂತ್ರಕಾರರಿಗೆ ಹೇಳುತ್ತೀರೋ, ಮನುಷ್ಯಾದಿಗಳಿಗೆ ಎನ್ನುವ ಒಂದನೇ ಪಕ್ಷದಲ್ಲಿಯೂ ವಿಶೇಷವಾಗಿಲ್ಲವೆಂದು ಹೇಳಲ್ಪಡುತ್ತದೋ, ಸಾಮಾನ್ಯವಾಗಿ ಇಲ್ಲವೆಂದು ಹೇಳಲ್ಪಡುತ್ತದೋ, ವಿಶೇಷವಾಗಿ ಇಲ್ಲವೆನ್ನುವುದನ್ನು ಅಂಗೀಕರಿಸುತ್ತೇವೆ. ಸಾಮಾನ್ಯವಾಗಿ ಇಲ್ಲವೆನ್ನುವುದಕ್ಕೆ ಸಮಾಧಾನವನ್ನು 'ಅನ್ಯೋಽಪ್ಯಲ್ಪಮತಿಃ ಶಾಖಾ' ಇತ್ಯಾದಿಗಳಲ್ಲಿ

ಹೇಳುವೆವು. ೨. ಸೂತ್ರಕಾರರಿಗೆ ಇಲ್ಲವೆನ್ನುವುದೂ ಕೂಡಲಾರದು. ಸೂತ್ರಕಾರರು ಸರ್ವಜ್ಞರಾದುದರಿಂದ ಸರ್ವವೇದಜ್ಞಾನವೂ ಕೂಡಬಹುದು ॥ ೨೬ ॥ ೨೭ ॥ ೨೮ ॥

ಹಾಗಾದರೆ ಸೂತ್ರಕಾರರು ಗತಿಸಾಮಾನ್ಯವನ್ನು ಹೇಳಿದಂತೆಯೇ ಇನ್ನೊಬ್ಬನೂ ರುದ್ರಾದಿರೂಪ ವಿಷಯಾಂತರಗಳಲ್ಲಿಯೂ, ಗತಿಸಾಮಾನ್ಯವನ್ನು ಹೇಳಿದರೆ ಸೂತ್ರಕಾರರು ಹೇಳಿದ ಗತಿಸಾಮಾನ್ಯದ ಅಂದರೆ ಸಕಲ ವೇದಗಳೂ ಜಗಜ್ಜನ್ಮಾದಿಕಾರಣತ್ವಾದಿ ಧರ್ಮಗಳಿಂದ ಶ್ರೀ ಹರಿಯನ್ನೇ ಪ್ರತಿಪಾದಿಸುತ್ತವೆ ಎಂದು ಸಕಲ ವೇದೋತ್ಪಾದ್ಯವಾದ ಜ್ಞಾನಕ್ಕೆ ಸಾಮ್ಯರೂಪವಾದ ಗತಿಸಾಮಾನ್ಯದ ನಿರ್ಣಯವು ಆಗಲಾರದೆಂದರೆ—

**ಮೂ ॥ ಕೋ ನಾಮ ಗತಿಸಾಮಾನ್ಯಮನಂತಾಗಮಸಂಪದಃ ॥ ೨೯ ॥**
**ಜ್ಞಾನಸೂರ್ಯಮೃತೇ ಬ್ರೂಯಾತ್ತಮೇಕಂ ಬಾದರಾಯಣಂ ।**
**ಅನ್ಯೋಽಪ್ಯಲ್ಪಮತಿಃ ಶಾಖಾಚತುಷ್ಪಂಚಗತಂ ವಸು ।**
**ಜಾನನ್ನನುಮಿತತ್ವೇನ ಬ್ರೂಯಾತ್ತಸ್ಯ ಪ್ರಸಾದತಃ ॥ ೩೦ ॥**

ಅ ॥ ಜ್ಞಾನಸೂರ್ಯಂ = ಜ್ಞಾನದಿಂದ ಸೂರ್ಯನಂತೆ ಇರತಕ್ಕ (ಅಂದರೆ ಹೇಗೆ ಸೂರ್ಯನು ತನ್ನ ತೇಜಸ್ಸಿನಿಂದ ಜಗತ್ತನ್ನು ಪ್ರಕಾಶಪಡಿಸುತ್ತಾನೋ ಹಾಗೆಯೇ ಈ ವೇದವ್ಯಾಸರು ಸಜ್ಜನರನ್ನು ಜ್ಞಾನದಿಂದ ಪ್ರಕಾಶಪಡಿಸುತ್ತಾರೆ.) ತಂ=ಆದಾವ, ಏಕಂ ಬಾದರಾಯಣಂ=ವೇದವ್ಯಾಸರೊಬ್ಬರನ್ನು, ಋತೇ=ಹೊರತು, ಅನಂತಾಗಮಸಂಪದಃ=ಅಪರಿಮಿತವಾದ ಆಗಮವೆನ್ನುವ ಸಂಪತ್ತಿನ, ಗತಿಸಾಮಾನ್ಯಂ = ಜ್ಞಾನಸಾಮ್ಯವನ್ನು (ಅಂದರೆ, ಸರ್ವವೇದಗಳಿಂದುಂಟಾಗತಕ್ಕ ಜ್ಞಾನಕ್ಕೆ ಸಾಮ್ಯವನ್ನು), ಕೋ ನಾಮ=ಯಾರು ತಾನೇ, ಬ್ರೂಯಾತ್=ಹೇಳಿಯಾನು? (ಅಂದರೆ, ೧ ಸರ್ವಜ್ಞನಾದ ಇನ್ನೊಬ್ಬನು ಸೂತ್ರಕಾರರು ಹೇಳಿದ ಗತಿಸಾಮ್ಯಕ್ಕೆ ವಿಪರೀತವಾದ ಗತಿಸಾಮ್ಯವನ್ನು ಹೇಳುವನೋ, ೨ ಅಥವಾ ಅಸರ್ವಜ್ಞನಾದ ಇನ್ನೊಬ್ಬನು ವಿಪರೀತವಾದ ಗತಿಸಾಮಾನ್ಯವನ್ನು ಹೇಳುವನೋ, ೧ನೇದ್ದು ಕೂಡಲಾರದು; ಸರ್ವಜ್ಞರ ಉಕ್ತಿಗಳಿಗೆ ವಿರೋಧವು ಕೂಡಲಾರದು; ವಿರೋಧವು ಕೂಡಿದರೆ ಇಬ್ಬರಿಗೆ ಸಾರ್ವಜ್ಞವೇ ಕೂಡಲಾರದು. ೨ನೇ ಕಲ್ಪದಲ್ಲಿ ಅಂದರೆ ಅಸರ್ವಜ್ಞನು ವಿಪರೀತವಾದ ಗತಿಸಾಮಾನ್ಯವನ್ನು ಹೇಳುತ್ತಾನೆ ಎನ್ನುವ ಕಲ್ಪದಲ್ಲಿ ಸರ್ವಸಮ್ಮತರಾದ, ಸರ್ವಜ್ಞರಾದ ಸೂತ್ರಕಾರರ ವಚನವಿರೋಧ ಬರುವುದರಿಂದ ಅಸರ್ವಜ್ಞನಾದ ಮತ್ತೊಬ್ಬನು ಮಿಥ್ಯಾಜ್ಞಾನವುಳ್ಳವನೆಂದಾಗಲೀ, ಪ್ರತಾರಕ (ವಂಚಕ) ನೆಂದಾಗಲೀ ಆಗುವನು. ಆದಕಾರಣ ಸೂತ್ರಕಾರ ವ್ಯತಿರಿಕ್ತರಿಗೆ ಸರ್ವವೇದಗಳ ಗತಿಸಾಮಾನ್ಯವನ್ನು ಹೇಳಲಿಕ್ಕೆ ಶಕ್ತಿಯೇ ಇಲ್ಲದಿರುವುದರಿಂದ ಸೂತ್ರಕಾರರು ಹೇಳಿದ ಗತಿಸಾಮಾನ್ಯವು ನಿರ್ಣೀತವಾಗುತ್ತದೆ. (ಹಾಗಾದರೆ ವೇದವ್ಯಾಸರು ಸರ್ವಜ್ಞರಾದುದರಿಂದ ಅವರಿಗೆ ಗತಿಸಾಮಾನ್ಯಜ್ಞಾನವಿರಲಿ. ಶಾಸ್ತ್ರವನ್ನು ಓದುವ ಜನರಿಗಾದರೂ ಸಾರ್ವಜ್ಞ್ಯವು ಇಲ್ಲದಿರುವುದರಿಂದ ಗತಿಸಾಮಾನ್ಯಜ್ಞಾನವು ಹೇಗೆಂದರೆ— ಸೂತ್ರಕ್ಕೆ ಅರ್ಥಾಂತರವನ್ನು ಹೇಳುತ್ತಾರೆ.) ಅಲ್ಪಮತಿರಪಿ ಅನ್ಯಃ=ಅಲ್ಪವಾದ ಬುದ್ಧಿಯುಳ್ಳವನಾದಾಗ್ಯೂ ಮತ್ತೊಬ್ಬನು, ತಸ್ಯ=ಆ ವೇದವ್ಯಾಸರ, ಪ್ರಸಾದತಃ = ಅನುಗ್ರಹದೆಶೆಯಿಂದ, ಶಾಖಾಚತುಷ್ಪಂಚಗತಂ=ಐದಾರು ಶಾಖೆಗಳಲ್ಲಿರತಕ್ಕ, ವಸು=ಪ್ರತಿಪಾದ್ಯವಾದ ಪದಾರ್ಥವನ್ನು, ಜಾನನ್=ತಿಳಿದವರಾಗಿ, ಅನುಮಿತತ್ವೇನ=ಗತಿಗೆ ಸಾಮ್ಯವು ಅನುಮಿತವಾಗಿರುವುದರಿಂದ, ಅನಂತಾಗಮಸಂಪದಃ = ಅಪರಿಮಿತವಾದ ಆಗಮಸಂಪತ್ತಿಗೆ, ಗತಿಸಾಮಾನ್ಯಂ = ಗತಿಗೆ ಸಾಮ್ಯವನ್ನು, ಬ್ರೂಯಾತ್ = ಹೇಳಿಯಾನು.

**ತಾ ||** ಯಾವ ಶಾಖೆಗಳನ್ನು ಉದಾಹರಿಸಿ ಸೂತ್ರಕಾರರು ಪರಮೇಶ್ವರನಲ್ಲಿ ಸಮನ್ವಯವನ್ನು ಹೇಳಿರುವರೋ ಅದನ್ನು ದೃಷ್ಟಾಂತೀಕರಿಸಿ ಶಾಖಾತ್ವರೂಪಹೇತುವಿನಿಂದ ವಿಪ್ರತಿಪನ್ನ ಶಾಖೆಗಳಿಗೂ ಪರಮೇಶ್ವರಪರತ್ವಾನುಮಿತಿಯು ಕೂಡುವುದರಿಂದ ಇತರರಿಗೂ ಕೂಡ ಗತಿ ಸಾಮಾನ್ಯಜ್ಞಾನವು ಯುಕ್ತವೇ ॥ ೨೯ ॥ ೩೦ ॥

ಹಾಗಾದರೆ ಶ್ರೋತೃಗಳಿಗೆ ತಿಳಿಸಿಕೊಡಲಿಕ್ಕೆ ಅಂಗವಾಗಿರುವುದರಿಂದ **'ಅನ್ಯೋಽಪ್ಯಲ್ಪಮತಿಃ'** ಇತ್ಯಾದಿಗಳಿಂದ ಹೇಳಲ್ಪಟ್ಟದ್ದೇ ಸೂತ್ರವ್ಯಾಖ್ಯಾನವಾಗಲಿ, ಸಂಶಯನಿರಾಸಕ್ಕೆ ಕಾರಣವಾಗದಿರುವುದರಿಂದ **'ಯದ್ಯಪ್ಯಶೇಷವೇದಾರ್ಥಃ'** ಇತ್ಯಾದಿಗಳಿಂದ ಹೇಳಲ್ಪಟ್ಟದ್ದು ಸೂತ್ರಕ್ಕೆ ವ್ಯಾಖ್ಯಾನವಾಗದೆ ಹೋಗಲಿ, ಸೂತ್ರಕಾರರು ಸರ್ವಜ್ಞರಾದುದರಿಂದ ಸರ್ವವೇದಗಳಲ್ಲಿರತಕ್ಕ ಗತಿಸಾಮಾನ್ಯವನ್ನು ತಿಳಿಯುತ್ತಾರೆ ಎನ್ನುವುದರಿಂದ ಇತರರ ಸಂಶಯವು ನಿವೃತ್ತವಾಗಲಾರದು. ಅಂದರೆ, ಅನುಮಾನದಿಂದ ಗತಿಗೆ ಸಾಮ್ಯವನ್ನು ತಿಳಿಯುವ ಪಕ್ಷವೇ ಇರಲಿ, ಸೂತ್ರಕಾರರು ಗತಿಸಾಮ್ಯಪ್ರತಿಜ್ಞೆಯನ್ನು ಮಾಡಿದ್ದು ಏಕೆಂದರೆ—

**ಮೂ ||** **ಇತಿ ಮುಖ್ಯತಯಾಶೇಷಗತಿಸಾಮಾನ್ಯವಿತ್ಪ್ರಭುಃ ॥ ೩೧ ॥**
**ಪ್ರತಿಜಜ್ಞೇ ದೃಢಂ ಯಸ್ಮಾದ್ದೇವಾನಾಮಪಿ ಪೂರ್ಯತೇ ।**
**ಅತೋ ನಿಖಿಲವೇದಾನಾಂ ಸಿದ್ಧ ಏವ ಸಮನ್ವಯಃ ॥**
**ಇತಿ ಸುಜ್ಞಾಪಿತಾರ್ಥೋಽಪಿ ಪೃಥಕ್ಪ್ರಾಹ ಸಮನ್ವಯಂ ॥ ೩೨ ॥**

**ಅ ||** ಮುಖ್ಯತಯಾ = ಅನುಮಾನಾದಿಗಳು ಹೊರತು, ಅಶೇಷಗತಿಸಾಮಾನ್ಯವಿತ್ = ಎಲ್ಲಾ ವೇದಗಳ ಗತಿಗೆ ಸಾಮ್ಯವನ್ನು ತಿಳಿದ, ಪ್ರಭುಃ = ವೇದವ್ಯಾಸರು, ಇತಿ = ಪೂರ್ವೋಕ್ತಪ್ರಕಾರವಾಗಿ, ದೃಢಂ=ನಿಶ್ಚಯ ಹೇಗೆ ಆದೀತೋ ಹಾಗೆ, ಪ್ರತಿಜಜ್ಞೇ=ಪ್ರತಿಜ್ಞಾಮಾಡಿರುತ್ತಾರೆ. ಯಸ್ಮಾತ್ = ಯಾವ ಕಾರಣದೆಸೆಯಿಂದ, ದೇವಾನಾಂ = ಉತ್ತಮಾಧಿಕಾರಿಗಳಿಗೆ, ಅಪಿ=ಶಂಕೆಯು, ನಿವಾರ್ಯತೇ=ನಿವಾರಿಸಲ್ಪಡುತ್ತದೆ. (ಅಂದರೆ ಯಾವ ಉತ್ತಮಾಧಿಕಾರಿಗಳು ಸೂತ್ರಕಾರರಿಗೆ ಪರಮಾಪ್ತತ್ವವನ್ನು ತಿಳಿಯುತ್ತಾರೋ, ಅವರಿಗೆ ಸೂತ್ರಕಾರರ ಗತಿಸಾಮಾನ್ಯ ಪ್ರತಿಜ್ಞಾಮಾತ್ರದಿಂದಲೇ ಶಂಕಾನಿವೃತ್ತವಾಗುವುದರಿಂದ ಪ್ರತಿಜ್ಞಾಮಾತ್ರವೇ ಸಾಕು. ಇತರರನ್ನು ಕುರಿತು ಅನುಮಾನವು. ಹೀಗೆ ಸೂತ್ರದ ವ್ಯಾಖ್ಯಾನಗಳೆರಡೂ ಅಧಿಕಾರಿಭೇದದಿಂದ ಯುಕ್ತವೇ. ಹಾಗಾದರೆ ಈ ಐದು ಅಧಿಕರಣಗಳಿಂದ ಹೇಳಬೇಕಾದ ಎಲ್ಲಾ ಅಂಶಗಳನ್ನು ಹೇಳಿರುವುದರಿಂದ ಅವಶಿಷ್ಟವಾದ ಅಧ್ಯಾಯಾಂಶವು ಏತಕ್ಕೆ ಎಂದು ಶಂಕಾ ಬಂದರೆ— ಅಧ್ಯಾಯ ಶೇಷಕ್ಕೂ, ಐದು ಅಧಿಕರಣಗಳಿಗೂ ಪ್ರಪಂಚ್ಯ-ಪ್ರಪಂಚನರೂಪವಾದ ಸಂಗತಿಯನ್ನು ತೋರಿಸುತ್ತಾರೆ.) ಅತಃ=ಆದ ಕಾರಣ ಅತೀತಪ್ರಬಂಧದಿಂದ, ನಿಖಿಲವೇದಾನಾಂ= ಎಲ್ಲಾ ವೇದಗಳಿಗೆ, ಏವಂ=ಹಿಂದೆ ಹೇಳಿದ ಪ್ರಕಾರ, ಸಮನ್ವಯಃ=ಸಮನ್ವಯವು, ಸಿದ್ಧಏವ= ಜ್ಞಾತವೇ ಆಗಿದೆ. ಇತಿ=ಈ ಪ್ರಕಾರ, ಸುಜ್ಞಾಪಿತಾರ್ಥೋಽಪಿ=ಚೆನ್ನಾಗಿ ತಿಳಿಸಲ್ಪಟ್ಟ ಅರ್ಥವುಳ್ಳವರಾದಾಗ್ಯೂ ವೇದವ್ಯಾಸರು, ಪೃಥಕ್=ವಿಸ್ತರವಾಗಿ, ಅಧ್ಯಾಯಶೇಷೇಣ = ಶಿಷ್ಟಾಧ್ಯಾಯದಿಂದ, ಸಮನ್ವಯಂ=ಸಮನ್ವಯವನ್ನು, ಆಹ=ಹೇಳಿದರು.

**ತಾ || ನ್ಯಾಯಸುಧಾ—** ಯಾವ ಉತ್ತಮಾಧಿಕಾರಿಗಳು ಸೂತ್ರಕಾರರಿಗೆ ಪರಮಾಪ್ತತ್ವವನ್ನು ತಿಳಿಯುತ್ತಾರೋ ಅವರಿಗೆ ಸೂತ್ರಕಾರರು ಪ್ರತಿಜ್ಞಾಮಾತ್ರ ಮಾಡಿದರಿಂದ

ಅವರ ಶಂಕೆಯು ನಿವೃತ್ತವೇ ಆಗುತ್ತದೆ. ಅವರನ್ನು ಕುರಿತು ಮೊದಲಿನ ವ್ಯಾಖ್ಯಾನವು. ಇತರರನ್ನು ಕುರಿತು ಎರಡನೇ ವ್ಯಾಖ್ಯಾನವು. ಹಾಗೆಯೇ ಭಾಷ್ಯದಲ್ಲಿ ಹೇಳಿದ್ದು 'ಗತಿಸಾಮಾನ್ಯ ಶ್ರುತೇಃ' ಎನ್ನುವುದು ಮೂರನೇ ವ್ಯಾಖ್ಯಾನವು ॥ ೩೧ ॥ ೩೨ ॥

ಅದರಲ್ಲಿ ಪ್ರಥಮಪಾದದಲ್ಲಿ ಅನ್ಯತ್ರ ಪ್ರಸಿದ್ಧಗಳಾದ ನಾಮಾತ್ಮಕ ಶಬ್ದಗಳಿಗೆ ಸಮನ್ವಯವೂ, ಎರಡನೇ ಪಾದದಲ್ಲಿ ಅನ್ಯತ್ರ ಪ್ರಸಿದ್ಧಗಳಾದ ಲಿಂಗಾತ್ಮಕ ಶಬ್ದಗಳಿಗೆ ಸಮನ್ವಯವೂ, ತೃತೀಯ ಪಾದದಲ್ಲಿ ಶ್ರೀ ಹರಿಯಲ್ಲಿಯೂ, ಇತರ ಕಡೆಗಳಲ್ಲಿಯೂ ಪ್ರಸಿದ್ಧಗಳಾದ ನಾಮಲಿಂಗಾತ್ಮಕಗಳಾದ ಶಬ್ದಗಳಿಗೆ ಸಮನ್ವಯವೂ, ನಾಲ್ಕನೇ ಪಾದದಲ್ಲಿ ಅನ್ಯತ್ರೈವ ಪ್ರಸಿದ್ಧಗಳಾದ ಶಬ್ದಗಳಿಗೆ ಸಮನ್ವಯವೂ ಎಂದು ಹೇಳಲ್ಪಟ್ಟದೆ. ಈ ಕ್ರಮವನ್ನು ಉಪಪಾದಿಸುತ್ತಾ ಹೇಳುತ್ತಾರೆ–

**ಮೂ ॥ ತತ್ರ ಪ್ರಥಮತೋಽನ್ಯತ್ರ ಪ್ರಸಿದ್ಧಾನಾಂ ಸಮನ್ವಯಃ ॥ ೩೩ ॥**
**ಶಬ್ದಾನಾಂ ವಾಚ್ಯ ಏವಾತ್ರ ಮಹಾಮಲ್ಲೇಶ ಭಂಗವತ್ ।**
**ಇತೋಽಪ್ಯ(ತ್ಯ)ಭ್ಯಧಿಕತ್ವೇಽಪಿ ತುರ್ಯಪಾದೋದಿತಸ್ಯ ತು ॥ ೩೪ ॥**

ಅ ॥ ತತ್ರ = ಪ್ರಥಮಾಧ್ಯಾಯದಲ್ಲಿ, ಪ್ರಥಮತಃ = ಪ್ರಥಮ ಪಾದದಲ್ಲಿ, ಅನ್ಯತ್ರ ಪ್ರಸಿದ್ಧಾನಾಂ = ಬೇರೆಕಡೆಗಳಲ್ಲಿ ಪ್ರಸಿದ್ಧಗಳಾದ, ಶಬ್ದಾನಾಂ = ನಾಮಾತ್ಮಕ ಶಬ್ದಗಳಿಗೆ, ಅತ್ರ = ಈ ವಿಷ್ಣುವಿನಲ್ಲಿ, ಮಹಾಮಲ್ಲೇಶಭಂಗವತ್ = ಶ್ರೇಷ್ಠರಾದ ಚಾಣೂರಾದಿ ಮಲ್ಲರ ನಾಶದಂತೆಯೇ, ಸಮನ್ವಯಃ = ಸಮನ್ವಯವು, ವಾಚ್ಯ ಏವ = ಹೇಳಲ್ಪಡತಕ್ಕದ್ದೇ. (ಅನ್ಯತ್ರ ಪ್ರಸಿದ್ಧಗಳಾದ ನಾಮಾತ್ಮಕ ಶಬ್ದಗಳಿಗೆ ಪ್ರಾಧಾನ್ಯವಿದ್ದಪ್ರಯುಕ್ತ ಪ್ರಥಮಪಾದದಲ್ಲಿ ಸಮನ್ವಯವನ್ನು ಹೇಳಿದ್ದೆಂದಾದರೆ— ಆಗ ನಾಲ್ಕನೇ ಪಾದದಲ್ಲಿ ಹೇಳಿದ ಅನ್ಯತ್ರೈವ ಪ್ರಸಿದ್ಧಗಳಾದ ಶಬ್ದಗಳ ಸಮನ್ವಯವು ಅದಕ್ಕಿಂತಲೂ ಪ್ರಧಾನವಾದುದರಿಂದ ಇದನ್ನೇ ಮೊದಲು ಹೇಳಬೇಕಿತ್ತು. ಅನ್ಯತ್ರ ಪ್ರಸಿದ್ಧಿಯಿಂದ ಅನ್ಯತ್ರೈವ ಪ್ರಸಿದ್ಧಿಯು ಪ್ರಬಲವು ಎಂದರೆ) ತುರ್ಯಪಾದೋದಿತಸ್ಯ = ನಾಲ್ಕನೇ ಪಾದದಲ್ಲಿ ಹೇಳಲ್ಪಟ್ಟ, ಸಮನ್ವಯಸ್ಯ = ಅನ್ಯತ್ರೈವ ಪ್ರಸಿದ್ಧಶಬ್ದ ಸಮನ್ವಯಕ್ಕೆ, ಇತಃ = ಇದಕ್ಕಿಂತ ಅನ್ಯತ್ರ ಪಸಿದ್ಧ ಶಬ್ದಸಮನ್ವಯಕ್ಕಿಂತ, ಅತ್ಯಭ್ಯಧಿಕತ್ವೇಽಪಿ = ಅತ್ಯಂತ ಶ್ರೇಷ್ಠತ್ವವಿದ್ದಾಗ್ಯೂ. ಅಸೌ = ಅನ್ಯತ್ರೈವ ಪ್ರಸಿದ್ಧ ಶಬ್ದಸಮನ್ವಯವು, ಅತ್ರ = ಈ ಅಧ್ಯಾಯದಲ್ಲಿ, ಪ್ರಾಥಮ್ಯೇನ = ಪ್ರಥಮತ್ವದಿಂದ, ನೈವ ಉದಿತಃ = ಹೇಳಲ್ಪಡಲೇ ಇಲ್ಲ

ಟೀ ॥ ನ್ಯಾಯಸುಧಾ— (1) ಅನೇಕ ಮಲ್ಲರು ವಿರೋಧಿಗಳಾಗಿ ಎದುರು ನಿಂತಾಗ್ಯೂ ಶ್ರೀ ಕೃಷ್ಣನು ಪ್ರಧಾನನಾದುದರಿಂದ ಚಾಣೂರಾದಿ ಮಲ್ಲರನ್ನೇ ಆದಿಯಲ್ಲಿ ಹೇಗೆ ನಾಶಪಡಿಸಿರುವನೋ, ಹಾಗೆಯೇ ಮಹಾಮಲ್ಲಭಂಗನ್ಯಾಯವನ್ನು ಇಟ್ಟುಕೊಂಡು ಉಭಯತ್ರ ಪ್ರಸಿದ್ಧ ಶಬ್ದಸಮನ್ವಯಕ್ಕಿಂತ ಅನ್ಯತ್ರ ಪ್ರಸಿದ್ಧಗಳಾದ ಶಬ್ದಗಳಿಗೇನೇ ಪ್ರಾಬಲ್ಯವಿರುವುದರಿಂದ ಪ್ರಥಮ ಪಾದದಲ್ಲಿ ಸಮನ್ವಯವನ್ನು ಹೇಳಿರುವರು. ಉಭಯತ್ರ ಪ್ರಸಿದ್ಧಗಳಾದ ಶಬ್ದಗಳಿಗೆ ಸಮನ್ವಯಮಾಡಲಿಕ್ಕೆ ಅನ್ಯತ್ರ ಪ್ರಸಿದ್ಧಿಯನ್ನು ನಿವಾರಣಮಾತ್ರ ಮಾಡುವುದರಲ್ಲಿ ಪ್ರಯತ್ನಿಸಿದರೆ ಸಾಕು. ಅನ್ಯತ್ರ ಪ್ರಸಿದ್ಧಗಳಾದ ಶಬ್ದಗಳಿಗೆ ಆದರೂ ಅನ್ಯತ್ರ ಪ್ರಸಿದ್ಧಿಯನ್ನು ನಿರಾಕರಿಸಬೇಕು. ಮತ್ತು ಶ್ರೀ ಹರಿಯಲ್ಲಿ ಪ್ರಸಿದ್ಧಿಯನ್ನು ಉಪಪಾದಿಸಬೇಕು. ಹೀಗೆ ಉಭಯತ್ರ ಪ್ರಸಿದ್ಧ ಶಬ್ದಸಮನ್ವಯಕ್ಕಿಂತ ಅನ್ಯತ್ರ ಪ್ರಸಿದ್ಧ ಶಬ್ದಸಮನ್ವಯವು ಪ್ರಬಲವು. (2) ಲಿಂಗಾತ್ಮಕಗಳು ಧರ್ಮವಚನಗಳ ವ್ಯವಧಾನವಿಲ್ಲದೆ ಅನ್ಯಬುದ್ಧಿಯನ್ನು ಹುಟ್ಟಿಸುತ್ತವೆ. ನಾಮಾತ್ಮಕ ಶಬ್ದಗಳಾದರೂ ಸಾಕ್ಷಾತ್ತಾಗಿಯೇ ಧರ್ಮಿವಾಚಕಗಳು, ಹೀಗೆ ಅವುಗಳ ಸಮನ್ವಯಕ್ಕೆ

ಪ್ರಯತ್ನ ಗೌರವವಿದೆ. ಅಥವಾ ಲಿಂಗಾತ್ಮಕ ಶಬ್ದಗಳು ಯೌಗಿಕಗಳಾಗಿರುವುದರಿಂದ ಅವುಗಳ ಸಮನ್ವಯಕ್ಕಿಂತಲೂ ರೂಢಗಳಾದ ನಾಮಾತ್ಮಕ ಶಬ್ದಗಳ ಸಮನ್ವಯವು ಶ್ರಮಸಾಧ್ಯವು. ಆದಕಾರಣ ಲಿಂಗಾತ್ಮಕ ಶಬ್ದಗಳದೆಶೆಯಿಂದ ನಾಮಾತ್ಮಕ ಶಬ್ದಗಳಿಗೆ ಪ್ರಾಧಾನ್ಯವು ॥ ೩೩ ॥ ೩೪ ॥

ಆ ಅಪವಾದವನ್ನು ತೋರಿಸುತ್ತಾರೆ—

**ಮೂ ॥ ಮಹಾಸಮನ್ವಯೇ ತಸ್ಮಿನ್ನಾಧಿಕಾರೋಽಖಿಲಸ್ಯ ಹಿ ।**
**ಬ್ರಹ್ಮೈವಾಧಿಕೃತಸ್ತತ್ರ ಮುಖ್ಯತೋಽನ್ಯೇ ಯಥಾಕ್ರಮಂ ॥**
**ದುರ್ಗಮತ್ವಾಚ್ಚ ನೈವಾತ್ರ ಪ್ರಾಥಮ್ಯೇನೋದಿತೋಽಂಜಸಾ ॥ ೩೫ ॥**

**ಅ ॥** ಮಹಾಸಮನ್ವಯೇ ತಸ್ಮಿನ್ = ಆ ಮಹತ್ತಾದ ಅನ್ಯತ್ರೈವ ಪ್ರಸಿದ್ಧವಾದ ಸಮನ್ವಯದಲ್ಲಿ, ಅಖಿಲಸ್ಯ = ಎಲ್ಲರಿಗೆ, ಅಧಿಕಾರಃ = ಅಧಿಕಾರವು, ನ ಹಿ = ಇಲ್ಲವಷ್ಟೆ. ತತ್ರ = ಆ ಮಹಾಸಮನ್ವಯದಲ್ಲಿ, ಮುಖ್ಯತಃ = ಮುಖ್ಯವಾಗಿ, ಬ್ರಹ್ಮೈವ = ಚತುರ್ಮುಖಬ್ರಹ್ಮನೇ, ಅಧಿಕೃತಃ = ಅಧಿಕಾರವುಳ್ಳವನಾಗಿದ್ದಾನೆ. ಅನ್ಯೇ = ಇತರರು, ಯಥಾಕ್ರಮಂ = ಯೋಗ್ಯತಾಕ್ರಮವನ್ನು ಅನುಸರಿಸಿ, (ಅಧಿಕೃತರಾಗಿರುತ್ತಾರೆ.) ದುರ್ಗಮತ್ವಾಚ್ಚ = (ಅನ್ಯತ್ರೈವ ಪ್ರಸಿದ್ಧ ಶಬ್ದ ಸಮನ್ವಯವು) ಪ್ರಥಮತಃ = ಬುದ್ಧಿಯಲ್ಲಿ ಆರೂಢವಾಗದಿರುವುದರಿಂದ, ಅತ್ರ = ಅಧ್ಯಾಯದಲ್ಲಿ, ಪ್ರಾಥಮ್ಯೇನ = ಪ್ರಾಥಮ್ಯದಿಂದ, ಅಂಜಸಾ = ಚೆನ್ನಾಗಿ, (ಅಸೌ = ಅನ್ಯತ್ರೈವ ಪ್ರಸಿದ್ಧ ಶಬ್ದ ಸಮನ್ವಯವು), ನೈವ ಉದಿತಃ = ಹೇಳಲ್ಪಡಲೇ ಇಲ್ಲ.

**ತಾ ॥ ನ್ಯಾಯಸುಧಾ—** (1) ಯದ್ಯಪಿ ಅನ್ಯತ್ರ ಪ್ರಸಿದ್ಧ ಸಮನ್ವಯಕ್ಕಿಂತಲೂ ಅನ್ಯತ್ರೈವ ಪ್ರಸಿದ್ಧ ಶಬ್ದ ಸಮನ್ವಯವು ಪ್ರಬಲವು. ಆದರೂ ಆ ಸಮನ್ವಯದಲ್ಲಿ ಬ್ರಹ್ಮಾದಿಗಳಿಗೇನೇ ಮುಖ್ಯಾಧಿಕಾರವಿರುವುದು ಅಸ್ಮದಾದಿಗಳಿಗೆ ಅನ್ಯತ್ರೈವ ಪ್ರಸಿದ್ಧ ಶಬ್ದ ಸಮನ್ವಯವು ಪ್ರಥಮತಃ ಬುದ್ಧಿಯಲ್ಲಿ ಆರೂಢವಾಗಲಿಕ್ಕಿಲ್ಲ, ಸಾಧಾರಣ ಸಮನ್ವಯಜ್ಞಾನದಿಂದ ವೈದಿಕ ವ್ಯುತ್ಪತ್ತಿಯಿಂದ ಅನುರಕ್ತವಾದ ಬುದ್ಧಿಯು ಕ್ರಮವಾಗಿ ಮುಂದರಿಗೂ ಉಂಟಾಗುತ್ತದೆ. ಆದುದರಿಂದ ಅನ್ಯತ್ರೈವ ಪ್ರಸಿದ್ಧ ಶಬ್ದ ಸಮನ್ವಯವನ್ನು ನಾಲ್ಕನೇ ಪಾದದಲ್ಲಿ ಹೇಳಿರುತ್ತಾರೆ ॥ ೩೫ ॥

**ಮೂ ॥ ಅತೋಽನ್ಯತ್ರ ಪ್ರಸಿದ್ಧಾನಾಂ ಶಬ್ದಾನಾಂ ನಿರ್ಣಯಾಯ ತು ॥ ೩೬ ॥**
**ಪ್ರವೃತ್ತಃ ಪ್ರಥಮಂ ದೇವಃ ತತ್ರಾನಂದಾದಯೋ ಗುಣಾಃ ।**
**ಈಶಸ್ಯೈವೇತಿ ನಿರ್ಣೀತಾಃ ಶ್ರುತಿಯುಕ್ತಿಸಮಾಶ್ರಯಾತ್ ॥ ೩೭ ॥**

**ಅ ॥** ಅತಃ = ಪ್ರಾಧಾನ್ಯವಿದ್ದುದರಿಂದಲೂ, ಅನ್ಯತ್ರಪ್ರಸಿದ್ಧಾನಾಂ = ಬೇರೆ ಕಡೆಗಳಲ್ಲಿ ಪ್ರಸಿದ್ಧಗಳಾದ, ಶಬ್ದಾನಾಂ = ಶಬ್ದಗಳ, ನಿರ್ಣಯಾಯ ತು = ನಿರ್ಣಯಕ್ಕಾಗಿಯೇ, ಪ್ರಥಮಂ = ಪ್ರಥಮದಲ್ಲಿ, ದೇವಃ = ವೇದವ್ಯಾಸದೇವರು, ಪ್ರವೃತ್ತಃ = ಪ್ರವೃತ್ತರಾಗಿರುತ್ತಾರೆ, (ಅದರ ಮಧ್ಯದಲ್ಲಿ ಆನಂದಮಯಾಧಿಕರಣಕ್ಕೆ ಪ್ರಾಥಮ್ಯದಲ್ಲಿ ಹೇತುವನ್ನು ಸೂಚಿಸುತ್ತಾರೆ.) ತತ್ರ = ಸಮನ್ವಯವನ್ನು ವಿಸ್ತರಿಸುವುದರಲ್ಲಿ, ಪ್ರಥಮಂ = ಮೊದಲು, ಶ್ರುತಿಯುಕ್ತಿಸಮಾಶ್ರಯಾತ್ = ವೇದಗಳು ಯುಕ್ತಿಗಳು ಇವುಗಳನ್ನು ಚೆನ್ನಾಗಿ ಆಶ್ರಯಿಸಿಕೊಂಡು, ಆನಂದಾದಯಃ = ಆನಂದ ಮೊದಲಾದ, ಗುಣಾಃ = ಗುಣಗಳು, ಈಶಸ್ಯೈವ = ಶ್ರೀ ಹರಿಗೇನೇ, ಇತಿ = ಎಂದು, ನಿರ್ಣೀತಾಃ = ನಿಶ್ಚಯಿಸಿಕೊಳ್ಳಲ್ಪಟ್ಟವೆ.

ತಾ || ಎಲ್ಲಾ ಶುಭಗುಣಗಳಲ್ಲಿ, ಆನಂದ ವಿಜ್ಞಾನವೊದಲಾದುವುಗಳು ಶ್ರೇಷ್ಠಗಳು. ಆದಕಾರಣ ಮಾಂಗಲಿಕರಾದ ಆಚಾರ್ಯರು, ಆನಂದಶಬ್ದದ ಸಮನ್ವಯವನ್ನು ಮೊದಲು ಹೇಳಿರುವರು || ೩೬ || ೩೭ ||

ಅಂತರಾಧಿಕರಣಕ್ಕೂ, ಆಕಾಶಾಧಿಕರಣಕ್ಕೂ ಆನಂದಮಯಾಧಿಕರಣದಿಂದ ಸಂಗತಿಯು ಸಮಾನವಾಗಿದ್ದರೂ ಈ ಅಂತರಾಧಿಕರಣಕ್ಕೆ ಆಕಾಶಾಧಿಕರಣದಿಂದ ಪ್ರಾಥಮ್ಯವು ಹೇಗೆಂದರೆ, ಆ ವಿಷಯದಲ್ಲಿ ಹೇತುವನ್ನು ಸೂಚಿಸುತ್ತಾ ಅಧಿಕರಣದ ತಾತ್ಪರ್ಯವನ್ನು ಹೇಳುತ್ತಾರೆ—

**ಮೂ || ದೇವತಾಂತರಗಾಃ ಸರ್ವೇ ಶಬ್ದವೃತ್ತಿನಿಮಿತ್ತತಃ |**
**ವಿಷ್ಣುಮೇವ ವದಂತ್ಯದ್ಧಾ ತತ್ಸಂಗಾದುಪಚಾರತಃ || ೩೮ ||**
**ಅನ್ಯದೇವಾನ್ವದಂತೀಹ ವಿಶೇಷಗುಣವತ್ವತಃ |**
**ವಿಷ್ಣುಮೇವ ಪರಂ ಬ್ರೂಯುರೇವಮನ್ಯೇಽಪ್ಯಶೇಷತಃ || ೩೯ ||**

ಅ || ದೇವತಾಂತರಗಾಃ=ಇತರ ದೇವತೆಗಳಲ್ಲಿ ಇರತಕ್ಕ, ಸರ್ವೇ=ಇಂದ್ರಶಬ್ದವೇ ಮೊದಲಾದ ಎಲ್ಲಾ ಶಬ್ದಗಳು, ಶಬ್ದವೃತ್ತಿನಿಮಿತ್ತತಃ=ಶಬ್ದವೃತ್ತಿಗಳಾದ ಯೋಗರೂಢಿಗಳಿಗೆ ಕಾರಣಗಳಾದ ಬಹುಲಪ್ರಯೋಗಾದಿಗಳು ಶ್ರೀ ಹರಿಯಲ್ಲಿ ಇದ್ದುದರಿಂದ, ಅದ್ಧಾ=ಶಕ್ತಿವೃತ್ತಿಯಿಂದಲೇ, ವಿಷ್ಣುಮೇವ=ಶ್ರೀ ಹರಿಯನ್ನೇ, ವದಂತಿ=ಹೇಳುತ್ತವೆ. (ಹಾಗಾದರೆ ಇಂದ್ರ ರುದ್ರಾದಿಗಳಲ್ಲಿ ಶಬ್ದಗಳಿಗೆ ಶಕ್ತಿವೃತ್ತಿಯೋ ಇಲ್ಲವೋ ಏನು? ವಿಷ್ಣುವನ್ನೇ ಪ್ರತಿಪಾದಿಸುತ್ತವೆ ಎಂದು ನಿರ್ಧಾರಣವು ಹೇಗೆ ಎಂದರೆ) ತತ್ಸಂಗಾತ್=ಆ ಶ್ರೀ ಹರಿಯ ಸಮ್ಬಂಧದಿಂದ, ಉಪಚಾರತಃ=ಅಮುಖ್ಯವೃತ್ತಿಯಿಂದ, ಅನ್ಯದೇವಾನ್=ಇತರ ದೇವತೆಗಳನ್ನು (ಇಂದ್ರಾದಿ ಶಬ್ದಗಳು) ವದಂತಿ=ಹೇಳುತ್ತವೆ. (ಪರಮ ಮುಖ್ಯ ವೃತ್ತಿಯಿಂದ ಅಲ್ಲ.) ವಿಶೇಷಗುಣವತ್ವತಃ=ಪೂರ್ಣತ್ವ ಸ್ವತಂತ್ರ ಮೊದಲಾದ ವಿಶೇಷ ಗುಣಗಳು ಇದ್ದುದರಿಂದ, ವಿಷ್ಣುಮೇವ=ಶ್ರೀ ಪರಮಾತ್ಮನನ್ನೇ, ಪರಂ=ಸರ್ವೋತ್ತಮನನ್ನಾಗಿ, ಬ್ರೂಯುಃ=ಹೇಳುತ್ತವೆ. ಇಹ=ದೇವತಾಂತರದಲ್ಲಿ, (ಹಾಗಲ್ಲ) (ಉತ್ತರಾಧಿಕರಣಗಳಲ್ಲಿಯೂ ಹೀಗೆಯೇ ಕ್ರಮ ನಿಮಿತ್ತಾದಿಗಳನ್ನು ತಾನೇ ಊಹಿಸಬೇಕು ಎನ್ನುತ್ತಾರೆ.) ಏವಂ=ಹೀಗೆಯೇ, ಅಶೇಷತಃ=ಎಲ್ಲಾ, ಅನ್ಯೇಽಪಿ=ಬೇರೆ ಶಬ್ದಗಳೂ ಕೂಡ, ವಿಷ್ಣುಮೇವ=ಶ್ರೀಹರಿಯನ್ನೇ, ಪರಂ ಮುಖ್ಯನನ್ನಾಗಿ, ಬ್ರೂಯುಃ=ಹೇಳುತ್ತವೆ.

ತಾ || **ನ್ಯಾಯಸುಧಾ—** (1) ದೇವತೆಗಳು ಜಡಪದಾರ್ಥಗಳದೆಸೆಯಿಂದ ಪ್ರಧಾನರು, ಆದಕಾರಣ, ಆ ದೇವತೆಗಳನ್ನು ಪ್ರತಿಪಾದಿಸತಕ್ಕ ಶಬ್ದಗಳಿಗೆ, ಆಕಾಶ ಮೊದಲಾದ ಜಡಪದಾರ್ಥಗಳನ್ನು ಹೇಳತಕ್ಕ ಶಬ್ದಗಳ ದೆಸೆಯಿಂದ ಉತ್ಕರ್ಷವು, (2) ಇಂದ್ರಾದಿ ಶಬ್ದಗಳು, ಪರಮೈಶ್ವರ್ಯ ಮೊದಲಾದ ಗುಣಗಳನ್ನು ಹೇಳುತ್ತವೆ. ಆ ಗುಣಗಳು, ಶ್ರೀ ಹರೀಗೇನೇ ಅಸಾಧಾರಗಳು. ಆದಕಾರಣ ಶ್ರೀಹರಿಯನ್ನೇ ಮುಖ್ಯನನ್ನಾಗಿ ಹೇಳುತ್ತವೆ || ೩೮ || || ೩೯ ||

**ಸ. ರ. ವಿ—** ಪ್ರಥಮ ಪಾದದಿಂದ ಸಂಗತಿಯನ್ನು ಹೇಳುತ್ತಾ ಎರಡನೇ ಪಾದದ ಅರ್ಥವನ್ನು ಹೇಳುತ್ತಾರೆ.

**ನ್ಯಾಯಸುಧಾ—** ಅನ್ಯತ್ರ ಪ್ರಸಿದ್ಧಗಳಾದ ನಾಮಾತ್ಮಕ ಶಬ್ದಗಳು ಅನಂತಗಳಾದುದರಿಂದ ಪಾದಸಮಾಪ್ತಿಯು ಹೇಗೆ ಎನ್ನುವ ಆ ಶಂಕೆಯನ್ನು ನಿರಾಕರಿಸುತ್ತಾ ಪ್ರಥಮಪಾದಾರ್ಥವನ್ನು ಅನುವಾದ ಮಾಡಿ ಎರಡನೇ ಪಾದಕ್ಕೆ ಸಂಗತಿಯನ್ನು ಹೇಳುತ್ತಾರೆ—

ಮೂ || ಇತ್ಯನ್ಯತ್ರ ಪ್ರಸಿದ್ಧೋರುಶಬ್ದರಾಶೇರಶೇಷತಃ |
ಜ್ಞಾತೇ ಸಮನ್ವಯೇ ವಿಷ್ಣೌ ಲಿಂಗೈರ್ಹ್ಯೇಷ ಸಮನ್ವಯಃ || ೪೦ ||
ತೇಷಾಮನ್ಯಗತತ್ವೇ ತು ನ ಸ್ಯಾತ್ಸಮ್ಯಕ್ ಸಮನ್ವಯಃ |
ಇತ್ಯೇವಾಶೇಷಲಿಂಗಾನಾಂ ಬ್ರಹ್ಮಣ್ಯೇವ ಸಮನ್ವಯಂ || ೪೧ ||
ಆಹೋಭಯಗತತ್ವಂ ಚ ಸ್ಯಾದತೋ ಲಿಂಗಶಬ್ದಯೋಃ |
ಇತಿ ಸಂಶಯನುತ್ತ್ಯರ್ಥಮುಭಯತ್ರ ಪ್ರತೀತಿತಃ || ೪೨ ||
ಶಬ್ದಾನಾಂ ವರ್ತಮಾನಾನಾಂ ಸಲಿಂಗಾನಾಂ ವಿಶೇಷತಃ |
ಸಮನ್ವಯೋ ಹರಾವೇವ ಯನ್ನೈವಾನ್ಯತ್ರ ಮುಖ್ಯತಃ |
ಶಬ್ದಾಲಿಂಗಾನಿ ಚ ಯತೋ ನೈವಾನ್ಯತ್ರ ಸ್ವತಂತ್ರತಾ || ೪೩ ||

ಅ || ಇತಿ=ಹೀಗೆ, ಅನ್ಯತ್ರ=ಬೇರೆ ಕಡೆಗಳಲ್ಲಿ, ಪ್ರಸಿದ್ಧೋರುಶಬ್ದರಾಶೇಃ=ಪ್ರಸಿದ್ಧಗಳಾದ ಉತ್ಕೃಷ್ಟಗಳಾದ ಶಬ್ದಗಳ ಸಮೂಹಕ್ಕೆ, ಅಶೇಷತಃ = ಸಾಕಲ್ಯವಾಗಿ, ವಿಷ್ಣೌ=ಶ್ರೀ ಹರಿಯಲ್ಲಿ, ಸಮನ್ವಯೇ=ಶಕ್ತಿತಾತ್ಪರ್ಯ ವಿಷಯತ್ವವು, ಜ್ಞಾತೇ ಸತಿ=(ಪ್ರಥಮ ಪಾದದಿಂದ) ತಿಳಿಯಲ್ಪಡುತ್ತಿರಲು (ಶಂಕೆಯು ಹುಟ್ಟುತ್ತದೆ. ಹೇಗೆಂದರೆ—) ಲಿಂಗೈಃ ಹಿ=ಪ್ರಾಯಶಃ ಲಿಂಗ ಬಲದಿಂದಲೇ, ಏಷ ಸಮನ್ವಯಃ=ಈ ನಾಮಾತ್ಮಕವಾದ ಶಬ್ದಸಮನ್ವಯವು, (ಹೇಳಲ್ಪಟ್ಟದೆ.) ತೇಷಾಂ ಚ=ಆ ಲಿಂಗಗಳಿಗಾದರೂ, ಅನ್ಯಗತತ್ವೇ ತು=ಅನ್ಯತ್ರ ಇರುವಿಕೆಯು ಪ್ರತೀತವಾದರೆ, (ವಿರುದ್ಧವಾದಪ್ರಯುಕ್ತ ಅವುಗಳಿಂದ ಪ್ರತೀತವಾದ) ಸಮನ್ವಯಃ=ನಾಮ ಸಮನ್ವಯವು, ಸಮ್ಯಕ್=ಚೆನ್ನಾಗಿ, ನ ಸ್ಯಾತ್ ಏವ=ಸರ್ವಥಾ ಆಗಲಾರದು. (ಏತಕ್ಕೆಂದರೆ— ಕೃತಕತ್ವದಿಂದ ನಿತ್ಯತ್ವಜ್ಞಾನವು ಚೆನ್ನಾಗಿ ಹುಟ್ಟಲಾರದಷ್ಟೆ.) ಇತಿ = ಈ ಕಾರಣದಿಂದ (ಅಂದರೆ—(ನ. ಚ. ವಿ.) ನಾಮಾತ್ಮಕ ಶಬ್ದಗಳಿಗೆ ಲಿಂಗಗಳಿಂದ ವಿಷ್ಣುವಿನಲ್ಲಿ ಸಮನ್ವಯವನ್ನು ಸಾಧಿಸಿದಾಗ್ಯೂ ಆ ನಾಮಾತ್ಮಕ ಶಬ್ದಗಳಿಂದ ಸಹ ಪಠಿತಗಳಾದ ಲಿಂಗಗಳು ಇತರ ವಿಷಯಕಗಳಾದರೆ, ನಾಮಾತ್ಮಕಶಬ್ದಗಳಿಗೂ ಚೆನ್ನಾಗಿ ಸಮನ್ವಯವು ಆಗದೆ ಹೋಗುವುದು.) (ಅದನ್ನು ಪರಿಹರಿಸುವುದಕ್ಕಾಗಿ ಅನ್ಯತ್ರ ಪ್ರಸಿದ್ಧಗಳಾದ) ಅಶೇಷಲಿಂಗಾನಾಂ = ಎಲ್ಲಾ ಲಿಂಗಗಳಿಗೆ, ಬ್ರಹ್ಮಣ್ಯೇವ=ಶ್ರೀ ಹರಿಯಲ್ಲಿಯೇ, ಸಮನ್ವಯಂ=ಸಮನ್ವಯವನ್ನು, ಆಹ=(ಎರಡನೇ ಪಾದದಲ್ಲಿ) ಹೇಳಿರುತ್ತಾರೆ. (ಎರಡನೇ ಪಾದದಿಂದ ಸಂಗತಿಯಿದ್ದುದರಿಂದ ಮೂರನೇ ಪಾದದ ಅರ್ಥವನ್ನು ಹೇಳುತ್ತಾರೆ.) (ಅಥವಾ ಮೂರನೇ ಪಾದಕ್ಕೆ- ೧ನೇ ಪಾದ, ೨ನೇ ಪಾದಗಳಿಂದ ಸಂಗತಿಯನ್ನು ಹೇಳುತ್ತಾರೆ.) ಅತಃ=ಅನ್ಯತ್ರ ಪ್ರಸಿದ್ಧಗಳಾದ ಶಬ್ದಗಳಿಗೆ ಭಗವತ್ಪರತ್ವವನ್ನು ಸಮರ್ಥಿಸಿದ ರಿಂದ, ಲಿಂಗಶಬ್ದಯೋಃ=ಲಿಂಗಾತ್ಮಕ ಶಬ್ದಗಳಿಗೂ, ನಾಮಾತ್ಮಕ ಶಬ್ದಗಳಿಗೂ, ಉಭಯಗತತ್ವಂ ಚ=ಶ್ರೀ ಹರಿಯು, ಶ್ರೀ ಹರಿಯಿಂದ ಇತರರಾದ ರುದ್ರಾದಿಗಳೂ ಹೀಗೆ ಉಭಯವಿಷಯತ್ವವೂ, ಸ್ಯಾತ್=ಆಗುವುದು. (ಯಾವ ಶಬ್ದಗಳಿಗೆ ಅನ್ಯಪರತ್ವದಲ್ಲಿ ಅನುಪಪತ್ಯಾದಿಗಳು ಇವೆಯೋ ಅವುಗಳನ್ನು ಬಿಟ್ಟು ಬೇರೆ ಕಡೆಗಳಲ್ಲಿ ಉಭಯಗತತ್ವವು ಶಂಕಾಸ್ಪದವೇ ಆಗುವುದು, ಎಂದು ಹೇಳಿದ್ದು ಯುಕ್ತವೇ ಆಗುವುದು. 'ತಥಾಚ ತತ್ತು' ಎನ್ನುವ ಅವಧಾರಣವೇ ಕೂಡಲಾರದು.) ಇತಿ ಸಂಶಯನುತ್ತ್ಯರ್ಥಂ = ಹೀಗೆ ಆಶಂಕೆಯನ್ನು ಹೋಗಲಾಡಿಸುವುದಕ್ಕಾಗಿ, (ಮೂರನೇ ಪಾದವನ್ನು ಆರಂಭಿಸಿದರು) ಇತಿ=ಹೀಗೆ, ಆಹ=ಹೇಳಿದರು. (ಈ ಆಶಂಕೆಯು ಮೂರನೇ ಪಾದದಲ್ಲಿ ಹೇಗೆ ಪರಿಹೃತವಾಗಿದೆ ಎಂದರೆ ತಾತ್ಪರ್ಯವನ್ನು ಹೇಳುತ್ತಾರೆ.)

ಉಭಯತ್ರ=ಶ್ರೀಹರಿಯಲ್ಲಿಯೂ, ಶ್ರೀ ಹರಿಯಿಂದ ಇತರರಲ್ಲಿಯೂ, ಪ್ರತೀತಿತಃ=ಪ್ರತೀತಿಯಿದ್ದ ಪ್ರಯುಕ್ತ, (ವಸ್ತುತಃ ಅಲ್ಲ) ವರ್ತಮಾನಾನಾಂ = ಇರತಕ್ಕ, ಸಲಿಂಗಾನಾಂ=ಲಿಂಗಗಳಿಂದ ಸಹಿತಗಳಾದ, ಶಬ್ದಾನಾಂ = ನಾಮಾತ್ಮಕ ಶಬ್ದಗಳಿಗೂ, ಲಿಂಗಾತ್ಮಕ ಶಬ್ದಗಳಿಗೂ, ಹರಾವೇವ=ಶ್ರೀ ಹರಿಯಲ್ಲಿಯೇ, ವಿಶೇಷತಃ=ಪರಮಮುಖ್ಯವೃತ್ತಿಯಿಂದಲೂ, ತಾತ್ಪರ್ಯ ದಿಂದಲೂ, ಸಮನ್ವಯಃ=ಶಕ್ತಿತಾತ್ಪರ್ಯಲಕ್ಷಣಾನ್ಯತರಸಂಬಂಧವು. (ಏಕೆಂದರೆ) ಯತ್= ಯಾವ ಕಾರಣದೆಶೆಯಿಂದ, ಅನ್ಯತ್ರ=ಬೇರೆ ಕಡೆಗಳಲ್ಲಿ, ಮುಖ್ಯತಃ = ಪರಮಮುಖ್ಯವೃತ್ತಿ ಯಿಂದ, ಶಬ್ದಾಃ=ಶಬ್ದಗಳೂ, ಲಿಂಗಾನಿ ಚ=ಲಿಂಗಗಳೂ ಕೂಡ, ನೈವ ವರ್ತಂತೇ=ಇರು ವುದೇ ಇಲ್ಲವೋ, (ಇದೂ ಕೂಡ ಯಾವ ಕಾರಣದಿಂದ ಎಂದರೆ) ಯತಃ=ಯಾವ ಕಾರಣದೆಶೆ ಯಿಂದ, ಅನ್ಯತ್ರ=ರುದ್ರಾದಿಗಳಲ್ಲಿ, ಸ್ವತಂತ್ರತಾ = ಸ್ವಾತಂತ್ರ್ಯವು, ನೈವ ಅಸ್ತಿ=ಇರುವುದೇ ಇಲ್ಲವೋ, (ಆದಕಾರಣ ಶ್ರೀ ಹರಿಯೇ ಸರ್ವ ಸ್ವತಂತ್ರನು. ಆತನಲ್ಲಿಯೇ ಸರ್ವ ಶಬ್ದಗಳೂ ಪರಮಮುಖ್ಯವೃತ್ತಿಯಿಂದ ಇರುತ್ತವೆ.) ॥ ೪೦ ॥ ೪೧ ॥ ೪೨ ॥ ೪೩ ॥

ಸ್ವಾತಂತ್ರ್ಯವಿಲ್ಲದಿದ್ದರೂ ಬೇರೆ ಕಡೆಗಳಲ್ಲಿ ಶಬ್ದಗಳಿಗೆ ಮುಖ್ಯವೃತ್ತ್ಯಭಾವವು ಯಾವುದ ರಿಂದ ಎಂದರೆ—

**ಮೂ ॥ ಅಸ್ವತಂತ್ರೇಷು ಶಬ್ದಸ್ಯ ವೃತ್ತಿಹೇತುರ್ನ ಮುಖ್ಯತಃ ॥ ೪೪ ॥**
**ಯತೋಽತೋ ಯದಧೀನಾಸ್ತೇ ಶಬ್ದಾರ್ಥತ್ವಮುಪಾಗತಾಃ ।**
**ಅತ್ಯಲ್ಪೇನೈವ ಶಬ್ದಸ್ಯ ವೃತ್ತಿಹೇತುಗುಣೇನ ತು ॥ ೪೫ ॥**
**ಅಯೋ ಯಥಾ ದಾಹಕತ್ವಂ ಸ ಏವೆ ಶಃ ಸ್ವತಂತ್ರತಃ ।**
**ಮುಖ್ಯಶಬ್ದಾರ್ಥ ಇತಿ ಹಿ ಸ್ವೀಕರ್ತವ್ಯೋ ಮನೀಷಿಭಿಃ ।**
**ಇತ್ಯಾಹ [ಏವಂ ಚ ಶಬ್ದಾನಾಂ ನಾರಾಯಣಸಮನ್ವಯೇ] ॥ ೪೬ ॥**

**ಅ ॥** ಅಸ್ವತಂತ್ರೇಷು=ಸ್ವತಂತ್ರರಾಗದಿದ್ದವರಲ್ಲಿ, ಶಬ್ದಸ್ಯ=ಶಬ್ದಕ್ಕೆ, ವೃತ್ತಿಹೇತುಃ= ಇರಲಿಕ್ಕೆ ಕಾರಣವು, ಮುಖ್ಯತಃ=ಮುಖ್ಯವಾಗಿ, ಯತಃ=ಯಾವ ಕಾರಣದಿಂದ, ನ=ಅಲ್ಲವೋ, (ಹಾಗಾದರೆ, ಇತರರು ಅಸ್ವತಂತ್ರರಾದಪ್ರಯುಕ್ತ, ಅವರಲ್ಲಿ ಮುಖ್ಯವಾಗಿ ಶಬ್ದಗಳ ಪ್ರವೃತ್ತಿಗೆ ಕಾರಣೀಭೂತಗಳಾದ ಗುಣಾದಿಗಳು ಇಲ್ಲದಿರುವುದರಿಂದ ಪರಮಮುಖ್ಯವೃತ್ತಿಯಿಂದ ಶಬ್ದಗಳು ಇರುವುದಿಲ್ಲವೆಂದರೆ— ಇರುವುದು ಬೇಡ ಆದಾಗ್ಯೂ ವಿಶೇಷವಾಗಿ ಸಮನ್ವಯವು ಶ್ರೀ ಹರಿ ಯಲ್ಲಿಯೇ ಎನ್ನುವುದು ಯಾವುದರಿಂದ ಸಿದ್ಧವಾಗುತ್ತದೆ ಎಂದರೆ—) ಅತಃ=ಇತರರಿಗೆ ಮುಖ್ಯಾ ರ್ಥತ್ವವಿಲ್ಲದಿರುವುದರಿಂದ, (ಶ್ರೀ ಹರಿಯೇ ಮುಖ್ಯಾರ್ಥನು.) (ಅಂದರೆ ಶಬ್ದಗಳಿಗೆ ಮುಖ್ಯಾ ರ್ಥತ್ವವು ಆವಶ್ಯಕವೇ ಇಲ್ಲದಿದ್ದರೆ ಮುಖ್ಯಾರ್ಥವನ್ನು ಅಪೇಕ್ಷಿಸಿಕೊಂಡು ಇರುವ ಅಮುಖ್ಯಾ ರ್ಥವೂ ಅನುಪಪನ್ನವಾಗುತ್ತದೆ. ಅಂತೂ ಪ್ರಸಕ್ತಗಳಾದ ಎರಡರಲ್ಲಿ ಒಂದಕ್ಕೆ ಮುಖ್ಯಾರ್ಥತ್ವವು ಕೂಡದಿರಲು ಮತ್ತೊಂದಕ್ಕೆ ಮುಖ್ಯಾರ್ಥತ್ವವು ಆವಶ್ಯಕವೇ.) ('ಯದಧೀನಾಃ' ಇತ್ಯಾದಿ ಗಳಿಂದ ಯುಕ್ತ್ಯಂತರವನ್ನು ಹೇಳುತ್ತಾರೆ.) ತೇ=ಭಗವಂತನಿಂದ ಇತರ ಪದಾರ್ಥಗಳು, (ಶ್ರೀ ಹರಿಯನ್ನಪೇಕ್ಷಿಸಿ,) ಅತ್ಯಲ್ಪೇನೈವ = ಅತ್ಯಲ್ಪವೇ ಆದ, ಶಬ್ದಸ್ಯ ವೃತ್ತಿಹೇತುಗುಣೇನ= ಶಬ್ದಗಳ ಪ್ರವೃತ್ತಿಗೆ ಕಾರಣಗಳಾದ ಗುಣಾದಿಗಳಿಂದ, ಯದಧೀನಾಃ=ಯಾವ ಶ್ರೀಹರಿಯಲ್ಲಿಯೇ ಅಧೀನಗಳಾಗಿ, ಶಬ್ದಾರ್ಥತ್ವಂ=ಶಬ್ದಾರ್ಥತ್ವವನ್ನು, ಉಪಾಗತಾಃ = ಹೊಂದಿರುತ್ತಾವೋ, (ಯಾವ ಶಬ್ದಾರ್ಥವು ಯಾರ ಅಧೀನವೋ ಅದು ಅಮುಖ್ಯವು. ಇತರವಾದುದು ಮುಖ್ಯವು.

ಎನ್ನುವಲ್ಲಿ ದೃಷ್ಟಾಂತವು.) ಅಯಃ=ಕಬ್ಬಿಣವು, ಯಥಾ=ಹೇಗೆ, (ಅಗ್ನಿಯು ಅಧೀನವಾದುದಾಗಿ) ದಾಹಕತ್ವಂ=ದಾಹಕಶಬ್ದಾರ್ಥತ್ವವನ್ನು, ಉಪಾಗತಂ=ಹೊಂದಿರುತ್ತದೋ, (ಆದುದರಿಂದಲೇ ದಹತಿ=ಸುಡುತ್ತದೆ ಎನ್ನುವ ಶಬ್ದವು ಕಬ್ಬಿಣದಲ್ಲಿ ಅಮುಖ್ಯವು, ಅಗ್ನಿಯಲ್ಲಿ ಆದರೂ ಮುಖ್ಯವೋ, ಹಾಗೆಯೇ) ಸ ಏವ=ಆ ಶ್ರೀ ಹರಿಯೇ, ಈಶಃ=ನಿರವಧಿಕ ಶಬ್ದಪ್ರವೃತ್ತಿನಿಮಿತ್ತ ವುಳ್ಳವನು. ಸ್ವತಂತ್ರತಃ=ಸ್ವಾತಂತ್ರ್ಯವಿದ್ದ ಪ್ರಯುಕ್ತ, ಮುಖ್ಯಶಬ್ದಾರ್ಥ ಇತಿ ಹಿ=ಮುಖ್ಯ ಶಬ್ದಾರ್ಥವೆಂತೆಂದು, ಮನೀಷಿಭಿಃ=ಶ್ರುತ್ಯಾದಿಪರಿಚಯವುಳ್ಳವರಿಂದ, ಸ್ವೀಕರ್ತವ್ಯಃ=ಸ್ವೀಕರಿಸ ತಕ್ಕದು. ಇತಿ=ಹೀಗೆ, (ಮೂರನೇ ಪಾದದಿಂದ) ಆಹ=ಹೇಳುತ್ತಾರೆ. (ಅಂತೂ ಇತರರಲ್ಲಿ ಶಬ್ದಪ್ರವೃತ್ತಿನಿಮಿತ್ತಗಳು ಅಲ್ಪಗಳೇ. ಅವುಗಳೂ ಭಗವಂತನ ಅಧೀನಗಳು. ಶ್ರೀ ಹರಿಯಲ್ಲಿ ಆದರೂ ನಿರವಧಿಕಗಳು. ಅಪರಾಧೀನಗಳೂ ಆಗಿವೆ.) ॥ ೪೪ ॥ ೪೫ ॥ ೪೬ ॥

ಆಶಂಕೆಯನ್ನು ಪರಿಹರಿಸಿಕೊಂಡು, ಸಮನ್ವಯವನ್ನು ಪ್ರತಿಪಾದಿಸಿ ನಾಲ್ಕನೇ ಪಾದಕ್ಕೆ ಸಂಗತಿಯನ್ನು ಹೇಳುತ್ತಾರೆ—

**ಮೂ ॥ [ಇತ್ಯಾಹ] ಏವಂ ಚ ಶಬ್ದಾನಾಂ ನಾರಾಯಣ ಸಮನ್ವಯೇ ।**
**ಸಿದ್ಧೇಽಪ್ಯಶೇಷಶಬ್ದಾನಾಂ ನ ಕಥಂಚನ ಯುಜ್ಯತೇ ॥ ೪೭ ॥**
**ವಿರೋಧಾದವರತ್ವಾದೇರಪಿ ಪ್ರಾಪ್ತಿರ್ಯತೋ ಭವೇತ್ ।**
**ಇತಿ ಚೇದವರತ್ವಾದಿ ದ್ವಿವಿಧಂ ಹ್ಯುಪಲಭ್ಯತೇ ॥ ೪೮ ॥**
**ಪರಸ್ಯಾವರತಾಹೇತುರ್ಯಃ ಸ್ವಯಂ ಪರ ಏವ ಸನ್ ।**
**ಸೋಽಪಿ ಹ್ಯವರಶಬ್ದಾರ್ಥೋ ಯಥಾ ರಾಜಾ ಜಯೀ ಭವೇತ್ ॥ ೪೯ ॥**
**ಅನ್ಯೋಽವರತ್ವಾನುಭವೀ ತಯೋಃ ಪೂರ್ವೋಽಸ್ತಿ ಕೇಶವೇ ।**
**ದ್ವಿತೀಯೋ ಜೀವ ಏವಾಸ್ತಿ ಸ್ವಾತಂತ್ರ್ಯೈನೈವ (ನ್ನ ಚ) ದೂಷಣಂ ॥೫೦॥**
**ಹರೇರೇವಮಶೇಷೇಣ ಸರ್ವಶಬ್ದ ಸಮನ್ವಯೇ ।**
**ಉಕ್ತೇ ವಿರೋಧಹೀನಸ್ಯಸ್ಯಾತ್ಸಮನ್ವಯತಾ ಯತಃ ।**
**ಅತೋಽಶೇಷವಿರೋಧಾನಾಂ ಕೃತೇಶೇನ ನಿರಾಕೃತಿಃ ॥ ೫೧ ॥**

**ಅ ॥** ಏವಂ = ಹೀಗೆ, ಹಿಂದಿನ ೧. ೨. ೩ನೇ ಪಾದಗಳಿಂದ, ಶಬ್ದಾನಾಂ = ಕೆಲವು ಶಬ್ದಗಳಿಗೆ, ನಾರಾಯಣಸಮನ್ವಯೇ ಸಿದ್ಧೇಽಪಿ = ನಾರಾಯಣನಲ್ಲಿ ಸಮನ್ವಯವು ಸಿದ್ಧವಾದಾಗ್ಯೂ, ಅಶೇಷಶಬ್ದಾನಾಂ = ಎಲ್ಲಾ ಶಬ್ದಗಳಿಗೆ, (ಶ್ರೀ ನಾರಾಯಣನಲ್ಲಿ) ಸಮನ್ವಯಃ = ಸಮನ್ವಯ ಸೂತ್ರದಲ್ಲಿ ಪ್ರತಿಜ್ಞಾತವಾದ ಸಮನ್ವಯವು, (ದುಃಖಿ ಬದ್ಧ ಅವರ ಮೊದಲಾದ ಶಬ್ದಗಳಿಗೂ ಕರ್ಮಾದಿ ವಿಷಯಕಗಳಾದ ಜ್ಯೋತಿಷ್ಟೋಮಾದಿ ಶಬ್ದಗಳಿಗೂ) ಕಥಂಚನ=ಯೋಗದಿಂದಲಾಗಲೀ, ರೂಢಿಯಿಂದಲಾಗಲೀ, (ಪ್ರವೃತ್ತಿಯು ಕೂಡದಿರುವುದರಿಂದ) ನ ಯುಜ್ಯತೇ= ಕೂಡುವುದಿಲ್ಲ. (ಏಕೆಂದರೆ—) ಯತಃ=ಯಾವಕಾರಣದೆಶೆಯಿಂದ, (ಶ್ರೀ ಹರಿಗೆ ಅವರಾದಿ ಶಬ್ದವಾಚ್ಯತ್ವವಿದ್ದರೆ) ಅವರತ್ವಾದೇರಪಿ=ಅವರತ್ವ-ದುಃಖಿತ್ವ ಮೊದಲಾದುದಕ್ಕೂ, ಪ್ರಾಪ್ತಿಃ= ಪ್ರಾಪ್ತಿಯು, ಭವೇತ್=ಆಗುವುದೋ, ವಿರೋಧಾತ್ = ವಿರೋಧವಿದ್ದುದರಿಂದ, (ಅಂದರೆ ಆ ದೋಷಪ್ರಾಪ್ತಿಗೆ ಸರ್ವ ಪ್ರಮಾಣಗಳಿಂದ ವಿರೋಧವಿದ್ದುದರಿಂದಲೂ, ಕರ್ಮಕ್ರಮಾದಿಗಳಿಂದ

ವಿರೋಧವಿದ್ದುದರಿಂದಲೂ) ಇತಿ ಚೇತ್=ಹೀಗೆ ಹೇಳಿದರೆ, (ತತ್ರ = ಆ ವಿಷಯದಲ್ಲಿ. ಸೂತ್ರಕಾರರಿಂದ ಸಮಾಧಾನವು ಹೇಳಲ್ಪಟ್ಟಿದೆ.) (ಹೇಗೆಂದರೆ— ಪ್ರಥಮಾಧಿಕರಣದ ತಾತ್ಪರ್ಯವನ್ನು ಹೇಳುತ್ತಾರೆ.) ಅವರತ್ವಾದಿ=ಅವರಾದಿ ಶಬ್ದಪ್ರವೃತ್ತಿ ನಿಮಿತ್ತವು, ದ್ವಿವಿಧಂ=ಎರಡು ಪ್ರಕಾರ, ಉಪಲಭ್ಯತೇ= (ಪ್ರಮಾಣಗಳಿಂದ) ಕಾಣಲ್ಪಡುತ್ತದೆ, ಹಿ=ಪ್ರಸಿದ್ಧವು. (ಹೇಗೆ ಎರಡುಪ್ರಕಾರವೆಂದರೆ—) (೧)ಯಃ=ಯಾವಾತನು, ಸ್ವಯಂ=ತಾನು, ಪರ ಏವ ಸನ್=ಸರ್ವೋತ್ತಮನಾಗಿಯೇ, (ಅಂದರೆ ತನಗೆ ಅವರತ್ವವಿಲ್ಲದಿದ್ದರೂ) ಪರಸ್ಯ=ಇತರರ, ಅವರತಾಹೇತುಃ= ಅವರತ್ವಕ್ಕೆ ಕಾರಣನಾದವನೋ, ಸೋऽಪಿ=ಅವನೂಕೂಡ, ಅವರಶಬ್ದಾರ್ಥಃ = ಅವರಶಬ್ದಾರ್ಥನು. ಯಥಾ=ಹೇಗೆ, ರಾಜಾ=ಅರಸನು, ಜಯೀ=ಜಯವುಳ್ಳವನು, ಜಯಿಶಬ್ದವಾಚ್ಯನು, ಭವೇತ್=ಆಗುವನೋ, ತಥಾ=ಹಾಗೆಯೇ. (ಅಂತೂ (೧) ಪರರಲ್ಲಿರತಕ್ಕ ಅವರತ್ವಾದಿ ಧರ್ಮಗಳಿಗೆ, ನಿಯಾಮಕತ್ವವು ಒಂದು ನಿಮಿತ್ತವು.) (೨) ಅವರತಾನುಭವೀ=ಅವರತ್ವದ ಅನುಭವವುಳ್ಳವನು, ಅನ್ಯಃ=ಮತ್ತೊಂದು ಅವರಶಬ್ದಾರ್ಥನು. (ಅಂದರೆ ಅವರತ್ವ–ದುಃಖಿತ್ವ ಮೊದಲಾದುದು ಮತ್ತೊಂದು ನಿಮಿತ್ತವು, ಇದು ಸುಪ್ರಸಿದ್ಧವು) (ಅದರಿಂದ ಪ್ರಕೃತವೇನಾಯಿತೆಂದರೆ) ತಯೋಃ=ಆ ಎರಡುಪ್ರವೃತ್ತಿಹೇತುಗಳ ಮಧ್ಯದಲ್ಲಿ, ಪೂರ್ವಃ=ಮೊದಲಿನದ್ದು, ಕೇಶವೇ= ಶ್ರೀ ಹರಿಯಲ್ಲಿ, ಅಸ್ತಿ=ಇದೆ. (ಅದರಿಂದ ಅವರಾದಿ ಶಬ್ದವಾಚ್ಯತ್ವವೂ ಇದೆ.) (ಮೊದಲಿನದ್ದೇ ಏಕೆ ಅಂಗೀಕರಿಸಲ್ಪಡುತ್ತದೆ? ಎರಡನೇದ್ದು ಏಕೆ ಅಂಗೀಕರಿಸಲ್ಪಡುವುದಿಲ್ಲವೆಂದರೆ-)ದ್ವಿತೀಯಃ= ಎರಡನೇದ್ದು, ಜೀವ ಏವ=ಜೀವ, ಮತ್ತು ಜಡಗಳಲ್ಲಿಯೇ, ಅಸ್ತಿ=ಇದೆ. (ಎರಡನೇದ್ದೂ ಈಶ್ವರನಿಗೆ ಇದ್ದರೆ ಈಶ್ವರತ್ವಕ್ಕೆ ಹಾನಿಯು ಬರಬೇಕಾಗುವುದು.) (ಅಧಿಕರಣ ಫಲವನ್ನು ಹೇಳುತ್ತಾರೆ.)ಸ್ವಾತಂತ್ರ್ಯಾತ್=ಪರರಲ್ಲಿರತಕ್ಕ, ಅವರರಲ್ಲಿರತಕ್ಕ ಅವರತ್ವಾದಿಗಳಲ್ಲಿ ಸ್ವಾತಂತ್ರ್ಯಕ್ಕೇನೇ ಪ್ರವೃತ್ತಿನಿಮಿತ್ತತ್ವವನ್ನು ಅಂಗೀಕರಿಸಿದುದರಿಂದ, ಹರೇಃ=ಶ್ರೀ ಹರಿಗೆ, (ಅವರತ್ವಮೊದಲಾದುದು) ದೂಷಣಂ=ದೂಷಣವಾಗಿ, ನ ಪ್ರಸಜ್ಜತೇ=ಪ್ರಸಕ್ತವಾಗುವುದಿಲ್ಲ. (ಹೀಗೆಯೇ ಉತ್ತರಾಧಿಕರಣ ತಾತ್ಪರ್ಯವನ್ನು ಹೇಳಬೇಕು.) (ಪ್ರಥಮಾಧ್ಯಾಯದ ಅರ್ಥವನ್ನು ಅನುವಾದ ಮಾಡಿಕೊಂಡು ದ್ವಿತೀಯಾಧ್ಯಾಯಕ್ಕೆ ಸಂಗತಿಯನ್ನು ಹೇಳುತ್ತಾರೆ.) ಏವಂ = ಹೀಗೆ, ಅಶೇಷೇಣ = ಶೇಷವಿಲ್ಲದೇನೇ, ಸರ್ವಶಬ್ದಸಮನ್ವಯೇ = ಎಲ್ಲಾ ಶಬ್ದಗಳಸಮನ್ವಯವು, ಉಕ್ತೇ ಸತಿ=ಹೇಳಲ್ಪಡುತ್ತಿರಲು, ಯತಃ=ಯಾವಕಾರಣದಿಂದ, ವಿರೋಧಹೀನಸ್ಯೈ=ವಿರೋಧರಹಿತವೇ ಆದ ಸಮನ್ವಯಕ್ಕೆ, ಸಮನ್ವಯತಾ=ಸಮನ್ವಯತ್ವವು, ಸ್ಯಾತ್=ಆಗುವುದೋ, ಅತಃ=ಆದಕಾರಣ, ಅಶೇಷವಿರೋಧಾನಾಂ=ಎಲ್ಲಾವಿರೋಧಗಳ, ನಿರಾಕೃತಿಃ=ನಿರಾಕರಣವು, ಈಶೇನ=ಶ್ರೀ ಹರಿಯಿಂದ, ಕೃತಾ=ಮಾಡಲ್ಪಟ್ಟಿತು ॥ ೪೭ ॥ ೪೮ ॥ ೪೯ ॥ ೫೦ ॥ ೫೧ ॥

ಮೂರನೇ ಅಧ್ಯಾಯಕ್ಕೆ ಸಂಗತಿಯನ್ನು ಹೇಳುತ್ತಾರೆ—

**ಮೂ ॥ ಸಮನ್ವಯಾವಿರೋಧಾಭ್ಯಾಂ ಸಂಜಾತೇ ವಸ್ತುನಿರ್ಣಯೇ ॥ ೫೨ ॥**
**ಕಿಂ ಮಯಾ ಕಾರ್ಯಮಿತ್ಯೇವ ಸ್ಯಾದ್ಬುದ್ಧಿರಧಿಕಾರಿಣಃ ।**
**ತತ್ರ ಭಕ್ತಿವಿಧಾನಾರ್ಥಮಭಕ್ತಾನರ್ಥಸಂತತೌ ॥ ೫೩ ॥**
**ಉಕ್ತಾಯಾಂ ಭಕ್ತಿದಾರ್ಢ್ಯಾಯ ಪ್ರೋಕ್ತೇऽಶೇಷಗುಣೋಚ್ಚಯೇ ।**
**ವಕ್ತವ್ಯೋಪಾಸನಾ ನಿತ್ಯಂ ಕರ್ತವ್ಯೇತ್ಯಾದರೇಣ ಹಿ ॥ ೫೪ ॥**

ಅ || ಸಮನ್ವಯಾವಿರೋಧಾಭ್ಯಾಂ = ಸಮನ್ವಯ ಅವಿರೋಧಾರ್ಥವುಳ್ಳ ಸಮನ್ವಯ ಅವಿರೋಧಾಧ್ಯಾಯಗಳಿಂದ, ವಸು ನಿರ್ಣಯೇ=ಶ್ರೀ ಹರಿಗೇನೇ ಗುಣಪೂರ್ಣತ್ವ- ನಿರ್ದೋಷತ್ವ ಮೊದಲಾದ ವಸ್ತುವಿನ ನಿರ್ಣಯವು, ಸಂಜಾತೇ=ಉಂಟಾಗುತ್ತಿರಲು, (ಯದ್ಯಪಿ ಬ್ರಹ್ಮ ವಿಚಾರವನ್ನು ಮಾಡಬೇಕೆಂದು ಹೇಳಿಯದೆ. ಬ್ರಹ್ಮವಿಚಾರವನ್ನು ಮಾಡಿಯೂ ಆಗಿದೆ. ಆದಾಗ್ಯೂ ಸಾಧನವಿಚಾರ-ಫಲವಿಚಾರಗಳಿಂದ ಸಹಿತವಾದ ಬ್ರಹ್ಮವಿಚಾರವನ್ನು ಮಾಡಬೇಕೆಂದು ಹೇಳಿರುವುದರಿಂದ ಬ್ರಹ್ಮವಿಚಾರವನ್ನು ಮಾಡಿರತಕ್ಕ)ಅಧಿಕಾರಿಣಃ=ಅಧಿಕಾರಿಗಳಿಗೆ (ಯಾವುದು) ಮಯಾ=ನನ್ನಿಂದ, ಕಾರ್ಯಂ=ಮಾಡಲರ್ಹವಾದ ಸಾಧನವೋ, (ತತ್=ಅದು) ಕಿಂ=ಹೇಗೆ ಇರತಕ್ಕದು, ಇತ್ಯೇವ=ಹೀಗೆಯೇ, ಬುದ್ಧಿಃ=ಬುದ್ಧಿಯು, ಸ್ಯಾತ್=ಆಗುವುದು. (ಅದಕ್ಕಾಗಿ ಮೂರನೇ ಅಧ್ಯಾಯವು ಪ್ರವೃತ್ತವಾಗಿದೆ.) (ಈ ಮೂರನೇ ಅಧ್ಯಾಯದಲ್ಲಿರತಕ್ಕ ಮೂರು ಪಾದಗಳಿಗೆ ಹಿಂದೆ ಹೇಳಿದ ಸಂಗತಿಯನ್ನೇ ಸ್ಪಷ್ಟೀಕರಿಸುತ್ತಾರೆ.) ತತ್ರ=ಆ ಮೂರನೇ ಅಧ್ಯಾಯದಲ್ಲಿ, ಭಕ್ತಿವಿಧಾನಾರ್ಥಂ=ಭಕ್ತಿಯನ್ನು ಹುಟ್ಟಿಸುವುದಕ್ಕಾಗಿ, (ಅಂದರೆ ವೈರಾಗ್ಯ ಕ್ಕಾಗಿ) ಭಕ್ತಿವಿಧಾನಾರ್ಥಂ=ಭಕ್ತಿಯನ್ನು ವಿಧಿಸುವುದಕ್ಕಾಗಿ, ಅಭಕ್ತಾನರ್ಥಸಂತತೌ=ಅಭಕ್ತ ರಾದ ಕಾಮ್ಯಾರ್ಥಕರ್ಮಿಗಳಿಗೂ, ಪಾಪಿಗಳಿಗೂ, ದ್ವೇಷಿಗಳಿಗೂ, ಅನರ್ಥಗಳ ಸಂತತಿಯು, ಉಕ್ತಾಯಾಂ = (ಪ್ರಥಮಪಾದದಿಂದ) ಹೇಳಲ್ಪಡುತ್ತಿರಲು, ಭಕ್ತಿದಾರ್ಢ್ಯಾಯ = ಭಕ್ತಿಯ ದೃಢತನಕ್ಕೋಸ್ಕರ, ಅಶೇಷಗುಣೋಚ್ಚಯೇ=ಎಲ್ಲಾ ಗುಣಗಳ ಸಮೂಹವು, ಪ್ರೋಕ್ತೇ ಸತಿ= (ಎರಡನೇ ಪಾದದಿಂದ) ಹೇಳಲ್ಪಡುತ್ತಿರಲು, ಉಪಾಸನಾ=ಉಪಾಸನೆಯು, ವಕ್ತವ್ಯಾ=ಈ ಪಾದದಲ್ಲಿ ಅವಸರ ಪ್ರಾಪ್ತವಾಯಿತು. (ಹಾಗಾದರೆ ಉಪಾಸನೆಯಲ್ಲಿ ಭಕ್ತಿಗೆ ಏನು ಉಪ ಯೋಗವು? ಆನಂತರ್ಯವು ಹೇಗೆಂದರೆ—) ಹಿ=ಯಾವ ಕಾರಣದಿಂದ, ಉಪಾಸನಾ= ಉಪಾಸನೆಯು, ನಿತ್ಯಂ=ನಿರಂತರದಲ್ಲಿಯೂ, ಆದರೇಣ=ವಿಶ್ವಾಸದಿಂದ, ಕರ್ತವ್ಯಾ=ಮಾಡ ತಕ್ಕದೋ, (ಆದರ ನೈರಂತರ್ಯಗಳಿಂದಲೇ ಸಂಸ್ಕಾರಾತಿಶಯವು ಹುಟ್ಟುತ್ತದೆ. ಆದರ ನೈರಂತರ್ಯಗಳು ಉಪಾಸನೆಯಲ್ಲಿ ಅಭಕ್ತನಿಗೆ ಹುಟ್ಟಲಾರವು.) ಇತಿ=ಆದಕಾರಣ, ಉಪಾ ಸನಾ=ಉಪಾಸನೆಯು, ವಕ್ತವ್ಯಾ=ಹೇಳತಕ್ಕದು ॥ ೫೨ ॥ ೫೩ ॥ ೫೪ ॥

ಹೀಗಾದರೆ ಉಪಾಸನೆಯನ್ನೇ ವಿಚಾರಮಾಡಬೇಕು. ಸರ್ವಶಾಸ್ತ್ರಪಂಜ್ಞಾನವು ಪ್ರಥಮಾಧಿ ಕರಣದಲ್ಲಿ ಯಾವುದರಿಂದ ವಿಚಾರಮಾಡುತ್ತದೆ ಎಂದರೆ—

**ಮೂ ॥ ಸೋಽಪಾಸನಾ ಚ ದ್ವಿವಿಧಾ ಶಾಸ್ತ್ರಾಭ್ಯಾಸಸ್ವರೂಪಿಣೀ ।**
**ಧ್ಯಾನರೂಪಾ ಪರಾ ಚೈವ ತದಂಗಂ ಧಾರಣಾದಿಕಂ ॥ ೫೫ ॥**
**ತಥೋಭಯಾತ್ಮಕಂ ಚೈವ ಪಾದೇಽಸ್ಮಿನ್ ಬಾದರಾಯಣಃ ।**
**ಆಹೋಪಾಸನಮದ್ಧ್ಯೈವ ವಿಸ್ತರಾಚ್ಛ್ರುತಿಪೂರ್ವಕಂ ॥ ೫೬ ॥**

ಅ ॥ ಸಾ ಚ ಉಪಾಸನಾ=(ಯಾವ ಉಪಾಸನೆಯು ಹೇಳಲರ್ಹವಾಗಿ ಈ ಪಾದದಲ್ಲಿ ಅವಸರ ಪ್ರಾಪ್ತವಾಗಿದೆಯೋ,) ಆ ಉಪಾಸನೆಯು, ಶಾಸ್ತ್ರಾಭ್ಯಾಸಸ್ವರೂಪಿಣೀ=ಒಂದು ಶಾಸ್ತ್ರಾ ಭ್ಯಾಸದ ಸ್ವರೂಪವುಳ್ಳದ್ದು. ಪರಾ ಚ ಧ್ಯಾನರೂಪಾ=ಮತ್ತೊಂದು ಧ್ಯಾನ (ಮತ್ತು ಸಮಾಧಿ) ರೂಪವಾದುದು. ಹೀಗೆ, ದ್ವಿವಿಧಾ=ಎರಡು ಪ್ರಕಾರವಾದುದೇ. (ಏಕರೂಪವಾದುದಲ್ಲ.) (ಆದಕಾರಣ ಶಾಸ್ತ್ರಾಭ್ಯಾಸವೂ ಕೂಡ ಉಪಾಸನಾರೂಪವಾಗಿರುವುದರಿಂದ ಅದನ್ನು ಪ್ರತಿ ಪಾದಿಸತಕ್ಕ ಪ್ರಥಮಾಧಿಕರಣಕ್ಕೆ ಈ ಪಾದದಲ್ಲಿ ಅಂತರ್ಭಾವವು ಯುಕ್ತವು.) (೧ ಧಾರಣಾ,

೨ ಪ್ರತ್ಯಾಹಾರ, ೩ ಪ್ರಾಣಾಯಾಮ, ೪ ಆಸನ, ೫ ಯಮ, ೬ ನಿಯಮಗಳೆನ್ನುವ ಉಪಾಸನಾವಿಶೇಷಗಳು ಇದ್ದುದರಿಂದ ಉಪಾಸನೆಗೆ ಹಿಂದೆ ಹೇಳಿದ ರೀತಿಯಿಂದ ದ್ವೈವಿಧ್ಯವೇ ಹೇಗೆ ಎಂದರೆ—) ತದಂಗಂ ಧಾರಣಾದಿಕಂ=ಧಾರಣಾ ಮೊದಲಾದುದು ಧ್ಯಾನದ **ಅಂಗವೇ.** (ಸ್ವತಂತ್ರವಾಗಿ ಉಪಾಸನವಲ್ಲ.) (ಶಾಸ್ತ್ರಾಭ್ಯಾಸವು ಧ್ಯಾನಕ್ಕೆ ಅಂಗವಾದುದಾಗ್ಯೂ ಬ್ರಹ್ಮನ ಸಾಕ್ಷಾತ್ಕಾರಕ್ಕೆ ಕಾರಣವಾದುದರಿಂದಲೂ, ಮನೋವ್ಯಾಪಾರವನ್ನು ತಡೆಯತಕ್ಕದಾದುದರಿಂದಲೂ ಸ್ವತಂತ್ರೋಪಾಸನವೂ ಆಗಿದೆ.) (ಅವಸರಪ್ರಾಪ್ತವಾದ ಉಪಾಸನೆಯು ಹಿಂದೆ ಹೇಳಿದಪ್ರಕಾರ ಎರಡುಪ್ರಕಾರನೇ ಆಗಲಿ, ಇದರಿಂದ ಪ್ರಕೃತವೇನಾಯಿತೆಂದರೆ—) **ತಥಾ**= ಅವಸರಪ್ರಾಪ್ತವಾದುದರಿಂದ, **ಅಸ್ಮಿನ್ನೇವ ಪಾದೇ** = ಇದೇ ಪಾದದಲ್ಲಿ, **ಬಾದರಾಯಣಃ**= ವೇದವ್ಯಾಸರು, **ಉಭಯಾತ್ಮಕಂ** = ಶಾಸ್ತ್ರಾಭ್ಯಾಸ- ಧ್ಯಾನ ಹೀಗೆ ಉಭಯರೂಪವಾದ, **ಉಪಾಸನಂ** = ಉಪಾಸನೆಯನ್ನು, **ಅದ್ಧಾ** =ಉಪಯುಕ್ತ ಪ್ರಮೇಯದಿಂದ ಕೂಡಿಕೊಂಡು, **ವಿಸ್ತರಾತ್** = ವಿಸ್ತರವಾಗಿ, **ಶ್ರುತಿಪೂರ್ವಕಂ** = ಶ್ರುತ್ಯಾದ್ಯುದಾಹರಣಪೂರ್ವಕವಾಗಿ, **ಆಹ**= ಹೇಳುತ್ತಾರೆ ॥ ೫೫ ॥ ೫೬ ॥

ಹೀಗೆ ಸಂಗತಿಯನ್ನು ಹೇಳಿ ಈ ಪಾದದ ಅಧಿಕರಣಗಳ ಪೂರ್ವಪಕ್ಷಯುಕ್ತಿಗಳನ್ನೂ, ಸಿದ್ಧಾಂತಯುಕ್ತಿಗಳನ್ನೂ ಸಂಗ್ರಹಿ ಹೇಳುತ್ತಾರೆ—

**ಮೂ ॥ ಪೃಥಗ್ದೃಷ್ಟಿರಶಕ್ಯತ್ವಮನಿರ್ಣೀತಿಃ ಸಮುಚ್ಚಯಃ ।**
**ವಿಶೇಷದರ್ಶನಂ ಕಾರ್ಯಲೋಪೋ ನಾನೋಕ್ತಿರಾಶುತಾ ॥ ೫೭ ॥**
**ವಿಭ್ರಮೋಽಪಾಕೃತಿರ್ಲಿಂಗಮನವಸ್ಥಾ ವಿಶೇಷಿತಾ ।**
**ಅಪ್ರಯೋಜನತಾ ಚಾತಿಪ್ರಸಂಗೋ ದೂರಸಂಶ್ರಯಃ ॥ ೫೮ ॥**
**ವಿಶಿಷ್ಟಕಾರಣಂ ಚೇಷ್ಟಾ ದೃಷ್ಟವೈರೂಪ್ಯಮುನ್ನತಿಃ ।**
**ಅಯುಕ್ತಿರಪ್ರಯತ್ನತ್ವಂ ದೃಢಬಂಧಪರಾಭವೌ ॥ ೫೯ ॥**
**ಪುಂಸಾಮ್ಯಂ ಪ್ರಾಪ್ತಸಂತ್ಯಾಗಃ ಕಾರಣಾ ನಿರ್ಣಯೋ ಭ್ರಮಃ ।**
**ವಿಶೇಷದರ್ಶಿತಾಲಾಪೌ (ಪೋ) ಗುಣಸಾಮ್ಯಂ ಪೃಥಗ್ದೃಶಿಃ ॥ ೬೦ ॥**
**ಅಗಮ್ಯಾವರ್ತ್ಯಸಂಧಾನಮಿಷ್ಟಂ ಫಲಮಕಲ್ಪನಾ ।**
**ಶುದ್ಧವೈರೂಪ್ಯಮಂಗತ್ವಮವಿಶೇಷದೃಶಿಃ ಕ್ರಿಯಾ ॥ ೬೧ ॥**
**ಯುಕ್ತಯಃ ಪೂರ್ವಪಕ್ಷಸ್ಥಾಸ್ಸಿದ್ಧ್ಯೇಯತ್ವಂ ವಿಧಿಕ್ರಿಯಾ ।**
**ಮಾಹಾತ್ಮ್ಯಮಲ್ಪಶಕ್ತಿತ್ವಂ ಯಥಾಯೋಗ್ಯಫಲಂ ಭವಃ ॥ ೬೨ ॥**
**ಫಲಸಾಮ್ಯಂ ವಿಶೇಷಶ್ಚ ಗುಣಾಧಿಕ್ಯಂ ಪ್ರಧಾನತಾ ।**
**ಯಥಾಶಕ್ತಿ ಕ್ರಿಯಾಸಂಧಿಃ ಪ್ರಮಾಣಬಲಮಾನತಿಃ ॥ ೬೩ ॥**
**ಕಾರಣಂ ಕಾರ್ಯವೈಶೇಷ್ಯಂ ಸ್ವಭಾವೋ ವಸ್ತುದೂಷಣಂ ।**
**ಪ್ರತಿಕ್ರಿಯಾವಿರೋಧಶ್ಚ ಪ್ರತಿಸಂಧಿರನೂನತಾ ॥ ೬೪ ॥**
**ಸಂಸ್ಕಾರಪಾಟವಂ ಸ್ವೇಚ್ಛಾ ನಿಯತಿರ್ವಸ್ತುವೈಭವಂ ।**
**ವಿಶೇಷೋಕ್ತಿರಮಾನತ್ವಂ ಪ್ರಾಧಾನ್ಯಂ ಪ್ರೀತಿರಾಗಮಃ ॥ ೬೫ ॥**

**ಸುಸ್ಥಿರತ್ವಂ ಕೃತಪ್ರಾಪ್ತಿರನಾದಿಗುಣವಿಸ್ತರಃ |**
**ಸಾಧನೋತ್ತಮತಾ ನಾನಾದೃಷ್ಟಿಶ್ಚ(ಶಿ)ಷ್ಟಿರನೂನತಾ || ೬೩ ||**
**ಅವಿಘ್ನತ್ವಾವಿರೋಧೌ ಚ ಗುಣವ್ಯಕ್ತೇಷ್ಯವಾಗಮಃ |**
**ಸಿದ್ಧಾಂತನಿರ್ಣಯಾ (ಯೇ) ಹ್ಯೇತಾ ಯುಕ್ತಯೋऽವ್ಯಾಹತಾಃ**
**ಸದಾ || ೬೭ ||**

**ಅ ||** (೧) ಪೃಥಗ್ದೃಷ್ಟಿಃ=(ಎಲ್ಲಾ ಶಾಖೆಗಳಲ್ಲಿ ಹೇಳಿದ ಅರ್ಥಗಳಿಗೆ) ಪ್ರತ್ಯೇಕವಾಗಿ ಕಾಣುವಿಕೆಯು (೨) ಅಶಕ್ಯತ್ವಂ=(ಚತುರ್ಮುಖನಿಗೂ ಸರ್ವವೇದಗಳಲ್ಲಿ ಹೇಳಿದ ಪ್ರಕಾರ ಧ್ಯಾನಿಸಲಿಕ್ಕೆ) ಶಕ್ಯವಾಗದಿರುವಿಕೆಯು. (೩) ಅನಿರ್ಣೀತಿಃ=(ಅಧಿಕಾರಿಯ) ನಿರ್ಣಯವಾಗದಿರುವಿಕೆಯು. (೪) ಅನಿರ್ಣೀತಿಃ = ಫಲಾತಿಶಯದ ನಿರ್ಣಯವಾಗದಿರುವಿಕೆಯು. (೫) ಸಮುಚ್ಚಯಃ = (ಸರ್ವಗುಣಗಳ) ಸಮುಚ್ಚಯವು. (೬) ವಿಶೇಷದರ್ಶನಂ = (ಪ್ರಿಯ-ಶಿರಸ್ತ್ವಾದಿಗಳಿಗೆ ಆನಂದದ) ವಿಶೇಷತ್ವದಿಂದ ದರ್ಶನವು (೭) ಕಾರ್ಯಲೋಪಃ=(ಬಹು ಗುಣಗಳ ಉಪಾಸನೆಯಿಂದ) ಫಲಕ್ಕೆ ಲೋಪವು. (೮) ನಾನೋಕ್ತಿಃ = ನಾನಾಸ್ಥಳಗಳಲ್ಲಿ ಗುಣಗಳಿಗೆ ಉಕ್ತಿಯು. (೯) ಆಶುತಾ = (ಅಪರೋಕ್ಷಜ್ಞಾನಕ್ಕೆ) ಶೀಘ್ರತ್ವವು. (೧೦) ವಿಭ್ರಮಃ=(ಆತ್ಮಶಬ್ದವು ಚತುರ್ಗುಣಗಳನ್ನುಪಾಸನಮಾಡತಕ್ಕ ಪುರುಷನಿಗೆ) ಭ್ರಾಂತಿಯನ್ನು ಮಾಡುತ್ತದೆ. (೧೧) ಅಪಾಕೃತಿಃ=ಧ್ಯಾನಾಭಾವವು. (೧೨) ಲಿಂಗಂ=(ಸರಸ್ವತೀ-ಬ್ರಹ್ಮರಿಗೆ ಸ್ಥಾನೈಕ್ಯಗುಣತಾರತಮ್ಯರೂಪವಾದ) ಲಿಂಗವು. (೧೩) ಅನವಸ್ಥಾ=(ಆತ್ಮಶಬ್ದದಿಂದ ಪುರುಷನಿಗೆ ಇಷ್ಟು ಗುಣಗಳು ಹೇಳಲ್ಪಡುತ್ತವೆ ಎಂದು ಪ್ರಾತಿಸ್ವಿಕನಿಯಮನರೂಪವಾದ) ವ್ಯವಸ್ಥೆಯು ಇಲ್ಲದಿರುವಿಕೆಯು. (೧೪) ಅವಿಶೇಷಿತಾ=(ಮುಮುಕ್ಷುತ್ವ-ಫಲಾಪೇಕ್ಷಿತತ್ವಗಳಿಗೆ) ವಿಶೇಷವಿಲ್ಲದಿರುವಿಕೆಯು (೧೫) ಅಪ್ರಯೋಜನತಾ=(ಉಪಸಂಹಾರಕ್ಕೆ) ಪ್ರಯೋಜನವಿಲ್ಲದಿರುವಿಕೆಯು. (೧೬) (ಚ=) ಅವಿಶೇಷಿತಾ=ಫಲಾಪೇಕ್ಷಿತತ್ವದಿಂದ ವಿಶೇಷವಿಲ್ಲದಿರುವಿಕೆಯು. (೧೭) ಅತಿಪ್ರಸಂಗಃ=(ಮುಕ್ತಿಯಲ್ಲಿಯೂ ಉಪಾಸನೆಯಿರುವುದಾದರೆ ಫಲಾದಿಗಳೂ ಕೂಡ ಬರಬೇಕಾಗುವುವು. ಹೀಗೆ) ಅತಿಪ್ರಸಂಗವು. (೧೮) ಆದೂರಸಂಶ್ರಯಃ=(ಕರ್ಮಕರಣ ಶಕ್ತಿಗೆ) ಸನ್ನಿಹಿತತ್ವವಿದ್ದಪ್ರಯುಕ್ತ ಕರ್ಮಕರಣವು. (೧೯) ವಿಶಿಷ್ಟಕಾರಣಂ = ಅಯೋಗ್ಯತಾಖ್ಯವಾದ ವಿಶಿಷ್ಟಕಾರಣವು. (೨೦) ಚೇಷ್ಟಾ=ಪ್ರಯತ್ನಾನುಸಾರವಾಗಿ (ಆನಂದ ತಾರತಮ್ಯವು) (೨೧) ದೃಷ್ಟವೈರೂಪ್ಯಂ=(ಭೂತಸಮೂಹದಲ್ಲಿ ಒಂದರಿಂದ ಒಂದಕ್ಕೆ ಆಧಿಕ್ಯವು ಕಂಡದರಿಂದ ಪ್ರಾಣನಿಂದ ಅಧಿಕನು ಇಲ್ಲದಿದ್ದರೆ) ದೃಷ್ಟವಾದುದಕ್ಕೆ ವಿರೋಧವು. (೨೨) ಉನ್ನತಿಃ=ಸರ್ವೋತ್ಕೃಷ್ಟತ್ವವು (ಅದರ ಪ್ರತೀತಿಯು.) (೨೩) ಅನುಕ್ತಿಃ=(ಸತ್ಯಾದಿಗಳಿಗೆ ಅಭೇದವನ್ನು) ಹೇಳದಿರುವಿಕೆಯು. (೨೪) ಅಪ್ರಯತ್ನತ್ವಂ=(ಲಕ್ಷ್ಮೀದೇವಿಗೆ) ಪ್ರಯತ್ನವಿಲ್ಲದಿರುವಿಕೆಯು. (೨೫, ೨೬) ದೃಢಬಂಧ ಪರಾಭವೌ, ದೃಢಬಂಧ = ಧ್ಯಾನವಿಲ್ಲದೆ ಶ್ರವಣ-ಮನನಮಾತ್ರದಿಂದ ನಿವರ್ತ್ಯವಾಗದಿರುವ ಜ್ಞಾನಪ್ರತಿಬಂಧವು, ಪರಾಭವಃ=ಜ್ಞಾನಕ್ಕೆ ತಿರಸ್ಕಾರವು ಇವುಗಳು. (೨೭) ಪುಂಸಾಮ್ಯಂ= ಪುರುಷತ್ವದಿಂದ ಸಾಮ್ಯವು. (೨೮) ಪ್ರಾಪ್ತಸಂತ್ಯಾಗಃ=ಮೊದಲು ಪ್ರಾಪ್ತನಾದ ಗುರುವಿನ ಪರಿತ್ಯಾಗ (ನಿಮಿತ್ತವಾಗಿ ದೋಷವು.) (೨೯) ಕಾರಣಾನಿರ್ಣಯಃ=ಮೋಕ್ಷಕಾರಣದ ನಿರ್ಣಯವಾಗದಿರುವಿಕೆಯು. (೩೦) ಭ್ರಮಃ= (ವಿದ್ಯಾವಚನಕ್ಕೆ ಪ್ರಾಧಾನ್ಯವೆಂದು) ಭ್ರಮವು (೩೧) ವಿಶೇಷದರ್ಶಿತಾ=(ಭಕ್ತಿಯಿಲ್ಲದೆ ದ್ವೇಷದಿಂದ ಧ್ಯಾನಮಾಡುವವರಿಗೂ) ವಿಶೇಷಜ್ಞಾನವು. (೩೨) ಆಲಾಪಃ=(ದೃಷ್ಟ್ವೈವ ಇತ್ಯಾದಿಪ್ರಕಾರ ಸಾಮಾನ್ಯವಾಗಿ) ವಚನವು. (೩೩) ಗುಣಸಾಮ್ಯಂ=

(ಶ್ರೀ ಹರಿಗೆ ಅವತಾರಾದಿಗಳಲ್ಲಿ ಮೋಕ್ಷದಾತೃತ್ವ ಮೊದಲಾದ) ಗುಣಗಳ ಸಾಮ್ಯವು. (೩೪) ಪೃಥಗ್ದೃಶಿಃ = (ಭಕ್ತಿಗೇನೇ ಮೋಚಕತ್ವಕ್ಕೆ ಈಶ್ವರಾದಿಗಳಿಗಿಂತ) ಪ್ರತ್ಯೇಕವಾಗಿ ತೋರುವಿಕೆಯು. (೩೫) ಅಗಮ್ಯವರ್ತ್ಮ=(ಅಂಶದಿಂದ)ಹೊಂದಲಸಾಧ್ಯವಾದ (ಅಂಶಿಯ) ಮಾರ್ಗವು. (೩೬) ಸಂಧಾನಂ = (ದೇವತ್ವಾದಿಗಳ) ಅನುಸಂಧಾನವು. (೩೭) ಇಷ್ಟಂ ಫಲಂ=ಇಷ್ಟವಾದ ಉಪಾಸನೆಮಾಡಲ್ಪಟ್ಟ ವಿಷ್ಣ್ವಾನಂದಾದಿಗಳಿಂದ ಇಷ್ಟವಾದ ಜೀವನಿಗೆ ಆವಿರ್ಭೂತವಾದ ಆನಂದಾದಿರೂಪವಾದ ಫಲವು, (೩೮) ಅಕಲ್ಪಸಾ=(ಭೂಮತ್ವದಲ್ಲಿ ವಿಶೇಷಕ್ಕೆ) ಕಲ್ಪನೆಯು ಕೂಡದಿರುವುದು (೩೯) ಶುದ್ಧವೈರೂಪ್ಯಂ=ನಿಷ್ಕಾಮವಾದ ಮೋಕ್ಷಸಾಧನವಾದ ಬಿಂಬೋಪಾಸನೆಗೆ (ವಿಘ್ನಕಾರಿಯಾದುದರಿಂದ) ವಿರೋಧವು. (೪೦) ಅಂಗತ್ವಂ=(ಕಾಮ್ಯೋಪಾಸನೆಗೆ ಮೋಕ್ಷದ) ಅಂಗತ್ವವು. (೪೧) ಅವಿಶೇಷದೃಶಿಃ=(ಭಗವದಂಗಾಶ್ರಿತರಾದ ದೇವತೆಗಳ ಉಪಾಸನೆಯನ್ನು ದೇವತೆಗಳು ಮಾಡಬೇಕೆಂದು) ವಿಶೇಷವಚನವಿಲ್ಲದಿರುವಿಕೆಯು. (೪೨) ಕ್ರಿಯಾ= ಅಂಗದೇವತೋಪಾಸನೆಯು ಕ್ರಿಯೆಯು (ಈ ನಲ್ವತ್ತ ಎರಡು (೪೨) ಅಧಿಕರಣಗಳ), ಪೂರ್ವಪಕ್ಷಸ್ಥಾಃ=ಪೂರ್ವಪಕ್ಷದಲ್ಲಿರತಕ್ಕ; ಯುಕ್ತಯಃ=ಯುಕ್ತಿಗಳು, (ಇನ್ನು ಕ್ರಮವಾಗಿ ಸಿದ್ಧಾಂತಯುಕ್ತಿಗಳು ಹೇಳಲ್ಪಡುತ್ತವೆ.) (೧) ಸುಜ್ಞೇಯತ್ವಂ=(ಸರ್ವ ವೇದಗಳಿಂದ ವಿಷ್ಣುವಿಗೇನೇ) ಸುಖದಿಂದ ತಿಳಿಯಲು ಯೋಗ್ಯತ್ವವು. (೨) ವಿಧಿಕ್ರಿಯಾ=ಉಪಾಸನಾ ಕ್ರಿಯೆಯು, (ವಿಹಿತವಾದುದು.) (೩) ಮಾಹಾತ್ಮ್ಯಂ = ಯೋಗ್ಯತಾರೂಪವಾದ ಮಹಿಮೆಯು. (೪) ಮಾಹಾತ್ಮ್ಯಂ=ಬಹುಗುಣೋಪಸಂಹಾರರೂಪವಾದ ಮಹಿಮೆಯು (೫) ಅಲ್ಪಶಕ್ತಿತ್ವಂ= (ಸರ್ವ ಮುಮುಕ್ಷುಗಳಿಗೆ) ಅಲ್ಪವಾದ ಶಕ್ತಿಯಿರುವಿಕೆಯು. (೬) ಯಥಾಯೋಗ್ಯಫಲಂ= ಯಥಾಯೋಗ್ಯವಾಗಿ ನಾಲ್ಕು ಗುಣಗಳನ್ನುಪಾಸನಾ ಮಾಡಿದರಿಂದಲೇ ಫಲವು. (೭) ಭವಃ= ಯೋಗ್ಯತಾ ನಿರ್ಣಯವನ್ನು ತಿಳಿದ(ಸರ್ವಜ್ಞರಾದ ಗುರುಗಳ ಗುಣನಿಯಮೋದೇಶವಿರುವಿಕೆಯು (೮) ಫಲಸಾಮ್ಯಂ=ವಿಪ್ರಕೀರ್ಣಗುಣೋಪಸಂಹಾರಕ್ಕೆ ಅನುಸಾರಿಯಾದ ಮುಕ್ತಿಯಲ್ಲಿ ಆನಂದಾತಿಶಯ ರೂಪವಾದ ಫಲಸಾಮ್ಯವು. (೯) ವಿಶೇಷಃ=(ಆನಂದಾದಿಗಳು ಆತ್ಮಶಬ್ದಾರ್ಥದ) ವಿಶೇಷವು (ಪ್ರಭೇದವು ) (೧೦) ಗುಣಾಧಿಕ್ಯಂ ಚ=(ಚತುರ್ಮುಖಾದ್ಯಧಿಕಾರಿಗಳಿಗೆ) ಗುಣಗಳಿಂದ ಆಧಿಕ್ಯವು (೧೧) ಪ್ರಧಾನತಾ=(ಅಲೌಕಿಕವಾದ, ಮೋಕ್ಷರೂಪವಾದ ಕಾರ್ಯವನ್ನು ಹುಟ್ಟಿಸುವುದರಿಂದ ಅಲೌಕಿಕವಾದ ಗುಣಗಳ ಧ್ಯಾನಕ್ಕೆ) ಪ್ರಾಧಾನ್ಯವು. (೧೨) ಯಥಾಶಕ್ತಿ ಕ್ರಿಯಾ=(ಸರಸ್ವತೀ ದೇವಿಗೆ) ಶಕ್ತ್ಯನುಸಾರವಾಗಿ ಕ್ರಿಯೆಯ (ಉಪಾಸನಾರ್ಹವು.) (೧೩) ಸಂಧಿಃ=ಅಭಿಸಂಧಿಯು. (ಅಂದರೆ ಆತ್ಮಶಬ್ದದಿಂ. ಗುಣಾಭಿಧಾನವು ಅಭಿಸಂಹಿತವಾಗಿದೆ.) (೧೪) ಪ್ರಮಾ᳚ ಬಲಂ=('ಸತ್ಯಂ ಜ್ಞಾನಮನಂತಂ ಬ್ರಹ್ಮ' ಇತ್ಯಾದಿ) ಪ್ರಮಾಣಗಳ ಸಾಮರ್ಥ್ಯವು. (೧೫) ಆನತಿಃ=(ಸರ್ವಗುಣೋಪಸಂಹಾರಕ್ಕೆ) ಪ್ರಾಪ್ತಿಯು. (೧೬) ಕಾರಣಂ=ಫಲವೈಲಕ್ಷಣ್ಯ ರೂಪವಾದ ಕಾರಣವು. (೧೭) ಕಾರಣಂ=(ಫಲವಿಲ್ಲದಿದ್ದರೂ) ಸಂಸ್ಕಾರಾಖ್ಯವಾದ ಕಾರಣವು. (೧೮) ಕಾರ್ಯವೈಶೇಷ್ಯಂ=ಉಪಾಸನಾಕರ್ಮಗಳಿಗೆ ಸಂಸ್ಕಾರಾಖ್ಯವಾದ ಕಾರಣಸತ್ವ, ಕಾರಣಾಸತ್ವರೂಪವಾದ ವೈಶೇಷ್ಯವು (೧೯) ಸ್ವಭಾವಃ=(ಈಶ್ವರನು ಜ್ಞಾನಿಗಳಿಗೆಲ್ಲಾ ಮೋಕ್ಷವನ್ನು ಕೊಡುತ್ತಾನೆನ್ನುವುದು) ಸ್ವಭಾವವು. (೨೦) ವಸ್ತುದೂಷಣಂ=ಪ್ರಯತ್ನಸಾಧನಾದಿ ವಸ್ತುಗಳಿಗೆ ದೂಷಣವು (ಪಾಪ್ತವಾಗುವುದು) (೨೧) ಪ್ರತಿಕ್ರಿಯಾವಿರೋಧಶ್ಚ=ಪ್ರತಿಕ್ರಿಯಾದಿಗಳನ್ನು ಹೇಳತಕ್ಕ ಶ್ರುತ್ಯಾದಿಗಳಿಂದ ವಿರೋಧವು. (೨೨) ಪ್ರತಿಸಂಧಿಃ = ಪ್ರಶ್ನಪ್ರತಿವಚನಾದಿಗಳ ಅಧ್ಯಾಹಾರವು. (೨೩) ಅನೂನತಾ = ಸತ್ಯಾದಿಗಳಿಗೆ ಊನತ್ವವಿಲ್ಲದಿರುವಿಕೆಯು. (೨೪) ಸಂಸ್ಕಾರ ಪಾಟವಂ ಚ=ಸಂಸ್ಕಾರಕ್ಕೆ ಪಟುತ್ವವೂ, ನಿತ್ಯ ಮುಕ್ತತ್ವವೂ ಕೂಡ. (೨೫) ಸ್ವೇಚ್ಛಾ ನಿಯತಿಃ=ಈಶ್ವರೇಚ್ಛೆಗೆ ನಿಯಮವು. (೨೬) ವಸ್ತು ವೈಭವಂ=ಬ್ರಹ್ಮಾಖ್ಯ ವಸ್ತುವಿಗೆ ವಿಭುತ್ವವು.

(೨೭) ವಿಶೇಷೋಕ್ತಿಃ='ಗುರು ಪ್ರಸಾದೋ ಬಲವಾನ್' ಇತ್ಯಾದಿ ವಿಶೇಷೋಕ್ತಿಯು. (೨೮) ಅಮಾನತ್ವಂ=(ಉತ್ತಮ ಗುರುಗಳನ್ನು ಸ್ವೀಕಾರಮಾಡಿದರೆ ದೋಷವದೆ ಎನ್ನುವಲ್ಲಿ) ಪ್ರಮಾಣ ವಿಲ್ಲದಿರುವಿಕೆಯು. (೨೯) ಪ್ರಾಧಾನ್ಯಂ=ವಿದ್ಯಾ ವಚನಕ್ಕೆ ಪ್ರಾಧಾನ್ಯವು. (೩೦) ಪ್ರೀತಿಃ=(ಶ್ರೀ ಹರಿಗೆ ಅಧಿಕವಾದ) ಪ್ರೀತಿಯು. (೩೧) ಆಗಮಃ='ಭಕ್ತ್ಯೈವೈನಂ' ಎನ್ನುವ ಆಗಮವು. (೩೨) ಸುಸ್ಥಿರತ್ವಂ=(ದರ್ಶನತಾರತಮ್ಯಕ್ಕೆ) ಅತಿ ಸ್ಥಿರತ್ವವು. (೩೩) ಕೃತಪ್ರಾಪ್ತಿಃ=ತನ್ನಿಂದ ಮಾಡಲ್ಪಟ್ಟ ಕರ್ಮದಿಂದಲೇ ಫಲಪ್ರಾಪ್ತಿಯು. (೩೪) ಅನಾದಿ ಗುಣವಿಸ್ತರಃ=ಅನಾದಿಗಳಾದ ಗುಣಗಳಿಗೆ ವಿಸ್ತಾರವು (೩೫) ಸಾಧನೋತ್ತಮತಾ=(ಅದೃಷ್ಟಕ್ಕೆ) ಸಾಧನಗಳಲ್ಲಿ ಉತ್ತಮತ್ವವು (೩೬) ನಾನಾದೃಷ್ಟಿಃ = ಪರಸ್ಪರ ವಿಲಕ್ಷಣ ಗುಣಗಳುಳ್ಳವರಾಗಿ ಅಂಗದೇವತೆಗಳಿಗೆ ಶ್ರುತಿಗಳಲ್ಲಿ ದರ್ಶನವು. (೩೭) ಶಿಷ್ಟಿಃ = (ಭೂಮತ್ವೋಪಾಸನೆಗೆ) ಶಾಸನವು. (೩೮) ಅನೂನತಾ=(ಉಪಾಸ್ಯಗಳಾದ ಆನಂದಾದಿ ಗುಣಗಳ ವಿಶೇಷಣೀಭೂತವಾದ ಭೂಮತ್ವ ವಿಶೇಷಕ್ಕೆ ಬ್ರಹ್ಮಾದ್ಯಧಿಕಾರಿವಿಶೇಷಾಪೇಕ್ಷೆಯಿಂದ) ಊನತ್ವವಿಲ್ಲದಿರುವುದು. (೩೯-೪೦) ಅವಿಘ್ನತ್ವಾವಿರೋಧೌ ಚ, ಅವಿಘ್ನತ್ವ=(ವಿಶಿಷ್ಟ ಮೋಕ್ಷಕ್ಕೆ) ಅವಿಘ್ನತಾ ಸಾಧನತ್ವವು, ಅವಿರೋಧೌ ಚ=ಜ್ಞಾನಾಸಿದ್ಧಿರೂಪವಿರೋಧವೂ ವಿಶಿಷ್ಟಮೋಕ್ಷಪ್ರತಿಬಂಧಕೀಭೂತವಾದ, ದುರಿತ ನಿವೃತ್ತ್ಯಭಾವರೂಪವಾದ ವಿರೋಧವೂ ಇಲ್ಲದಿರುವಿಕೆಯು. (೪೧) ಗುಣವೈಶೇಷ್ಯಂ=ಶ್ರೀ ಹರಿಗೆ ಅನುರೂಪತ್ವ, ಪರಮಸ್ಥಾನಪ್ರಾಪ್ತಿ, ಲಕ್ಷಣ, ಫಲಯೋಗ್ಯತಾದಿ ಗುಣಗಳಿಗೆ ಪ್ರಭೇದವು. (೪೨) ಆಗಮಃ = ಆಗಮವು. ಸಿದ್ಧಾಂತನಿರ್ಣಯಾಃ=ಸಿದ್ಧಾಂತ ನಿರ್ಣಾಯಕಗಳಾದ ಅಥವಾ ಸಿದ್ಧಾಂತ ನಿರ್ಣಯ ಮಾಡುವ ವಿಷಯದಲ್ಲಿ, ಏತಾಃ ಯುಕ್ತಯಃ=ಈ ನಲ್ವತ್ತೆರಡು (೪೨) ಯುಕ್ತಯಃ=ಯುಕ್ತಿಗಳು, ಸದಾ=ಯಾವಾಗಲೂ, ಅವ್ಯಾಹತಾಃ=ಬಾಧಿತಗಳಲ್ಲ.

**ತಾ ॥ ೧ನೇ ಸರ್ವವೇದಾಧಿಕರಣದಲ್ಲಿ**-ಶ್ರವಣಾದಿಗಳನ್ನು ಮಾಡಬೇಕೆನ್ನುವ ಉಕ್ತಿಯು ಸಾಧಾರಣವಾದುದರಿಂದ ಬ್ರಹ್ಮನು ಪ್ರತಿಯೊಬ್ಬರಿಂದಲೂ ಸರ್ವ ಶಾಖೆಗಳಲ್ಲಿ ಹೇಳಿದಪ್ರಕಾರ ತಿಳಿಯಲರ್ಹನೋ ಅಥವಾ ತಂತಮ್ಮ ಶಾಖೆಗಳಲ್ಲಿ ಹೇಳಿದಪ್ರಕಾರವೋ ಎಂದು ಸಂಶಯ ಬಂದರೆ ತಮ್ಮ ಶಾಖೆಯಲ್ಲಿ ಹೇಳಿದ ಪ್ರಕಾರವೇ ತಿಳಿಯಲರ್ಹನು ಎಂದು ಪೂರ್ವಪಕ್ಷವು; ಸರ್ವ ಶಾಖೆಗಳಲ್ಲಿ ಹೇಳಿದಪ್ರಕಾರವೇ ತಿಳಿಯಲರ್ಹನೆಂದು ಸಿದ್ಧಾಂತವು. ಅದರಲ್ಲಿ ಪೃಥಗ್ದೃಷಿಃ=ಪ್ರತ್ಯೇಕವಾಗಿ ಕಾಣುವಿಕೆಯು, ಅಂದರೆ— ಪ್ರತಿಯೊಂದು ಶಾಖೆಗಳಲ್ಲಿ ಹೇಳಲ್ಪಟ್ಟ ಅರ್ಥಗಳು ಪ್ರತ್ಯೇಕವಾದುದರಿಂದ ತಮ್ಮ ತಮ್ಮ ಶಾಖೆಗಳಲ್ಲಿ ಹೇಳಿದ್ದೇ ತಿಳಿಯಲರ್ಹವಾದುದರಿಂದ ಸರ್ವ ಶಾಖೆಗಳಲ್ಲಿ ಹೇಳಿದ್ದನ್ನು ಸರ್ವರೂ ಸ್ವೀಕರಿಸಬೇಕಾಗಿಲ್ಲ, ಎಂದು ಪೂರ್ವಪಕ್ಷ ಬಂದರೆ— ಸುಜ್ಞೇಯತ್ವಂ=ಚೆನ್ನಾಗಿ ತಿಳಿಯಲ್ಪಡುವಿಕೆಯು, (ಅಂದರೆ— **'ನಾನಾವೇದೈರಿತಿಹಾಸೈಃ ಪುರಾಣೈಃ ಸುಜ್ಞೇಯ ಏಕೋ ಭಗವಾನ್ಯುಕ್ತಿಭಿಶ್ಚ'** ಎನ್ನುವ ಶ್ರುತಿಯ ದೆಶೆಯಿಂದ ವಿಷ್ಣುವು ಚೆನ್ನಾಗಿ ಸರ್ವ ವೇದಗಳಲ್ಲಿ ಹೇಳಿದಪ್ರಕಾರ ತಿಳಿಯಲರ್ಹನಾದುದರಿಂದ ಯಥಾಶಕ್ತಿ ಸರ್ವ ಶಾಖೆಗಳಲ್ಲಿ ಹೇಳಿದಪ್ರಕಾರವೇ ಬ್ರಹ್ಮನನ್ನು ಸರ್ವರೂ ತಿಳಿಯಬೇಕೆಂದು ಸಿದ್ಧಾಂತವು.) **೩ನೇ ಉಪಸಂಹಾರಾಧಿಕರಣದಲ್ಲಿ**— ಧ್ಯಾನವಿಧಿಯು ಎರಡು ಪ್ರಕಾರವಾಗಿಯೂ ಪರ್ಯವಸಾನವಾಗುವುದರಿಂದ ಪರಮಾತ್ಮನನ್ನು ಸರ್ವ ವೇದಗಳಲ್ಲಿ ಹೇಳಿದ ಗುಣಗಳನ್ನು ಉಪಸಂಹಾರಮಾಡಿ ಧ್ಯಾನಿಸಬೇಕೋ, ಬೇರೆ ಪ್ರಕಾರವೋ ಎಂದು ಸಂಶಯವು ಬಂದರೆ— ಬೇರೆ ಪ್ರಕಾರವೇ ಎಂದು ಪೂರ್ವಪಕ್ಷವು; ಸರ್ವ ವೇದಗಳಲ್ಲಿ ಹೇಳಲ್ಪಟ್ಟ ಗುಣಗಳನ್ನುಪಸಂಹಾರಮಾಡಿ ಧ್ಯಾನಿಸಬೇಕೆಂದು ಸಿದ್ಧಾಂತವು. ಅದರಲ್ಲಿ ಅಶಕ್ಯತ್ವಂ = ಸಾಧ್ಯವಾಗದಿರುವಿಕೆಯು ಹೇಗೆಂದರೆ— ಚತುರ್ಮುಖನಿಗೂ ಕೂಡ ಸಾಧ್ಯವಾಗದಿರುವುದರಿಂದ ಸರ್ವ

ಗುಣೋಪಸಂಹಾರವು ಯಾರಿಗೂ ಕೂಡುವುದಿಲ್ಲ. ಆದುದರಿಂದ ಸರ್ವ ವೇದಗಳಲ್ಲಿ ಹೇಳಿದ ಪ್ರಕಾರ ಧ್ಯಾನಾರ್ಹನಲ್ಲ. ಏವಂಚ ಸರ್ವ ಗುಣಗಳನ್ನುಪಸಂಹಾರಮಾಡಿ ಧ್ಯಾನ ಮಾಡಲಿಕ್ಕೆ ಅಶಕ್ಯನಾದುದರಿಂದ ಅದಕ್ಕಾಗಿ ಸರ್ವಪರಿಜ್ಞಾನವು ವ್ಯರ್ಥವು ಎಂದರೆ— ವಿಧಿಕ್ರಿಯಾ=ವಿಹಿತ ಕ್ರಿಯೆಯು. (ಅಂದರೆ-' **ಸರ್ವೇ ಗುಣಾಃ ಸರ್ವದೈವ ಹ್ಯುಪಾಸ್ಯಾಸ್ತೇನೈವ ವಿದ್ವಾನ್ ವಿಧಿಕೃನ್ನಾನ್ಯಥಾ ಸ್ಯಾತ್** 'ಎನ್ನುವ ಶ್ರುತಿಯಿಂದ ವಿಹಿತ ಕ್ರಿಯೆಗಳಿಗೆ ಲೋಪಬರಬೇಕಾಗುವುದರಿಂದ ಅಂದರೆ ಸರ್ವ ಗುಣಗಳನ್ನೂ ಉಪಸಂಹಾರಮಾಡಿ ಉಪಾಸನಾಮಾಡಬೇಕೆಂದು ವಿಹಿತವಾದುದರಿಂದ ಸರ್ವ ಪರಿಜ್ಞಾನವೂ ಸಾರ್ಥಕವೇ. **೩ ನೇ ಪ್ರಾಪ್ತ್ಯಧಿಕರಣದಲ್ಲಿ**– ಕರ್ತವ್ಯತ್ವವನ್ನು ಪ್ರತಿಪಾದಿಸುವಿಕೆ, ವಿರೋಧ, ಇವುಗಳಿಂದ ಗುಣೋಪಸಂಹಾರಾನುಪಸಂಹಾರಗಳು ಕೂಡುತ್ತವೋ ಇಲ್ಲವೋ ಎಂದು ಸಂಶಯವು ಬಂದರೆ-ಕೂಡುವುದಿಲ್ಲವೆಂದು ಪೂರ್ವಪಕ್ಷವು; ಕೂಡುತ್ತವೆ ಎಂದು ಸಿದ್ಧಾಂತವು. ಅದರಲ್ಲಿ ಅನಿರ್ಣೀತಿಃ=ನಿರ್ಣಯವಿಲ್ಲದಿರುವಿಕೆ, ಅಂದರೆ ಕೆಲವರು ಸರ್ವ ಗುಣಗಳನ್ನು ಉಪಸಂಹಾರಮಾಡಬೇಕು ಎಂದಾದರೆ ಸರ್ವರಿಗೂ ಹಾಗೆಯೇ ಆಗಬೇಕಾಗುವುದು. ಇವರು ಉಪಸಂಹಾರಮಾಡಬೇಕು, ಇವರು ಉಪಸಂಹಾರ ಮಾಡಬಾರದು ಎಂದು ನಿರ್ಣಯವಾಗದಿರುವುದರಿಂದ, ಎಂದರೆ— ಹೀಗೆ ಹೇಳಕೂಡದು. ಮಾಹಾತ್ಮ್ಯಂ=ಮಹಿಮೆಯು ಅಂದರೆ ' **ಯಸ್ಯ ಯಾವದ್ಗುಣಾಃ ಸ್ಪಷ್ಟಂ ಪ್ರತಿಭಾಸಂತ್ಯುಪಾಸನೇ । ಯುಗಪತ್ಸ್ವಭುಜೌ ಯದ್ವದ್ಧ್ಯಾಯೇತ್ತಾವತ ಏವ ಸಃ । ಯುಗಪದ್ಬ್ರಹ್ಮಣಃ ಸರ್ವೇ ಭಾಸಂತೇ ಹಿ ಗುಣಾಃ ಹರೇಃ।ತದನ್ಯೇಷಾಂ ಯಥಾಯೋಗ್ಯಂ ಸ್ವಮಾಹಾತ್ಮ್ಯಾನುಸಾರತಃ** ' ಎನ್ನುವ ಶ್ರುತಿಯಿಂದ ಏಕಕಾಲದಲ್ಲಿ ಯೋಗ್ಯತಾನುಸಾರವಾಗಿ ಗುಣಪ್ರತೀತಿರೂಪವಾದ ಮಾಹಾತ್ಮ್ಯವಿದ್ದುದರಿಂದ ನಿರ್ಣಯವು ಕೂಡುತ್ತದೆ. **೪ ನೇ ಸರ್ವಾಭೇದಾಧಿಕರಣದಲ್ಲಿ**– ಕರ್ತವ್ಯಾಕರ್ತವ್ಯ ಕ್ರಿಯೆಗಳನ್ನು ಕಂಡದರಿಂದ ಬಹುಗುಣಗಳನ್ನು ಉಪಸಂಹಾರ ಮಾಡಬೇಕೋ ಬೇಡವೋ ಎಂದು ಸಂಶಯವು ಬಂದರೆ- ಮಾಡಬಾರದೆಂದು ಪೂರ್ವಪಕ್ಷವು; ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ ಸರ್ವಗುಣೋಪಸಂಹಾರದಲ್ಲಿ ಅಲ್ಪ ಗುಣಗಳನ್ನುಪಸಂಹಾರಮಾಡತಕ್ಕವನ ಫಲದ್ವೈಶಿಯಿಂದ ಅತಿಶಯಿತ ಫಲವು ನಿರ್ಣಯವಾಗುವುದಿಲ್ಲ. ಫಲಾತಿಶಯವು ನಿರ್ಣಯವಾಗುವಾಗ ಸರ್ವಗುಣಗಳನ್ನುಪಸಂಹಾರಮಾಡಿದರೆ ಅವರಿಗೆ ಪ್ರೇಕ್ಷಾವತ್ವವೇ ಬಾರದೆ ಹೋಗಬೇಕಾಗುವುದು. ಏವಂಚ ಫಲವು ನಿಣಯವಾಗದಿರುವುದರಿಂದ ಉಪಸಂಹಾರವು ಕರ್ತವ್ಯವಾಗದಿರುವುದರಿಂದ ಸರ್ವ ಪರಿಜ್ಞಾನವು ಯುಕ್ತವಲ್ಲವೆಂದರೆ— ಹಾಗೆ ಹೇಳಕೂಡದು. ಬಹುಗುಣೋಪಸನಾರೂಪವಾದ ಮಾಹಾತ್ಮ್ಯದಿಂದಲೇ ಅನುಪಸಂಹರ್ತೃಗಳ ಫಲದ್ವೈಶಿಯಿಂದ ಇತರವಾದ ಫಲವು ಅಂತಹ ಗುಣೋಪಸಂಹಾರ ಯೋಗ್ಯತಾರೂಪವಾದ ಮಾಹಾತ್ಮ್ಯವುಳ್ಳವರಿಗೆ ಆಗುತ್ತದೆಂದು ನಿರ್ಣಯವು ಕೂಡುತ್ತದೆ. **೫ ನೇ ಆನಂದಾಧಿಕರಣದಲ್ಲಿ**– ಭಗವದ್ಗುಣಗಳು ಎಲ್ಲಾ ಮುಮುಕ್ಷುಗಳಿಂದಲೂ, ಉಪಾಸ್ಯಗಳಾದುವುಗಳು ಸಂಖ್ಯಾನಿರ್ದೇಶಗಳಿಂದ ಪ್ರತ್ಯೇಕ ಕ್ಲಪ್ತಗಳಾದವುಗಳು ಇವೆಯೋ ಇಲ್ಲವೋ ಎಂದು ಸಂಶಯವು ಬಂದರೆ— ಇಲ್ಲವೆಂದು ಪೂರ್ವಪಕ್ಷವು, ಇವೆ ಎಂದು ಸಿದ್ಧಾಂತವು. ಹೇಗೆಂದರೆ— ಸರ್ವ ಮುಮುಕ್ಷುಗಳಿಂದಲೂ ಉಪಾಸ್ಯಗಳಾದ ಗುಣಗಳು ಸಂಖ್ಯಾನಿರ್ದೇಶಗಳಿಂದ ಕ್ಲಪ್ತಗಳಾಗಿ ಇಲ್ಲ. ಇದ್ದರೆ ಯಾವ ಗುಣಗಳಿಗೆ ಎಷ್ಟಕ್ಕೆ ಸಮುಚ್ಚಯವು ಎಂದು ಹೇಳಬೇಕು. ಅದರಲ್ಲಿ ಆನಂದ ಮೊದಲಾದ ಕೆಲವು ಗುಣಗಳಿಗೆ ಸಮುಚ್ಚಯವು ಪ್ರಾಪ್ತವಾದರೆ ಎಲ್ಲಾ ಗುಣಗಳ ಸಮುಚ್ಚಯವು ಎಲ್ಲರಿಗೂ ಆಗಬೇಕಾಗುವುದು. ಏವಂಚ ಮೋಕ್ಷೇಚ್ಛುಗಳಿಂದ ನಿಯಮದಿಂದ ಉಪಾಸ್ಯ ಗುಣಗಳಿಗೆ ನಿರ್ಣಯವಾಗದಿರುವುದರಿಂದ ಯಾರಿಗೂ ಉಪಾಸನೆಯು ಕೂಡದೆ ಹೋಗುವುದು. ಎಂದರೆ—

ಹೀಗೆ ಹೇಳಕೂಡದು. ಹಿಂದೆ ಹೇಳಿದ ಮುಮುಕ್ಷುಗಳಿಗೆ ಅಲ್ಪಶಕ್ತಿಯಿರುವುದು. ಅಂದರೆ-ಸಂಖ್ಯಾನಿರ್ದೇಶಗಳಿಂದ ಕ್ಲಪ್ತಗಳಾದ ಎಲ್ಲಾ ಮುಮುಕ್ಷುಗಳಿಂದಲೂ ಸರ್ವಥಾ ಉಪಾಸನಾರ್ಹಗಳಾದ ಆನಂದ-ಜ್ಞಾನ-ಸತ್-ಆತ್ಮ ಎಂದು ನಾಲ್ಕೇ. ಅಧಿಕಗಳಲ್ಲ. ಕೆಲವು ಗುಣಗಳಿಗೆ ಸಮುಚ್ಚಯವು ಪ್ರಾಪ್ತವಾದರೆ ಸರ್ವಗುಣಗಳಿಗೂ ಸಮುಚ್ಚಯವು ಬರಬೇಕಾದೀತು ಎನ್ನುವುದು ಇಲ್ಲ. ಬ್ರಹ್ಮಾದಿಗಳಿಗೆ ಕೆಲವರಿಗೆ ಅಧಿಕ ಗುಣಗಳನ್ನುಪಾಸನಾಮಾಡುವುದರಲ್ಲಿ ಸಾಮರ್ಥ್ಯವಿದ್ದರೂ ಇತರರಿಗೆ ಅಲ್ಪಶಕ್ತಿಯಿದ್ದಪ್ರಯುಕ್ತ ನಾಲ್ಕರಕ್ಕಿಂತ ಹೆಚ್ಚಿಗೆ ಗುಣಗಳನ್ನು ಉಪಾಸನಾಮಾಡುವ ವಿಷಯದಲ್ಲಿ ಸಾಮರ್ಥ್ಯವಿಲ್ಲ. ಏವಂಚ ಸರ್ವೋಪಾಸ್ಯಗಳಾದ ಗುಣಗಳ ನಿರ್ಣಯವಾಗುವುದರಿಂದ ಉಪಾಸನವು ಯುಕ್ತವು. **೭ನೇ ಪ್ರಿಯಶಿರಸ್ತ್ವಾಧಿಕರಣದಲ್ಲಿ—** ಸರ್ವ ಮುಮುಕ್ಷುಗಳಿಂದ ಉಪಾಸ್ಯಗಳೂ ಅನುಪಾಸ್ಯಗಳೂ ಆದ ಗುಣಗಳು ಪ್ರತೀತಗಳಾಗಿರುವುದರಿಂದ **'ತಸ್ಯ ಪ್ರಿಯಮೇವ ಶಿರಃ'** ಇತ್ಯಾದಿಗಳಲ್ಲಿ ಶ್ರುತಗಳಾದ ಪ್ರಿಯ ಶಿರಸ್ತ್ವಾದಿಗುಣಗಳು ಸರ್ವ ಮುಮುಕ್ಷುಗಳಿಂದ ಉಪಾಸ್ಯಗಳೋ, ಅಲ್ಲವೋ ಎಂದು ಸಂದೇಹವು ಬಂದರೆ— ಸರ್ವೋಪಾಸ್ಯಗಳೆಂದು ಪೂರ್ವಪಕ್ಷವು; ಅಲ್ಲವೆಂದು ಸಿದ್ಧಾಂತವು. ಹೇಗೆಂದರೆ— ಪ್ರಿಯ ಶಿರಸ್ತ್ವಾದಿಗಳು ಆನಂದಾದಿಗಳ ವಿಶೇಷವೆಂದೇ ಕಂಡದರಿಂದ ಅವುಗಳನ್ನು ಎಲ್ಲರೂ ಉಪಸಂಹಾರಮಾಡಬೇಕು. ಏವಂಚ ಪ್ರಿಯ ಶಿರಸ್ತ್ವಾದಿಗಳು ಆನಂದ ವಿಶೇಷವಾದುದರಿಂದ ಸರ್ವೋಪಸಂಹಾರ್ಯತ್ವವೆಂದು ತಿಳಿಯಕೂಡದು. **'ಯಥಾಯೋಗ್ಯಾನ್ ಗುಣಪೂಗಾನುಪಾಸ್ಯ ಫಲಂ ಭವೇನ್ಮುಕ್ತಿಗಂ ನಾನ್ಯಥಾ ಸ್ಯಾತ್ । ನಿತ್ಯೈಕಾಗ್ರ್ಯವ್ಯಂಗ್ಯತಾ ಹೇತುತಶ್ಚ ಸಾಕ್ಷಾದ್ವ್ಯಶಿನೋಃ ತದ್ವಿಶೇಷ್ಯೈಃ ಸ್ಮೃತೈಶ್ಚ'** ಎನ್ನುವ ಶ್ರುತಿಯದೆಶೆಯಿಂದ ಸ್ವಯೋಗ್ಯ ಗುಣಗಳಿಂದಲೇ ಫಲವಿರುವುದು. ಏವಂಚ ಯಥಾ ಯೋಗ್ಯಗಳಾದ ನಾಲ್ಕು ಗುಣಗಳನ್ನುಪಾಸನೆ ಮಾಡಿದರಿಂದಲೇ ಫಲವು ಸಿಗುವುದರಿಂದ ಪ್ರಿಯಶಿರಸ್ತ್ವಾದಿಗುಣಗಳು ಸರ್ವೋಪಾಸ್ಯಗಳಲ್ಲ. **೭ನೇ ಇತರಾಧಿಕರಣದಲ್ಲಿ—** ನಾಲ್ಕು ಗುಣಗಳಿಂದ ಅತಿರಿಕ್ತಗಳಾದ ಭಗವತ್ ಗುಣಗಳನ್ನು ದೇವಾದಿಗಳು ಉಪಾಸನಾಮಾಡಬೇಕೋ ಬೇಡವೋ ಎಂದು ಸಂಶಯವು ಬಂದರೆ— ಬ್ರಹ್ಮನಿಂದ ಇತರರಾದ ದೇವಾದಿಗಳು ನಾಲ್ಕೇ ಗುಣಗಳನ್ನುಪಾಸನಾಮಾಡಬೇಕು. ಹೆಚ್ಚು ಗುಣಗಳನ್ನುಪಾಸನಾ ಮಾಡಬಾರದು. ನಾಲ್ಕರಿಂದ ಇತರಗಳಾದ ಮಧ್ಯಮಗುಣಗಳನ್ನೂ ದೇವಾದಿಗಳು ಉಪಾಸನಾ ಮಾಡಬೇಕು ಎಂದು ಸಿದ್ಧಾಂತವು. ಹೇಗೆಂದರೆ— ಬ್ರಹ್ಮನಿಂದ ಇತರರಾದ ದೇವಾದಿಗಳಿಗೂ ಬಹು ಗುಣಗಳನ್ನುಪಾಸನಾ ಮಾಡಿದರಿಂದ ಕಾರ್ಯವೂ, ಫಲವೂ ಇಲ್ಲ. ಏವಂಚ ಯೋಗ್ಯತಾನಿರ್ಣಯವಾಗದೆ ಇದ್ದುದರಿಂದ, ಬಹುಗುಣೋಪಾಸನೆಯು ಕೂಡದಿರುವುದರಿಂದ, ಎಲ್ಲರಿಗೂ ಚತುರ್ಗುಣೋಪಾಸನಾ ಯೋಗ್ಯತೆಯೇ ನಿರ್ಣೀತವಾಗಿರುವುದರಿಂದ ದೇವಾದಿಗಳು ಬಹು ಗುಣೋಪಸಂಹಾರವನ್ನು ಮಾಡಕೂಡದು. ಮತ್ತೆ ಚತುರ್ಗುಣೋಪಾಸನೆಯನ್ನೇ ಮಾಡಬೇಕು. ಎಂದರೆ— ಹೀಗೆ ಹೇಳಕೂಡದು. ಅವರ ಭಾವಿಯಾದ ಉತ್ಕರ್ಷವನ್ನು ತಿಳಿದು ಅದನ್ನು ತಿಳಿದಿರುವ ಬ್ರಹ್ಮನಿಗೇನೇ ಗುಣನಿಯಮೋಪದೇಶವು ಕೂಡುತ್ತದೆ. ಏವಂಚ ಯೋಗ್ಯತಾನಿರ್ಣಯವಾಗುವುದರಿಂದ ದೇವಾದಿಗಳು ಮಧ್ಯಮ ಗುಣಗಳನ್ನುಪಾಸನಾಮಾಡಬೇಕು. **೮ನೇ ಆಧ್ಯಾನಾಧಿಕರಣದಲ್ಲಿ—** ಕರ್ತವ್ಯಾಕರ್ತವ್ಯಕ್ರಿಯೆಗಳನ್ನು ಕಂಡದರಿಂದ ಹಿಂದೆ ಹೇಳಿದ ಗುಣೋಪಸಂಹಾರಾನುಪಸಂಹಾರಗಳನ್ನು ಮಾಡಬೇಕೋ, ಬೇಡವೋ ಎಂದು ಸಂಶಯವು ಬಂದರೆ— ಮಾಡಕೂಡದೆಂದು ಪೂರ್ವಪಕ್ಷವು; ಮಾಡಬೇಕೆಂದು ಸಿದ್ಧಾಂತವು. ಹೇಗೆಂದರೆ— ಗುಣಗಳನ್ನು ನಾನಾಸ್ಥಾನಗಳಲ್ಲಿ ಹೇಳಿದರಿಂದ ಉಪಸಂಹಾರಾರ್ಥತ್ವವು ಕೂಡದಿರುವುದರಿಂದ ಉಪಾಸನವು ಯುಕ್ತವಲ್ಲವೆಂದರೆ, ಹೀಗೆ ಹೇಳ

ಕೂಡದು. ವಿಪ್ರಕೀರ್ಣಗಳಾದ ಅಂದರೆ ನಾನಾಸ್ಥಾನಗಳಲ್ಲಿ ಹೇಳಿದ ಗುಣಗಳನ್ನು ಉಪಸಂಹಾರ ಮಾಡಿಕೊಂಡು ಉಪಾಸನಾ ಮಾಡುವವನಿಗೆ ಅದಕ್ಕೆ ಸದೃಶವಾದ ಫಲವು ಪ್ರಾಪ್ತವಾಗುವುದರಿಂದ ಉಪಸಂಹಾರಮಾಡಿ ಧ್ಯಾನಮಾಡುವುದಕ್ಕಾಗಿಯೇ ಗುಣಗಳನ್ನು ಹೇಳಿದ್ದು. ಏವಂಚ ನಾನಾಸ್ಥಾನಗಳಲ್ಲಿದ್ದ ಉಕ್ತಿಯು ಅನ್ಯಥಾ ಸಿದ್ಧವಾಗುವುದರಿಂದಲೂ ವೈಫಲ್ಯವು ಸಿದ್ಧಿಸದೆ ಇರುವುದರಿಂದಲೂ ಉಪಸಂಹಾರವನ್ನು ಮಾಡಲೇಬೇಕು. **೯ ನೇ ಆತ್ಮಗೃಹೀತ್ಯಧಿಕರಣದಲ್ಲಿ**- 'ಆನಂದಾದಯಃ ಪ್ರಧಾನಸ್ಯ, ಆತ್ಮಶಬ್ದಾಚ್ಚ' ಎಂದು ಉಭಯಥಾ ಉಕ್ತಿಯಿಂದ ಆನಂದಾದಿ ನಾಲ್ಕುಕೂಡ ಸರ್ವ ಮುಮುಕ್ಷುಗಳಿಂದಲೂ ಉಪಾಸ್ಯಗಳೋ, ಆತ್ಮತ್ವ ಒಂದೇ ಉಪಾಸ್ಯವೋ ಎಂದು ಸಂಶಯವು ಬಂದರೆ— ಆತ್ಮತ್ವವೇ ಸರ್ವ ಮುಮುಕ್ಷೂಪಾಸ್ಯವು ಎಂದು ಪೂರ್ವಪಕ್ಷವು, ನಾಲ್ಕೂಕೂಡ ಉಪಾಸ್ಯಗಳೇ ಎಂದು ಸಿದ್ಧಾಂತವು. ಹೇಗೆಂದರೆ— ಆನಂದಾದಿಗಳನ್ನು ಬಿಟ್ಟು ಆತ್ಮತ್ವವನ್ನೇ ಉಪಾಸನಾಮಾಡಿದರೆ— ಅಪರೋಕ್ಷಜ್ಞಾನವು ಶೀಘ್ರದಲ್ಲಿ ಉಂಟಾಗುವುದರಿಂದ 'ಆನಂದಾದಯಃ ಪ್ರಧಾನಸ್ಯ' ಎಂದು ಹೇಳಿದ್ದಕ್ಕೆ ಬಾಧವು, ಎಂದರೆ ಹೀಗೆಹೇಳಕೂಡದು ಆನಂದಾದಿಗಳು ಆತ್ಮಶಬ್ದಾರ್ಥ ವಿಶೇಷವಾದುದರಿಂದ 'ಆತ್ಮೇತ್ಯೇವ' ಎಂದು ಅವಧಾರಣವಿದ್ದರೂ ಆನಂದ ಮೊದಲಾದ ನಾಲ್ಕುಗುಣಗಳ ಉಪಾಸನಾ ನಿಯಮಕ್ಕೆ ಭಂಗವಿಲ್ಲ. **೧೦ ನೇ ಅನ್ವಯಾಧಿಕರಣದಲ್ಲಿ**— ಉಪಾಸ್ಯ-ಅನುಪಾಸ್ಯ ಗುಣಗಳು ಕಂಡದರಿಂದ ಆತ್ಮಶಬ್ದೋಕ್ತಗುಣಗಳು ಸರ್ವೋಪಾಸ್ಯಗಳೋ, ಅಲ್ಲವೋ ಎಂದು ಸಂಶಯವು ಬಂದರೆ—ಸರ್ವೋಪಾಸ್ಯಗಳಲ್ಲವೆಂದು ಪೂರ್ವಪಕ್ಷವು; ಸರ್ವೋಪಾಸ್ಯಗಳೆಂದು ಸಿದ್ಧಾಂತವು. ಹೇಗೆಂದರೆ— ಆತ್ಮಶಬ್ದದಿಂದ ಇಷ್ಟುಗುಣಗಳು ಪ್ರತಿಪಾದಿಸಲ್ಪಡುತ್ತವೆ ಎಂದು ನಿರ್ಣಯವಾಗದಿರುವುದರಿಂದ ಆತ್ಮಶಬ್ದವು ಭ್ರಮಕರವೇ ಆಗಿರುವುದರಿಂದ ಆತ್ಮಶಬ್ದದಿಂದ ಹೇಳಲ್ಪಟ್ಟ ಗುಣಗಳು ಸರ್ವೋಪಾಸ್ಯಗಳಲ್ಲ ಎಂದರೆ— ಹೀಗೆ ಹೇಳಕೂಡದು. ಚತುರ್ಮುಖಾದ್ಯಧಿಕಾರಿಗಳಿಗೆ ಉಪಾಸ್ಯಗುಣಗಳು ಹೆಚ್ಚು ಇದ್ದಪ್ರಯುಕ್ತ ಆತ್ಮಶಬ್ದವು ಚತುರ್ಮುಖಾದಿಗಳಿಂದ ಉಪಾಸ್ಯಗಳಾದ ಗುಣಗಳನ್ನು ಹೇಳುತ್ತದೆ ಎನ್ನುವುದು ಯುಕ್ತವೇ. **೧೧ ನೇ ಕಾರ್ಯಾಧಿಕರಣದಲ್ಲಿ**- ಧ್ಯೇಯ ಭಗವದ್ಗುಣಗಳು ಅಲೌಕಿಕಗಳೆಂದು ಹೇಳಿದುದರಿಂದಲೂ, ಲೋಕದೃಷ್ಟಿಯಿಂದಲೂ ಭಗವದ್ಗುಣಗಳು ಲೌಕಿಕಗಳೋ ಅಲೌಕಿಕಗಳೋ ಎಂದು ಸಂಶಯವು ಬಂದರೆ-ಲೌಕಿಕಗಳನ್ನೇ ಧ್ಯಾನ ಮಾಡಬೇಕೆಂದು ಪೂರ್ವಪಕ್ಷವು; ಅಲೌಕಿಕಗಳನ್ನೇ ಧ್ಯಾನಿಸಬೇಕೆಂದು ಸಿದ್ಧಾಂತವು. ಹೇಗೆಂದರೆ— ಅಲೌಕಿಕ ಗುಣಗಳು ಮೊದಲು ಅನುಭೂತವಾಗದಿರುವುದರಿಂದ ಅವುಗಳಿಗೆ ಧ್ಯಾನಕಾಲದಲ್ಲಿ ಸ್ಮೃತಿರೂಪ ಪ್ರತೀತಿಯಿಲ್ಲದಿರುವುದರಿಂದ ಅವುಗಳಿಗೆ ಧ್ಯಾನವು ಕೂಡುವುದಿಲ್ಲ. ಲೌಕಿಕಗುಣಗಳು ಧ್ಯೇಯವಲ್ಲವೆಂದಾದರೆ ಧ್ಯಾನವೇ ಇಲ್ಲವೆಂದಾಗಬೇಕಾಗುವುದು. ಧ್ಯಾನವು ಆವಶ್ಯಕವೇ, ಆದಕಾರಣ ಲೌಕಿಕಗಳನ್ನೇ ಧ್ಯಾನಿಸಬೇಕು. ಎಂದರೆ ಹೀಗೆ ಹೇಳಕೂಡದು. ಲೌಕಿಕ ವಿಲಕ್ಷಣಗಳಾದವುಗಳು ಅತ್ಯುತ್ತಮಗಳು ಎಂದು ಧ್ಯಾನವೇ ಅಲೌಕಿಕವಾದ ಮೋಕ್ಷರೂಪ ಕಾರ್ಯವನ್ನು ಹುಟ್ಟಿಸುವುದರಿಂದ, ಪ್ರಧಾನವಾದುದರಿಂದ ಅಲೌಕಿಕ ಗುಣಗಳನ್ನೇ ಧ್ಯಾನಿಸಬೇಕು. **೧೨ ನೇ ಸಮಾನಾಧಿಕರಣದಲ್ಲಿ**— ಕೃಷಿ ಮೊದಲಾದ ಕ್ರಿಯೆಗಳಲ್ಲಿ ತನಗೆ ಅನುಸಾರಿಯಾದ ಫಲವನ್ನು ಕೊಡುವಿಕೆಯೂ, ಕೊಡದಿರುವಿಕೆಯೂ ಕಂಡದರಿಂದ ಭಗವದ್ಗುಣೋಪಾಸನವೂ ಸ್ವಾನುಸಾರಿಯಾದ ಫಲವನ್ನು ಕೊಡುತ್ತದೋ, ಇಲ್ಲವೋ ಎಂದು ಸಂಶಯವು ಬಂದರೆ— ಇಲ್ಲವೆಂದು ಪೂರ್ವಪಕ್ಷವು; ಸ್ವಾನುಸಾರಿಯಾದ ಫಲವನ್ನು ಕೊಡುತ್ತದೆ ಎಂದು ಸಿದ್ಧಾಂತವು. ಅದರಲ್ಲಿ ಸರಸ್ವತೀ-ಬ್ರಹ್ಮರಿಗೆ ಸ್ಥಾನೈಕ್ಯವೂ, ಆನಂದಾದಿ ಗುಣಗಳಿಂದ ತಾರತಮ್ಯವೂ ಎನ್ನುವ ಲಿಂಗದೇಶಿಯಿಂದ ಇತರರಿಗೂ ಕೂಡ ಉಪಾಸನಾನು

ಸಾರವಾಗಿ ಮುಕ್ತಿಯಲ್ಲಿ ಫಲವಾಗುವುದಿಲ್ಲ. ಎಂದರೆ— ಹೀಗೆ ಹೇಳಕೂಡದು. ಏಕೆಂದರೆ— **'ಯಥಾಶಕ್ತಿ ಸ್ಮೃತಾನ್ ಧಾತ್ರಾ ಗುಣಾನ್ ವಿಷ್ಣೋಃ ಸರಸ್ವತೀ । ಸ್ಮರೇತ್ತ್ರೈವಿಕ್ರಮಾದ್ಯಾಂಸ್ತು ನಿತ್ಯವಿಶ್ರಾಂತಿಪೂರ್ವಕೈಃ ॥ ಕದಾಚಿಲ್ಲೋಪಯೇದ್ದೇವೀ ಸ್ಥಾನೈಕ್ಯಂ ನ ಗುಣೈಸ್ತತಃ । ಸಾಮ್ಯಂ ತಯೋರ್ಯಥಾ ವಿಷ್ಣೋರ್ಗುಣೋಪಾಸಾ ಫಲಂ ಭವೇತ್ ॥'** ಎನ್ನುವ ಅಧ್ಯಾತ್ಮ ವಚನದೆಶೆಯಿಂದ ಸರಸ್ವತಿಯು ಬ್ರಹ್ಮನಿಂದ ಧ್ಯಾನಿಸಲ್ಪಟ್ಟ ವಿಷ್ಣುಗುಣಗಳನ್ನು ಸಾಮಾನ್ಯ ಕ್ರಿಯೆಗಳಿಂದ ಕೂಡಿಕೊಂಡು ಶಕ್ತ್ಯನುಸಾರವಾಗಿ ಸ್ಮರಿಸುವಳು. ತ್ರಿವಿಕ್ರಮತ್ವಾದಿಗಳನ್ನು ಸ್ಮರಿಸುವುದಿಲ್ಲ. ಆದಕಾರಣ ಅವರಿಬ್ಬರಿಗೆ ಸ್ಥಾನೈಕ್ಯವಿದೆ. ಗುಣಗಳಿಂದ ಸಾಮ್ಯವಿಲ್ಲ. ಶಕ್ತ್ಯನುಸಾರವಾಗಿ ವಿಷ್ಣುಗುಣಗಳ ಉಪಾಸನೆಯು ಹಾಗೆಯೇ ಫಲವು ಆಗುವುದು. ಏವಂಚ ಸರಸ್ವತಿಗೆ ಸಾಮಾನ್ಯ ಕ್ರಿಯೆಗಳಲ್ಲಿಯೇ ಉಪಸಂಹಾರವು. ತ್ರಿವಿಕ್ರಮತ್ವಾದಿ ವಿಶೇಷಕ್ರಿಯೆಗಳಲ್ಲಿ ಉಪಸಂಹಾರವಿಲ್ಲ. ಸರ್ವಗುಣೋಪಸಂಹಾರವಾದರೂ ಇಬ್ಬರಿಗೂ ಸಿದ್ಧವಾಗಿದೆ. ಆದಕಾರಣ ವಿಷಯಗಳು ಭಿನ್ನಗಳಾಗಿರುವುದರಿಂದ ಸಮವಿಷಮೋಪಾಸನೆಗಳಿಗೆ ವಿರೋಧವಿಲ್ಲದಿರುವುದರಿಂದ ಗುಣೋಪಾಸನಾನುಸಾರವಾಗಿ ಮುಕ್ತಿಯಲ್ಲಿ ಆಧಿಕ್ಯವು ಬರುತ್ತದೆ ಎನ್ನುವುದು ಯುಕ್ತವೇ. ೧೩ನೇ **ಸವಾವಿಶೇಷಾಧಿಕರಣದಲ್ಲಿ**- ಸರ್ವೋಪಾಸ್ಯ-ಅನುಪಾಸ್ಯಗುಣಗಳನ್ನು ಕಂಡದರಿಂದ ಆತ್ಮಶಬ್ದೋಕ್ತ ಗುಣಗಳು ಸರ್ವೋಪಾಸ್ಯಗಳೇ, ಅಲ್ಲವೋ ಎಂದು ಸಂಶಯವು ಬಂದರೆ- ಸರ್ವೋಪಾಸ್ಯಗಳಲ್ಲವೆಂದು ಪೂರ್ವಪಕ್ಷವು; ಸರ್ವೋಪಾಸ್ಯಗಳೆಂದು ಸಿದ್ಧಾಂತವು. ಹೇಗೆಂದರೆ— ಆತ್ಮಶಬ್ದೋಕ್ತಗುಣಗಳು ಸರ್ವೋಪಾಸ್ಯಗಳಲ್ಲ. ಆತ್ಮ ಶಬ್ದವು ಸರ್ವ ಗುಣಗಳನ್ನು ಹೇಳುತ್ತದೆ. ಸರ್ವ ಗುಣಗಳನ್ನುಪಾಸನೆ ಮಾಡಲಿಕ್ಕೆ ಸರ್ವರಿಗೂ ಯೋಗ್ಯತೆಯಿಲ್ಲ ಯದ್ಯಪಿ ಆತ್ಮಶಬ್ದವು ಉತ್ತಮಾಧಿಕಾರಿಗಳನ್ನು ಕುರಿತೇ ಸರ್ವ ಗುಣಗಳನ್ನೂ ಹೇಳುತ್ತದೆ. ಸರ್ವರನ್ನೂ ಕುರಿತು ಹೇಳುವುದಿಲ್ಲ. ಆದಾಗ್ಯೂ ಈ ಪುರುಷನಿಗೆ ಇಷ್ಟು ಗುಣಗಳು ಆತ್ಮಶಬ್ದದಿಂದ ಹೇಳಲ್ಪಡುತ್ತವೆ ಎಂದು ವ್ಯವಸ್ಥಿತಿಯಿಲ್ಲದಿರುವುದರಿಂದ ಆತ್ಮಶಬ್ದೋಕ್ತಗುಣಗಳಿಗೆ ಸರ್ವೋಪಾಸ್ಯತ್ವವಿಲ್ಲ, ಎಂದರೆ— ಹೀಗೆ ಹೇಳಕೂಡದು. ಯಾರಿಗೆ ಎಷ್ಟು ಗುಣಗಳು ಧ್ಯಾನಕಾಲದಲ್ಲಿ ಪ್ರತೀತಗಳಾಗುತ್ತವೋ ಆತನು ಅಷ್ಟು ಗುಣಗಳನ್ನು ಧ್ಯಾನಿಸಬೇಕು. ಏವಂಚ ಆತ್ಮಶಬ್ದದಿಂದ ಈ ಪ್ರಕಾರವಾಗಿಯೇ ಗುಣಪ್ರತೀತಿಯು ವಿವಕ್ಷಿತವಾಗಿರುವುದರಿಂದ, ಅಯೋಗ್ಯ ಪ್ರತೀತಿಯು ಉಪಾಸನೆಗೆ ಉಪಯುಕ್ತವಾಗದಿರುವುದರಿಂದ ಹಿಂದೆ ಹೇಳಿದ್ದು ಯುಕ್ತವು. ೧೪ನೇ **ಸಂಭೃತ್ಯಧಿಕರಣದಲ್ಲಿ**- **'ಉಕ್ಥಾ ಸ ದ್ಯಾವಾಪೃಥಿವೀ ಬಿಭರ್ತಿ ಏಷ ಹಿ ಸರ್ವೇಷು ಲೋಕೇಷು ಭಾತಿ'** ಇತ್ಯಾದಿಗಳಲ್ಲಿ ಪ್ರತೀತಗಳಾದ ಭಗವದ್ಗುಣಗಳಲ್ಲಿ ಅಂತರ್ಗತಗಳಾದ ಸಂಭೃತಿದ್ಯುವ್ಯಾಪ್ತಿಗಳು ಎಲ್ಲಾ ಮುಮುಕ್ಷುಗಳಿಂದಲೂ ಉಪಾಸ್ಯಗಳೋ, ಅಲ್ಲವೋ ಎಂದು ಸಂಶಯವು ಬಂದರೆ— ಸರ್ವ ಮುಮುಕ್ಷುಗಳಿಂದಲೂ ಉಪಾಸ್ಯಗಳು ಎಂದು ಪೂರ್ವಪಕ್ಷವು; ಸರ್ವ ಮುಮುಕ್ಷುಗಳಿಂದ ಉಪಾಸ್ಯಗಳಲ್ಲವೆಂದು ಸಿದ್ಧಾಂತವು. ಹೇಗೆಂದರೆ— ಮುಮುಕ್ಷುತ್ವವು ಸಮಾನವಾಗಿರುವುದರಿಂದ ಸ್ವಾಧಮಭರಣವೂ ಪ್ರಕಾಶವೂ ಕೂಡ ಸರ್ವರಿಗೂ ಅಪೇಕ್ಷಿತವಾಗಿರುವುದರಿಂದ ಸಂಭೃತಿದ್ಯುವ್ಯಾಪ್ತಿಗಳೂ ಕೂಡ ಸಾಮಾನ್ಯಗಳು. ಏವಂಚ ಮುಮುಕ್ಷುತ್ವ ಫಲಾಪೇಕ್ಷಿತತ್ವಗಳು ಸಮಗಳಾದ ಪ್ರಯುಕ್ತ ಸಂಭೃತಿದ್ಯುವಾಪ್ತಿಗಳೂ ಕೂಡ ಸರ್ವೋಪಾಸ್ಯಗಳು ಎಂದರೆ— ಹೀಗೆ ಹೇಳಕೂಡದು. **'ಸತ್ಯೋ ಜ್ಞಾನಂ ಪರಮಾನಂದರೂಪಃ ಆತ್ಮೇತ್ಯೇವಂ ನಿತ್ಯದೋಪಾಸನಂ ಸ್ಯಾತ್ । ನಾನ್ಯತ್ಕಿಂಚಿತ್ಸಮುಪಾಸೀತ ಧೀರಃ ಸರ್ವೈರ್ಗುಣೈರ್ದೇವಗಣಾ ಉಪಾಸತೇ'** । ಇತ್ಯಾದಿ ಪ್ರಮಾಣಬಲದಿಂದಲೂ, **'ಸತ್ಯಂ ಜ್ಞಾನಮನಂತಂ ಬ್ರಹ್ಮ**

ಇತ್ಯಾದಿ ಪ್ರಮಾಣಬಲದಿಂದಲೂ ಸಂಭೃತಿದ್ಯುವ್ಯಾಪ್ತಿಗಳು ಸರ್ವೋಪಾಸ್ಯಗಳಲ್ಲ. ಆದುದರಿಂದ ಹಿಂದೆ ಹೇಳಿದ ನಿಯಮಕ್ಕೆ ಭಂಗವಿಲ್ಲ. ೧೫ನೇ **ಪುರುಷ ವಿದ್ಯಾಧಿಕರಣದಲ್ಲಿ— ಕರ್ತವ್ಯ-ಅಕರ್ತವ್ಯ** ಕ್ರಿಯೆಗಳು ಕಂಡದರಿಂದ ಸಾರ್ವತ್ರಿಕಗುಣೋಪಸಂಹಾರವು ಮಾಡಬೇಕೋ, ಬೇಡವೋ ಎಂದು ಸಂಶಯವು ಬಂದರೆ- ಸರ್ವತಃ ಗುಣಗಳನ್ನು ಉಪಸಂಹಾರ ಮಾಡಕೂಡದು ಎಂದು ಪೂರ್ವಪಕ್ಷವು; ಮಾಡಬೇಕೆಂದು ಸಿದ್ಧಾಂತವು. ಹೇಗೆಂದರೆ— ಕೆಲವು ಕಡೆ ಬಹು ಗುಣಗಳೂ, ಕೆಲವು ಕಡೆ ಅಲ್ಪ ಗುಣಗಳೂ ಶ್ರುತಿಗಳಲ್ಲಿಯೇ ಹೇಳಲ್ಪಡುತ್ತವೆ. ತಥಾಚ ಯಾರು ಬಹು ಗುಣಗಳ ಉಪಾಸನೆಗೆ ಯೋಗ್ಯರೋ ಅವರಿಗೆ ಬಹು ಗುಣಗಳನ್ನು ಹೇಳತಕ್ಕ ಒಂದೊಂದು ವಿದ್ಯೆಯಿಂದಲೂ, ಯಾರು ಅಲ್ಪ ಗುಣಗಳ ಉಪಾಸನೆಗೆ ಯೋಗ್ಯರೋ ಅವರಿಗೆ ಅಲ್ಪ ಗುಣಗಳನ್ನು ಹೇಳತಕ್ಕ ಒಂದು ವಿದ್ಯೆಯಿಂದ ಉಪಾಸನೆಯು ಕೂಡುತ್ತದೆ. ಸಾರ್ವತ್ರಿಕ ಗುಣೋಪಸಂಹಾರವನ್ನು ಹೊರತೇ ಸ್ವಯೋಗ್ಯಗುಣೋಪಾಸನೆಯು ಕೂಡುತ್ತದೆ. ಏವಂಚ ಉಪಸಂಹಾರಕ್ಕೆ ಪ್ರಯೋಜನವಿಲ್ಲದಿರುವುದರಿಂದ ಸರ್ವ ಪರಿಜ್ಞಾನೋಪಯೋಗವಿಲ್ಲವೆಂದರೆ ಹೀಗೆ ಹೇಳಕೂಡದು. '**ಗುಣಾಃ ಸರ್ವೇ ಬ್ರಹ್ಮಣ್ಯೈವ ಹ್ಯುಪಾಸ್ಯಾಃ ನಾನ್ಯೈರ್ದೇವೈಃ ಕಿಮು ಸರ್ವೈರ್ಮನುಷ್ಯೈಃ**' ಇತ್ಯಾದಿ ಶ್ರುತಿಗಳಿಂದ ಸರ್ವಗುಣಗಳನ್ನುಪಸಂಹಾರಮಾಡ ತಕ್ಕ ಅಧಿಕಾರಿಯು ಇಲ್ಲದಿರುವುದರಿಂದಲೂ, ಒಂದು ಕಡೆ ಪ್ರತ್ಯೇಕವಾಗದೆ ಸರ್ವ ಗುಣಗಳನ್ನು ಹೇಳದೆ ಇದ್ದುದರಿಂದಲೂ ಅನ್ಯಥಾನುಪಪತ್ತಿರೂಪವಾದ ಬಲದೆಶೆಯಿಂದ ಸರ್ವಗುಣೋಪ ಸಂಹಾರಕ್ಕೆ ಪ್ರಾಪ್ತಿಯಿರುವುದರಿಂದ ಅದಕ್ಕಾಗಿ ಸರ್ವಗುಣೋಪಸಂಹಾರಜ್ಞಾನಕ್ಕೆ ಉಪಯೋಗ ವಿದೆ. ೧೬ನೇ **ವೇದಾಧಿಕರಣದಲ್ಲಿ**— ಉಪಾಸ್ಯಾನುಪಾಸ್ಯ ಭಗವದ್ಗುಣಗಳು ಕಂಡದರಿಂದ '**ಅಗ್ನೇ ತ್ವಚಂ ಯಾತುಧಾನಸ್ಯ ಬಿಂಧಿ ತಂ ಪ್ರತ್ಯಂಚಮರ್ಚಿಷಾ ವಿಧ್ಯ ಮರ್ಮನ್**' ಇತ್ಯಾದಿಗಳಲ್ಲಿ ಶ್ರುತಗಳಾದ ವೇದ ಮೊದಲಾದ ಭಗವದ್ಗುಣಗಳು ಸರ್ವೋಪಾಸ್ಯಗಳೋ, ಅಲ್ಲವೋ ಎಂದು ಸಂಶಯವು ಬಂದರೆ— ಸರ್ವೋಪಾಸ್ಯಗಳೆಂದು ಪೂರ್ವ ಪಕ್ಷವು; ಸರ್ವೋಪಾಸ್ಯಗಳಲ್ಲವೆಂದು ಸಿದ್ಧಾಂತವು. ಹೇಗೆಂದರೆ— ಫಲಾಪೇಕ್ಷೆಯು ಸಮವಾಗಿ ರುವುದರಿಂದ ವೇದಾದಿಗಳು ಸರ್ವರಿಂದಲೂ ಉಪಾಸ್ಯಗಳೆಂದರೆ ಪ್ರಮಾಣ ಬಲದೆಶೆಯಿಂದ ವೇದಾದಿಗಳು ಸರ್ವೋಪಾಸ್ಯಗಳಲ್ಲವೆಂದು ಸಿದ್ಧಾಂತವು. ೧೭ನೇ **ಹಾನ್ಯಧಿಕರಣದಲ್ಲಿ**— ಭಗವದುಪಾಸನೆಯು ಮುಕ್ತನಿಂದ ಮಾಡಲ್ಪಡುತ್ತದೋ, ಇಲ್ಲವೋ ಎಂದು ಸಂಶಯವು ಬಂದರೆ— ಇಲ್ಲವೆಂದು ಪೂರ್ವಪಕ್ಷವು; ಮಾಡಲ್ಪಡುತ್ತದೆಂದು ಸಿದ್ಧಾಂತವು. ಹೇಗೆಂದರೆ— ಮುಕ್ತಿಯಲ್ಲಿ ಉಪಾಸನೆ ಇರುವುದಾದರೆ— ಫಲ ಮೊದಲಾದುದೂ ಬರಬೇಕಾಗುವುದು, ಹೀಗೆ ಅತಿಪ್ರಸಂಗವು ಬರುವುದರಿಂದ ಮುಕ್ತಿಯಲ್ಲಿ ಉಪಾಸನೆಯನ್ನು ಮಾಡಕೂಡದು ಎಂದರೆ— ಹೀಗೆ ಹೇಳಕೂಡದು. '**ನ ಹೀಯತೇ ಯತ್ರ ಗತ್ವಾ ಯತ್ರ ಗತ್ವಾ ನ ವರ್ಧತೇ**' ಎಂದು ಪ್ರಮಾಣವಿದ್ದುದರಿಂದ ಫಲವಿಲ್ಲದಿದ್ದರೂ ಸಂಸ್ಕಾರಾಖ್ಯ ಕಾರಣವಿದ್ದಪ್ರಯುಕ್ತ ಮುಕ್ತಿ ಯಲ್ಲಿಯೂ ಉಪಾಸನೆಯು ಕೂಡುತ್ತದೆ. ೧೮ನೇ **ಛಂದಾಧಿಕರಣದಲ್ಲಿ**- ಕರಣಾಕರಣಗಳಿಗೆ ವಿರೋಧವಿದ್ದುದರಿಂದ ಮುಕ್ತರ ಉಪಾಸನಾದಂತೆ ನಿಯಮದಿಂದ ಕರ್ಮವನ್ನು ಮಾಡುತ್ತಾರೋ, ಇಲ್ಲವೋ ಎಂದು ಸಂಶಯವು ಬಂದರೆ— ನಿಯಮದಿಂದ ಕರ್ಮವನ್ನು ಮಾಡುತ್ತಾರೆಂದು ಪೂರ್ವಪಕ್ಷವು; ಇಲ್ಲವೆಂದು ಸಿದ್ಧಾಂತವು. ಹೇಗೆಂದರೆ— ಕರ್ಮಕರಣಶಕ್ತಿಯು ಇದ ಪ್ರಯುಕ್ತ ಕರ್ಮವನ್ನು ನಿಯಮದಿಂದ ಮಾಡಲೇಬೇಕು, ಎಂದರೆ— ಹೀಗೆ ಹೇಳಕೂಡದು. ಉಪಾಸನಾಖ್ಯ ಕಾರ್ಯದಲ್ಲಿ ನಿತ್ಯದಲ್ಲಿ ಮಾಡೋಣಬದ್ಧಿಂದುಂಟಾದ ಸಂಸ್ಕಾರವಿದೆ, ಕರ್ಮದಲ್ಲಿ ಹಾಗೆ ಇಲ್ಲ. ಏವಂಚ ಕಾರ್ಯಗಳಾದ ಉಪಾಸನಾಕರ್ಮಗಳಲ್ಲಿ ಸಂಸ್ಕಾರಾಖ್ಯ ಕಾರಣ ಸತ್ವ,

ಅಸತ್ವರೂಪ ವಿಶೇಷವಿದ್ದಪ್ರಯುಕ್ತ ಕರ್ಮನಿಯಮವಿಲ್ಲ. **೧೯ನೇ ಅನಿಯಮಾಧಿಕರಣದಲ್ಲಿ—** ಜ್ಞಾನಾದಿಗಳಿಗೆ ಜ್ಞಾನಸಾಧಕಪ್ರಾಪ್ಯತ್ವವೂ, ಅಪ್ರಾಪ್ಯತ್ವವೂ ಕಂಡದರಿಂದ ಮೋಕ್ಷರೂಪ ಫಲವು ನಿಯಮವಿಲ್ಲದೆ ಎಲಾ ಜ್ಞಾನಿಗಳಿಂದಲೂ ಪ್ರಾಪ್ಯವೋ ಅಥವಾ ಕೆಲವರಿಗೆ ಪ್ರಾಪ್ಯವು ಕೆಲವರಿಗೆ ಪ್ರಾಪ್ಯವಲ್ಲವೆಂದು ನಿಯಮವೋ, ಎಂದು ಸಂಶಯವು ಬಂದರೆ— ಕೆಲವರಿಗೇನೇ ಎಂದು ನಿಯಮವು ಎಂದು ಪೂರ್ವಪಕ್ಷವು; ನಿಯಮವಿಲ್ಲದೆ ಎಲ್ಲಾ ಜ್ಞಾನಿಗಳಿಂದಲೂ ಹೊಂದಲ್ಪಡತಕ್ಕದು ಎಂದು ಸಿದ್ಧಾಂತವು. ಹೇಗೆಂದರೆ— ಅಯೋಗ್ಯತಾಖ್ಯವಾದ ವಿಶಿಷ್ಟ ಕಾರಣವಿದ್ದಪ್ರಯುಕ್ತ ಜ್ಞಾನಿಗಳಲ್ಲಿಯೂ ಕೂಡ ಕೆಲವರಿಗೆ ಮೋಕ್ಷವು ಆಗುವುದಿಲ್ಲ. ಆದ ಕಾರಣ ನಿಶ್ಶಂಕೆಯಾಗಿ ಉಪಾಸನೆಯನ್ನು ಮಾಡಕೂಡದು. ಎಂದರೆ— ಹೀಗೆ ಹೇಳಕೂಡದು ಜ್ಞಾನಿಗಳಿಗೆ ಈಶ್ವರನು ಮೋಕ್ಷವನ್ನು ಕೊಡುತ್ತಾನೆ. ತಥಾಚ ಎಲ್ಲಾ ಅಪರೋಕ್ಷ ಜ್ಞಾನಿ ಗಳಿಗೂ ಈಶ್ವರಪ್ರಸಾದರೂಪವಾದ ಚರಮ ಕಾರಣವಿದ್ದಪ್ರಯುಕ್ತ ಮೋಕ್ಷವಾಗುತ್ತದೆ. ಏವಂಚ ಈಶ್ವರನು ಸ್ವಭಾವದಿಂದಲೇ ಎಲ್ಲಾ ಜ್ಞಾನಿಗಳಿಗೂ ಮುಕ್ತಿಯನ್ನು ಕೊಡುತ್ತಾನೆ. ಆದಕಾರಣ ನಿಸ್ಸಂಶಯವಾಗಿ ಉಪಾಸನವನ್ನು ಮಾಡಬೇಕು **೨೦ನೇ ಯಾವದಧಿಕರಣದಲ್ಲಿ—** ಉಪಾಸನೆಗೆ ಅಧಿಕಾರಿನಿಯಮವನ್ನು ಹೇಳಿದುದರಿಂದ ಲೌಕಿಕ ಕ್ರಿಯೆಯಲ್ಲಿ ಅಧಿಕಾರಿನಿಯಮ ವಿಲ್ಲದಿರುವುದರಿಂದ ಬ್ರಹ್ಮೋಪಾಸನಾವುಳ್ಳವರು ಉಪಾಸನಾಧಿಕಾರ ನಿಯಮವುಳ್ಳವರೋ ಅಲ್ಲವೋ, ಎಂದು ಸಂದೇಹವು ಬಂದರೆ— ನಿಯಮವುಳ್ಳವರಲ್ಲವೆಂದು ಪೂರ್ವಪಕ್ಷವು; ಅಧಿಕಾರ ನಿಯಮವುಳ್ಳವರೆಂದು ಸಿದ್ಧಾಂತವು. ಹೇಗೆಂದರೆ— ಮುಕ್ತಿಯಲ್ಲಿರತಕ್ಕ ಆಧಿಕಾರಿಕ ಆನಂದಾದಿ ಗಳು ಪ್ರಯತ್ನಾನುಸಾರಿಗಳು ಏವಂಚ ಚೇಷ್ಟೆಯನ್ನು ಅನುಸರಿಸಿ ಆನಂದಾದಿ ತಾರತಮ್ಯವು ಕೂಡುವುದರಿಂದ ಅಧಿಕಾರಿನಿಯಮವಿಲ್ಲದಿರುವಪ್ರಯುಕ್ತ **'ಪ್ರಾಪ್ತೇಶ್ಚ ಸಮಂಜಸಂ'** ಇತ್ಯಾದಿಗಳು ಅಯುಕ್ತವು, ಎಂದರೆ ಹೀಗೆ ಹೇಳಕೂಡದು. ಪ್ರಯತ್ನವು ಅಧಿಕಾರಾನುಸಾರಿ ಯಾದುದರಿಂದ ಕಥಂಚಿತ್ ಯತ್ನವು ಅಧಿಕವಾದರೆ ಅದರ ಸಾಧನಾದಿ ವಸ್ತುಗಳಿಗೆ ದೋಷವು ಪ್ರಾಪ್ತವಾಗುತ್ತದೆ. ಏವಂಚ ಅಧಿಕಾರಕ್ಕಿಂತ ಅಧಿಕವಾದ ಪ್ರಯತ್ನವಾದರೆ ವಸ್ತುವು ದೂಷಿತ ವಾಗುವುದರಿಂದ ಉಪಾಸನಾದಲ್ಲಿ ಅಧಿಕಾರನಿಯಮವಿದ್ದಪ್ರಯುಕ್ತ ಹಿಂದೆ ಹೇಳಿದ್ದು ಯುಕ್ತವು. **೨೧ನೇ ಇಯದಾಮನನಾಧಿಕರಣದಲ್ಲಿ—** ಅನುಕ್ತಿಯು ವಿದ್ಯಮಾನ ವಸ್ತುವಿನಲ್ಲಿಯೂ, ಅವಿದ್ಯಮಾನ ವಸ್ತುವಿನಲ್ಲಿಯೂ ಸಾಧಾರಣವಾಗಿ ಕಂಡದರಿಂದ ಉಪಾಸನಾಧಿಕಾರಿಗಳು ಪ್ರಾಣ ಪರ್ಯಂತವಾಗಿಯೋ, ಅಲ್ಲವೋ ಎಂದು ಸಂಶಯವು ಬಂದರೆ— ಅಲ್ಲವೆಂದು ಪೂರ್ವಪಕ್ಷವು; ಪ್ರಾಣನೇ ಅವಸಾನನಾಗಿ ಉಳ್ಳವರೆಂದು ಸಿದ್ಧಾಂತವು. ಹೇಗೆಂದರೆ— ಒಬ್ಬನದೆಶೆಯಿಂದ ಒಬ್ಬನು ವಿಶಿಷ್ಟನು ಕಾಣಲ್ಪಟ್ಟಿರುತ್ತಾನೆ. ಆದಕಾರಣ ಪ್ರಾಣನದೆಶೆಯಿಂದ ಉತ್ತಮಾಧಿ ಕಾರಿಯು ಇಲ್ಲವಾದರೆ ದೃಷ್ಟವಾದುದು ವಿರುದ್ಧವಾಗಿರುವುದರಿಂದ, ಪ್ರಾಣನದೆಶೆಯಿಂದ ಉತ್ತ ಮನು ಇದ್ದಪ್ರಯುಕ್ತ ಪ್ರಾಣನೇ ಸರ್ವಗುಣಗಳ ಉಪಾಸನೆಗೆ ಯೋಗ್ಯನು, ಎನ್ನುವುದು ಅಯು ಕ್ತವು. ಎಂದರೆ— ಹೀಗೆ ಹೇಳಕೂಡದು. **'ಯಃ ಸರ್ವಮವಜಾನೀಯಾತ್ ಋಷೀ ದೇವಂ ನಾರಾಯಣಂ ದೇವೀಂ ಚ ಪರಮಾಂ ಶ್ರಿಯಂ । ಸ ಪ್ರಾಣಾನವರುದ್ಧ್ಯೇಮಂ ಮಂತ್ರಮಾವರ್ತಯೀತ'** ಇತ್ಯಾದಿ ಪ್ರತಿಕ್ರಿಯಾವಿಧಾನಾದಿಗಳಿಂದ ವಿರೋಧವಿದ್ದುದರಿಂದ ಪ್ರಾಣನೇ ಸರ್ವಾಧಿಕಾರಿಗಳಲ್ಲಿ ಉತ್ತಮನು. ಆದಕಾರಣ ಆತನೇ ಸರ್ವ ಗುಣಗಳ ಉಪಾಸ ನೆಗೆ ಯೋಗ್ಯನು. **೨೨ನೇ ವ್ಯತಿಹಾರಾಧಿಕರಣದಲ್ಲಿ—** ವಾದಿಗಳ ವಿವಾದದಿಂದ ಶ್ರೀ ವಿಷ್ಣುವು ಪ್ರಾಣನಿಂದ ಉತ್ತಮನೋ, ಅಲ್ಲವೋ ಎಂದು ಸಂಶಯವು ಬಂದರೆ— ಅಲ್ಲವೆಂದು ಪೂರ್ವಪಕ್ಷವು; ಉತ್ತಮನೆಂದು ಸಿದ್ಧಾಂತವು. ಹೇಗೆಂದರೆ— ನಾವಾದಿ ಪ್ರಕರಣಗಳಂತೆಯೇ **'ಅಸ್ತಿ ಭಗವಃ ಪ್ರಾಣಾದ್ಭೂಯಃ'** ಎಂದು, **'ಪ್ರಾಣಾದ್ವಾವ ಭೂಯೋಽಸ್ತಿ'**

ಎಂದು, **'ತನ್ಮೇ ಭಗವಾನ್ ಬ್ರವೀತು' 'ಸತ್ಯಂವಾವ ಪ್ರಾಣಾದ್ಭೂಯಃ'** ಎಂದು ಪ್ರಕರಣಭೇದಕಗಳಾದ ಪ್ರಶ್ನಾದಿಗಳು ಇಲ್ಲದಿರುವುದರಿಂದ ಪ್ರಾಣನಿಗೇನೇ ಸರ್ವೋತ್ತಮತ್ವವಿದ್ದ ಪ್ರಯುಕ್ತ ವಿಷ್ಣುವಿನ ಉಪಾಸನೆಯನ್ನು ಸರ್ವರೂ ಮಾಡಕೂಡದು, ಎಂದರೆ– **'ಏಷ ತು ವಾ ಅತಿವದತಿ'** ಎಂದು ವಿಶೇಷಣದಿಂದ ಪ್ರಶ್ನಪ್ರತಿವಚನ ಪ್ರತಿಸಂಧಾನವು ಕೂಡುತ್ತದೆ. ಆದುದರಿಂದ ಸತ್ಯಪದದಿಂದ ಹೇಳಲ್ಪಟ್ಟ ವಿಷ್ಣುವಿಗೇನೇ ಸರ್ವೋತ್ತಮತ್ವವು. ಉಪಾಸನೆಯು ಯುಕ್ತವೇ. **೨೩ನೇ ಸತ್ಯಾಧಿಕರಣದಲ್ಲಿ**— ಪ್ರಾಣನ ದೆಶೆಯಿಂದ ವಿಷ್ಣುವು ಉತ್ತಮನು ಎನ್ನುವ ಉಕ್ತಿಗೆ ಕೇವಲ ವಿಷ್ಣುವಿಗೆ ಉತ್ತಮತ್ವ, ವಿಷ್ಣುವಿನಿಂದ ಇತರರಾದ ಅನೇಕರಿಗೆ ಉತ್ತಮತ್ವ, ಈ ಎರಡಕ್ಕೂ ವಿರೋಧವಿಲ್ಲದಿರುವುದರಿಂದ ಪ್ರಾಣನ ದೆಶೆಯಿಂದ ವಿಷ್ಣುವೇ ಉತ್ತಮನೋ, ಇತರರೂ ಉತ್ತಮರು ಇದ್ದಾರೋ ಎಂದು ಸಂಶಯವು ಬಂದರೆ, ಇತರರೂ ಇದ್ದಾರೆಂದು ಪೂರ್ವ ಪಕ್ಷವು; ವಿಷ್ಣುವೇ ಉತ್ತಮನು ಎಂದು ಸಿದ್ಧಾಂತವು. ಹೇಗೆಂದರೆ— ಸತ್ಯಾದಿಗಳಿಗೆ ಅಭೇದವನ್ನು ಹೇಳದೆ ಇದ್ದುದರಿಂದ, ಅವುಗಳಿಗೆ ಭೇದವೇ ಇದ್ದ ಪ್ರಯುಕ್ತ ಸತ್ಯದಿಂದ ಮೇಲೆ ಪಠಿತಗಳಾದ ಜ್ಞಾನಾದಿಗಳಿಗೆ ಸತ್ಯಪದದಿಂದ ಹೇಳಲ್ಪಟ್ಟ ವಿಷ್ಣುವಿನ ದೆಶೆಯಿಂದ ಉತ್ತಮತ್ವವು ಪ್ರಾಪ್ತವಾಗುವುದರಿಂದ ವಿಷ್ಣುವನ್ನು ಹೊರತು ಪ್ರಾಣನಿಗೆ ಸರ್ವೋತ್ತಮತ್ವವೂ, ವಿಷ್ಣುವಿಗೆ ನಿರುಪಚರಿತ ಸರ್ವೋತ್ತಮತ್ವವೂ ಅಯುಕ್ತವು ಎಂದರೆ— ಹೀಗೆ ಹೇಳಕೂಡದು. **'ಸತ್ಯಂ ಪೂರ್ಣಂ ವಿಜ್ಞಾನಂ ಪೂರ್ಣಮದಃ ಪೂರ್ಣಮಿದಂ । ಸತ್ಯಾದ್ಯಾಃ ಅಹಮಾತ್ಮಾಂತಾಃ ಯದ್ಗುಣಾಃ ಸಮುದೀರಿತಾಃ । ತಸ್ಮೈ ನಮೋ ಭಗವತೇ ಯಸ್ಮಾದೇವ ವಿಮುಚ್ಯತೇ ॥'** ಇತ್ಯಾದಿ ವಚನಗಳದೆಶೆಯಿಂದ ಸತ್ಯಾದಿಗಳಿಗೆ ಅಭೇದವೇ. ವಿಷ್ಣುವೇ ಪ್ರಾಣನಿಂದ ಉತ್ತಮನು. **೨೪ನೇ ಕಾಮಾಧಿಕರಣದಲ್ಲಿ**— ಭಗವದುಪಾಸನೆಯಲ್ಲಿ ಅಧಿಕಾರಿ ಚೇತನರೂ ಅನಧಿಕಾರಿಚೇತನರೂ ಪ್ರತೀತರಾಗಿರುವುದರಿಂದ ಲಕ್ಷ್ಮೀದೇವಿಯು ಅಧಿಕಾರಿಣಿಯೋ ಅಲ್ಲವೋ ಎಂದು ಸಂಶಯವು ಬಂದರೆ, ಅಧಿಕಾರವುಳ್ಳವಳೆಂದು ಪೂರ್ವಪಕ್ಷವು; ಅಲ್ಲವೆಂದು ಸಿದ್ಧಾಂತವು. ಹೇಗೆಂದರೆ— ಲಕ್ಷ್ಮೀದೇವಿಗೆ ಪ್ರಯತ್ನವಿಲ್ಲದಿದ್ದರೆ ಭಗವದುಪಾಸನೆಯು ಇಲ್ಲದೆ ಹೋಗುವುದು. ಹೀಗೆ ಅಕೃತಾರ್ಥಳಾದುದರಿಂದ, ಸಂಸಾರಿತ್ವವಿದ್ದ ಪ್ರಯುಕ್ತ ಅಧಿಕಾರವಿದ್ದೇ ಇದೆ. ಅಧಿಕಾರಿಗಳಿಗೆ ಪ್ರಾಣಾವಸಾನತ್ವವಲ್ಲ. ಎಂದರೆ— ಹೀಗೆ ಹೇಳಕೂಡದು. ಲಕ್ಷ್ಮೀದೇವಿಗೆ ಅಸ್ವಾತಂತ್ರ್ಯವಿದ್ದರೂ ಶ್ರೀಹರಿಯು ಅತಿಪ್ರಿಯತ್ವಾಖ್ಯ ಕಾರಣವಿದ್ದ ಪ್ರಯುಕ್ತ ನಿತ್ಯಮುಕ್ತತ್ವವು ಕೂಡುತ್ತದೆ. ಸಂಸ್ಕಾರಪಟುತ್ವವಿದ್ದ ಪ್ರಯುಕ್ತ ನಿರಂತರದಲ್ಲಿ ಉಪಾಸನೆಯು ಕೂಡುತ್ತದೆ.ಆದ ಕಾರಣ ಲಕ್ಷ್ಮಿಯು ಅಧಿಕಾರಿಣಿಅಲ್ಲ.ಆದುದರಿಂದಅಧಿಕಾರಿಗಳಿಗೆ ಪ್ರಾಣಾವಸಾನತ್ವವು ಯುಕ್ತವು. **೨೫ನೇ ನಿರ್ಧಾರಣಾಧಿಕರಣದಲ್ಲಿ— ಶ್ರೋತವ್ಯಃ** ಇತ್ಯಾದಿ ಶ್ರವಣ ವಿಧಿಯು. ಸಮಸ್ತವ್ಯಸ್ತೋಪಾಸನೆಗಳಲ್ಲಿ ಸಾಧಾರಣವಾದುದರಿಂದ ಸಮಸ್ತ ಉಪಾಸನೆಯನ್ನುಮಾಡಬೇಕೋವ್ಯಸ್ತೋಪಾಸನೆಯನ್ನುಮಾಡಬೇಕೋ ಎಂದು ಸಂದೇಹವು ಬಂದರೆ, ವ್ಯಸ್ತೋಪಾಸನೆಯನ್ನು ಮಾಡಬೇಕು ಎಂದು ಪೂರ್ವಪಕ್ಷವು; ಸಮಸ್ತವನ್ನೂ ಮಾಡಬೇಕೆಂದು ಸಿದ್ಧಾಂತವು. ಹೇಗೆಂದರೆ— ದೃಢವಾದ ಬಂಧದೆಶೆಯಿಂದ ಧ್ಯಾನದಿಂದಲೇ ಅಪರೋಕ್ಷ ಜ್ಞಾನವು. ಹೀಗೆ ಶ್ರವಣಾದಿಗಳಲ್ಲಿ ವ್ಯರ್ಥಗಳಾಗುವುದರಿಂದ ವ್ಯಸ್ತೋಪಾಸನೆಯನ್ನೇ ಮಾಡಬೇಕು ಎಂದರೆ ಹೀಗೆ ಹೇಳಕೂಡದು **ಶ್ರವಣಾದಿತ್ರಯೋತ್ಪನ್ನದೃಷ್ಟ್ಯೈವ ಸ್ವೇಚ್ಛಯಾ ಹರಿಃ । ಪ್ರಸನ್ನೋ ಮುಕ್ತಿದೋ ನಿತ್ಯಮನ್ಯಥಾ ನ ಕಥಂಚನ ।** ಎಂದು ಈಶ್ವರೇಚ್ಛಾ ನಿಯತಿಯು ಶ್ರುತವಾದುದರಿಂದ ಶ್ರವಣ ಮೊದಲಾದ ಮೂರರಿಂದುಂಟಾದ ಅಪರೋಕ್ಷ ಜ್ಞಾನದಿಂದಲೇ ಮುಕ್ತಿಯು. ಆದುದರಿಂದ ಸಮಸ್ತ ಉಪಾಸನವನ್ನೇ ಮಾಡಬೇಕು. **೨೬ನೇ ಪ್ರದಾನಾಧಿಕರಣದಲ್ಲಿ**— ಶ್ರವಣಾದಿಗಳು

ಯಾವುದಾದರೊಂದು ಪ್ರಕಾರದಿಂದಲೂ ಮಾಡಲ್ಪಟ್ಟದ್ದು ಜ್ಞಾನಸಾಧನವಾಗುತ್ತದೋ ಅಥವಾ ಗುರುಪ್ರಸಾದಪೂರ್ವಕವಾಗಿ ಪ್ರದಾನದಿಂದ ಕೂಡಿದ್ದೋ ಎಂದು ಸಂಶಯವು ಬಂದರೆ, ಯಥಾ ಕಥಂಚಿತ್ ಅನುಷ್ಠಿತವಾದುದು ಎಂದು ಪೂರ್ವಪಕ್ಷವು; ಗುರುಪ್ರಸಾದಪೂರ್ವಕವಾಗಿ ಪ್ರದಾನ ಯುಕ್ತವಾದುದು ಎಂದು ಸಿದ್ಧಾಂತವು ಹೇಗೆಂದರೆ— ಜ್ಞಾನ ಮೋಕ್ಷಗಳು ಗುರುಗಳ ಆಧೀನಗಳಾದರೆ ಜ್ಞಾನಿಗೂ ಕೂಡ ಕೆಲವು ವೇಳೆ ಗುರುಗಳ ಕೋಪದಿಂದ ಜ್ಞಾನವು ತಿರಸ್ಕೃತ ವಾಗಿ ಮುಕ್ತಿಯು ಇಲ್ಲದೆ ಹೋಗಬೇಕಾಗುವುದರಿಂದ ಗುರುಗಳ ಅಧೀನತ್ವವಿಲ್ಲ. ಏವಂಚ ಜ್ಞಾನ ದಲ್ಲಿ ಗುರುಗಳ ಅಪೇಕ್ಷೆಯಿಲ್ಲದಿರುವುದರಿಂದ ಗುರುಗಳು ಹೇಳಿದ ಪ್ರಕಾರ ಉಪಾಸನವನ್ನು ಮಾಡಕೂಡದು, ಎಂದರೆ ಹೀಗೆ ಹೇಳಕೂಡದು. **ಜ್ಞಾನಿನೋ ಗುರುಶಾಪೇಽಪಿ ನಾಮುಕ್ತಿಃ ಸಂಸ್ಮೃತೇಃ ಕ್ವಚಿತ್ । ಆನಂದಹ್ರಾಸದೋಷೇಣ ಸೈವ ಮುಕ್ತಿರ್ವಿದುಷ್ಯತಿ ।** ಎನ್ನುವ ವಚನದೆಶೆಯಿಂದ ಮುಕ್ತಿದೂಷಣದಿಂದಲೇ ಗುರುಕೋಪಾದಿಗಳು ಕೃತಾರ್ಥಗಳಾಗುವುದರಿಂದ, ಬ್ರಹ್ಮಾಖ್ಯವಸ್ತುವಿನ ವೈಭವದಿಂದ ಜ್ಞಾನಿಗಳಿಗೆ ಮೋಕ್ಷವು ಕ್ಲೃಪ್ತವಾಗಿರುವುದರಿಂದ, ಶಾಪಾದಿ ಗಳು ಅನ್ಯಥಾಸಿದ್ಧಗಳಾಗುವುದರಿಂದ, ಬಾಧಕವಿಲ್ಲದಿರುವುದರಿಂದ ಗುರುಪ್ರದಾನವು ಆವಶ್ಯಕವು. **೨೭ನೇ ಲಿಂಗಭೂಯಸ್ತ್ವಾಧಿಕರಣದಲ್ಲಿ**—ಸಾಧನಗಳಲ್ಲಿ ಕೆಲವು ಕಡೆ ಇತಿ ಕರ್ತವ್ಯತಾಕ್ಕೆ ಪ್ರಾಬಲ್ಯವೂ, ಕೆಲವುಕಡೆ ಸಾಧನಕ್ಕೆ ಪ್ರಾಬಲ್ಯವೂ, ಕೆಲವು ಕಡೆ ಎರಡಕ್ಕೆ ಸಾಮ್ಯವೂ ಕಂಡದ ರಿಂದ, ಗುರುಪ್ರಸಾದವು ಬಲಿಷ್ಠವೋ, ಅಥವಾ ಶಾಸ್ತ್ರಶ್ರವಣಾದಿರೂಪವಾದ ಶಿಷ್ಯಪ್ರಯತ್ನವೋ, ಅಥವಾ ಎರಡೂ ಸಮವೋ ಎಂದು ಸಂಶಯವು ಬಂದರೆ- ಶಿಷ್ಯಪ್ರಯತ್ನವೇ ಪ್ರಬಲವು, ಅಥವಾ ಎರಡೂ ಸಮಾನವೇ ಎಂದು ಪೂರ್ವಪಕ್ಷವು; ಗುರುಪ್ರಸಾದವೇ ಪ್ರಬಲವೆಂದು ಸಿದ್ಧಾಂತವು. ಹೇಗೆಂದರೆ— ಶಿಷ್ಯನಿಗೂ ಪುರುಷತ್ವವು ಸಮಾನವಾದುದರಿಂದ ಧಾರಣಾದಿರೂಪವಾದ ಶಿಷ್ಯನ ಪ್ರಯತ್ನಕ್ಕೆ ದೌರ್ಬಲ್ಯವಿಲ್ಲ, ಆಧಿಕ್ಯವಾಗಲೀ ಸಾಮ್ಯವಾಗಲೀ ಬರುವುದು. ಆದುದರಿಂದ ಗುರು ಪ್ರದಾನವು ಆವಶ್ಯಕವಲ್ಲ ಎಂದರೆ— ಹೀಗೆ ಹೇಳಕೂಡದು. **ಗುರುಪ್ರಸಾದೋ ಬಲವಾನ್ನ ತಸ್ಮಾದ್ಬಲವತ್ತರಂ । ತಥಾಪಿ ಶ್ರವಣಾದಿಶ್ಚ ಕರ್ತವ್ಯೋ ಮೋಕ್ಷಸಿದ್ಧಯೇ ।** ಇತ್ಯಾದಿ ವಿಶೇಷೋಕ್ತಿಯಿಂದ ಗುರುಪ್ರಸಾದವೇ ಪ್ರಬಲವು. ಆದುದರಿಂದ ಗುರುಪ್ರಸಾದವು ಆವಶ್ಯಕವು. **೨೮ನೇ ವಿಕಲ್ಪಾಧಿಕರಣದಲ್ಲಿ**— ಪೂರ್ವ ಪ್ರಾಪ್ತರಾದ ಗುರುಗಳನ್ನು ಬಿಟ್ಟು ಬೇರೆ ಗುರುಗಳ ಸ್ವೀಕಾರವೂ ಸ್ವೀಕಾರಾಭಾವವೂ ಕಂಡದರಿಂದ ಪೂರ್ವಪ್ರಾಪ್ತರಾದ ಗುರುಗಳೇ ಎನ್ನುವ ನಿಯಮವಿದೆಯೋ ಅಥವಾ ಮೊದಲಿನ ಗುರುಗಳನ್ನು ಬಿಟ್ಟು ಮತ್ತೊಬ್ಬನನ್ನೂ ಸ್ವೀಕರಿಸ ಬಹುದೋ, ಎಂದು ಸಂಶಯವು ಬಂದರೆ- ಪ್ರಥಮಪ್ರಾಪ್ತರಾದ ಗುರುಗಳೇ ಎಂದು ಪೂರ್ವ ಪಕ್ಷವು; ಪೂರ್ವಪ್ರಾಪ್ತ ಗುರುಗಳೇ ಎನ್ನುವ ನಿಯಮವಿಲ್ಲವೆಂದು ಸಿದ್ಧಾಂತವು. ಹೇಗೆಂದರೆ— ಉತ್ತಮ ಗುರುಗಳನ್ನು ಸ್ವೀಕಾರ ಮಾಡಿದರೆ ಪೂರ್ವದಲ್ಲಿ ಪ್ರಾಪ್ತರಾದ ಗುರುಗಳ ಪರಿತ್ಯಾಗ ನಿಮಿತ್ತವಾಗಿ ದೋಷವು ಬರುವುದರಿಂದ ಪೂರ್ವಪ್ರಾಪ್ತರೇ ಆದ ಗುರುಗಳು. ಹೀಗೆ ಸರ್ವಜ್ಞರಾದ ಗುರುಗಳು ಪ್ರಾಪ್ತರಾದರೆ ಹಿಂದೆ ಹೇಳಿದ್ದು ಕೂಡುವುದಿಲ್ಲ, ಎಂದರೆ— ಹೀಗೆ ಹೇಳಕೂಡದು. ಪೂರ್ವಪ್ರಾಪ್ತರಾದ ಗುರುಗಳನ್ನು ಬಿಟ್ಟು ಅವರಕ್ಕಿಂತ ಸಮಗ್ರವಾದ ಅನುಗ್ರಹವನ್ನು ಮಾಡತಕ್ಕ ಉತ್ತಮನನ್ನಾಗಲೀ ಸಮಾನನಾಗಲೀ ಗುರುವನ್ನು ಸ್ವೀಕಾರ ಮಾಡಿದರೆ ದೋಷಮಾನಿಕನವಿದೆ ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದ ಸರ್ವಜ್ಞನಾದ ಗುರುವಿನ ಸ್ವೀಕಾರವು ಉಪಪನ್ನವಾಗು ವುದರಿಂದ ಅವರು ಹೇಳಿದ ಪ್ರಕಾರ ಉಪಾಸನೆಯು ಯುಕ್ತವು. **೨೯ನೇ ವಿದ್ಯಾಧಿಕರಣ ದಲ್ಲಿ**— ಕರ್ತವ್ಯ- ಅಕರ್ತವ್ಯಕ್ರಿಯೆಗಳನ್ನು ಕಂಡದರಿಂದ ಭಗವಂತನ ಉಪಾಸನೆಯನ್ನು ಮಾಡ ಬೇಕೋ ಬೇಡವೋ ಎಂದು ಸಂಶಯವು ಬಂದರೆ- ಮಾಡಕೂಡದೆಂದು ಪೂರ್ವಪಕ್ಷವು; ಮಾಡಲೇ

ಬೇಕೆಂದು ಸಿದ್ಧಾಂತವು. ಹೇಗೆಂದರೆ— **‘ತರತಿ ಶೋಕಮಾತ್ಮವಿತ್’** ಎಂದು ಜ್ಞಾನಕ್ಕೆ ಮೋಕ್ಷಸಾಧನತ್ವವಿದ್ದಂತೆಯೇ **‘ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ’** ಇತ್ಯಾದಿಗಳಿಂದ ಕರ್ಮಕ್ಕೂ ಮೋಕ್ಷಸಾಧನತ್ವವು ಪ್ರತೀತವಾಗುವುದರಿಂದ, ಮೋಕ್ಷಕಾರಣದ ನಿರ್ಣಯವಾಗದಿರುವುದರಿಂದ ಜ್ಞಾನಕ್ಕಾಗಿ ಉಪಾಸನೆಯನ್ನು ಮಾಡಬೇಕಾಗಿಲ್ಲ ಎಂದರೆ--ಹೀಗೆ ಹೇಳಕೂಡದು. **‘ನಾನ್ಯಃ ಪಂಥಾ ಅಯನಾಯ ವಿದ್ಯತೇ’** ಎನ್ನುವ ಅವಧಾರಣದಿಂದ ವಿದ್ಯೆಯು ಮೋಕ್ಷಕ್ಕೆ ಸಾಧನವಾದುದು ಎನ್ನುವ ವಚನವು ಪ್ರಬಲವಾಗಿರುವುದರಿಂದ ವಿದ್ಯೆಯೇ ಮೋಕ್ಷಕ್ಕೆ ಸಾಧನವು ಎನ್ನುವ ನಿರ್ಣಯವು ಕೂಡುವುದರಿಂದ ಕಾರಣವು ನಿರ್ಣೀತವಾಗುತ್ತದೆ. ಅದಕ್ಕಾಗಿ ಉಪಾಸನೆಯನ್ನು ಮಾಡಲೇಬೇಕು. **೩೦ನೇ ಶ್ರುತ್ಯಧಿಕರಣದಲ್ಲಿ—** ವಾದಿಗಳ ವಿವಾದದಿಂದ ಮೋಕ್ಷವು ಕರ್ಮಸಾಧ್ಯವೋ, ಜ್ಞಾನಸಾಧ್ಯವೋ ಎಂದು ಸಂಶಯವು ಬಂದರೆ— ಕರ್ಮಸಾಧ್ಯವೆಂದು ಪೂರ್ವಪಕ್ಷವು; ಜ್ಞಾನಸಾಧ್ಯವೆಂದು ಸಿದ್ಧಾಂತವು. ಹೇಗೆಂದರೆ— ವಿದ್ಯಾವಚನವು ಪ್ರಧಾನವು ಎನ್ನುವುದು ಭ್ರಮವಾದುದರಿಂದ ಜ್ಞಾನಕ್ಕೆ ಮೋಕ್ಷಸಾಧನತ್ವವು ನಿರ್ಣೀತವಾಗದಿರುವುದರಿಂದ ಅದಕ್ಕಾಗಿ ಉಪಾಸನೆಯನ್ನು ಮಾಡಬೇಕಾಗಿಲ್ಲ, ಎಂದರೆ— ಹಾಗೆ ಹೇಳಕೂಡದು. **‘ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ’** ಎಂದು ಶ್ರೀ ಹರಿಗೆ ಜ್ಞಾನಿಯಲ್ಲಿಯೇ ಅಧಿಕವಾದ ಪ್ರೀತಿಯನ್ನು ಹೇಳಿದರಿಂದ **‘ಯಮೇವೈಷ ವೃಣುತೇ ತೇನ ಲಭ್ಯಃ’** ಶ್ರೀ ಹರಿಯ ಪ್ರೀತಿಯಿಂದಲೇ ಮೋಕ್ಷವಾಗುತ್ತದೆ ಎನ್ನುವ ವಚನವಿದ್ದುದರಿಂದಲೂ ಜ್ಞಾನವೇ ಮೋಕ್ಷಸಾಧನವಾಗಿರುವುದರಿಂದ ಅದಕ್ಕಾಗಿ ಉಪಾಸನೆಯನ್ನು ಮಾಡಲೇಬೇಕು. **೩೧ನೇ ಅನುಬಂಧಾಧಿಕರಣದಲ್ಲಿ—** ಭಗವಂತನ ಜ್ಞಾನಕ್ಕೆ ಭಕ್ತ್ಯಾದಿಗಳ ಅಪೇಕ್ಷೆಯು ಇದೆಯೋ, ಇಲ್ಲವೋ ಎಂದು ಸಂಶಯವು ಬಂದರೆ- ಇಲ್ಲವೆಂದು ಪೂರ್ವಪಕ್ಷವು; ಭಕ್ತ್ಯಾದಿಗಳ ಅಪೇಕ್ಷೆಯಿದೆ ಎಂದು ಸಿದ್ಧಾಂತವು. ಹೇಗೆಂದರೆ— ಭಕ್ತಿಯು ಇಲ್ಲದೇನೇ ಯಾರಿಗಾದರೂ ಅಪರೋಕ್ಷಜ್ಞಾನವು ಹುಟ್ಟುವುದರಿಂದ ಜ್ಞಾನಕ್ಕೆ ಇತರಾಪೇಕ್ಷೆಯಿಲ್ಲದೇನೇ ಮುಕ್ತಿಯನ್ನು ಕುರಿತು ಕಾರಣತ್ವವಿದ್ದಪ್ರಯುಕ್ತ ಭಕ್ತ್ಯಾದಿಗಳು ಇಲ್ಲದೇನೇ ಮುಕ್ತಿಯಾಗುವುದು. ಏವಂಚ ಭಕ್ತಿಯಿಲ್ಲದೆ ದ್ವೇಷದಿಂದ ಧ್ಯಾನಮಾಡುವವರಿಗೂ ವಿಶೇಷದರ್ಶನವು ಆಗುವುದರಿಂದ ಭಕ್ತ್ಯಾದಿಗಳು ವ್ಯರ್ಥಗಳು, ಅತೀತಪಾದವು ಕೂಡಲಾರದು. ಎಂದರೆ- ಹೀಗೆ ಹೇಳಕೂಡದು. **‘ಭಕ್ತ್ಯೈವೈನಂ ಜಾನಾತಿ ಭಕ್ತ್ಯೈವೈನಂ ಪಶ್ಯತಿ ಭಕ್ತ್ಯೈವ ಬಂಧಾದ್ವಿಮುಚ್ಯತೇ’ ‘ಭಕ್ತ್ಯೈವಾನಂದೀಭವತಿ’** ಇತ್ಯಾದ್ಯಾಗಮಗಳಿಂದ ಭಕ್ತ್ಯಾದಿಗಳು ಜ್ಞಾನಕ್ಕಾಗಿ ಅಪೇಕ್ಷಿತಗಳೇ ಆಗಿವೆ. **೩೨ನೇ ಪ್ರಜ್ಞಾಂತರಾಧಿಕರಣದಲ್ಲಿ—** ಪದಾರ್ಥಧರ್ಮಗಳಲ್ಲಿ ವೈಚಿತ್ರ್ಯ-ಅವೈಚಿತ್ರ್ಯಗಳು ಕಂಡದರಿಂದ ಭಗವದ್ದರ್ಶನವು ಸರ್ವರಿಗೂ ಏಕಪ್ರಕಾರವೋ, ಅನೇಕಪ್ರಕಾರವೋ ಎಂದು ಸಂದೇಹವು ಬಂದರೆ— ಏಕಪ್ರಕಾರವೆಂದು ಪೂರ್ವಪಕ್ಷವು; ಅನೇಕಪ್ರಕಾರವೆಂದು ಸಿದ್ಧಾಂತವು. ಅದರಲ್ಲಿ **‘ದೃಷ್ಟ್ವೈವ ತಂ ಮುಚ್ಯತೇ ನಾಪರೇಣ’** ಇತ್ಯಾದಿ ಸಾಮಾನ್ಯ ವಚನದೆಶೆಯಿಂದ ಸರ್ವರಿಗೂ ಏಕಪ್ರಕಾರವೇ ಜ್ಞಾನವು. ಆದಕಾರಣ ಮುಕ್ತಿತಾರತಮ್ಯವೂ ಅಯುಕ್ತವು. ಎಂದರೆ— ಹೀಗೆ ಹೇಳಕೂಡದು. **‘ಯಥಾಯೋಗ್ಯಮೇವೈಷ ಆತ್ಮಾನಂ ದರ್ಶಯತಿ ಯಥಾಧಿಕಾರಂ ದೇವೇಭ್ಯೋಽತೋ ಬ್ರಹ್ಮೈನಮಭಿಪಶ್ಯತಿ’** ಇತ್ಯಾದಿ ಶ್ರುತಿಗಳಿಂದ ದರ್ಶನ ತಾರತಮ್ಯವು ಸುಸ್ಥಿರವಾದುದರಿಂದ ತಾರತಮ್ಯವು ಯುಕ್ತವೇ. **೩೩ನೇ ನಸಾಮಾನ್ಯಾಧಿಕರಣದಲ್ಲಿ— ‘ಬ್ರಹ್ಮವಿದಾಪ್ನೋತಿ ಪರಂ’** ಇದು ಮೊದಲಾದವಚನವು ಬಿಂಬಾಬಿಂಬಗಳಲ್ಲಿ ಸಾಧಾರಣವಾಗಿರುವುದರಿಂದ ಭಗವದ್ದರ್ಶನವು ಬಿಂಬರೂಪವಿಷಯಕವಾಗಿ ಮುಕ್ತಿಸಾಧನವೋ, ಯತ್ಕಿಂಚಿತ್‌ರೂಪ ವಿಷಯಕವಾದುದಾಗಿ ಮುಕ್ತಿಸಾಧನವೋ ಎಂದು ಸಂಶಯವು ಬಂದರೆ ಯತ್ಕಿಂಚಿತ್ ರೂಪ ವಿಷಯಕವಾದುದೂ

ಮುಕ್ತಿಸಾಧನವು ಎಂದು ಪೂರ್ವಪಕ್ಷವು; ಬಿಂಬರೂಪ ವಿಷಯಕವೇ ಎಂದು ಸಿದ್ಧಾಂತವು. ಹೇಗೆಂದರೆ- ಸರ್ವರೂಪಗಳಿಗೂ ಮೋಕ್ಷದಾತೃತ್ವಾದಿ ಗುಣಗಳು ಸಮಾನಗಳಾಗಿರುವುದರಿಂದ, ಯಾವುದಾದರೂ ರೂಪವನ್ನು ಕಂಡದರಿಂದ ಮುಕ್ತಿಯಾಗುವುದು. ಬಿಂಬರೂಪವನ್ನೇ ಉಪಾಸನಾ ಮಾಡಬೇಕೆಂದು ನಿಯಮವಿಲ್ಲ, ಎಂದರೆ- ಹೀಗೆ ಹೇಳಕೂಡದು **'ಸರ್ವೋऽಪಿ ಭಗವಾನ್ ಸ್ವಬಿಂಬದರ್ಶನ ಏವೈನಂ ಮೋಚಯತಿ'** ಇತ್ಯಾದಿ ಶ್ರುತಿಯಿಂದ ಸಮಕರ್ಮಗಳಲ್ಲಿ ತಾನು ಮಾಡಿದ ಕರ್ಮಕ್ಕೆ ಪ್ರಾಪ್ತಿಯಿದ್ದಂತೆಯೇ ಸಮಗಳಾದ ಭಗವದ್ರೂಪಗಳಲ್ಲಿ ಬಿಂಬದರ್ಶನವೇ ಮುಕ್ತಿಗೆ ಸಾಧನವು. ಆದಕಾರಣ ಬಿಂಬೋಪಾಸನ ನಿಯಮವಿದೆ. **೩೪ನೇ ಪರೇಣಾಧಿಕರಣದಲ್ಲಿ—** ಕೃಷ್ಯಾದಿಗಳಲ್ಲಿ ಸಾಧನಸಾಮರ್ಥ್ಯದಿಂದಲೂ, ರಾಜಸೇವಾದಿಗಳಲ್ಲಿ ಸೇವ್ಯಪುರುಷನ ಸಾಮರ್ಥ್ಯದಿಂದಲೂ ಫಲವು ಸಿಗುವುದರಿಂದ ಭಗವಂತನ ಜ್ಞಾನವು ಭಕ್ತಿಯ ಸಾಮರ್ಥ್ಯದಿಂದ ಆಗುತ್ತದೋ, ಪರಮಾತ್ಮನಿಂದಲೇ ಆಗುತ್ತದೋ ಎಂದು ಸಂಶಯವು ಬಂದರೆ— ಭಕ್ತಿಸಾಮರ್ಥ್ಯದಿಂದಲೇ ಎಂದು ಪೂರ್ವಪಕ್ಷವು; ಪರಮಾತ್ಮನಿಂದಲೇ ಎಂದು ಸಿದ್ಧಾಂತವು. ಅದರಲ್ಲಿ **'ಭಕ್ತಿರೇವೈನಂ ದರ್ಶಯತಿ'** ಎಂದು ಭಕ್ತಿಗೇನೇ ಮೋಚಕತ್ವವು ಪ್ರತ್ಯೇಕವಾಗಿ ಕಾಣುವುದರಿಂದ, ಸಾಧನಸಾಮರ್ಥ್ಯದಿಂದಲೇ ದರ್ಶನವು ಕೂಡುವುದರಿಂದ ಈಶ್ವರನಿಂದ ಕೃತ್ಯವಿಲ್ಲ, ಅಂತೂ ಅವನಿಗೆ ಅವ್ಯಕ್ತತ್ವವಿಲ್ಲ ಎಂದರೆ— ಹೀಗೆ ಹೇಳಕೂಡದು. **'ಅನಾದಿತೋ ಗುಣಾಃ ಸಂತೋ ಭಕ್ತ್ಯಾದ್ಯಾನ ಹ್ಯಮೂಮುಚನ್'** ಇತ್ಯಾದಿ ಬ್ರಹ್ಮತರ್ಕದ ವಚನದೆಶೆಯಿಂದ ಭಕ್ತಿವ್ಯಕ್ತಿಗೆ ಕಾರಣೀಭೂತನಾದ ಈಶ್ವರನನ್ನು ಬಿಟ್ಟು ಭಕ್ತಿಗೇನೇ ಸ್ವಾತಂತ್ರ್ಯವನ್ನೂ ಅಂಗೀಕರಿಸಿದರೆ ಮೊದಲೇ ಮುಕ್ತಿಯಾಗಬೇಕಾಗುವುದು. ಏವಂಚ ಅನಾದಿಯಾದ ಗುಣವಿಸ್ತಾರವಿದ್ದರೂ ಭಗವದ್ದರ್ಶನವಾಗದಿರುವುದರಿಂದ ಅವನಿಗೆ ಅವ್ಯಕ್ತತ್ವವು ಯುಕ್ತವೇ. **೩೫ನೇ ಏಕಾಧಿಕರಣದಲ್ಲಿ—** ಯೋಗ್ಯಾಯೋಗ್ಯ ಕ್ರಿಯೆಗಳು ಕಂಡದರಿಂದ ಉಪಾಸನಾದಿಗಳು ಯೋಗ್ಯತೆಯನ್ನು ಅಪೇಕ್ಷಿಸುತ್ತವೋ, ಇಲ್ಲವೋ ಎಂದು ಸಂಶಯವು ಬಂದರೆ— ಇಲ್ಲವೆಂದು ಪೂರ್ವಪಕ್ಷವು; ಯೋಗ್ಯತೆಯನ್ನು ಅಪೇಕ್ಷಿಸುತ್ತವೆ ಎಂದು ಸಿದ್ಧಾಂತವು. ಹೇಗೆಂದರೆ— ಅಂಶಿಯು ಜ್ಞಾನಿಯಾಗುತ್ತಿರಲು, ಸುಖಿಯಾಗುತ್ತಿರಲು, ದುಃಖಿಯಾಗುತ್ತಿರಲು, ಅಂಶದಲ್ಲಿ ಜ್ಞಾನಾದಿಗಳು ಇಲ್ಲದಿರುವುದರಿಂದ ಅಂಶಿಮಾರ್ಗವು ಅಂಶದಿಂದ ಅಗಮ್ಯವಾದಪ್ರಯುಕ್ತ ಅಂಶಾಂಶಿಗಳಿಗೆ ಭೇದವಿಲ್ಲವಾದರೆ ಜ್ಞಾನಾದಿ ಭೇದವು ಇಲ್ಲದೆ ಹೋಗುವುದು, ಎಂದರೆ— ಹೀಗೆ ಹೇಳಕೂಡದು. ಅಂಶೀಕೃತವಾದ, ಸಾಧನೋತ್ತಮವಾದ ಅದೃಷ್ಟವನ್ನು ಅಂಶವು ಅನುಭವಿಸುವುದರಿಂದ ಅಂಶಾಂಶಿಗಳಿಗೆ ಅಭೇದವೇ, ಆದಕಾರಣ ಅನಾದಿಯಾದ ಉಪಾಸನಾದಿಗಳಲ್ಲಿ ಅನಾದಿಯಾದ ಯೋಗ್ಯತಾಪೇಕ್ಷೆಯಿದೆ ಎನ್ನುವುದು ಯುಕ್ತವೆ. **೩೬ನೇ ಅಂಗಾವಬದ್ಧಾಧಿಕರಣದಲ್ಲಿ—** ಬ್ರಹ್ಮೋಪಾಸನವಿಧಿಯು ಅಂಗದೇವತೋಪಾಸನಸಾಹಿತ್ಯ ಸಾಹಿತ್ಯಾಭಾವಸಾಧಾರಣವಾಗಿರುವುದರಿಂದ ಭಗವದುಪಾಸನೆಯನ್ನು ಅಂಗದೇವತೋಪಾಸನೆಯಿಂದ ಕೂಡಿದ್ದನ್ನಾಗಿಯೇ ಮಾಡಬೇಕೋ, ಕೇವಲವಾಗಿ ಮಾಡಬೇಕೋ ಎಂದು ಸಂಶಯವು ಬಂದರೆ— ಕೇವಲವೆಂದು ಪೂರ್ವಪಕ್ಷವು; ಅಂಗದೇವತೆಗಳ ಉಪಾಸನೆಯಿಂದ ಕೂಡಿಕೊಂಡೇ ಭಗವದುಪಾಸನೆಯನ್ನು ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿಯೂ ಅಂಗದೇವತೆಗಳ ಉಪಾಸನಾಸಾಹಿತ್ಯದಿಂದ ಭಗವಂತನ ಉಪಾಸನೆಯನ್ನು ಮಾಡತಕ್ಕದಾದರೆ ಉಪಸಂಹಾರಕ್ಕೆ ಗುಣೋಪಸಂಹಾರ ಪೂರ್ವಕತ್ವವಿದ್ದುದರಿಂದ ಲೌಕಿಕಪುರುಷಪೂಜಾದಿಗಳಲ್ಲಿ ಎರಡುಪ್ರಕಾರಗಳೂ ಕಂಡದರಿಂದ ಶ್ರುತಿಪ್ರತಿಪಾದಿತಗಳಾದ ಒಬ್ಬನ ಗುಣಗಳನ್ನು ಸರ್ವರಲ್ಲಿಯೂ ಉಪಸಂಹಾರಮಾಡಬೇಕೋ, ಬೇಡವೋ ಎಂದು ಸಂಶಯವು ಬಂದರೆ ಉಪಸಂಹಾರಾರ್ಹಗಳು ಎಂದು ಪೂರ್ವಪಕ್ಷವು;

ಅಲ್ಲವೆಂದು ಸಿದ್ಧಾಂತವು. ಹೇಗೆಂದರೆ— ದೇವತಾಂತರ ಗುಣವು ದೇವತಾಂತರದಲ್ಲಿ ಅನುಸಂಧಾನವು ಬರಬೇಕಾಗುವುದರಿಂದ, ಅಂಗದೇವತೆಗಳು ಉಪಾಸನಾನರ್ಹರಾಗಿರುವುದರಿಂದ ಅವರನ್ನು ಪ್ರತಿಪಾದಿಸತಕ್ಕ ವೇದಗಳಿಗೆ ವೈಯರ್ಥ್ಯವು ಎಂದರೆ— ಹೀಗೆ ಹೇಳಕೂಡದು. ಬ್ರಹ್ಮರುದ್ರಾದಿಗಳಿಗೆ ಸೂರ್ಯಾದಿಗಳಲ್ಲಿ ಅಸಂಭಾವಿತ ಗುಣಗಳು ಇದ್ದುದರಿಂದ, ಅವರಕ್ಕಿಂತ ಬ್ರಹ್ಮರುದ್ರಾದಿಗಳಿಗೆ ಉತ್ತಮತ್ವವಿದ್ದುದರಿಂದ ಉತ್ತಮರ ಗುಣಗಳು ಅಧಮರಲ್ಲಿ ಅಯೋಗ್ಯಗಳಾಗಿರುವುದರಿಂದ ಬ್ರಹ್ಮಾದ್ಯಂಗ ದೇವತೆಗಳ ಗುಣಗಳ ಸಮೂಹಗಳನ್ನು ಸೂರ್ಯಾದಿಗಳಲ್ಲಿ ಉಪಸಂಹಾರ ಮಾಡಕೂಡದು; ಮತ್ತೆ ಯೋಗ್ಯವಾದುದನ್ನೇ ಉಪಸಂಹಾರ ಮಾಡಬೇಕು. ಹೀಗೆ ಉತ್ತಮರಾದ ಬ್ರಹ್ಮಾದಿಗಳಲ್ಲಿ ಅಧಮರಾದ ರುದ್ರಾದಿಗಳ ಗುಣಗಳನ್ನು ಉಪಸಂಹಾರ ಮಾಡಿದರೆ ಯಾವ ದೋಷವೂ ಇಲ್ಲ. ಏವಂಚ ನ್ಯಾಯದೃಷ್ಟಿಯಿಂದ ಯಥಾ ಯೋಗ್ಯವಾಗಿಯೇ ಅಂಗದೇವತೆಗಳ ಉಪಾಸನೆಯನ್ನು ಮಾಡಬೇಕು. **೩೭ನೇ ಭೂಮಕ್ರತ್ವಧಿಕರಣದಲ್ಲಿ—** ಸರ್ವೋಪಾಸ್ಯ- ಅನುಪಾಸ್ಯ ಗುಣಗಳು ಕಂಡದ್ದರಿಂದ ಭಗವತ್ಸಂಬಂಧಿಯಾದ ಭೂಮಗುಣವು ಸರ್ವೋಪಾಸ್ಯವೋ, ಅಲ್ಲವೋ ಎಂದು ಸಂಶಯವು ಬಂದರೆ ಅಲ್ಲವೆಂದು ಪೂರ್ವಪಕ್ಷವು; ಸರ್ವೋಪಾಸ್ಯವೆಂದು ಸಿದ್ಧಾಂತವು. ಅದರಲ್ಲಿ ಉಪಾಸಕನಿಗೆ ಭೂಮಗುಣವು ಸಂಭೃತ್ಯಾದಿಗಳಿಂದ ಉಪಾಸನಾರ್ಹವಾಗದರುವುದರಿಂದ ವಿಶೇಷವಿಲ್ಲವಾದರೂ ಉಪಾಸಕನಿಗೆ ಅಪೇಕ್ಷಿತಗಳಾದ ಆನಂದಾದಿಗುಣಗಳ ಉಪಾಸನಾನುಸಾರವಾಗಿ ಇಷ್ಟವಾದ ಆನಂದಾದಿಗಳು ಕೂಡುವುದರಿಂದ ಪ್ರಿಯಶಿರಸ್ತ್ವಾದಿ ಗುಣಗಳಂತೆಯೇ ಭೂಮಗುಣವು ಆನಂದಾದಿಗಳ ವಿಶೇಷವಾದಾಗ್ಯೂ ಉಪಾಸನಾನರ್ಹವಾಗಿರುವುದರಿಂದ ಪ್ರಿಯಶಿರಸ್ತ್ವಾದಿಗಳಿಂದ ವಿಶೇಷವಿಲ್ಲ. ಏವಂಚ ಇಷ್ಟವಾದ ಉಪಾಸಿತವಾದ ವಿಷ್ಣ್ವಾನಂದಾದಿಗಳಿಂದ ಇಷ್ಟವಾದ ಜೀವನಿಗೆ ಆವಿರ್ಭೂತವಾದ ಆನಂದಾದಿರೂಪತ್ವವು ಕೂಡುವುದು. ಹೀಗೆ ಇಷ್ಟಫಲವು ಅನ್ಯಥಾ ಸಿದ್ಧವಾಗುವುದರಿಂದ ಭೂಮತ್ವವನ್ನು ಉಪಾಸನಾಮಾಡಕೂಡದು. ಆದಕಾರಣ ಅಲೌಕಿಕವಾಗಿ ಉಪಾಸನವು ಯುಕ್ತವಲ್ಲ. ಎಂದರೆ— ಹೀಗೆ ಹೇಳಕೂಡದು. ಭೂಮತ್ವವನ್ನುಪಾಸನಮಾಡದಿದ್ದರೆ ಫಲವಿಲ್ಲದಿರುವುದರಿಂದ ಫಲಕ್ಕಾಗಿ '**ಭೂಮ್ನೈವ ದೇವಃ ಪರಮೋ ಹ್ಯುಪಾಸ್ಯೋ ನೈವಾಭೂಮಾ ಫಲಮೇಷಾಂ ವಿಧತ್ತೇ। ತಸ್ಮಾದ್ಭೂಮಾ ಗುಣತೋ ವೈ ವಿಶಿಷ್ಟೋ ಯಥಾಕ್ರತುಃ ಕರ್ಮಮಧ್ಯೇ ವಿಶಿಷ್ಟಃ**' ಎಂದು ಶಾಸನವಿದ್ದ ಪ್ರಯುಕ್ತ ಭೂಮತ್ವಕ್ಕೆ ಸಂಭೃತ್ಯಾದಿ ಗುಣಗಳಂತೆ ಸರ್ವಾನುಪಾಸ್ಯತ್ವವಿಲ್ಲ. ಮತ್ತೆ ಭೂಮತ್ವವನ್ನು ಸರ್ವರೂ ಉಪಾಸನೆ ಮಾಡಬೇಕು. **೩೮ನೇ ನಾನಾಶಬ್ದಾಧಿಕರಣದಲ್ಲಿ—** ಭೂಮಗುಣವು ಅಧಿಕಾರಿಗಳಿಗೆ ತಾರತಮ್ಯದಿಂದ ಇರುತ್ತದೋ, ಏಕಪ್ರಕಾರದಿಂದಲೋ, ಎಂದು ಸಂದೇಹವು ಬಂದರೆ— ಏಕಪ್ರಕಾರವೇ ಎಂದು ಪೂರ್ವಪಕ್ಷವು; ತಾರತಮ್ಯದಿಂದ ಎಂದು ಸಿದ್ಧಾಂತವು. ಹೇಗೆಂದರೆ— ಭೂಮತ್ವದಲ್ಲಿ ವಿಶೇಷವನ್ನು ಕಲ್ಪಿಸದೆ ಇರುವುದರಿಂದ ಭೂಮತ್ವವು ಏಕಪ್ರಕಾರವಾಗಿಯೇ ತೋರುತ್ತದೆ. ಹಿಂದೆ ಹೇಳಿದ ತಾರತಮ್ಯವು ಯುಕ್ತವಲ್ಲವೆಂದರೆ— ಹೀಗೆ ಹೇಳಕೂಡದು. '**ಯಾವನೇವಾಧಿಕಾರೇಷು ವಿಶೇಷೋಽನೂನ ಏವ ಹಿ। ತತೋ ಭೂಮತ್ವದೃಷ್ಟ್ವಾ ಚ ಬ್ರಹ್ಮಾದೀನಾಂ ಪ್ರೃಥಕ್ ಪ್ರೃಥಕ್**' ಎಂದು ಉಪಾಸ್ಯಗಳಾದ ಆನಂದಾದಿ ಗುಣಗಳಲ್ಲಿ ವಿಶೇಷಣೀಭೂತವಾದ ಭೂಮತ್ವ ವಿಶೇಷವು ಬ್ರಹ್ಮಾದ್ಯಧಿಕಾರಿ ವಿಶೇಷವನ್ನು ಅಪೇಕ್ಷಿಸಿ ಅನೂನವಾಗಿದೆ ಎಂದು ಅನುಸಾರಿ ವಚನವಿದ್ದ ಪ್ರಯುಕ್ತ ಅಧಿಕಾರಿಗಳಲ್ಲಿ ತಾರತಮ್ಯವು ಯುಕ್ತವು. **೩೯ನೇ ವಿಕಲ್ಪಾಧಿಕರಣದಲ್ಲಿ—** ಮುಮುಕ್ಷುಗಳು ಸ್ವಬಿಂಬಾತಿರಿಕ್ತವಾದ ರೂಪವನ್ನು ವಿಷಯೀಕರಿಸುವ ಭಗವದುಪಾಸನೆಯನ್ನು ಮಾಡಬೇಕೋ ಮಾಡಕೂಡದೋ, ಎಂದು ಸಂಶಯವು

ಬಂದರೆ— ಮಾಡಕೂಡದೆಂದು ಪೂರ್ವಪಕ್ಷವು; ಮೋಕ್ಷಸಾಧನಾತಿರಿಕ್ತವಾದ ನರಸಿಂಹಾದ್ಯುಪಾಸನೆಯನ್ನು ಮಾಡಲೇಬೇಕೆಂದು ಸಿದ್ಧಾಂತವು. ಅದರಲ್ಲಿ ಬಿಂಬಾತಿರಿಕ್ತೋಪಾಸನೆಯು ನಿಷ್ಕಾಮವಾದ ಮೋಕ್ಷಸಾಧನವಾದ ಬಿಂಬೋಪಾಸನೆಗೆ ವಿಘ್ನಕಾರಿಯಾಗಿ ವಿರುದ್ಧವಾಗಿರುವುದರಿಂದ, ಮೋಕ್ಷಸಾದನವಾಗಿ ಉಪದಿಷ್ಟವಾದ ಬಿಂಬೋಪಾಸನವನ್ನು ಹೊರತು ವಿಷ್ಣುವಿಷಯದಲ್ಲಿಯೇ ಉಪಾಸನಾಂತರವು ಕರ್ತವ್ಯವಾಗದಿರುವುದರಿಂದ ಅದನ್ನು ಹೇಳತಕ್ಕ ವೇದಗಳಿಗೆ ವೈಯರ್ಥ್ಯವು. ಎಂದರೆ— ಹೀಗೆ ಹೇಳಕೂಡದು. ಮೋಕ್ಷಸಾಧನವಾದ ಬಿಂಬೋಪಾಸನಾನಂತರದಲ್ಲಿ ಮಾಡಲ್ಪಡತಕ್ಕ ಬಿಂಬಾತಿರಿಕ್ತವಾದ ನರಸಿಂಹಾದ್ಯುಪಾಸನೆಯು ವಿಶಿಷ್ಟ ಮೋಕ್ಷಕ್ಕೆ ಪ್ರತಿಬಂಧಕವಾದ ದುರಿತವನ್ನು ಹೋಗಲಾಡಿಸುವುದರಿಂದ, ವಿಶಿಷ್ಟ ಮೋಕ್ಷವು ಅವಿಘ್ನತ್ವಕ್ಕೆ ಸಾಧನವಾಗಿರುವುದರಿಂದ ಶುದ್ಧ ವೈರೂಪ್ಯವು ಸಿದ್ಧವಾಗಲಿಲ್ಲ. ಏವಂಚ ಅವಿಘ್ನತ್ವಕ್ಕೆ ಕಾರಣವಾಗಿರುವುದರಿಂದ ಬಿಂಬಾತಿರಿಕ್ತವಾದ ಭಗವದ್ರೂಪವನ್ನು ಉಪಾಸನಮಾಡಬೇಕು. ಆ ವಿದ್ಯೆಗೆ ವೈಯರ್ಥ್ಯವಿಲ್ಲ. **೪೦ನೇ ಕಾಮ್ಯಾಧಿಕರಣದಲ್ಲಿ—** ಕಾಮಸಾಧನಗಳಾದ ಭಗವದ್ರೂಪ ಗುಣಗಳನ್ನು ವಿಷಯೀಕರಿಸಿಕೊಂಡಿರುವ ಉಪಾಸನವು ಆವಶ್ಯಕವೋ, ವೈಕಲ್ಪಿಕವೋ ಎಂದು ಸಂಶಯವು ಬಂದರೆ— ಆವಶ್ಯಕವೆಂದು ಪೂರ್ವಪಕ್ಷವು, ವೈಕಲ್ಪಿಕವೆಂದು ಸಿದ್ಧಾಂತವು. ಅದರಲ್ಲಿ ಕಾಮ್ಯೋಪಾಸನೆಯೂ ಮೋಕ್ಷಕ್ಕೆ ಅಂಗವಾಗಿರುವುದರಿಂದ, ಆವಶ್ಯಕವಾದುದರಿಂದ ಪ್ರಥಮಪಾದವು(ವೈರಾಗ್ಯಪಾದವು) ವ್ಯರ್ಥವು, ಎಂದರೆ— ಹೀಗೆ ಹೇಳಕೂಡದು. ಕಾಮ್ಯಗುಣಗಳನ್ನುಪಸಂಹಾರಮಾಡದಿದ್ದರೆ ವಿರೋಧವಿಲ್ಲದಿರುವುದರಿಂದ, ಕಾಮ್ಯೋಪಾಸನವು ವಿಕಲ್ಪವಾಗಿರುವುದರಿಂದ ವೈರಾಗ್ಯಪಾದವು ಸಾರ್ಥಕವೇ **೪೧ನೇ ಅಂಗಾಧಿಕರಣದಲ್ಲಿ—** ಮೋಕ್ಷವನ್ನು ಇಚ್ಛಿಸುವವನು ಬ್ರಹ್ಮಾದಿಗಳು ಭಗವಂತನ ಅಂಗವನ್ನು ಆಶ್ರಯಿಸಿರುತ್ತಾರೆ, ಎಂದು ಉಪಾಸನಮಾಡಬೇಕೋ, ಬೇಡವೋ ಎಂದು ಸಂಶಯವು ಬಂದರೆ— ಮಾಡಕೂಡದೆಂದು ಪೂರ್ವಪಕ್ಷವು; ಮಾಡಬೇಕೆಂದು ಸಿದ್ಧಾಂತವು. ಹೇಗೆಂದರೆ— ದೇವತೆಗಳು ಶ್ರೀ ಹರಿಯ ಅಂಗವನ್ನು ಆಶ್ರಯಿಸಿರುತ್ತಾರೆಂದೂ, ಉಪಾಸನೆಯನ್ನು ದೇವತೆಗಳು ಮಾಡಬೇಕು ಎಂದೂ ವಿಶೇಷವಚನವಿಲ್ಲದಿರುವುದರಿಂದ ಇತರರಿಗೆ ಅದರಲ್ಲಿ ಅಧಿಕಾರವಿಲ್ಲದಿರುವುದರಿಂದ ನಿರಧಿಕಾರಿಕವೆಂದೇ ಪ್ರಾಪ್ತವಾಯಿತು, ಎಂದರೆ- ಹಾಗೆ ಹೇಳಕೂಡದು. **'ಧ್ಯಾಯೇದಂಗೇಷ್ವಂಗದೇವತಾಃ ಪರಸ್ಯ ವಿಶಿಷ್ಟಾ ಹಿ ಗುಣಾ ಮುಕ್ತೌ ದೇವಾನಾಂ ಭವಂತಿ ತೇ ಹಿ ತಾದೃಶಾಸ್ತೇ ಹಿ ಹರೇರನುರೂಪಾಃ'** ಎನ್ನುವ ಶ್ರುತಿಯುದೆಶೆಯಿಂದ, ಹರ್ಯನುರೂಪತ್ವ, ಪರಮಸ್ಥಾನ ಪ್ರಾಪ್ತಿರೂಪವಾದ ಫಲಯೋಗ್ಯತ್ವಾದಿಗುಣಗಳು ದೇವತೆಗಳಿಗೇನೇ ವಿಶೇಷವಾಗಿರುವುದರಿಂದ ಅವರಿಗೇನೇ ಅಂಗದೇವತೋಪಾಸನದಲ್ಲಿ ಅಧಿಕಾರವು. ಆದುದರಿಂದ ಆ ವಿದ್ಯೆಗಳಿಗೆ ಸಾರ್ಥಕ್ಯವು. **೪೨ನೇ ನವಾಧಿಕರಣದಲ್ಲಿ—** ಕರ್ತವ್ಯಾಕರ್ತವ್ಯ ಉಪಾಸನಗಳು ತೋರುವುದರಿಂದ ಭಗವದಂಗಾಶ್ರಿತರೆಂದು ಉಪಾಸನಮಾಡಬೇಕೋ, ಬೇಡವೋ ಎಂದು ಸಂಶಯವು ಬಂದರೆ— ಮಾಡಕೂಡದೆಂದು ಪೂರ್ವಪಕ್ಷವು; ದೇವತೆಗಳೇ ಮಾಡಬೇಕೆಂದು ಸಿದ್ಧಾಂತವು. ಹೇಗೆಂದರೆ— ಅಂಗದೇವತೋಪಾಸನೆಯು ಕರ್ತವ್ಯವಾದರೆ ಕ್ರಿಯೆಯಾದಪ್ರಯುಕ್ತ ಅಗ್ನಿಷ್ಟೋಮಾದಿಗಳಂತೆ ಪ್ರತಿಶಾಖೆಗಳಲ್ಲಿಯೂ ಎಲ್ಲಾ ಶಾಖೆಗಳಲ್ಲಿ ಹೇಳಬೇಕಿತ್ತು, ಹೇಳಲಿಲ್ಲ. ಆದಕಾರಣ ಪ್ರತಿಶಾಖೆಯಲ್ಲಿಯೂ ಹೇಳದಿರುವುದರಿಂದ ಅಂಗದೇವತೋಪಾಸನೆಯನ್ನು ಯಾರೂ ಕೂಡ ಮಾಡಕೂಡದು. ಎಂದರೆ— ಹೀಗೆ ಹೇಳಕೂಡದು. **'ಉಪಾಸನಂ ಯಜನಂ ಚೇತಿ ಸಾಮ್ಯಂ ತತ್ತದ್ವಿಶೇಷಾನ್ ಸಂಹರೇತ್ಸರ್ವತಶ್ಚ । ತಥಾ ಕರ್ತ್ಯಣಾಂ ತತ್ಫಲಾನಾಂ ವಿಶೇಷಾದ್ವ್ಯರ್ಥಾ ಹಿ ಶಾಖಾ ಅನ್ಯಥೈವಂ ಚ ಸಾರ್ಥಾಃ'** ಇತ್ಯಾದ್ಯಾಗಮಗಳಿಂದ

ಉಪಾಸನಾವಿಶೇಷಗಳು ಅಲ್ಲಲ್ಲಿ ಹೇಳಲ್ಪಟ್ಟ ಚತುರ್ಮುಖಾಶ್ರಯಶೀರ್ಷತ್ವ ಮೊದಲಾದ ಗುಣೋಪಸಂಹಾರಪೂರ್ವಕವಾಗಿ ಉಪಾಸನೆಯನ್ನು ಮಾಡಿದ ಅಧಿಕಾರಿವಿಶೇಷರಾದ ದೇವಾದಿಗಳೂ, ಫಲವಿಶೇಷಗಳೂ ಕೂಡ ಆಗಮದಿಂದ ತಿಳಿದುಬರುವುದರಿಂದ ಅಂಗದೇವತೋಪಾಸನೆಯನ್ನು ದೇವತೆಗಳೇ ಮಾಡಬೇಕು ಎಂದು ತಿಳಿದುಬರುವುದರಿಂದ ಆ ವಿದ್ಯೆಗಳಿಗೆ ಸಾರ್ಥಕ್ಯವು ಯುಕ್ತವು ॥ ೫೭ ॥ ೫೮ ॥ ೫೯ ॥ ೬೦ ॥ ೬೧ ॥ ೬೨ ॥ ೬೩ ॥ ೬೪ ॥ ೬೫ ॥ ೬೬ ॥ ೬೭ ॥

## 'ಓಂ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ಓಂ' ॥ ಸೂ. ೧ ॥

ಸರ್ವವೇದ ವಿಷಯಕ ಶ್ರವಣಮನನಗಳಿಂದ ಸಾಧ್ಯವಾದ ನಿರ್ಣಯದಿಂದ ಹುಟ್ಟತಕ ಜ್ಞಾನ ವಿಷಯನು, ಅಂದರೆ — ಶಕ್ತ್ಯನುಸಾರವಾಗಿ ಸರ್ವವೇದಗಳನ್ನು ಶ್ರವಣಾದಿಗಳಿಂದ ನಿರ್ಣಯಿಸಿ ಬ್ರಹ್ಮನನ್ನು ತಿಳಿಯಬೇಕು, ಕೇವಲ ತಮ್ಮ ತಮ್ಮ ಶಾಖೆಗಳಲ್ಲಿ ಮಾತ್ರ ಹೇಳಿದ ರೀತಿಯಿಂದ ಅಲ್ಲ. ಕಾಣ್ವಾದಿ ಶಾಖೆಗಳಲ್ಲಿ ಕಾಣ್ವರು ಹೀಗೆ ತಿಳಿಯಬೇಕು. ಮಾಧ್ಯಂದಿನರು ಹೀಗೆ ತಿಳಿಯಬೇಕು. ಎಂದು ಅಧಿಕಾರಿವಿಶೇಷವನ್ನು ಹೇಳದಿರುವುದರಿಂದ ಅಲ್ಲದೆ **'ಆತ್ಮೇತ್ಯೇವೋಪಾಸೀತ'** ಇತ್ಯಾದಿ ವಿಧಿಗಳೂ ಸರ್ವಾಧಿಕಾರಿಗಳಲ್ಲಿ ಸಾಧಾರಣವಾಗಿವೆ.

## 'ಓಂ ಭೇದಾನ್ನೇತಿ ಚೇದೇಕಸ್ಯಾಮಪಿ ಓಂ' ॥ ಸೂ ೨ ॥

**'ವಿಜ್ಞಾನಮಾನಂದಂ ಬ್ರಹ್ಮ ಸತ್ಯಂ ಜ್ಞಾನಮನಂತಂ ಬ್ರಹ್ಮ'** ಇತ್ಯಾದಿಗಳಿಂದ ಪ್ರತಿ ಶಾಖೆಯಲ್ಲಿಯೂ ವಸ್ತುಗಳಿಗೆ ಭೇದವಿದ್ದ ಪ್ರಯುಕ್ತ ಒಬ್ಬ ಬ್ರಹ್ಮನು ಸರ್ವವೇದ ವಿಷಯಕಗಳಾದ, ಶ್ರವಣಮನನ ಸಾಧ್ಯವಾದ ನಿರ್ಣಯದಿಂದುಂಟಾಗತಕ್ಕ ಜ್ಞಾನವಿಷಯನಲ್ಲ, ಮತ್ತೆ ತಮ್ಮ ತಮ್ಮ ಶಾಖೆಗಳಿಂದುಂಟಾಗತಕ್ಕ ಜ್ಞಾನವಿಷಯನೇ, ಎಂದರೆ— ಹೀಗೆ ಹೇಳಕೂಡದು. **'ಆತ್ಮೇತ್ಯೇವೋಪಾಸೀತ ಕಂ ಬ್ರಹ್ಮ ಖಂ ಬ್ರಹ್ಮ'** ಎಂದು ಒಂದು ಶಾಖೆಯಲ್ಲಿಯೂ ಕೂಡ ಅರ್ಥಭೇದವನ್ನು ಹೇಳಿದುದರಿಂದ ಅಲ್ಲಿ ಹೇಳಿದ್ದೂ ಕೂಡ ತಿಳಿಯದೆ ಹೋಗಬೇಕಾಗುವುದು.

ಧ್ಯಾನರೂಪವಾದ ಉಪಾಸನಾರ್ಥಿಗಳು ಅಧ್ಯಯನ-ಶ್ರವಣ-ಮನನಗಳಿಂದ (೧) ತಮ್ಮ ತಮ್ಮ ಶಾಖೆಗಳನ್ನೇ ತಿಳಿಯಬೇಕೋ, ಅಥವಾ (೨) ಎಲ್ಲಾ ವೇದಗಳನ್ನೂ, ತಿಳಿಯಬೇಕೋ ಎಂದು ಸಂಶಯವು ಬಂದರೆ— ಶಾಖಾಭೇದವು ಅತಿಪ್ರಸಿದ್ಧವಾಗಿರುವುದರಿಂದ ಪ್ರಥಮ ಪಕ್ಷವೇ ಶ್ರೇಷ್ಠವು ಎಂದು ಪ್ರಾಪ್ತವಾದರೆ 'ಸರ್ವವೇದಾಂತಪ್ರತ್ಯಯಂ' ಎಂದು ಸಿದ್ಧಾಂತಮಾಡಲ್ಪಟ್ಟದೆ. ಅದರಲ್ಲಿ ಸರ್ವಶಬ್ದವು ಅಸಂಕುಚಿತವೃತ್ತಿಯು ಎನ್ನುವ ಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ವ್ಯಾಖ್ಯಾನಮಾಡುತ್ತಾರೆ.

**ಮೂ ॥ ಯಥಾಶಕ್ತ್ಯಖಿಲಾನ್ ವೇದಾನ್ ವಿಜ್ಞಾಯೋಪಾಸನಂ ಭವೇತ್ ।**
**ತತ್ರಾಖಿಲಸ್ಯ ವಿಜ್ಞಪ್ತಿಃ ಸಮ್ಯಗ್ಬ್ರಹ್ಮಣ ಏವ ಹಿ ।**
**ತದನ್ಯೇಷಾಂ ಯಥಾಯೋಗಮಖಿಲಜ್ಞಪ್ತಿರಿಷ್ಯತೇ ॥ ೬೮ ॥**

**ಅ ॥** ಯಥಾಶಕ್ತಿ=ಶಕ್ತ್ಯನುಸಾರವಾಗಿ, ಅಖಿಲಾನ್ = ಎಲ್ಲಾ, ವೇದಾನ್ = ವೇದಗಳನ್ನು, ವಿಜ್ಞಾಯ=ತಿಳಿದು, (ಅವಸ್ಥಿತಸ್ಯ=ಇದ್ದವನಿಗೆ) ಉಪಾಸನಂ = ಉಪಾಸನವು, ಭವೇತ್ = ಆಗುವುದು. ) ಅಥವಾ ವಿಜ್ಞಾಯ = ತಿಳಿದು, ಉಪಾಸನಂ = ಉಪಾಸನವನ್ನು

(ಮಾಡತಕ್ಕವನು) ಭವೇತ್=ಆಗುವನು. ಅಥವಾ ಉಪಾಸನಂ=ಉಪಾಸನವನ್ನು (ಕುರ್ವೀತ= ಮಾಡತಕ್ಕದು.) ತತ್ರ=ಆ ಉಪಾಸಕರಲ್ಲಿ, ಹಿ=ಯಾವ ಕಾರಣದೆಶೆಯಿಂದ, ಸಮ್ಯಕ್= ಚೆನ್ನಾಗಿ, ಅಖಿಲಸ್ಯ=ಎಲ್ಲಾ ವೇದದ, ವಿಜ್ಞಪ್ತಿಃ=ವಿಜ್ಞಾನವು, ಬ್ರಹ್ಮಣ ಏವ=ಬ್ರಹ್ಮನಿಗೇನೇ, ಭವೇತ್=ಯುಕ್ತವಾಗುವುದೋ, (ಇತರರಿಗೆ ಯುಕ್ತವಾಗುವುದಿಲ್ಲವೋ) ತತ್=ಆದಕಾರಣ, ಅನ್ಯೇಷಾಂ=ಇತರರಿಗೆ, ಯಥಾಯೋಗಂ=ಯೋಗ್ಯತಾನುಸಾರವಾಗಿ ಅಥವಾ ಶಕ್ತ್ಯನುಸಾರ ವಾಗಿಯೇ, ಅಖಿಲಜ್ಞಪ್ತಿಃ = ಸರ್ವವೇದಜ್ಞಾನವು ಅಥವಾ ಪ್ರಿಯಶಕ್ತಿಯು, ಸರ್ವಜ್ಞತ್ವವು, ಇಷ್ಯತೇ=ಅಂಗೀಕರಿಸಲ್ಪಡುತ್ತದೆ ॥ ೨೮ ॥

ಯದ್ಯಪಿ ಅಸ್ಮದಾದಿಗಳಿಗೆ ಈ ಜನ್ಮದಲ್ಲಿ ಸರ್ವವೇದಜ್ಞಾನವು ಕೂಡಲಾರದು. ಆದಾಗ್ಯೂ ಯಾವ ಜನ್ಮದಲ್ಲಿ ಇದು ಕೂಡುತ್ತದೋ, ಅಂತಹ ಜನ್ಮವನ್ನು ಕಲ್ಪಿಸಬೇಕು. ಎಂದು ಶಂಕಾ ಬಂದರೆ—

**ಮೂ ॥ ತಾವತೋಪಾಸನೇ ಯೋಗ್ಯೋ ಭವೇದೇವಾಖಿಲಃ ಪುಮಾನ್ ॥ ॥ ೨೯ ॥**

**ಮಹತ್ವಸ್ಯ ಪರಂ ಪಾರಂ ವಿದಿತ್ವೈವ ಜನಾರ್ದನಃ ।**
**ಸ್ತೋಷ್ಯತಾಮೇತಿ (ವ) ತುಷ್ಟತ್ವಮಿತಿ ನಾಸ್ತ್ಯೇವ ನಾರದ ॥ ೩೦ ॥**
**ಕಿಂತು ನಿಶ್ಚಲಯಾ ಭಕ್ತ್ಯಾ ಹ್ಯಾತ್ಮಜ್ಞಾನಾನುರೂಪತಃ ।**
**ಯಃ ಸ್ತೋಷ್ಯತಿ ಸದಾ ಭಕ್ತಸ್ತುಷ್ಟಸ್ತಸ್ಯ ಸದಾ ಹರಿಃ ॥ ೩೧ ॥**
**ಇತ್ಯಾದಿ ವಾಕ್ಯಸಂದರ್ಭಾದ್ಯಥಾಯೋಗ್ಯಾಖಿಲಜ್ಞತಾ ।**
**ಆತ್ಮಜ್ಞಾನಾನುರೂಪತ್ವಂ ಯಥಾಶಕ್ತಿವಿಚಾರಣಾತ್ ॥ ೩೨ ॥**

ಅ ॥ ಅಖಿಲಃ ಪುಮಾನ್=ಎಲ್ಲಾ ಜನರೂ, ತಾವತಾ=ಶಕ್ತ್ಯನುಸಾರವಾಗಿ ವಿಜ್ಞಾನ ಮಾತ್ರದಿಂದ, ಉಪಾಸನೇ = ಧ್ಯಾನರೂಪ ಉಪಾಸನದಲ್ಲಿ, ಯೋಗ್ಯಃ = ಯೋಗ್ಯರು, ಭವೇದೇವ=ಸರ್ವಥಾ ಆಗುವರು. (ಯಥಾಶಕ್ತಿ ವೇದಜ್ಞಾನವೇ ಶ್ರೀ ಹರಿಯ ಉಪಾಸನೆಗೆ ಉಪಯುಕ್ತವು. ಸರ್ವವೇದಗಳ ಜ್ಞಾನವು ಆವಶ್ಯಕವಲ್ಲ ಎನ್ನುವಲ್ಲಿ ಪುರಾಣವಾಕ್ಯವನ್ನೂ ಹೇಳುತ್ತಾರೆ.) ಹೇ ನಾರದ=ಎಲೋ ನಾರದನೇ, ಜನಾರ್ದನಃ=ಶ್ರೀ ಹರಿಯು, ಮಹತ್ವಸ್ಯ= ಮಹತ್ವದ, ಪರಂ ಪಾರಂ=ಆಚೆ ದಡವನ್ನು, ವಿದಿತ್ವೈವ=ತಿಳಿದರೆ, (ಅಂದರೆ ವೇದ ಹೊರತು ಭಗವನ್ಮಾಹಾತ್ಮ್ಯವನ್ನು ತಿಳಿಯಲಿಕ್ಕೆ ಅಶಕ್ಯವಾದುದರಿಂದ ಸರ್ವವೇದಗಳ ಜ್ಞಾನವನ್ನು ಹೊಂದಿಯೇ) ಸ್ತೋಷ್ಯತಾಂ=ಸ್ತೋತ್ರಮಾಡಿಸಿಕೊಳ್ಳುವಿಕೆಯನ್ನೂ ಧ್ಯಾನಮಾಡಿಸಿಕೊಳ್ಳುವಿಕೆ ಯನ್ನೂ, ಏತಿ=ಹೊಂದುತ್ತಾನೆ, ತುಷ್ಟತ್ವಂ=ಸಂತುಷ್ಟತನವನ್ನೂ ಹೊಂದುತ್ತಾನೆ. ಇತಿ=ಹೀಗೆ, ನಾಸ್ತ್ಯೇವ=ನಿಯಮವು ಇಲ್ಲವೇ ಇಲ್ಲ. ಕಿಂತು=ಮತ್ತು, ನಿಶ್ಚಲಯಾ ಭಕ್ತ್ಯಾ=ಚಲನ ರಹಿತ ವಾದ ದೃಢವಾದ ಭಕ್ತಿಯಿಂದ, ಆತ್ಮಜ್ಞಾನಾನುರೂಪತಃ=ತನ್ನ ಯೋಗ್ಯತಾನುಗುಣವಾದ ಜ್ಞಾನಕ್ಕೆ ಅನುಸಾರವಾಗಿ, ಯಃ=ಯಾವ, ಭಕ್ತಃ=ಭಕ್ತನು, ಸದಾ=ಯಾವಾಗಲೂ, ಸ್ತೋಷ್ಯತಿ= ಸ್ತೋತ್ರಮಾಡುತ್ತಾನೋ, ತಸ್ಯ=ಆತನಿಗೆ, ಹರಿಃ=ಶ್ರೀ ಹರಿಯು, ಸದಾ=ಯಾವಾಗಲೂ, ತುಷ್ಟಃ=ಸಂತುಷ್ಟನಾಗುತ್ತಾನೆ. ಇತ್ಯಾದಿವಾಕ್ಯ ಸಂದರ್ಭಾತ್ = ಇದುಮೊದಲಾದ ವಾಕ್ಯಗಳ ಸಂದರ್ಭಾನುಸಾರವಾಗಿ, ಯಥಾಯೋಗ್ಯಾಖಿಲಜ್ಞತಾ=ಯಥಾಯೋಗ್ಯವಾಗಿ, ಯೋಗ್ಯತಾನು ಸಾರವಾದ ಸರ್ವ ವೇದಜ್ಞತ್ವವು, (ಧ್ಯಾನಕ್ಕೆ ಉಪಯುಕ್ತವೆಂದು ತಿಳಿಯಲ್ಪಡುತ್ತದೆ.) (ಇಲ್ಲಿ ಉಪಾಸನೆಗೆ) ಆತ್ಮಜ್ಞಾನಾನುರೂಪತ್ವಂ=ಆತ್ಮಯೋಗ್ಯಜ್ಞಾನಕ್ಕೆ ಅನುರೂಪತ್ವವು, ಯಥಾಶಕ್ತಿ ವಿಚಾರಣಾತ್=ಶಕ್ತ್ಯನುಸಾರವಾದ ವಿಚಾರದಿಂದ, ಆಗುತ್ತದೆ ॥ ೨೯ ॥ ೩೦ ॥ ೩೧ ॥ ೩೨ ॥

ಶಾಖಾಭೇದವು ಅತಿ ಪ್ರಸಿದ್ಧವಾಗಿರುವುದರಿಂದ ಚೋದನಾದಿಗಳೂ ಕೂಡ ವಿಶೇಷಪರ ವೆಂದು ವ್ಯಾಖ್ಯಾನಮಾಡತಕ್ಕದ್ದು, ಎಂದರೆ ಸೂತ್ರಕಾರರು ಯುಕ್ತ್ಯಂತರವನ್ನು ಹೇಳುತ್ತಾರೆ—

**"ಓಂ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇಽಧಿಕಾರಾಚ್ಚ ಓಂ"** ॥ ಸೂ. ೩ ॥

**'ಸ್ವಾಧ್ಯಾಯೋಽಧ್ಯೇತವ್ಯಃ'** ಎನ್ನುವ ಅಧ್ಯಯನ ವಿಧಿಯು ಸರ್ವಾಧಿಕಾರಿ ಸಾಧಾರಣ ವಾಗಿರುವುದರಿಂದಲೂ, ಸರ್ವವೇದೋಕ್ತ ಕರ್ಮಗಳನ್ನು ಚೆನ್ನಾಗಿ ಅನುಷ್ಠಾನಮಾಡುವ ವಿಷಯ ದಲ್ಲಿ ಸರ್ವರಿಗೂ ಅಧಿಕಾರವಿದ್ದುದರಿಂದಲೂ ಬ್ರಹ್ಮನು ಸರ್ವ ವೇದಾಂತದಿಂದ ಉಂಟಾಗತಕ್ಕ ಜ್ಞಾನವಿಷಯನೇ.

**"ಓಂ ಸಲಿಲವಚ್ಚ ತನ್ನಿಯಮಃ ಓಂ"** ॥ ಸೂ. ೪ ॥

ಸರ್ವವೇದಗಳ ಶ್ರವಣಾದಿಗಳಿಂದ ಬ್ರಹ್ಮನನ್ನು ತಿಳಿಯಬೇಕೆನ್ನುವ ನಿಯಮವು **'ಸರ್ವಾ-ಸಾಂ ಅಪಾಂ ಸಮುದ್ರಃ ಏಕಾಯನಂ'** ಎನ್ನುವ ನಿಯಮವು ಶಕ್ತಿಯಿದ್ದರೆ ಹೇಗೋ ಹಾಗೆಯೇ ಪುಂಶಕ್ತಿಯನ್ನು ಅಪೇಕ್ಷಿಸಿಯೇ.

**"ಓಂ ದರ್ಶಯತಿ ಚ ಓಂ"** ॥ ಸೂ. ೫ ॥

ಹಿಂದೆ ಹೇಳಿದ ಅರ್ಥವನ್ನು **'ಸರ್ವೈಽಶ್ಚ ವೇದ್ಯಃ ಪರಮೋ ಹಿ ದೇವೋ ಜಿಜ್ಞಾಸ್ಯಃ'** ಎನ್ನುವ ಶ್ರುತಿಯೂ **'ಸರ್ವಾನ್ ವೇದಾನ್ ನೇತಿ ಹಾಸಾನ್'** ಎನ್ನುವ ಸ್ಮೃತಿಯೂ ತೋರಿಸುತ್ತದೆ.

ಅದರಲ್ಲಿ **'ಸ್ವಾಧ್ಯಾಯಸ್ಯ ತಥಾತ್ವೇನ ಹಿ'** ಎನ್ನುವ ಪರ್ಯಂತ ವ್ಯಾಖ್ಯಾನ ಮಾಡುತ್ತಾರೆ --

**ಮೂ ॥ ವೇದಃ ಕೃತ್ಸ್ನೋಽಧಿಗಂತವ್ಯಃ ಸ್ವಾಧ್ಯಾಯಾಧ್ಯಯನಂ ಭವೇತ್ ।**
**ಇತ್ಯಾದಿ ವಾಕ್ಯವೈಯರ್ಥ್ಯಮನ್ಯಥಾ ನ ನಿವಾರ್ಯತೇ ॥ ೭೩ ॥**

ಅ ॥ ಕೃತ್ಸ್ನಃ ವೇದಃ=ನಿಖಿಲವೇದವೂ, ಅಧಿಗಂತವ್ಯಃ=ಹೊಂದಲರ್ಹವಾದುದು, (ಇದರಿಂದ **'ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನಾ'** ಎನ್ನುವ ಸ್ಮೃತಿ ಯನ್ನು ಇಟ್ಟುಕೊಳ್ಳಬೇಕು.) ಸ್ವಾಧ್ಯಾಯಾಧ್ಯಯನಂ=ವೇದಾಧ್ಯಯನವು, ಭವೇತ್=ಕರ್ತವ್ಯ ವಾಗುವುದು, (ಇದರಿಂದ **'ಸ್ವಾಧ್ಯಾಯೋಽಧ್ಯೇತವ್ಯಃ'** ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳ ಬೇಕು.)ಇತ್ಯಾದಿ ವಾಕ್ಯವೈಯರ್ಥ್ಯಂ=ಇದುಮೊದಲಾದ ವಾಕ್ಯಗಳಿಗೆ ವೈಯರ್ಥ್ಯವು, ಅನ್ಯಥಾ= ಕೇವಲ ತಮ್ಮ ತಮ್ಮ ಶಾಖೆಗಳ ಜ್ಞಾನವನ್ನು ಮಾತ್ರ ಅಂಗೀಕರಿಸಿದರೆ, ನ ನಿವಾರ್ಯತೇ= ಪರಿಹೃತವಾಗುವುದಿಲ್ಲ ॥ ೭೩ ॥

ಸಮಾಚಾರೇಽಧಿಕಾರಾಚ್ಚ ಎನ್ನುವ ಸೂತ್ರಖಂಡವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ ಅದ್ಯಾಪಿ ತೇನ ದೇವಾದ್ಯಾಃ ಶೃಣ್ವತೇ ಮನ್ವತೇ ಸದಾ ।**
**ಧ್ಯಾಯಂತಿ ಚ ಯಥಾಯೋಗಂ ತಥಾಪ್ಯಾವಸ್ತುನಿರ್ಣಯಾತ್ ॥ ೭೪ ॥**

**ಶ್ರವಣಂ ಮನನಂ ಚೈವ ಕರ್ತವ್ಯಂ ಸರ್ವಥೈವ ಹಿ ।**
**ಮತಿಶ್ರುತಿಧ್ಯಾನಕಾಲವಿಶೇಷಂ ಗುರುರುತ್ತಮಃ ।**
**ವೇತ್ತಿ ತಸ್ಯೋಕ್ತ(ಕ್ತಿ)ಮಾರ್ಗೇಣ ಕುರ್ವತಃ ಸ್ಯಾದ್ಧಿ ದರ್ಶನಂ ॥**
**॥ ೭೫ ॥**

**ಅ ॥** ತೇನೈವ ಹಿ=ಸರ್ವ ವಿಜ್ಞಾನವು ಆವಶ್ಯಕವೆನ್ನುವ ಕಾರಣದಿಂದಲೇ, ದೇವಾದ್ಯಾಃ= ದೇವತೆಗಳೇ ಮೊದಲಾದವರು, ಅದ್ಯಾಪಿ = ಈಗಲೂ ಕೂಡ, ಸದಾ = ಯಾವಾಗಲೂ, ಯಥಾಯೋಗಂ=ಶಕ್ತ್ಯನುಸಾರವಾಗಿ, ಶೃಣ್ವತೇ=ಶ್ರವಣ ಮಾಡುತ್ತಾರೆ, ಮನ್ವತೇ=ಮನನ ಮಾಡುತ್ತಾರೆ, ಸದಾ=ಯಾವಾಗಲೂ, ಧ್ಯಾಯಂತಿ ಚ=ಧ್ಯಾನವನ್ನೂ ಮಾಡುತ್ತಾರೆ. (ಇಲ್ಲ ದಿದ್ದರೆ ಮಹಾಜ್ಞಾನಿಗಳಾದ ದೇವಾದಿಗಳಿಗೆ ಒಂದೊಂದು ಶಾಖಾಶ್ರವಣಾದಿಗಳು ಅತ್ಯಲ್ಪವಾದ ಕಾಲದಿಂದಲೇ ಮಾಡಲು ಸಾಧ್ಯವಾಗುವುದರಿಂದ ಈಗಲೂ ಕೂಡ ಶ್ರವಣಾದಿಗಳನ್ನು ಮಾಡು ತ್ತಾರೆನ್ನುವುದು ಕೂಡದೆ ಹೋಗಬೇಕಾಗುವುವು.) (ಬ್ರಹ್ಮಸಾಕ್ಷಾತ್ಕಾರವುಳ್ಳ ದೇವಾದಿಗಳೂ ಕೂಡ ಶ್ರವಣಾದಿಗಳನ್ನು ಈಗಲೇ ಮಾಡುತ್ತಿರುತ್ತಾರೆಂದಾದರೆ ಆ ಶ್ರವಣಾದಿಗಳಿಗೆ ನಿರವಧಿಕ ತ್ವವೇ ಪ್ರಸಕ್ತವಾಗಬೇಕಾಗುವುದು ಎಂದರೆ—) ತಥಾಪಿ=(ಯದ್ಯಪಿ ಸೂತ್ರಕಾರರು ದೇವಾದಿ ಗಳ ಆಚಾರವನ್ನು ಪ್ರಮಾಣೀಕರಿಸಿರುತ್ತಾರೆ.) ಆದಾಗ್ಯೂ, ಆ ವಸ್ತುನಿರ್ಣಯಾತ್ ಏವ=ಪರ ಬ್ರಹ್ಮಾದಿ ವಸ್ತುವಿಷಯಕ ಯಥಾರ್ಥವಾದ ಪರೋಕ್ಷ ನಿಶ್ಚಯವಾಗುವ ಪರ್ಯಂತವೇ, ಹಿ= ಶ್ರವಣಾದಿಗಳಿಗೆ ವಸ್ತುನಿರ್ಣಯಹೇತುತ್ವವಿದ್ದ ಪ್ರಯುಕ್ತ, ಸರ್ವಥೈವ=ಸರ್ವಪ್ರಕಾರದಿಂದಲೂ, ಶ್ರವಣಂ=ಶ್ರವಣವು, ಮನನಂಚ=ಮನನವೂ ಕೂಡ, ಕರ್ತವ್ಯಮೇವ=ಮಾಡತಕ್ಕದ್ದೇ, (ಬ್ರಹ್ಮಾಖ್ಯವಸ್ತುನಿರ್ಣಯ ಪರ್ಯಂತವಾಗಿ ಶ್ರವಣ ಮನನಗಳನ್ನು ಮಾಡಬೇಕೆಂದು ಹೇಳಿದ್ದು ಅಯುಕ್ತವು. ಅರ್ಥವು ನಿರ್ಣೀತವಾದುದಾಗ್ಯೂ ಪುನಃ ಕಾರಣಾಂತರದಿಂದ ಸಂಶಯಾದಿಗಳು ಹುಟ್ಟತಕ್ಕದು ಕಂಡುಬರುವುದರಿಂದ ವಸ್ತುನಿರ್ಣಯವಾಗುವುದೆಂದು ನಿಶ್ಚಯಿಸಲಿಕ್ಕೆ ಅಶಕ್ಯವು. ಎಂದರೆ—) ಮತಿಶ್ರುತಿಧ್ಯಾನಕಾಲವಿಶೇಷಂ=ಮನನ-ಶ್ರವಣ ಧ್ಯಾನವೂ ಕಾಲವೂ ಇವುಗಳ ವಿಶೇಷವನ್ನು, ಉತ್ತಮಃ ಗುರುಃ=ಶಿಷ್ಯಯೋಗ್ಯತೆಯನ್ನು ತಿಳಿದಿರುವ ಗುರುವು, ವೇತ್ತಿ=ತಿಳಿಯುತ್ತಾನೆ. ತಸ್ಯ=ಆ ಗುರುವಿನ, ಉಕ್ತಿಮಾರ್ಗೇಣ=ವಚನಮಾರ್ಗದಿಂದ, ಕುರ್ವತಃ=ಶ್ರವಣಾದಿಗಳನ್ನು ಮಾಡುವವನಿಗೆ, ದರ್ಶನಂ=ಬ್ರಹ್ಮಸಾಕ್ಷಾತ್ಕಾರವು, ಸ್ಯಾತ್= ಆಗುವುದು.

**ತಾ ॥** (1) ಬ್ರಹ್ಮದರ್ಶನಕ್ಕಾಗಿ ಶ್ರವಣಾದಿಗಳು ಆವಶ್ಯಕಗಳು. ಯಾವುದಾದ ರೊಂದು ಪ್ರಕಾರದಿಂದ ತನ್ನ ಇಚ್ಛಾನುಸಾರವಾಗಿ ಅನುಷ್ಠಿತಗಳಾದ ಶ್ರವಣಾದಿಗಳು ಬ್ರಹ್ಮ ದರ್ಶನಾದಿಗಳಿಗೆ ಸಾಧನವಾಗಲಾರವು. ಮತ್ತೆ ಶಿಷ್ಯನ ಯೋಗ್ಯತೆಯನ್ನು ತಿಳಿದ ಗುರುಗಳ ಉಪದೇಶಪೂರ್ವಕವಾದ ಶ್ರವಣಾದಿಗಳೇ ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಾಗುವುವು. ಅಂತಹ ಉತ್ತಮ ಗುರುಗಳೇ ಶ್ರವಣಾದಿ ಕಾಲವಿಶೇಷವನ್ನು ಉಪದೇಶಿಸುವರು. ಆ ಮೇಲೆ ಸಾವಿರಾರು ಕಾರಣಗಳು ಬಂದರೂ ಸಂಶಯಾದಿಗಳು ಹುಟ್ಟಲಾರವು. ॥ ೭೪ ॥ ೭೫ ॥

ದೇವಾದಿಗಳು ಶ್ರವಣಾದಿಗಳನ್ನು ಈಗಲೂ ಕೂಡ ಮಾಡುತ್ತಿರುತ್ತಾರೆ, ಎನ್ನುವುದು ಯುಕ್ತವಲ್ಲ. ಏಕೆಂದರೆ— ಶ್ರವಣಾದಿಗಳು ತತ್ವಜ್ಞಾನಕ್ಕೆ ಸಾಧನವೆಂದು ಹೇಳಲ್ಪಟ್ಟವೆ. **‘ದೇವನ್ಯೇವಪದಂ ಪ್ರಾಪ್ತಾ ಬ್ರಹ್ಮದರ್ಶನವರ್ಜಿತಾಃ’** ಇತ್ಯಾದಿ ಪ್ರಮಾಣಗಳಿಂದ

ದೇವಾದಿಗಳಿಗೆ ತತ್ವಜ್ಞಾನವು ಸ್ವಾಭಾವಿಕವು. ಸಾಧ್ಯವನ್ನು ಹೊಂದಿದವನು ಸಾಧನವನ್ನು ಮಾಡಲಾರನು, ಎಂದರೆ—

**ಮೂ ॥ ಶ್ರವಣಂ ದೃಷ್ಟತತ್ತ್ವಸ್ಯ ಮನನಂ ಧ್ಯಾನಮೇವ ಚ ॥**
**ವಿಶೇಷಾನಂದ ಸಂಪ್ರಾಪ್ತ್ಯೈ ಅನ್ಯಸ್ಯೈತಾನಿ ದೃಷ್ಟಯೇ ॥ ೭೬ ॥**

ಅ ॥ ದೃಷ್ಟತತ್ವಸ್ಯ ಚ=ತತ್ವವನ್ನು ತಿಳಿದಿರುವ ಪುರುಷನಿಗೂ, ಶ್ರವಣಂ=ಶ್ರವಣವು, ಮನನಂ=ಮನನವು, ಧ್ಯಾನಂ ಚ=ಧ್ಯಾನವೂ ಕೂಡ, ವಿಶೇಷಾನಂದಸಂಪ್ರಾಪ್ತ್ಯೈ=ವಿಶೇಷವಾದ ಆನಂದದ ಪ್ರಾಪ್ತಿಗೋಸ್ಕರ, (ಯುಜ್ಯತೇ) ಏವ=ಉಪಪನ್ನವೇ ಆಗುತ್ತದೆ. (ಹೀಗಾದರೆ ಶ್ರವಣಾದಿಗಳಿಗೆ ದರ್ಶನ ಸಾಧನತ್ವೋಕ್ತಿಯು ಅಯುಕ್ತವಾಗುವುದು ಎಂದರೆ—) ಅನ್ಯಸ್ಯ=ತತ್ವವನ್ನು ಕಾಣದಿರತಕ್ಕ ಪುರುಷನಿಗೆ, ಏತಾನಿ=ಈ ಶ್ರವಣಾದಿಗಳು, ದೃಷ್ಟಯೇ=ಬ್ರಹ್ಮ ಸಾಕ್ಷಾತ್ಕಾರವಾಗಿ, (ಆಗುತ್ತವೆ).

ತಾ ॥ (1) ಜ್ಞಾನಕರ್ಮಗಳು ಸಮಪ್ರಧಾನಗಳಾಗಿ ಕೂಡಿಕೊಂಡೇ ಮೋಕ್ಷಕ್ಕೆ ಕಾರಣಗಳು, ಎಂದು ಹೇಳುವ ಸಮುಚ್ಚಯ ವಾದಿಗಳು ಜ್ಞಾನದಶೆಯಿಂದ ಮೊದಲು ಮಾಡಿದ ಕರ್ಮಗಳು ಜ್ಞಾನೋಪಯುಕ್ತಗಳು; ಮೇಲಿನ ಕರ್ಮಗಳು ಮೋಕ್ಷೋಪಯುಕ್ತಗಳು; ಮತ್ತು ಹೇಗೆ ಸಕಾಮಕರ್ಮಗಳು ಸಂಸಾರಕ್ಕೆ ಕಾರಣಗಳೋ, ನಿಷ್ಕಾಮಕರ್ಮಗಳು ಜ್ಞಾನಕ್ಕೆ ಕಾರಣಗಳೋ, ಹಾಗೆಯೇ ಶ್ರವಣಾದಿಗಳೂ ತತ್ವವನ್ನು ತಿಳಿಯದೆ ಇದ್ದವನಿಗೆ ಜ್ಞಾನಕ್ಕೆ ಕಾರಣಗಳು; ತತ್ವವನ್ನು ತಿಳಿದವನಿಗೆ ವಿಶೇಷಾನಂದಕ್ಕೆ ಉಪಯುಕ್ತಗಳು. ಆದಕಾರಣ ತತ್ವಸಾಕ್ಷಾತ್ಕಾರಿಗಳಾದ ದೇವಾದಿಗಳೂ ಕೂಡ ಮುಕ್ತಿಯಲ್ಲಿ ಆನಂದವಿಶೇಷಕ್ಕಾಗಿ ಶ್ರವಣಾದಿಗಳನ್ನು ಮಾಡಲೇಬೇಕು ॥ ೭೬ ॥

ಶಿಷ್ಯಯೋಗ್ಯತೆಯನ್ನು ತಿಳಿದಿರುವ ಗುರುಗಳ ಉಪದೇಶಾನುಸಾರವಾಗಿ ಶ್ರವಣಾದಿಗಳನ್ನು ಮಾಡಬೇಕೆಂದು ಹೇಳಿದ್ದು ಅಯುಕ್ತವು. ಅಂತಹ ಗುರುಗಳೇ ದುರ್ಲಭರಾದುದರಿಂದ ಶ್ರವಣಾದಿಗಳೇ ಇಲ್ಲವೆಂದಾಗಬೇಕಾಗುವವು. ಅಥವಾ ಅಂತಹ ಗುರುಗಳು ಶ್ರವಣಾದಿಗಳನ್ನು ಮಾಡಿದ ಶ್ರೀ ಹರಿಯ ಜ್ಞಾನ-ಧ್ಯಾನಾದಿ ಶಕ್ತಿಸಂಪನ್ನನಾದ ಶಿಷ್ಯನಿಂದಲೇ ಹೊಂದಲರ್ಹರು. ಅಂತೂ ಅನ್ಯೋನ್ಯಾಶ್ರಯವು ಎಂದರೆ—

**ಮೂ ॥ ಯದಿ ತಾದೃಗ್ಗುರುರ್ನಾಸ್ತಿ ನಿರ್ಣೀತಶ್ರವಣಾದಿಕಂ ।**
**ತತ್ಸಿದ್ಧಾಂತಾನುಸಾರೇಣ ನಿರ್ಣಯಜ್ಞಾತ್ಸಮಾಚರೇತ್ ॥ ೭೭ ॥**

ಅ ॥ ಯದಿ=ಯಾವ ಪಕ್ಷದಲ್ಲಿ, ತಾದೃಗ್ಗುರುಃ = ಅಂತಹ ಶಿಷ್ಯಯೋಗ್ಯತೆಯನ್ನು ತಿಳಿದ ಗುರುಗಳು, ನಾಸ್ತಿ=ಇಲ್ಲವೋ, ಸಿಗಲಿಲ್ಲವೋ, (ಹಾಗಾದರೆ) ನಿರ್ಣೀತಶ್ರವಣಾದಿಕಂ=(ಶಾಸ್ತ್ರವು ೧ ನಿರ್ಣೀತ, ೨ ನಿರ್ಣೇತವ್ಯ ಎಂದು ಎರಡು ಪ್ರಕಾರವು. ಅದರಲ್ಲಿ ೧ ಬ್ರಹ್ಮ ಸೂತ್ರಾದಿಗಳು ನಿರ್ಣೀತವು. ೨ ವೇದಾದಿಗಳು ನಿರ್ಣೇತವ್ಯವು. ಅದರಲ್ಲಿ) ನಿರ್ಣೀತಗಳಾದ ಬ್ರಹ್ಮಸೂತ್ರಾದಿಗಳ ಶ್ರವಣ ಮೊದಲಾದುದನ್ನು, ತತ್ಸಿದ್ಧಾಂತಾನುಸಾರೇಣ = ಸರ್ವಜ್ಞರ ಸಿದ್ಧಾಂತವನ್ನು ಅನುಸರಿಸಿ, ನಿರ್ಣಯಜ್ಞಾತ್=ನಿರ್ಣಯವನ್ನು ತಿಳಿದಿರುವ ಗುರುಗಳಿಂದ, ಸಮಾಚರೇತ್=ಮಾಡಬೇಕು.

ತಾ || (1) ಮುಖ್ಯ ಗುರುಗಳು ಮೊದಲು ಸಿಗದಿದ್ದರೂ ಶ್ರವಣಾದಿಗಳು ಇಲ್ಲವೆಂದಾಗುವುದಿಲ್ಲ. ಅಮುಖ್ಯ ಗುರುಗಳಿಂದಲೂ ಶ್ರವಣಾದಿಗಳನ್ನು ಮಾಡಬಹುದು. ಅದರಲ್ಲಿ ಮುಖ್ಯ ಗುರುಗಳಂತೆ ಅಮುಖ್ಯ ಗುರುಗಳಿಗೆ ಅತಿಗಹನಗಳಾದ ವೇದಾದಿಗಳನ್ನು ವ್ಯಾಖ್ಯಾನಮಾಡಲಿಕ್ಕೆ ಸಾಮರ್ಥ್ಯವಿಲ್ಲದಿದ್ದರೂ ನಿರ್ಣೀತವಾದ ಬ್ರಹ್ಮಸೂತ್ರಾದಿಗಳ ವ್ಯಾಖ್ಯಾನವು ಯುಕ್ತವೇ ಆಗುವುದು. ನಿರ್ಣೀತಶಾಸ್ತ್ರದ ಅಭಿಪ್ರಾಯವು ವ್ಯಾಖ್ಯಾನ ವಿಪ್ರತಿಪತ್ತಿಯಿಂದ ತಿಳಿಯಲರ್ಹವಲ್ಲವೆಂದು ಹೇಳಕೂಡದು. ಸರ್ವಜ್ಞರು ಮಾಡಿದ ಗ್ರಂಥಾನುಸಾರವಾಗಿ ಅಮುಖ್ಯ ಗುರುಗಳಿಗೂ ನಿರ್ಣೀತ ಶಾಸ್ತ್ರಾಭಿಪ್ರಾಯಜ್ಞಾನವು ಬರಬಹುದು. ಏವಂಚ ಅಮುಖ್ಯ ಶ್ರವಣಾದಿಗಳನ್ನು ಮಾಡಿದ ಮೇಲೆ ಮುಖ್ಯ ಗುರುಗಳೂ ಕೂಡ ಸಿಗುವರು || ೭೭ ||

ಸರ್ವಜ್ಞರಾದ ಗುರುಗಳೇ ಶ್ರವಣಾದಿಗೆ ಮುಖ್ಯ ಕಾರಣರಾದರೆ, ಅಂತಹ ಗುರುಗಳು ಸಿಗದಿದ್ದರೆ ಶ್ರವಣಾದಿಗಳ ಅಭಾವವನ್ನೇ ಏಕೆ ಅಂಗೀಕರಿಸುವುದಿಲ್ಲ? ಅಮುಖ್ಯ ಗುರುಗಳಿಂದ ಶ್ರವಣಾದಿಗಳನ್ನು ಮಾಡಿದರಿಂದ ಏನು ಪ್ರಯೋಜನವು? ಸರ್ವಜ್ಞ ಗುರುಗಳ ಪ್ರಾಪ್ತಿಯಾದರೂ ಪುಣ್ಯೋಪಚಯದಿಂದಲೂ ಆಗುವುದು. ಎಂದರೆ—

**ಮೂ || ಶ್ರವಣಾದಿ ವಿನಾ ನೈವ ಕ್ಷಣಂ ತಿಷ್ಠೇದಪಿ ಕ್ವಚಿತ್ || ೭೮ ||**
**ಅತ್ಯಶಕ್ಯೇ ತು ನಿದ್ರಾದೌ ಪುನರೇವ ಸಮಾಚರೇ(ರಭೇ)ತ್ ।**
**ಅಭಾವೇ ನಿರ್ಣಯಜ್ಞಸ್ಯ ತಚ್ಛಾಸ್ತ್ರಾಣ್ಯೇವ ಸರ್ವದಾ ।**
**ಶೃಣುಯಾದ್ಯದಿ ಸಜ್ಜ್ಞಾನಪ್ರಾಚುರ್ಯಮುಪಲಭ್ಯತೇ || ೭೯ ||**

ಅ || ಶ್ರವಣಾದಿ = ಶ್ರವಣ ಮೊದಲಾದುದನ್ನು, ವಿನಾ = ಹೊರತು, ಕ್ಷಣಮಪಿ= ಕ್ಷಣಕಾಲದಲ್ಲಿಯೂ, ಕ್ವಚಿತ್ = ಎಲ್ಲಿಯೂ, ನೈವ ತಿಷ್ಠೇತ್ = ಇರಬಾರದು. (ಅಂದರೆ ಸರ್ವದಾ ಶ್ರವಣಾದಿಗಳನ್ನು ಮಾಡುತ್ತಲೇ ಇರಬೇಕು. ಕ್ಷಣಕಾಲದಲ್ಲಿಯೂ ಬಿಡಬಾರದು. ಎಂದು ಹೇಳತಕ್ಕ 'ಸ್ವಾಧ್ಯಾಯಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ' ಇದು ಮೊದಲಾದ ಶ್ರುತಿ-ಸ್ಮೃತಿಗಳು ಇರುತ್ತವೆ. ಆ ಶ್ರವಣಾದಿಗಳಿಗೆ ಸರ್ವಜ್ಞರಾದ ಗುರುಗಳು ಅಂಗಭೂತರು. ಸರ್ವಜ್ಞರಾದ ಗುರುಗಳು ಸಿಗದಿದ್ದರೆ 'ಗುಣೇ ತ್ವನ್ಯಾಯಕಲ್ಪನಾ' ಎನ್ನುವ ನ್ಯಾಯದಿಂದ ಹೇಗಾದರೂ ಶ್ರವಣಾದಿಗಳನ್ನು ಮಾಡಲೇ ಬೇಕು.) (ಹಾಗಾದರೆ ಅಪರಿಹಾರ್ಯವಾದ ನಿದ್ರಾ ಮೊದಲಾದ ಉಪದ್ರವವು ಬರುವುದರಿಂದ ಸರ್ವದಾ ಶ್ರವಣಾದಿಗಳನ್ನು ಮಾಡಲಿಕ್ಕೆ ಅಶಕ್ಯಗಳಾಗಿರುವುದರಿಂದ ಸರ್ವದಾ ಶ್ರವಣಾದಿಗಳನ್ನು ಮಾಡಬೇಕೆಂದು ಹೇಳುವ ಈ ಶ್ರುತಿಗಳೇ ಅನುಪಪನ್ನಗಳಾದ ಅರ್ಥವುಳ್ಳವುಗಳು ಎಂದರೆ—) ಅತ್ಯಶಕ್ಯೇ= ಪರಿಹರಿಸಲಿಕ್ಕೆ ಅಶಕ್ಯವಾದ, ನಿದ್ರಾದೌ ತು=ನಿದ್ರೆ ಮೊದಲಾದುದು ಪ್ರಾಪ್ತವಾದರೆ, ಪುನರೇವ= ನಿದ್ರೆಯು ಹೋದೊಡನೆಯೇ, ಸಮಾಚರೇ (ರಭೇ) ತ್ = ಶ್ರವಣಾದಿಗಳನ್ನು ಮಾಡಬೇಕು. (ಅಂತೂ ಶ್ರವಣಾದಿಗಳನ್ನು ಬಿಡಬಾರದು.) (ನಿರ್ಣಯವನ್ನು ತಿಳಿದಿರುವ ಗುರುಗಳು ಇಲ್ಲದಿದ್ದರೆ ಶ್ರವಣಾದಿಗಳೇ ಬೇಡವೋ ಏನು ಎಂದರೆ—) ನಿರ್ಣಯಜ್ಞಸ್ಯ=ನಿರ್ಣಯವನ್ನು ತಿಳಿದಿರುವ ಗುರುಗಳು, ಅಭಾವೇಽಪಿ=ಸಿಗದಿದ್ದರೂ, ಸರ್ವದಾ=ಯಾವಾಗಲೂ, ಸಚ್ಛಾಸ್ತ್ರಾಣ್ಯೇವ=ನಿರ್ದುಷ್ಟಗಳಾದ ಶಾಸ್ತ್ರಗಳನ್ನೇವೇ, (ಯಾರಿಂದಲಾದರೂ) ಶೃಣುಯಾತ್=ಶ್ರವಣ ಮಾಡಬೇಕು, ಮನನವನ್ನೂ ಮಾಡಬೇಕು. (ಯಾರಿಂದಲಾದರೂ ಕೇಳಬಹುದು ಎನ್ನುವುದರಿಂದ ಅತಿಪ್ರಸಕ್ತಿ ಬಂದರೆ—) ಯದಿ = ಯಾವ ಪಕ್ಷದಲ್ಲಿ, ಸಜ್ಜ್ಞಾನಪ್ರಾಚುರ್ಯಂ =

ಆ ಪುರುಷನಲ್ಲಿ ತನ್ನಕ್ಕಿಂತ ಚೆನ್ನಾಗಿ ಜ್ಞಾನಾದಿ ಪ್ರಾಚುರ್ಯವು, ಉಪಲಭ್ಯತೇ = ಹೊಂದಲ್ಪಡುತ್ತದೋ, (ಆತನಿಂದಲೇ) ಶೃಣುಯಾತ್ = ಶ್ರವಣಮಾಡಬೇಕು. (ಅಧಮನಿಂದ ಕೇಳಬಾರದು) ॥ ೭೮ ॥ ೭೯ ॥

ಸ್ವತಃ ಅಧಿಕನಾದ ಪುರುಷನು, ಸಂಪೂರ್ಣವಾಗಿ ವ್ಯಾಖ್ಯಾನಮಾಡತಕ್ಕವನು ಸಿಗದಿದ್ದರೆ ಶ್ರವಣಾದಿಗಳನ್ನೇ ಬಿಟ್ಟು ಬಿಡಬೇಕೋ ಏನು? ಎಂದರೆ—

**ಮೂ ॥ ಮಹದ್ಭ್ಯೋ ವಿಷ್ಣುಭಕ್ತೇಭ್ಯೋ ಯಥಾಶಕ್ತಿ ಚ ಸಂಶಯಾನ್॥೮೦॥**
**ಛಿಂದ್ಯಾತ್ಸ್ವತೋಽಧಿಕಾಭಾವೇ ಸ್ವಯಮೇವ ಸಮಭ್ಯಸೇತ್ ।**
**ಬ್ರೂಯಾದಪಿ ಚ ಶಿಷ್ಯೇಭ್ಯಃ ಸತ್ಸಿದ್ಧಾಂತಮಹಾಪಯನ್ ॥ ೮೧ ॥**

ಅ ॥ ಮಹದ್ಭ್ಯಃ=ತನ್ನಿಂದ ಶ್ರೇಷ್ಠರಾದ, (ಮಹತ್ವವು ಕೇವಲ ಸಜ್ಞಾನಮಾತ್ರದಿಂದ ಅಲ್ಲ, ಮತ್ತೆ ವಿಷ್ಣುಭಕ್ತ್ಯಾದಿಗುಣಗಳಿಂದಲೂ ಶ್ರೇಷ್ಠರಾದ) ವಿಷ್ಣುಭಕ್ತೇಭ್ಯಃ = ವಿಷ್ಣುಭಕ್ತರ ದೆಶೆಯಿಂದ, ಸಂಶಯಾನ್=ತನ್ನ ಸಂದೇಹಗಳನ್ನು, ಛಿಂದ್ಯಾತ್=ನಾಶಮಾಡಿಕೊಳ್ಳತಕ್ಕದು. (ಅಂದರೆ ವಿಷ್ಣುಭಕ್ತ್ಯಾದಿ ಗುಣಗಳಿಂದ ಕೂಡಿದವನೇ ಆದರವನ್ನು ಹುಟ್ಟಿಸುತ್ತಾ ವ್ಯಾಖ್ಯಾನ ಮಾಡುತ್ತಾನೆ. ಆದರಪೂರ್ವಕವಾದ ಶ್ರವಣಾದಿಗಳೇ ಫಲಕ್ಕೆ ಉಪಯುಕ್ತವಾಗುತ್ತವೆ. ಒಬ್ಬನಿಂದ ಸಂಪೂರ್ಣ ಶ್ರವಣಾದಿಗಳು ಆಗದಿದ್ದರೂ ಬಹುಮಂದಿ ತನ್ನಿಂದ ದೊಡ್ಡವರಾದ ಮಹಾನುಭಾವರಿಂದ ಶಕ್ತ್ಯನುಸಾರವಾಗಿ ಕೂಡಿದಷ್ಟು ಒಂದೊಂದು ಭಾಗ ಶ್ರವಣಾದಿಗಳನ್ನೂ ಕೂಡ ಮಾಡಲೇಬೇಕು. ಅದರಿಂದಲೂ ಶ್ರವಣಾದಿಗಳ ಫಲಭೂತವಾದ ಸಂಶಯಾದಿಗಳ ಪರಿಹಾರವಾಗುತ್ತದೆ ) ( ಸ್ವತಃ ಅಧಿಕನಿಲ್ಲದಿದ್ದರೆ ಶ್ರವಣಾದಿಗಳು ಹೇಗೆ ಆಗುವುದು ಎಂದರೆ—) ಸ್ವತಃ=ತನ್ನಕ್ಕಿಂತ, ಅಧಿಕಾಭಾವೇ = ಅಧಿಕನು ಸಿಗದಿದ್ದರೆ, ಸ್ವಯಮೇವ=ತಾನಾಗಿಯೇ, ಸಮಭ್ಯಸೇತ್=ಚೆನ್ನಾಗಿ ಅಭ್ಯಾಸಮಾಡಬೇಕು. ಸತ್ಸಿದ್ಧಾಂತಂ=ನಿರ್ದುಷ್ಟವಾದ ಪ್ರಾಮಾಣಿಕವಾಗಿ ಅಭಿಮತವಾದ ಅರ್ಥವನ್ನು, (ಸತ್ಸಿದ್ಧಾಂತಹಾನಿಯೇ ಮಹಾಪ್ರತ್ಯವಾಯಕ್ಕೆ ಕಾರಣವಾಗಿರುವುದರಿಂದ) ಅಹಾಪಯನ್=ಬಿಡದೆ ಇದ್ದವನಾಗಿ, ಅಥವಾ ಶಿಷ್ಯರಿಂದ ಬಿಡಿಸದೆ ಇದ್ದವನಾಗಿ, ಶಿಷ್ಯೇಭ್ಯಃ=ಶಿಷ್ಯರಿಗೋಸ್ಕರ, ಬ್ರೂಯಾತ್=ಹೇಳತಕ್ಕದು ॥ ೮೦ ॥ ೮೧ ॥

ಯಾವುದನ್ನು ಬಿಡಬಾರದೋ ಅಂತಹ ಸತ್ಸಿದ್ಧಾಂತವು ಯಾವುದು? ಸತ್ಸಿದ್ಧಾಂತವು ೧ ಪರ, ೨ ಅಪರ ಎನ್ನುವ ಭೇದದಿಂದ ಎರಡು ವಿಧವು. ಆ ಎರಡೂ ಪ್ರತ್ಯೇಕವಾಗಿ ೧ ವಾಚನಿಕ, ೨ ಆನುಷಂಗಿಕ ಎಂದು ಎರಡು ವಿಧವು. ಅದರಲ್ಲಿ ವಾಚನಿಕವಾದ ಪರವಾದ ಸತ್ಸಿದ್ಧಾಂತವನ್ನು ಹೇಳುತ್ತಾರೆ—

**ಮೂ ॥ ಅಶೇಷಗುಣಪೂರ್ಣತ್ವಂ ಸರ್ವದೋಷಸಮುಜ್ಝಿತಿಃ ।**
**ವಿಷ್ಣೋರನ್ಯಚ್ಚ ತತ್ತಂತ್ರಮಿತಿ ಸಮ್ಯಗ್ವಿನಿರ್ಣಯಃ ॥ ೮೨ ॥**

ಅ ॥ ವಿಷ್ಣೋಃ=ಶ್ರೀ ಹರಿಗೆ, ಅಶೇಷಗುಣಪೂರ್ಣತ್ವಂ=ಸರ್ವಗುಣಪರಿಪೂರ್ಣತ್ವವು, ಸರ್ವದೋಷಸಮುಜ್ಝಿತಿಃ = ಸರ್ವದೋಷಗಳ ರಾಹಿತ್ಯವು, ಅನ್ಯತ್ = ಇತರವಾದುದು, ತತ್ತಂತ್ರಂ=ಆ ವಿಷ್ಣುವಿನ ಅಧೀನವಾದುದು, (ಅಂದರೆ ಸಕಲಜಗಜ್ಜನ್ಮಾದಿಕಾರಣನು, ಶ್ರೀ ಹರಿಯು.) ಇತಿ=ಹೀಗೆ, ಸಮ್ಯಕ್ ವಿನಿರ್ಣಯಃ=ಚೆನ್ನಾಗಿ ನಿರ್ಣಾಯಕವಾದ ವಾಚನಿಕವಾದ ಪರಸತ್ಸಿದ್ಧಾಂತವು ॥ ೮೨ ॥

ಆನುಷಂಗಿಕವಾದ ಪರಸತ್ಸಿದ್ಧಾಂತವನ್ನು ಹೇಳುತ್ತಾರೆ—

**ಮೂ || ಸ್ವತಂತ್ರತ್ವಂ ಸದಾ ತಸ್ಯ ತಸ್ಯ ಭೇದಶ್ಚ ಸರ್ವತಃ |**
**ಅದೋಷತ್ವಸ್ಯ ಸಿದ್ಧ್ಯರ್ಥಂ ಯದಭೇದೇ ತದನ್ವಯಃ || ೮೩ ||**

ಅ || ತಸ್ಯ=ಆ ವಿಷ್ಣುವಿಗೆ, ಸದಾ=ಯಾವಾಗಲೂ, ಸ್ವತಂತ್ರತ್ವಂ=ಸ್ವಾಧೀನಸತ್ತಾದಿಮತ್ವವು, ತಸ್ಯ=ಆ ವಿಷ್ಣುವಿಗೆ, ಸರ್ವತೋ ಭೇದಶ್ಚ=ಪ್ರಕೃತಿ-ಜೀವ-ಜಡರದೆಶೆಯಿಂದ ಅತ್ಯಂತ ಭೇದವು, ಯತ್=ಯಾವ ಕಾರಣದೆಶೆಯಿಂದ, ಅಭೇದೇ = ಜಗತ್ತಿನಿಂದ ವಿಷ್ಣುವಿಗೆ ಅಭೇದವಿದ್ದರೆ, ಅಸ್ವಾತಂತ್ರ್ಯವೂ ಇದ್ದರೆ, ಅನ್ವಯಃ=ದೋಷಸಂಬಂಧವೂ ಗುಣಪೂರ್ತ್ಯಾದ್ಯಭಾವವೂ ಕೂಡ ಪ್ರಸಕ್ತವಾಗುತ್ತದೋ ಆದಕಾರಣ, ಅದೋಷತ್ವಸ್ಯ ಸಿದ್ಧ್ಯರ್ಥಂ=ದೋಷರಾಹಿತ್ಯಸಿದ್ಧಿಗಾಗಿ, ಮತ್ತು ಅಶೇಷಗುಣಪರಿಪೂರ್ಣತ್ವವೂ, ಸಕಲಜಗಜ್ಜನ್ಮಾದಿಕಾರಣತ್ವವೂ ಸಿದ್ಧಿಸುವುದಕ್ಕಾಗಿ, ತತ್=ಪ್ರಕೃತಿ-ಜೀವ-ಜಡಾದಿಗಳಿಂದ ಭೇದವನ್ನೇ ಅಂಗೀಕರಿಸಲೇಬೇಕು || ೮೩ ||

'ಅನ್ಯತ್ತತ್ತಂತ್ರಂ' ಎನ್ನುವಲ್ಲಿ ಅನ್ಯಶಬ್ದವು ಅನುಕ್ತವಿಷಯಕವು ಎನ್ನುವ ಪ್ರತೀತಿಯು ಬರುವುದು. ಆದಕಾರಣ ಅದರ ಅರ್ಥವನ್ನು ಹೇಳುತ್ತಾರೆ—

**ಮೂ || ತತ್ತಂತ್ರತ್ವಂ ಚ ಮುಕ್ತಾನಾಮಪಿ ತದ್ಗುಣಪೂರ್ತಯೇ |**
**ಮುಕ್ತಾನಾಮಪಿ ಭೇದಶ್ಚ ನ ಹಿ ಭಿನ್ನಮಭಿನ್ನತಾಂ || ೮೪ ||**
**ಗಚ್ಛದ್ದೃಷ್ಟಂ ಕ್ವಚಿತ್ತಸ್ಯಾಪ್ಯಭಾವೋಽನುಭವೋಪಗಃ |**
**ಪೂರ್ವಾಭೇದೇ ದೋಷವತ್ವಮಾಶಸ್ಯೇತ್ಯತಿಭಿನ್ನತಾ || ೮೫ ||**
**ನಾರಾಯಣೇನ ಮುಕ್ತಾನಾಮಪಿ ಸಮ್ಯಗಿತಿ ಸ್ಥಿತಿಃ |**
**ಭೇದಾಭೇದೇಽಪ್ಯಭೇದೇನ ದೋಷಾಣಾಮಪಿ ಸಂಭವಃ || ೮೬ ||**

ಅ || ತದ್ಗುಣಪೂರ್ತಯೇ=ಶ್ರೀ ಹರಿಯ ಗುಣಗಳ ಪೂರ್ತಿಗೋಸ್ಕರವೇ, ಮುಕ್ತಾನಾಮಪಿ=ಮುಕ್ತರಿಗೂ ಕೂಡ, ತತ್ತಂತ್ರತ್ವಂ ಚ=ಶ್ರೀ ಹರಿಯ ಅಧೀನತ್ವವೂ ಕೂಡ, (ಹೇಳಲ್ಪಡುತ್ತದೆ.) (ಅಂದರೆ— ಮುಕ್ತರಿಗೆ ಶ್ರೀ ಹರಿಯ ಅಧೀನತ್ವವಿಲ್ಲವೆಂದಾದರೆ ಶ್ರೀ ಹರಿಗೆ ಪೂರ್ಣವಾದ ಐಶ್ವರ್ಯವು ಸಿದ್ಧವಾಗಲಾರದು. ಐಶ್ವರ್ಯವು ಸಿದ್ಧಿಸದೆ ಇದ್ದರೆ ಗುಣಪೂರ್ತಿಯು ಸಿದ್ಧಿಸಲಾರದು.) (ಹಾಗಾದರೆ ಮುಕ್ತರು ಶ್ರೀ ಹರಿಯಿಂದ ಭಿನ್ನರಾಗಿದ್ದರೆ ಇದು ಕೂಡಬಹುದಿತ್ತು. ಭೇದವೇ ಇಲ್ಲ ಶ್ರೀ ಹರಿಯ ಅಧೀನತ್ವವನ್ನು ಹೇಳಿದರಿಂದ ಏನು ಪ್ರಯೋಜನವು? ಎಂದರೆ—) ಮುಕ್ತಾನಾಮಪಿ=ಮುಕ್ತರಿಗೂ ಕೂಡ, ಭೇದಶ್ಚ = ಶ್ರೀ ಹರಿಯಿಂದ ಅತ್ಯಂತ ಭೇದವೂ ಕೂಡ, (ಅಂಗೀಕಾರಾರ್ಹವು.) (ಅದನ್ನೇ ಉಪಪಾದಿಸುತ್ತಾರೆ.) ಭಿನ್ನಂ=ಭೇದವುಳ್ಳದ್ದು, ಅಭಿನ್ನತಾಂ=ಅಭೇದವುಳ್ಳತನವನ್ನು, ಗಚ್ಛತ್=ಹೊಂದತಕ್ಕದಾಗಿ, ಕ್ವಚಿತ್=ಎಲ್ಲಿಯೂ, ನ ಹಿ ದೃಷ್ಟಂ=ಕಾಣಲ್ಪಡಲೇ ಇಲ್ಲ, (ಅಂದರೆ ಮೊದಲು ಭಿನ್ನರಾದವರಿಗೆ ಮುಕ್ತಿದೆಶೆಯಲ್ಲಿ ಶ್ರೀ ಹರಿಯಿಂದ ಅಭೇದವೆಂದು ಹೇಳಕೂಡದು. ಮೊದಲು ಭಿನ್ನವಾದುದಕ್ಕೆ ಮತ್ತೆ ಅಭೇದಪ್ರಾಪ್ತಿಯು ಎಲ್ಲಿಯೂ ತೋರಿಬರಲಿಲ್ಲ.) (ತೋರಿಬರಲಿಲ್ಲವೆಂದು ಮಾತ್ರವಲ್ಲ. ಮತ್ತೆ) ತಸ್ಯ=ಭಿನ್ನವಾದುದು ಅಭಿನ್ನತ್ವವನ್ನು ಹೊಂದುತ್ತದೆ ಎನ್ನುವ ಅರ್ಥದ, ಅಭಾವಃ=ಅಭಾವವು, ಅನುಭವೋಪಗೋಽಪಿ = ಅನುಭವಸಿದ್ಧವೂ ಕೂಡ ಆಗಿದೆ. (ಆದಕಾರಣ ಸಂಸಾರದಲ್ಲಿಯೂ ಅಭಿನ್ನರಾದವರಿಗೇನೇ ಮುಕ್ತಿಯಲ್ಲಿ ಅಭೇದವು ವ್ಯಕ್ತವಾಗುತ್ತದೆ ಎಂದೇ ಹೇಳಬೇಕು.

ಹಾಗೆಯೇ ಆಗಲಿ ಎಂದರೆ—) ಪೂರ್ವಾಭೇದೇ = ಮೊದಲು ಅಭೇದವಿದ್ದರೆ, ಈಶಸ್ಯ=ಶ್ರೀ ಹರಿಗೆ, ದೋಷವತ್ವಂ=ದೋಷವುಳ್ಳತನವು, ಸ್ಯಾತ್=ಬರುವುದು. (ಅಂದರೆ— ದುಃಖಾದಿರೂಪ ಸಂಸಾರವು, ಸತ್ಯವೆಂದು ಸಮರ್ಥಿಸಲ್ಪಟ್ಟದೆ. ಆದುದರಿಂದ ಸಂಸಾರದಲ್ಲಿಯೂ ಜೀವರಿಗೆ ಪರಮಾತ್ಮನಿಂದ ಅಭೇದವಿದ್ದರೆ ಶ್ರೀ ಹರಿಗೆ ದೋಷವು ಬರಬೇಕಾಗುವುದು.) ಇತಿ = ಆದ ಕಾರಣ, ಮುಕ್ತಾನಾಮಪಿ=ಮುಕ್ತರಿಗೂ ಕೂಡ, ನಾರಾಯಣೇನ=ಶ್ರೀ ಹರಿಯಿಂದ, ಅತಿ ಭಿನ್ನತಾ=ಅತ್ಯಂತ ಭೇದವು. ಇತಿ=ಹೀಗೆ, ಸಮ್ಯಕ್ ಸ್ಥಿತಿಃ=ಚೆನ್ನಾಗಿ ಸ್ಥಿತಿಯು. (ಅಂದರೆ-ಆನುಷಂಗಿಕವಾದ ಪರಸಿದ್ಧಾಂತವು.) (ಹಾಗಾದರೆ ಭೇದಾಭೇದವು ಕೂಡುವುದರಿಂದ ಅತ್ಯಂತ ಭೇದವನ್ನು ಏಕೆ ಅಂಗೀಕರಿಸಬೇಕೆಂದರೆ?) ಭೇದಾಭೇದೇನ=ಭೇದದಿಂದ ಸಹಿತವಾದ ಅಭೇದವು ಅಂಗೀಕೃತವಾದುದಾಗ್ಯೂ, (ಅಂದರೆ ಸಂಸಾರದಲ್ಲಿಯೂ ಭೇದಾಭೇದಗಳನ್ನು ಅಂಗೀಕರಿಸಲೇಬೇಕು. ಅಂತೂ) ಅಭೇದೇನ=ಅಭೇದದಿಂದ, ದೋಷಾಣಾಮಪಿ=ದೋಷಗಳಿಗೂ ಕೂಡ, ಸಂಭವಃ=ಪ್ರಾಪ್ತಿಯಾಗುತ್ತದೆ. (ಭೇದವನ್ನು ಅಂಗೀಕರಿಸಿದರಿಂದ ಆ ದೋಷಗಳೂ ಪರಿಹೃತಗಳಾಗುತ್ತವೆ. ಎಂದರೆ— ಅಜಾಗಲಸ್ತನದಂತೆ ಇರುವ ಅಂದರೆ ಅಭೇದಕ್ಕೆ ಅವಿರೋಧಿಯಾದ ಆ ಭೇದದಿಂದ ಪ್ರಯೋಜನವೇನು?) ॥ ೮೪ ॥ ೮೫ ॥ ೮೬ ॥

ಈಗ ಅಪರಸಿದ್ಧಾಂತವನ್ನು ಹೇಳುತ್ತಾರೆ—

**ಮೂ ॥ ನಿರ್ದೋಷತ್ವಂ ರಮಾಯಾಶ್ಚ ತದನಂತರತಾ ತಥಾ ।**
**ಬ್ರಹ್ಮಾ ಸರಸ್ವತೀ ವೀಂದ್ರ ಶೇಷ-ರುದ್ರಾಶ್ಚ ತತ್ಸ್ತ್ರಿಯಃ ॥ ೮೭ ॥**
**ಶಕ್ರಕಾಮೌ ತದನ್ಯೇ ಚ ಕ್ರಮಾನ್ಮುಕ್ತಾವಪೀತಿ ಚ ।**
**ಸತ್ಸಿದ್ಧಾಂತ ಇತಿ ಜ್ಞೇಯೋ ನಿರ್ಣೀತೋ ಹರಿಣಾ ಸ್ವಯಂ ॥ ೮೮ ॥**

ಅ ॥ ತಥಾ=ಪರಮೇಶ್ವರನಂತೆ, ರಮಾಯಾಶ್ಚ=ಲಕ್ಷ್ಮೀದೇವಿಗೂ ಕೂಡ, ನಿರ್ದೋಷತ್ವಂ=ದೋಷರಾಹಿತ್ಯವು, (ಇದೆ.) (ನಿರ್ದೋಷತ್ವಂ ಎನ್ನುವ ಉಕ್ತಿಯಿಂದ ಪಾರತಂತ್ರ್ಯವೂ ಇಲ್ಲವೆನ್ನುವ ಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಅರ್ಥವನ್ನು ಹೇಳುತ್ತಾರೆ.) ತದನಂತರತಾ= ಪರಮೇಶ್ವರನ ಆನಂತರ್ಯವು (ಪರಮೇಶ್ವರನ ಅಧೀನತ್ವವು.) (ಅಥವಾ ಇದರಿಂದ ಅಪರ ಸಿದ್ಧಾಂತಾಂತರವನ್ನು ಹೇಳುತ್ತಾರೆ.) ತದನಂತರತಾ=ಭಗವಂತನೊಬ್ಬನಿಂದಲೇ ಅವರತ್ವವು. (ಸಿದ್ಧಾಂತಾಂತರವನ್ನೂ ಹೇಳುತ್ತಾರೆ.) ಬ್ರಹ್ಮಾ = ಚತುರ್ಮುಖ ಬ್ರಹ್ಮನು, ಸರಸ್ವತೀ= ಸರಸ್ವತೀ ದೇವಿಯು, ವೀಂದ್ರಶೇಷರುದ್ರಾಶ್ಚ=ಗರುಡ-ಶೇಷ-ರುದ್ರರೂ ಕೂಡ, ತತ್ಸ್ತ್ರಿಯಃ= ಆ ಗರುಡಾದಿಗಳ ಹೆಂಡಂದಿಯರಾದ ಸೌಪರ್ಣ್ಯಾದಿಗಳೂ, ಶಕ್ರಕಾಮೌ = ದೇವೇಂದ್ರ-ಮನ್ಮಥರೂ,ತದನ್ಯೇಚ= ಅವರಿಂದ ಇತರರಾದ ದೇವತೆಗಳೂಕೂಡ, ಕ್ರಮಾತ್ = ಹೇಳಿದ ತಾರತಮ್ಯಕ್ರಮದಿಂದಲೇ, ಮುಕ್ತಾವಪಿ=ಮುಕ್ತಿಯಲ್ಲಿಯೂ, ಸಂಸಾರದಲ್ಲಿಯೂ, ಶ್ರೀ ಹರಿಯ ಅಧೀನರಾಗಿಯೇ (ಇರುತ್ತಾರೆ.) ಹೀಗೆಯೇ ಪ್ರಪಂಚಸತ್ಯತ್ವಾದಿಗಳೂ ಅಪರಸಿದ್ಧಾಂತದಲ್ಲಿಯೇ ಸೇರಿದ್ದು. (ಇಲ್ಲಿ ದ್ವಂದ್ವದಲ್ಲಿ ನಿರ್ದಿಷ್ಟರಾದವರಿಗೆ ಸಾಮ್ಯವು. ಇತರರಿಗೆ ತಾರತಮ್ಯವನ್ನೂ ತಿಳಿಯಬೇಕು.) (ಅಶೇಷಗುಣೇತ್ಯಾದಿಗಳು ಸತ್ಸಿದ್ಧಾಂತವು ಯಾವುದರಿಂದ ಎಂದರೆ—)ಹರಿಣಾ= ಸೂತ್ರಕಾರರಿಂದಲೇ, ಸ್ವಯಂ = ಸಾಕ್ಷಾತ್ತಾಗಿ, ನಿರ್ಣೀತಃ = ನಿರ್ಣಯಿಸಿಕೊಳ್ಳಲ್ಪಟ್ಟದೆ. (ಬಲಾತ್ಕಾರದಿಂದ ಸೂತ್ರಾರ್ಥವಾಗಿ ಕಲ್ಪಿಸಲ್ಪಟ್ಟದಲ್ಲ.) ॥ ೮೭ ॥ ೮೮ ॥

'ಸತ್ಸಿದ್ಧಾಂತಮಹಾಪಯನ್' ಎಂದು ಹೇಳಲ್ಪಟ್ಟದೆ. ಸತ್ಸಿದ್ಧಾಂತವನ್ನು ಬಿಟ್ಟರೆ ದೋಷವು ಯಾವುದೆಂದರೆ—

ಮೂ ॥ ಏತದ್ವಿರೋಧಿ ಯತ್ಸರ್ವಂ ತಮಸೇಽಂಧಾಯ ಕೇವಲಂ ।
ಅಂಧಂತಮೋ ವಿಶಂತೀತಿ ಪ್ರಾಹ ಶ್ರುತಿರತಿಸ್ಫುಟಂ ॥ ೮೯ ॥
ಇತ್ಯೇವ ಶ್ರುತಯೋಽಶೇಷಾಃ ಪಂಚರಾತ್ರಮಥಾಖಿಲಂ ।
ಮೂಲರಾಮಾಯಣಂ ಚೈವ ಭಾರತಂ ಸ್ಮೃತಯೋಽಖಿಲಾಃ ॥ ೯೦ ॥
ವೈಷ್ಣವಾನಿ ಪುರಾಣಾನಿ ಸಾಂಖ್ಯಯೋಗೌ ಪರಾವಪಿ ।
ಬ್ರಹ್ಮತರ್ಕಶ್ಚ ಮೀಮಾಂಸೇತ್ಯನಂತಃ ಶಬ್ದಸಾಗರಃ ॥ ೯೧ ॥
ಅನಂತಾ ಯುಕ್ತಯಶ್ಚೈವ ಪ್ರತ್ಯಕ್ಷಾಗಮಮೂಲಕಾಃ ।
ಪ್ರತ್ಯಕ್ಷಮೈಶ್ವರಂ ಚೈವ ರಮಾದೀನಾಮಶೇಷತಃ ॥ ೯೨ ॥
ಮುಕ್ತಾನಾಮಪ್ಯಮುಕ್ತಾನಾಮೇತಮೇವಾರ್ಥಮುತ್ತಮಂ ।
ಅನ್ಯಾವಕಾಶರಹಿತಂ ಪ್ರಕಾಶಯತಿ ಸಾದರಂ ॥ ೯೩ ॥

ಅ ॥ ಯತ್=ಯಾವುದು, (ಜ್ಞಾತಸತ್ತಾಗಿ) ಏತದ್ವಿರೋಧಿ=ಇದಕ್ಕೆ ವಿರುದ್ಧವಾದುದೋ, ತತ್ಸರ್ವಂ = ಅದೆಲ್ಲವೂ, ಅಂಧಾಯ ತಮಸೇ=ಅಂಧಂತಮಸ್ಸಿಗೋಸ್ಕರ, (ಆಗುತ್ತದೆ.) ಕೇವಲಂ=ಯಾವಾಗಲೂ ಸುಖಗೋಸ್ಕರವಾಗುವುದಿಲ್ಲ. (ಏಕೆಂದರೆ) ಅಂಧಂತಮಃ=ಅಂಧಂತಮಸ್ಸನ್ನು, ವಿಶಂತಿ=ಹೊಂದುತ್ತಾರೆ. ಇತಿ=ಹೀಗೆ, ಶ್ರುತಿಃ = 'ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ' ಎನ್ನುವ ಶ್ರುತಿಯು, ಅತಿಸ್ಫುಟಂ=ಅತ್ಯಂತ ಸ್ಪಷ್ಟವಾಗಿ, ಪ್ರಾಹ=ಹೇಳುತ್ತದೆ. (ತದ್ವಿರುದ್ಧ ಪ್ರತೀತಿಯು ಅಜ್ಞಾನಮೂಲಕವೇ ಆಗಿರುತ್ತದೆ.) (ಹಾಗಾದರೆ ವಸ್ತುತಃ ಪ್ರಾಮಾಣಿಕವಾದುದೇ ಸತ್ಸಿದ್ಧಾಂತವು. ಪ್ರಕೃತವಾದುದು ಪ್ರಾಮಾಣಿಕವು. ಹೇಗೆಂದರೆ—) ಇತ್ಯೇವ=ಈ ಪ್ರಕಾರವಾಗಿಯೇ, ಅಶೇಷಾಃ ಶ್ರುತಯಃ=ಎಲ್ಲಾ ಶ್ರುತಿಗಳೂ, ಅಖಿಲಂ ಪಂಚರಾತ್ರಂ ಅಥ=ಜೀವಂಗೆ ಉತ್ಪತ್ತ್ಯಾದಿಗಳನ್ನು ಪ್ರತಿಪಾದಿಸತಕ್ಕ ಎಲ್ಲಾ ಪಂಚರಾತ್ರಾಗಮವೂ ಕೂಡ, ಮೂಲರಾಮಾಣಂ ಚೈವ=ಮೂಲರಾಮಾಣವೇ, (ಅವಾಂತರ ರಾಮಾಯಾಣವಲ್ಲ.) ಭಾರತಂ=ಭಾರತವು, ಅಖಿಲಾಃ ಸ್ಮೃತಯಃ=ಎಲ್ಲಾ ಸ್ಮೃತಿಗಳೂ, ವೈಷ್ಣವಾನಿ ಪುರಾಣಾನಿ = ವಿಷ್ಣುಸರ್ವೋತ್ತಮತ್ವ ಪ್ರತಿಪಾದಕಗಳಾದ ಪುರಾಣಗಳು, ಪರೌ ಸಾಂಖ್ಯಯೋಗಾವಪಿ = ಪ್ರಾಚೀನಗಳಾದ, (ಅರ್ವಾಚೀನಸಾಂಖ್ಯಯೋಗಗಳಾಗದೆ ಇರುವ) ಸಾಂಖ್ಯಶಾಸ್ತ್ರ-ಯೋಗಶಾಸ್ತ್ರಗಳೂಕೂಡ, ಬ್ರಹ್ಮತರ್ಕಶ್ಚ=ಬ್ರಹ್ಮತರ್ಕವೂ, ಮೀಮಾಂಸಾ=ಕರ್ಮಮೀಮಾಂಸಾ, ದೇವಮೀಮಾಂಸಾ, ಬ್ರಹ್ಮಮೀಮಾಂಸಾ ಎನ್ನುವ ಭೇದದಿಂದ ಮೂರು ವಿಧವಾದ ಮೀಮಾಂಸಾಶಾಸ್ತ್ರವೂ, ಇತಿ=ಹೀಗೆ, ಅನಂತಃ=ಅಪರಿಮಿತವಾದ, ಶಬ್ದಸಾಗರಃ=ಶಬ್ದಸಮೂಹವು, ಪ್ರಕಾಶಯತಿ=ಪ್ರಕಾಶಿಸುತ್ತದೆ. ಅನಂತಾಃ=ಅಪರಿಮಿತಗಳಾದ, ಪ್ರತ್ಯಕ್ಷಾಗಮಮೂಲಕಾಃ ಏವ=ಪ್ರತ್ಯಕ್ಷಆಗಮಗಳೇ ಮೂಲವಾಗಿವುಳ್ಳ, (ಆಭಾಸಗಳಾದವುಗಳಲ್ಲ.) ಯುಕ್ತಯಶ್ಚ=ಯುಕ್ತಿಗಳೂ ಕೂಡ, (ಪ್ರಕಾಶಯಂತಿ = ಪ್ರಕಾಶಿಸುತ್ತವೆ.) ಐಶ್ವರಂ ಪ್ರತ್ಯಕ್ಷಂ ಚೈವ=ಈಶ್ವರ ಸಂಬಂಧಿಯಾದ ಪ್ರತ್ಯಕ್ಷವೂ ಕೂಡ, ಮತ್ತು ರಮಾದೀನಾಂ=ಲಕ್ಷ್ಮೀ ಮೊದಲಾದವರ, ಮತ್ತು ಅಶೇಷತಃ ಮುಕ್ತಾನಾಂ=ಎಲ್ಲಾ ಮುಕ್ತರ, ಮತ್ತು ಅಮುಕ್ತಾನಾಮಪಿ=ಅಮುಕ್ತರದ್ದೂ ಕೂಡ, ಪ್ರತ್ಯಕ್ಷಂ=ಪ್ರತ್ಯಕ್ಷವು, ಏತಮೇವಾರ್ಥಂ ಉತ್ತಮಂ=ಇದೇವೇ

ಉತ್ತಮವಾದ ಅರ್ಥವನ್ನು, ಅನ್ಯಾವಕಾಶರಹಿತಂ=ಇತರಾವಕಾಶ ರಹಿತವು ಹೇಗೆ ಆದೀತೋ ಹಾಗೆ, ಸಾದರಂ = ತಾತ್ಪರ್ಯ ಪೂರ್ವಕವಾಗಿ, ಪ್ರಕಾಶಯತಿ = ಪ್ರಕಾಶಿಸುತ್ತದೆ ॥ ೮೯ ॥ ॥ ೯೦ ॥ ೯೧ ॥ ೯೨ ॥ ೯೩ ॥

ಸತ್ಸಿದ್ಧಾಂತವನ್ನು ಬಿಡದೆ ಸಚ್ಛಾಸ್ತ್ರಗಳನ್ನೇ ಸರ್ವದಾ ಶ್ರವಣಮಾಡಬೇಕೆಂದು ಹೇಳಲ್ಪಟ್ಟಿತು. ಆದರಲ್ಲಿ ಸತ್ಸಿದ್ಧಾಂತ ಸ್ವರೂಪವನ್ನು ನಿರೂಪಿಸಿ '**ಸಚ್ಛಾಸ್ತ್ರಾಣ್ಯೇವ ಸರ್ವದಾ ಶೃಣುಯಾತ್**' ಎನ್ನುವುದನ್ನು ವಿವರಿಸುತ್ತಾರೆ—

**ಮೂ ॥ ಏತದೇವ ಚ ಸಚ್ಛಾಸ್ತ್ರಂ ದುಃಶಾಸ್ತ್ರಂ ತು ತತಃ ಪರಂ ।**
**ಸಚ್ಛಾಸ್ತ್ರಮಭ್ಯಸೇನ್ನಿತ್ಯಂ ದುಶ್ಶಾಸ್ತ್ರಂ ತು(ಚ)ಪರಿತ್ಯಜೇತ್ ॥ ೯೪ ॥**

ಅ ॥ ಏತದೇವ ಚ=ಈ ವೇದಾದಿಗಳೇ, ಸಚ್ಛಾಸ್ತ್ರಂ=ನಿರ್ದುಷ್ಟವಾದ ಶಾಸ್ತ್ರವು. ತತಃ ಪರಂತು, ಅದರಿಂದ ಬೇರೆಯಾದುದು (ಅಂದರೆ- ವೇದಾದಿ ವಿರುದ್ಧವಾದುದು, ಉದಾಸೀನವಾದುದೂ ಕೂಡ) ದುಶ್ಶಾಸ್ತ್ರಂ=ಕೆಟ್ಟಶಾಸ್ತ್ರವು. ನಿತ್ಯಂ=ನಿರಂತರದಲ್ಲಿಯೂ, ಸಚ್ಛಾಸ್ತ್ರಂ=ಋಗಾದಿ ಸದಾಗಮಗಳನ್ನೇವೆ, ಅಭ್ಯಸೇತ್ = ಅಭ್ಯಾಸಮಾಡತಕ್ಕದು. ದುಶ್ಶಾಸ್ತ್ರಂ ತು=ದುರಾಗಮಗಳನ್ನಾದರೂ, ಪರಿತ್ಯಜೇತ್=ಪರಿತ್ಯಾಗಮಾಡತಕ್ಕದು, (ಅಂದರೆ— ದುಶ್ಶಾಸ್ತ್ರಗಳಲ್ಲಿ ಔದಾಸೀನ್ಯಮಾತ್ರವಲ್ಲ, ಮತ್ತೆ ಹೇಯತ್ವಜ್ಞಾನವೂ ಅವಶ್ಯಕವು, ಎಂದು ತಿಳಿಸಿಕೊಡುವುದಕ್ಕಾಗಿ 'ನಾಭ್ಯಸೇತ್' ಎಂದು ಹೇಳದೆ 'ಪರಿತ್ಯಜೇತ್' ಎಂದು ಹೇಳಿರುವರು) ॥ ೯೪ ॥

'ಸಚ್ಛಾಸ್ತ್ರಮಭ್ಯಸೇತ್' ಎಂದು ಶ್ರವಣಮನನಗಳನ್ನು ಅವಶ್ಯವಾಗಿ ಮಾಡಬೇಕೆಂದು ಹೇಳಲ್ಪಟ್ಟಿತು; ಅದು ಅಯುಕ್ತವು. ನಿದಿಧ್ಯಾಸನದಿಂದಲೇ ಬ್ರಹ್ಮದರ್ಶನವು ಕೂಡುತ್ತದೆ. ಇಲ್ಲವಾದರೆ ನಿದಿಧ್ಯಾಸನವು ವ್ಯರ್ಥವಾಗಬೇಕಾಗುವುದು, ಎಂದರೆ—

**ಮೂ ॥ ಅಸಂಶಯೇನ ತತ್ತ್ವಸ್ಯ ನಿರ್ಣಯೇ ಬ್ರಹ್ಮದರ್ಶನಂ ।**
**ಸಮ್ಯಗ್ವಿಷಮವಿಜ್ಞಾನ ತಾರತಮ್ಯಾನುಸಾರತಃ ॥ ೯೫ ॥**
**ಫಲಂ ಭವೇತ್ತಾರತಮ್ಯಾತ್ಸುಖದುಃಖಾತ್ಮಕಂ ನೃಣಾಂ ।**
**ಸಮ್ಯಕ್ ಚಾಧಿಕವಿಜ್ಞಾನಾತ್ಸುಖಾಧಿಕ್ಯಂ ಭವೇನ್ನೃಣಾಂ ।**
**ಅತೋ ಯಥಾತ್ಮಶಕ್ತ್ಯೈವ ಶ್ರವಣಂ ಮನನಂ ತಥಾ ॥ ೯೬ ॥**

ಅ ॥ ಅಸಂಶೇನ = ಸಂಶಯ ವಿಪರ್ಯಯಗಳ ರಾಹಿತ್ಯದಿಂದ, ತತ್ವಸ್ಯ = ತತ್ವದ, ನಿರ್ಣಯೇ ಸತಿ=ನಿಶ್ಚಯವಾಗುತ್ತಿರಲು, (ನಿದಿಧ್ಯಾಸನದಿಂದ) ಬ್ರಹ್ಮದರ್ಶನಂ = ಪರಬ್ರಹ್ಮನ ಸಾಕ್ಷಾತ್ಕಾರವು, ಭವತಿ=ಆಗುತ್ತದೆ. (ಶಕ್ತ್ಯನುಸಾರವಾಗಿ ಶ್ರವಣ-ಮನನಗಳನ್ನು ಮಾಡಬೇಕೆಂದು ಯಾವುದು ಹೇಳಲ್ಪಟ್ಟದೋ, ಅದು ಅಯುಕ್ತವು. ಪುರುಷಶಕ್ತಿಗಳಿಗೆ ತಾರತಮ್ಯವಿದ್ದುದರಿಂದ ಶ್ರವಣಾದಿಗಳಿಗೂ ಕೂಡ ತಾರತಮ್ಯವು ಬರಬೇಕಾಗುವುದು. ಹಾಗೆಯೇ ಆಗಲಿ ಎಂದು ಹೇಳಕೂಡದು. ಶ್ರವಣಾದಿಗಳಿಂದ ಸಾಧ್ಯವಾದ ಜ್ಞಾನವು ಒಂದೇ ವಿಧವಾದುದರಿಂದ ಶ್ರವಣಾದಿಗಳ ತಾರತಮ್ಯಕ್ಕೆ ವೈಯರ್ಥ್ಯವು ಬರಬೇಕಾಗುವುದು. ತಿಳಿಯಲರ್ಹನಾದ ಬ್ರಹ್ಮನು ಅಪರಿಮಿತನಾದುದರಿಂದ ಬಹ್ಮಜ್ಞಾನಗಳೂ ಕೂಡ ತಾರತಮ್ಯವುಳ್ಳವುಗಳು ಎಂದು ಹೇಳಕೂಡದು. ಜ್ಞಾನಫಲವಾದ ಮೋಕ್ಷದಲ್ಲಿ ತಾರತಮ್ಯವಿಲ್ಲದಿರುವುದರಿಂದ ಜ್ಞಾನತಾರತಮ್ಯಕ್ಕೆ

ವೈಯರ್ಥ್ಯವು ತಪ್ಪಿದ್ದಲ್ಲ. ಬಂಧಧ್ವಂಸರೂಪವಾದ ಮೋಕ್ಷದಲ್ಲಿ ತಾರತಮ್ಯವು ಕೂಡಲಾರದು. ಎಂದರೆ—) ಸಮ್ಯಗ್ವಿಪಮವಿಜ್ಞಾನತಾರತಮ್ಯಾನುಸಾರತಃ=ಯಥಾರ್ಥಜ್ಞಾನ, ವಿಪರೀತವಾದ ಜ್ಞಾನ ಇವುಗಳ ತಾರತಮ್ಯವನ್ನು ಅನುಸರಿಸಿ, ನೃಣಾಂ=ಮನುಷ್ಯರಿಗೆ, ತಾರತಮ್ಯಾತ್=ನೀಚೋಚ್ಚಭಾವದಿಂದ ಯುಕ್ತವಾದ, ಸುಖದುಃಖಾತ್ಮಕಂ = ಸುಖದುಃಖಸ್ವರೂಪವಾದ, ಫಲಂ=ಫಲವು, ಭವೇತ್=ಆಗುವುದು. (ಹೇಳಿದ್ದನ್ನೇ ವಿವರಿಸುತ್ತಾರೆ.) ಸಮ್ಯಕ್=ಸಮೀಚೀನವಾದ, ಅಧಿಕವಿಜ್ಞಾನಾಚ್ಚ=ಅಧಿಕವಾದ ವಿಜ್ಞಾನದೆಶೆಯಿಂದಲೂ, ನೃಣಾಂ=ಮನುಷ್ಯರಿಗೆ, ಸುಖಾಧಿಕ್ಯಂ=ಸುಖದ ಆಧಿಕ್ಯವು, ಭವೇತ್=ಬರುವುದು. ಚ=(ಮಧ್ಯವಾದ ಸಮೀಚೀನಜ್ಞಾನದೆಶೆಯಿಂದಲೂ, ಮಧ್ಯಮವಾದ ಸುಖವು ಆಗುವುದು. ಅಲ್ಪವಾದ ಸಮೀಚೀನಜ್ಞಾನದೆಶೆಯಿಂದ ಅಲ್ಪವಾದ ಸುಖವು ಬರುವುದು.) (ಹೀಗೆಯೇ ಸಮ್ಯಕ್ ಜ್ಞಾನತಾರತಮ್ಯದಿಂದ ಸುಖತಾರತಮ್ಯದಂತೆಯೇ ಅಧಿಕವಾದ ಮಿಥ್ಯಾಜ್ಞಾನದೆಶೆಯಿಂದ ಅಧಿಕವಾದ ದುಃಖವು. ಮಧ್ಯಮವಾದ ಮಿಥ್ಯಾಜ್ಞಾನದೆಶೆಯಿಂದ ಮಧ್ಯಮವಾದ ದುಃಖವು. ಅಲ್ಪವಾದಮಿಥ್ಯಾಜ್ಞಾನದೆಶೆಯಿಂದ ಅಲ್ಪವಾದ ದುಃಖವು. ಹೀಗೆ ಇಲ್ಲಿ ಮಿಥ್ಯಾಜ್ಞಾನ ತಾರತಮ್ಯದಿಂದ ದುಃಖತಾರತಮ್ಯವನ್ನು ಇಟ್ಟುಕೊಳ್ಳಬೇಕು.) (ಅಥವಾ 'ದುಃಶಾಸ್ತ್ರಂತು ಪರಿತ್ಯಜೇತ್' ಎಂದು ಹೇಳಲ್ಪಟ್ಟಿತು. ಅದರಲ್ಲಿ ಅತ್ಯಂತವಾಗಿ ದುಃಶಾಸ್ತ್ರವನ್ನು ಪರಿತ್ಯಾಗಮಾಡುವುದಕ್ಕಾಗಿ ಅನರ್ಥಕಥನರೂಪವಾದ ಅರ್ಥವಾದವು. ಬಂಧಪ್ರಧ್ವಂಸಮಾತ್ರವು ಮೋಕ್ಷವಲ್ಲ. ಮತ್ತೆ ಅಭಿವ್ಯಕ್ತಸುಖವೂ ಮೋಕ್ಷವೇ. ಸುಖದಲ್ಲಿ ತಾರತಮ್ಯವು ಇದೆ, ಆದುದರಿಂದ ಮೋಕ್ಷದಲ್ಲಿ ತಾರತಮ್ಯವು ಕೂಡುತ್ತದೆ.) (ಅಧಿಕರಣಾರ್ಥವನ್ನು ಉಪಸಂಹಾರಮಾಡುತ್ತಾರೆ.) ಅತಃ=ಆದಕಾರಣ, ಯಥಾ=ಚೆನ್ನಾಗಿ, ಆತ್ಮಶಕ್ತ್ಯೈವ=ತನ್ನ ಶಕ್ತ್ಯನುಸಾರವಾಗಿಯೇ, ಶ್ರವಣಂ =ಶ್ರವಣವನ್ನು, ಮನನಂ=ಮನನವನ್ನು (ಮಾಡತಕ್ಕದು.) (ತನ್ನ ಶಕ್ತಿಯಿಂದಲೇ ಶ್ರವಣವನ್ನೂ ಮನನವನ್ನೂ ಮಾಡಬೇಕು. ಸರ್ವಶಾಖಾ ವಿಷಯಕವಲ್ಲ, ಮತ್ತು ತಮ್ಮ ತಮ್ಮ ಶಾಖಾಮಾತ್ರ ವಿಷಯಕವೂ ಅಲ್ಲ.) ಯಥಾ=ಹೇಗೆ, ಶ್ರವಣಂ=ಶ್ರವಣವನ್ನು, ಮನನಂ ಚ=ಮನನವನ್ನೂಕೂಡ, ಆತ್ಮಶಕ್ತ್ಯೈವ=ತನ್ನ ಶಕ್ತಿಯಿಂದಲೇ, (ಮಾಡುತ್ತಾರೋ) ತಥಾ=ಹಾಗೆಯೇ, (ನಿದಿಧ್ಯಾಸನವನ್ನೂ ಮಾಡಬೇಕು) ಅಥವಾ, ಯಥಾತ್ಮಶಕ್ತ್ಯೈವ = ಯೋಗ್ಯತಾನುಸಾರವಾದ ಶಕ್ತಿಯಿಂದಲೇ, ಶ್ರವಣವನ್ನೂ ಮನನವನ್ನೂ ಮಾಡಬೇಕು.

**ತಾ ||** (1) ನಿದಿಧ್ಯಾಸನವು ಬ್ರಹ್ಮಾದರ್ಶನಕ್ಕೆ ಸಾಧನವೆನ್ನುವುದು ಸತ್ಯವೇ. ಆದರೆ ನಿದಿಧ್ಯಾಸನವು ಸಿದ್ಧಿಯಾಗುವುದಕ್ಕಾಗಿ ಶ್ರವಣಮನನಗಳನ್ನೂ ಮಾಡಬೇಕು. ಯಥಾರ್ಥವಾದ ಬ್ರಹ್ಮಧ್ಯಾನವು ನಿದಿಧ್ಯಾಸನವು. ಮಿಥ್ಯೋಪಾಸನೆಯು ಅನರ್ಥವೆಂದು **'ಮಿಥ್ಯೋಪಾಸಾ ಹ್ಯನರ್ಥದಾ'** ಎಂದು ನಾಲ್ಕನೇ ಅಧ್ಯಾಯದಲ್ಲಿ ನಿರಾಕರಿಸಲ್ಪಡುತ್ತದೆ. ಯಥಾರ್ಥವಾಗಿ ತಿಳಿಯಲ್ಪಡದೆಯಿದ್ದ ಬ್ರಹ್ಮನ ಧ್ಯಾನವು ಕೂಡಲಾರದು. ಆದುದರಿಂದ ಬ್ರಹ್ಮಜ್ಞಾನಕ್ಕಾಗಿ ಶ್ರವಣವು; ಸಂಶಯ ವಿಪರ್ಯಯಗಳ ನಿರಾಸಕ್ಕಾಗಿ ಮನನವೂ ಆವಶ್ಯಕವು. (2) **'ಶ್ರುತ್ವಾ ಮತ್ವಾ ತಥಾ ಧ್ಯಾತ್ವಾ ತದಜ್ಞಾನವಿಪರ್ಯಯೌ । ಸಂಶಯಂ ಚ ಪರಾಣುದ್ಯ ಲಭತೇ ಬ್ರಹ್ಮದರ್ಶನಂ । ಶೃಣುಯಾದ್ಯಾವದಜ್ಞಾನಂ ಮತಿರ್ಯಾವದಯುಕ್ತತಾ । ಧ್ಯಾನಂ ಚ ಯಾವದೀಕ್ಷಾ ಸ್ಯಾನ್ನೇಕ್ಷಾ ಕ್ವಚನ ಬಾಧ್ಯತೇ'** । ಎಂದು ಹೇಳಲ್ಪಟ್ಟದೆ. ॥ ೯೫ ॥ ೯೬ ॥

॥ ಸೂ. ॥ ೧ ॥ ೨ ॥ ೩ ॥ ೪ ॥ ೫ ॥ ॥ ಅಧಿ. ॥ ೧ ॥

## ಸರ್ವವೇದಾಧಿಕರಣವು ಸಮಾಪ್ತವಾಯಿತು.

---

# ಉಪಸಂಹಾರಾಧಿಕರಣವು

## 'ಓಂ ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ಸಮಾನೇ ಚ ಓಂ' || ಸೂ. ೬ ||

ಸರ್ವ ವೇದಗಳಲ್ಲಿ ಹೇಳಲ್ಪಟ್ಟ ಆನಂದಾದಿ ಗುಣಗಳಿಗೂ ಅಪಹತಪಾಪ್ಮತ್ವ ಮೊದಲಾದ ದೋಷಾಭಾವಗಳಿಗೂ ಅವಿಭಾಗವನ್ನು ಸಂಪಾದಿಸಿ ಉಪಸಂಹಾರಪೂರ್ವಕವಾಗಿ ಬ್ರಹ್ಮನನ್ನು ಧ್ಯಾನಿಸಬೇಕು. ಹೇಗೆ ವಿಧಿವಿಹಿತಗಳಾದ ಸಂಧ್ಯಾವಂದನಾದಿಗಳನ್ನು ಮಾಡಬೇಕೋ ಹಾಗೆಯೇ ವಿಹಿತವಾಗಿರುವುದರಿಂದ ಧ್ಯಾನವನ್ನು ಮಾಡಬೇಕು. ಪೂರ್ಣತ್ವಾವಿರೋಧಿಯಾದ ಗುಣವಿಷಯದಲ್ಲಿಯೇ ಉಪಸಂಹಾರವು. ಅಯೋಗ್ಯಗಳಾದ ರೋದನಾದಿಗಳ ವಿಷಯದಲ್ಲಿ ಉಪಸಂಹಾರವು ಮಾಡಕೂಡದು.

## 'ಓಂ ಅನ್ಯಥಾತ್ವಂ ಚ ಶಬ್ದಾದಿತಿ ಚೇನ್ನಾವಿಶೇಷಾತ್ ಓಂ' || ಸೂ. ೭ ||

**'ಆತ್ಮೇತ್ಯೇವೋಪಾಸೀತ'** ಎನ್ನುವ ಶ್ರುತಿಯುದ್ದೆಶಿಯಿಂದ ಬಹುಗುಣಗಳಿಗೆ ಉಪಸಂಹಾರ ಮಾಡಕೂಡದು, ಎಂದರೆ ಹಾಗೆ ಹೇಳಕೂಡದು. ಆತ್ಮತ್ವ ವ್ಯತಿರಿಕ್ತಗಳಾದ ಗುಣಗಳನ್ನು ಉಪಸಂಹಾರ ಮಾಡಕೂಡದು, ಎನ್ನುವ ವಿಶೇಷದಲ್ಲಿ ಪ್ರಮಾಣವಿಲ್ಲ.

## 'ಓಂ ನ ವಾ ಪ್ರಕರಣಭೇದಾತ್ಪರೋವರೀಯಸ್ತ್ವಾದಿವತ್ ಓಂ' || ಸೂ. ೮ ||

ಸರ್ವ ಗುಣಗಳಿಗೆ ಭಿನ್ನಪ್ರಕರಣಸ್ಥತ್ವವಿದ್ದ ಪ್ರಯುಕ್ತ ಸರ್ವಗುಣೋಪಸಂಹಾರವು ಮಾಡದೇನೂ ಇರಬಹುದು; ಆಕಾಶಪ್ರಕರಣದಲ್ಲಿರತಕ್ಕ ಪರೋವರೀಯಸ್ತ್ವ ಅನಂತತ್ವೋಪಾಸನದಲ್ಲಿಯೂ, ವೈಶ್ವಾನರ ಪ್ರಕರಣದಲ್ಲಿರತಕ್ಕ ಪ್ರಾದೇಶಮಾತ್ರತ್ವೋಪಾಸನದಲ್ಲಿಯೂ ಹೇಗೆ ಸರ್ವಗುಣೋಪಸಂಹಾರವು ಇಲ್ಲವೋ ಹಾಗೆಯೇ

## 'ಓಂ ಸಂಜ್ಞಾತಶ್ಚೇತ್ತದುಕ್ತಮಸ್ತಿ ತು ತದಪಿ ಓಂ' || ಸೂ. ೯ ||

**'ಸೋಽಹಂ ನಾಮವಿದೇವ'** ಎನ್ನುವ ಶ್ರುತಿಯಿಂದ ಸರ್ವವಿದ್ಯೆಗಳಿಗೆ ಈಶನಾಮತ್ವ ವಿದ್ದುದರಿಂದಲೂ, ಭಗವದ್ಗುಣವಾಚಿತ್ವವಿದ್ದುದರಿಂದಲೂ ಧ್ಯಾನಕ್ಕಾಗಿ ಉಪಸಂಹಾರ ಮಾಡಬೇಕು.ಎಂದರೆ— ಉಪಸಂಹಾರ ಕರ್ತವ್ಯತ್ವವು ಮೊದಲೇ ನಮ್ಮಿಂದ ಹೇಳಲ್ಪಟ್ಟದೆ.

'ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ಸಮಾನೇ ಚ' ಎನ್ನುವಲ್ಲಿ ಸರ್ವ ವೇದಗಳಲ್ಲಿ ಹೇಳಲ್ಪಟ್ಟ ಗುಣಗಳನ್ನೂ, ದೋಷಾಭಾವಗಳನ್ನೂ ಕೂಡ ಉಪಸಂಹಾರಮಾಡಿಯೇ ಪರಮಾತ್ಮನನ್ನು ಉಪಾಸನಮಾಡಬೇಕೆಂದು ಹೇಳಲ್ಪಟ್ಟದೆ. ಇಲ್ಲಿಯೂ ಕೂಡ ಸರ್ವಶಬ್ದವು ಅಸಂಕುಚಿತವೃತ್ತಿಯಲ್ಲ ಎನ್ನುವ ಅಭಿಪ್ರಾಯದಿಂದ ತಾತ್ಪರ್ಯವನ್ನು ಹೇಳುತ್ತಾರೆ—

**ಮೂ ॥ ಕೃತ್ವಾಥ ಕುರ್ವನ್ನಪಿ ವಾ ನಿದಿಧ್ಯಾಸನಮಾಚರೇತ್ ॥ ೯೭ ॥**

ಅ ॥ (ಶ್ರವಣಂ = ಶ್ರವಣವನ್ನು, ಮನನಂ = ಮನನವನ್ನು,) ಕೃತ್ವಾ=ಮಾಡಿ, ಅಥವಾ ಕುರ್ವನ್ನಪಿ = ಮಾಡುವವನಾಗಿ, ಯಥಾತ್ಮಶಕ್ತ್ಯಾ = ಯೋಗ್ಯತಾನುಸಾರವಾದ ಶಕ್ತಿಯಿಂದ, ನಿದಿಧ್ಯಾಸನಂ = ನಿದಿಧ್ಯಾಸನವನ್ನು, ಆಚರೇತ್ = ಮಾಡಬೇಕು ॥ ೯೭ ॥ ಸೂ. ॥ ೬ ॥ ೭ ॥ ೮ ॥ ೯ ॥ ಅಧಿ. ೨ ॥

**ಉಪಸಂಹಾರಾಧಿಕರಣವು ಸಮಾಪ್ತವಾಯಿತು.**

---

## ಪ್ರಾಪ್ತ್ಯಧಿಕರಣವು.

**'ಓಂ ಪ್ರಾಪ್ತೇಶ್ಚ ಸಮಂಜಸಂ ಓಂ'** ॥ ಸೂ. ೧೦ ॥

ಸರ್ವ ಗುಣೋಪಸಂಹಾರವೂ, ಅಲ್ಪ ಗುಣೋಪಸಂಹಾರವೂ ಎರಡೂ ಕೂಡ ಯುಕ್ತವಾಗುತ್ತದೆ. ಅಧಿಕಾರಿ ಭೇದದಿಂದ ಉಪಸಂಹಾರ- ಅನುಪಸಂಹಾರಗಳಿಗೆ ಪ್ರಾಪ್ತಿಯು ಕೂಡುತ್ತದೆ ॥ ಸೂ. ೧೦ ॥ ಅಧಿ. ೩ ॥

**ಪ್ರಾಪ್ತ್ಯಧಿಕರಣವು ಸಮಾಪ್ತವಾಯಿತು.**

---

## ಸರ್ವಾಭೇದಾಧಿಕರಣವು.

**'ಓಂ ಸರ್ವಾಭೇದಾದನ್ಯತ್ರೇಮೇ ಓಂ'** ॥ ಸೂ. ೧೧ ॥

ಬಹುಗುಣೋಪಸಂಹಾರಕರಾದ ಬ್ರಹ್ಮಾದಿಗಳು ಸರ್ವ ಗುಣಗಳಿಂದ ಯುಕ್ತನೆಂದು ಉಪಾಸನಾಮಾಡುವುದರಿಂದ ಸಂಪೂರ್ಣಾನಂದಾದ್ಯಾತ್ಮಕವಾದ ಮೋಕ್ಷಫಲದಲ್ಲಿ ಭಾಗಿಗಳು ಆಗುತ್ತಾರೆ ॥ ಸೂ. ೧೧ ॥ ಅಧಿ. ೪ ॥

**ಸರ್ವಾಭೇದಾಧಿಕರಣವು ಸಮಾಪ್ತವಾಯಿತು.**

---

## ಆನಂದಾಧಿಕರಣವು.

**'ಓಂ ಆನಂದಾದಯಃ ಪ್ರಧಾನಸ್ಯ ಓಂ'** ॥ ಸೂ. ೧೨ ॥

ಎಲ್ಲಾ ಮುಮುಕ್ಷುಗಳೂ ಕೂಡ ಮುಖ್ಯ ಫಲಭೂತವಾದ ಮೋಕ್ಷಕ್ಕಾಗಿ ಆನಂದ-ಜ್ಞಾನ-ನಿರ್ದೋಷತ್ವ-ಆತ್ಮತ್ವರೂಪಗಳಾದ ನಾಲ್ಕು ಗುಣಗಳನ್ನು ಧ್ಯಾನಿಸಬೇಕು ॥ ಸೂ. ॥ ೧೨ ॥ ಅಧಿ. ೫ ॥

**ಆನಂದಾಧಿಕರಣವು ಸಮಾಪ್ತವಾಯಿತು.**

---

## ಪ್ರಿಯಶಿರಸ್ತ್ವಾದ್ಯಧಿಕರಣವು.

**' ಓಂ ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ ಓಂ '** ॥ ಸೂ. ॥ ೧೩ ॥

' ತಸ್ಯ ಪ್ರಿಯಮೇವ ಶಿರಃ ' ಇತ್ಯಾದಿಗಳಲ್ಲಿ ಹೇಳಲ್ಪಟ್ಟ ಪ್ರಿಯಶಿರಸ್ತ್ವವೊದಲಾದ ಗುಣೋಪಾಸನಾಪ್ರಾಪ್ತಿಯು ಸರ್ವರಿಗೂ ಇಲ್ಲ; ಪ್ರಧಾನವಾದ ಮೋಕ್ಷಾಖ್ಯಫಲಕ್ಕೆ ತಾರತಮ್ಯವು ಸಿಗುವುದಕ್ಕಾಗಿ, ಗುಣೋಪಾಸನೆಗೂ ವೃದ್ಧಿಹ್ರಾಸಗಳನ್ನು (ಅಂದರೆ ತಾರತಮ್ಯವನ್ನು) ಅಂಗೀಕರಿಸಬೇಕು. ॥ ಸೂ. ॥ ೧೩ ॥ ಅಧಿ ॥ ೬ ॥

**ಪ್ರಿಯಶಿರಸ್ತ್ವಾದ್ಯಧಿಕರಣವು ಸಮಾಪ್ತವಾಯಿತು.**

---

## ಇತರಾಧಿಕರಣವು.

**' ಓಂ ಇತರೇ ತ್ವರ್ಥಸಾಮಾನ್ಯಾತ್ ಓಂ '** ॥ ಸೂ. ॥ ೧೪ ॥

ಆನಂದ ಮೊದಲಾದ ನಾಲ್ಕುಗುಣಗಳಿಂದಲೂ ಸರ್ವಗುಣಗಳಿಂದಲೂ ಇತರಗಳಾದ ಮಧ್ಯಮಗುಣಗಳು ಭಾವಿ ಫಲದ ಉತ್ಕರ್ಷವನ್ನು ತಿಳಿದ ಸರ್ವಜ್ಞ ಗುರುಗಳಿಂದ ಉಪದಿಷ್ಟವಾದ ತಮ್ಮ ತಮ್ಮಿಂದ ಪ್ರಾಪ್ಯವಾದ ಫಲದ ಸಾಮ್ಯವನ್ನು ಅಪೇಕ್ಷಿಸಿ ವೇದಾದಿಗಳಿಂದ ಉಪಸಂಹಾರ ಪೂರ್ವಕವಾಗಿ ಉಪಾಸ್ಯಗಳೇ ಆಗಿವೆ. ॥ ಸೂ. ॥ ೧೪ ॥ ಅಧಿ ॥ ೭ ॥

**ಇತರಾಧಿಕರಣವು ಸಮಾಪ್ತವಾಯಿತು.**

---

## ಆಧ್ಯಾನಾಧಿಕರಣವು.

**' ಓಂ ಆಧ್ಯಾನಾಯ ಪ್ರಯೋಜನಾಭಾವಾತ್ ಓಂ '** ಸೂ. ॥ ೧೫ ॥

ಸರ್ವವೇದಾದಿಗಳಲ್ಲಿ ಶ್ರೀ ಹರಿಗೆ ಸರ್ವಗುಣಗಳನ್ನು ಹೇಳಿದ್ದು ಚೆನ್ನಾಗಿ ಸರ್ವಗುಣಗಳ ಉಪಸಂಹಾರ ಪೂರ್ವಕವಾಗಿ ಧ್ಯಾನಕ್ಕಾಗಿಯೂ, ಮತ್ತು ಅನುರೂಪವಾದ ಫಲವನ್ನು ಹುಟ್ಟಿಸತಕ್ಕ ಧ್ಯಾನಕ್ಕಾಗಿಯೇ ಧ್ಯಾನದೆಶೆಯಿಂದ ಬೇರೆ ಪ್ರಯೋಜನವಿಲ್ಲದಿರುವುದರಿಂದ—

**' ಓಂ ಆತ್ಮಶಬ್ದಾಚ್ಚ ಓಂ '** ॥ ಸೂ. ॥ ೧೬ ॥

ಕೇವಲ ಆತ್ಮತ್ವದ ಉಪಾಸನೆಯನ್ನು ವಿಧಿಸತಕ್ಕ **' ಆತ್ಮೇತ್ಯೇವೋಪಾಸೀತ '** ಎನ್ನುವ ಶ್ರುತಿಯ ದೆಶೆಯಿಂದ ಅನುಪಸಂಹಾರವೂ ಸಿದ್ಧಿಸುತ್ತದೆ ॥ ಸೂ. ॥ ೧೫ ॥ ೧೬ ॥ ಅಧಿ ॥ ೮ ॥

**ಆಧ್ಯಾನಾಧಿಕರಣವು ಸಮಾಪ್ತವಾಯಿತು.**

---

## ಆತ್ಮಗೃಹೀತ್ಯಧಿಕರಣವು.

**" ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ "** ॥ ಸೂ. ೧೭ ॥

ಆತ್ಮಶಬ್ದದಿಂದ ಆನಂದ ಮೊದಲಾದ ನಾಲ್ಕು ಗುಣಗಳಿಗೂ ಗ್ರಹಣವಾಗುತ್ತದೆ, **'ಸತ್ಯಂ ಜ್ಞಾನಮನಂತಂ ಬ್ರಹ್ಮ'** ಎನ್ನುವಲ್ಲಿ ಸತ್ಯಪದದಿಂದ ಜಗತ್ಸೃಷ್ಟೃತ್ವವೂ, ಜೀವನ ಪ್ರದತ್ವವೂ, ಚೇಷ್ಟಕತ್ವವೂ, ಸಂಹರ್ತೃತ್ವವೂ ಗೃಹೀತವಾಗುವುದರಂತೆ **'ಅತ್ರ ಹ್ಯೇತೇ ಸರ್ವ ಏಕೀ ಭವಂತಿ'** ಎನ್ನುವ ಉತ್ತರವಾಕ್ಯದಿಂದ ॥ ಸೂ. ೧೭ ॥ ಅಧಿ. ೯ ॥

**ಆತ್ಮಗೃಹೀತ್ಯಧಿಕರಣವು ಸಮಾಪ್ತವಾಯಿತು.**

---

## ಅನ್ವಯಾಧಿಕರಣವು.

**" ಓಂ ಅನ್ವಯಾದಿತಿ ಚೇತ್ಸ್ಯಾದವಧಾರಣಾತ್ ಓಂ "** ॥ ಸೂ. ೧೮ ॥

ಆತ್ಮಶಬ್ದಕ್ಕೆ ಸರ್ವಗುಣವಾಚಕತ್ವವಿದ್ದಪ್ರಯುಕ್ತ ಆತ್ಮಶಬ್ದಕ್ಕೆ ಅನುಪಸಂಹಾರಮಾನ ತ್ವವು ಆಯುಕ್ತವೆಂದರೆ— ಸರ್ವಗುಣವಾಚಿತ್ವವು ಅಂಗೀಕೃತವೇ ಆಗುವುದು. **'ಆತ್ಮೇತ್ಯೇವ'** ಎಂದು ಅವಧಾರಣವಿದ್ದಪ್ರಯುಕ್ತ ॥ ಸೂ. ೧೮ ॥ ಅಧಿ ೧೦ ॥

**ಅನ್ವಯಾಧಿಕರಣವು ಸಮಾಪ್ತವಾಯಿತು.**

---

## ಕಾರ್ಯಾಧಿಕರಣವು.

**" ಓಂ ಕಾರ್ಯಾಖ್ಯಾನಾದಪೂರ್ವಂ ಓಂ "** ॥ ಸೂ. ೧೯ ॥

ಮೋಕ್ಷಾಖ್ಯವಾದ ಅಪೂರ್ವಕಾರ್ಯವನ್ನು ಹೇಳಿದರಿಂದ ಬ್ರಹ್ಮನ ಗುಣಗಳ ಸಮುದಾಯ ವನ್ನು ಅಲೌಕಿಕವನ್ನಾಗಿ ಉಪಸಂಹಾರಮಾಡಿ ಧ್ಯಾನಮಾಡಬೇಕು ॥ ಸೂ ೧೯ ॥ ಅಧಿ. ೧೧ ॥

**ಕಾರ್ಯಾಧಿಕರಣವು ಸಮಾಪ್ತವಾಯಿತು.**

---

## ಸಮಾನಾಧಿಕರಣವು.

**" ಓಂ ಸಮಾನ ಏವಂ ಚಾಭೇದಾತ್ ಓಂ "** ॥ ಸೂ. ೨೦ ॥

ಈಶಧರ್ಮಗಳಿಗೆ ಅಪೂರ್ವತ್ವವಿದ್ದಾಗ್ಯೂ ಯೋಗ್ಯ ಗುಣವಿಷಯದಲ್ಲಿಯೇ ಉಪ ಸಂಹಾರವು; ಅಯೋಗ್ಯದಲ್ಲಿ ಇಲ್ಲ.

"ಓಂ ಸಂಬಂಧಾದೇವಮನ್ಯತ್ರಾಪಿ ಹಿ ಓಂ" ॥ ಸೂ. ೨೧ ॥

ತ್ರಿವಿಕ್ರಮತ್ವಾದಿ ಕ್ರಿಯಾವಿಷಯಗಳಲ್ಲಿಯೂ ಹೀಗೆಯೇ ಉಪಸಂಹಾರ ಮಾಡಬೇಕು. ಆ ಕ್ರಿಯೆಗಳಿಗೆ ಈಶ್ವರನಿಂದ ಅಭೇದವಿದ್ದಪ್ರಯುಕ್ತ (ಅಂದರೆ ನಿತ್ಯತ್ವವಿದ್ದಪ್ರಯುಕ್ತ). ॥ ಸೂ. ೨೦ ॥ ೨೧ ॥ ಅಧಿ. ೧೨ ॥

ಸಮಾನಾಧಿಕರಣವು ಸಮಾಪ್ತವಾಯಿತು.

---

## ನವಾವಿಶೇಷಾಧಿಕರಣವು.

"ಓಂ ನ ವಾ ವಿಶೇಷಾತ್ ಓಂ" ॥ ಸೂ. ೨೨ ॥

ಯೋಗ್ಯತಾವಿಶೇಷವನ್ನು ಅಪೇಕ್ಷಿಸಿಯೇ ಆತ್ಮಶಬ್ದದಿಂದ ಗುಣ ಬೋಧವಾಗುತ್ತದೆಂದಂಗೀಕರಿಸಿದರಿಂದ ಸರ್ವ ಗುಣಗಳಿಗೆ ಆತ್ಮಪದದಿಂದ ಎಲ್ಲರಿಗೆ ಗ್ರಹಣವಾಗುವುದಿಲ್ಲ.

"ಓಂ ದರ್ಶಯತಿ ಚ ಓಂ" ಸೂ. ॥ ೨೩ ॥

'ಸರ್ವಾನ್ ಗುಣಾನಾತ್ಮಶಬ್ದೋ ಬ್ರವೀತಿ ಬ್ರಹ್ಮಾದೀನಾಮಿತರೇಷಾಂ ನ ಚೈವ' ಎನ್ನುವ ಶ್ರುತಿಯು ಪೂರ್ವ ಸೂತ್ರೋಕ್ತವಾದ ಅರ್ಥವನ್ನು ಪ್ರತಿಪಾದಿಸುತ್ತದೆ ॥ ಸೂ. ೨೨ ॥ ॥ ೨೩ ॥ ಅಧಿ. ೧೩ ॥

ನವಾವಿಶೇಷಾಧಿಕರಣವು ಸಮಾಪ್ತವಾಯಿತು.

---

## ಸಂಭೃತ್ಯಧಿಕರಣವು.

"ಓಂ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ಓಂ" ॥ ಸೂ. ೨೪ ॥

'ಉಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ ಏಷ ಹಿ ಸರ್ವೇಷು ಲೋಕೇಷು ಭಾತಿ' ಎಂದು ಹೇಳಲ್ಪಟ್ಟ ಸಮ್ಯಗ್ಭರಣ ಪ್ರಕಾಶದಿಂದ ವ್ಯಾಪ್ತಿಯು. ಇವುಗಳು ಸರ್ವೋಪಾಸ್ಯಗಳಲ್ಲ. ಮತ್ತೆ ದೇವಾದಿಗಳಿಂದ ಉಪಾಸ್ಯಗಳು, ಹಿಂದೆ ಹೇಳಿದ ಯೋಗ್ಯತಾವಿಶೇಷದಿಂದಲೇ ॥ ಸೂ. ॥ ೨೪ ॥ ಅಧಿ. ೧೪ ॥

ಸಂಭೃತ್ಯಧಿಕರಣವು ಸಮಾಪ್ತವಾಯಿತು.

---

## ಪುರುಷವಿದ್ಯಾಧಿಕರಣವು.

"ಓಂ ಪುರುಷವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್ ಓಂ" ॥ ಸೂ. ೨೫ ॥

ಸರ್ವ ವಿದ್ಯೋತ್ತಮವಾದ ಪುರುಷಸೂಕ್ತಾಖ್ಯವಿದ್ಯೆಯಲ್ಲಿಯೂ ಕೆಲವು ಗುಣಗಳನ್ನು ಹೇಳದೆ ಇದ್ದುದರಿಂದ ಸರ್ವಗುಣೋಪಸಂಹಾರವನ್ನು ಮಾಡಬೇಕು ॥ ಸೂ. ೨೫ ॥ ಅಧಿ. ೧೫ ॥

ಪುರುಷವಿದ್ಯಾಧಿಕರಣವು ಸಮಾಪ್ತವಾಯಿತು.

---

## ವೇಧಾಧಿಕರಣವು

**"ಓಂ ವೇಧಾದ್ಯರ್ಥಭೇದಾತ್ ಓಂ" ॥ ಸೂ. ೨೬ ॥**

**'ಶಂ ಪ್ರತ್ಯಂಚಮರ್ಚಿಷಾ ವಿಧ್ಯಮರ್ಮನ್'** ಇತ್ಯಾದಿಗಳಲ್ಲಿ ಶ್ರುತಗಳಾದ ವೇಧಾದಿಗಳು ಯತ್ಯಾದಿಗಳಿಂದ ಉಪಾಸ್ಯಗಳಲ್ಲ, ವೇಧಾದ್ಯುಪಾಸನಕ್ಕೆ ದುಷ್ಟಜನಹಿಂಸಾದಿ ರೂಪವಾದ ವಿಲಕ್ಷಣಫಲಗಳು ಇದ್ದುದರಿಂದ. ॥ ಸೂ. ೨೬ ॥ ಅಧಿ. ೧೬ ॥

**ವೇಧಾಧಿಕರಣವು ಸಮಾಪ್ತವಾಯಿತು.**

---

## ಹಾನ್ಯಧಿಕರಣವು.

**'ಓಂ ಹಾನೌ ತೂಪಾಯನಶಬ್ದಶೇಷತ್ವಾತ್ಕುಶಾಛಂದಸ್ತುತ್ಯುಪಗಾನವತ್ತದುಕ್ತಂ ಓಂ' ॥ ಸೂ. ೨೭ ॥**

ಸಕಲ ದುಃಖಹಾನಿರೂಪವಾದ ಮೋಕ್ಷದಲ್ಲಿಯೂ, ಮುಕ್ತರಿಗೆ ಉಪಾಸನವು **'ಏತತ್ಸಾಮ ಗಾಯನ್ನಾಸ್ತೇ'** ಎನ್ನುವ ಶ್ರುತಿಯಿಂದ ಹೇಳಲ್ಪಟ್ಟದೆ. ಆ ಮುಕ್ತಿಕಾಲಿಕವಾದ ಉಪಾಸನೆಯಾದರೂ ನಿಯತ ಬ್ರಹ್ಮಯಜ್ಞಾನಂತರದಲ್ಲಿ ಕುಶಗ್ರಹಣಪೂರ್ವಕವಾಗಿ ತನ್ನ ಇಚ್ಛೆಯಿಂದಲೇ ಮಂತ್ರ ಸಾಮಗಳ ಅಧ್ಯಯನದಂತೆಯೇ ತನ್ನ ಇಚ್ಛೆಯಿಂದಲೇ ಮಾಡಲ್ಪಡುತ್ತದೆ. ವಿಧಿಯಿಂದ ಅಲ್ಲ. ಆ ಉಪಾಸನ ವಿಧಿಗೆ ಮೋಕ್ಷವಾಕ್ಯಶೇಷತ್ವವಿದ್ದುದರಿಂದ.

**'ಓಂ ಸಾಂಪರಾಯೇ ತರ್ತವ್ಯಾಭಾವಾತ್ತಥಾ ಹ್ಯನ್ಯೇ ಓಂ' ॥ ಸೂ. ೨೮ ॥**

ಯಾವ ಕಾರಣದೆಸೆಯಿಂದ ಇತರ ಶಾಖಿಗಳು **'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ'** ಎಂದು ಪಠನ ಮಾಡುತ್ತಾರೋ, ಆದ ಕಾರಣ ಮುಕ್ತಿಯಲ್ಲಿ ನಿರಸನೀಯವಾದ ಅನಿಷ್ಟವಿಲ್ಲದಿರುವುದರಿಂದ ತನ್ನ ಇಚ್ಛೆಯಿಂದಲೇ ಉಪಾಸನವು ಮಾಡಲ್ಪಡುತ್ತದೆ. ಅನಿಷ್ಟ ನಿವೃತ್ತಿಗಾಗಿ ಅಲ್ಲ. ॥ ಸೂ. ೨೮ ॥ ಅಧಿ. ೧೭ ॥

**ಹಾನ್ಯಧಿಕರಣವು ಸಮಾಪ್ತವಾಯಿತು.**

---

## ಛಂದಾಧಿಕರಣವು.

**'ಓಂ ಛಂದತ ಉಭಯಾವಿರೋಧಾತ್ ಓಂ' ॥ ಸೂ. ೨೯ ॥**

ಮುಕ್ತಿಯಲ್ಲಿ ಕರ್ಮವನ್ನು ತನ್ನ ಇಚ್ಛೆಯಿಂದಲೇ ಮಾಡುತ್ತಾರೆ. ಮಾಡದೇನೇ ಇರುತ್ತಾರೆ. ಕರ್ಮ ಕರಣ ಅಕರಣ— ವಿಷಯದಲ್ಲಿ ವಿಧಿ ಪ್ರತ್ಯವಾಯಗಳು ಇಲ್ಲ.

**'ಓಂ ಗತೇರರ್ಥವತ್ವಮುಭಯಥಾನ್ಯಥಾ ಹಿ ವಿರೋಧಃ ಓಂ' ॥ ಸೂ. ೩೦ ॥**

ಯಾವ ಕಾರಣದೆಶೆಯಿಂದ ವಿಧಿಪ್ರತ್ಯವಾಯುಗಳ ಅಭಾವದಿಂದಲೇ ಈಶ್ವರಪ್ರಾಪ್ತಿರೂಪವಾದ ಮೋಕ್ಷಕ್ಕೆ ಪುರುಷಾರ್ಥತ್ವವೋ, ಆದಕಾರಣ ವಿಧಿಪ್ರತ್ಯವಾಯುಗಳು ಇಲ್ಲ. ಮುಕ್ತಿಯಲ್ಲಿ ವಿಧಿಪ್ರತ್ಯವಾಯುಗಳು ಇದ್ದರೆ ಮುಕ್ತಿಗೆ ಪುರುಷಾರ್ಥತ್ವವೇ ಇಲ್ಲದೆ ಹೋಗಬೇಕಾಗುವುದು.

**"ಓಂ ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ಓಂ"**
॥ ಸೂ. ೩೧ ॥

ಮುಕ್ತಿಯಲ್ಲಿ ಕದಾಚಿತ್ ಕರ್ಮಕರಣವು, ಕದಾಚಿತ್ ಅಕರಣವು ಎನ್ನುವ ಭಾವವು ಯುಕ್ತವೇ. ಜ್ಞಾನದ್ವಾರಾ ಕರ್ಮಸಾಧ್ಯವಾದ ಮೋಕ್ಷವು ಪ್ರಾಪ್ತವಾದ ಪ್ರಯುಕ್ತ, ಲೋಕದಲ್ಲಿ ಯಾಗವಿಧಿಪೂರ್ತಿಫಲಸಾಧನವಾದ ವಿಷ್ಣುಕ್ರಮಣಾಖ್ಯವಾದ, ವಿಷ್ಣುಪ್ರೀತಿಕರವಾದ ಕರ್ಮವನ್ನು ಯಾಗಾದಿಗಳ ಸಮಾಪ್ತ್ಯನಂತರದಲ್ಲಿ ಕೆಲವರು ಮಾಡುತ್ತಾರೆ; ಕೆಲವರು ಮಾಡುವುದಿಲ್ಲ. ಹೇಗೋ ಹಾಗೆಯೇ ॥ ಸೂ. ೨೯ ॥ ೩೦ ॥ ೩೧ ॥ ಅಧಿ. ೧೮ ॥

**ಛಂದಾಧಿಕರಣವು ಸಮಾಪ್ತವಾಯಿತು.**

---

## ಅನಿಯಮಾಧಿಕರಣವು.

**"ಓಂ ಅನಿಯಮಃ ಸರ್ವೇಷಾಮವಿರೋಧಾಚ್ಛಬ್ದಾನು-
ಮಾನಾಭ್ಯಾಂ ಓಂ"** ॥ ಸೂ. ೩೨ ॥

ಮೋಕ್ಷವಿಷಯದಲ್ಲಿ ಕೆಲವು ಜ್ಞಾನಿಗಳಿಗೇನೇ ಮೋಕ್ಷವು; ಸರ್ವ ಜ್ಞಾನಿಗಳಿಗೆ ಇಲ್ಲ ಎನ್ನುವ ವ್ಯವಸ್ಥೆಯು ಉಪಾಸನಾದಂತೆ ಇಲ್ಲ, ಯಾವ ಜ್ಞಾನಿಗೂ ಮೋಕ್ಷನಿಷೇಧವಿಲ್ಲ. **'ನ ಕಶ್ಚಿದ್ಬ್ರಹ್ಮವಿತ್ಸ್ವೃತಿಮನುಭವತಿ ಮುಕ್ತೋ ಹ್ಯೇವ ಭವತಿ'** ಎನ್ನುವ ಶ್ರುತಿಯಿಂದಲೂ **'ಜ್ಞಾನಿನಃ ನಿಯತಮೋಕ್ಷಾಃ ಅಪರೋಕ್ಷಜ್ಞಾನಿತ್ವಾತ್ ಚತುರ್ಮುಖವತ್'** ಎನ್ನುವ ಅನುಮಾನದಿಂದಲೂ ಸಿದ್ಧವಾಗುತ್ತದೆ ॥ ಸೂ. ೩೨ ॥ ಅಧಿ. ೧೯ ॥

**ಅನಿಯಮಾಧಿಕರಣವು ಸಮಾಪ್ತವಾಯಿತು.**

---

## ಯಾವದಧಿಕರಣವು.

**'ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ ಓಂ'** ॥ ಸೂ. ೩೩ ॥

ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಅನುಷ್ಠಾನಶೀಲರಾದ ಬ್ರಹ್ಮಾದಿಗಳಿಗೆ ಮುಕ್ತಿಯಲ್ಲಿ ಅಧಿಕಾರಾನುಸಾರವಾಗಿಯೇ ತಾರತಮ್ಯದಿಂದ ಅವಸ್ಥಿತಿಯು. ॥ ಸೂ. ೩೩ ॥

**"ಓಂ ಅಕ್ಷರಧಿಯಾಂ ತ್ವವಿರೋಧಃ ಸಾಮಾನ್ಯತದ್ಭಾವಾಭ್ಯಾ
ಮೌಪಸದವತ್ತದುಕ್ತಂ ಓಂ"** ॥ ಸೂ. ೩೪ ॥

ಮುಕ್ತಿಯಲ್ಲಿ ಬ್ರಹ್ಮಜ್ಞಾನಿಗಳಾದ ಚತುರ್ಮುಖಾದಿಗಳಿಗೆ ಪರಸ್ಪರವಾಗಿ ಸಾಮ್ಯವಿಲ್ಲದಿದ್ದರೂ ಸಚ್ಛಿಷ್ಯನಿಗೆ ಗುರುವಿನಲ್ಲಿ ಹೇಗೆ ವಿರೋಧವಿಲ್ಲವೋ ಹಾಗೆಯೇ ವಿರೋಧವಿಲ್ಲ. ಬ್ರಹ್ಮಜ್ಞಾನಿಗಳಾಗಿರುವುದರಿಂದಲೂ ವಿಷಯಲಂಪಟತ್ವ ಮಾತ್ಸರ್ಯಾದಿ ದೋಷಗಳಿಲ್ಲದಿರುವುದರಿಂದಲೂ, ಉಪಕಾರ್ಯ ಉಪಕಾರಕಭಾವವಿದ್ದುದರಿಂದಲೂ ಪರಸ್ಪರ ಸಾಮ್ಯವಿಲ್ಲದಿದ್ದರೂ ವಿರೋಧವಿಲ್ಲವೆನ್ನುವ ಪ್ರಮೇಯವು '**ನಾನಾವಿಧಾ ಜೀವಸಂಘಾಃ**' ಎನ್ನುವ ಶ್ರುತಿಯಲ್ಲಿ ಪ್ರತಿಪಾದಿಸಿಕೊಳ್ಳಲ್ಪಟ್ಟದೆ. ॥ ಸೂ. ॥ ೩೩ ॥ ೩೪ ॥ ಅಧಿ. ೨೦ ॥

**ಯಾವದಧಿಕರಣವು ಸಮಾಪ್ತವಾಯಿತು.**

---

## ಇಯದಾಮನನಾಧಿಕರಣವು.

**'ಓಂ ಇಯದಾಮನನಾತ್ ಓಂ'** ॥ ಸೂ. ೩೫ ॥

ಅಧಿಕಾರದಲ್ಲಿ ನಿಯುಕ್ತರಾದ ಉಪಾಸಕರಿಗೆ ತಾರತಮ್ಯವು ಪ್ರಾಣಪರ್ಯಂತವಾಗಿಯೇ, ಪ್ರಾಣನ ದೆಶೆಯಿಂದ ಅಧಿಕನು ಇಲ್ಲ. '**ಪ್ರಾಣೋ ವಾ ವ ಸರ್ವೇಭ್ಯೋ ಭೂಯಾನ್ ನ ಪ್ರಾಣಾದ್ಭೂಯಾನ್**' ಎನ್ನುವ ಶ್ರುತಿಯಲ್ಲಿ ಹಾಗೆ ಹೇಳಿಯದೆ.

**"ಓಂ ಅಂತರಾ ಭೂತಗ್ರಾಮವದಿತಿ ಚೇತ್ತದುಕ್ತಂ ಓಂ"** ॥ ಸೂ. ೩೬ ॥

ಪ್ರಾಣನು ವಿಷ್ಣುವನ್ನೂ ಲಕ್ಷ್ಮಿಯನ್ನೂ ಹೊರತು ತನ್ನಿಂದ ಉತ್ತಮಾಧಿಕಾರಿಗಳಿಂದ ಯುಕ್ತನು; ಅಧಿಕಾರಿಯಾಗಿರುವುದರಿಂದ ನಾಮವಾಗಾದಿಗಳನ್ನು ಆರಂಭಿಸಿ ಆಶಾ (ಭಾರತೀ) ಪ್ರಾಣಸಮೂಹದಲ್ಲಿ ಒಬ್ಬನಿಂದ ಒಬ್ಬನು ಅಧಿಕನಾಗಿ ಹೇಗೆ ಕಾಣಲ್ಪಟ್ಟದ್ದಾನೋ ಹಾಗೆಯೇ. ಎಂದರೆ— ಹಾಗೆ ಪ್ರಾಣನಿಂದ ಒಬ್ಬ ಉತ್ತಮಾಧಿಕಾರಿಯು ಇದ್ದಾನೆಂದು ಹೇಳಕೂಡದು; ಪ್ರಾಣನದೆಶೆಯಿಂದ ಉತ್ತಮಾಧಿಕಾರಿಯು ಇಲ್ಲವೆನ್ನುವ ವಿಷಯದಲ್ಲಿ ಪ್ರಮಾಣವು ಹೇಳಲ್ಪಟ್ಟದೆ ॥ ಸೂ. ೩೬ ॥

**'ಓಂ ಅನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶವತ್ ಓಂ'** ॥ ಸೂ. ೩೭ ॥

ಪ್ರಾಣನದೆಶೆಯಿಂದ ಅಧಿಕನು ಇಲ್ಲದಿದ್ದರೆ, ಪ್ರಾಣನಿಗೇನೇ ಸರ್ವೋತ್ತಮತ್ವವಿದ್ದರೆ ಶ್ರೀಹರಿಯಿಂದ ಪ್ರಾಣನಿಗೆ '**ಆತ್ಮತ ಏಷ ಪ್ರಾಣೋ ಜಾಯತೇ**' ಇತ್ಯಾದಿ ಶ್ರುತಿಸಿದ್ಧವಾದ ಭೇದವು ಕೂಡದೆ ಹೋಗಬೇಕಾಗುವುದು, ಎಂದರೆ— ಹಾಗೆ ಹೇಳಕೂಡದು. '**ಏಷ ತು ವಾ ಅತಿ ವದತಿ**' ಇತ್ಯಾದಿ ಶ್ರುತ್ಯುಪನ್ಯಾಸಪ್ರಕಾರದಿಂದಲೇ ಕೂಡುತ್ತದೆ. ॥ ಸೂ. ೩೫ ॥ ೩೬ ॥ ೩೭ ॥ ಅಧಿ. ೨೧ ॥

**ಇಯದಾಮನನಾಧಿಕರಣವು ಸಮಾಪ್ತವಾಯಿತು.**

---

## ವ್ಯತಿಹಾರಾಧಿಕರಣವು.

**'ಓಂ ವ್ಯತಿಹಾರೋ ವಿಶಿಂಷಂತಿ ಹೀತರವತ್ ಓಂ'** ॥ ಸೂ. ೩೮ ॥

ಪ್ರಾಣನದೆಶೆಯಿಂದ ಸತ್ಯಾಖ್ಯ ವಿಷ್ಣುವಿಗೆ ಉತ್ತಮತ್ವವು ಯುಕ್ತವು. ಪ್ರಾಣ-ಸತ್ಯರ ಮಧ್ಯದಲ್ಲಿ ಪ್ರಶ್ನಪ್ರತಿವಚನಗಳು ಇಲ್ಲದಿದ್ದರೂ ಅಧ್ಯಾಹಾರವನ್ನು ಮಾಡಬೇಕು. **'ವಾಗ್ವಾವ ನಾಮ್ನೋ ಭೂಯಸೀ'** ಇತ್ಯಾದಿ ವಿಶೇಷಣದಿಂದ ನಾಮಾದಿಗಳ ದೆಶೆಯಿಂದ ವಾಗಾದಿಗಳಂತೆಯೇ ಪ್ರಾಣಾತಿವಾದಿಯುದೆಶೆಯಿಂದ **'ಯಃ ಸತ್ಯೇನಾತಿವದತಿ'** ಎನ್ನುವ ಶ್ರುತ್ಯುಕ್ತವಾದ ಸತ್ಯಾತಿವಾದಿಯನ್ನು **'ಏಷ ತು ವಾ ಅತಿವದತಿ'** ಎಂದು ವ್ಯಾವರ್ತಿಸುತ್ತಾರೆ. ಆದಕಾರಣ ಪ್ರಾಣ-ಸತ್ಯಪ್ರಕರಣಗಳಿಗೆ ಭೇದವು ಅವಗತವಾಗುವುದರಿಂದಲೂ ನಾಮಾದಿ ಪ್ರಕರಣಪ್ರಾಯಪಾಠದಿಂದಲೂ **'ಅಸ್ತಿ ಭಗವಃ ಪ್ರಾಣಾದ್ಭೂಯಃ । ಪ್ರಾಣಾದ್ವಾವ ಭೂಯೋಽಸ್ತಿ ತನ್ಮೇ ಭವಾನ್ಬ್ರವೀತು' । ಸತ್ಯಂ ವಾವ ಪ್ರಾಣಾದ್ಭೂಯಃ'** ಎಂದು ಪ್ರಶ್ನಪ್ರತಿವಚನಗಳನ್ನು ಸತ್ಯಪ್ರಕರಣದಲ್ಲಿಯೂ ಅಧ್ಯಾಹಾರಮಾಡತಕ್ಕದು ॥ಸೂ. ೩೮॥ ॥ ಅಧಿ. ೨೨ ॥

**ವ್ಯತಿಹಾರಾಧಿಕರಣವು ಸಮಾಪ್ತವಾಯಿತು.**

---

## ಸತ್ಯಾಧಿಕರಣವು.

**"ಓಂ ಸೈವ ಹಿ ಸತ್ಯಾದಯಃ ಓಂ"** ॥ ಸೂ. ೩೯ ॥

ಯಾವ ಕಾರಣದಿಂದ ಸತ್ಯ-ವಿಜ್ಞಾನ-ಮತಿ-ಶ್ರದ್ಧಾ-ನಿಷ್ಠಾ-ಕೃತಿ-ಸುಖಾದಿಗಳು ಪ್ರಾಣನ ದೆಶೆಯಿಂದ ಮೇಲೆ ಹೇಳಲ್ಪಟ್ಟವುಗಳು ಪ್ರಕೃತ ಈಶಾಖ್ಯಪರ ದೇವತೆಯೋ, ಆದಕಾರಣ ಪ್ರಾಣನ ದೆಶೆಯಿಂದ ವಿಷ್ಣುವಿಗೇನೇ ಉತ್ತಮತ್ವವು ॥ ಸೂ. ೩೯ ॥ ಅಧಿ. ೨೩ ॥

**ಸತ್ಯಾಧಿಕರಣವು ಸಮಾಪ್ತವಾಯಿತು.**

---

## ಕಾಮಾಧಿಕರಣವು.

**"ಓಂ ಕಾಮಾದಿತರತ್ರ ತತ್ರ ಚಾಯತನಾದಿಭ್ಯಃ ಓಂ"** ॥ಸೂ. ೪೦॥

ಈಶ್ವರೇಚ್ಛಾನುಸಾರಿಯಾದ ತನ್ನ ಇಚ್ಛೆಯಿಂದಲೇ (ಕರ್ಮದಿಂದ ಅಲ್ಲ) ಈಶ್ವರನ ಸಮೀಪದಲ್ಲಿ ಮೂಲರೂಪದಿಂದ ಇರತಕ್ಕ ಲಕ್ಷ್ಮೀದೇವಿಯು ಈಶ್ವರನ ಇಚ್ಛೆಯಿಂದಲೇ ಭೂಮ್ಯಾದಿಗಳಲ್ಲಿ ಅವತಾರ ಮಾಡುತ್ತಾಳೆ. **'ಸರ್ವಾಯತನಾ ಸರ್ವಕಾಲಾ ಸರ್ವೇಚ್ಛಾ'** ಇತ್ಯಾದಿ ಸರ್ವಗತತ್ವಾದಿಗಳನ್ನು ಬೋಧಿಸತಕ್ಕ ಶ್ರುತ್ಯಾದಿಗಳು ಇದ್ದಪ್ರಯುಕ್ತ ॥ ಸೂ. ೪೦ ॥

**"ಓಂ ಆದರಾದಲೋಪಃ ಓಂ"** ॥ ಸೂ. ೪೧ ॥

ನಿರುಪಾಧಿಕವಾದ ಭಕ್ತ್ಯತಿಶಯದೆಶೆಯಿಂದ (ಬದ್ಧತ್ವವಿದ್ದಪ್ರಯುಕ್ತವಲ್ಲ) ಲಕ್ಷ್ಮೀದೇವಿಗೆ ಭಗವದುಪಾಸನೆಗೆ ಲೋಪವಿಲ್ಲ ॥ ಸೂ. ೪೧ ॥

**"ಓಂ ಉಪಸ್ಥಿತೇಽತಸ್ತದ್ವಚನಾತ್ ಓಂ"** ॥ ಸೂ. ೪೨ ॥

ಲಕ್ಷ್ಮೀದೇವಿಯು ಈಶ್ವರನ ಸಮೀಪದಲ್ಲಿ ನಿತ್ಯದಲ್ಲಿಯೂ ಇದ್ದಪ್ರಯುಕ್ತ ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವು. 'ದ್ವಾವೇತಾವನಾದಿನಿತ್ಯಾವನಾದಿಮುಕ್ತೌ' ಎಂದು ನಿತ್ಯಸಂಬಂಧಿತ್ವ ವಚನವಿದ್ದುದರಿಂದ ॥ ಸೂ. ೪೦ ॥ ೪೧ ॥ ೪೨ ॥ ಅಧಿ. ೨೪ ॥

**ಕಾಮಾಧಿಕರಣವು ಸಮಾಪ್ತವಾಯಿತು.**

---

## ನಿರ್ಧಾರಣಾಧಿಕರಣವು.

**"ಓಂ ತನ್ನಿರ್ಧಾರಣಾರ್ಥನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಂ ಓಂ"** ॥ ಸೂ. ೪೩ ॥

ಇದಕ್ಕೆ ಇದು ಅರ್ಥವು ಎಂದು ತತ್ವವಿಷಯಕ ನಿಶ್ಚಯವೂ, ಇದೇವೇ ವೇದದ ಅರ್ಥವು ಎನ್ನುವ ದೃಢವಾದ ನಿಶ್ಚಯವೂ ಕೂಡ ಬ್ರಹ್ಮಾಪರೋಕ್ಷಜ್ಞಾನದೆಶೆಯಿಂದ ಭಿನ್ನವೇ. **'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ'** ಎನ್ನುವ ಶ್ರುತಿಯಲ್ಲಿ ಶ್ರವಣಾದಿಗಳು ಮೂರೂ ವಿಹಿತಗಳಾಗಿವೆ. ಶ್ರವಣಮನನಗಳಿಗೆ ಸಂದೇಹವಿಪರ್ಯಯಗಳಿಂದ ಮಾಡಲ್ಪಟ್ಟ ಪ್ರತಿಬಂಧಾಭಾವವು ಫಲವು. ಏವಂಚ ೧ ಶ್ರವಣದಿಂದ ತತ್ವನಿಶ್ಚಯವಾಗುತ್ತದೆ. ಆದರಿಂದ ಅಜ್ಞಾನನಿವೃತ್ತಿಯು. ೨ ಮನನದಿಂದ ವೇದಾರ್ಥನಿಶ್ಚಯವು. ಆದರಿಂದ ಸಂಶಯವಿಪರ್ಯಯಗಳ ನಿವೃತ್ತಿಯು. ೩ ಧ್ಯಾನದಿಂದ ಅಪರೋಕ್ಷಜ್ಞಾನವು ಹೀಗೆ ಬೇರೆಬೇರೆ ಫಲಗಳು ಇದ್ದುದರಿಂದ ಶ್ರವಣಾದಿಗಳು ಮೂರನ್ನು ಮಾಡಬೇಕು ॥ ಸೂ. ೪೩ ॥ ಅಧಿ. ೨೫ ॥

**ನಿರ್ಧಾರಣಾಧಿಕರಣವು ಸಮಾಪ್ತವಾಯಿತು.**

---

## ಪ್ರದಾನಾಧಿಕರಣವು.

**"ಓಂ ಪ್ರದಾನವದೇವ ಹಿ ತದುಕ್ತಂ ಓಂ"** ॥ ಸೂ. ೪೪ ॥

ಶ್ರವಣಾದಿತ್ರಯವು ಪ್ರೀತಿಪೂರ್ವಕತ್ವರೂಪವಾದ ಪ್ರಕರ್ಷಗುರೂಪದೇಶರೂಪವಾದ ದಾನದಿಂದ ಯುಕ್ತವಾಗಿಯೇ ದೃಷ್ಟ್ಯಾಖ್ಯ ಫಲವನ್ನು ಕೊಡುವುದು. ಶ್ರವಣಾದಿಮಾತ್ರವಲ್ಲ. ಆ ಬ್ರಹ್ಮಜ್ಞಾನಕ್ಕೆ ಗುರುಪ್ರಸಾದಾಧೀನತ್ವವು **'ಆಚಾರ್ಯವಾನ್ ಪುರುಷೋ ವೇದ'** ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟದೆ. ॥ ಸೂ. ೪೪ ॥ ಅಧಿ. ೨೬ ॥

**ಪ್ರದಾನಾಧಿಕರಣವು ಸಮಾಪ್ತವಾಯಿತು.**

---

## ಲಿಂಗಭೂಯಸ್ತ್ವಾಧಿಕರಣವು.

**"ಓಂ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ"** ॥ ಸೂ. ೪೫ ॥

ಗುರುಪ್ರಸಾದವು ಜ್ಞಾನವು ಹುಟ್ಟುವ ವಿಷಯದಲ್ಲಿ ಶ್ರವಣ ಮೊದಲಾದ ತನ್ನ ಪ್ರಯತ್ನದೆಶೆಯಿಂದಲೂ ಬಲಿಷ್ಠವು. ಪ್ರಸಾದಕ್ಕೆ ಪ್ರಾಬಲ್ಯಜ್ಞಾಪಕಗಳಾದ ಅನೇಕ ಲಿಂಗಗಳು

ಕಂಡುಬರುವುದರಿಂದ, ಆದಾಗ್ಯೂ 'ಶ್ರೋತವ್ಯೋ ಮಂತವ್ಯಃ' ಇತ್ಯಾದಿ ಶ್ರುತಿಗಳ ದೆಶೆಯಿಂದಲೂ ಶ್ರವಣಾದಿಗಳನ್ನು ಮಾಡಬೇಕು ॥ ಸೂ ೪೫ ॥ ಅಧಿ. ೨೭ ॥

**ಲಿಂಗಭೂಯಸ್ತ್ವಾಧಿಕರಣವು ಸಮಾಪ್ತವಾಯಿತು.**

---

## ವಿಕಲ್ಪಾಧಿಕರಣವು.

**'ಓಂ ಪೂರ್ವವಿಕಲ್ಪಃ ಪ್ರಕರಣಾತ್ಸ್ಯಾತ್ಕ್ರಿಯಾ ಮಾನಸವತ್ ಓಂ'** ॥ ಸೂ. ॥ ೪೬ ॥

ಪೂರ್ವದಲ್ಲಿ ಗೃಹೀತರಾದ ಗುರುಗಳಿಂದ ಅನಂತರದಲ್ಲಿ ಪ್ರಾಪ್ತರಾದ ಗುರುಗಳನ್ನು ಸ್ವೀಕರಿಸಬೇಕೋ ಬೇಡವೋ ಎಂದು ವಿಕಲ್ಪವು ಆಗುವುದು. ಅಂದರೆ— ಮೊದಲಿನವರನ್ನು ಬಿಟ್ಟು ಮತ್ತೊಬ್ಬನನ್ನು ಸ್ವೀಕರಿಸಲೂಬಹುದು, ಬಿಡಲೂಬಹುದು. ಸ್ವೀಕರಿಸಲೇಬೇಕೆಂದು ವಿಧಿಯಿಲ್ಲ. ಚೆನ್ನಾಗಿ ಅನುಗ್ರಹವನ್ನು ಮಾಡುತ್ತಾರೆ ಎನ್ನುವ ನಿಮಿತ್ತದಿಂದ ಮತ್ತೊಬ್ಬನನ್ನು ಸ್ವೀಕರಿಸಬಹುದು. ಫಲದಿಂದ ಸಮುಗಳಾದ ಧ್ಯಾನಗಳಲ್ಲಿ ವಿಕಲ್ಪವಿದ್ದಂತೆಯೇ ॥ ॥ ಸೂ. ॥ ೪೬ ॥

**'ಓಂ ಅತಿದೇಶಾಚ್ಚ ಓಂ'** ॥ ಸೂ. ॥ ೪೭ ॥

'ಬ್ರಹ್ಮೋಪಾಸ್ವ' ಎನ್ನುವ ಶ್ರುತಿಯಲ್ಲಿ ಮೊದಲಿನ ಗುರುಗಳಿಂದ ಸಮರಾದ, ಅಥವಾ ಉತ್ತಮರಾದ ಗುರುಗಳನ್ನು ಸ್ವೀಕಾರಮಾಡುವುದಕ್ಕಾಗಿ ಅತಿದೇಶ ಮಾಡಿರುವುದರಿಂದಲೂ ಸಮರನ್ನೂ ಉತ್ತಮರನ್ನೂ ಸ್ವೀಕರಿಸಬಹುದು. ॥ ೪೭ ॥ ಅಧಿ. ॥ ೨೮ ॥

**ವಿಕಲ್ಪಾಧಿಕರಣವು ಸಮಾಪ್ತವಾಯಿತು.**

---

## ವಿದ್ಯಾಧಿಕರಣವು.

**'ಓಂ ವಿದ್ಯೈವ ತು ನಿರ್ಧಾರಣಾತ್ ಓಂ'** ॥ ಸೂ. ॥ ೪೮ ॥

ಬ್ರಹ್ಮಜ್ಞಾನವೇ ಮುಕ್ತಿಗೆ ಸಾಧನವು. ಕರ್ಮವಲ್ಲ, 'ನಾನ್ಯಃ ಪಂಥಾ ಅಯನಾಯ ವಿದ್ಯತೇ' ಎಂದು ಇತರವಾದುದನ್ನು ನಿರಾಕರಿಸಿ ಜ್ಞಾನಕ್ಕೇನೇ ಮುಕ್ತಿಕಾರಣತ್ವವನ್ನು ನಿರ್ಧರಿಸಿರುವುದರಿಂದ ॥ ಸೂ. ॥ ೪೮ ॥

**'ಓಂ ದರ್ಶನಾಚ್ಚ ಓಂ'** ॥ ಸೂ. ೪೯ ॥

ಬ್ರಹ್ಮಸಾಕ್ಷಾತ್ಕಾರದಿಂದಲೂ ಮುಕ್ತಿಯು. ಕೇವಲ ವಿದ್ಯೆಯಿಂದಲ್ಲ. ಧ್ಯಾನಕ್ಕೆ ವೈಯರ್ಥ್ಯವಿಲ್ಲ. 'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ' ಎನ್ನುವ ಶ್ರುತಿಯಿಂದಲೂ ಸಿದ್ಧಿಸುತ್ತದೆ. ॥ ಸೂ. ॥ ೪೯ ॥ ಅಧಿ. ॥ ೨೯ ॥

**ವಿದ್ಯಾಧಿಕರಣವು ಸಮಾಪ್ತವಾಯಿತು.**

---

# ಶ್ರುತ್ಯಧಿಕರಣವು.

**' ಓಂ ಶ್ರುತ್ಯಾದಿ ಬಲೀಯಸ್ತ್ವಾಚ್ಚ ನ ಬಾಧಃ ಓಂ ' ॥ ಸೂ. ೫೦ ॥**

ಜ್ಞಾನಕ್ಕೇನೇ ಮುಕ್ತಿಕಾರಣತ್ವವಿದ್ದರೂ 'ಕರ್ಮಣೈವ' ಎನ್ನುವ ಸ್ಮೃತಿಗೆ ಬಾಧವು ಇಲ್ಲ, 'ತಮೇವಂ ವಿದ್ವಾನ್' ಎನ್ನುವಶ್ರುತಿಗೂ 'ಕರ್ಮಣಾ ಬಧ್ಯತೇ ಜಂತುಃ' ಎನ್ನುವ ಸ್ಮೃತಿಗೂ 'ಇಂದ್ರೋಽಶ್ವಮೇಧಾನ್ ಶತಮಿಷ್ಟ್ವಾಪಿ' ಎನ್ನುವ ಶ್ರುತ್ಯುಕ್ತವಾದ ಬಹುಕರ್ಮಗಳನ್ನು ಮಾಡಿರತಕ್ಕ ಇಂದ್ರನಿಗೆ ಮೋಕ್ಷಕ್ಕಾಗಿ ತತ್ವಜ್ಞಾನ ಪ್ರಾರ್ಥನರೂಪವಾದ ಉಪಪತ್ತಿಗೂ ಪ್ರಾಬಲ್ಯವಿದ್ದುದರಿಂದ ॥ ಸೂ. ॥ ೫೦ ॥ ಅಧಿ. ॥ ೩೦ ॥

**ಶ್ರುತ್ಯಧಿಕರಣವು ಸಮಾಪ್ತವಾಯಿತು.**

---

# ಅನುಬಂಧಾಧಿಕರಣವು.

**' ಓಂ ಅನುಬಂಧಾದಿಭ್ಯಃ ಓಂ ' ॥ ಸೂ. ॥ ೫೧ ॥**

ಶ್ರವಣಾದಿಗಳಿಂದ ಉಂಟಾಗತಕ್ಕ ಬ್ರಹ್ಮಸಾಕ್ಷಾತ್ಕಾರವೂಕೂಡ ಹರಿಗುರು ಭಕ್ತ್ಯಾದಿಗಳಿಂದಲೇ ಆಗುತ್ತದೆ. ದ್ವೇಷಾದಿಗಳಿಂದ ಆಗುವುದಿಲ್ಲ. ॥ ಸೂ. ॥ ೫೧ ॥

(1)ಯೋಗಶಾಸ್ತ್ರದಲ್ಲಿ ಉಪಾಸನಾಕ್ಕೆ ಅಂಗವಾಗಿ ಯಮನಿಯಮಾದಿಗಳು ಉಪದಿಷ್ಟಗಳಾಗಿವೆ. ಅದರಲ್ಲಿ ಯಮನಿಯಮಾನುಷ್ಠಾನವು ಉಪಾಸನಾಂಗವಲ್ಲ. ಹೇಗೆಂದರೆ— ವಿಷ್ಣುಭಕ್ತಿ ಮೊದಲಾದ ಗುಣಗಳ ಸಂಪತ್ತಿಯು ವಿಷಯಸಂಸರ್ಗಮೊದಲಾದ ದೋಷವರ್ಜನವೂ ಕೂಡ ಯಮಶಬ್ದವಾಚ್ಯವು. ಈ ಯಮಗಳಿಗೆ ೧ ಉಪಾಸನಾ ಹುಟ್ಟುವುದರಲ್ಲಿ ಉಪಯೋಗವೋ? ೨ ಉಪಾಸನಾ ಫಲವಾದ ಜ್ಞಾನವು ಹುಟ್ಟುವುದರಲ್ಲಿ ಉಪಯೋಗವೋ? ೧ನೇದ್ದು ಕೂಡಲಾರದು. ವಿದ್ವೇಷಿಗಳಿಗೂ ನಿರಂತರಾನುಚಿಂತನರೂಪವಾದ ಉಪಾಸನೆಯು ದೃಷ್ಟವಾಗಿದೆ. ೨ನೇದ್ದು ಕೂಡಲಾರದು. ಭಕ್ತ್ಯಾದಿಗಳಿಂದ ಕೂಡಿಕೊಂಡು ಇರತಕ್ಕ ಉಪಾಸನವೇ ಬ್ರಹ್ಮಸಾಕ್ಷಾತ್ಕಾರವನ್ನು ಹುಟ್ಟಿಸುತ್ತದೆ, ಬೇರೆಪ್ರಕಾರವಲ್ಲವೆನ್ನುವಲ್ಲಿ ಪ್ರಮಾಣವಿಲ್ಲ. (2) ಮತ್ತು **'ದ್ವೇಷಾಚ್ಚೈದ್ಯಾದಯೋ ನೃಪಾಃ' 'ವೈರೇಣ ಯನ್ನೃಪತಯಃ'** ಇತ್ಯಾದಿಗಳಲ್ಲಿ ದ್ವೇಷಕ್ಕೆ ಮೋಕ್ಷಸಾಧನತ್ವವು ಪ್ರತೀತವಾಗುತ್ತದೆ. **'ದೃಷ್ಟ್ವೈವ ತಂ ಮುಚ್ಯತೇ ನಾಪರೇಣ'** ಎಂದು ಮೊಕ್ಷಕ್ಕೆ ದರ್ಶನೈಕಸಾಧ್ಯತ್ವವೂ ಪ್ರತೀತವಾಗುತ್ತದೆ. ಈ ಎರಡನ್ನೂ ಆಲೋಚಿಸುವಾಗ ದ್ವೇಷಕ್ಕೆ ದರ್ಶನಸಾಧನತ್ವವು ಅವಗತವಾಗುತ್ತದೆ. (3) ಹೀಗೆಯೇ ನಿಯಮ-ಆಸನ-ಪ್ರಾಣಾಯಾಮ-ಪ್ರತ್ಯಾಹಾರಗಳಿಗೂ ಉಪಾಸನಾಂಗತ್ವವನ್ನು ನಿರಾಕರಿಸಬೇಕು ಎಂದಾಶಂಕಾ ಬಂದರೆ— ಅದರ ಸಮಾಧಾನವನ್ನು **'ಅನುಬಂಧಾದಿಭ್ಯಃ'** ಎನ್ನುವುದರಿಂದ ಹೇಳುತ್ತಾರೆ. ಅಲ್ಲಿ ಯಾವ ಪಕ್ಷವು ಅಂಗೀಕೃತವಾಗಿದೆ, ಮತ್ತು ಅಲ್ಲಿ ಉಕ್ತದೋಷವು ಹೇಗೆ ಪರಿಹೃತವಾಯಿತು ಎಂದು ತಿಳಿಯಲ್ಪಡುವುದಿಲ್ಲ. ಆದಕಾರಣ ವ್ಯಾಖ್ಯಾನ ಮಾಡುತ್ತಾರೆ—

**ಮೂ ॥ ವಿಷಯೇಷು ಚ ಸಂಸರ್ಗಾಚ್ಚಾಪ್ಯಶ್ವತಸ್ಯ ಚ ಸಂಶಯಾತ್ ।**
**ಮನಸಾ ಚಾನ್ಯದಾಕಾಂಕ್ಷಾತ್ಪರಂ ನ ಪ್ರತಿಪದ್ಯತೇ ॥ ೧೮ ॥**

**ಇತಿ ಭಾರತವಾಕ್ಯಂ ಹಿ ತೇನೈತದ್ದೋಷವರ್ಜಿತಃ ।**
**ಸದೋಪಾಸನಯಾ ಯುಕ್ತೋ ವಾಸುದೇವಂ ಪ್ರಪಶ್ಯತಿ ॥ ೯೯ ॥**

ಅ ॥ ವಿಷಯೇಷು ಚ = ವಿಷಯಗಳಲ್ಲಿಯೂ, ಸಂಸರ್ಗಾತ್ = ಸಂಬಂಧದಿಂದಲೂ, (ಅಂದರೆ ವಿಷಯಸೇವನೆಯಿಂದ) ಶಾಶ್ವತಸ್ಯ ಚ=ಶಶ್ವದೇಕಪ್ರಕಾರನಾದ ಬ್ರಹ್ಮನ ವಿಷಯದಲ್ಲಿ, ಸಂಶಯಾತ್=ಸಂಶಯದಿಂದಲೂ, ಮನಸಾ ಚ=ಮನಸ್ಸಿನಿಂದಲೂ, ಅನ್ಯತ್=ಮುಕ್ತಿಯಿಂದ ಇತರವಾದ ವಿಷಯಸಮುದಾಯವನ್ನು ಕುರಿತು, ಆಕಾಂಕ್ಷಾತ್=ಇಚ್ಛೆಯಿರುವುದರಿಂದಲೂ, ಪರಂ = ಪರಬ್ರಹ್ಮನನ್ನು, ನ ಪ್ರತಿಪದ್ಯತೇ = ತಿಳಿಯುವುದಿಲ್ಲ. ಇತಿ = ಈ ಪ್ರಕಾರವಾದ, ಭಾರತವಾಕ್ಯಂ=ಭಾರತವಚನವು, ಹಿ=ಯಾವ ಕಾರಣದಿಂದ, (ವಿಷಯ ಸಂಸರ್ಗಮೊದಲಾದ ದೋಷಗಳಿಗೆ ಜ್ಞಾನವಿರೋಧಿತ್ವವನ್ನು ಹೇಳುತ್ತದೋ) ತೇನ=ಆ ಕಾರಣದಿಂದ, ಏತದ್ದೋಷ ವರ್ಜಿತ ಏವ = ವಿಷಯಕಾಮನಾಮೊದಲಾದ ದೋಷಗಳಿಂದ ರಹಿತನಾದವನೇ, ಸದಾ = ಯಾವಾಗಲೂ, ಉಪಾಸನಯಾ=ಉಪಾಸನೆಯಿಂದ, ಯುಕ್ತಃ=ಯುಕ್ತನು (ಆಗುತ್ತಾನೆ). ಹಾಗೆ ಯಾವಾಗಲೂ ಉಪಾಸನೆಯಿಂದ ಕೂಡಿದವನೇ ವಾಸುದೇವನನ್ನು ನೋಡುತ್ತಾನೆ.

ತಾ ॥ ಉಪಾಸನಾ ಹುಟ್ಟುವುದರಲ್ಲಿ ಯಮಗಳಿಗೆ ಅಂಗತ್ವವಿದೆ. ವಿಷಯ ಸೇವನಾದಿ ಗಳನ್ನು ಮಾಡುವ ಭಕ್ತಿವಿರಹಿತನಾದ ಪುರುಷನಿಗೆ ಸದಾ ಉಪಾಸನಾ ಕೂಡಲಾರದು. ಬೇರೆ ಕಡೆ ಆಸಕ್ತವಾದ ಮನಸ್ಸುಳ್ಳವನು ಅಲ್ಲಿ ಸ್ನೇಹರಹಿತನೂ ಕೂಡ ಅದನ್ನು ಯಾವಾಗಲೂ ಧ್ಯಾನಿಸುತ್ತಾನೆನ್ನುವುದು ಕೂಡಲಾರದು ॥ ೯೮ ॥ ೯೯ ॥

ಯಮಗಳನ್ನು ಅವಶ್ಯವಾಗಿ ಅನುಷ್ಠಾನಮಾಡಬೇಕೆನ್ನುವ ವಿಷಯದಲ್ಲಿ ಯುಕ್ತಿಯನ್ನೂ ಹೇಳುತ್ತಾರೆ—

**ಮೂ ॥ ದೋಷಾ ಅನಾದಿಸಂಬದ್ಧಾಸ್ತೇ ಮುಕ್ತಿಪರಿಪಂಥಿನಃ ।**
**ಸಂತ್ಯೇವ ಪ್ರಾಯಶಃ ಪುಂಸು ತೇನ ಮೋಕ್ಷೋ ನ ಜಾಯತೇ ॥**
**ಸರ್ವೇ ತ ಏತೇ ಜೀವೇಷು ದೃಶ್ಯಂತೇ ತಾರತಮ್ಯತಃ ॥ ೧೦೦ ॥**

ಅ ॥ ತೇ=ವಿಷ್ಣುಭಕ್ತ್ಯಭಾವವೇ ಮೊದಲಾದ ಮತ್ತು ವಿಷಯ ಸಂಸರ್ಗವೇ ಮೊದ ಲಾದ, ದೋಷಾಃ = ದೋಷಗಳು, ಮುಕ್ತಿಪರಿಪಂಥಿನಃ = ಮೋಕ್ಷಕ್ಕೆ ವಿರೋಧಿಗಳಾಗಿ, ಪ್ರಾಯಶಃ=ಹೆಚ್ಚಾಗಿ, ಪುಂಸು=ಪುರುಷರಲ್ಲಿ, ಅನಾದಿಸಂಬದ್ಧಾಃ=ಅನಾದಿಕಾಲವನ್ನಾರಂಭಿಸಿ ಸಂಬಂಧವುಳ್ಳವುಗಳಾಗಿ, ಸಂತ್ಯೇವ = ಇರುತ್ತವೆ. ತೇನ = ಆ ಕಾರಣದಿಂದ, (ಅವರಿಗೆ) ಮೋಕ್ಷಃ=ಮುಕ್ತಿಯು, ನ ಜಾಯತೇ=ಹುಟ್ಟುವುದಿಲ್ಲ, (ಆಗುವುದಿಲ್ಲ). (ಕೆಲವು ಸಂಸಾರಿ ಗಳೂ ಕೂಡ ರಾಗಾದಿ ದೋಷರಹಿತರೂ, ಬಾಲ-ಮುಗ್ಧ ಮೊದಲಾದ ಜೀವರೂ ಇರುತ್ತಾರೆ. ಆದಕಾರಣ ದೋಷಗಳು ಮೋಕ್ಷಾಭಾವಕ್ಕೆ ಕಾರಣಗಳು ಹೇಗೆ ಎಂದರೆ—) ಜೀವೇಷು= ಉದಾಹೃತರಾದ ಬಾಲ-ಮುಗ್ಧ ಮೊದಲಾದ ಜೀವರಲ್ಲಿಯೂ, ತ ಏತೇ ಸರ್ವೇ = ಭಗವ ದ್ಭಕ್ತ್ಯಭಾವ ಮೊದಲಾದ ಆ ಈ ದೋಷಗಳು, ತಾರತಮ್ಯತಃ=ನೀಚೋಚ್ಚಭಾವದಿಂದಲೇ, ದೃಶ್ಯಂತೇ=ಕಾಣಲ್ಪಡುತ್ತವೆ.

ತಾ ॥ ನ್ಯಾಯಸುಧಾ— (1) ಮೋಕ್ಷಯೋಗ್ಯರಾದ ಮುಮುಕ್ಷುಗಳಿಗೂ ಕೂಡ ಈಗ ಲಾದರೂ ಮೋಕ್ಷವು ಉಂಟಾಗುವುದಿಲ್ಲ. ಕಾರಣವೇನೆಂದರೆ— ಭಗವತ್ಪ್ರಸಾದವಿಲ್ಲದಿರುವುದರಿಂದ

ಎಂದರೆ— ಭಗವತ್ಪ್ರಸಾದಾಭಾವಕ್ಕೂ ಕಾರಣವು ಯಾವುದು? ಜ್ಞಾನಾಭಾವವು ಎಂದರೆ—ಜ್ಞಾನಾಭಾವವೂ ಯಾವುದರಿಂದ ಎಂದರೆ— ಧ್ಯಾನಾಭ್ಯಾಸವಿಲ್ಲದಿರುವುದರಿಂದ, ಎಂದರೆ ಹಾಗೆ ಹೇಳಕೂಡದು. (2) ಮತ್ತು ಧ್ಯಾನಾಭ್ಯಾಸವೂ ಕೂಡ ಯಾವುದರಿಂದ ಇಲ್ಲವೆಂದು ಹೇಳಬೇಕು? ಶ್ರವಣಾದಿಗಳು ಇಲ್ಲದಿರುವುದರಿಂದ ಎಂದರೆ— ಶ್ರವಣಾದಿ ಸದ್ಭಾವವೂ ಏಕೆ ಇಲ್ಲ? ಆದುದರಿಂದ ದೋಷಗಳೇ ಶ್ರವಣಾದ್ಯುತ್ಪತ್ತಿಯನ್ನು ಪ್ರತಿಬಂಧಿಸುವವುಗಳಾಗಿ ಮೋಕ್ಷಕ್ಕೆ ವಿರೋಧಿಗಳೆಂದು ತಿಳಿಯಲ್ಪಡುತ್ತವೆ. ಆಗಂತುಕ ದೋಷಗಳಿಗೆ ಅನಾದಿಯಾದ ಮೋಕ್ಷಾಭಾವ ಹೇತುತ್ವವು ಕೂಡುವುದಿಲ್ಲವೆನ್ನುವುದು ಯುಕ್ತವಲ್ಲ. ದೋಷಗಳೂ ಕೂಡ ಪ್ರವಾಹತಃ ಅನಾದಿಯಾಗಿವೆ. (3) ಬಾಲ-ಮುಗ್ಧಾದಿ ಜೀವರಲ್ಲಿ ಭಗವದ್ಭಕ್ತ್ಯಭಾವಾದಿ ದೋಷಗಳು ಪ್ರತ್ಯಕ್ಷ ಅನುಮಾನಗಳಿಂದ ದೃಷ್ಟಗಳೇ ಆಗಿವೆ. ರಾಗದ್ವೇಷಾದಿಗಳೂ ಕೂಡ ಪುರುಷರಲ್ಲಿ ತಾರತಮ್ಯಾನುಸಾರವಾಗಿಯೇ ಇರುತ್ತವೆ. ಆ ದೋಷಗಳು ೧ ಪ್ರಸುಪ್ತ (ಅವ್ಯಕ್ತಗಳು), ೨ ತನು (ಅಲ್ಪಗಳು), ೩ ವಿಚ್ಛಿನ್ನ (ಬಹುಶಃ ವ್ಯಕ್ತಗಳಾದಾಗ್ಯೂ ಯಾವಾಗಲೂ ಅವಿದ್ಯಮಾನಗಳು), ೪ ಉದಾರ (ಯಾವಾಗಲೂ ಪ್ರಕಟಗಳಾದವುಗಳು) ಎನ್ನುವ ಭೇದದಿಂದ ನಾಲ್ಕು ವಿಧಗಳು. ಆದಕಾರಣ ಬಾಲಾದಿಗಳಲ್ಲಿ ಸದಾ ಪ್ರಕಟಗಳಾದ ರಾಗಾದಿ ದೋಷಗಳು ಇಲ್ಲದಿರುವುದರಿಂದ ಇಲ್ಲವೆಂದು ಅಭಿಮಾನಮಾತ್ರವು. ಸ್ತನ್ಯಪಾನಾದಿಗಳ ಇಚ್ಛಾದಿಗಳು ಅವರಲ್ಲಿಯೂ ಕಂಡಿವೆ. ಆದಕಾರಣ ಹೀಗೆಯೇ ಎಲ್ಲರಲ್ಲಿಯೂ ಎಲ್ಲಾ ದೋಷಗಳೂ ಪ್ರಮಿತಗಳಾಗಿವೆ. ॥ ೧೦೦ ॥

ಹೀಗೆ ಎಲ್ಲಾ ದೋಷಗಳೂ ಸರ್ವರಲ್ಲಿಯೂ ಪ್ರಮಿತಗಳಾಗಿವೆ ಎಂದು ಹೇಳಿದ್ದು ಯುಕ್ತವು. ಆದರೂ ಎಲ್ಲರಲ್ಲಿಯೂ ಈ ರಾಗಾದಿ ಎಲ್ಲಾ ದೋಷಗಳು ಇವೆ ಎಂದು ಹೇಳಿದ್ದು ಸರಿಯಲ್ಲ ಏಕೆಂದರೆ- ಋಜುಗಳೆನ್ನುವ ಚತುರ್ಮುಖಪದಪ್ರಾಪ್ತಿಗೆ ಯೋಗ್ಯರಾದ ಸಂಸಾರಿಗಳಾದ ಪುರುಷರು ಇದ್ದಾರೆ. ಆ ಋಜುಗಳು ದೋಷಿಗಳು ಎಂದು ಹೇಳಲಿಕ್ಕೆ ಬರುವುದಿಲ್ಲ. ಏಕೆಂದರೆ- ಅವರಲ್ಲಿಯೂ ದೋಷಗಳು ಇದ್ದರೆ ನಿರ್ದೋಷತ್ವರೂಪವಾದ ಋಜುತ್ವವೇ ಕೂಡಲಾರದು. ಆದಕಾರಣ ಎಲ್ಲರಲ್ಲಿಯೂ ದೋಷಗಳು ಇವೆ ಎಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ—

**ಮೂ ॥ ಋಜೂನಾಮೇಕ ಏವಾಸ್ತಿ ಪರಮೋತ್ಸಾಹವರ್ಜನಂ॥ ೧೦೧ ॥**
**ಸ ಗುಣಾಲ್ಪತ್ವಮಾತ್ರತ್ವಾನ್ನರ್ಜುತ್ವೇನ ವಿರುಧ್ಯತೇ ।**
**ಅತೋ ವಿಷ್ಣೌ ಪರಾ ಭಕ್ತಿಸ್ತದ್ಭಕ್ತೇಷು ರಮಾದಿಷು ॥ ೧೦೨ ॥**
**ತಾರತಮ್ಯೇನ ಕರ್ತವ್ಯಾ ಪುರುಷಾರ್ಥಮಭೀಪ್ಸತಾ ।**
**ಸ್ವಾದರಃ ಸರ್ವಜಂತೂನಾಂ ಸಂಸಿದ್ಧೋ ಹಿ ಸ್ವಭಾವತಃ ॥ ೧೦೩ ॥**
**ತತೋಽಧಿಕಃ ಸ್ವೋತ್ತಮೇಷು ತದಾಧಿಕ್ಯಾನುಸಾರತಃ ।**
**ಕರ್ತವ್ಯೋ ವಾಸುದೇವಾಂತಂ ಸರ್ವಥಾ ಶುಭಮಿಚ್ಛತಾ ।**
**ನ ಕದಾಚಿತ್ಸ್ವಜೀತ್ತಂ ಚ ಕ್ರಮೇಣೈನಂ ವಿವರ್ಧಯೇತ್ ॥ ೧೦೪ ॥**

ಅ ॥ ಋಜೂನಾಂ=ಋಜುಗಳಿಗೆ, ಪರಮೋತ್ಸಾಹವರ್ಜನಂ=ಮೋಕ್ಷಕ್ಕಾಗಿ ಮಹಾ ಪ್ರಯತ್ನವನ್ನು ಬಿಡೋಣವೆಂಬ, ಏಕ ಏವ=ಇದು ಒಂದೇ ದೋಷವು, ಅಸ್ತಿ=ಇದೆ. (ದೋಷಗಳು ಹೆಚ್ಚು ಇಲ್ಲವೆನ್ನುವ ಅಭಿಪ್ರಾಯದಿಂದ ಋಜುತ್ವವು ಕೂಡುತ್ತದೆ) (ಪ್ರಕಾರಾಂತರದಿಂದಲೂ ವಿರೋಧವನ್ನು ಪರಿಹರಿಸುತ್ತಾರೆ.) ಸಃ=ಪರಮೋತ್ಸಾಹವರ್ಜನರೂಪವಾದ(ಅಂದರೆ–

ಅತ್ಯಂತ ಉತ್ಸಾಹವನ್ನು ಬಿಡುವಿಕೆ ಎನ್ನುವುದು) ದೋಷವು, (ಯದ್ಯಪಿ ಮಹತ್ತಾದ ಉದ್ಯೋಗಾಭಾವವು ಹೇಯವಾಗಿರುವುದರಿಂದ ದೋಷವೇ. ಆದಾಗ್ಯೂ ರಾಗಾದಿಗಳಂತೆಯೇ ಭಾವ ರೂಪವಲ್ಲ. ಗುಣಾಭಾವರೂಪವೂ ಅಲ್ಲ. ಮತ್ತೆ) ಗುಣಾಲ್ಪತ್ವಮಾತ್ರತ್ವಾತ್=ಉತ್ಸಾಹರೂಪವಾದ ಕೇವಲ ಗುಣಾಲ್ಪತ್ವರೂಪವಾಗಿರುವುದರಿಂದ (ಅದೋಷವೆಂದೂ ಹೇಳಲ್ಪಡುತ್ತದೆ.) ಇತಿ=ಆದಕಾರಣ, ಋಜುತ್ವೇನ=ನಿರ್ದೋಷತ್ವದಿಂದ, ನ ವಿರುಧ್ಯತೇ=ವಿರುದ್ಧವಾಗುವುದಿಲ್ಲ. (ಹೀಗೆ ಸಂಸಾರಕಾರಣಗಳಾದ ಮುಕ್ತಿಗೆ ವಿರೋಧಿಗಳಾದ ದೋಷಗಳು ಎಲ್ಲರಲ್ಲಿಯೂ ಇವೆ ಎಂದಾದರೆ ಪ್ರಕೃತವೇನಾಯಿತೆಂದರೆ—) ಅತಃ = ಆದಕಾರಣ, ವಿಷ್ಣೌ=ಶ್ರೀ ಹರಿಯಲ್ಲಿ, ಪರಾ ಭಕ್ತಿಃ = ಸರ್ವೋತ್ಕೃಷ್ಟವಾದ ಭಕ್ತಿಯು, ತದ್ಭಕ್ತೇಷು = ವಿಷ್ಣುಭಕ್ತರಾದ, ರಮಾದಿಷು= ಲಕ್ಷ್ಮ್ಯಾದಿಗಳಲ್ಲಿ, ಪುರುಷಾರ್ಥಂ=ಮೋಕ್ಷಾಖ್ಯ ಪುರುಷಾರ್ಥವನ್ನು, ಅಭೀಪ್ಸತಾ=ಇಚ್ಛಿಸತಕ್ಕ ಪುರುಷನಿಂದ, ತಾರತಮ್ಯೇನ = ನೀಚೋಚ್ಚಭಾವದಿಂದಲೇ, ಕರ್ತವ್ಯಾ = ಮಾಡತಕ್ಕದು. (ಅಂದರೆ— ಮೋಕ್ಷೇಚ್ಛಾಯಿದ್ದವನು ವಿಷ್ಣುಭಕ್ತ್ಯಭಾವ ಮೊದಲಾದ ಮತ್ತು ವಿಷಯಸಂಸರ್ಗ ಮೊದಲಾದ ದೋಷಗಳನ್ನು ಮೋಕ್ಷಾದಿಗಳಿಗೆ ವಿರೋಧಿಗಳಾಗಿರುವುದರಿಂದ ಬಿಡಬೇಕು. ಯಾವುದಕ್ಕೆ ಯಾವುದು ವಿರೋಧಿಯೋ ಅದನ್ನು ಇಚ್ಛಿಸುವವನು ಅದನ್ನು ಬಿಡಲೇಬೇಕು. ತಥಾಚ ವಿಷ್ಣುಭಕ್ತ್ಯಾದಿಗಳನ್ನು ಮಾಡಬೇಕೆಂದು ಸಿದ್ಧಿಸುತ್ತದೆ ) (ವಿಷ್ಣುವಿನಲ್ಲಿ ಉತ್ಕೃಷ್ಟವಾದ ಭಕ್ತಿಯು ಬೇರೆ ಕಡೆ ತಾರತಮ್ಯದಿಂದ ಎಂದು ಹೇಳಿದ್ದನ್ನು ವಿವರಣಮಾಡುತ್ತಾರೆ ) ಸರ್ವ ಜಂತೂನಾಂ=ಎಲ್ಲಾ ಜಂತುಗಳಿಗೂ, ಸ್ವಾದರಃ=ಚೆನ್ನಾಗಿ ಆದರವು, ಸ್ವಭಾವತಃ=ಉಪಕಾರಾದಿ ಕರಣವನ್ನು ಅಪೇಕ್ಷಿಸದೆ, ಸಂಸಿದ್ಧಃ=ಅನಾದಿಸಿದ್ಧವಾಗಿದೆ. ಹಿ=ಪ್ರಸಿದ್ಧವು. (ಅಂದರೆ— ಇಲ್ಲದಿದ್ದರೆ ನಾನು ಸುಖಿಯೇ ಆಗಬೇಕು. ಯಾವಾಗಲೂ ದುಃಖಿಯು ಆಗಬಾರದು. ಎನ್ನುವ ಇಚ್ಛೆಯು ಇಲ್ಲದೆ ಹೋಗಬೇಕಾಗುವುದು.) ಸರ್ವಥಾ=ಸರ್ವಪ್ರಕಾರದಿಂದಲೂ, ಶುಭಂ= ಮಂಗಲವನ್ನು, ಇಚ್ಛತಾ=ಇಚ್ಛಿಸತಕ್ಕ ಪುರುಷನಿಂದ, ತತಃ=ಸ್ವವಿಷಯಕವಾದ ಆದರದೆಶೆಯಿಂದ, ಅಧಿಕಃ=ಹೆಚ್ಚಾದ ಆದರವು, ಸ್ವೋತ್ತಮೇಷು=ತನ್ನಕ್ಕಿಂತ ಉತ್ತಮರಾದವರಲ್ಲಿ, (ಮಾಡತಕ್ಕದು.) ಹೀಗೆ, ವಾಸುದೇವಾಂತಂ=ವಾಸುದೇವ ಪರ್ಯಂತವಾಗಿ ಅವರವರ ಆಧಿಕ್ಯವನ್ನು ಅನುಸರಿಸಿ, ಅಧಿಕಃ=ಹೆಚ್ಚಾದ ಆದರವು, ಕರ್ತವ್ಯಃ=ಮಾಡತಕ್ಕದು. (ವಾಸುದೇವನಲ್ಲಿ ಆದರೂ ನಿರತಿಶಯ ಸ್ನೇಹವನ್ನು ಮಾಡಬೇಕು.) (ಸಕೃದನುಷ್ಠೇಯ, ಅಸಕೃದನುಷ್ಠೇಯ, ಸದಾನುಷ್ಠೇಯ ಭೇದದೆಶೆಯಿಂದ ಅಂಗವು ಅನೇಕ ವಿಧವಾಗಿದೆ. ಇದು ಹೇಗೆಂದರೆ—) ಕದಾಚಿತ್=ಯಾವಾಗಲೂ, ತಂ=ಆ ವಿಷ್ಣ್ವಾದ್ಯಾದರವನ್ನು, ನ ತ್ಯಜೇತ್=ಬಿಡಬಾರದು. (ಈ ವಿಷ್ಣ್ವಾದ್ಯಾದರವನ್ನು ಬಿಡಬಾರದೆಂದು ಮಾತ್ರವಲ್ಲ, ಮತ್ತೆ) ಕ್ರಮೇಣ=ಕಾಲಕ್ರಮದಿಂದ, ಏನಂ=ಈ ಆದರವನ್ನು, ವಿವರ್ಧಯೇಚ್ಚ=ಅಭಿವೃದ್ಧಿಯನ್ನೂ ಮಾಡಬೇಕು ॥ ೧೦೧ ॥ ೧೦೨ ॥ ॥ ೧೦೩ ॥ ೧೦೪ ॥

ತನ್ನ ಸಮಾನಿಕರಲ್ಲಿಯೂ ತನ್ನಕ್ಕಿಂತ ಅಧಮರಲ್ಲಿಯೂ ಹೇಗೆ ಎಂದರೆ—

**ಮೂ ॥ ಸಮೇಷು ಸಾತ್ಮವತ್ಸ್ನೇಹಃ ಸತ್ಸ್ವನ್ಯತ್ರ ತತೋ ದಯಾ ॥ ೧೦೫ ॥**
**ಕಾರ್ಯೈವಮಾಪರೋಕ್ಷ್ಯೇಣ ದೃಶ್ಯತೇ ಕ್ಷಿಪ್ರಮೀಶ್ವರಃ ।**
**ತತ್ತಮೋಽಧಂ ವ್ರಜೇದ್ವಿಷ್ಣುಸಮತ್ವಂ ಯೋಽನುಪಶ್ಯತಿ ॥ ೧೦೬ ॥**
**ರಮಾಬ್ರಹ್ಮಶಿವಾದೀನಾಮಪಿ ಮುಕ್ತೌ ಕಥಂಚನ ।**
**ಕಿಮುತಾಧಿಕ್ಯದೃಷ್ಟೇಸ್ತದ್ಗುಣಾಭಾವಮತೇರಪಿ ॥ ೧೦೭ ॥**

**ದೋಷವೇತ್ತುರಭೇದಸ್ಯ ದ್ರಷ್ಟುರ್ದ್ರಷ್ಟುಸ್ತಥೋಭಯೋಃ ।**
**ಇತ್ಯಾಹ ಸಚ್ಛ್ರುತಿಸ್ತೇನ ಸಂಪ್ರೋಕ್ತಗುಣಸಂಯುತಃ (ತಂ) ।**
**ಉಪಾಸೀತ ಹರಿಂ ದೃಷ್ಟ್ವಾ ಮುಕ್ತಿಸ್ತೇನೈವ ಜಾಯತೇ ॥ ೧೦೮ ॥**

ಅ ॥ ಸಮೇಷು=ಸಮಾನಿಕರಾದವರಲ್ಲಿ, ಸ್ವಾತ್ಮವತ್ = ತನ್ನಂತೆಯೇ, ಸ್ನೇಹಃ= ಸ್ನೇಹವು, ಕರ್ತವ್ಯಃ=ಮಾಡತಕ್ಕದು. ತತಃ = ಉತ್ತಮರಿಂದಲೂ, ಸಮಾನಿಕರಿಂದಲೂ, ಅನ್ಯತ್ರ=ಅಧಮರಾದ, ಸತ್ಸು=ಸಜ್ಜನರಲ್ಲಿ, ದಯಾ=ದಯೆಯು, ಕಾರ್ಯಾ=ಮಾಡತಕ್ಕದು. (' ಸತ್ಸು ' ಎಂದೇ ಹೇಳಿದರೆ ಆಗ ಉತ್ತಮ ಸಮರಲ್ಲಿಯೂ ಬರುವುದು. ' ತತೋಽನ್ಯತ್ರ ' ಎಂದೇ ಹೇಳಿದರೆ ಅಸಜ್ಜನರಲ್ಲಿಯೂ ಬರಬೇಕಾಗುವುದು. ಆದಕಾರಣ ಉತ್ತಮ-ಸಮ-ಅಧಮರೂಪ ವರ್ಗತ್ರಯುದ್ದೇಶಿಯಿಂದ ಇತರರಾದ ಅಜ್ಞರಲ್ಲಿ ಔದಾಸೀನ್ಯವು; ವಿಪರೀತರಲ್ಲಿ ವೈಪರೀತ್ಯವು.) ಏವಂ=ಹೀಗೆ ಮಾಡಿದರೆ (ಯಮಗಳಿಗೆ ಉಪಾಸನಾಹುಟ್ಟುವುದರಲ್ಲಿಯೂ, ಜ್ಞಾನವು ಹುಟ್ಟುವುದರಲ್ಲಿಯೂ, ಮೋಕ್ಷದ ಅತಿಶಯದಲ್ಲಿಯೂ ಅಂಗತ್ವವೆಂದು ಸೂಚಿಸುವುದಕ್ಕಾಗಿ ಪುರುಷಾರ್ಥವನ್ನು ಇಚ್ಛಿಸತಕ್ಕವನೆಂದೂ, ಶುಭವನ್ನು ಇಚ್ಛಿಸುವವನೆಂದೂ ಹೇಳಿಯದೆ.) ಆಪರೋಕ್ಷ್ಯೇಣ= ಪ್ರತ್ಯಕ್ಷವಾಗಿ, ಈಶ್ವರಃ=ಶ್ರೀ ಹರಿಯು, ಕ್ಷಿಪ್ರಂ=ಶೀಘ್ರವಾಗಿ, ದೃಶ್ಯತೇ=ಕಾಣಲ್ಪಡುತ್ತಾನೆ. (ಇತಿ=ಹೀಗೆ ವಿಚಿತ್ರವಾದ ಉಕ್ತಿಯು.) (ದೋಷವನ್ನು ಬಿಡುವುದರಲ್ಲಿಯೂ ವಿಶೇಷವದೆ. ರಾಗಾದಿಗಳಾದರೂ ಸಂಸಾರವನ್ನು ಹೊಂದಿಸುತ್ತವೆ. ವಿಪರೀತ ಜ್ಞಾನಾದಿಗಳಾದರೂ ನಿತ್ಯ ನರಕವನ್ನು ಹೊಂದಿಸುತ್ತವೆ. ಆದಕಾರಣ ವಿಪರೀತ ಜ್ಞಾನಾದಿಗಳು ರಾಗಾದಿಗಳಿಂದ ಅತಿಶಯವಾಗಿ ಬಿಡಲರ್ಹಗಳು ಎನ್ನುವ ಅಭಿಪ್ರಾಯದಿಂದ ಶ್ರುತಿಯನ್ನು ಹೇಳುತ್ತಾರೆ) ಯಃ= ಯಾವಾತನು, ರಮಾಬ್ರಹ್ಮಶಿವಾದೀನಾಂ = ಲಕ್ಷ್ಮೀ-ಬ್ರಹ್ಮ-ಶಿವಾದಿಗಳಿಗೆ, ವಿಷ್ಣುಸಮತ್ವಂ= ವಿಷ್ಣುಸಾಮ್ಯವನ್ನು, ಅನುಪಶ್ಯತಿ=ತಿಳಿಯುತ್ತಾನೋ, (ಸಂಸಾರದಲ್ಲಿ ಮಾತ್ರವಲ್ಲ ಮತ್ತೆ) ಮುಕ್ತಾವಪಿ=ಮುಕ್ತಿಯಲ್ಲಿಯೂ ಕೂಡ, ಕಥಂಚನ = ಯಾವ ಧರ್ಮದಿಂದಲೂ, ವಿಷ್ಣುಸಮತ್ವಂ = ವಿಷ್ಣುಸಾಮ್ಯವನ್ನು ತಿಳಿಯುತ್ತಾನೋ, (ಆತನು) ತತ್ = ಪ್ರಸಿದ್ಧವಾದ, ಅಂಧಂ ತಮಃ=ಅಂಧಂತಮಸ್ಸನ್ನು, ವ್ರಜೇತ್ = ಹೊಂದುವನು. ರಮಾಬ್ರಹ್ಮಶಿವಾದೀನಾಂ= ಲಕ್ಷ್ಮೀ-ಬ್ರಹ್ಮ-ಶಿವಾದಿಗಳಿಗೆ, ಆಧಿಕ್ಯದೃಷ್ಟೇಃ = ವಿಷ್ಣುವಿನದೆಶೆಯಿಂದ ಉತ್ತಮತ್ವಜ್ಞಾನವುಳ್ಳ, ಮತ್ತು ತದ್ಗುಣಾಭಾವಮತೇರಪಿ = ಆ ವಿಷ್ಣುವಿಗೆ ಗುಣಾಭಾವಜ್ಞಾನವುಳ್ಳ, ಮತ್ತು, ದೋಷವೇತ್ತುಃ=ದೋಷಗಳನ್ನು ತಿಳಿದಿರುವ, ಅಭೇದಸ್ಯ ದ್ರಷ್ಟುಃ=ಜೀವರಿಂದಲೂ ಜಡಗಳಿಂದಲೂ ಅಭೇದವನ್ನು ಕಾಣತಕ್ಕ, ತಥಾ=ಹಾಗೆಯೇ, ಉಭಯೋಃ = ಭೇದಾಭೇದಗಳನ್ನು, ದ್ರಷ್ಟುಃ= ಕಾಣತಕ್ಕ ಪುರುಷನಿಗೆ, ಕಿಮುತ = (ಅಂಧಂತಮಸ್ಸಿನ ಪ್ರಾಪ್ತಿಯಾಗುತ್ತದೆಂದು ಏನು ಹೇಳಬೇಕು.) ಇತಿ=ಹೀಗೆ, ಸಚ್ಛ್ರುತಿಃ=ಸಮೀಚೀನವಾದ ಶ್ರುತಿಯು, ಆಹ=ಹೇಳುತ್ತದೆ. (ತನ್ನ ಪಕ್ಷಸಾಧನವನ್ನುಪಸಂಹಾರಮಾಡುತ್ತಾರೆ) ತೇನ=ಅದರಿಂದ, ಸಂಪ್ರೋಕ್ತಗುಣಸಂಯುತಃ= ಮೊದಲು ಚೆನ್ನಾಗಿ ಹೇಳಲ್ಪಟ್ಟ ವಿಷಯಸಂಸರ್ಗವರ್ಜನ ಮೊದಲಾದ ಗುಣಗಳಿಂದ ಅಥವಾ ಯೋಗಶಾಸ್ತ್ರದಲ್ಲಿ ಹೇಳಲ್ಪಟ್ಟ ಯಮಮೊದಲಾದ ಅಂಶಭೂತಗಳಾದ ಗುಣಗಳಿಂದ ಕೂಡಿದವನಾಗಿ, ಉಪಾಸೀತ = ಉಪಾಸನಮಾಡತಕ್ಕದು. ಅಥವಾ ಸಂಪ್ರೋಕ್ತಗುಣಸಂಯುತಂ= ಚೆನ್ನಾಗಿ ಹೇಳಲ್ಪಟ್ಟ ಜ್ಞಾನಾನಂದಾದಿಗುಣಗಳಿಂದ ಕೂಡಿದ, ಹರಿಂ=ಶ್ರೀ ಪರಮಾತ್ಮನನ್ನು, ತೇನೈವ=ಅಂತಹ ಉಪಾಸನದಿಂದಲೇ, ದೃಷ್ಟ್ವಾ=ನೋಡಿ, (ಪ್ರಾರಬ್ಧ ಕರ್ಮಗಳನ್ನು ಭೋಗದಿಂದಲೂ, ಇತರಗಳನ್ನು ಜ್ಞಾನಾಗ್ನಿಯಿಂದಲೂ ನಿರಾಕರಿಸತಕ್ಕವನಿಗೆ) ಮುಕ್ತಿಃ=ಮೋಕ್ಷವು, ಜಾಯತೇ=ಉಂಟಾಗುತ್ತದೆ ॥ ೧೦೫ ॥ ೧೦೬ ॥ ೧೦೭ ॥ ೧೦೮ ॥

ಈಗ ಭಗವದ್ದ್ವೇಷಿಗಳಿಗೂ ಪುರಾಣದಲ್ಲಿ ಮುಕ್ತಿಯು ಹೇಳಲ್ಪಡುತ್ತದೆ ಎನ್ನುವುದು ಯಾವುದೋ ಅದನ್ನು ನಿರಾಕರಿಸುತ್ತಾರೆ—

ವ್ಯಾ ॥ ದ್ವೇಷಾದ್ಯನ್ಮುಕ್ತಿಕಥನಂ ಶ್ರುತಿವಾಕ್ಯವಿರೋಧಿ ತತ್ ॥ ೧೦೯ ॥
ರಿಪವೋ ಯೇ ತು ರಾಮಸ್ಯ ವಿಮುಖತ್ವಾನ್ನಿರಾಮಿಣಃ ।
ಅಭಿದ್ರೋಹಪದೇ ನಿತ್ಯಮಂಧೇತಮಸಿ ತೇ ಸ್ಥಿತಾಃ ॥ ೧೧೦ ॥
ಹರಿದ್ವಿಷಸ್ತಮೋ ಯಾಂತಿ ಯೇ ಚೈವ ತದಭೇದಿನಃ ।
ತನ್ನಿರ್ಗುಣತ್ವವೇತ್ತಾರಸ್ತಸ್ಯ ದೋಷವಿದೋಽಪಿ ಚ ।
ಇತ್ಯಾದಿ ಶ್ರುತಿಸಂದರ್ಭಾದ್ದ್ವೇಷಿಣಸ್ತಮ ಈಯತೇ ॥ ೧೧೧ ॥

ಅ ॥ ದ್ವೇಷಾತ್=ದ್ವೇಷದೆಶೆಯಿಂದ, ಯತ್=ಯಾವುದು, ಮುಕ್ತಿಕಥನಂ=ಮುಕ್ತಿಯನ್ನು ಹೇಳಿಯದೋ, ತತ್=ಅದು, ಶ್ರುತಿವಾಕ್ಯವಿರೋಧಿ = ಶ್ರುತಿವಾಕ್ಯಕ್ಕೆ ವಿರೋಧಿಯಾದುದು, (ಆದಕಾರಣ ಬೇರೆಪ್ರಕಾರ ವ್ಯಾಖ್ಯಾನಮಾಡತಕ್ಕದು.) (ಶ್ರುತಿವಾಕ್ಯವು ಯಾವುದೆಂದರೆ— **'ಮಾನಸ್ತೇನೇಭೋ ಯೇ ಅಭಿದ್ರುಹಸ್ಪದೇ ನಿರಾಮಿಣೋ ರಿಪವೋಽನ್ನೇಷು ಜಾಗೃಧುಃ'** ಯಾರು ಸುಖರೂಪಿಯಾದ ಶ್ರೀ ಹರಿಯಿಂದ ನಿಷ್ಕ್ರಾಂತರಾಗಿ ಅಂದರೆ, ಅವನಲ್ಲಿ ಭಕ್ತಿಯಿಲ್ಲದಿದ್ದವರು ಮತ್ತು ಅವನಿಗೆ ಶತ್ರುಗಳಾಗಿ ವಿಷಯಭೋಗಗಳಲ್ಲಿ ಯಾರು ಆಸಕ್ತರಾಗಿರುವರೋ ಅವರು ಪೂರ್ಣ ದ್ರೋಹಕ್ಕೆ ಸ್ಥಾನವಾದ ಅಂಧಂತಮಸ್ಸಿನಲ್ಲಿ ಇರಲು ಯೋಗ್ಯರು. ಆದಕಾರಣ ಅಂತಹ ಸ್ತೇನರಿಗೋಸ್ಕರ ನಮ್ಮನ್ನು ಹೇಳಬೇಡ; ನನ್ನ ಶಾಸ್ತ್ರಶ್ರವಣವುಳ್ಳವನು ದುಃಖವನ್ನು ಹೊಂದಲು ಯೋಗ್ಯನಾಗುವುದಿಲ್ಲ ಎಂದು ವಾಯುದೇವರನ್ನು ಕುರಿತು ವಿದ್ಯಾದೇವತೆಯು ವಚನವು, ಎನ್ನುವುದನ್ನು ಅರ್ಥತಃ ಪಠನಮಾಡುತ್ತಾರೆ ) ಯೇ ತು=ಯಾರು, ರಾಮಸ್ಯ=ರಾಮನಿಗೆ, ರಿಪವಃ = ಶತ್ರುಗಳೋ, ರಾಮಸ್ಯ=ರಾಮನಿಗೆ, ವಿಮುಖತ್ವಾತ್=ವಿಮುಖರಾಗಿರುವುದರಿಂದ, ನಿರಾಮಿಣಃ = (ರಾಮಃ=ರಮಣವು, ಅಸ್ಯಾಸ್ತೀತಿ ರಾಮೀ=ಶ್ರೀ ಹರಿಯು, 'ರಾಮಿಣಃ ನಿಷ್ಕ್ರಾಂತಾಃ ನಿರಾಮಿಣಃ' ಎನ್ನುವ ವ್ಯುತ್ಪತ್ತಿಯಿಂದ) ಸುಖರೂಪಿಯಾದ ಶ್ರೀ ಹರಿಯನ್ನು ಅತಿಕ್ರಮಿಸಿದವರು ಅಂದರೆ ಭಕ್ತಿವಿರಹಿತರೋ (ಆದುದರಿಂದಲೇ) ರಾಮನಿಗೆ ಶತ್ರುಗಳೋ, ತೇ=ಅವರು, ಅಭಿದ್ರೋಹಪದೇ=ಅಭಿತಃ ದ್ರೋಹಕ್ಕೆ ಸ್ಥಾನವಾದ, ಅಂಧೇ ತಮಸಿ=ಅಂಧಂತಮಸ್ಸಿನಲ್ಲಿ, ನಿತ್ಯಂ=ನಿರಂತರದಲ್ಲಿಯೂ, ಸ್ಥಿತಾಃ=ಇರತಕ್ಕವರು ಆಗುತ್ತಾರೆ. ಹರಿದ್ವಿಷಃ=ಭಗವದ್ವೇಷಿಗಳು, ಯೇ ಚೈವ = ಯಾರು ತಾನೇ, ತದಭೇದಿನಃ = ಶ್ರೀ ಹರಿಗೆ ಜೀವಾದಿಗಳಿಂದ ಅಭೇದವಾದಿಗಳೋ, ತನ್ನಿರ್ಗುಣತ್ವವೇತ್ತಾರಃ= ಆ ಶ್ರೀ ಹರಿಗೆ ಗುಣಾತ್ಯಂತಾಭಾವವನ್ನು ತಿಳಿಯುವವರೋ, ತಸ್ಯ=ಶ್ರೀ ಹರಿಗೆ, ದೋಷವಿದೋಽಪಿ ಚ=ಅಜ್ಞಾನ ಮೊದಲಾದ ದೋಷಗಳನ್ನು ತಿಳಿಯುವವರೋ (ಅವರೆಲ್ಲರೂ) ತಮಃ=ಅಂಧಂತಮಸ್ಸನ್ನು, ಯಾಂತಿ=ಹೊಂದುತ್ತಾರೆ. (ಶ್ರುತಿವಿರೋಧವು ಹೇಗೆಂದರೆ) ಇತ್ಯಾದಿ ಶ್ರುತಿಸಂದರ್ಭಾತ್=ಇದುಮೊದಲಾದ ಶ್ರುತಿಗಳ ಸಂದರ್ಭದೆಶೆಯಿಂದ, ದ್ವೇಷಿಣಃ=ಭಗವದ್ವೇಷಿಗಳು, ತಮಃ=ಅಂಧಂತಮಸ್ಸನ್ನು ಈಯತೇ=ಹೊಂದುತ್ತಾರೆ ॥ ೧೦೯ ॥ ೧೧೦ ॥ ೧೧೧ ॥

ದ್ವೇಷಿಗಳಿಗೆ ಮೋಕ್ಷವಾಗುತ್ತದೆಂದು ಹೇಳಿದ್ದು ಸ್ಮೃತಿ ವಿರುದ್ಧವೂ ಆಗಿದೆ ಎನ್ನುವ ಅಭಿಪ್ರಾಯದಿಂದ ಆ ಸ್ಮೃತಿಗಳನ್ನು ಹೇಳುತ್ತಾರೆ—

ಮೂ ॥ ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ ॥ ೧೧೨ ॥
ವಿವಿಕ್ಷುರತ್ಯಗಾತ್ಸೂನೋಃ ಪ್ರಹ್ಲಾದಸ್ಯಾನುಭಾವತಃ ॥
ಯದನಿಂದತ್ಪಿತಾ ಮಹ್ಯಂ ತ್ವದ್ಭಕ್ತೇ ಮಯಿ ಚಾಘವಾನ್ ॥೧೧೩॥
ತಸ್ಮಾತ್ಪಿತಾ ಮೇ ಪೂಯೇತ ದುರಂತಾದ್ದುಸ್ತರಾದಘಾತ್ ।
ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ॥
ತತೋ ನಾಪೈತಿ ಯಃ ಸೋಽಪಿ ಯಾತ್ಯಧಃ ಸುಕೃತಾಚ್ಚ್ಯುತಃ ॥೧೧೪॥

ಅ ॥ ಹಿರಣ್ಯಕಶಿಪುಶ್ಚಾಪಿ=ಹಿರಣ್ಯಕಶಿಪುವೂ ಕೂಡ, ಭಗವನ್ನಿಂದಯಾ=ಶ್ರೀ ಹರಿಯ ನಿಂದೆಯಿಂದ, ತಮಃ=ಅಂಧಂತಮಸ್ಸನ್ನು, ವಿವಿಕ್ಷುಃ=ಹೊಂದತಕ್ಕವನೆಂದು ಸಂಭಾವನಾ ವಿಷಯನಾದವನು, ಸೂನೋಃ=ಮಗನಾದ ಪ್ರಹ್ಲಾದಸ್ಯ=ಪ್ರಹ್ಲಾದನ, ಅನುಭಾವತಃ= ಸಾಮರ್ಥ್ಯದೆಶೆಯಿಂದ, ಅತ್ಯಗಾತ್=ತಮಸ್ಸನ್ನು ಅತಿಕ್ರಮಿಸಿದನು. (ಅಂದರೆ ತಮಸ್ಸನ್ನು ಹೊಂದಲಿಲ್ಲ.) ಯತ್=ಯಾವಕಾರಣದೆಶೆಯಿಂದ, ಮೇ=ನನ್ನ, ಪಿತಾ=ತಂದೆಯು, ಮಹ್ಯಂ= ನನ್ನ ನಿಮಿತ್ತವಾಗಿ, ಅನಿಂದತ್=ನಿನ್ನನ್ನು ನಿಂದಿಸಿರುವನೋ, ತ್ವದ್ಭಕ್ತೇ=ನಿನ್ನ ಭಕ್ತನಾದ, ಮಯಿ ಚ=ನನ್ನ ವಿಷಯದಲ್ಲಿಯೂ, ಅಘವಾನ್=ಅಪರಾಧವುಳ್ಳವನು. ತಸ್ಮಾತ್=ವಿಷ್ಣು ವೈಷ್ಣವ ನಿಂದಾಪರಾಧದಿಂದ ಹುಟ್ಟಿದ, ದುರಂತಾತ್=ಅಂತವಿಲ್ಲದಿರುವ, ದುಸ್ತರಾತ್=ದಾಟ ಲಶಕ್ಯವಾದ, ಅಘಾತ್=ನಿತ್ಯನರಕದೆಶೆಯಿಂದ, ಮೇ=ನನ್ನ, ಪಿತಾ=ತಂದೆಯು, ಪೂಯೇತ= ಉದ್ಧೃತನಾಗಲಿ, (ನಿಂದಾದಿಗಳು ದ್ವೇಷಮೂಲಕಗಳೆಂದು ಪ್ರಸಿದ್ಧವೇ) (ನರಸಿಂಹನನ್ನು ಕುರಿತು ಪ್ರಹ್ಲಾದನ ವಾಕ್ಯವು.) ಭಗವತಃ=ಶ್ರೀ ಹರಿಯ, ತತ್ಪರಸ್ಯ=ಭಗವಂತನಲ್ಲಿ ಆಸಕ್ತ ನಾದ, ಜನಸ್ಯ ವಾ=ಜನರ. ನಿಂದಾಂ=ನಿಂದೆಯನ್ನು, ಶೃಣ್ವನ್=ಕೇಳತಕ್ಕ, ಯಃ=ಯಾವ ಪುರುಷನು, ತತಃ=ಆ ಸ್ಥಾನದೆಶೆಯಿಂದ, ನಾಪೈತಿ=ದೂರಕ್ಕೆ ಹೋಗುವುದಿಲ್ಲವೋ, ಸೋಽಪಿ= ಅವನೂ ಕೂಡ, ಸುಕೃತಾತ್=ಸುಕೃತದೆಶೆಯಿಂದ, ಚ್ಯುತಃಸನ್=ಬಿದ್ದವನಾಗಿ, ಅಧಃ ಯಾತಿ=ಅಂಧಂತಮಸ್ಸನ್ನು ಹೊಂದುತ್ತಾನೆ. (ಅಂತೂ ಭಗವನ್ನಿಂದೆಯನ್ನು ಕೇಳಿದವರಿಗೂ ಕೂಡ ಅಧಃಪಾತವಾಗುವಾಗ ನಿಂದಕನಿಗೆ ಅಧಃಪಾತವಾಗುತ್ತದೆ ಎನ್ನುವುದು ಸುತರಾಂ ಸಿದ್ಧವು.) ॥ ೧೧೨ ॥ ೧೧೩ ॥ ೧೧೪ ॥

ಮೂ ॥ ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ ॥೧೧೫॥
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಂ ।
ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ॥
ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೧೬ ॥
(ಗೀತಾ ಅಧ್ಯಾ. ೯. ಶ್ಲೋ. ೧೧. ೧೨.)

ಅ ॥ ಮಾನುಷೀಂ=ಮನುಷ್ಯದೇಹಸಾದೃಶ್ಯದಿಂದ, ತೋರತಕ್ಕ ತನುಂ=ಶರೀರವನ್ನು ಆಶ್ರಿತಂ=ಆಶ್ರಯಿಸಿದ, ಮಾಂ=ನನ್ನನ್ನು, ಮೂಢಾಃ=ತಾಮಸರು, ಭೂತಮಹೇಶ್ವರಂ= ಸರ್ವದಾ ಇರತಕ್ಕ ಶ್ರೇಷ್ಠವಾದ, ಗುಣಪರಿಪೂರ್ಣವಾದ, ಪರಂ=ಉತ್ತಮವಾದ, ಮಮ=ನನ್ನ, ಭಾವಂ=ಯಾಥಾರ್ಥ್ಯವನ್ನು, ಅಜಾನಂತಃ=ತಿಳಿಯದೆ ಇದ್ದವರಾಗಿ, ಅವಜಾನಂತಿ=ಅಧಮ ನನ್ನಾಗಿ ತಿಳಿಯುತ್ತಾರೆ. ಮೋಘಾಶಾಃ=ವ್ಯರ್ಥವಾದ ಆಶೆಯುಳ್ಳವರು. (ಅಂದರೆ ಭಗವದ್ವೇಷಿ ಗಳಿಂದ ಇಷ್ಟವಾದ ಐಹಿಕ ಸಂಪದಾದಿಗಳು ಪ್ರಾಪ್ತಗಳಾದಾಗ್ಯೂ ಆಮುಷ್ಮಿಕ ಸಂಪದಾದಿಗಳಿಗೆ

ಪ್ರಾಪ್ತಿಯಾಗುವುದಿಲ್ಲ.) ಮೋಘಕರ್ಮಾಣಃ=ವ್ಯರ್ಥಗಳಾದ ಯಜ್ಞಾದಿ ಕರ್ಮಗಳುಳ್ಳವರು, ಮೋಘಜ್ಞಾನಾಃ=ವ್ಯರ್ಥವೇ ಆದ ಜ್ಞಾನವುಳ್ಳವರು, ವಿಚೇತಸಃ=ವಿರುದ್ಧವಾದ ಮನಸ್ಸುಳ್ಳವರು, ಇಂತಹ ತಮೋಯೋಗ್ಯರು, ಮೋಹಿನೀಂ=ಬುದ್ಧಿಭ್ರಂಶವನ್ನು ಮಾಡತಕ್ಕ, ರಾಕ್ಷಸೀಂ=ರಾಕ್ಷಸರ ಸಂಬಂಧಿಯಾದ, ಆಸುರೀಂ ಚೈವ=ಅಸುರರ ಸಂಬಂಧಿಯಾದ, ಪ್ರಕೃತಿಂ=ಸ್ವಭಾವವನ್ನು, ಆಶ್ರಿತಾಃ = ಆಶ್ರಯಿಸಿದವರಾಗಿ, ಮಾಂ = ನನನ್ನು, ಅವಜಾನಂತಿ = ತಿರಸ್ಕರಿಸುತ್ತಾರೆ.॥ ॥ ೧೧೫॥ ೧೧೬ ॥

ಮೂ ॥ ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ ೧೧೭ ॥
ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ॥
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೧೮ ॥
ಆಸುರೀಂ ಯೋನಿಮಾಪನ್ನಾಃ ಮೂಢಾ ಜನ್ಮನಿ ಜನ್ಮನಿ ॥
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ॥೧೧೯॥
(ಗೀತಾ ಅಧ್ಯಾ. ೧೬. ಶ್ಲೋಕ ೧೮ ೧೯ ೨೦)

ಅ ॥ ಆತ್ಮ ಪರದೇಹೇಷು=ತನ್ನ ಶರೀರದಲ್ಲಿಯೂ ಪರಶರೀರಗಳಲ್ಲಿಯೂ ನಿಯಾಮಕನಾಗಿ ಇರತಕ್ಕ, ನನ್ನನ್ನು ಪ್ರದ್ವಿಷಂತಃ=(ಈಶ್ವರನೂ ಮಾಡಿಸುವವನಾದರೆ ಈಗ ಮಾಡದೆ ಇರತಕ್ಕ ನನ್ನನ್ನು ಮಾಡಿಸಲಿ, ಮಾಡತಕ್ಕವನನ್ನೆ ಬಿಡಿಸಲಿ, ಹೀಗೆ ಶ್ರೀ ಹರಿಯು ಅಪಲಾಪರೂಪವಾದ) ಪ್ರದ್ವೇಷವನ್ನು ಮಾಡತಕ್ಕ, ಅಭ್ಯಸೂಯಕಾಃ=ನಿರ್ದೋಷನಲ್ಲಿ ದೋಷಗಳನ್ನು ಹೇಳತಕ್ಕ (ಮತ್ತು ಗುಣಪೂರ್ಣನಲ್ಲಿ ಗುಣರಾಹಿತ್ಯವನ್ನು ಹೇಳುತ್ತಾ ಯಾರು ಯಾಗ ಮಾಡುತ್ತಾರೋ) ತಾನ್=ಅಂತಹ, ದ್ವಿಷತಃ ದ್ವೇಷ ಮಾಡತಕ್ಕ, ಕ್ರೂರಾನ್=ಕ್ರೂರರಾದ, ಅಶುಭಾನ್=ಅಮಂಗಲರಾದ, ನರಾಧಮಾನ್=ಮನುಷ್ಯಾಧಮರನ್ನು, ಸಂಸಾರೇಷು=ಸಂಸಾರಗಳಲ್ಲಿ, ಆಸುರಿಷ್ವೇವ=ಅಸುರಸಂಬಂಧಿಗಳೇ ಆದ, ಯೋನಿಷು=ಯೋನಿಗಳಲ್ಲಿ, ಅಜಸ್ರಂ=ಮತ್ತೂ ಮತ್ತೂ, ಕ್ಷಿಪಾಮಿ=ಸ್ಥಾಪಿಸುತ್ತೇನೆ. ಕೌಂತೇಯ=ಅರ್ಜುನನೇ, ತತೋ ಮೂಢಾಃ=ತಾಮಸಸ್ವಭಾವವುಳ್ಳವರು, ಜನ್ಮನಿ ಜನ್ಮನಿ=ಅನೇಕಜನ್ಮಗಳಲ್ಲಿ, ಆಸುರೀಂ ಯೋನಿಂ=ಅಸುರಸಂಬಂಧಿಯಾದ ಯೋನಿಯನ್ನು, ಆಪನ್ನಾಃ=ಹೊಂದಿದವನಾಗಿ, ಮಾಂ = ನನ್ನನ್ನು, ಅಪ್ರಾಪ್ಯೈವ=ಹೊಂದದೇನೇ, ಅಧಮಾಂ=ನಿತ್ಯ ನರಕರೂಪವಾದ, ಗತಿಂ=ಗತಿಯನ್ನು ಯಾಂತಿ=ಹೊಂದುತ್ತಾರೆ ॥ ೧೧೭ ॥ ೧೧೮ ॥ ೧೧೯ ॥

ಮೂ ॥ ಯೋ ದ್ವಿಷ್ಯಾದ್ವಿಬುಧಶ್ರೇಷ್ಠಂ ದೇವಂ ನಾರಾಯಣಂ ಪ್ರಭುಂ ।
ಕಥಂ ಸ ನ ಭವೇದ್ವೇಷ್ಯಃ ಆಲೋಕಾಂತಸ್ಯ ಕಸ್ಯಚಿತ್ ॥ ೧೨೦ ॥
ಯೋ ದ್ವಿಷ್ಯಾದ್ವಿಬುಧಶ್ರೇಷ್ಠಂ ದೇವಂ ನಾರಾಯಣಂ ಪ್ರಭುಂ ।
ಮಜ್ಜಂತಿ ಪಿತರಸ್ತಸ್ಯ ನರಕೇ ಶಾಶ್ವತೀಃ ಸಮಾಃ ।
ಇತ್ಯಾದಿವಾಕಸಂದ್ಮೋಹಾದ್ದ್ವೇಷಿಣಸ್ತಮ ಏವ ತು ॥ ೧೨೧ ॥

ಅ ॥ ಯಃ = ಯಾವಾತನು, ವಿಬುಧಶ್ರೇಷ್ಠಂ = ದೇವಶ್ರೇಷ್ಠನಾದ, ಪ್ರಭುಂ = ಸರ್ವಸಮರ್ಥನಾದ, ದೇವಂ=ಕ್ರೀಡಾದಿಗುಣವಿಶಿಷ್ಟನಾದ, ನಾರಾಯಣಂ=ಶ್ರೀ ನಾರಾಯಣನನ್ನು, ದ್ವಿಷ್ಯಾತ್=ದ್ವೇಷಮಾಡುವನೋ, ಸಃ=ಆತನು, ಆಲೋಕಾಂತಸ್ಯ=ಚಂಡಾಲಪರ್ಯಂತವಾದ, ಕಸ್ಯಚಿತ್ = ಯಾರಿಗಾದರೂ, ದ್ವೇಷ್ಯಃ = ದ್ವೇಷಿಸಲಿಕ್ಕೆ ಅರ್ಹನು, ಕಥಂ = ಹೇಗೆ,

ನ ಭವೇತ್=ಆಗಲಾರದು. ಯಃ=ಯಾವಾತನು, ವಿಬುಧಶ್ರೇಷ್ಠಂ=ದೇವಶ್ರೇಷ್ಠನಾದ, ಪ್ರಭುಂ=ಸಮರ್ಥನಾದ, ದೇವಂ ನಾರಾಯಣಂ=ನಾರಾಯಣದೇವರನ್ನು, ದ್ವಿಷ್ಯಾತ್=ದ್ವೇಷಮಾಡುವರೋ, ತಸ್ಯ=ಆತನ, ಪಿತರಃ=ಪಿತೃಗಳು, ನರಕೇ=ನರಕದಲ್ಲಿ, ಶಾಶ್ವತೀಃ ಸಮಾಃ=ಅನೇಕ ಸಂವತ್ಸರಗಳಲ್ಲಿ, ಮಜ್ಜಂತಿ=ಬೀಳುತ್ತಾರೆ. ಇತ್ಯಾದಿವಾಕ್ಯಸಂದೋಹಾತ್=ಇದೇ ಮೊದಲಾದ ವಾಕ್ಯಗಳ ಸಮೂಹದೆಶೆಯಿಂದ, ದ್ವೇಷಿಣಃ=ದ್ವೇಷಿಗಳು, ತಮ ಏವ ತು=ಅಂಧಂತಮಸ್ಸನ್ನೇ, (ಹೊಂದುತ್ತಾರೆ.) (ಎಂದು ತಿಳಿಯಲ್ಪಡುತ್ತದೆ. ಆದುದರಿಂದ ಯಮಾದಿ ಅಂಗಗಳನ್ನು ಅವಶ್ಯವಾಗಿ ಅನುಷ್ಠಾನಮಾಡಬೇಕು) ॥ ೧೨೦ ॥ ೧೨೧ ॥ ಸೂ. ೫೧ ॥ ಅಧಿ. ೩೧ ॥

**ಅನುಬಂಧಾಧಿಕರಣವು ಸಮಾಪ್ತವಾಯಿತು.**

---

## ವಿದ್ಯಾಧಿಕರಣವು.

**'ಓಂ ವಿದ್ಯೈವ ತು ನಿರ್ಧಾರಣಾತ್ ಓಂ'** ॥ ಸೂ. ॥ ೪೮ ॥

**ಸೂತ್ರಾರ್ಥವು ಮೊದಲೇ ಉಕ್ತವಾಯಿತು.**

(1) ಯದ್ಯಪಿ ಈ ೨೯ನೇ ಅಧಿಕರಣವನ್ನು 'ಅನುಬಂಧಾದಿಭ್ಯಃ' ಎನ್ನುವ ೩೧ನೇ ಅಧಿಕರಣಕ್ಕಿಂತ ಮೊದಲೇ ವ್ಯಾಖ್ಯಾನಮಾಡಬೇಕಿತ್ತು. ಆದಾಗ್ಯೂ ಉಪಾಸನಾಸ್ವರೂಪವನ್ನು ತಿಳಿದರೇನೇ ಉಪಾಸನಾ ಸಾರ್ಥಕ್ಯವನ್ನು ಸಮರ್ಥನಮಾಡತಕ್ಕ ಈ ಅಧಿಕರಣಕ್ಕೆ ಅವಕಾಶವು, ಇಲ್ಲವಾದರೆ ಕೂಡಲಾರದು. ಆದಕಾರಣ ವ್ಯುತ್ಕ್ರಮದಿಂದ ವ್ಯಾಖ್ಯಾತವಾಗಿದೆ. ಹೇಗೆಂದರೆ— ವೈಯರ್ಥ್ಯ ಬರುವುದರಿಂದ ಭಗವದುಪಾಸನೆಯನ್ನು ಮಾಡಕೂಡದು. ಭಗವದುಪಾಸನೆಯು ಸಾಕ್ಷಾತ್ಕಾರಕ್ಕಾಗಿ ಎಂದೂ ಹೇಳಕೂಡದು. ಅದೂ ಕೂಡ ವ್ಯರ್ಥವು; ಸಾಕ್ಷಾತ್ಕಾರಕ್ಕೆ ಮೋಕ್ಷವು ಪ್ರಯೋಜನವು ಎಂದೂ ಹೇಳಕೂಡದು. ಚಾರ್ವಾಕರು ಹೇಳುವರೀತಿಯಾಗಿ ಮೋಕ್ಷವೇ ಇಲ್ಲ. ಮೋಕ್ಷವಿದ್ದರೂ ಜೈಮಿನ್ಯಾದಿಗಳ ಮತಾನುಸಾರವಾಗಿ ಸಾಧನಾಂತರಗಳಿಂದಲೇ ಸಾಧ್ಯವಾಗುವುದು, ಎಂದು ಆಶಂಕಾಬಂದರೆ ಮೋಕ್ಷವಿದೆಎಂದೂ ಆ ಮೋಕ್ಷಕ್ಕೂ ಭಗವದ್ದರ್ಶನ ಸಾಧ್ಯತ್ವವು ಇದೆಯೆಂದೂ ಸಾಧಿಸುವುದಕ್ಕಾಗಿ ಈ ಅಧಿಕರಣವು ಆರಬ್ಧವಾಗುತ್ತದೆ. (2) ಯದ್ಯಪಿ ಸಮಯಪಾದದಲ್ಲಿ ಚಾರ್ವಾಕಾದಿಮತಗಳು ನಿರಾಕೃತಗಳಾಗಿವೆ. ಆದಾಗ್ಯೂ ಮೋಕ್ಷ, ಮೋಕ್ಷಸಾಧನವಿಷಯದೂಷಣವಿಶೇಷಗಳನ್ನು ವ್ಯುತ್ಪಾದಿಸುವುದಕ್ಕಾಗಿ ಈ ಪ್ರಯತ್ನವು. ಅದರಲ್ಲಿ ಚಾರ್ವಾಕಮತವನ್ನು ಅನುವಾದ ಮಾಡುತ್ತಾರೆ—

**ಮೂ ॥ ನೈವ ಮೋಕ್ಷ ಇತಿ ಪ್ರಾಹುರ್ಲೋಕಾಯತಮತೇ ಸ್ಥಿತಾಃ ॥ ೧೨೨ ॥**
**ಭೋಗಃ ಶರೀರಪರ್ಯಂತಂ ಭಸ್ಮೀಭಾವಸ್ತತೋ ಭವೇತ್ ।**
**ಇತಿ ತರ್ಕೇನ ಮಾನೇನ ದೃಷ್ಟಂ ಪ್ರತ್ಯಕ್ಷವಾದಿನಾ ॥ ೧೨೩ ॥**
**ನ ಹಿ ಪ್ರತ್ಯಕ್ಷಮಾನೇನ ಮೋಕ್ಷಾಭಾವೋಽವಸೀಯತೇ ।**
**ಘಟತೇ ಮುಕ್ತಿದೃಷ್ಟಿಸ್ತು ಪುರುಷೇಣ ಮಹೀಯಸಾ ॥ ೧೨೪ ॥**

ಅ ॥ ಲೋಕಾಯತಮತೇ=ಚಾರ್ವಾಕಮತದಲ್ಲಿ, ಸ್ಥಿತಾಃ=ಇರತಕ್ಕವರು, ಮೋಕ್ಷಃ=ಮುಕ್ತಿಯು, ನೈವ=ಇಲ್ಲವೇ ಇಲ್ಲ. ಇತಿ=ಹೀಗೆ, ಪ್ರಾಹುಃ=ಹೇಳುತ್ತಾರೆ. (ಆದಕಾರಣ

ಉಪಾಸನವು ವ್ಯರ್ಥವು.) (ಹಾಗಾದರೆ ಯಾವ ಪುರುಷಾರ್ಥವಿದೆ ಎಂದರೆ—) ಭೋಗಃ= ಸ್ರಕ್ಚಂದನ ಮೊದಲಾದ ವಿಷಯಸುಖಾನುಭಾವವು, (ಪುರುಷಾರ್ಥವದೆ ಎಂದು) ಪ್ರಾಹುಃ= ಹೇಳುತ್ತಾರೆ. (ಮತ್ತು ಭೋಗವು ಐಹಿಕವಾದುದೇ ಸ್ವರ್ಗಾದಿ ಆಮುಷ್ಮಿಕ ಸುಖವಿಲ್ಲ ವೆನ್ನುತ್ತಾರೆ.) ಶರೀರಪರ್ಯಂತಂ=ಶರೀರಪಾತಪರ್ಯಂತವಾಗಿಯೇ (ಭೋಗವು) (ಸ್ವರ್ಗಾ ಪವರ್ಗಗಳು ಇಲ್ಲವೆನ್ನುವುದು ಯಾವುದರಿಂದ ಎಂದರೆ—) ತತಃ=ಶರೀರಪಾತಾನಂತರದಲ್ಲಿ, ಭಸ್ಮೀಭಾವಃ=ಶರೀರಕ್ಕೆ ಭಸ್ಮೀಭಾವವು, ಭವೇತ್=ಆಗುವುದು. (ಅಂದರೆ – ಶರೀರಪಾತವಾದ ಮೇಲೆ ಆತ್ಮನಿಗೆ ಸ್ವರ್ಗ ಅಪವರ್ಗಗಳನ್ನು ಹೇಳಬೇಕು. ಆತ್ಮನಾದರೂ ಶರೀರಾತಿರಿಕ್ತನು ಇಲ್ಲ. ಶರೀರವಾದರೂ ಪಾತವಾದಮೇಲೆ ನಾಶವಾಗುತ್ತದೆ. ಆದಕಾರಣ ಸ್ವರ್ಗ-ಅಪವರ್ಗ ಗಳು ಯಾರಿಗೆ ಆದಾವು? ಹೀಗೆ ಹೇಳುತ್ತಾರೆ.) ಇತಿ = ಹೀಗೆ ಶಂಕಾಸಮಾಪ್ತವಾಯಿತು. (ಅದನ್ನು ಪ್ರಮಾಣವಿಲ್ಲದಿರುವುದರಿಂದ ದೂಷಿಸುತ್ತಾ ಪ್ರಶ್ನಿಸುತ್ತಾರೆ.) ತತ್=ಮೋಕ್ಷವುಇಲ್ಲವೇ ಇಲ್ಲವೆನ್ನುವ ಅರ್ಥವು, ಕೇನ ಮಾನೇನ=ಯಾವ ಪ್ರಮಾಣದಿಂದ, (ಅಂದರೆ— (೧) ಪ್ರತ್ಯಕ್ಷ ದಿಂದಲೋ (೨) ಪ್ರತ್ಯಕ್ಷೇತರದಿಂದಲೋ) ದೃಷ್ಟಂ=ತಿಳಿಯಲ್ಪಡುತ್ತದೆ. ಪ್ರತ್ಯಕ್ಷವಾದಿನಾ= ಪ್ರತ್ಯಕ್ಷ ಒಂದೇ ಪ್ರಮಾಣವು. ಬೇರೆ ಪ್ರಮಾಣವಿಲ್ಲನೆಂದಂಗೀಕರಿಸತಕ್ಕ ಚಾರ್ವಾಕನಿಂದ ಎರಡನೇದ್ದು ಅಂಗೀಕರಿಸಲಿಕ್ಕೆ ಶಕ್ಯವಾಗುವುದಿಲ್ಲ. (೧ ಒಂದನೇದ್ದನ್ನು ನಿರಾಕರಿಸುತ್ತಾರೆ) ಪ್ರತ್ಯಕ್ಷಮಾನೇನ = (ಅನುಮಾನಾದಿಗಳು ಪರರಿಗೆ ಪ್ರಮಾಣವೇ ಆಗುವುದಿಲ್ಲ.) ಪ್ರಮಾಣ ವೆಂದಂಗೀಕೃತವಾದ ಪ್ರತ್ಯಕ್ಷದಿಂದಲೂ, ಮೋಕ್ಷಾಭಾವಃ = ಮೋಕ್ಷಾಭಾವವೂ, ನಾವಸೀ ಯತೇ=ನಿಶ್ಚಿತವಾಗುವುದಿಲ್ಲ. (ಅಂದರೆ— ಮೋಕ್ಷವೆಂದರೆ ಪರಮಾನಂದಾವಾಪ್ತಿವಿಶಿಷ್ಟವಾದ ಆತ್ಯಂತಿಕ ದುಃಖನಿವೃತ್ತಿಯು. ಅದರ ಅಭಾವವನ್ನು ಯಾವ ಪುರುಷರಾಗವರೂ ಪರಮಾನಂದ ವನ್ನು ಅನುಭವಿಸುವವರೂ ಇಲ್ಲ. ಮತ್ತು ಸರ್ವರೂ ದುಃಖವುಳ್ಳವರೂ ಎಂದು ತಿಳಿಯಬೇಕು. ಹೀಗೆ ಪುರುಷಾಂತರದಲ್ಲಿರತಕ್ಕ ಸುಖದುಃಖಗಳಾಗಲೀ, ಅವುಗಳ ಅಭಾವಗಳಾಗಲೀ ಪುರುಷಾಂತರ ಪ್ರತ್ಯಕ್ಷ ವಿಷಯವಾಗಲಾರವು. ಆದಕಾರಣ ಮೋಕ್ಷಾಭಾವವು ಪ್ರತ್ಯಕ್ಷದಿಂದ ಹೇಗೆ ನಿಶ್ಚಿತ ವಾಗುವುದು.?) (ಪ್ರಮಾಣವಿಲ್ಲದಿರುವುದರಿಂದ ಮೋಕ್ಷವಿಲ್ಲವೆಂಬುವ ನಿಶ್ಚಯವು ಆಗುವುದು ಬೇಡ. ಮೋಕ್ಷವಿದೆ ಎನ್ನುವ ನಿಶ್ಚಯವೂ ಕೂಡುವುದಿಲ್ಲ. ಪ್ರಮಾಣವಿಲ್ಲ. ಹಾಗಾದರೆ—ಪ್ರತ್ಯಕ್ಷ ದಿಂದ ಮೋಕ್ಷನಿಶ್ಚಯವಾಗುವುದೆಂದರೆ ಪ್ರತ್ಯಕ್ಷಕ್ಕೂ ಅದರಲ್ಲಿ ಸಾಮರ್ಥ್ಯವಿಲ್ಲವೆಂದರೆ) (ಯದ್ಯಪಿ ಪ್ರಾಕೃತರ ಪ್ರತ್ಯಕ್ಷವು ಮೋಕ್ಷವನ್ನು ವಿಷಯೀಕರಿಸಲಿಕ್ಕೆ ಸಮರ್ಥವಾಗುವುದಿಲ್ಲ. ಆದಾಗ್ಯೂ) ಮಹೀಯಸಾ ಪುರುಷೇಣ=ಮಹಾನುಭಾವನಾದ ಪುರುಷನ ಪ್ರತ್ಯಕ್ಷದಿಂದ, ಮುಕ್ತಿದೃಷ್ಟಿಸ್ತು= ಮೋಕ್ಷವದೆಯೆನ್ನುವ ನಿಶ್ಚಯವು, ಯುಜ್ಯತೇ ಏವ=ಉಪಪನ್ನವೇ ಆಗುತ್ತದೆ. (ಅವರಿಗೆ ಪ್ರತ್ಯಕ್ಷವಿದೆ ಎನ್ನುವ ಜ್ಞಾನವು ಪರರಿಗೆ ಅವರ ವಾಕ್ಯದಿಂದಲೇ ಆಗುವುದು ॥ ೧೨೨ ॥ ೧೨೩ ॥ ॥ ೧೨೪ ॥

ಹಾಗಾದರೆ ನನಗೂ ಹೇಳಲಿಕ್ಕೆ ಶಕ್ಯವೇ ಆಗುತ್ತದೆ. ಯದ್ಯಪಿ ಪರಪುರುಷರಲ್ಲಿರತಕ್ಕ ಮೋಕ್ಷಾಭಾವವು ಅಸ್ಮದಾದಿಗಳಿಗೆ ಪ್ರತ್ಯಕ್ಷವಲ್ಲ, ಆದಾಗ್ಯೂ ಮಹಾನುಭಾವನಾದ ಚಾರ್ವಾ ಕಾಚಾರ್ಯರಿಗೆ ಪ್ರತ್ಯಕ್ಷ ಸಿದ್ಧವೇ ಆಗುತ್ತದೆ. ಅವರ ಪ್ರತ್ಯಕ್ಷ ಜ್ಞಾನವಾದರೂ ನಮಗೆ ಅವನ ವಾಕ್ಯದಿಂದಲೇ ಆಗುವುದು ಎಂದರೆ–

**ಮೂ ॥ ನೇತಿ ವಕ್ತುರ್ಮಹತ್ವಂ ತು ಕಥಂಚನ ನ ವಿದ್ಯತೇ ।**
**ಸಾಧಯನ್ ಸರ್ವಸಾಮಾನ್ಯಂ ಕಥಮೇವ ವಿಶೇಷವಾನ್ ॥ ೧೨೫ ॥**

ಅ || ನೇತಿ=ಯಾವ ಪುರುಷನಲ್ಲಿಯೂ, ಈಗಲಾಗಲೀ ಮುಂದೆಯಾಗಲೀ ಮೋಕ್ಷವು ಇಲ್ಲವೇ ಇಲ್ಲವೆಂದು, ವಕ್ತುಃ = ನಾನು ಪ್ರತ್ಯಕ್ಷದಿಂದ ನೋಡುತ್ತೇನೆಂದು ಹೇಳತಕ್ಕವನಿಗೆ, ಮಹತ್ವಂ ತು=ಮಹತ್ವವೇ, ಕಥಂಚನ=ಯಾವ ಪ್ರಕಾರದಿಂದಲೂ, ನ ವಿದ್ಯತೇ=ಇರುವುದಿಲ್ಲ. (ಮಹೀಯಸ್ತ್ವವು ಸುತರಾಂ ಇರುವುದಿಲ್ಲ) (ಮಹತ್ವವು ಇಲ್ಲಿ ಬಹು ಪ್ರಕಾರವಾಗಿ ಅಪೇಕ್ಷಿತವಾಗಿದೆ. ೧ ಇತರ ಪುರುಷರಿಗೆ ಪ್ರತ್ಯಕ್ಷವಾಗದಿರುವ ಅರ್ಥದ ಸಾಕ್ಷಾತ್ಕಾರಿತ್ವವು. ೨ ಅದಕ್ಕೆ ಉಪಯುಕ್ತವಾದ ಅಸಾಧಾರಣ ಧರ್ಮವಿರುವಿಕೆಯು. ೩ ಯಥಾರ್ಥವಾದಿತ್ವವು. ಅದರಲ್ಲಿ ಒಂದು ಪ್ರಕಾರವೂ ಕೂಡ ಚಾರ್ವಾಕಾಚಾರ್ಯರಿಗೆ ಇಲ್ಲ. ಅದರಿಂದ ಮೋಕ್ಷವಾದಿಗಳಾದ ಮಹಾಪುರುಷರಿಗೆ ಚಾರ್ವಾಕಾಚಾರ್ಯರ ಪ್ರತ್ಯಕ್ಷವಿರೋಧವು ಬರಲಾರದು. ಏಕೆಂದರೆ-) ಸರ್ವಸಾಮಾನ್ಯಂ=ಧರ್ಮಾದಿಗಳು ಇಲ್ಲವೆಂದು ಪ್ರತಿಪಾದಿಸಿದುದರಿಂದ ಎಲ್ಲಾ ಪುರುಷರಿಗೆ ಸಾಮ್ಯವನ್ನು, ಸಾಧಯನ್=ಸಾಧಿಸತಕ್ಕ ಚಾರ್ವಾಕಾಚಾರ್ಯನು, ಕಥಮೇವ=ಹೇಗೆ ತಾನೇ, ವಿಶೇಷವಾನ್=ಇತರರಿಂದ ಅತಿಶಯವುಳ್ಳವನು ಆಗುತ್ತಾನೆ. (ಹೇಗೂ ಆಗಲಾರನು.)

ತಾ || ನ್ಯಾಯಸುಧಾ— (1) ಸಾಧಾರಣ ಪುರುಷಾಂತರರಿಗೆ ಪ್ರತ್ಯಕ್ಷವಾಗದೇನೇ ಇರುವ ಪರಪುರುಷರಲ್ಲಿರತಕ್ಕ ಮೋಕ್ಷಾಭಾವವನ್ನು ಸಾಕ್ಷಾತ್ಕರಿಸುವ ವಿಷಯದಲ್ಲಿ ಚಾರ್ವಾಕಾಚಾರ್ಯರಿಗೆ ಇತರರದೆಶೆಯಿಂದ ವಿಶೇಷವಿರಬೇಕು. ಇಲ್ಲವಾದರೆ ಇತರರಿಗೂ ಕೂಡ ಅಂತಹ ಪ್ರತ್ಯಕ್ಷವು ಬರಬೇಕಾಗುವುದು. ಅಂತಹುದು ಇರುವುದಿಲ್ಲ. ತಪಸ್ಸಿನಿಂದಲಾಗಲೀ, ಯೋಗದಿಂದಲಾಗಲೀ ಉಂಟಾದ ಧರ್ಮವಿಶೇಷವು ಅಂತಹ ಪ್ರತ್ಯಕ್ಷಕ್ಕೆ ಕಾರಣವೆಂದು ಹೇಳಬೇಕು. ಅಂತಹ ಧರ್ಮವಿಶೇಷವು ಇತರರಂತೆಯೇ ತನಗೂ ಇಲ್ಲವೆಂದು ಅವನಿಂದಲೇ ಸಾಧಿಸಲ್ಪಟ್ಟಿದೆ. ಆದ ಕಾರಣ ಕಾರಣವಿಲ್ಲದಿರುವುದರಿಂದ ಇತರರಂತೆ ಆ ಚಾರ್ವಾಕಾಚಾರ್ಯನಿಗೂ ಕೂಡ ಪರ ಪುರುಷರಲ್ಲಿರತಕ್ಕ ಮೋಕ್ಷಾಭಾವಸಾಕ್ಷಾತ್ಕಾರಣವು ಇಲ್ಲವೇ ಇಲ್ಲವೆಂದು ನಿಶ್ಚಿತವಾಗುತ್ತದೆ. ಆದುದರಿಂದಲೇ ನಾನು ಮೋಕ್ಷಾಭಾವವನ್ನು ಸಾಕ್ಷಾತ್ಕರಿಸುತ್ತೇನೆ ಎಂದು ಅವನ ವಚನವು. ಅಯಥಾರ್ಥವೇ ॥ ೧೨೫ ॥

ಸ. ರ. ವಿ— (1) ಮೋಕ್ಷವೇ ಇಲ್ಲದಿರುವುದರಿಂದ ಸಾಧನವಿಚಾರವು ಅಯುಕ್ತವು ಎಂದು ಹೇಳುವ ಚಾರ್ವಾಕನ ಮತವು ಅಯುಕ್ತವು. ಏಕೆಂದರೆ— ಅತೀಂದ್ರಿಯವಾದ ಮೋಕ್ಷವು ಇದೆ ಎಂದಾಗಲೀ ಆ ಮೋಕ್ಷವಿಲ್ಲವೆಂದಾಗಲೀ ಯಾರಿಂದಲಾದರೂ ಕಾಣಲ್ಪಟ್ಟಿದೆ ಎಂದು ನಿಶ್ಚಯಿಸಲಿಕ್ಕೆ ಪ್ರತ್ಯಕ್ಷ ಒಂದೇ ಪ್ರಮಾಣವೆಂದು ಹೇಳುವ ಚಾರ್ವಾಕನಿಗೆ ಸಾಧ್ಯವಿಲ್ಲ. ಆದಕಾರಣ ಯಾರೋ ಒಬ್ಬ ಮಹಾನುಭಾವನಿಗೆ ಮುಕ್ತಿಯಿಲ್ಲವೆನ್ನುವ ಪ್ರತ್ಯಕ್ಷವು ಇದೆ ಎಂದು ಸಂಭಾವಿಸುವುದೇ ಮೋಕ್ಷಾಭಾವವನ್ನು ಹೇಳುವವನಿಗೆ ಮಹಾತ್ಮತ್ವವೇ ಕೂಡುವುದಿಲ್ಲ. ನಾನು ಮೋಕ್ಷವನ್ನು ನೋಡುವುದಿಲ್ಲ. ಇತರರೂ ನೋಡುವುದಿಲ್ಲವೆಂದು ತನಗೂ ಇತರರಿಗೂ ಸಾಮ್ಯವನ್ನು ಪ್ರತಿಪಾದಿಸತಕ್ಕವನು ಇತರರಿಂದ ಅಧಿಕನು ಆಗಲಾರನಷ್ಟೆ! ಲೋಕದಲ್ಲಿ ಮಹಾನುಭಾವರೇ ಇಲ್ಲವೆಂದು ಹೇಳಕೂಡದು. ಅಂತಹವರು ಪ್ರತ್ಯಕ್ಷಸಿದ್ಧರಾಗಿರುತ್ತಾರೆನ್ನುತ್ತಾರೆ.

ನ್ಯಾಯಸುಧಾ— ಹೇಗೆ ಮೋಕ್ಷಾಭಾವವನ್ನು ಸಾಕ್ಷಾತ್ಕರಿಸತಕ್ಕ ಮಹಾ ಪುರುಷನು ಇಲ್ಲವೇಇಲ್ಲವೆಂದು ನಿಮ್ಮಿಂದ ಹೇಳಲ್ಪಟ್ಟಿದೋ ಹಾಗೆಯೇ ನಾನೂ ಕೂಡ ಹೇಳುತ್ತೇನೆ. ಯಾರು ಪ್ರತ್ಯಕ್ಷದಿಂದ ಮೋಕ್ಷವನ್ನು ನೋಡುತ್ತಾನೋ ಅಂತಹ ಮಹಾಪುರುಷನು ಪ್ರಮಾಣವಿಲ್ಲದಿರುವುದರಿಂದ ಇಲ್ಲವೇ ಇಲ್ಲ. ತಥಾಚ ಪುನಃ ಅನಿಶ್ಚಯವೇ ಎಂದರೆ—

ಮೂ || ದೃಶ್ಯಂತೇ ಪುರುಷಾ ಲೋಕೇ ಪರಾಪರವಿದೋಽಪಿ ಚ |
ಅಪರೋಕ್ಷದೃಶೋ ಯೋಗನಿಷ್ಠಾಶ್ಚಾಮಲಚಕ್ಷುಷಃ || ೧೨೬ ||
ಪ್ರತ್ಯಕ್ಷಂ ದೇವತಾಂ ದೃಷ್ಟ್ವಾ ತತ್ಪ್ರಸಾದಾಪ್ತಭೂತಯಃ |
ಜ್ಞಾನವಿಜ್ಞಾನಪಾರಜ್ಞಾ ನಿಷಿಧ್ಯಂತೇ ಕಥಂ ನೃಭಿಃ || ೧೨೭ ||

ಅ || ಲೋಕೇ = ಇದೇ ಭೂಮಂಡಲದಲ್ಲಿ, ಜ್ಞಾನವಿಜ್ಞಾನಪಾರಜ್ಞಾಃ = ಸಾಮಾನ್ಯ ಜ್ಞಾನ-ವಿಶೇಷಜ್ಞಾನ ಇವುಗಳ ಅಂತ್ಯವನ್ನು ತಿಳಿದಿರುವ, (ಕೇವಲ ತತ್ಕಾಲದಲ್ಲಿರತಕ್ಕ ಎಲ್ಲಾ ವಸ್ತುವನ್ನು ಮಾತ್ರ ತಿಳಿದವರಲ್ಲ, ಮತ್ತೆ) ಪರಾಪರವಿದೋಽಪಿ = ಪರತತ್ವವನ್ನೂ ಅಪರ ತತ್ವವನ್ನೂ ತಿಳಿದಿರುವ, ಮತ್ತು ಅಪರೋಕ್ಷದೃಶಃ = ಅಪರೋಕ್ಷಜ್ಞಾನಿಗಳಾದ, ಯೋಗ ನಿಷ್ಠಾಃ = ಯೋಗದಲ್ಲಿ ಆಸಕ್ತರಾದ, ಅಮಲಚಕ್ಷುಷಃ = ನಿರ್ಮಲವಾದ ಚಕ್ಷುಸ್ಸುಳ್ಳ, (ಅಂದರೆ ಯೋಗಾನುಷ್ಠಾನದಿಂದುಂಟಾದ ವಿಶಿಷ್ಟವಾದ ಅದೃಷ್ಟದಿಂದ ದಿವ್ಯವಾದ ಜ್ಞಾನವುಳ್ಳ) ದೇವತಾಂ= ಪರದೇವತೆಯನ್ನು, ಪ್ರತ್ಯಕ್ಷಂ = ಪ್ರತ್ಯಕ್ಷವಾಗಿ, ದೃಷ್ಟ್ವಾ = ನೋಡಿ, (ಅಂದರೆ—ಯೋಗ ಸಾಮರ್ಥ್ಯದಿಂದ ಪರದೇವತೆಯನ್ನು ಸಾಕ್ಷಾತ್ಕರಿಸಿ) ತತ್ಪ್ರಸಾದಾಪ್ತಭೂತಯಃ = ಆ ದೇವತೆಯ ಪ್ರಸಾದದಿಂದ ಹೊಂದಲ್ಪಟ್ಟ ಪ್ರಕಾಶವೊದಲಾದ ಐಶ್ವರ್ಯವುಳ್ಳ ಇಂತಹ, ಪುರುಷಾಃ= ವಸಿಷ್ಠಾದಿ ಮಹಾಪುರುಷರೂ, ದೃಶ್ಯಂತೇ=ಕಾಣಲ್ಪಡುತ್ತಾರೆ (ಅಂದರೆ ಯೋಗಸಮೃದ್ಧಿ ಯಿಂದುಂಟಾದ ದಿವ್ಯವಾದ ದೃಷ್ಟಿಯಿಂದ ಪರಪುರುಷರಲ್ಲಿರತಕ್ಕ ಮೋಕ್ಷವನ್ನು ಸಾಕ್ಷಾತ್ಕರಿಸ ತಕ್ಕ ವಸಿಷ್ಠಾದಿಗಳು ಪ್ರತ್ಯಕ್ಷದಿಂದಲೇ ಕಾಣಲ್ಪಡುತ್ತಾರೆ ಆದಕಾರಣ ಮೋಕ್ಷನಿದೆ ಎಂದು ನಿಶ್ಚಯವೇ ಆಗುತ್ತದೆ). (ಹಾಗಾದರೆ ನಮ್ಮಂತಹವರಿಗೆ ಕಾಣದೆಯಿರುವಪ್ರಯುಕ್ತ ಅವರಿಲ್ಲ ವೆಂದರೆ) ನೃಭಿಃ = ಮನುಷ್ಯರಿಂದ, ಕಥಂ = ಹೇಗೆ, ನಿಷಿಧ್ಯಂತೇ = ನಿಷೇಧಿಸಿಕೊಳ್ಳಲ್ಪಡುತ್ತಾರೆ. (ಅಂದರೆ ಮಂದಭಾಗ್ಯವುಳ್ಳ ಪರಿಮಿತವಾದ, ಅಲ್ಪವಾದ ಗೋಪ್ಯವಾಗದಿರತಕ್ಕ ದೇಶದ ಪರಿಚಯ ಮಾತ್ರವುಳ್ಳವರು ಹೇಗೆ ನಿಷೇಧಿಸಿಯಾರು? ಅಂತಹ ಮಹಾಪುರುಷರು ವ್ಯಾಪಾರಿಗಳ ಬೀದಿಗಳಲ್ಲಿ ಇರಲಾರರು. ಆದಕಾರಣ ನಿಮಗೆ ಹೇಗೆ ಸಿಕ್ಕುವರು? ಆದಕಾರಣ ಗೋಪ್ಯವಾದ ದೂರ ದೇಶದಲ್ಲಿರತಕ್ಕವರು ಇಲ್ಲವೇಯಿಲ್ಲವೆಂದು ನಿಷೇಧಿಸಲಿಕ್ಕೆ ಸಾಧ್ಯವಾಗಲಾರರು)|| ೧೨೬ || ೧೨೭ ||

ಹಾಗಾದರೆ ಪುರುಷನ ಸ್ವರೂಪಮಾತ್ರದಲ್ಲಿ ವಿವಾದವೇ ಇಲ್ಲ. ಅವರಿಗೆ ಮಹೀಯಸ್ತ್ವವು ಯಾವುದರಿಂದ ಎಂದರೆ—

ಮೂ || ದೃಶ್ಯತೇ ಚಾತಿಮಾಹಾತ್ಮ್ಯಂ ತೇಷಾಮತಿಮಹೌಜಸಾಂ |
ಯದಿ ತೇಽಪಿ ನಿಷಿಧ್ಯಂತೇ ಕಿಂ ನೋಕ್ತಿಸ್ತೇ ನಿಷಿಧ್ಯತೇ || ೧೨೮ ||

ಅ || (ಕೇವಲ ಪುರುಷರಲ್ಲ) ಮತ್ತೆ, ಅತಿಮಹೌಜಸಾಂ=ಅತ್ಯಂತವಾಗಿ ಮಹತ್ತಾದ ಸಾಮರ್ಥ್ಯವುಳ್ಳ, ತೇಷಾಂ = ಅಂತಹ ಅಗಸ್ತ್ಯ-ವಸಿಷ್ಠಾದಿಗಳಿಗೆ, ಅತಿಮಾಹಾತ್ಮ್ಯಂ ಚ = ಮಹೀಯಸ್ತ್ವವೂ ಕೂಡ, ದೃಶ್ಯತೇ=ಕಾಣಲ್ಪಡುತ್ತದೆ. (ಅಂದರೆ— ಸಮುದ್ರಪಾನ ವೊದ ಲಾದ ಮಹಾಸಾಮರ್ಥ್ಯಗಳು ಕಂಡಿವೆ. ಅವುಗಳು ಮಹೈಶ್ವರ್ಯ ಸಾಧ್ಯಗಳು. ಕಾರ್ಯ ಗಳು ಕಾರಣಗಳು ಇಲ್ಲದೆ ಆಗಲಾರವು. ಮಹೈಶ್ವರ್ಯಗಳಲ್ಲಿ ಸಾರ್ವಜ್ಞರೂಪವಾದ ಪ್ರಾಕಾಶ್ಯವು ಸೇರಿರುವುದರಿಂದ ಅಗಸ್ತ್ಯ-ವಸಿಷ್ಠಾದಿಗಳಿಗೆ ಅತಿಶಯವಾಗಿ ಮಹತ್ತ್ವವು

ಸಿದ್ಧಿಸುತ್ತದೆ.) (ಹಾಗಾದರೆ ಅಗಸ್ತ್ಯ-ವಸಿಷ್ಠಾದಿಗಳ ಸಂಬಂಧಿಯಾದ, ಮೋಕ್ಷವಿಷಯಕ ವಾದ ಪ್ರತ್ಯಕ್ಷವು ಪರರಿಗೆ ಯಾವುದರಿಂದ ಸಿದ್ಧಿಸುತ್ತದೆ? ಅವರ ವಾಕ್ಯದಿಂದ ಎಂದು ಹೇಳ ಕೂಡದು. ಆ ವಸಿಷ್ಠಾದಿಗಳಿಗೆ ವಂಚಕತ್ವವೂ ಕೂಡಬಹುದು ಎಂದರೆ—) (ವಂಚನೆಗೆ ಪ್ರಯೋಜನವು ಇರಬೇಕು. ಸಮಸ್ತ ಐಶ್ವರ್ಯವನ್ನು ಹೊಂದಿರುವ ಆ ವಸಿಷ್ಠಾದಿಗಳಿಗೆ ವಂಚನ ಮಾಡಲಿಕ್ಕೆ ಪ್ರಯೋಜನಾನುಸಂಧಾನವು ಕೂಡುವುದಿಲ್ಲ. ತೇಽಪಿ=ಇಂತಹ ಯೋಗಿ ಗಳೂ ಕೂಡ, ನಿಷಿಧ್ಯಂತೇ ಯದಿ=ವಿಪ್ರಲಂಭಕರೆಂದು ನಿಷೇಧಿಸಲ್ಪಡುವುದಾದರೆ, (ಅಂದರೆ ಆ ವಸಿಷ್ಠಾದಿಗಳ ವಾಕ್ಯವೂ ವಿಪ್ರಲಂಭಮೂಲಕವು ಎಂದು ನಿರಾಕರಿಸಲ್ಪಡುವುದಾದರೆ—) ಆಗ, ತೇ ಉಕ್ತಿಃ=ನಿನ್ನಿಂದ ಅಂಗೀಕೃತವಾದ ಚಾರ್ವಾಕಾಚಾರ್ಯರ ಉಕ್ತಿಯೂ, ಕಿಂ ನ ನಿಷಿಧ್ಯತೇ=ಹಾಗೆಯೇ ಏಕೆ ನಿಷೇಧಿಸಲ್ಪಡುವುದಿಲ್ಲ. (ಅಂದರೆ ಅದೂ ವಿಪ್ರಲಂಭಮೂಲಕವೆಂದು ಕಲ್ಪಿಸಿ, ಅನಾದರಣೀಯವಾಗಬೇಕಾಗುವುದು) ॥ ೧೨೮ ॥

ಚಾರ್ವಾಕಾಚಾರ್ಯರ ಉಕ್ತಿಯು ವಿಪ್ರಲಂಭಮೂಲಕವೆನ್ನುವ ಸಂಶಯದಿಂದ ನಿರಾಕರಿಸ ಲ್ಪಡುವುದಿಲ್ಲ. ಪ್ರತ್ಯಕ್ಷ ಸಂವಾದದಿಂದ ಅದಕ್ಕೆ ಪ್ರಾಮಾಣ್ಯ ನಿಶ್ಚಯವಾಗುತ್ತದೆ. ಎಂದರೆ— ಪ್ರಕೃತದಲ್ಲಿಯೂ ಅದು ಪ್ರತ್ಯಕ್ಷದಿಂದ ಪ್ರಾಮಾಣ್ಯನಿಶ್ಚಯವೂ, ನಾವು ಹೇಳುವ ಯೋಗಿಗಳ ವಾಕ್ಯದಲ್ಲಿಯೂ ಸಮವೇ ಎನ್ನುತ್ತಾರೆ—

**ಮೂ ॥ ಯದುಕ್ತವಾಕ್ಯಪ್ರಾಮಾಣ್ಯಂ ಪ್ರತ್ಯಕ್ಷೇಣೋಪಲಭ್ಯತೇ ।**
**ವರಾದಯೋಽಪಿ ತದ್ದತ್ತಾಃ ಸದಾ ಸತ್ಯಾ ಭವಂತಿ ಹಿ ॥ ೧೨೯ ॥**

ಅ ॥ ಯದುಕ್ತವಾಕ್ಯಪ್ರಾಮಾಣ್ಯಂ=ಯಾವ ಯೋಗಿಗಳಿಂದ ಹೇಳಲ್ಪಟ್ಟ ವಾಕ್ಯಗಳಿಗೆ ಪ್ರಾಮಾಣ್ಯವು, ಪ್ರತ್ಯಕ್ಷೇಣ=ಪ್ರತ್ಯಕ್ಷ ಸಂವಾದದಿಂದ, ಉಪಲಭ್ಯತೇ=ನಿಶ್ಚಯಿಸಲ್ಪಡುತ್ತದೋ, (ಅವರೂ ಕೂಡ ನಿಷೇಧಿಸಲ್ಪಡುವುದಾದರೆ ನಿನ್ನಿಂದ ಅಂಗೀಕೃತವಾದ ಚಾರ್ವಾಕಾಚಾರ್ಯರ ಉಕ್ತಿಯೂ ಏಕೆ ನಿಷೇಧಿಸಲ್ಪಡುವುದಿಲ್ಲ?) (ಹೇಗೆಂದರೆ—) ತದ್ದತ್ತಾಃ=ಆ ಯೋಗಿಗಳಿಂದ ಕೊಡಲ್ಪಟ್ಟ, ವರಾದಯೋಽಪಿ = ವರಗಳೂ, ಶಾಪಗಳೂ ಕೂಡ, ಸದಾ = ಯಾವಾಗಲೂ ನಿಯಮದಿಂದಲೇ, ಸತ್ಯಾಃ=ಯಥಾರ್ಥಗಳು, ಹಿ=ಯಾವ ಕಾರಣದೆಶೆಯಿಂದ, ಭವಂತಿ= ಆಗುತ್ತವೋ, (ಆದುದರಿಂದ) ಅವರೂ ನಿಷೇಧಿಸಲ್ಪಡುವುದಾದರೆ ನಿನ್ನಿಂದ ಅಂಗೀಕೃತವಾದ ಚಾರ್ವಾಕಾಚಾರ್ಯರ ಉಕ್ತಿಯೂ ಏಕೆ ನಿಷೇಧಿಸಲ್ಪಡುವುದಿಲ್ಲ?

ತಾ ॥ ಅಂತಹ ಮಹಾಯೋಗಿಗಳು ಪ್ರಸನ್ನರಾಗಿ ನಿನಗೆ ಇದು ಮಂಗಲವಾಗುವುದು ಎಂದಾಗಲೀ, ಕುಪಿತರಾಗಿ ನಿನಗೆ ಅಮಂಗಲವಾಗುವುದು ಎಂದಾಗಲೀ ಏನು ಹೇಳುವರೋ ಅದು ಹಾಗೆಯೇ ಆಗುವುದು ಪ್ರತ್ಯಕ್ಷದಿಂದ ಉಪಲಬ್ಧವಾಗುತ್ತದೆ ॥ ೧೨೯ ॥

ಸ. ರ. ವಿ.— ಚಾರ್ವಾಕಾಚಾರ್ಯರಿಗೆ ಮುಂದೆ ಹೇಳುವ ಕಾರಣದಿಂದಲೂ ಮಹಾ ತ್ಮತ್ವವು ಕೂಡುವುದಿಲ್ಲವೆನ್ನುತ್ತಾರೆ—

ನ್ಯಾಯಸುಧಾ— ಹೇತ್ವಂತರದಿಂದಲೂ ಚಾರ್ವಾಕಾಚಾರ್ಯರ ವಾಕ್ಯಕ್ಕೆ ಅಪ್ರಾಮಾ ಣ್ಯವನ್ನುಪಪಾದಿಸುತ್ತಾರೆ—

**ಮೂ ॥ ಅಪ್ರಾಮಾಣ್ಯಂ ತದುಕ್ತೇಶ್ಚ ವೃಥಾವಾಚಾವಸೀಯತೇ ।**
**ನ ಹಿ ಪ್ರಯೋಜನಂ ಕಿಂಚಿತ್ಪರಲೋಕನಿವಾರಣಾತ್ ॥**
**ವೃಥಾವಾಚಂ ವೃಥಾ ಹನ್ಯಾದ್ಯದಿ ತಸ್ಯ ಕಿಮುತ್ತರಂ ॥ ೧೩೦ ॥**

ಅ || ತದುಕ್ತೇಃ=ಚಾರ್ವಾಕಾಚಾರ್ಯರ ಉಕ್ತಿಗೆ, ವೃಥಾವಾಚಾ=ವೃಥಾತ್ವವಿದ್ದ ಪ್ರಯುಕ್ತ, ಅಪ್ರಾಮಾಣ್ಯಂಚ = ಅಪ್ರಾಮಾಣ್ಯವಾದರೂ, ಅವಸೀಯತೇ = ನಿಶ್ಚಿತವಾಗುತ್ತದೆ. (ಚಾರ್ವಾಕಾಚಾರ್ಯೋಕ್ತಿಗೆ ವೃಥಾತ್ವವು ಹೇಗೆಂದರೆ—) ಪರಲೋಕನಿವಾರಣಾತ್=ಮೋಕ್ಷಾದಿ ಪರಲೋಕವನ್ನು ನಿವಾರಣಮಾಡುವುದರಿಂದ, (ನಾಸ್ತಿತ್ವವನ್ನು ಪ್ರತಿಪಾದಿಸಿದರಿಂದ ಲಭ್ಯವಾದ) ಕಿಂಚಿತ್ಪ್ರಯೋಜನಂ=ಯಾವಪ್ರಯೋಜನವೂ, ನಹಿ=ಇಲ್ಲವಷ್ಟೆ, ಹಿ=ಪ್ರಸಿದ್ಧವು. (ಅಂದರೆ— ಚಾರ್ವಾಕಾಚಾರ್ಯರ ಉಕ್ತಿಗೆ ೧ ಅದೃಷ್ಟವು ಪ್ರಯೋಜನವೋ, ೨ ದೃಷ್ಟವು ಪ್ರಯೋಜನವೋ? ೧ ಪರಲೋಕವನ್ನು ನಿವಾರಣಮಾಡಿದರಿಂದ ಅದೃಷ್ಟ ಪ್ರಯೋಜನವೆಂದು ಹೇಳಕೂಡದು. ೨ ದೃಷ್ಟಪ್ರಯೋಜನವೆಂದೂ ಹೇಳಕೂಡದು. ಗುರುಶಿಷ್ಯರಿಗೆ ಅರ್ಥ-ಕಾಮರೂಪಗಳಾದ ದೃಷ್ಟಲಾಭವು ತೋರಿಬರಲಿಲ್ಲ ) (ಧರ್ಮಾಧರ್ಮಗಳನ್ನು ವ್ಯವಸ್ಥೆಮಾಡತಕ್ಕ ವೈದಿಕರ ವಚನಗಳಿಂದ ತಡೆಯಲ್ಪಟ್ಟ ಇಚ್ಛಾನುಸಾರವಾದ ಭೋಗವುಳ್ಳ ಪ್ರಾಣಿಗಳಿಗೆ ಧರ್ಮಾದಿಗಳು ಇಲ್ಲವೆಂದು ಪ್ರತಿಪಾದಿಸಿದರಿಂದ ಇಚ್ಛಾನುಸಾರವಾದ ಕಾಮಗಳ ಉಪಭೋಗಿಸುವಿಕೆಯ ಉಪರೋಧ ನಿವೃತ್ತಿರೂಪವಾದ ಪರೋಪಕಾರವು ಚಾರ್ವಾಕಾಚಾರ್ಯರಿಗೆ ಮಹಾಪ್ರಯೋಜನವಿದೆ. ಶಿಷ್ಯರಿಗಾದರೂ ಕಾಮೋಪಭೋಗದ ಉಪರೋಧದ ನಿವೃತ್ತಿಯೇ ಪ್ರಯೋಜನವಿದೆ. ಆದಕಾರಣ ವೃಥಾತ್ವವು ಹೇಗೆಂದರೆ—) ವೃಥಾವಾಚಂ=ವ್ಯರ್ಥವಾದ ಮಾತುಳ್ಳವನನ್ನು ಅಥವಾ ಅದೃಷ್ಟ ಪ್ರಯೋಜನರಹಿತವಾದ ಮಾತುಳ್ಳವನನ್ನು ಆಚಾರ್ಯರನ್ನಾಗಲೀ ಶಿಷ್ಯನನ್ನಾಗಲೀ, ಯದಿ=ಯಾವಪಕ್ಷದಲ್ಲಿ, ಕಶ್ಚಿತ್ = ಯಾರಾದರೂ ಒಬ್ಬನು, ವೃಥೈವ=ವ್ಯರ್ಥವಾಗಿಯೇ, ಹನ್ಯಾತ್=ಸಂಹರಿಸುವನೋ, (ಆಗ ಆತನನ್ನು ಕುರಿತು) ತಸ್ಯ=ಆತನಿಗೆ, ಕಿಮುತ್ತರಂ=ಏನು ಉತ್ತರವು.? (ಏನೂ ಇಲ್ಲ)

ತಾ || ಧರ್ಮ-ಅಧರ್ಮಗಳು ಇಲ್ಲವೇ ಇಲ್ಲ. ಆದಕಾರಣ ಇಚ್ಛಾನುಸಾರವಾಗಿ ನೀನು ಕಾಮೋಪಭೋಗವನ್ನು ಮಾಡಬೇಕು. ಹೀಗೆ ಚಾರ್ವಾಕಾಚಾರ್ಯರಿಂದ ಬೋಧಿಸಿಕೊಳ್ಳಲ್ಪಟ್ಟ ಅವರ ಶಿಷ್ಯನು ಗುರುಗಳ ಹೆಂಡತಿ ಮೊದಲಾದ, ಸುಂದರಿಯಾದ ಸ್ತ್ರೀಯರ ಅಪಹಾರಕ್ಕಾಗಿ ಗುರುಗಳನ್ನು ಸಂಹರಿಸಿದರೆ ಆಗ ಆತನಿಗೆ ಪಾಪವಿದೆಯೆಂದು ಹೇಳಲಿಕ್ಕೆ ಬರುವುದಿಲ್ಲ. ಉಪಕಾರಮಾಡಿದವರಿಗೆ ಅಪಕಾರವು ಮಹಾಪ್ರತ್ಯವಾಯಕ್ಕೆ ಕಾರಣವೆಂದು ವೈದಿಕರು ಹೇಳುವುದನ್ನು ಚಾರ್ವಾಕಾಚಾರ್ಯರೇ ಸುಳ್ಳೆಂದು ಹೇಳಿರುವರು. ಉಪಕಾರ ಮಾಡಿದವರಿಗೆ ಪ್ರತ್ಯುಪಕಾರಮಾಡುವುದೂ ಕೂಡ ಧರ್ಮಾದಿಗಳು ಇವೆ ಎಂಬುವ ನಂಬಿಕೆ ಇದ್ದರೇನೇ ಆ ನಂಬಿಕೆಯನ್ನು ಆ ಚಾರ್ವಾಕಾಚಾರ್ಯರೇ ಕೆಡಿಸಿದ್ದಾರೆ ಆದಕಾರಣ ಚಾರ್ವಾಕಾಚಾರ್ಯರಿಗೆ ಇಂತಹ ಉಪದೇಶದಿಂದ ಪ್ರಯೋಜನವು ಏನೂ ಇಲ್ಲವೇಇಲ್ಲ. ಮತ್ತೆ ತನ್ನ ಜೀವನಕ್ಕೇನೇ ಹಿಂದೆ ಹೇಳಿದ ರೀತಿಯಿಂದ ಹಾನಿರೂಪವಾದ ಅನರ್ಥವೇ. ಹೀಗೆಯೇ ಶಿಷ್ಯರಿಗೂ ಕೂಡ ಪರಸ್ಪರವಾಗಿ ಧನ-ವನಿತಾದಿಗಳನ್ನು ಅಪಹರಿಸುವುದಕ್ಕಾಗಿ ಪರಸ್ಪರ ವಧಾದಿಗಳಲ್ಲಿಯೇ ಪ್ರವೃತ್ತಿಯಾಗುವುದು ಅಲ್ಲದೆ ಯಥೇಷ್ಟ ಕಾಮೋಪಭೋಗಕ್ಕೆ ಅವಕಾಶವು ಸಿಗಲಾರದು ॥ ೧೩೦ ॥

ಹೀಗೆ ಚಾರ್ವಾಕಾಚಾರ್ಯರ ಉಕ್ತಿಗೆ ವೈಯರ್ಥ್ಯವೂ, ಅನರ್ಥಹೇತುತ್ವವೂ ಇರಲಿ. ಆದಾಗ್ಯೂ ಅಪ್ರಾಮಾಣ್ಯವು ಯಾವುದರಿಂದ ಎಂದರೆ—

**ಮೂ॥ ಸ್ವಜೀವನವಿರೋಧಾಯ ವದನ್ ಕಿಂ ನಾಮ ಬುದ್ಧಿಮಾನ್ ॥೧೩೧॥**

**ಪ್ರಾಮಾಣ್ಯೇ ಸಂಶಯಃ ಕಿಂ ಸ್ಯಾತ್ತಯೋಃ ಪುರುಷಯೋರಪಿ |**

ಸ್ವಜೀವನವಿರುದ್ಧೋಕ್ತಿರಜ್ಞೋ ದೃಷ್ಟಸ್ಯ ಚಾಪಿ ಯಃ ॥ ೧೩೨ ॥
ಯಶ್ಚಾತೀಂದ್ರಿಯದೇವೋಕ್ತಿಶ್ರೋತಾ ದೃಷ್ಟಪರಾವರಃ ।
ಅತೀತಾನಾಗತಂ ಸರ್ವಂ ಲೋಕಾನುಭವಮಾಪಯನ್ ॥ ೧೩೩ ॥

ಅ ॥ ಸ್ವಜೀವನವಿರೋಧಾಯ=ತನ್ನ (ಮತ್ತು ಶಿಷ್ಯರ) ಜೀವನದ ವಿರೋಧಕ್ಕೋಸ್ಕರ, ವದನ್=ವ್ಯರ್ಥ್ಯವನ್ನೂ, ಅನರ್ಥವನ್ನೂ ಹೇಳುವವನು, ಬುದ್ಧಿಮಾನ್ ಕಿಂ ನಾಮ = ಬುದ್ಧಿಯುಳ್ಳವನು ಆದಾನೋ ಏನು? (ಅಂದರೆ— ವ್ಯರ್ಥಾನರ್ಥಕ್ಕೆ ಕಾರಣವಾದ ವಾಕ್ಯವನ್ನು ಹೇಳುವುದರಿಂದ ಚಾರ್ವಾಕಾಚಾರ್ಯರಿಗೆ ವಿವೇಕವಿಲ್ಲವೆನ್ನುವುದು ಅನುಮಿತವಾಗುತ್ತದೆ. ಆದಕಾರಣ ಚಾರ್ವಾಕಾಚಾರ್ಯರ ವಾಕ್ಯಕ್ಕೆ ಅಪ್ರಾಮಾಣ್ಯವು ಸಿದ್ಧಿಸುತ್ತದೆ.) (ಹಿಂದೆಹೇಳಿದ ಅರ್ಥವು ಬುದ್ಧಿಯಲ್ಲಿ ಆರೂಢವಾಗುವುದಕ್ಕೋಸ್ಕರ ಸಂಕ್ಷೇಪದಿಂದ ಹೇಳುತ್ತಾರೆ.) (೧) ಯಃ=ಯಾವ ಚಾರ್ವಾಕಾಚಾರ್ಯರು, ಸ್ವಜೀವನವಿರುದ್ಧೋಕ್ತಿಃ=ತನ್ನ ಮತ್ತು ಶಿಷ್ಯರ ಜೀವನಕ್ಕೆ ವಿರುದವಾದ ವಚನವುಳ್ಳವರೋ, ದೃಷ್ಟಸ್ಯ ಚ=ದರ್ಶನಕ್ಕೆ ಯೋಗ್ಯವಾದ ಬಹ್ವರ್ಥವನ್ನು, ಅಜ್ಞಃ=ತಿಳಿಯದೆ ಇರುವನೋ, (೨) ಯಶ್ಚ = ಯಾವ ಯೋಗಿಯು, ಅತೀಂದ್ರಿಯ ದೇವೋಕ್ತಿಶ್ರೋತಾ=ಇಂದ್ರಿಯಕ್ಕೆ ಅಗೋಚರರಾದ ದೇವತೆಗಳ ಉಕ್ತಿಮೊದಲಾದವುಗಳನ್ನು ಕೇಳಿದವನೋ, ದೃಷ್ಟಪರಾವರಃ=ಕಾಣಲ್ಪಟ್ಟ ಪರತತ್ತ್ವ-ಅಪರತತ್ತ್ವಜ್ಞಾನವುಳ್ಳವನೋ, ಅತೀತಾನಾಗತಂ ಸರ್ವಂ=ಭೂತ ಭವಿಷ್ಯತ್ಕಾಲಿಕವಾದ ಎಲ್ಲಾ ವಸ್ತುವನ್ನು,ಲೋಕಾನುಭವಂ=(ಪ್ರತ್ಯಕ್ಷ ಸಂವಾದದಿಂದ) ಜನರಿಗೆ ವಿಶ್ವಾಸವನ್ನು, ಆಪಯನ್=ಹೊಂದಿಸಿಕೊಡುತ್ತಾನೋ, ತಯೋರಪಿ ಪುರುಷಯೋಃ=ಆ ಪುರುಷರಿಗೂ, (ಅಂದರೆ—ತನ್ನ ಜೀವನಕ್ಕೆ ವಿರುದ್ಧವಾದ ಪರಲೋಕ ಪುಣ್ಯಪಾಪಾದಿಗಳು ಇಲ್ಲವೆಂದು ಹೇಳುವ ಚಾರ್ವಾಕಾಚಾರ್ಯರಿಗೂ, ಅತೀಂದ್ರಿಯವಾದ ದೇವೋಕ್ತಿಶ್ರೋತೃತ್ವಮೊದಲಾದ ಮಹಾಗುಣವುಳ್ಳ ಯೋಗಿಗೂ,) ಪ್ರಾಮಾಣ್ಯೇ = ಆಪ್ತತ್ವ ವಿಷಯದಲ್ಲಿ, ಸಂಶಯಃ= ಸಂದೇಹವು, ಸ್ಯಾತ್ ಕಿಂ=ಆಗುವುದೋ ಏನು? (ಸರ್ವಥಾ ಆಗಲಾರದು.) (ಈ ಎರಡರಲ್ಲಿ ಒಂದನೆಯವನಿಗೆ ಅನಾಪ್ತತ್ವವೇ. ಎರಡನೇಯವನಿಗೆ ಆಪ್ತತ್ವವೇ ನಿಶ್ಚಿತವಾಗುತ್ತದೆ) ॥ ೧೩೧ ॥ ೧೩೨ ॥ ೧೩೩ ॥

ಹೀಗೆ ನಿಮಿತ್ತವಿಲ್ಲದಿರುವುದರಿಂದ ಸರ್ವಥಾ ಅಸಂಭಾವಿತವಾದ ಅತೀಂದ್ರಿಯಜ್ಞಾನವುಳ್ಳ, ಕಾಮುಕತ್ವಾದಿಗಳಿಂದ ಸಂಭಾವನಾವಿಷಯವಾದ ವಂಚನೆಯುಳ್ಳ, ಚಾರ್ವಾಕಾಚಾರ್ಯರಿಗೆ ಯೋಗಸಾಮರ್ಥ್ಯದಿಂದ ಸಂಭಾವಿತವಾದ ಸಾರ್ವಜ್ಞವುಳ್ಳ ಸಮಸ್ತ ಐಶ್ವರ್ಯಗಳು ಇದ್ದುದರಿಂದ ವಂಚಕತ್ವ ಸಂಭಾವನೆಗೂ ವಿಷಯನಾಗದೆ ಇರುವ ಪ್ರತ್ಯಕ್ಷಸಂವಾದಿಯಾದ ವಚನವುಳ್ಳ ಯೋಗಿಯನ್ನು ಕುರಿತು ಪ್ರತಿಭಟತ್ವವೇ ಕೂಡದಿರುವುದರಿಂದ ಆ ಯೋಗಿಯ ವಚನದಿಂದ ತಿಳಿಯಲ್ಪಟ್ಟ ಯೋಗಿಯ ಪ್ರತ್ಯಕ್ಷದಿಂದ ಮೋಕ್ಷವು ಸಿದ್ಧಿಸುತ್ತದೆಂದು ಹೇಳಲ್ಪಟ್ಟಿತು. ಈಗಲಾದರೂ ವೇದದಿಂದಲೂ ಸಾಧಿಸಲಿಕ್ಕೆ ಇಚ್ಛಿಸಿದವರಾಗಿ, ಆ ವೇದಪ್ರಾಮಾಣ್ಯದಲ್ಲಿ ವಿವಾದಗ್ರಸ್ತನನ್ನು ಕುರಿತು ೧ ಸಂವಾದವಿಲ್ಲದಿರುವುದರಿಂದ ವೇದಕ್ಕೆ ಅಪ್ರಾಮಾಣ್ಯವು ಹೇಳಲ್ಪಡುತ್ತದೋ, ೨ ಅಥವಾ ಉನ್ಮತ್ತನ ವಾಕ್ಯದಂತೆ ವಾಕ್ಯತ್ವವಿದ್ದಪ್ರಯುಕ್ತ ಅಪ್ರಾಮಾಣ್ಯವು ಹೇಳಲ್ಪಡುತ್ತದೋ? ೩ ಅಥವಾ ಉನ್ಮತ್ತನ ವಾಕ್ಯದಿಂದ ವಿಶೇಷವು ನಿಶ್ಚಿತವಾಗದಿರುವುದರಿಂದಲೋ, ೪ ಅಥವಾ ಬಾಧಿತವಾಗಿರುವುದರಿಂದಲೋ ಎಂದು ವಿಕಲ್ಪಿಸಿಕೊಂಡು ೧ನೇ ಕಲ್ಪದಲ್ಲಿಯೂ ಎಲ್ಲಾದಕೂ ಸಂವಾದವು ಇಲ್ಲವೋ? ಅಥವಾ ಏಕದೇಶಕ್ಕೆ ಸಂವಾದವಿಲ್ಲವೋ? ಎಂದು ವಿಕಲ್ಪಿಸಿಕೊಂಡು ೧ನೇದ್ದನ್ನು ನಿರಾಕರಿಸುತ್ತಾರೆ—

ಅ || ತದುಕ್ತೇಃ=ಚಾರ್ವಾಕಾಚಾರ್ಯರ ಉಕ್ತಿಗೆ, ವೃಥಾವಾಚಾ=ವೃಥಾತ್ವವಿದ್ದಪ್ರಯುಕ್ತ, ಅಪ್ರಾಮಾಣ್ಯಂಚ = ಅಪ್ರಾಮಾಣ್ಯವಾದರೂ, ಅವಸೀಯತೇ = ನಿಶ್ಚಿತವಾಗುತ್ತದೆ. (ಚಾರ್ವಾಕಾಚಾರ್ಯೋಕ್ತಿಗೆ ವೃಥಾತ್ವವು ಹೇಗೆಂದರೆ—) ಪರಲೋಕನಿವಾರಣಾತ್=ಮೋಕ್ಷಾದಿ ಪರಲೋಕವನ್ನು ನಿವಾರಣಮಾಡುವುದರಿಂದ, (ನಾಸ್ತಿತ್ವವನ್ನು ಪ್ರತಿಪಾದಿಸಿದರಿಂದ ಲಭ್ಯವಾದ) ಕಿಂಚಿತ್ಪ್ರಯೋಜನಂ=ಯಾವಪ್ರಯೋಜನವೂ, ನಹಿ=ಇಲ್ಲವಷ್ಟೆ, ಹಿ=ಪ್ರಸಿದ್ಧವು. (ಅಂದರೆ—ಚಾರ್ವಾಕಾಚಾರ್ಯರ ಉಕ್ತಿಗೆ ೧ ಅದೃಷ್ಟವು ಪ್ರಯೋಜನವೋ, ೨ ದೃಷ್ಟವು ಪ್ರಯೋಜನವೋ? ೧ ಪರಲೋಕವನ್ನು ನಿವಾರಣಮಾಡಿದರಿಂದ ಅದೃಷ್ಟ ಪ್ರಯೋಜನವೆಂದು ಹೇಳಕೂಡದು. ೨ ದೃಷ್ಟಪ್ರಯೋಜನವೆಂದೂ ಹೇಳಕೂಡದು. ಗುರುಶಿಷ್ಯರಿಗೆ ಅರ್ಥ-ಕಾಮರೂಪಗಳಾದ ದೃಷ್ಟಲಾಭವು ತೋರಿಬರಲಿಲ್ಲ ) (ಧರ್ಮಾಧರ್ಮಗಳನ್ನು ವ್ಯವಸ್ಥೆಮಾಡತಕ್ಕ ವೈದಿಕರ ವಚನಗಳಿಂದ ತಡೆಯಲ್ಪಟ್ಟ ಇಚ್ಛಾನುಸಾರವಾದ ಭೋಗವುಳ್ಳ ಪ್ರಾಣಿಗಳಿಗೆ ಧರ್ಮಾದಿಗಳು ಇಲ್ಲವೆಂದು ಪ್ರತಿಪಾದಿಸಿದರಿಂದ ಇಚ್ಛಾನುಸಾರವಾದ ಕಾಮಗಳ ಉಪಭೋಗಿಸುವಿಕೆಯ ಉಪರೋಧನಿವೃತ್ತಿರೂಪವಾದ ಪರೋಪಕಾರವು ಚಾರ್ವಾಕಾಚಾರ್ಯರಿಗೆ ಮಹಾಪ್ರಯೋಜನವಿದೆ. ಶಿಷ್ಯರಿಗಾದರೂ ಕಾಮೋಪಭೋಗದ ಉಪರೋಧದ ನಿವೃತ್ತಿಯೇ ಪ್ರಯೋಜನವಿದೆ. ಆದಕಾರಣ ವೃಥಾತ್ವವು ಹೇಗೆಂದರೆ—) ವೃಥಾವಾಚಂ=ವ್ಯರ್ಥವಾದ ಮಾತುಳ್ಳವನನ್ನು ಅಥವಾ ಅದೃಷ್ಟ ಪ್ರಯೋಜನರಹಿತವಾದ ಮಾತುಳ್ಳವನನ್ನು ಆಚಾರ್ಯರನ್ನಾಗಲೀ ಶಿಷ್ಯನನ್ನಾಗಲೀ, ಯದಿ=ಯಾವಪಕ್ಷದಲ್ಲಿ, ಕಶ್ಚಿತ್ = ಯಾರಾದರೂ ಒಬ್ಬನು, ವೃಥೈವ=ವ್ಯರ್ಥವಾಗಿಯೇ, ಹನ್ಯಾತ್=ಸಂಹರಿಸುವನೋ, (ಆಗ ಆತನನ್ನು ಕುರಿತು) ತಸ್ಯ=ಆತನಿಗೆ, ಕಿಮುತ್ತರಂ=ಏನು ಉತ್ತರವು.? (ಏನೂ ಇಲ್ಲ)

ತಾ || ಧರ್ಮ-ಅಧರ್ಮಗಳು ಇಲ್ಲವೇ ಇಲ್ಲ. ಆದಕಾರಣ ಇಚ್ಛಾನುಸಾರವಾಗಿ ನೀನು ಕಾಮೋಪಭೋಗವನ್ನು ಮಾಡಬೇಕು. ಹೀಗೆ ಚಾರ್ವಾಕಾಚಾರ್ಯರಿಂದ ಬೋಧಿಸಿಕೊಳ್ಳಲ್ಪಟ್ಟ ಅವರ ಶಿಷ್ಯನು ಗುರುಗಳ ಹೆಂಡತಿ ಮೊದಲಾದ, ಸುಂದರಿಯಾದ ಸ್ತ್ರೀಯರ ಅಪಹಾರಕ್ಕಾಗಿ ಗುರುಗಳನ್ನು ಸಂಹರಿಸಿದರೆ ಆಗ ಆತನಿಗೆ ಪಾಪವಿದೆಯೆಂದು ಹೇಳಲಿಕ್ಕೆ ಬರುವುದಿಲ್ಲ. ಉಪಕಾರಮಾಡಿದವರಿಗೆ ಅಪಕಾರವು ಮಹಾಪ್ರತ್ಯವಾಯಕ್ಕೆ ಕಾರಣವೆಂದು ವೈದಿಕರು ಹೇಳುವುದನ್ನು ಚಾರ್ವಾಕಾಚಾರ್ಯರೇ ಸುಳ್ಳೆಂದು ಹೇಳಿರುವರು. ಉಪಕಾರ ಮಾಡಿದವರಿಗೆ ಪ್ರತ್ಯುಪಕಾರಮಾಡುವುದೂ ಕೂಡ ಧರ್ಮಾದಿಗಳು ಇವೆ ಎಂಬುವ ನಂಬಿಕೆ ಇದ್ದರೇನೇ ಆ ನಂಬಿಕೆಯನ್ನು ಆ ಚಾರ್ವಾಕಾಚಾರ್ಯರೇ ಕೆಡಿಸಿದ್ದಾರೆ ಆದಕಾರಣ ಚಾರ್ವಾಕಾಚಾರ್ಯರಿಗೆ ಇಂತಹ ಉಪದೇಶದಿಂದ ಪ್ರಯೋಜನವು ಏನೂ ಇಲ್ಲವೇಇಲ್ಲ. ಮತ್ತೆ ತನ್ನ ಜೀವನಕ್ಕೇನೇ ಹಿಂದೆ ಹೇಳಿದ ರೀತಿಯಿಂದ ಹಾನಿರೂಪವಾದ ಅನರ್ಥವೇ. ಹೀಗೆಯೇ ಶಿಷ್ಯರಿಗೂ ಕೂಡ ಪರಸ್ಪರವಾಗಿ ಧನ-ವನಿತಾದಿಗಳನ್ನು ಅಪಹರಿಸುವುದಕ್ಕಾಗಿ ಪರಸ್ಪರ ವಧಾದಿಗಳಲ್ಲಿಯೇ ಪ್ರವೃತ್ತಿಯಾಗುವುದು ಅಲ್ಲದೆ ಯಥೇಚ್ಛ ಕಾಮೋಪಭೋಗಕ್ಕೆ ಅವಕಾಶವು ಸಿಗಲಾರದು ॥ ೧೩೦ ॥

ಹೀಗೆ ಚಾರ್ವಾಕಾಚಾರ್ಯರ ಉಕ್ತಿಗೆ ವೈಯರ್ಥ್ಯವೂ, ಅನರ್ಥಹೇತುತ್ವವೂ ಇರಲಿ. ಆದಾಗ್ಯೂ ಅಪ್ರಾಮಾಣ್ಯವು ಯಾವುದರಿಂದ ಎಂದರೆ—

**ಮೂ॥ ಸ್ವಜೀವನವಿರೋಧಾಯ ವದನ್ ಕಿಂ ನಾಮ ಬುದ್ಧಿಮಾನ್ ॥ ೧೩೧ ॥**

**ಪ್ರಾಮಾಣ್ಯೇ ಸಂಶಯಃ ಕಿಂ ಸ್ಯಾತ್ತಯೋಃ ಪುರುಷಯೋರಪಿ ।**

**ಸ್ವಜೀವನವಿರುದ್ಧೋಕ್ತಿರಜ್ಞೋ ದೃಷ್ಟಸ್ಯ ಚಾಪಿ ಯಃ ॥ ೧೩೨ ॥**
**ಯಶ್ಚಾತೀಂದ್ರಿಯದೇವೋಕ್ತಿಶ್ರೋತಾ ದೃಷ್ಟಪರಾವರಃ ।**
**ಅತೀತಾನಾಗತಂ ಸರ್ವಂ ಲೋಕಾನುಭವಮಾಪಯನ್ ॥ ೧೩೩ ॥**

ಅ ॥ ಸ್ವಜೀವನವಿರೋಧಾಯ=ತನ್ನ (ಮತ್ತು ಶಿಷ್ಯರ) ಜೀವನದ ವಿರೋಧಕ್ಕೋಸ್ಕರ, ವದನ್=ವ್ಯರ್ಥ್ಯವನ್ನೂ, ಅನರ್ಥವನ್ನೂ ಹೇಳುವವನು, ಬುದ್ಧಿಮಾನ್ ಕಿಂ ನಾಮ = ಬುದ್ಧಿಯುಳ್ಳವನು ಆದಾನೋ ಏನು? (ಅಂದರೆ— ವ್ಯರ್ಥಾನರ್ಥಕ್ಕೆ ಕಾರಣವಾದ ವಾಕ್ಯವನ್ನು ಹೇಳುವುದರಿಂದ ಚಾರ್ವಾಕಾಚಾರ್ಯರಿಗೆ ವಿವೇಕವಿಲ್ಲವೆನ್ನುವುದು ಅನುಮಿತವಾಗುತ್ತದೆ. ಆದಕಾರಣ ಚಾರ್ವಾಕಾಚಾರ್ಯರ ವಾಕ್ಯಕ್ಕೆ ಅಪ್ರಾಮಾಣ್ಯವು ಸಿದ್ಧಿಸುತ್ತದೆ.) (ಹಿಂದೆಹೇಳಿದ ಅರ್ಥವು ಬುದ್ಧಿಯಲ್ಲಿ ಆರೂಢವಾಗುವುದಕ್ಕೋಸ್ಕರ ಸಂಕ್ಷೇಪದಿಂದ ಹೇಳುತ್ತಾರೆ.) (೧) ಯಃ=ಯಾವ ಚಾರ್ವಾಕಾಚಾರ್ಯರು, ಸ್ವಜೀವನವಿರುದ್ಧೋಕ್ತಿಃ=ತನ್ನ ಮತ್ತು ಶಿಷ್ಯರ ಜೀವನಕ್ಕೆ ವಿರುದವಾದ ವಚನವುಳ್ಳವರೋ, ದೃಷ್ಟಸ್ಯ ಚ=ದರ್ಶನಕ್ಕೆ ಯೋಗ್ಯವಾದ ಬಹ್ವರ್ಥವನ್ನು, ಅಜ್ಞಃ=ತಿಳಿಯದೆ ಇರುವನೋ, (೨) ಯಶ್ಚ = ಯಾವ ಯೋಗಿಯು, ಅತೀಂದ್ರಿಯ ದೇವೋಕ್ತಿಶ್ರೋತಾ=ಇಂದ್ರಿಯಕ್ಕೆ ಅಗೋಚರರಾದ ದೇವತೆಗಳ ಉಕ್ತಿಮೊದಲಾದವುಗಳನ್ನು ಕೇಳಿದವನೋ, ದೃಷ್ಟಪರಾವರಃ=ಕಾಣಲ್ಪಟ್ಟ ಪರತತ್ವ-ಅಪರತತ್ವಜ್ಞಾನವುಳ್ಳವನೋ, ಅತೀತಾನಾಗತಂ ಸರ್ವಂ=ಭೂತ ಭವಿಷ್ಯತ್ಕಾಲಿಕವಾದ ಎಲ್ಲಾ ವಸ್ತುವನ್ನು,ಲೋಕಾನುಭವಂ=(ಪ್ರತ್ಯಕ್ಷ ಸಂವಾದದಿಂದ) ಜನರಿಗೆ ವಿಶ್ವಾಸವನ್ನು, ಆಪಯನ್=ಹೊಂದಿಸಿಕೊಡುತ್ತಾನೋ, ತಯೋರಪಿ ಪುರುಷಯೋಃ=ಆ ಪುರುಷರಿಗೂ, (ಅಂದರೆ—ತನ್ನ ಜೀವನಕ್ಕೆ ವಿರುದ್ಧವಾದ ಪರಲೋಕ ಪುಣ್ಯಪಾಪಾದಿಗಳು ಇಲ್ಲವೆಂದು ಹೇಳುವ ಚಾರ್ವಾಕಾಚಾರ್ಯರಿಗೂ, ಅತೀಂದ್ರಿಯವಾದ ದೇವೋಕ್ತಿಶ್ರೋತೃತ್ವಮೊದಲಾದ ಮಹಾಗುಣವುಳ್ಳ ಯೋಗಿಗೂ,) ಪ್ರಾಮಾಣ್ಯೇ = ಆಪ್ತತ್ವ ವಿಷಯದಲ್ಲಿ, ಸಂಶಯಃ=ಸಂದೇಹವು, ಸ್ಯಾತ್ ಕಿಂ=ಆಗುವುದೋ ಏನು? (ಸರ್ವಥಾ ಆಗಲಾರದು.) (ಈ ಎರಡರಲ್ಲಿ ಒಂದನೆಯವನಿಗೆ ಅನಾಪ್ತತ್ವವೇ. ಎರಡನೇಯವನಿಗೆ ಆಪ್ತತ್ವವೇ ನಿಶ್ಚಿತವಾಗುತ್ತದೆ) ॥ ೧೩೧ ॥ ೧೩೨ ॥ ೧೩೩ ॥

ಹೀಗೆ ನಿಮಿತ್ತವಿಲ್ಲದಿರುವುದರಿಂದ ಸರ್ವಥಾ ಅಸಂಭಾವಿತವಾದ ಅತೀಂದ್ರಿಯಜ್ಞಾನವುಳ್ಳ, ಕಾಮುಕತ್ವಾದಿಗಳಿಂದ ಸಂಭಾವನಾವಿಷಯವಾದ ವಂಚನೆಯುಳ್ಳ, ಚಾರ್ವಾಕಾಚಾರ್ಯರಿಗೆ ಯೋಗಸಾಮರ್ಥ್ಯದಿಂದ ಸಂಭಾವಿತವಾದ ಸಾರ್ವಜ್ಞವುಳ್ಳ ಸಮಸ್ತ ಐಶ್ವರ್ಯಗಳು ಇದ್ದುದರಿಂದ ವಂಚಕತ್ವ ಸಂಭಾವನೆಗೂ ವಿಷಯನಾಗದೆ ಇರುವ ಪ್ರತ್ಯಕ್ಷಸಂವಾದಿಯಾದ ವಚನವುಳ್ಳ ಯೋಗಿಯನ್ನು ಕುರಿತು ಪ್ರತಿಭಟತ್ವವೇ ಕೂಡದಿರುವುದರಿಂದ ಆ ಯೋಗಿಯ ವಚನದಿಂದ ತಿಳಿಯಲ್ಪಟ್ಟ ಯೋಗಿಯ ಪ್ರತ್ಯಕ್ಷದಿಂದ ಮೋಕ್ಷವು ಸಿದ್ಧಿಸುತ್ತದೆಂದು ಹೇಳಲ್ಪಟ್ಟಿತು. ಈಗಲಾದರೂ ವೇದದಿಂದಲೂ ಸಾಧಿಸಲಿಕ್ಕೆ ಇಚ್ಛಿಸಿದವರಾಗಿ, ಆ ವೇದಪ್ರಾಮಾಣ್ಯದಲ್ಲಿ ವಿವಾದಗ್ರಸ್ತನನ್ನು ಕುರಿತು ೧ ಸಂವಾದವಿಲ್ಲದಿರುವುದರಿಂದ ವೇದಕ್ಕೆ ಅಪ್ರಾಮಾಣ್ಯವು ಹೇಳಲ್ಪಡುತ್ತದೋ, ೨ ಅಥವಾ ಉನ್ಮತ್ತನ ವಾಕ್ಯದಂತೆ ವಾಕ್ಯತ್ವವಿದ್ಧಪ್ರಯುಕ್ತ ಅಪ್ರಾಮಾಣ್ಯವು ಹೇಳಲ್ಪಡುತ್ತದೋ? ೩ ಅಥವಾ ಉನ್ಮತ್ತನ ವಾಕ್ಯದಿಂದ ವಿಶೇಷವು ನಿಶ್ಚಿತವಾಗದಿರುವುದರಿಂದಲೋ, ೪ ಅಥವಾ ಬಾಧಿತವಾಗಿರುವುದರಿಂದಲೋ ಎಂದು ವಿಕಲ್ಪಿಸಿಕೊಂಡು ೧ನೇ ಕಲ್ಪದಲ್ಲಿಯೂ ಎಲ್ಲಾದಕೂ ಸಂವಾದವು ಇಲ್ಲವೋ? ಅಥವಾ ಏಕದೇಶಕ್ಕೆ ಸಂವಾದವಿಲ್ಲವೋ? ಎಂದು ವಿಕಲ್ಪಿಸಿಕೊಂಡು ೧ನೇದ್ದನ್ನು ನಿರಾಕರಿಸುತ್ತಾರೆ—

ಮೂ ॥ ಅತಃ ಪ್ರತ್ಯಕ್ಷಗಮ್ಯತ್ವಾದ್ವೇದಮಾತ್ವಸ್ಯ ಚ ಸ್ಫುಟಂ ।
ಯದ್ಯಾಗಮಸ್ಯ ನೋ ಮಾತ್ವಮಕ್ಷಜಸ್ಯ ತಥಾ ಭವೇತ್ ॥ ೧೩೪ ॥
ಯದ್ಯಕ್ಷಜಸ್ಯ ಮಾತ್ವಂ ಸ್ಯಾದಾಗಮಸ್ಯ ಕಥಂ ನ ತತ್ ।
ಲೋಕವಾಕ್ಯಾದ್ವಿಶೇಷಶ್ಚ ವ್ಯಭಿಚಾರೇಣ ಸಿಧ್ಯತಿ ॥ ೧೩೫ ॥

ಅ ॥ ಅತಃ=ವೈದಿಕ ಕರ್ಮಾನುಷ್ಠಾನವುಳ್ಳವರಿಗೆ ಅದರ ಫಲಸಿದ್ಧಿಯು ದೃಷ್ಟವಾಗಿರುವುದರಿಂದ, ಪ್ರತ್ಯಕ್ಷಗಮ್ಯತ್ವಾಚ್ಚ=ಪ್ರತ್ಯಕ್ಷಸಂವಾದದಿಂದ ಸಿದ್ಧವಾಗಿರುವುದರಿಂದಲೂ, ವೇದಮಾತ್ವಸ್ಯ ಚ=ವೇದಪ್ರಾಮಾಣ್ಯಕ್ಕೆ, ಸ್ಫುಟಂ= ಸ್ಪಷ್ಟವಾಗಿ, (ಸಿದ್ಧತ್ವವಿದ್ಧಪ್ರಯುಕ್ತವೂ) (ವೇದದಿಂದಲೂ ಮೋಕ್ಷಸಿದ್ಧಿಯಾಗುತ್ತದೆ.) (ಐಶ್ವರ್ಯಾದಿ ಗುಣಗಳಿಗೆ ಸಾಧನವಾಗಿ ಯೋಗಾದಿಗಳನ್ನುಪದೇಶಿಸತಕ್ಕ ವೇದಭಾಗಕ್ಕೆ ಸಂವಾದವು ಕಂಡುಬಂದುದರಿಂದ ಅತೀಂದ್ರಿಯಾರ್ಥವನ್ನು ಹೇಳತಕ್ಕ ಎಲ್ಲಾ ವೇದಕ್ಕೂ ಪ್ರಮಾಣಾಂತರಸಂವಾದವಿದೆ ಎಂದು ಸಿದ್ಧವಾಯಿತು.) (ಮೋಕ್ಷಪ್ರತಿಪಾದಕಗಳಾದ ವೇದವಾಕ್ಯಗಳಾದರೂ ಅಲ್ಲಲ್ಲಿ ಉದಾಹರಿಸಲ್ಪಟ್ಟವುಗಳನ್ನೇ ತಿಳಿಯತಕ್ಕದು.) (೧ನೇ ಕಲ್ಪದಲ್ಲಿಯೂ ೨ನೇದ್ದನ್ನು ಏಕದೇಶಕ್ಕೆ ಸಂವಾದವಿಲ್ಲವೆನ್ನುವ ಕಲ್ಪವನ್ನು ದೂಷಿಸುತ್ತಾರೆ) ಯದಿ=ಯಾವ ಪಕ್ಷದಲ್ಲಿ, ಆಗಮಸ್ಯ=ಭಾಗವಿಶೇಷಕ್ಕೆ ಸಂವಾದವಿಲ್ಲದಿರುವುದರಿಂದ ನಿಖಿಲ ಆಗಮಕ್ಕೂ, ನೋ ಮಾತ್ವಂ = ಪ್ರಾಮಾಣ್ಯವಿಲ್ಲವೆಂದು ಹೇಳಲ್ಪಡುವುದಾದರೆ, ಅಕ್ಷಜಸ್ಯ = ಪ್ರತ್ಯಕ್ಷಮಾತ್ರಕ್ಕೆ, ತಥಾ=ಹಾಗೆಯೇ ಅಪ್ರಾಮಾಣ್ಯವು, ಭವೇತ್=ಆಗುವುದು. ನಮ್ಮ ಸುಖಾದಿ ವಿಷಯಕವಾದ ಪ್ರತ್ಯಕ್ಷಕ್ಕೆ ಸಂವಾದವಿಲ್ಲ. ಸಂವಾದರಹಿತವೇ ಆದ ವೇದಭಾಗಕ್ಕೆ ಪ್ರಾಮಾಣ್ಯವಿಲ್ಲವೆಂದು ಹೇಳಲ್ಪಡುವುದಾದರೆ, ಆಗ ನಮ್ಮ ಸುಖಾದಿವಿಷಯಕವಾದ ಪ್ರತ್ಯಕ್ಷಕ್ಕೆ ಅಪ್ರಾಮಾಣ್ಯವು ಸಿದ್ಧಿಸಬೇಕಾಗುವುದು.) (ಪ್ರತ್ಯಕ್ಷವು ಸ್ವತಏವ ಪ್ರಮಾಣವು. ಅಲ್ಲಿ ಸಂವಾದದಿಂದ ಏನು ಪ್ರಯೋಜನವು ಎಂದರೆ—) ಯದಿ= ಯಾವ ಪಕ್ಷದಲ್ಲಿ, ಅಕ್ಷಜಸ್ಯ = ಸಂವಾದವಿಲ್ಲದೆ ಪ್ರತ್ಯಕ್ಷಕ್ಕೆ, ಮಾತ್ವಂ ಸ್ಯಾತ್ = ಸ್ವತಏವ ಪ್ರಾಮಾಣ್ಯವಿರುವುದಾದರೆ, ಹಾಗಾದರೆ, ಆಗಮಸ್ಯ=ಆಗಮಕ್ಕೆ, ಕಥಂ ನ ತತ್=ಸ್ವತಏವ ಪ್ರಾಮಾಣ್ಯವು ಹೇಗೆ ಆಗದೆ ಹೋಗುವುದು? (ವಿಶೇಷವಿಲ್ಲದಿರುವುದರಿಂದ, ಆಗಮಕ್ಕೆ ಪ್ರಾಮಾಣ್ಯವು ಸಿದ್ಧವೇ ಆಗುವುದು). (ಎರಡನೇದ್ದನ್ನು ನಿರಾಕರಿಸುತ್ತಾರೆ). ಯದಿ= ಯಾವ ಪಕ್ಷದಲ್ಲಿ, (ವಾಕ್ಯತ್ವಮಾತ್ರದಿಂದ ಉನ್ಮತ್ತನ ವಾಕ್ಯದಂತೆ) ಆಗಮಸ್ಯ = ಆಗಮಕ್ಕೆ, ನೋ ಮಾತ್ವಂ=ಪ್ರಾಮಾಣ್ಯವಿಲ್ಲವೆಂದು ಹೇಳಲ್ಪಡುವುದಾದರೆ, (ಪ್ರತ್ಯಕ್ಷಜನ್ಯವಾಗಿರುವುದರಿಂದ ಶುಕ್ತಿ-ರಜತಾದಿವಿಷಯಕವಾದ ಪ್ರತ್ಯಕ್ಷದಂತೆಯೇ ಸ್ತಂಭಾದಿಪ್ರತ್ಯಕ್ಷಕ್ಕೂ ವಿಶೇಷವಿಲ್ಲದಿರುವುದರಿಂದ ಅಪ್ರಾಮಾಣ್ಯವು ಬರಬೇಕಾಗುವುದು). (ನಿರ್ದೋಷವಾಗಿರುವುದರಿಂದ ಸ್ತಂಭಾದಿವಿಷಯಕವಾದ ಪ್ರತ್ಯಕ್ಷವು ಪ್ರಮಾಣವೆಂದರೆ—) ಯದಿ=ಯಾವ ಪಕ್ಷದಲ್ಲಿ, ಅಕ್ಷಜಸ್ಯ= ನಿರ್ದೋಷವಾಗಿರುವುದರಿಂದ ಸ್ತಂಭಾದಿವಿಷಯಕವಾದ ಪ್ರತ್ಯಕ್ಷಕ್ಕೆ, ಮಾತ್ವಂ=ಪ್ರಾಮಾಣ್ಯವು, ಸ್ಯಾತ್ = ಆಗುವುದೋ, ಹಾಗಾದರೆ, ಆಗಮಸ್ಯಾಪಿ = ವೇದಕ್ಕೂ ಕೂಡ ಅದರಿಂದಲೇ, ನಿರ್ದೋಷತ್ವದಿಂದಲೇ, ಕಥಂ ನ ತತ್=ಪ್ರಾಮಾಣ್ಯವು ಹೇಗೆ ಬರಲಾರದು? (ಅಪೌರುಷೇಯಕ್ಕೆ ಸದೋಷತ್ವವು ಕೂಡಲಾರದು). (ವೇದಃ ಎಂದು ಉಪಕ್ರಮದಲ್ಲಿದ್ದರೂ ಅದನ್ನು ಬಿಟ್ಟು ಆಗಮಸ್ಯ ಎಂದು ಹೇಳಿರುವುದರಿಂದ ಪೌರುಷೇಯಾಗಮಕ್ಕೂ ಇದರಂತೆಯೇ ಪ್ರಾಮಾಣ್ಯವನ್ನು ಸಾಧಿಸಬೇಕೆಂದು ಸೂಚಿತವಾಯಿತು). (ಮೂರನೇದ್ದನ್ನು ನಿರಾಕರಿಸುತ್ತಾರೆ). **ಲೋಕವಾಕ್ಯಾತ್=ಉನ್ಮತ್ತಾದಿಗಳ ವಾಕ್ಯದೆಶೆಯಿಂದ, ವಿಶೇಷಶ್ಚ=ವೇದಕ್ಕೆ ವಿಶೇಷವಾದರೂ,**

ಅವ್ಯಭಿಚಾರೇಣ = ಬಾಧವಿಲ್ಲದಿರುವುದರಿಂದ, ಸಿಧ್ಯತಿ = ಸಿದ್ಧಿಸುತ್ತದೆ. (ವೈದಿಕವಾದ ಅರ್ಥವು ಪ್ರತ್ಯಕ್ಷಸಿದ್ಧವಲ್ಲ. ಅದು ಬಾಧಕವಾಗಿ ಹೇಗೆ ಅವಕಾಶವನ್ನು ಹೊಂದುವುದು?) (ಫಲಸಂವಾದವನ್ನು ಹೇಳಿದರಿಂದ ನಾಲ್ಕನೇದ್ದೂ ನಿರಸ್ತವಾಯಿತು.) (ಹೀಗೆ ಪ್ರತ್ಯಕ್ಷಾನುಮಾನಗಳಿಂದ ಮೋಕ್ಷವನ್ನು ಸಾಧಿಸತಕ್ಕ ಪುರುಷನಿಂದ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ಫಲಭೋಗದಲ್ಲಿ ವೈರಾಗ್ಯವುಳ್ಳ) ಯೋಗಿಗಳ, ಪ್ರವೃತ್ತಿಃ=ಶ್ರವಣಾದ್ಯನುಷ್ಠಾನವು, ಸಫಲಾ=ಫಲಸಹಿತವಾದುದು, ಪ್ರೇಕ್ಷಾವತ್ಪ್ರವೃತ್ತಿತ್ವಾತ್=ಪ್ರೇಕ್ಷಾವಂತರ ಪ್ರವೃತ್ತಿಯಾಗಿರುವುದರಿಂದ, ಸಮ್ಮತವತ್ = ನಿಶ್ಚಿತವಾದ ವಸ್ತುವಿನಂತೆ, ಎನ್ನುವ ಅನುಮಾನವೂ ಸೂಚಿತವಾಯಿತು ॥ ೧೩೪ ॥ ೧೩೫ ॥

**ಸ. ರ. ವಿ—** ಮೋಕ್ಷವನ್ನು ಅಂಗೀಕಾರಮಾಡಿಕೊಂಡು ಮೋಕ್ಷಕ್ಕೆ ಸಾಧನವಾದುದು ಜಿನವಾಕ್ಯವಿಹಿತವಾದುದೇ; ವೇದವಿಹಿತವಲ್ಲ ಎಂದು ಹೇಳುವ ಜೈನರ ಮತವನ್ನು ದೂಷಿಸಲಿಕ್ಕೆ ಅನುವಾದಮಾಡುತ್ತಾರೆ—

**ನ್ಯಾಯಸುಧಾ—** ಈಗ ಜೈನೋಕ್ತವಾದ ಮೋಕ್ಷಸಾಧನವನ್ನು ದೂಷಿಸಲಿಕ್ಕೆ ಅನುವಾದಮಾಡುತ್ತಾರೆ—

**ಮೂ ॥ ಅಸ್ತಿ ಮೋಕ್ಷೋಽಪಿ ಧರ್ಮೇಣ ಯಥಾರ್ಥಜ್ಞಾನತೋಽಪಿ ಚ ।**
**ಪ್ರಾಮಾಣ್ಯಮನುಮಾಯಾಶ್ಚ ಜಿನಸ್ಯಾಪ್ತತ್ವಸಾಧನೇ ॥ ೧೩೬ ॥**
**ತದ್ವಾಕ್ಯಾದ್ಧರ್ಮಸಜ್ಜ್ಞಾನವಿಜ್ಞಪ್ತಿರ್ಭವತೀತಿ ಚ ।**
**ಧರ್ಮೋ ಹಿಂಸಾಪರೋ ನಾನ್ಯೋ ಜ್ಞಾನಂ ಪುದ್ಗಲದರ್ಶನಂ ।**
**ಇತಿ ಜೈನಾಃ ಕಥಂ ತತ್ಸ್ಯಾತ್ಪ್ರಮಾಣಮನುಮಾನತಃ ॥ ೧೩೭ ॥**

**ಅ ॥** ಮೋಕ್ಷಃ=ಮುಕ್ತಿಯು, ಅಸ್ತಿ=ಇದೆ. (ಮೋಕ್ಷವಿದೆ ಎಂದಂಗೀಕರಿಸಿದರೆ ಆಗ ಮೋಕ್ಷಸಾಧನವನ್ನು ಅಂಗೀಕರಿಸಿದಂತೆಯೇ ಆಯಿತು. ವಿಪ್ರತಿಪತ್ತಿಯು ಯಾವುದಿದೆ, ಎಂದು ಪ್ರಶ್ನಿಸುತ್ತಾರೆ—) ಅಪಿ=ಮತ್ತೇನೆಂದರೆ— ಧರ್ಮೇಣ=ಧರ್ಮದಿಂದಲೂ, ಯಥಾರ್ಥಜ್ಞಾನತೋಽಪಿ=ಸಮ್ಯಕ್ ಜ್ಞಾನದಿಂದಲೂ ಮೋಕ್ಷವು (ಹೊಂದಲ್ಪಡುತ್ತದೆ.) (ಯದ್ಯಪಿ ಮೋಕ್ಷವನ್ನೂ, ಮೋಕ್ಷಸಾಧನವನ್ನೂ ಜೈನರು ಅಂಗೀಕರಿಸಿರುತ್ತಾರೆ. ಆದಾಗ್ಯೂ ಮೋಕ್ಷಸಾಧನ ವಿಶೇಷದಲ್ಲಿ ವಿವಾದಮಾಡುತ್ತಾರೆ.) (ಹೇಗೆಂದರೆ— ಸಮ್ಯಕ್ ಜ್ಞಾನ ಸಮ್ಯಕ್ ಚಾರಿತ್ರರೂಪವಾದ ಧರ್ಮ ಇವುಗಳ ಸಮುಚ್ಚಯದಿಂದ, ಮೋಕ್ಷವು ಹೊಂದಲ್ಪಡುತ್ತದೆ ಎನ್ನುತ್ತಾರೆ.) (ಧರ್ಮ-ಜ್ಞಾನ-ಸಮುಚ್ಚಯ ಸಾಧ್ಯತ್ವವನ್ನು ಮೋಕ್ಷಕ್ಕೆ ನಾವೂ ಕೂಡ ಕಥಂಚಿತ್ ಅಂಗೀಕಾರಮಾಡುತ್ತೇವೆ. ಆದುದರಿಂದ ವಿಪ್ರತಿಪತ್ತ್ಯಂತರವನ್ನು ತೋರಿಸುತ್ತಾರೆ ) ಜಿನಸ್ಯ=ಜಿನನಿಗೆ, ಆಪ್ತತ್ವಸಾಧನೇ=ಆಪ್ತತ್ವವನ್ನು ಸಾಧಿಸುವ ವಿಷಯದಲ್ಲಿ, ಅನುಮಾಯಾಶ್ಚ = 'ಜಿನಃ ಆಪ್ತಃ ಅಸ್ಖಲಿತವಾಕ್ತ್ವಾತ್'' ಇದುಮೊದಲಾದ ಅನುಮಾನಕ್ಕೂ ಜಿನದರ್ಶಿಗಳ ವಾಕ್ಯಕ್ಕೂ, ಪ್ರಾಮಾಣ್ಯಂ=ಪ್ರಾಮಾಣ್ಯವು, ತದ್ವಾಕ್ಯಾತ್ = ಜಿನವಾಕ್ಯದೆಶೆಯಿಂದ, ಧರ್ಮಸಜ್ಜ್ಞಾನವಿಜ್ಞಪ್ತಿಃ = ಧರ್ಮದ ಯಥಾರ್ಥಜ್ಞಾನವೂ, ತತ್ವಜ್ಞಾನವೂ, ಭವತಿ ಚ=ಆಗುತ್ತದೆಂದೂ, ಇತಿ ಚ=ಹೀಗೂ, ಜೈನಾಃ=ಜೈನರು, ಪ್ರಾಹುಃ=ಹೇಳುತ್ತಾರೆ. (ಅಂದರೆ ಅನುಮಾನಾದಿಗಳಿಂದ ತಿಳಿಯಲ್ಪಟ್ಟ ಆಪ್ತತ್ವವುಳ್ಳ ಜಿನವಾಕ್ಯದೆಶೆಯಿಂದ ಮೋಕ್ಷಸಾಧನಸಿದ್ಧಿಯಾಗುತ್ತದೆಂದು ಹೇಳುತ್ತಾರೆ. ಸ್ವತಃ ಪ್ರಮಾಣವಾದ ವೇದದಿಂದ ಅಲ್ಲ.) (ಮೋಕ್ಷಸಾಧನವಿಷಯಕವಾದ ವಿಪ್ರತಿಪತ್ತಿಯನ್ನು

ತೋರಿಸುವುದಕ್ಕಾಗಿ ಉಪಕ್ರಮಿಸಿ ಪ್ರಮಾಣಗಳಲ್ಲಿ ವಿಪ್ರತಿಪತ್ತಿಯನ್ನು ತೋರಿಸಿದ್ದು ಅಸಂಗತವು ಎಂದು ಹೇಳಕೂಡದು. ಸಾಧನಜ್ಞಾಪಕವೂ ಸಾಧನವಾಗಿದೆ.) (ಧರ್ಮಜ್ಞಾನಗಳ ಸ್ವರೂಪ ದಲ್ಲಿಯೂ ವಿಪ್ರತಿಪತ್ತಿಯನ್ನು ತೋರಿಸುತ್ತಾರೆ.) ಅಹಿಂಸಾಪರಃ=ಅಹಿಂಸೆಯೇ ಪ್ರಧಾನವಾಗಿ ವುಳ್ಳದ್ದು, ಧರ್ಮಃ=ಧರ್ಮವು, ಅನ್ಯಃ=ಹಿಂಸಾಸಹಿತವಾದ ಯಜ್ಞಾದಿಯು, ನ=ಧರ್ಮವಲ್ಲ, ಜ್ಞಾನಂ = ಜ್ಞಾನವು, ಪುದ್ಗಲದರ್ಶನಂ = ಆತ್ಮವಿವಿಕ್ತತ್ವಾದಿರೂಪದಿಂದ ದೇಹದರ್ಶನವು. ಅಥವಾ ಆತ್ಮನಿಗೆ ದೇಹಾದಿಗಳಿಂದ ಭಿನ್ನವಾಗಿ ದರ್ಶನವು, ಬೇರೆಯಲ್ಲ. ಇತಿ = ಹೀಗೆ, ಜೈನಾಃ=ಜೈನರು ಹೇಳುತ್ತಾರೆ. ತತ್=ಜಿನವಾಕ್ಯವು, ಅನುಮಾನತಃ = ಅನುಮಾನದಿಂದ, ಪ್ರಮಾಣಮಿತಿ=ಪ್ರಮಾಣವೆಂತೆಂದು ತಿಳಿಯಲು ಯೋಗ್ಯವು, ಕಥಂ=ಹೇಗೆ, ಸ್ಯಾತ್=ಆಗು ವುದು? (ಅಂದರೆ—ಅನುಮಾನದಿಂದಲೂ, ವಾಕ್ಯದಿಂದಲೂ ಜಿನನಿಗೆ ಆಪ್ತತ್ವವನ್ನು ನಿಶ್ಚಯಿಸಿ ಕೊಂಡು ಆಪ್ತವಾಕ್ಯತ್ವಾನುಮಾನದಿಂದ ಮೋಕ್ಷಸಾಧನವಾದ ಧರ್ಮವನ್ನೂ, ಜ್ಞಾನವನ್ನೂ ಕೂಡ ಪ್ರತಿಪಾದಿಸತಕ್ಕ ಜಿನವಾಕ್ಯಕ್ಕೆ ಪ್ರಾಮಾಣ್ಯಾವಧಾರಣವು ಯಾವುದು ಹೇಳಲ್ಪಟ್ಟದೋ ಅದು ಕೂಡಲಾರದು) ॥ ೧೩೬ ॥ ೧೩೭ ॥

ಏಕೆ ಕೂಡುವುದಿಲ್ಲವೆಂದರೆ ಹೇತುವನ್ನು ಹೇಳುವುದಕ್ಕಾಗಿ ಉಪೋದ್ಘಾತರೂಪದಿಂದ ಪ್ರತ್ಯಕ್ಷ-ಅನುಮಾನ-ಆಗಮಗಳ ಸ್ವರೂಪವನ್ನು ಕ್ರಮದಿಂದ ಹೇಳುತ್ತಾರೆ—

**ಮೂ ॥ ವಿಷಯಾನ್ ಪ್ರತಿ ಸ್ಥಿತಂ ಹ್ಯಕ್ಷಂ ಪ್ರತ್ಯಕ್ಷಮಿತಿ ಗೀಯತೇ ॥ ೧೩೮ ॥**
**ಪ್ರತ್ಯಕ್ಷಶಬ್ದಾನುಸಾರಾದನುಮೇತಿ ಪ್ರಕೀರ್ತಿತಾ ।**
**ಆಸಮಂತಾದ್ಗಮಯತಿ ಧರ್ಮಾಧರ್ಮೌ ಪರಂ ಪದಂ ॥ ೧೩೯ ॥**
**ಯಚ್ಚಾಪ್ಯತೀಂದ್ರಿಯಂತ್ವನ್ಯತ್ತೇನಾಸಾವಾಗಮಃ ಸ್ಮೃತಃ ।**
**ಏತೇನ ಕಾರಣೇನೈವ ತತ್ತನ್ಮಾನತ್ವಮಿಷ್ಯತೇ ॥ ೧೪೦ ॥**
**ಸ್ವರೂಪಂ ಹಿ ತದೇತೇಷಾಮನ್ಯಥಾ ಸಿದ್ಧಿಮಾನತಃ ।**
**ಅತೋಽನುಮಾ ಕಥಂ ಧರ್ಮಂ ಪುದ್ಗಲಂ ಚಾಪಿ ದರ್ಶಯೇತ್ ॥**
**॥ ೧೪೧ ॥**

ಅ ॥ ವಿಷಯಾನ್ ಪ್ರತಿಸ್ಥಿತಂ=ನಿರ್ದೋಷಗಳಾದ ವಿಷಯಗಳನ್ನುಕುರಿತು ಇರತಕ್ಕ, (ಅಂದರೆ ನಿರ್ದೋಷಗಳಾದ ವಿಷಯಗಳಿಂದ ಸನ್ನಿಕೃಷ್ಟವಾದ) ಅಕ್ಷಂ=ಅದುಷ್ಟವಾದ ಇಂದ್ರಿ ಯವು, ಪ್ರತ್ಯಕ್ಷಮಿತಿ=ಪ್ರತ್ಯಕ್ಷವೆಂತೆಂದು, ಗೀಯತೇ=ಹೇಳಲ್ಪಡುತ್ತದೆ. (ಅಂದರೆ—ಯಾವ ಇಂದ್ರಿಯಕ್ಕೆ ಯಾವುದು ವಿಷಯವೆಂದು ಅನ್ವಯವ್ಯತಿರೇಕಗಳಿಂದ ತಿಳಿಯಲ್ಪಡುತ್ತದೋ ಆ ಅದೋಷವಾದ ವಿಷಯದಿಂದ ಸಂಬದ್ಧವಾದುದು, ಅದುಷ್ಟವಾದುದು ಯಾವುದು ಇಂದ್ರಿಯವೋ ಅದು ಪ್ರತ್ಯಕ್ಷವು.) ಹಿ=ಪ್ರಸಿದ್ಧವು. ಪ್ರತ್ಯಕ್ಷಶಬ್ದಾನುಸಾರಾತ್=ಪ್ರತ್ಯಕ್ಷ ಆಗಮಗಳನ್ನು ಅನುಸರಿಸಿಯೇ ಪ್ರಾಮಾಣ್ಯವಿದ್ದಪ್ರಯುಕ್ತ (ಅಂದರೆ ಪ್ರತ್ಯಕ್ಷ ಆಗಮಗಳಿಂದ ಗೃಹೀತಗಳಾದ ಧರ್ಮ್ಯಾದಿಗಳು ಇದ್ದಪ್ರಯುಕ್ತ ಮತ್ತು ಪ್ರತ್ಯಕ್ಷ ಆಗಮಗಳಿಂದ ಅಬಾಧಿತವಾದ ಅಪ್ರತಿ ಬದ್ಧವಾದ ವಿಷಯವಿದ್ದಪ್ರಯುಕ್ತ, ಅನುಮಾ=ಅನುಮಾನವು. (ಅಂದರೆ— ಯಾವ ಅನು ಮಾನವು ಪ್ರಸಿದ್ಧವಾಗಿದೆಯೋ ಅದು ಈ ನಿಮಿತ್ತದೆಶೆಯಿಂದ) ಅನುಮೇತಿ=ಅನುಮಾ ಎಂತೆಂದು, ಪ್ರಕೀರ್ತಿತಾ = ಹೇಳಲ್ಪಟ್ಟದೆ. (ಅನುಮಾನಮೂಲಕವಾದ ಅನುಮಾನವೂ ಕೂಡ ಕೊನೆಗೆ ಪ್ರತ್ಯಕ್ಷಾದಿಮೂಲಕವೇ.) ಆ=ಚೆನ್ನಾಗಿ, ಸಮಂತಾತ್=ಸುತ್ತಮುತ್ತಲೂ, ಚೆನ್ನಾಗಿಯೂ,

ಧರ್ಮಾಧರ್ಮೌ=ಧರ್ಮ-ಅಧರ್ಮಗಳನ್ನೂ, ಪರಂಪದಂ = ಉತ್ಕೃಷ್ಟವಾದ ಬ್ರಹ್ಮಸ್ವರೂಪ ವನ್ನೂಕೂಡ, ಗಮಯತಿ=ತಿಳಿಸಿಕೊಡುತ್ತದೋ, ಯಚ್ಚ=ಯಾವುದು, ಅನ್ಯತ್=ಧರ್ಮಾದಿಗಳ ದೆಶೆಯಿಂದ ಇತರವಾದ, ಅತೀಂದ್ರಿಯಂ=ಅತೀಂದ್ರಿಯವಾದುದು, ಅಪಿ=ಅನನುಮಿತವೂ ಆಗಿ ದೆಯೋ, ಅದನ್ನೂಕೂಡ ತಿಳಿಸಿಕೊಡುತ್ತದೋ, ತೇನೈವ=ಆದಕಾರಣದಿಂದಲೇ, ಅಸೌ=ಇದು, ಆಗಮಃ=ಆಗಮವೆಂದು, ಸ್ಮೃತಃ=ಹೇಳಲ್ಪಟ್ಟದೆ. ಏತೇನೈವ ಕಾರಣೇನ=ಈ ಕಾರಣದಿಂದಲೇ, ತತ್ತನ್ಮಾನತ್ವಂ=ಪ್ರತ್ಯಕ್ಷಾದಿಗಳಿಗೆ ಪ್ರತ್ಯಕ್ಷಾದಿತ್ವವು ಪ್ರತ್ಯಕ್ಷಾದಿ ಶಬ್ದವಾಚ್ಯತ್ವವು, ಇಷ್ಯತೇ= ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುತ್ತದೆ. (ಪ್ರತ್ಯಕ್ಷಾದಿಗಳಲ್ಲಿ ಪ್ರತ್ಯಕ್ಷಾದಿ ಶಬ್ದಪ್ರವೃತ್ತಿ ಯಲ್ಲಿ ಇದು ಪ್ರವೃತ್ತಿ ನಿಮಿತ್ತವೇ. ಕೇವಲ ನಿರ್ವಚನದಿಂದ ಸಿಗತಕ್ಕ ಅರ್ಥಮಾತ್ರವಲ್ಲ.) (ಏಕೆಂದರೆ—) ತತ್=ನಿರ್ದೋಷವಿಷಯ ಸನ್ನಿಕೃಷ್ಟವಾದ ನಿರ್ದೋಷ ಇಂದ್ರಿಯತ್ವಾದಿಗಳು, ಏತೇಷಾಂ=ಪ್ರತ್ಯಕ್ಷಾದಿಗಳಿಗೆ, ಸ್ವರೂಪಂ=ಲಕ್ಷಣವು. (ಲಕ್ಷಣವೇ ಶಬ್ದಪ್ರವೃತ್ತಿ ನಿಮಿತ್ತವಾ ಗುತ್ತದೆ.) (ಇದೂಕೂಡ ಯಾವುದರಿಂದ ಎಂದರೆ—) ಅನ್ಯಥಾಸಿದ್ಧಿಮಾನತಃ = ಅನ್ಯಥಾ ಸಿದ್ಧಿಯೂ, ಅದರ ಪ್ರಮಾಣವೂ ಇವುಗಳಿಂದ (ಪ್ರಕಾರಾಂತರದಿಂದ ಪ್ರತ್ಯಕ್ಷಾದಿಗಳ ಲಕ್ಷಣ ಗಳನ್ನು ನಿರೂಪಿಸಲಿಕ್ಕೆ ಅಶಕ್ಯವು ) (ಪ್ರತ್ಯಕ್ಷಾದಿಗಳ ಸ್ವರೂಪವು ಹೀಗಾದರೆ ಅದರಿಂದ ಪ್ರಕೃತವೇನಾಯಿತೆಂದರೆ—) ಅತಃ=ಆದಕಾರಣ, ಅನುಮಾ=ಅನುಮಾನದಿಂದ ತಿಳಿಯಲ್ಪಟ್ಟ ಪ್ರಾಮಾಣ್ಯವುಳ್ಳ ಜಿನವಾಕ್ಯವು, ಧರ್ಮಂ=ಧರ್ಮವನ್ನೂ, ಪುದ್ಗಲಂ ಚಾಪಿ=ದೇಹವ್ಯತಿರಿಕ್ತಾತ್ಮ ನನ್ನೂ ಕೂಡ, ಕಥಂ=ಹೇಗೆ, ದರ್ಶಯೇತ್=ಪ್ರತಿಪಾದಿಸುವುದು? (ಅಂದರೆ— ಜಿನವಾಕ್ಯ ದಲ್ಲಿ ಹಿಂದೆ ಹೇಳಿದ ಆಗಮಲಕ್ಷಣವು ಇಲ್ಲದಿರುವುದರಿಂದಲೂ, ಜಿನನಿಗೆ ಆಪ್ತತ್ವನಿಶ್ಚಯವಾಗದಿ ರುವುದರಿಂದಲೂ ಜಿನವಾಕ್ಯದಿಂದ ಧರ್ಮಾದಿನಿಶ್ಚಯವು ಆಗಲಾರದು.

ತಾ ॥ ಸ. ರ. ವಿ.— (1) ಜಿನಾಪ್ತತ್ವದಿಂದ ಯಾವುದೊಂದು ಹೇತುವಿಗೂ, ವ್ಯಾಪ್ತಿಯು ದೃಷ್ಟವಾಗಲಿಲ್ಲ. ಆದಕಾರಣ ಅನುಮಾನದ ಸಾಮರ್ಥ್ಯದಿಂದ ಜಿನವಾಕ್ಯವು ಪ್ರಮಾಣವಲ್ಲ. ಹೇಗೆ ಸ್ವಸಂಬದ್ಧವಾದ ಅರ್ಥಪ್ರಕಾಶಕತ್ವವೇ ಪ್ರತ್ಯಕ್ಷಕ್ಕೆ ಲಕ್ಷಣವೋ, ಚೆನ್ನಾಗಿ ಧರ್ಮವೊದಲಾದ ಅತ್ಯಂತ ಅತೀಂದ್ರಿಯಗಮಕತ್ವವೇ ಆಗಮದ ಲಕ್ಷಣವೋ? ಹೀಗೆ ಪ್ರತ್ಯಕ್ಷದಿಂದಲಾಗಲೀ, ಆಗಮದಿಂದಲಾಗಲೀ, ಗೃಹೀತವಾದ ವ್ಯಾಪ್ತಿಮೂಲತ್ವವೇ ಅನು ಮಾನಲಕ್ಷಣವು, ರೀತ್ಯಂತರದಿಂದ ಅದರ ಸಿದ್ಧಿಯು ಕೂಡಲಾರದು. ಆದಕಾರಣ ಅನುಮಾನ ದಿಂದ ಸಿದ್ಧವಾದ ಪ್ರಾಮಾಣ್ಯವುಳ್ಳ ಜಿನವಾಕ್ಯವು ಧರ್ಮವನ್ನಾಗಲೀ, ಆತ್ಮನನ್ನಾಗಲೀ ತೋರಿಸ ಲಿಕ್ಕೆ ಶಕ್ಯವಾಗಲಾರದು. ಕೆಲವು ಜಿನವಾಕ್ಯಗಳು ಯಥಾರ್ಥವಾಗಿಯೂ ದೃಷ್ಟವಾಗಿರುವುದ ರಿಂದ ಜಿನನಿಗೆ ಆಪ್ತತ್ವವನ್ನು ನಿಶ್ಚಯಿಸಲಿಕ್ಕೆ ಶಕ್ಯವೆಂದು ಹೇಳಕೂಡದು. ‘ ಕಾಯಪರಿಮಾಣಃ ಪುದ್ಗಲಃ ’ ಇತ್ಯಾದಿಗಳು ಅಯಥಾರ್ಥವನ್ನು ಹೇಳತಕ್ಕವುಗಳು ॥ ೧೪೮ ॥ ೧೪೯ ॥ ೧೫೦ ॥ ೧೫೧ ॥

ಮತ್ತು ಜಿನನಿಗೆ ಅಸ್ಖಲಿತವಾಕ್ತ್ವವು ನಿಶ್ಚಾಯಕವಿಲ್ಲದಿರುವುದರಿಂದ ಅಸಿದ್ಧವೆಂದು; ಇಷ್ಟುಮಾತ್ರವಲ್ಲ, ಮತ್ತೆ ಸ್ಖಲನವೂ ಜಿನವಾಕ್ಯದಲ್ಲಿ ತೋರುತ್ತದೆ ಎನ್ನುತ್ತಾರೆ—

ಮೂ ॥ ಸ್ವರೂಪೇ ಪುದ್ಗಲಸ್ಯೋಕ್ತಾ ದೋಷಾ ಅನಂದಮೇವ ಚ ।
ನ ಮನ್ಯತೇ ಪುದ್ಗಲಂ ಸ ದುಃಖಾಭಾವಃ ಸುಖಂ ತ್ವಿತಿ ॥ ೧೫೨ ॥
ಮಾತ್ರಾಭೋಗಾತಿರೇಕೇಣ ಸುಖಾಧಿಕ್ಯಸ್ಯ ದರ್ಶನಾತ್ ।
ಸುಖಸ್ಯಾಭಾವತಾ ಕೇನ ನ ಚ ಸ್ಯಾತ್ಕಿಂ ವಿಪರ್ಯಯಃ ॥ ೧೫೩ ॥

ಅ || ಅಪುದ್ಗಲಸ್ಯ = ದೇಹದೆಶೆಯಿಂದ ಇತರನಾದ ಮತ್ತೂ ದೇಹ ಸದೃಶನಾದ ಆತ್ಮನ, ಸ್ವರೂಪೇ=ಸ್ವರೂಪವಿಷಯದಲ್ಲಿ, ದೋಷಾಃ=ದೋಷಗಳು, ಉಕ್ತಾಃ=('ಏವಂ-ಚಾತ್ಮಾಕಾತ್ಸ್ನ್ಯಂ' ಇತ್ಯಾದಿಗಳಲ್ಲಿ,) ಹೇಳಲ್ಪಟ್ಟವೆ. (ಅಂದರೆ— ಜಿನನು ಆತ್ಮಸ್ವರೂಪವನ್ನು, ಶರೀರಪರಿಮಾಣವುಳ್ಳದ್ದನ್ನಾಗಿಯೂ, ರೂಪವುಳ್ಳದ್ದನ್ನಾಗಿಯೂ ಹೇಳಿರುವನು. ಅದನ್ನು ಮೊದಲೇ ದೂಷಿಸಿರುವುದರಿಂದ, ಈ ಜಿನನು ಸ್ಖಲಿತವಾದ ಮಾತುಳ್ಳವನು) (ಪ್ರಕಾರಾಂತರದಿಂದ ಆತ್ಮಸ್ವರೂಪವಿಷಯದಲ್ಲಿ ಜಿನನ ಮಾತಿಗೆ ಸ್ಖಲನವನ್ನು ತೋರಿಸುತ್ತಾರೆ ) (ತತ್ವಜ್ಞಾನಿಗಳು ಆತ್ಮನನ್ನು, ಆನಂದಮೇವ = ಆನಂದಸ್ವರೂಪನನ್ನಾಗಿಯೂ, ಆನಂದದಿಂದ ಅತ್ಯಂತಾಭಿನ್ನನನ್ನಾಗಿಯೂ ತಿಳಿಯುತ್ತಾರೆ ) ಸಃ=ಆ ಜಿನನು, ಪುದ್ಗಲಂ = ಆತ್ಮನನ್ನು, ಆನಂದಮೇವ=ಆನಂದರೂಪಿಯನ್ನಾಗಿಯೇ, ನ ಮನ್ಯತೇ=ತಿಳಿಯುವುದಿಲ್ಲ. (ಮತ್ತೆ ಭಿನ್ನತ್ವಾದಿಗಳಿಂದ ಜಗತ್ತು ಏಳುಪ್ರಕಾರವುಳ್ಳದ್ದನ್ನಾಗಿ ಹೇಳುತ್ತಾನೆ. ಅದು ಸಪ್ತಭಂಗಿನಯನಿರಾಸದಿಂದಲೂ, 'ಪುಂಸ್ತ್ವಾದಿವತ್' ಎಂದು ಆತ್ಮನಿಗೆ ಸುಖಾದಿಗಳಿಂದ ಅತ್ಯಂತಾಭೇದಸಾಧನದಿಂದಲೂ ನಿರಸ್ತವಾಗಿದೆ. ಆದುದರಿಂದಲೂ, ಈ ಜಿನನು ಸ್ಖಲಿತವಾದ ವಚನವುಳ್ಳವನು.) ಮತ್ತು ಸುಖಂ ತು = ಸುಖವಾದರೂ, ದುಃಖಾಭಾವಃ = ದುಃಖಾಭಾವವು, ಸುಖವು ಭಾವರೂಪವಾದುದು ಅಲ್ಲ. (ಅಂದರೆ— ಯಾವಕಾರಣದಿಂದ ಆತ್ಮನು ಭಾವರೂಪನೋ, ಸುಖವು ದುಃಖಾಭಾವಸ್ವರೂಪವೋ, ವಿರುದ್ಧ ಸ್ವಭಾವವುಳ್ಳವುಗಳಿಗೆ ಅತ್ಯಂತಾಭೇದವು ಕಾಣಲ್ಪಡಲಿಲ್ಲ. ಆದಕಾರಣ ಆತ್ಮನು ಸುಖದಿಂದ ಅತ್ಯಂತಾಭಿನ್ನನಲ್ಲ.) ಇತಿ=ಹೀಗೆ, ಜಿನನು ಹೇಳುತ್ತಾನೆ. (ಅದೂ ಅಯುಕ್ತವಾದುದರಿಂದ ಸ್ಖಲಿತವಾದ ಮಾತುಳ್ಳವನು.) (ಸುಖಕ್ಕೆ ದುಃಖಾಭಾವರೂಪತ್ವವು ಏಕೆ ಅಯುಕ್ತವೆಂದರೆ—) ಮಾತ್ರಾಭೋಗಾತಿರೇಕೇಣ=ಶಬ್ದಾದಿ ವಿಷಯಗಳ ಅನುಭವಾಧಿಕ್ಯದಿಂದ, ಸುಖಾಧಿಕ್ಯಸ್ಯ ದರ್ಶನಾತ್=ಸುಖಾಧಿಕ್ಯವು ಕಂಡುದರಿಂದಲೂ, ಮತ್ತೂ ವಿಷಯಭೋಗಾಲ್ಪತ್ವದಿಂದ ಸುಖಾಲ್ಪತ್ವವು ಕಂಡುದರಿಂದಲೂ, (ಅಂದರೆ— 'ಸುಖಂ ಭಾವಃ ತಾರತಮ್ಯೋಪೇತತ್ವಾತ್ ದುಃಖಾದಿವತ್' ಎನ್ನುವ ಪ್ರಮಾಣವಿರುದ್ಧವಾದುದರಿಂದ ಸುಖಕ್ಕೆ ದುಃಖಾಭಾವತ್ವವಚನವು ಅಯುಕ್ತವು. ಸುಖವು ತಾರತಮ್ಯವುಳ್ಳದ್ದಾಗದೆ ಇದ್ದರೆ ಆಗ ಪ್ರೇಕ್ಷಾವಂತರು ಅಧಿಕಸುಖಾನುಭವಕ್ಕಾಗಿ ಅಧಿಕವಿಷಯವನ್ನು ಭೋಗಿಸುವುದು ವ್ಯರ್ಥವಾಗಬೇಕಾಗುವುದು. ಅದಾದರೂ ದೃಷ್ಟವಾಗಿದೆ. ಆದುದರಿಂದ ಸುಖವು ತಾರತಮ್ಯವುಳ್ಳ ಭಾವಪದಾರ್ಥವೇ; ದುಃಖಾಭಾವ ರೂಪವಲ್ಲ.) (ಹಾಗಾದರೆ ಸುಖದಲ್ಲಿ ತಾರತಮ್ಯವಿಲ್ಲ. ಮತ್ತೆ ದುಃಖವು ಭಾವಸ್ವರೂಪವಾಗಿದೆ. ಅದರಲ್ಲಿಯೇ ತಾರತಮ್ಯವಿದೆ. ದುಃಖಾಭಾವವೇ ಸುಖವು, ಅದು ನಿವೃತ್ತವಾದ ಹಾಗೆ ಹೆಚ್ಚು ಹೆಚ್ಚು ಸುಖವು ತೋರುತ್ತದೆ. ದುಃಖಾಭಾವವು ವಿಷಯಭೋಗಸಾಧ್ಯವಾಗಿದೆ ಎಂದರೆ—) (ಸುಖಕ್ಕೆ ಅಭಾವರೂಪತ್ವವು ಪ್ರಮಾಣದಿಂದ ಸಿದ್ಧವಾಗಿದ್ದರೆ ಈ ಪ್ರತೀತ್ಯಾದಿಗಳಿಗೆ ಔಪಾಧಿಕತ್ವವನ್ನು ಹೇಳಿದ್ದು ಯುಕ್ತವಾಗುತ್ತಿತ್ತು.) ಸುಖಸ್ಯ=ಸುಖಕ್ಕೆ, ಅಭಾವತಾ=ಅಭಾವತ್ವವು, ಕೇನ=ಯಾವುದರಿಂದ, (ಅಂದರೆ ಯಾವ ಪ್ರಮಾಣದಿಂದಲೂ ಸಿದ್ಧವಾಗಲಿಲ್ಲ) (ಹೀಗೆಯೇ ಪ್ರತೀತ್ಯಾದಿಗಳಿಗೆ ಔಪಾಧಿಕತ್ವವನ್ನು ಹೇಳಿದರೆ ಬಾಧಕವನ್ನು ಹೇಳುತ್ತಾರೆ.) (ನಿಷ್ಕಾರಣವಾಗಿಯೇ ಸುಖತಾರತಮ್ಯ ದರ್ಶನಾದಿಗಳಿಗೆ ಔಪಾಧಿಕತ್ವವನ್ನು ಕಲ್ಪಿಸಿದ್ದರೆ ಆಗ ಸುಖವು ಭಾವರೂಪವು; ದುಃಖವು ಸುಖಾಭಾವರೂಪವು. ಅದರಲ್ಲಿ ತಾರತಮ್ಯದರ್ಶನವು ಪ್ರತಿಯೋಗಿಸುಖೋಪಾಧಿನಿಮಿತ್ತವು. ಅಹಿಕಂಟಕಾದಿಗಳು ಸುಖನಿವೃತ್ತಿಗೆ ಉಪಯುಕ್ತಗಳು ಈ ರೀತಿಯಾಗಿ ಜಿನನು ಹೇಳಿದ್ದಕ್ಕೆ.) ವಿಪರ್ಯಯಶ್ಚ=ವ್ಯತ್ಯಾಸವೂ ಕೂಡ, ಕಿಂ ನ ಸ್ಯಾತ್=ಏಕೆ

ಆಗಲಾರದು? (ಆಗಿಯೇ ಆಗುವುದು. ಆದಕಾರಣ ಎರಡಕ್ಕೂ ವಿಶೇಷವು ತೋರದಿರುವು ದರಿಂದ ಸ್ವಾಭಾವಿಕವಾಗಿ ತಾರತಮ್ಯವುಳ್ಳವುಗಳಿಗೆ ಭಾವತ್ವವನ್ನು ಅಂಗೀಕರಿಸಲೇ ಬೇಕು) ॥ ॥ ೧೪೨ ॥ ೧೪೩ ॥

ಸ. ರ. ವಿ.— (1) ದುಃಖದಂತೆಯೇ ಸುಖವು ತರತಮಭಾವದಿಂದ ಕೂಡಿರುವ ಪ್ರಯುಕ್ತ ಅದಕ್ಕೆ ಅಭಾವರೂಪತ್ವವು ಕೂಡುವುದಿಲ್ಲ. ವಿಷಯಾನುಭವ ತಾರತಮ್ಯದಿಂದ ಸುಖತಾರತಮ್ಯವು ಅನುಭವಸಿದ್ಧವಾಗಿದೆ. (2) ಹೀಗೆ ಭಾವರೂಪತ್ವವು ಅನುಭವಸಿದ್ಧವಾಗಿದ್ದರೂ ಸುಖಕ್ಕೆ ದುಃಖಾಭಾವರೂಪತ್ವವನ್ನು ಹೇಳುವುದಾದರೆ ದುಃಖಕ್ಕೂ ಕೂಡ ಸುಖಾಭಾವ ರೂಪತ್ವವು ಏಕೆ ಹೇಳಬಾರದು? ನಿಯಾಮಕ ವಿಶೇಷವಿಲ್ಲವಷ್ಟೆ? (3) ದುಃಖವು ವಿಧಿಪ್ರತ್ಯಯ ದಿಂದ ವೇದ್ಯವಾದುದರಿಂದ ಭಾವರೂಪತ್ವವೆಂದು ಅಂಗೀಕರಿಸುವುದಾದರೆ ಸುಖಕ್ಕೆ ವಿಧಿಪ್ರತ್ಯಯ ದಿಂದ ವೇದ್ಯತ್ವವಿರುವುದರಿಂದ ಅಭಾವರೂಪತ್ವವು ಹೇಗೆ? (4) ಅಸುಖವಾಗದಿರುವುದು ಸುಖವು; ಅದುಃಖವಾಗದಿರುವುದು ದುಃಖವು, ಎಂದು ಜ್ಞಾನವಿರುವುದರಿಂದ ಎಲ್ಲಾದಕ್ಕೂ ಅನ್ಯೋನ್ಯಾ ಭಾವರೂಪತ್ವವಿರುವುದರಿಂದ ಸುಖಕ್ಕೂ ಕೂಡ ಅಭಾವರೂಪತ್ವವೆಂದು ಹೇಳಕೂಡದು. ಅಭಾವಾಭಾವವು ಭಾವವೇ ಆಗಿದೆ ಎನ್ನುತ್ತಾರೆ.

ನ್ಯಾಯಸುಧಾ— 'ಸುಖಂ ಅಭಾವಃ ವಸ್ತುತ್ವಾತ್ ಸಮ್ಮತಾಭಾವವತ್' ಎನ್ನುವ ಪ್ರಮಾಣವಿದ್ದ ಪ್ರಯುಕ್ತ 'ಸುಖಸ್ಯಾಭಾವತಾ ಕೇನ' ಎಂದು ಹೇಳಿದ್ದು ಹೇಗೆ ಎಂದರೆ— ಹೀಗೆ ಹೇಳತಕ್ಕ ವಾದಿಯ ಮತದಲ್ಲಿ(೧)ಯಾವುದಾದರೊಂದು ಪದಾರ್ಥವು ಭಾವವು ಇದೆಯೋ, ಅಥವಾ (೨)ಎಲ್ಲವೂ ಅಭಾವವೋ, ಒಂದನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ—

ಮೂ ॥ ಯದಿ ಭಾವೋಽಪಿ ಕಶ್ಚಿತ್ಸ್ಯಾತ್ತಸ್ಯೈವಾಭಾವತಾ ಕುತಃ ।
ಯದಿ ಸರ್ವೇಽಪ್ಯಭಾವಾಃ ಸ್ಯುರನ್ಯೋನ್ಯಮಿತಿ ಭಾವತಾ ॥ ೧೪೪ ॥
ಅಭಾವಾಭಾವತೈವ (ತಾ ಯತ್) ಸ್ಯಾತ್ಕಿಂ ನಚ್ಛಿನ್ನಂ ತದಾ ಭವೇತ್ ।
ಭಾವತ್ವಂ ವಿಧಿರೂಪತ್ವಂ ನಿಷೇಧತ್ವಮಭಾವತಾ ॥ ೧೪೫ ॥

ಅ ॥ (ವಸ್ತುವಾಗಿರುವುದರಿಂದ ಸುಖಕ್ಕೆ ಅಭಾವರೂಪತ್ವವನ್ನು ಅನುಮೇಯಿಸತಕ್ಕವನ ಮತದಲ್ಲಿ) ಯದಿ = ಯಾವ ಪಕ್ಷದಲ್ಲಿ, ಕಶ್ಚಿತ್ = ಯಾವುದಾದರೊಂದು ಪದಾರ್ಥವು, ಭಾವೋಽಪಿ=ಭಾವವೂ ಕೂಡ, ಸ್ಯಾತ್=ಆಗುವುದೋ, (ಹಾಗಾದರೆ) ತಸ್ಯೈವ=ಆ ಸುಖ ಕ್ಕೇನೇ, ಅಭಾವತಾ=ಅಭಾವರೂಪತ್ವವು, ಕುತಃ=ಯಾವುದರಿಂದ? (ಮತ್ತೆ ಭಾವವೆಂದಂಗೀ ಕೃತವಾದ ಪದಾರ್ಥಕ್ಕೂ ಅಭಾವರೂಪತ್ವವು ಬರಬೇಕಾಗುವುದು. ಇಲ್ಲವಾದರೆ ವಸ್ತುತ್ವರೂಪ ವಾದ ಹೇತುವು ಅಭಾವತ್ವವನ್ನು ಸಾಧಿಸುವುದರಲ್ಲಿ ಅಪ್ರಯೋಜಕವಾಗಬೇಕಾಗುವುದು.) (ಹಾಗಾದರೆ— ಎಲ್ಲಾ ಪದಾರ್ಥಗಳೂ ಅಭಾವಗಳು ಆಗಿಯೇ ಆಗುತ್ತವೆ. ಆದಕಾರಣ ಹಿಂದೆ ಹೇಳಿದ ದೋಷವಿಲ್ಲ.) (ಯದ್ಯಪಿ ಘಟಾದಿಗಳಿಗೆ ಅನಾದಿತ್ವ-ಅನಂತತ್ವಾದಿಗಳು ಪ್ರಾಪ್ತಗಳಾಗಬೇಕಾಗುವುದರಿಂದ ಪ್ರಾಗಭಾವತ್ವವೂ, ಪ್ರಧ್ವಂಸಾಭಾವತ್ವವೂ, ಅತ್ಯಂತಾಭಾ ವತ್ವವೂ ಅನುಪಪನ್ನವು. ಆದಾಗ್ಯೂ ಅನ್ಯೋನ್ಯಾಭಾವತ್ವವು ಯುಕ್ತವೇ ಆಗುತ್ತದೆ. ಘಟದಲ್ಲಿ ಆದರೂ ಪಟಾದ್ಯನ್ಯೋನ್ಯಾಭಾವವು ಪ್ರಮಾಣಸಿದ್ಧವು. ಅನ್ಯೋನ್ಯಾಭಾವವು ಧರ್ಮಿ ಯಿಂದ ಬೇರೆ ಯಿಲ್ಲ. ಆದಕಾರಣ ಘಟವೇ ಪಟಾದ್ಯನ್ಯೋನ್ಯಾಭಾವರೂಪವು. ಹೀಗೆಯೇ

ಪಟಾದಿಗಳೂ ಕೂಡ ಘಟಾದ್ಯನ್ಯೋನ್ಯಾಭಾವರೂಪಗಳು.) (ಹೀಗೆ ಎಲ್ಲಾ ಪದಾರ್ಥಗಳೂ ಅಭಾವರೂಪಗಳೇ ಎನ್ನುವ ಎರಡನೇದ್ದನ್ನು ಶಂಕಿಸುತ್ತಾರೆ.) ಸರ್ವೇಽಪಿ=ಎಲ್ಲಾ ಪದಾರ್ಥ ಗಳೂ ಕೂಡ, ಅನ್ಯೋನ್ಯಂ ಅಭಾವಾಃ=ಅನ್ಯೋನ್ಯಾಭಾವಗಳು, ಸ್ಯುಃ=ಆಗುವವು. ಇತಿ= ಹೀಗೆ, ಯದಿ = ಯಾವ ಪಕ್ಷದಲ್ಲಿ, (ಮನ್ಯಸೇ = ತಿಳಿಯುತ್ತೀಯೋ), ತದಾ = ಆಗ, ಭಾವತಾ=ಭಾವತ್ವವೇ, ಸ್ಯಾತ್=ಆಗುವುದು. (ಹೀಗೆ ಎಲ್ಲಾ ಪದಾರ್ಥಗಳಿಗೂ ಅನ್ಯೋನ್ಯಾ ಭಾವತ್ವವನ್ನು ವ್ಯುತ್ಪಾದಿಸಿದರಿಂದ) ನಃ=ನಮಗೆ, ಕಿಂ ಭಿನ್ನಂ ಭವೇತ್=ಯಾವುದು ಭಿನ್ನ ವಾದುದು ಆಗುವುದು? (ಯಾವುದೂ ಆಗುವುದಿಲ್ಲ.) (ಏಕೆಂದರೆ—) ಅಭಾವಾಭಾವತಾ= ಅಭಾವಾಭಾವತ್ವವು, ಭಾವತೈವ=ಭಾವತ್ವವೇ, ಸ್ಯಾತ್=ಆಗುವುದು (ಅಭಾವಾಭಾವತ್ವವು ಭಾವತ್ವವೇ ಆಗುವುದು ಎಂದು ಹೇಳಲ್ಪಟ್ಟಿತು. ಅದನ್ನುಪಪಾದಿಸುವುದಕ್ಕಾಗಿ ಭಾವಾಭಾವ ಸ್ವರೂಪವನ್ನಾದರೂ ಹೇಳುತ್ತಾರೆ.) ಭಾವತ್ವಂ=ಭಾವತ್ವವೆಂದರೆ, ವಿಧಿರೂಪತ್ವಂ=ವಿಧಿಯ ಸ್ವರೂಪತ್ವವು, ಅಭಾವತಾ=ಅಭಾವತ್ವವು, ನಿಷೇಧತ್ವಂ=ನಿಷೇಧಸ್ವರೂಪತ್ವವು॥ ೧೫೪ ॥ ೧೫೫ ॥

ಆದರಿಂದ ಪ್ರಕೃತವೇನಾಯಿತೆಂದರೆ—

**ಮೂ ॥ ನಿಷೇಧಸ್ಯ ನಿಷೇಧೋಽಪಿ ಭಾವ ಏವ ಬಲಾದ್ಭವೇತ್ ।**
**ಪ್ರಥಮಪ್ರತಿಪತ್ತಿಸ್ತು ಭಾವಾಭಾವನಿಯಾಮಿಕಾ ॥ ೧೫೬ ॥**

ಅ ॥ ನಿಷೇಧಸ್ಯ=ನಿಷೇಧಕ್ಕೆ, (ಅಭಾವಕ್ಕೆ) ನಿಷೇಧೋಽಪಿ=ನಿಷೇಧವೂ (ಅಭಾವವೂ) ಕೂಡ, ಬಲಾತ್ = ದರ್ಶನಬಲದೆಶೆಯಿಂದ, (ಅನುಭವದ ಸಾಮರ್ಥ್ಯದೆಶೆಯಿಂದ) ಭಾವ ಏವ=ಭಾವಪದಾರ್ಥವೇ, ಭವೇತ್ = ಆಗುವುದು. (ಅಂದರೆ— ಅಭಾವವೆಂದರೆ ನಿಷೇಧವು, ಆದಕಾರಣ 'ಅಭಾವಸ್ಯ ಅಭಾವಃ' ಎಂದರೆ— ನಿಷೇಧಕ್ಕೂ ನಿಷೇಧವು ಎಂದುಕ್ತಪ್ರಾಯ ವಾಯಿತು. ಅನುಭವದ ಬಲದೆಶೆಯಿಂದ ಅದು ವಿಧಿಯೇ ಆಗಬೇಕು.) (ಸ. ರ. ವಿ.— ಹಾಗಾದರೆ— ಅಸುಖವು ಆಗುವುದಿಲ್ಲವೆಂದು ನಿಷೇಧಮುಖವೇದ್ಯವಾದ ಸುಖಕ್ಕೆ ಭಾವತ್ವ ವಿಟ್ಟುಕೊಂಡರೆ ಭಾವಾಭಾವಗಳಿಗೆ ಅವ್ಯವಸ್ಥೆಯು ಬರಬೇಕಾಗುವುದು ಎಂದರೆ— ಅಥವಾ ನ್ಯಾಯಸುಧಾ— ವಿಧಿಯೆಂದರೆ ಭಾವವೇ ಎಂದು ಹೇಳಲ್ಪಟ್ಟಿತು. ಆದಕಾರಣ ಅಭಾವಾ ಭಾವತ್ವವು ಭಾವತ್ವವೇ ಎಂದುಕ್ತವಾಯಿತು.) ಹಿಂದೆ ಹೇಳಿದ ರೀತಿಯಾಗಿ ಪರಸ್ಪರಾ ನ್ಯೋನ್ಯಾಭಾವರೂಪತ್ವದಿಂದ ಎಲ್ಲಾ ಪದಾರ್ಥಗಳಿಗೂ ಅಭಾವರೂಪತ್ವವಿದ್ದರೆ ದ್ರವ್ಯಾದಿಗಳು, ಭಾವಪದಾರ್ಥಗಳು, ಪ್ರಾಗಭಾವಾದಿಗಳು, ಅಭಾವಪದಾರ್ಥಗಳು ಎಂದು ಬೇರೆ ಕಡೆ ಹೇಳಿದ ನಿಯಮವು ಕೂಡದೆ ಹೋಗಬೇಕಾಗುವುದು. ಏಕೆಂದರೆ— ಘಟಕ್ಕೂ ಕೂಡ ಪಟವಲ್ಲ ವೆಂದು ನಿಷೇಧರೂಪತ್ವವೂ, ಪ್ರಾಗಭಾವಕ್ಕೂ ಕೂಡ 'ಪ್ರಮೇಯಃ' ಎಂದು ವಿಧಿರೂಪತ್ವವೂ ದೃಷ್ಟವಾಗಿದೆ ಎಂದರೆ— ಹಿಂದೆ ಹೇಳಿದ್ದನ್ನೇ ಸ್ಮೃತಿಪಥಕ್ಕೆ ತರುತ್ತಾರೆ.) ಪ್ರಥಮಪ್ರತಿ ಪತ್ತಿಸ್ತು=ಪ್ರಾಥಮಿಕ ಜ್ಞಾನವೇ, ಭಾವಾಭಾವನಿಯಾಮಿಕಾ=ವಿಧಿರೂಪದಿಂದಲೂ, ನಿಷೇಧ ರೂಪದಿಂದಲೂ ಪ್ರಥಮ ಪ್ರತಿಪತ್ತಿಯು ಕ್ರಮದಿಂದ ಭಾವತ್ವಕ್ಕೂ, ಅಭಾವತ್ವಕ್ಕೂ ಕೂಡ ನಿಯಾಮಕವಾದುದು ॥ ೧೫೬ ॥

**ಸ. ರ. ವಿ.— ಹೇತ್ವಂತರದಿಂದಲೂ ಜಿನನಿಗೆ ಆಪ್ತತ್ವವು ಕೂಡುವುದಿಲ್ಲ. ಪುದ್ಗಲನ (ಆತ್ಮನ) ವಿಜ್ಞಾನದೆಶೆಯಿಂದ ಮುಕ್ತಿಯಾಗುತ್ತದೆನ್ನುವುದು ಅಯಥಾರ್ಥಪ್ರಲಾಪವಾಗಿದೆ. ಪುದ್ಗಲ ವಿಜ್ಞಾನಕ್ಕೆ ಮೋಕ್ಷಸಾಧನವಿಲ್ಲವೆನ್ನುತ್ತಾರೆ.**

**ನ್ಯಾಯಸುಧಾ—** ಹಿಂದೆ ಹೇಳಿದ ರೀತಿಯಿಂದ ಜಿನನ ಮಾತಿಗೆ ಅಯುಕ್ತತ್ವವನ್ನು ತೋರಿಸಿ, ಜಿನನಿಂದ ಹೇಳಲ್ಪಟ್ಟ ಮೋಕ್ಷಸಾಧನಕ್ಕೆ ಅಪ್ರಾಮಾಣಿಕತ್ವವು ಹೇಳಲ್ಪಟ್ಟದೆ. ಅದು ಯುಕ್ತಿವಿರುದ್ಧವೂ ಆಗಿದೆ ಎಂದು ತೋರಿಸುತ್ತಾ ಆತ್ಮಜ್ಞಾನಕ್ಕೆ ಮುಕ್ತಿಸಾಧನತ್ವವು ಯಾವುದು ಅವನಿಂದ ಹೇಳಲ್ಪಟ್ಟದ್ದೋ, ಅದು ೧ ಸಾಕ್ಷಾತ್ತಾಗಿಯೋ ಅಥವಾ ೨ ಆತ್ಮ ಪ್ರಸಾದ ದ್ವಾರದಿಂದಲೋ ಎಂದು ವಿಕಲ್ಪಿಸಿಕೊಂಡು ಒಂದನೇದ್ದನ್ನು ನಿರಾಕರಿಸುತ್ತಾರೆ—

**ಮೂ ॥ ನ ಚ ಪುದ್ಗಲವಿಜ್ಞಾನಂ ಮೋಕ್ಷದಂ ಭವತಿ ಕ್ವಚಿತ್ ।**
**ಅಸ್ವಾತಂತ್ರ್ಯಾತ್ಪುದ್ಗಲಸ್ಯ ಜ್ಞಾತೋಽಪಿ ಸುಖದೋ ನ ಹಿ ॥ ೧೪೭ ॥**
**ನ ಹಿ ದುಃಖಿಪರಿಜ್ಞಾನಾದ್ದುಃಖಿತ್ವಂ ವಿನಿವರ್ತತೇ ।**
**ಯದಿ ಪುದ್ಗಲವಿಜ್ಞಾನಾದದುಃಖೀ ಸ್ಯಾತ್ಕಥಂಚನ ॥**
**ದೇಹವಾನಪಿ ನಾದುಃಖೀ ಕಿಂ ಜ್ಞಾನಾದುತ್ತರಂ ಸದಾ ॥ ೧೪೭ ॥**

ಅ ॥ ಪುದ್ಗಲವಿಜ್ಞಾನಂ = ಆತ್ಮವಿಜ್ಞಾನವು, ಮೋಕ್ಷದಂ = ಮುಕ್ತಿಯನ್ನು ಕೊಡ ತಕ್ಕದ್ದು, ನ ಚ ಭವತಿ=ಆಗುವುದಿಲ್ಲ. ('ತಥಾ ಚ ಆತ್ಮವಿಜ್ಞಾನಂ ಮೋಕ್ಷದಂ ನ ಭವತಿ ಅಚೇತನತ್ವಾತ್ ಪಟವತ್' ಆತ್ಮಜ್ಞಾನವು ಮುಕ್ತಿಯನ್ನು ಕೊಡತಕ್ಕದು ಆಗುವುದಿಲ್ಲ. ಅಚೇತನವಾಗಿರುವುದರಿಂದ ಪಟವಂತೆಯೋ ಎನ್ನುವ ಅನುಮಾನವು ಉಕ್ತವಾಯಿತು ) (ಇದಕ್ಕೆ ವ್ಯಾಪ್ತಿಯನ್ನು ಉಪಪಾದಿಸುತ್ತಾರೆ.) ಕ್ವಚಿತ್ ಚ = ಎಲ್ಲಿಯೂ ಅಚೇತನದಲ್ಲಿ, (ಮೋಕ್ಷ ದಾತೃತ್ವವು) ನ ಚ = ಕಾಣಲ್ಪಡಲೇ ಇಲ್ಲ. (ಆತ್ಮನು ತಿಳಿಯಲ್ಪಟ್ಟವನಾಗಿ, ಪ್ರಸನ್ನನಾಗಿ ಮೋಕ್ಷವನ್ನು ಕೊಡುತ್ತಾನೆನ್ನುವ ಎರಡನೇದ್ದನ್ನು ದೂಷಿಸುತ್ತಾರೆ.) ಪುದ್ಗಲಸ್ಯ=ಆತ್ಮನಿಗೆ, ಅಸ್ವಾತಂತ್ರ್ಯಾತ್=ಸ್ವಾತಂತ್ರ್ಯವಿಲ್ಲದಿರುವುದರಿಂದ, ಜ್ಞಾತೋಽಪಿ = ತಿಳಿಯಲ್ಪಟ್ಟ ಆತ್ಮನೂ ಕೂಡ, ಸುಖದಃ = (ಅನುಗ್ರಹಮಾಡಿಯೇ) ಮೋಕ್ಷದಾಯಕನು, ನ ಹಿ = ಆಗಲಾರನು. ಹಿ = ಪಟಾದಿಗಳಲ್ಲಿ ವ್ಯಾಪ್ತಿಯು ಸ್ಪಷ್ಟವಾಗಿದೆ. (ಹಿಂದೆ ಹೇಳಿದ ಎರಡು ಪಕ್ಷಗಳನ್ನು ಹೇತ್ವಂತರದಿಂದ ನಿರಾಕರಿಸುತ್ತಾರೆ ) ದುಃಖಿಪರಿಜ್ಞಾನಾತ್ = ದುಃಖಿಯ ಜ್ಞಾನದಿಂದ, ದುಃಖಿತ್ವಂ=ದುಃಖವುಳ್ಳತನವು, ನ ಹಿ ನಿವರ್ತತೇ=ಹೊರಟು ಹೋಗುವುದಿಲ್ಲ. (ಅಂದರೆ— ಆತ್ಮಜ್ಞಾನಂ=ಆತ್ಮಜ್ಞಾನವು 'ಆತ್ಯಂತಿಕದುಃಖನಿವೃತ್ತಿಹೇತುರ್ನ ಭವತಿ' ಆತ್ಯಂತಿಕ ದುಃಖ ನಿವೃತ್ತಿಗೆ ಕಾರಣವಾಗುವುದಿಲ್ಲ. ದುಃಖಜ್ಞಾನತ್ವಾತ್ = ದುಃಖವುಳ್ಳವನ ಜ್ಞಾನವಾಗಿರುವು ದರಿಂದ, ದೇವದತ್ತಜ್ಞಾನವತ್ = ದೇವದತ್ತನ ಜ್ಞಾನದಂತೆ. ಅಥವಾ 'ಆತ್ಮಾ ದುಃಖಂ ನಿವರ್ತಯಿತುಮಶಕ್ತಃ ದುಃಖಿತ್ವಾತ್ ಯಃ ಯದನರ್ಥವಾನ್ ನಾಸೌ ತನ್ನಿವರ್ತನೇ ಶಕ್ತಃ ಯಥಾ ದರಿದ್ರೋ ದಾರಿದ್ರ್ಯನಿವರ್ತನೇ' ಎನ್ನುವ ಅನುಮಾನವು ಸೂಚಿತವಾಯಿತು. ದುಃಖಿತ್ವವನ್ನು ಹೇಳಿದರಿಂದ ಅಸ್ವಾತಂತ್ರ್ಯವು ಸಮರ್ಥಿತವಾಯಿತು. ಸಾತಂತ್ರ್ಯವಿದ್ದರೆ ಯಾವಾಗಲಾದರೂ ದುಃಖಿಯು ಆಗಲಾರನು. (ಇದೆಲ್ಲಾ ಆಗಬಹುದು. ಆತ್ಮಜ್ಞಾನವು ದೇವದತ್ತನು ದನವನ್ನು ಕೊಡುವಂತೆ ಮೋಕ್ಷವನ್ನು ಕೊಡುವುದಿಲ್ಲ. ಮತ್ತೆ ಪ್ರಕಾಶವು ಅಂಧಕಾರವನ್ನೆಂಬಂತೆ ವಿರೋಧವಿದ್ದುದರಿಂದ ದುಃಖವನ್ನು ಹೋಗಲಾಡಿಸುತ್ತದೆ. ಸ್ವಾತ್ಮ-ಜ್ಞಾನವೇ ತನ್ನ ದುಃಖಕ್ಕೆ ವಿರೋಧಿಯಾದುದು. ಆತ್ಮಜ್ಞಾನ ಮಾತ್ರವಲ್ಲವೆನ್ನುವ ಎರಡನೇ ಹೇತುವೂ ಕೂಡ ಅಪ್ರಯೋಜಕವು ಎಂದಾಶಂಕಿಸಿಕೊಂಡು ಹೇಳುತ್ತಾರೆ.) ಯದಿ=ಯಾನಪಕ್ಷ ದಲ್ಲಿ, ಪುದ್ಗಲವಿಜ್ಞಾನಾತ್=ಆತ್ಮಜ್ಞಾನದಶೆಯಿಂದ, ಅದುಃಖೀ=ದುಃಖವಿಲ್ಲದಿರುವವನು, ಕಥಂ ಚನ = ಯಾವ ಪ್ರಕಾರದಿಂದಲೂ, (ಅಂದರೆ_ದುಃಖಕ್ಕೂ ಆತ್ಮಜ್ಞಾನಕ್ಕೂ ವಿರೋಧವಿದ್ದುದರಿಂದ)

ಸ್ಯಾತ್=ಆಗುವನೋ, (ಹಾಗಾದರೆ—) ಜ್ಞಾನಾತ್=ಜ್ಞಾನದೆಶೆಯಿಂದ, ಉತ್ತರಂ=ಮೇಲಿನ ಕಾಲದಲ್ಲಿ, ದೇಹವಾನಪಿ=ಶರೀರವುಳ್ಳವನೂ ಕೂಡ, ಸದಾ=ನಿರಂತರದಲ್ಲಿಯೂ, ಅದುಃಖೀ= ದುಃಖವಿಲ್ಲದಿರುವವನು, ಕಿಂ=ಏಕೆ, ನ ಸ್ಯಾತ್=ಆಗಲಾರನು. (ಆಗಿಯೇ ಆಗುವನು)

ತಾ ॥ ಸ. ರ. ವಿ— ಪುದ್ಗಲನು ಜ್ಞಾತನಾದಾಗ್ಯೂ ತನ್ನನ್ನು ದುಃಖದಿಂದ ಬಿಡಿಸಿಕೊಳ್ಳ ಲಿಕ್ಕೆ ಅಸಮರ್ಥನೇ ಆಗಿರುತ್ತಾನೆ. ಪುದ್ಗಲನೇ ಈಶನಾದರೆ ಅವನಿಗೆ ದುಃಖವು ಕೂಡಲಾರದು. ಪುದ್ಗಲವಿಜ್ಞಾನವು ದುಃಖಮೊದಲಾದ ಬಂಧಗಳನ್ನು ಬಿಡಿಸುವುದಾದರೆ— ಪುದ್ಗಲನ ವಿಜ್ಞಾನವು ಹುಟ್ಟಿದ ಮೇಲೆ ದೇಹವುಳ್ಳವನಿಗೂ ದುಃಖಾದಿಗಳು ಬಾರದೆ ಹೋಗುವವು. ಶರೀರ ತ್ಯಾಗ ವಾದ ಮೇಲೆ ದುಃಖವನ್ನು ಹೋಗಲಾಡಿಸುವೆನು ಎಂದು ವಿಮೃಶ್ಯಕಾರಿತ್ವವು ಜ್ಞಾನಕ್ಕೆ ಕೂಡಲಾರದು.

ನ್ಯಾಯಸುಧಾ— (1) ಪ್ರಕಾಶವು ಅಂಧಕಾರಕ್ಕೆ ವಿರೋಧಿಯಾಗಿರುವುದರಿಂದ ತಾನು ಹುಟ್ಟಿದೊಡನೆಯೇ ಅಂಧಕಾರವನ್ನು ಹೋಗಲಾಡಿಸುತ್ತದೆ. ಸಾವಕಾಶದಿಂದ ಅಲ್ಲ. ವಿಲಂಬ ವಾದರೆ ವಿರೋಧವೇ ಕೂಡಲಾರದು. ಹಾಗೆಯೇ ಆತ್ಮ ತತ್ವಜ್ಞಾನವು ದುಃಖಮೊದಲಾದ ಅನರ್ಥಕ್ಕೆ ವಿರೋಧಿಯಾಗಿರುವುದರಿಂದ ದುಃಖಾದಿಗಳನ್ನು ನಿವೃತ್ತಿಮಾಡಿ ಆತ್ಮನನ್ನು ಮುಕ್ತ ನನ್ನಾಗಿ ಮಾಡುವುದಾದರೆ ಜಿನಮೊದಲಾದವರು ತತ್ವಜ್ಞಾನ ಸಂಪನ್ನರಾದವರು ಜ್ಞಾನವು ಹುಟ್ಟಿದಮೇಲೆಯೇ ಮುಕ್ತರಾಗಬೇಕಾಗುವರು. ಅವರಿಗೂ ಶರೀರಾದಿಗಳು ಇವೆ ಎಂದು ಪ್ರತ್ಯಕ್ಷಸಿದ್ಧವಾಗಿರುವುದರಿಂದ ಮುಕ್ತರೆಂದು ಹೇಳಲು ಬರುವುದಿಲ್ಲ. ಶರೀರಾದಿಗಳು ಇದ್ದವ ರಿಗೆ ದುಃಖಾದಿಗಳು ತಪ್ಪಲಿಕ್ಕಿಲ್ಲ. (2) 'ದುಃಖಾದಿಕಮಾತ್ಮತತ್ವಜ್ಞಾನವಿರೋಧಿ ನ ಭವತಿ ಬಹುಲಂ ಕಾಲಂ ತೇನ ಸಹ ಸ್ಥಿತತ್ವಾತ್ ಸಮ್ಮತವತ್' ದುಃಖ ಮೊದಲಾದುದು ಆತ್ಮ ತತ್ವಜ್ಞಾನಕ್ಕೆ ವಿರೋಧಿಯಾದುದು ಆಗುವುದಿಲ್ಲ, ಬಹುಕಾಲದಲ್ಲಿ ಆತ್ಮ ತತ್ವಜ್ಞಾನದಿಂದ ಕೂಡಿ ಕೊಂಡು ಇದ್ದಪ್ರಯುಕ್ತ ಸಮ್ಮತವಾದುದರಂತೆ. (3) ಮತ್ತು ಆತ್ಮತತ್ವಜ್ಞಾನವು ಮುಕ್ತಿ ಪರ್ಯಂತವಾಗಿ ಒಂದೇ ಅಲ್ಲ, ಜ್ಞಾನಗಳಿಗೆ ಕ್ಷಣಿಕತ್ವವು ಕಂಡದೆ. ತಥಾಚ ಯಾವ ಜ್ಞಾನಬಂದ ಮೇಲೆ ಮೋಕ್ಷವು ಆಗುತ್ತದೆಂದು ಹೇಳುತ್ತೀರೋ ಅಂತಹ 'ಜಿನಸ್ಯ ಚರಮಜ್ಞಾನಂ ನ ಮೋಕ್ಷ ಸಾಧನಂ ಆತ್ಮಜ್ಞಾನತ್ವಾತ್ ಪ್ರಥಮಾದಿಜ್ಞಾನವತ್=ಅಂತಹ ಜಿನನ ಅಂತಿಮಜ್ಞಾನವು ಮುಕ್ತಿಗೆ ಸಾಧನವಲ್ಲ, ಆತ್ಮಜ್ಞಾನವಾಗಿರುವುದರಿಂದ ಪ್ರಥಮಾದಿಜ್ಞಾನವದಂತೆಯೇ ॥ ೧೪೭ ॥ ೧೪೮ ॥

ಸ. ರ. ವಿ— ನಮ್ಮ ಪಕ್ಷದಲ್ಲಿ ಆದರೂ ಈ ದೋಷವಿಲ್ಲವೆನ್ನುತ್ತಾರೆ.

ನ್ಯಾಯಸುಧಾ— ಹಾಗಾದರೆ— ನೀವು ಈಶ್ವರಜ್ಞಾನವು ಮೋಕ್ಷಸಾಧನವೆಂದಂಗೀಕರಿ ಸುತ್ತೀರಿ. ಅಲ್ಲಿಯೂ ಕೂಡ ಈ ದೂಷಣವು ಸಮಾನವೇ ಎಂದರೆ—

ಮೂ ॥ ಈಶಶ್ಚೇಷ್ಟ್ಯಾನುಸಾರೇಣ ಸ್ಯಾತ್ಕಾಲಾದೀಶವಾದಿನಃ ॥ ೧೪೯ ॥
ಕರ್ಮಹೇತುತ್ವಮಪಿ ತು ನಿಶ್ಚಿತಸ್ಯಾನ್ನ ಹಿ ಕ್ವಚಿತ್ ।
ಅಶೇಷದುಃಖವಿಲಯೋ ನೇದಾನೀಂ ಕಾರಣಂ ಯಥಾ ॥ ೧೫೦ ॥
ತಥೋತ್ತರಂ ನ ಚೈ(ಚ ನ್ಯೈ)ವ ಸ್ಯಾದ್ದೃಷ್ಟಿಪೂರ್ವಾನುಮಾ ಯತಃ ।
ಶಕ್ತಸ್ಯಾನ್ಯಸ್ಯ ವಿಜ್ಞಾನಂ ತತ್ಪ್ರೀತಿಜನಕಂ ಯದಿ ।
ತಥೈ(ಯ್ಯೈ)ವ ಬಂಧಹಾನಿಃ ಸ್ಯಾದಿತಿ ಕಿಂ ನಾಮ ದೂಷಣಂ ॥೧೫೧॥

ಅ || ಈಶವಾದಿನಃ=ಈಶ್ವರನನ್ನು ಅಂಗೀಕರಿಸುವ ನಮ್ಮ ಮತದಲ್ಲಿ, ಈಶಕ್ಲಪ್ತ್ಯನುಸಾರೇಣ=ಈಶ್ವರೇಚ್ಛಾವಿಶೇಷಾನುಸಾರದಿಂದ, ಕಾಲಾತ್=ಕೆಲವುಕಾಲವನ್ನು ದಾಟಿ, ಮುಕ್ತಿಃ=ಮೋಕ್ಷವು, ಸ್ಯಾತ್=ಆಗುವುದು. (ಅಂದರೆ— ನಾವು ಈಶ್ವರಜ್ಞಾನವನ್ನು ಮೋಕ್ಷಸಾಧನವನ್ನಾಗಿ ಹೇಳುವುದಿಲ್ಲ. ಮತ್ತೆ ಪ್ರಸನ್ನನಾದ ಪರಮೇಶ್ವರನೇ ಮುಕ್ತಿಗೆ ಸಾಧನನು. ಜ್ಞಾನವಾದರೂ ಪ್ರಸಾದಕ್ಕೆ ಸಾಧನವಾಗಿರುವುದರಿಂದ ಮೋಕ್ಷಸಾಧನವೆಂದು ಹೇಳಲ್ಪಡುತ್ತದೆ. ಆ ಚೇತನನು ಈ ಸಮಯದಲ್ಲಿ ಈತನನ್ನು ಮುಕ್ತನನ್ನಾಗಿ ಮಾಡುವೆನೆಂದು ಯಾವುದೋ ಒಂದು ಕಾಲಕಲ್ಪನೆಯನ್ನು ಮಾಡುತ್ತಾನೆ. ಆ ಕಲ್ಪನಾನುಸಾರವಾಗಿ ಈತನು ಮುಕ್ತನು ಆಗಿಯೇ ಆಗುತ್ತಾನೆ). (ಹೀಗೆ ಆತ್ಮಜ್ಞಾನಕ್ಕೆ ಮೋಕ್ಷಸಾಧನತ್ವವನ್ನು ನಿರಾಕರಿಸಿ ಧರ್ಮಕ್ಕೂ ಕೂಡ ಮೋಕ್ಷಸಾಧನತ್ವವನ್ನು ನಿರಾಕರಿಸುತ್ತಾರೆ). ಕರ್ಮಹೇತುತ್ವಮಪಿ=ಮುಕ್ತಿಯನ್ನು ಕುರಿತು ಕರ್ಮಕ್ಕೆ ಕಾರಣತ್ವವೂ ಕೂಡ, ಅಥವಾ ಮೋಕ್ಷಕ್ಕೆ ಕರ್ಮಕಾರಣಕತ್ವವೂ ಕೂಡ, ನಿಶ್ಚೈತನ್ಯಾತ್=ಕರ್ಮಕ್ಕೆ ಚೈತನ್ಯವೇ ಇಲ್ಲದಿರುವುದರಿಂದ, ನ ತು = ಕೂಡುವುದೇ ಇಲ್ಲ. (ಅಂದರೆ— 'ವಿಮತಂ ಕರ್ಮ ನ ಮೋಕ್ಷಸಾಧನಂ ಭವತಿ, ಅಚೇತನತ್ವಾತ್ ಪಟವತ್' ಎನ್ನುವ ಅನುಮಾನವು ಉಕ್ತವಾಯಿತು). (ವ್ಯಾಪ್ತಿಯನ್ನುಪಪಾದಿಸುತ್ತಾರೆ—) ಕ್ವಚಿತ್=ಯಾವ ಅಚೇತನದಲ್ಲಿಯೂ, ನ ಹಿ=ಮೋಕ್ಷಸಾಧನತ್ವವು ನಮ್ಮಿಬ್ಬರಿಗೂ ಸಮ್ಮತವಾಗಿ ಇಲ್ಲ. (ಹಾಗಾದರೆ ಅಚೇತನತ್ವವಿದ್ದಾಗ್ಯೂ ವಿಶಿಷ್ಟವಾದ ಈ ಕರ್ಮವು ಮೋಕ್ಷಕ್ಕೆ ಸಾಧನವು ಏಕೆ ಆಗಲಾರದು ಎಂದರೆ— ೧ ಮೋಕ್ಷಪ್ರಾಪ್ತಿಪರ್ಯಂತವಾಗಿ ಮಾಡಲ್ಪಡತಕ್ಕದ್ದು, ಒಂದೇ ಕರ್ಮವೋ, ೨ ಅಥವಾ ಅನೇಕಗಳೋ? ಒಂದನೇದ್ದು ಕೂಡುವುದಿಲ್ಲ. ಕ್ರಿಯೆಗಳು ಅನೇಕಗಳು ಕಂಡಿವೆ. ಪ್ರತಿಕ್ರಿಯೆಯಲ್ಲಿಯೂ ಕರ್ಮವು ಹುಟ್ಟುತ್ತದೆ. ಆ ಕರ್ಮವು ಒಂದೇಯಾಗಿದ್ದರೆ, ಹುಟ್ಟಿದ್ದ ಕರ್ಮಕ್ಕೇನೇ ಪುನಃ ಉತ್ಪತ್ತಿಯಾಗಲೀ, ಕರ್ಮವನ್ನು ಹುಟ್ಟಿಸತಕ್ಕ ಕ್ರಿಯೆಗಳಿಗೆ ವೈಯರ್ಥ್ಯವಾಗಲೀ, ಕರ್ಮಕ್ಕೆ ವಿರಮ್ಯವ್ಯಾಪಾರವಾಗಲೀ ಬರಬೇಕಾಗುವುದು.) (ಕರ್ಮಕ್ಕೆ ಏಕತ್ವವನ್ನು ಅಂಗೀಕರಿಸಿಕೊಂಡು ಬಾಧಕವನ್ನು ಹೇಳುತ್ತಾರೆ.) ಯಥಾ = ಹೇಗೆ, ಇದಾನೀಂ=ಪ್ರಥಮ ಕ್ರಿಯೋತ್ತರಕಾಲದಲ್ಲಿ ಹುಟ್ಟಿದ ಕರ್ಮವು, ಅಶೇಷದುಃಖವಿಲಯೇ=ಸರ್ವದುಃಖಗಳ ನಾಶವಾಗುವುದರಲ್ಲಿ, (ಅಂದರೆ ಮೋಕ್ಷಕ್ಕೆ) ಕಾರಣಂ=ಕಾರಣವು, ನ=ಆಗುವುದಿಲ್ಲವೋ, ತಥಾ=ಹಾಗೆಯೇ, ಉತ್ತರಂ=ಉತ್ತರಕಾಲದಲ್ಲಿ, ಅಂದರೆ— ವಿವಕ್ಷಿತಕಾಲದಲ್ಲಿಯೂ ಕೂಡ, ನೈವ ಚ ಸ್ಯಾತ್ = (ಕರ್ಮತ್ವವಿದ್ಧಪ್ರಯುಕ್ತ ಮೋಕ್ಷಕ್ಕೆ ಕಾರಣವು) ಸರ್ವಥಾ ಆಗಲಾರದು. (ಎರಡನೇ ಕಲ್ಪದಲ್ಲಿಯೂ ಬಾಧಕವಾದ ಪ್ರಮಾಣವನ್ನು ಹೇಳುತ್ತಾರೆ) ಇದಾನೀಂ=ಇದಾನೀಂತನವಾದ ಕರ್ಮವ್ಯಕ್ತಿಯು, ಕಾರಣಂ ನ=ಮೋಕ್ಷಕ್ಕೆ ಕಾರಣವಲ್ಲವೋ, ತಥಾ=ಹಾಗೆಯೇ, ಉತ್ತರಂ ನ ಚೈವ ಸ್ಯಾತ್=ಅಂತಿಮವಾದ ಕರ್ಮವ್ಯಕ್ತಿಯು, ಮೋಕ್ಷಕ್ಕೆ ಕಾರಣವಾಗುವುದಿಲ್ಲ. (ಅಂತ್ಯಕರ್ಮಗಳಿಂದ ವ್ಯತಿರಿಕ್ತಗಳಾದ ಕರ್ಮಗಳಿಗೆ ಮೋಕ್ಷಸಾಧನತ್ವವಿಲ್ಲ, ಹಾಗಿದ್ದರೆ ಆವಾಗಲೇ ಮೋಕ್ಷವಾಗಬೇಕಿತ್ತು. ಪೂರ್ವಸಹಕೃತವಾದ ಅಂತ್ಯಕರ್ಮಕ್ಕೆ ಮೋಕ್ಷಸಾಧನತ್ವವನ್ನು ಹೇಳಕೂಡದು. ಕರ್ಮಗಳಿಗೆ ಇಯತ್ತಾ ಇಲ್ಲದಿರುವುದಿಲ್ಲ. ಏಕೆಂದರೆ-ಜ್ಞಾನವು ಹುಟ್ಟಿದಮೇಲೆ ಇಷ್ಟೇ ಕಾಲದಿಂದ ಇಷ್ಟೇ ಕರ್ಮಗಳನ್ನು ಮಾಡಿ ಮುಕ್ತನಾಗುತ್ತಾನೆನ್ನುವ ನಿಯಮವು ಪ್ರಮಾಣಸಿದ್ಧವಲ್ಲವಷ್ಟೆ!)(ನಿಶ್ಚೈತನ್ಯಾನುಮಾನಕ್ಕೂ 'ಅಶೇಷದುಃಖವಿಲಯೇ' ಇತ್ಯಾದಿಗಳಿಂದ ಹೇಳಲ್ಪಟ್ಟ ಅನುಮಾನಕ್ಕೂ ಆಭಾಸೋದ್ಧಾರವನ್ನು ಮಾಡುತ್ತಾರೆ.) ಯತಃ = ಯಾವಕಾರಣದೆಶೆಯಿಂದ, (ಹಿಂದೆ ಹೇಳಿದ್ದು) ನಿಶ್ಚೈತನ್ಯಾದ್ಯನುಮಾನವು, ದೃಷ್ಟಿಪೂರ್ವಾ = ಪ್ರಮಾಣದಿಂದ ಗೃಹೀತವಾದ ವ್ಯಾಪ್ತ್ಯಾದಿಗಳುಳ್ಳದ್ದೋ, (ಆದಕಾರಣ)

ಅನುಮಾ=ನಿರ್ದೋಷವಾದ ಅನುಮಾನವು. (ಆಭಾಸವಲ್ಲ) ('ಈಶಕ್ಲಪ್ತ್ಯನುಸಾರೇಣ' ಎಂದು ಯಾವುದು ಹೇಳಲ್ಪಟ್ಟದೋ ಅದು ಅಯುಕ್ತವು. ಜ್ಞಾನದೆಶೆಯಿಂದ ಈಶ್ವರನ ಪ್ರಸಾದವು, ಆಮೇಲೆ ಮುಕ್ತಿಯು ಎನ್ನುವಲ್ಲಿ ಪ್ರಮಾಣವಿಲ್ಲವೆಂದರೆ— ಹಾಗೆ ಹೇಳಕೂಡದು. **'ಜ್ಞಾನೀ ಪ್ರಿಯತಮೋಽತೋ ಮೇ ತಂವಿದ್ವಾನೇವ ಚಾಮೃತಃ'** **'ವೃಣುತೇ ಯಂ ತೇನ ಲಭ್ಯಃ'** ಇತ್ಯಾದಿ ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಶ್ರುತಿಗಳು ಇವೆ. ಶ್ರುತಿಗಳಿಗೆ ಪ್ರಾಮಾಣ್ಯವೂ ಸಾಧಿತವಾಗಿದೆ.) (ಆಭಾಸಗಳನ್ನುದ್ಧಾರಮಾಡುತ್ತಲೇ ಅನುಮಾನವನ್ನು ಹೇಳುತ್ತಾರೆ.) ಶಕ್ತಸ್ಯ ಅನ್ಯಸ್ಯ=ಶಕ್ತನಾದ ಮತ್ತೊಬ್ಬನ, ವಿಜ್ಞಾನಂ=ವಿಶಿಷ್ಟಜ್ಞಾನವು, (ಅಂದರೆ ಗುಣೋತ್ಕರ್ಷಾದಿ ಜ್ಞಾನವು) ತತ್ಪ್ರೀತಿಜನಕಂ=ಶ್ರೀ ಹರಿಗೆ ಪ್ರೀತಿಯನ್ನು ಹುಟ್ಟಿಸತಕ್ಕದು ಎಂದು, ಯದಿ ಅನುಮೀಯತೇ=ಅನುಮೇಯಿಸಲ್ಪಡುವುದಾದರೆ, ಯದಿ=ಯಾವ ಪಕ್ಷದಲ್ಲಿ, ತಯೈವ= ಆ ವಿಷ್ಣುವಿನ ಪ್ರೀತಿಯಿಂದಲೇ, ಬಂಧಹಾನಿಃ=ಸಂಸಾರಬಂಧದ ನಾಶವು, ಸ್ಯಾತ್=ಆಗುವುದೆಂದು ಅನುಮೇಯಿಸಲ್ಪಡುತ್ತದೋ, ತದಾ=ಆಗ, ಕಿಂ ನಾಮ ದೂಷಣಂ = ಯಾವುದು ದೋಷವಾಗುವುದು? (ಯಾವ ದೋಷವೂ ಇಲ್ಲ). ಯತಃ=ಯಾವ ಕಾರಣದೆಶೆಯಿಂದ, ದೃಷ್ಟಿಪೂರ್ವಾ=ಪ್ರಮಾಣಗೃಹೀತವಾದ ವ್ಯಾಪ್ತ್ಯಾದಿಗಳುಳ್ಳದ್ದು, ಅನುಮಾ=ಈ ಅನುಮಾನವು.

**ತಾ ||** ಸ. ರ. ವಿ — (1) ಮೋಕ್ಷವು ವಿಷ್ಣುವಿನ ಅಧೀನವಾದುದರಿಂದ ವಿಷ್ಣುವಿನ ಜ್ಞಾನವಿದ್ದವನಿಗೂ ಕೂಡ ಕಾಲಾಂತರದಿಂದಲೇ ಮೋಕ್ಷವು ಕೂಡುತ್ತದೆ. ಪ್ರತಿಗ್ರಹವು (ತೆಗೆದುಕೊಳ್ಳುವಿಕೆಯು) ಕೊಡುವವನ ಅಧೀನವು.

**ನ್ಯಾಯಸುಧಾ**— (1) 'ಸಂಸಾರಬಂಧಹಾನಿಃ ಸಮರ್ಥಪುರುಷಾಂತರ ಪ್ರೀತಿನಿಬಂಧನಾ ಬಂಧಹಾನಿತ್ವಾತ್ ರಾಜಪ್ರಸಾದಾಧೀನಭೃತ್ಯನಿಗಡಬಂಧಹಾನಿವತ್'=ಸಂಸಾರಬಂಧದ ಬಿಡುಗಡೆಯು ಸಮರ್ಥನಾದ ಮತ್ತೊಬ್ಬನಾದ ಪುರುಷನ ಪ್ರೀತಿನಿಮಿತ್ತಕವು; ಬಂಧಹಾನಿಯಾಗಿರುವುದರಿಂದ ರಾಜಪ್ರಸಾದಾಧೀನವಾದ, ಭೃತ್ಯನ ನಿಗಡ ಬಂಧದ ಹಾನಿಯಂತೆ ಪ್ರಸನ್ನನಾಗಿ ಬಂಧವನ್ನು ನಿವೃತ್ತಿಗೊಳಿಸುವ ಈ ಪುರುಷನೇ ಈಶ್ವರನು. (2) 'ವಿಪ್ರತಿಪನ್ನಾ ಪ್ರೀತಿಃ ಗುಣೋತ್ಕರ್ಷಾದಿ ಜ್ಞಾನಜಾ ಅನಿಜಪ್ರೀತಿತ್ವಾತ್ ರಾಜಪ್ರೀತಿವತ್' ವಿವಾದವಿಷಯವಾದ ಪ್ರೀತಿಯು ಗುಣೋತ್ಕರ್ಷಾದಿಗಳ ಜ್ಞಾನದಿಂದ ಹುಟ್ಟತಕ್ಕದ್ದು; ಸ್ವಾಭಾವಿಕ ಪ್ರೀತಿಯಾಗದಿರುವುದರಿಂದ ರಾಜನ ಪ್ರೀತಿಯಂತೆ ಕರ್ಮಾದಿಗಳಿಂದ ಆಗತಕ್ಕ ಈಶ್ವರಪ್ರಸಾದವೂ ಕೂಡ ಗುಣೋತ್ಕರ್ಷಾದಿಗಳ ಜ್ಞಾನವಿರುವಾಗಲೇ ಆಗುವುದರಿಂದ ದೋಷವಿಲ್ಲ. (3) 'ಅಥವಾ ಈಶ್ವರವಿಷಯಂ ಗುಣೋತ್ಕರ್ಷಾದಿ ಜ್ಞಾನಂ ತತ್ಪ್ರೀತಿಜನಕಂ ಗುಣೋತ್ಕರ್ಷಾದಿ ಜ್ಞಾನತ್ವಾತ್ ಸಮ್ಮತವತ್' ಇಲ್ಲಿ ಈಶ್ವರನೇ ಸಿದ್ಧನಾಗದೆ ಇದ್ದುದರಿಂದ ದೋಷವಿದೆ ಎಂದು ಹೇಳಕೂಡದು ಪ್ರಥಮಾನುಮಾನದಿಂದಲೇ ಈಶ್ವರನು ಸಿದ್ಧನಾಗಿರುತ್ತಾನೆ. || ೧೪೯ || ೧೫೦ || ೧೫೧ ||

ಹಾಗಾದರೆ ಇದಕ್ಕೆ ವಿರುದ್ಧವಾದರೂ ನನ್ನಿಂದ ಅನುಮೇಯಿಸಲ್ಪಡುತ್ತದೆ. ಆದ ಕಾರಣ ಸತ್ಪ್ರತಿಪಕ್ಷತ್ವವೆಂದರೆ- ೧ 'ವಿಮತಾ ಬಂಧಹಾನಿಃ ಸ್ವಜ್ಞಾನನಿಬಂಧನಾ' ವಿವಾದ ವಿಷಯವಾದ ಬಂಧಹಾನಿಯು ತನ್ನ ಜ್ಞಾನವೇ ಕಾರಣವಾಗಿ ಉಳ್ಳದ್ದು ಎಂದು ಅನುಮೇಯಿಸಲ್ಪಡುತ್ತದೋ, (೨) ಅಥವಾ 'ಪರಪ್ರಸಾದನಿಬಂಧನಾ ನ ಭವತಿ' ಇತರರ ಪ್ರಸಾದವು ಕಾರಣವಾಗಿ ಉಳ್ಳದ್ದು ಆಗುವುದಿಲ್ಲ ಎಂದನುಮೇಯಿಸಲ್ಪಡುತ್ತದೋ, ಇವುಗಳಲ್ಲಿ ಒಂದನೇದರಲ್ಲಿ ದೋಷವನ್ನು ಹೇಳುತ್ತಾರೆ—

**ಮೂ ||** **ಸ್ವಜ್ಞಾನಾದ್ಬಂಧಹಾನಿಸ್ತು ದೃಶ್ಯತೇ ಕಸ್ಯ ಕುತ್ರಚಿತ್ || ೧೫೨ ||**
**ಅಹಿಂಸಾಯಾಶ್ಚ ಧರ್ಮತ್ವಂ ಕೇನ ಮಾನೇನ ಗಮ್ಯತೇ |**
**ಹಿಂಸಾಯಾ ಏವ ಧರ್ಮತ್ವಮಿತ್ಯುಕ್ತೇ ಸ್ಯಾತ್ಕಿಮುತ್ತರಂ || ೧೫೩ ||**

**ಧರ್ಮಸ್ಯ ಸುಖಹೇತುತ್ವಮಪಿ ಕೇನಾವಗಮ್ಯತೇ ।**
**ಹತ್ಯಾಯಾ ಮೋಕ್ಷಹೇತುತ್ವಂ ಕುತೋ ಮಾನಾನ್ನಿವಾರ್ಯತೇ**
**॥ ೧೫೪ ॥**

ಅ ॥ ಸ್ವಜ್ಞಾನಾತ್ = ತನ್ನ ಜ್ಞಾನದೆಶೆಯಿಂದ, ಬಂಧಹಾನಿಸ್ತು = ಸಂಸಾರಬಂಧದ ಹಾನಿಯಾದರೂ, ಕುತ್ರಚಿತ್ = ಎಲ್ಲಿ, ಕಸ್ಯ = ಯಾರಿಗೆ, ದೃಶ್ಯತೇ = ಕಾಣಲ್ಪಡುತ್ತದೆ. ಯಾರಿಗೂ ಕಾಣಲ್ಪಡುವುದಿಲ್ಲ. (ಅಂತೂ ವ್ಯಾಪ್ತಿಯಿಲ್ಲ) (ಎಲ್ಲಾ ಅನಿಷ್ಟನಿವೃತ್ತಿಯೂ ಈಶ್ವರನ ಪ್ರಸಾದಾಧೀನವಾದುದು. ಎಂದು ತತ್ವಜ್ಞಾನಿಗಳ ಸರಣಿಯು.) (ಧರ್ಮಜ್ಞಾನಗಳಿಗೆ ಮೋಕ್ಷಸಾಧನತ್ವವಿದ್ದರೆ ಆವಾಗಲೇ ಮೋಕ್ಷವು ಆಗಬೇಕಾಗುವುದು ಎಂದು ಯಾವುದು ಉಕ್ತವಾಗಿದೆಯೋ ಅದು ಅಯುಕ್ತವು. ಪ್ರತಿಬಂಧಕೀಭೂತವಾದ ಕರ್ಮವು ಇದೆ. ಪ್ರತಿಬಂಧಕವಶದಿಂದ ಕಾರ್ಯವನ್ನು ಮಾಡದಿರುವ ಹೇತುವು ಅಹೇತುವು ಆಗುವುದಿಲ್ಲ. ಹಾಗಾದರೆ ಅತಿಪ್ರಸಂಗವಿದೆ. ಮಣಿಯಿಂದ ಪ್ರತಿಬದ್ಧವಾದ ವಹ್ನಿಯು ಸ್ಫೋಟಕಾರಣವಾಗದೆ ಇದ್ದುದರಿಂದ ವಹ್ನಿಯೇ ಸ್ಫೋಟಕಾರಣವಲ್ಲವೆಂದಾಗಬೇಕಾಗುವುದು. ಕರ್ಮವು ಅನೇಕ ವಿಧವು. ಅದರಲ್ಲಿ ಯದ್ಯಪಿ ಜ್ಞಾನಾವರಣಾದಿಗಳು ಜ್ಞಾನದಿಂದಲೇ ನಿವೃತ್ತವಾಗುತ್ತವೆ. ಆದಾಗ್ಯೂ ಆಯುರಾದಿ ಕಾರಣವು ಇದ್ದೇ ಇದೆ. ಎಂದರೆ— ಅಹಿಂಸಾದಿರೂಪವಾದುದೇ ಧರ್ಮವು. ಹೀಗೆ ಶರೀರಪರಿಮಾಣತ್ವಾದಿಗಳಿಂದ ಆತ್ಮಜ್ಞಾನವು ತತ್ವಜ್ಞಾನವು. ಈ ಧರ್ಮಜ್ಞಾನಗಳು ಮೋಕ್ಷಸಾಧನಗಳು ಎನ್ನುವ ಅರ್ಥವು ಪ್ರಮಿತವಾಗಿದ್ದರೆ ಪ್ರತಿಬಂಧಕವಿದೆ. ಎನ್ನುವ ಕಲ್ಪನೆಯು ಆಗಬಹುದಿತ್ತು. ಈ ವಿಷಯದಲ್ಲಿ ಪ್ರಮಾಣವಿಲ್ಲವೆನ್ನುತ್ತಾರೆ.) ಅಹಿಂಸಾಯಾಶ್ಚ = ಅಹಿಂಸೆಗೂ, ಶರೀರಪರಿಮಾಣತ್ವೇನ ಆತ್ಮಜ್ಞಾನವಿಶೇಷಕ್ಕೂ ಅಥವಾ ಸಪ್ತಘಟಕಾ ಭೋಜನಾದಿಗಳಿಗೂ, ಧರ್ಮತ್ವಂ = ಧರ್ಮತ್ವವು, ಕೇನ ಮಾನೇನ = ಯಾವ ಪ್ರಮಾಣದಿಂದ, ಗಮ್ಯತೇ = ತಿಳಿಯಲ್ಪಡುತ್ತದೆ? (ಜಿನವಾಕ್ಯದಿಂದ ತಿಳಿಯಲ್ಪಡುತ್ತದೆ ಎಂದು ಹೇಳಕೂಡದು. ಅದಕ್ಕೆ ಪ್ರಾಮಾಣ್ಯಸಾಧಕವಾದುದು ಇಲ್ಲವೆಂದು ಉಕ್ತವಾಗಿದೆ.) (ಜಿನವಾಕ್ಯವು ಸತ್ಪ್ರತಿಪಕ್ಷಿತವಾಗಿದೆ ಎನ್ನುತ್ತಾರೆ.) ಹಿಂಸಾಯಾ ಏವ = ಹಿಂಸೆಗೇನೇ, ಧರ್ಮತ್ವಂ ಇತಿ = ಧರ್ಮತ್ವವೆಂದು, ಉಕ್ತೇ = ಹೇಳಿದರೆ, ಕಿಮುತ್ತರಂ ಸ್ಯಾತ್ = ಏನು ಉತ್ತರವಿದೆ? (ಅಂದರೆ— ಜಿನವಾಕ್ಯದಿಂದ ಅಹಿಂಸೆಗೆ ಧರ್ಮತ್ವವನ್ನು ತಿಳಿದವನು ಭಿನ್ನಕಾಚಾರ್ಯರಿಂದ ಹಿಂಸೆಗೇನೇ ಧರ್ಮತ್ವವು ಎಂದು ಹೇಳಿದರೆ- ಏನು ಉತ್ತರವನ್ನು ಹೇಳುವನು? ಏನೂ ಇಲ್ಲ. ಅಂತೂ ಧರ್ಮ ನಿಶ್ಚಯವಾಗದೆ ಹೋಗುವುದು. ಭಿನ್ನಕಾಚಾರ್ಯರು ಆಪ್ತರಲ್ಲವೆಂದರೆ ಜಿನನೂ ಹೇಗೆ ಆಪ್ತನಾದಾನು? ಸರ್ವಗುಣಗಳಿಂದ ಕೂಡಿರುವ ಪ್ರಯುಕ್ತವೆಂದರೆ— ಇದು ಭಿನ್ನಕಾಚಾರ್ಯರಲ್ಲಿಯೂ ಸಮಾನವೇ. ಭಿನ್ನಕಾಚಾರ್ಯರಲ್ಲಿ ಆ ಸಾರ್ವಜ್ಞಾದಿ ಗುಣಗಳು ಅಪ್ರಾಮಾಣಿಕಗಳೆಂದರೆ— ಜಿನನಲ್ಲಿಯೂ ಪ್ರಮಾಣಸಿದ್ಧಗಳೋ ಏನು? ಜಿನದರ್ಶಿಗಳ ವಚನದಿಂದಲೇ ಆ ಗುಣಗಳು ಜಿನನಲ್ಲಿ ಸಿದ್ಧಿಸುತ್ತವೆ. ಎಂದರೆ- ಭಿನ್ನಕಾಚಾರ್ಯರಲ್ಲಿಯೂ ಹಾಗೆಯೇ ಹೇಳಲು ಶಕ್ಯಗಳಾಗುತ್ತವೆ. ಭಿನ್ನಕಾಚಾರ್ಯದರ್ಶಿಗಳು, ಭ್ರಾಂತರು ಅಥವಾ ಪ್ರತಾರಕರು ಎಂದರೆ— ಜಿನದರ್ಶಿಗಳೂ ಕೂಡ ಭ್ರಾಂತರು ಪ್ರತಾರಕರೆಂದು ಏಕೆ ಆಗಲಾರರು?) (ಈಗ ಧರ್ಮಾದಿಗಳಿಗೆ ಮೋಕ್ಷಸಾಧನತ್ವವೂ ಕೂಡ ಅಪ್ರಾಮಾಣಿಕವಾಗಿದೆ ಎನ್ನುತ್ತಾರೆ.) ಧರ್ಮಸ್ಯ = ಧರ್ಮಕ್ಕೆ, ಸುಖಹೇತುತ್ವಮಪಿ = ಮೋಕ್ಷಹೇತುತ್ವವೂ ಕೂಡ, ಕೇನ = ಯಾವುದರಿಂದ, ಅವಗಮ್ಯತೇ = ತಿಳಿಯಲ್ಪಡುತ್ತದೆ. (ಜಿನವಾಕ್ಯದಿಂದ ನಿಶ್ಚಿತವಾಗುತ್ತದೆಂದು ಹೇಳುವವನಿಗೆ ಸತ್ಪ್ರತಿಪಕ್ಷತ್ವವು ಬರುತ್ತದೆಂದು ಹೇಳುತ್ತಾರೆ.)

ಹತ್ಯಾಯಾಃ = ಹನನಕ್ಕೆ, ಮೋಕ್ಷಹೇತುತ್ವಂ= (ಯಾರೋಒಬ್ಬ ಆಚಾರ್ಯರಿಂದಹೇಳಲ್ಪಟ್ಟ) ಮುಕ್ತಿಕಾರಣತ್ವವು, ಕುತಃ ಮಾನಾತ್ = ಯಾವ ಪ್ರಮಾಣದಿಂದ, ನಿವಾರ್ಯತೇ=ತಡೆಯಲ್ಪಡುತ್ತದೆ.

**ತಾ ||** ಸ. ರ. ವಿ.— (1) ಇತರರಿಂದ ಅನಧಿಷ್ಠಿತವಾದ ಕರ್ಮವು ದೇಹತ್ಯಾಗದ ಮೇಲಿನಕಾಲದಲ್ಲಿಯೂ ಕೂಡ ದುಃಖವನ್ನು ಹೋಗಲಾಡಿಸುವುದೇ ಇಲ್ಲ. ನಿವರ್ತಿಸುವುದಾದರೆ ಈಗಲೇ ನಿವರ್ತಿಸುವುದು. ಉತ್ತರಕಾಲದಲ್ಲಿ ಹೋಗಲಾಡಿಸುವೆನೆಂದು ಅಚೇತನಕ್ಕೆ ವಿಮೃಶ್ಯಕಾರಿತ್ವವು ಕೂಡಲಾರದು ದೃಷ್ಟಾಂತವೇ ಇಲ್ಲದಿರುವುದರಿಂದ ಜಿನವಿಹಿತವಾದ ಕರ್ಮಕ್ಕೆ ಮೋಕ್ಷಸಾಧನತ್ವನವ್ನು ಅನುಮೇಯಿಸಲಿಕ್ಕೆ ಅಶಕ್ಯವೂ, ಪ್ರಮಾಣಾಂತರವೂ ಕೂಡುವುದಿಲ್ಲ. ತನ್ನಿಂದ ಭಿನ್ನನಾದ ಈಶನ ಕೃಪೆಯಿಂದ ಜೀವಬಂಧದ ವಿನಾಶದ ವಿಷಯದಲ್ಲಿ ಆದರೂ ದೇಶಾಧಿಪತಿಯ ಕೃಪೆಯಿಂದ ಆಗತಕ್ಕ ನಿಗಡಮೋಕ್ಷಾದಿ ದೃಷ್ಟಾಂತವು ಇದ್ದೇ ಇದೆ. ತನ್ನ ಸ್ವರೂಪ ಜ್ಞಾನದಿಂದ ಅಲ್ಲ. ಯಾವುದಾದರೊಂದು ನಿಗಡಬಂಧವು ತಮ್ಮ ಜ್ಞಾನದಿಂದಲಾಗಲೀ ತಮ್ಮ ಕೃಪೆಯಿಂದಲಾಗಲೀ ಮುಚ್ಯಮಾನವಾದುದು ಕಾಣಲ್ಪಡಲಿಲ್ಲ. ಆದಕಾರಣ ಅಹಿಂಸೆಯೇ ಧರ್ಮಗಳಲ್ಲಿ ಪರಮಧರ್ಮವು, ಇದು ಮೊದಲಾದ ಮೂಲಪ್ರಮಾಣವಿಲ್ಲದಿರುವ ಜಿನವಾಕ್ಯಕ್ಕೆ ಆದರಣೀಯತ್ವವಿರುವುದಾದರೆ, ಹಿಂಸೆಯೇ ಧರ್ಮವು ಮುಕ್ತಿಗೂ ಕಾರಣವು. ಧರ್ಮವು ಸುಖಸಾಧನವಲ್ಲ. ಇದು ಮೊದಲಾದ ವಿಪ್ರಲಂಬಕವಾಕ್ಯವೂ ಕೂಡ ಆದರಣೀಯವಾಗಬೇಕಾಗುವುದು. ಆದಕಾರಣ ಜಿನನಿಂದ ಹೇಳಲ್ಪಟ್ಟದ್ದು ಅಹಿಂಸಾದಿಯು ಮುಕ್ತಿಗೆ ಸಾಧನವಲ್ಲ || ೧೫೨ || ೧೫೩ || || ೧೫೪ ||

ಸ. ರ. ವಿ.— ಹಿಂದೆ ಹೇಳಿದ ನ್ಯಾಯದಿಂದಲೇ ಮಾಧ್ಯಮಿಕನಿಗೂ ಕೂಡ ಅಯಥಾರ್ಥಪ್ರಲಾಪಿತ್ವವಿದ್ದ ಪ್ರಯುಕ್ತವೇ ಅವನಿಂದ ಹೇಳಲ್ಪಟ್ಟ ಶೂನ್ಯಜ್ಞಾನಾದಿಗಳು ಮುಕ್ತಿಸಾಧನವಲ್ಲವೆನ್ನುತ್ತಾರೆ.

ನ್ಯಾಯಸುಧಾ— ಈಗ ಬೌದ್ಧರಿಗೆ ಅಭಿಮತವಾದ ಮೋಕ್ಷಸಾಧನವನ್ನು ಮುಂದಕ್ಕೆ ನಿರಾಕರಿಸುವವನಿಗೆ ಶೂನ್ಯವಾದಿಯು ಹೇಳಿದ ಮೋಕ್ಷಸಾಧನವನ್ನೂ ನಿರಾಕರಿಸುತ್ತಾರೆ.

**ಮೂ ||** **ನ ಚ ಶೂನ್ಯಪರಿಜ್ಞಾನಾಚ್ಛೂನ್ಯಭಾವನಯಾಪಿ ಚ ।**
**ಮೋಕ್ಷಃ ಕಥಂಚನ ಭವೇದ್ಯದೀದಾನೀಂ ಕಥಂ ನ ಸಃ || ೧೫೫ ||**

**ಅ ||** ಶೂನ್ಯಪರಿಜ್ಞಾನಾತ್=ಶೂನ್ಯವೇ ತತ್ವವು ಎಲ್ಲಾ ಜಗತ್ತೂ ಅದರಲ್ಲಿಯೇ ಅಧ್ಯಸ್ತವಾಗಿದೆ, ಎನ್ನುವ ಪರಿಜ್ಞಾನದೆಶೆಯಿಂದ, ಹಾಗೆಯೇ, ಶೂನ್ಯಭಾವನಯಾಪಿ=ಶೂನ್ಯಧ್ಯಾನದಿಂದಲೂ, ಕಥಂಚನ=ಯಾವಪ್ರಕಾರದಿಂದಲೂ, ಮೋಕ್ಷಃ=ಮೋಕ್ಷವು, ನ ಚ ಭವೇತ್= ಆಗಲಾರದು. (ಈ ಕಾರಣದಿಂದಲೂ, ಮುಕ್ತಿಸಾಧನವಲ್ಲವೆನ್ನುತ್ತಾರೆ.) (ಶೂನ್ಯಜ್ಞಾನದಿಂದ ಕಥಂಚನ ಎಂದು ಶಂಕಿಸಿದ ರೀತಿಯಿಂದ) ಮೋಕ್ಷಃ ಭವೇತ್ ಇತಿ ಯದಿ=ಮುಕ್ತಿಯು ಆಗುವುದೆಂದು ಹೇಳಲ್ಪಡುವುದಾದರೆ, ಸಃ=ಆ ಮೋಕ್ಷವು, ಕಥಂ=ಹೇಗೆ, ಇದಾನೀಂ=ಜ್ಞಾನವು ಹುಟ್ಟಿದ ಕ್ಷಣದಲ್ಲಿಯೇ, ನ ಭವೇತ್=ಆಗಲಾರದು. (ಆಗಲೇ ಆಗತಕ್ಕದ್ದು.)

**ತಾ ||** ನ್ಯಾಯಸುಧಾ—(1)'ಕಥಂಚನ' ಎನ್ನುವುದರಿಂದ ಶೂನ್ಯಪರಿಜ್ಞಾನಾದಿಗಳು ಮುಕ್ತಿಸಾಧನವು ಎನ್ನುವಲ್ಲಿ ಪ್ರಮಾಣವಿಲ್ಲದಿರುವುದರಿಂದ ಶೂನ್ಯಭಾವನೆಯಿಂದಲೇ ಬಂಧಹಾನಿಯು ಆಗುವುದು ಎಂದು ಹೇಳಿದ ಪ್ರಮಾಣವಿರೋಧವಿದ್ದುದರಿಂದಲೂ ಎಂದು ಇಟ್ಟುಕೊಳ್ಳ

ಬೇಕು. (2) ಅಥವಾ ಶೂನ್ಯಪರಿಜ್ಞಾನಾದಿಗಳು ತಾನೇ ಮೋಕ್ಷವನ್ನು ಸಾಧಿಸಿಕೊಡುತ್ತದೋ ಅಥವಾ ಶೂನ್ಯದ ಪ್ರಸಾದವನ್ನು ಹುಟ್ಟಿಸಿಯೋ? ೧ನೇದ್ದು ಕೂಡಲಾರದು. ಪಟದಂತೆಯೇ ಅಚೇತನವಾಗಿದೆ. ೨ನೇದ್ದೂ ಕೂಡಲಾರದು. ಶೂನ್ಯಕ್ಕೆ ಪ್ರಸಾದ ಗುಣವನ್ನೇ ಅಂಗೀಕರಿಸಲಿಲ್ಲ. ಪ್ರಸಾದಾಖ್ಯ ಗುಣವಿದ್ದರೆ ಶೂನ್ಯತ್ವವೇ ವ್ಯಾಹತವಾಗಬೇಕಾದೀತು. (3) ಇದು ಕೂಡಬಹುದಿತ್ತು, ಆದರೆ ಬಂಧವು ಸಂವೃತಿನಾಮಕವಾದ, ಅಜ್ಞಾನನಿಮಿತ್ತಕವಾದ ಅಧ್ಯಾಸವು. ಸಂವೃತಿಯಾದರೂ ವಿರೋಧಿಯಾದ ಶೂನ್ಯಜ್ಞಾನದಿಂದ ನಿವೃತ್ತವಾಗುತ್ತದೆ. ಆದಕಾರಣ ತನ್ಮೂಲಕವಾದ ಬಂಧಾಧ್ಯಾಸವೂ ಕೂಡ ನಿವೃತ್ತವಾಗುತ್ತದೆ. ಅಚೇತನತ್ವಾದಿಗಳು ಏನು ಬಾಧಕವು? ಅಸಂಭಾವನಾ, ವಿಪರೀತಭಾವನಾ ನಿವೃತ್ತ್ಯಾದಿಗಳು ಆಗುವುದರಿಂದ ಭಾವನಾಕ್ಕೆ ವೈಯರ್ಥ್ಯವೂ ಇಲ್ಲ, ಎಂದರೆ— ಹೀಗೆ ಹೇಳಕೂಡದು. 'ಮಿಥ್ಯಾತ್ವಮಪಿ ಬಂಧಸ್ಯ ನ ಪ್ರತ್ಯಕ್ಷವಿರೋಧತಃ' ಎಂದು ಜಿಜ್ಞಾಸಾಧಿಕರಣದಲ್ಲಿಯೇ ನಿರಸ್ತವಾಗಿದೆ (4) ಅದನ್ನು ಅಂಗೀಕರಿಸಿಯೂ ದೋಷವನ್ನು ಹೇಳಿದರು. ಯದಿ ಇತ್ಯಾದಿಗಳಿಂದ ॥ ೧೫೫ ॥

ಹಾಗಾದರೆ ಹೇಗೆ ನಿಮ್ಮ ಮತದಲ್ಲಿ ಜ್ಞಾನವು ಹುಟ್ಟಿದಮೇಲೆಯೂ ಸಂಸಾರದಲ್ಲಿಯೇ ಅವಸ್ಥಿತಿಯೋ, ಹಾಗೆಯೇ ನಮ್ಮ ಮತದಲ್ಲಿಯೂ ಏಕೆ ಆಗಲಾರದು ಎಂದರೆ— ವೈಷಮ್ಯವನ್ನು ಹೇಳುತ್ತಾರೆ—

**ಮೂ ॥ ಪರಪ್ರಸಾದನೇಚ್ಛೋಸ್ತು ವಿಲಂಬೋ ನಾಮ ಯುಜ್ಯತೇ ।**
**ಪುಮಿಚ್ಛಾಧೀನತಾ ನೋ ಚೇದ್ವಿಲಂಬಃ ಕಿಂ ಕೃತೋ ಭವೇತ್ ॥**
**॥ ೧೫೬ ॥**
**ಅನ್ಯತ್ರಾಪಿ ವಿಲಂಬಾಸ್ತು ಸ್ಯುರೀಶೇಚ್ಛಾ ನಿಮಿತ್ತತಃ ।**
**ಅನ್ಯಥಾ ಕಾರಣಂ ಚೇತ್ಸ್ಯಾತ್ಕಿಂ ಕಾರ್ಯಂ ನೋಪಜಾಯತೇ ॥**
**ಕಾರಣೇ ಸತಿ ಕಾರ್ಯಸ್ಯ ಭಾವಃ ಸುನಿಯತೋಽಸ್ಯ ಹಿ ॥ ೧೫೭ ॥**

ಅ ॥ ಪರಪ್ರಸಾದನೇಚ್ಛೋಸ್ತು=ತನ್ನಿಂದ ಮಾಡಲರ್ಹವಾದ ಸಾಧನವನ್ನು ಮಾಡಿದವನಿಗೂ, ಆ ಸಾಧನದಿಂದ ಇನ್ನೊಬ್ಬರ ಪ್ರಸಾದವನ್ನು ಇಚ್ಛಿಸುವವನಿಗಾದರೂ (ಫಲಪ್ರಾಪ್ತಿಯಾಗುವುದರಲ್ಲಿ) ವಿಲಂಬವು ಕೂಡುತ್ತದೆ. ಲೋಕದಲ್ಲಿ ಹಾಗೆ ದೃಷ್ಟವಾಗಿದೆ. ಪುಮಿಚ್ಛಾಧೀನತಾ=ಮೋಕ್ಷಕ್ಕೆ ಪುರುಷಾಂತರಪ್ರಸಾದಾಧೀನತ್ವವು, ನೋ ಚೇತ್=ಇಲ್ಲವೆಂದು ಹೇಳುವುದಾದರೆ—(ಅಂದರೆ ಕೇವಲ ಶೂನ್ಯಜ್ಞಾನವು ಬಂಧಕ್ಕೆ ವಿರೋಧಿಯಾಗಿರುವುದರಿಂದ ಬಂಧವನ್ನು ನಿವರ್ತಿಸುತ್ತದೆ ಎಂದು ಅಂಗೀಕರಿಸುವುದಾದರೆ ಆಗ ಜ್ಞಾನವು ಹುಟ್ಟಿದ ಮೇಲೆ) ವಿಲಂಬಃ=ಮೋಕ್ಷಕ್ಕೆ ವಿಲಂಬವು, ಕಿಂ ಕೃತಃ=ಕಿಂನಿಮಿತ್ತಕವು, ಭವೇತ್=ಆಗುವುದು. (ಪ್ರತಿಬಂಧಕವಾಗಿ ಕಲ್ಪಿಸಲ್ಪಡತಕ್ಕದ್ದು, ವಿಶ್ವಾರೋಪನಿಮಿತ್ತವಾದ ಅಜ್ಞಾನದ ಕಾರ್ಯವಾಗಿರುವುದರಿಂದ ಜ್ಞಾನಕ್ಕೆ ವಿರೋಧಿಯಾಗಿದೆ. ಎಚ್ಚರಿಕೆಯಾದ ಮೇಲೆ ಸ್ವಾಪ್ನಬಂಧನಿವೃತ್ತಿಗೆ ವಿಲಂಬವು ಇಲ್ಲವಷ್ಟೆ.) (ಹಾಗಾದರೆ ಪರರ ಪ್ರಸಾದವನ್ನು ಅಪೇಕ್ಷಿಸದೆ ಇರುವ ಕಾರ್ಯಗಳಲ್ಲಿಯೂ ಕೂಡ ವಿಲಂಬವಿದೆ. ಅಣಿಲೆಕಾಯಿಯನ್ನು ತಿಂದರೂ ಅದರ ಕಾರ್ಯವಾದ ವಿರೇಚನಾದಿಗಳಿಗೆ ವಿಲಂಬವು ದೃಷ್ಟವಾಗಿದೆ. ಆದಕಾರಣ ಪುರುಷೇಚ್ಛಾಧೀನತ್ವವಿಲ್ಲದಿದ್ದರೆ ವಿಲಂಬವು ಆಗಬಾರದೆಂದು ಹೇಗೆ ಹೇಳಿದ್ದೆಂದರೆ—) ಅನ್ಯತ್ರಾಪಿ=ಮೋಕ್ಷದೆಶೆಯಿಂದ ಬೇರೆ ಕಡೆಗಳಲ್ಲಿಯೂ ಕೂಡ, ವಿಲಂಬಾಸ್ತು=ವಿಲಂಬಗಳಾದರೂ, ಈಶೇಚ್ಛಾನಿಮಿತ್ತತಃ = ಈಶ್ವರೇಚ್ಛೆಯ ನಿಮಿತ್ತದಿಂದಲೇ

ಸ್ಯುಃ=ಆಗುವವು. (ಅಂದರೆ ಇಷ್ಟು ಕಾಲದ ಮೇಲ ಈ ಕಾರ್ಯವಾಗಲಿ ಎಂದು ಈಶ್ವರನ ಇಚ್ಛೆಯೇ ನಿಮಿತ್ತವು.) (ಇಲ್ಲಿ ಈಶ್ವರೇಚ್ಛೆಯು ನಿಮಿತ್ತವೆಂದು ಏಕೆ ಕಲ್ಪಿಸುತ್ತೀರಿ ಎಂದರೆ—) ಅನ್ಯಥಾ=ಈಶ್ವರೇಚ್ಛೆಯನ್ನು ಕಲ್ಪಿಸದೆ, ಕಾರಣಂ ಸ್ಯಾಚ್ಚೇತ್=ಕಾರಣವು ಆಗುವುದಾದರೆ, (ಅಂದರೆ ತ್ರಿವೃನ್ಮೂಲದ (ಔಷಧ ವಿಶೇಷದ) ಭಕ್ಷಣಾದಿಮಾತ್ರವು ವಿರೇಚನಾದಿಗಳಿಗೆ ಕಾರಣ ವಾಗುವುದಾದರೆ, ಆಗ ಆ ಕಾರಣವು ಇದ್ದ ಕೂಡಲೇ) ಕಾರ್ಯಂ = ವಿರೇಕ ಮೊದಲಾದುದು, ಕಿಂ ನೋಪಜಾಯತೇ=ಏಕೆ ಹುಟ್ಟುವುದಿಲ್ಲ? (ಸರ್ವಥಾ ಹುಟ್ಟಲೇಬೇಕು.) (ಮತ್ತು ಸಾಧನಾಭಿ ಮತವನ್ನು ಹೊಂದಿದವರಿಗೂ ಮುಕ್ತಿಯು ವಿಲಂಬವಾಗುವುದರಲ್ಲಿ ಸಾಮಗ್ರೀವೈಕಲ್ಯವಿದೆ ಎಂದಾಗಲೀ, ಪ್ರತಿಬಂಧಕವಿದೆ ಎಂದಾಗಲೀ, ಬೇರೆ ವಾದಿಗಳಿಗೆ ಕಥಂಚಿತ್ ಹೇಳಲಿಕ್ಕೆ ಶಕ್ಯ ವಾಗಬಹುದು, ಬೌದ್ಧನಿಗೆ ಹೇಳಲಿಕ್ಕೆ ಶಕ್ಯವಲ್ಲವೆನ್ನುತ್ತಾರೆ.) ಅಸ್ಯ = ಈ ಬೌದ್ಧಮತದಲ್ಲಿ, ಕಾರಣೇ ಸತಿ=ಕಾರಣವಿರುವಾಗ, ಕಾರ್ಯಸ್ಯ ಭಾವಃ=ಕಾರ್ಯದ ಉತ್ಪತ್ತಿಯು, ಸುನಿ-ಯತಃ=ಮುಖ್ಯವಾಗಿ ನಿಯತವೇ ಆಗಿದೆ. (ಇತರರಂತೆ ಅಪ್ರತಿಬದ್ಧವಾದ ಕಾರಣಸಾಮಗ್ರಿಯು ಇರುವಾಗ ಎಂದಲ್ಲ.) ಹಿ = ಈ ವಿಷಯವು '**ಸಮರ್ಥಸ್ಯಕ್ಷೇಪಾಯೋಗಾತ್**' ಎನ್ನುವ ಅವರ ಮಾತಿನಿಂದಲೇ ಸಿದ್ಧವಾಗಿದೆ ಎಂದು ಪ್ರಸಿದ್ಧವು. (ಆದಕಾರಣ ಶೂನ್ಯವಿಜ್ಞಾನಾದಿಗಳು ಮೋಕ್ಷಸಾಧನವಲ್ಲವೆಂದು ಸಿದ್ಧವಾಯಿತು.)

**ತಾ॥ ಸ. ರ ವಿ—** (1) ಶೂನ್ಯದ ಜ್ಞಾನವೂ ಭಾವನೆಯೂ ಕೂಡ ಮುಕ್ತಿಗೆ ಸಾಧನ ವಾಗುವುದಾದರೆ, ಜ್ಞಾನ, ಭಾವನೆಗಳುಳ್ಳ ಪುರುಷರಿಗೆ ಈಗಲೇ ಮೋಕ್ಷವು ಆಗಬೇಕಾಗುವುದು. ವಿಲಂಬಕ್ಕೆ ಕಾರಣವಿಲ್ಲ. ಕಾರಣವಿದ್ದ ಕೂಡಲೇನೇ ಬೌದ್ಧನು ಸಾಧ್ಯವು ಸಿದ್ಧಿಸುತ್ತದೆಂದಂಗೀ ಕರಿಸಿರುವನು. (2) ಶ್ರೀ ಹರಿಯ ಪ್ರಸಾದದ ಅಧೀನತ್ವವಿದೆ. ಎನ್ನುವ ಪಕ್ಷದಲ್ಲಿ ಮುಕ್ತಿಗೆ ಸಾಧನವಿದ್ದಾಗ್ಯೂ ವಿಲಂಬವು ಕೂಡುತ್ತದೆ. ರಾಜನ ಸೇವೆಯಿಂದ ಫಲವು ಉಂಟಾಗುವು ದಾದರೂ ರಾಜನ ಇಚ್ಛೆಯಿಂದಲೇ ಆಗುವುದು. ಸಾಧನವು ಉಂಟಾದಾಗ್ಯೂ ಸಾಧ್ಯಕ್ಕೆ ಶ್ರೀ ಹರಿಯ ಇಚ್ಛಾಧೀನತ್ವವಿಲ್ಲದಿದ್ದರೆ ಸಾಧ್ಯಕ್ಕೆ ವಿಲಂಬವು ಕೂಡುವುದಿಲ್ಲ. (3) ಪುರುಷೇಚ್ಛಾ ಧೀನತ್ವವಿಲ್ಲದಿದ್ದರೂ ಸಾಧ್ಯಕ್ಕೆ ವಿಲಂಬವು ಕೂಡುತ್ತದೆ. ಹರೀತಕೀ (ಅಳಿಲೆಕಾಯಿ) ಭಕ್ಷಣ ಮಾಡಿದರೂ ವಿರೇಚನಕ್ಕೆ ವಿಲಂಬವು ಕೂಡುತ್ತದಷ್ಟೆ ಎಂದು ಹೇಳಕೂಡದು. ಏಕೆಂದರೆ ಎಲ್ಲಾ ವಿಲಂಬಗಳಿಗೂ ಈಶ್ವರೇಚ್ಛೆಯೇ ನಿಮಿತ್ತವೆಂದು ಅಂಗೀಕರಿಸಿರುತ್ತೇನೆ. ಆದ ಕಾರಣ ಶೂನ್ಯಜ್ಞಾನಾದಿಗಳಿಗೆ ಮುಕ್ತಿಸಾಧನತ್ವವು ಅಗ್ನಿಗೆ ಸೇಕ ಸಾಧನತ್ವದಂತೆಯೇ ಅಯೋಗ್ಯತಾ ಪರಾಹತವಾದ ಪ್ರಯುಕ್ತ ಅಯುಕ್ತವು. ॥ ೧೫೬ ॥ ೧೫೭ ॥

## ವಿಜ್ಞಾನವಾದಿಗಳ ನಿರಾಸವು

**ಸ ರ. ವಿ.—** ಮಾಧ್ಯಮಿಕರಿಗೆ ಅಭಿಮತವಾದ ಮುಕ್ತಿಸಾಧನವನ್ನು ದೂಷಿಸಿದ ನ್ಯಾಯದಿಂದಲೇ ಯೋಗಾಚಾರರಿಗೆ ಅಭಿಮತವಾದ ಜ್ಞಾನಾದ್ವೈತವೇದನಾದಿರೂಪವಾದ ಮುಕ್ತಿಸಾಧನವೂ ಕೂಡ ನಿರಸ್ತಗಳಾದವೆನ್ನುತ್ತಾರೆ.

**ನ್ಯಾಯಸುಧಾ—** ವಿಜ್ಞಾನವಾದಿಗಳು ಹೇಳಿದ ಮೋಕ್ಷಸಾಧನವನ್ನು ದೂಷಿಸುತ್ತಾರೆ

**ಮೂ ॥ ವಿಜ್ಞಾನವಾದಿನಶ್ಚೈವ ವಿಜ್ಞಾನಾದ್ವೈತವೇದನಾತ್ ॥ ೧೫೮ ॥**
**ವಿಜ್ಞಾನಭಾವನಾಚ್ಚೈವ ಮೋಕ್ಷೋ ನ ಘಟತೇ ಕ್ವಚಿತ್ ।**

**ಅಂತರ್ಜ್ಞಾನಸ್ಯ ಬಾಹ್ಯೇ ಚ ಕ್ಷಣಿಕತ್ವಸ್ಯ ವೇದನಾತ್ ॥**
**ಭಾವನಾಚ್ಚೋಕ್ತಮಾರ್ಗೇಣ ಮಾನಾಭಾವಾನ್ನ ಮುಚ್ಯತೇ ॥೧೪೯॥**

ಅ ॥ ವಿಜ್ಞಾನವಾದಿನಶ್ಚೈವ=ವಿಜ್ಞಾನವಾದಿಯ ಮತದಲ್ಲಿ,ವಿಜ್ಞಾನಾದ್ವೈತವೇದನಾತ್=ವಿಜ್ಞಾನಕ್ಕೆ ಅದ್ವೈತಜ್ಞಾನದೆಶೆಯಿಂದ, (ಅಂದರೆ— ವಿಜ್ಞಾನವು ಒಂದೇ ತತ್ತ್ವವು. ಅದರಿಂದ ಬೇರೆಯಾದ ತತ್ತ್ವವಿಲ್ಲ ಎನ್ನುವ ಜ್ಞಾನದೆಶೆಯಿಂದಲೂ) ವಿಜ್ಞಾನಭಾವನಾಚ್ಚ=ವಿಜ್ಞಾನಾದ್ವೈತ ಧ್ಯಾನ ದೆಶೆಯಿಂದಲೂ, ಕ್ವಚಿತ್=ಯಾವಕಾಲಗಲ್ಲಿಯೂ, ಮೋಕ್ಷಃ=ಮೋಕ್ಷವು, ನೈವ ಘಟತೇ=ಕೂಡುವುದೇ ಇಲ್ಲ. (ಅಂದರೆ— ವಿಜ್ಞಾನಾದ್ವೈತವೇದನವೊದಲಾದ ವಿಜ್ಞಾನವಾದಿಯಿಂದ ಹೇಳಲ್ಪಟ್ಟ ಮೋಕ್ಷಸಾಧನವು ಕೂಡುವುದೇ ಇಲ್ಲ. ಅಥವಾ ವಿಜ್ಞಾನವಾದಿಯಿಂದ ಪ್ರತಿಪಾದಿಸಿಕೊಳ್ಳಲ್ಪಟ್ಟ ವಿಜ್ಞಾನಾದ್ವೈತವೇದನಾದಿಗಳದೆಶೆಯಿಂದ ಮೋಕ್ಷವು ಕೂಡುವುದೇ ಇಲ್ಲ). (ವೈಭಾಷಿಕ ಸೌತ್ರಾಂತಿಕರಿಗೆ ಅಭಿಮತವಾದ ಮೋಕ್ಷಸಾಧನವನ್ನು ನಿರಾಕರಿಸುತ್ತಾರೆ). ಅಂತರ್ಜ್ಞಾನಸ್ಯ=ಶರೀರದೊಳಗೆ ಇರತಕ್ಕ ಜ್ಞಾನಕ್ಕೆ, (ಅಂದರೆ ವಿಜ್ಞಾನವೇದನಾಸಂಜ್ಞಾ ಸಂಸ್ಕಾರಗಳಿಗೆ) ಬಾಹ್ಯೇ ಚ=ಬಾಹ್ಯದಲ್ಲಿರತಕ್ಕ ರೂಪಕ್ಕೂ. ಕ್ಷಣಿಕತ್ವಸ್ಯ=ಕ್ಷಣಿಕವನ್ನು, ವೇದನಾತ್=ತಿಳಿಯೋಣದರಿಂದ, ಭಾವನಾಚ್ಚ=ಧ್ಯಾನದಿಂದಲೂ ಕೂಡ, ಉಕ್ತಮಾರ್ಗೇಣ=ಅವನಿಗೂ ಕ್ಷಣಿಕತ್ವವಿರೋಣದರಿಂದ ಮಾನಾಭಾವಾತ್=ಈ ಅರ್ಥದಲ್ಲಿ ಪ್ರಮಾಣವಿಲ್ಲದಿರುವುದರಿಂದ, ನ ಮುಚ್ಯತೇ=ಮುಕ್ತನಾಗುವುದಿಲ್ಲ. ಸಾಧನಾನುಷ್ಠಾನಮಾಡಿದ ಪುರುಷನಿಗೆ ನಾಶವಾದ್ದುದರಿಂದ ಅವನಿಗೆ ಮೋಕ್ಷವಿಲ್ಲ. ಸಾಧನವಿಲ್ಲದಿದ್ದವನಿಗೆ ಮೋಕ್ಷವಾಗುತ್ತದೆಂದು ಇದು ಮೊದಲಾದ ದೋಷಗಳು ಬರಬೇಕಾಗುವುದು.

### ವೈಭಾಷಿಕ ಸೌತ್ರಾಂತಿಕ ನಿರಾಸವು.

ಸ ರ. ವಿ— ವೇದಗಳಿಗೆ ಪ್ರಾಮಾಣ್ಯವನ್ನು ಹೇಳುವ ನಿರೀಶ್ವರ ಸಾಂಖ್ಯನಿಂದ ಹೇಳಲ್ಪಟ್ಟ ಮುಕ್ತಿಸಾಧನವನ್ನು ಅನುವಾದಮಾಡಿ ದೂಷಿಸುತ್ತಾರೆ.

ನ್ಯಾಯಸುಧಾ— ಹೀಗೆ ವೇದಬಾಹ್ಯರ ಮತಗಳನ್ನು ನಿರಾಕರಿಸಿ ವೇದಗಳಿಗೆ ಪ್ರಾಮಾಣ್ಯವನ್ನು ಹೇಳುವವರ ಮತವನ್ನು ನಿರಾಕರಿಸುವವರಾಗಿ ಸಾಂಖ್ಯನಿಂದ ಹೇಳಲ್ಪಟ್ಟ ಮೋಕ್ಷಸಾಧನವನ್ನು ಅನುವಾದಮಾಡುತ್ತಾರೆ.

**ಮೂ ॥ ಪ್ರಕೃತೇಃ ಪುರುಷಸ್ಯಾಪಿ ವಿವೇಕೋ ಮುಕ್ತಿಸಾಧನಂ ।**
**ಇತಿ ಸಾಂಖ್ಯಾ ನ ಚೈತಸ್ಮಿನ್ಮಾನಮಾಶಾಪ್ರಸಾದತಃ ॥ ೧೫೦ ॥**

ಅ ॥ ಪ್ರಕೃತೇಃ = ಅಂತಃಕರಣಾದಿರೂಪವಾದ ಪ್ರಕೃತಿಗೂ, ಪುರುಷಸ್ಯಾಪಿ = ತನಗೂ, ವಿವೇಕಃ=ಸ್ವರೂಪದಿಂದಲೂ, ಧರ್ಮದಿಂದಲೂ ಭೇದದರ್ಶನವು, ಮುಕ್ತಿಸಾಧನಂ=ಮೋಕ್ಷಕ್ಕೆ ಸಾಧನವು, ಇತಿ = ಹೀಗೆ, ಸಾಂಖ್ಯಾಃ=ಸಾಂಖ್ಯರು, ಪ್ರಾಹುಃ=ಹೇಳುತ್ತಾರೆ. (ಇದನ್ನು ದೂಷಿಸುತ್ತಾರೆ.) ಏತಸ್ಮಿನ್=ಈ ಅರ್ಥದಲ್ಲಿ, ಮಾನಂ=ಪ್ರಮಾಣವು, ನ ಚಾಸ್ತಿ=ಇಲ್ಲವೇ ಇಲ್ಲ. (' ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ । ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥ ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ । ಭೂತಪ್ರಕೃತಿ ಮೋಕ್ಷಂ ಚ ಯೇ ವಿದುರ್ಯಾಂತಿ ತೇ

ಪರಂ' ಇದು ಮೊದಲಾದ ಆಗಮಗಳು ಇದ್ದ ಪ್ರಯುಕ್ತ ಪ್ರಮಾಣವಿಲ್ಲದಿರುವುದು ಹೇಗೆ ಎಂದರೆ—) ಈಶಾಪ್ರಸಾದತಃ = ಈಶ್ವರ ಪ್ರಸಾದವಿಲ್ಲದೆ, ಕೇವಲ ಪ್ರಕೃತಿಪುರುಷವಿವೇಕವು, ಮೋಕ್ಷಸಾಧನವು ಎನ್ನುವ ಅರ್ಥದಲ್ಲಿ ಪ್ರಮಾಣವಿಲ್ಲ.

ಟಾ || ನ್ಯಾಯಸುಧಾ— (1) ಪ್ರಕೃತಿಪುರುಷವಿವೇಕವು ಮೋಕ್ಷಸಾಧನವು ಆಗಿಯೇ ಆಗುತ್ತದೆ. ಮತ್ತೆ ಭಗವತ್ಪ್ರಸಾದ ಸಾಧನವಾಗಿಯೇ ಪ್ರಕೃತಿಪುರುಷರಿಗೆ ವಿವೇಕಜ್ಞಾನವಿದ್ದರೆ ಪುರುಷನಿಗೆ ವೈರಾಗ್ಯವು ಹುಟ್ಟುತ್ತದೆ. ವಿರಕ್ತನಿಗೆ ಭಕ್ತ್ಯಾದಿ ದ್ವಾರದಿಂದ ಭಗವತ್ಪ್ರಸಾದವು. ನಿರೀಶ್ವರ ಸಾಂಖ್ಯನಾದರೂ ಪ್ರಕೃತಿಪುರುಷವಿವೇಕಕ್ಕೇನೇ ಸಾಕ್ಷಾನ್ಮೋಕ್ಷಸಾಧನತ್ವವನ್ನು ಹೇಳುತ್ತಾನೆ. ಆ ವಿಶೇಷದಲ್ಲಿ ಪ್ರಮಾಣವಿಲ್ಲ ॥ ೧೬೦ ॥

## ಸಾಂಖ್ಯಮತನಿರಾಸವು.

ಹಾಗಾದರೆ ಹಿಂದೆ ಹೇಳಿದ ಈ ವಾಕ್ಯಗಳು ಪ್ರಕೃತಿಪುರುಷವಿವೇಕಕ್ಕೆ ಮೋಕ್ಷಸಾಧನತ್ವ ವನ್ನು ಪ್ರತಿಪಾದಿಸುತ್ತವೆ. ಈಶ್ವರನಪ್ರಸಾದದ್ವಾರವೆಂದು ಪಾರಂಪರ್ಯವನ್ನು ಕಲ್ಪಿಸುವ ವಿಷಯದಲ್ಲಿ ಕಾರಣವಿಲ್ಲ. ಆದಕಾರಣ ಇವುಗಳಿಗೇನೇ ಪ್ರಕೃತಿಪುರುಷವಿವೇಕಕ್ಕೆ ಸಾಕ್ಷಾನ್ಮೋಕ್ಷಸಾಧನತ್ವವಿಷಯದಲ್ಲಿ ಪ್ರಾಮಾಣ್ಯವು ಎಂದರೆ—

ಮೂ || ಶ್ರುತಯಃ ಸ್ಮೃತಯಶ್ಚೈವ ಯದೀ(ದೀ)ಶಸ್ಯ ಪ್ರಸಾದತಃ ।
ವದಂತಿ ನಿಯಮಾನ್ಮುಕ್ತಿಂ ತಮೃತೇಽತಃ ಕುತೋ ಭವೇತ್ ॥೧೬೧॥

ಅ || ಶ್ರುತಯಃ=ಯಸ್ಯಪ್ರಸಾದಾತ್ ಇದು ಮೊದಲಾದ ಶ್ರುತಿಗಳೂ, ಸ್ಮೃತಯಶ್ಚೈವ='ಅಜ್ಞಾನಾಂ ಜ್ಞಾನದೋ ವಿಷ್ಣುಃ' ಇದು ಮೊದಲಾದ ಸ್ಮೃತಿಗಳೇ, (ಅಂದರೆ—ಪ್ರಾಕೃತ ಪುರುಷರ ವಾಕ್ಯಗಳಲ್ಲ) ಯದಾ=ಯಾವ ಕಾರಣದೆಶೆಯಿಂದ, ಈಶಸ್ಯ=ಶ್ರೀಹರಿಯ, ಪ್ರಸಾದತಃ=ಅನುಗ್ರಹದೆಶೆಯಿಂದ, ನಿಯಮಾತ್— ('ಮುಚ್ಯತೇ ನಾಪರೇಣ, ಸ ಏವೈಕಃ' ಎನ್ನುವ ವಚನ ದೆಶೆಯಿಂದ) ಸಾಧನಾಂತರಗಳನ್ನೂ ವ್ಯಪಚ್ಛೇದ ಮಾಡಿ, ಮುಕ್ತಿಂ=ಮೋಕ್ಷವನ್ನು, ವದಂತಿ = ಹೇಳುತ್ತವೋ, ಅತಃ=ಆದಕಾರಣ, ತಂ=ಆ ಪ್ರಸಾದವನ್ನು, ಋತೇ=ಹೊರತು, ಕುತಃ=ಯಾವುದರಿಂದ, ಮುಕ್ತಿಃ=ಮೋಕ್ಷವು, ಭವೇತ್=ಆಗುವುದು. ಇಂತಹ ಈಶ್ವರನ ಪ್ರಸಾದಕ್ಕೆ ಮೋಕ್ಷಸಾಧನತ್ವವನ್ನು ಹೇಳತಕ್ಕ ಪ್ರಬಲಪ್ರಮಾಣಗಳಿರುವುದರಿಂದ ಹಿಂದೆ ಹೇಳಿದ ವಾಕ್ಯಗಳಿಗೆ ನಾವು ಹೇಳಿದ ಪಾರಂಪರ್ಯಪರತ್ವವೇ ಯುಕ್ತವು ॥ ೧೬೧ ॥

ವೈಶೇಷಿಕಾದಿಗಳಿಂದ ಹೇಳಲ್ಪಟ್ಟ ಮೋಕ್ಷಸಾಧನವನ್ನು ನಿರಾಕರಿಸುತ್ತಾರೆ—

ಮೂ || ಕಣಾದಯೋಗಾಕ್ಷಪಾದಾ ಅಪೀಶಸ್ಯ ಪ್ರಸಾದತಃ || ೧೬೨ ||
ಮುಕ್ತಿಂ ಬ್ರುವಾಣಾ ಅಪ್ಯಾಹುರ್ಭೋಗಾದೇವ ಚ ಕರ್ಮಣಾಂ ।
ಕ್ಷಯಂ ಪ್ರಾಹುಃ ಕುತಶ್ಚೈತತ್ಪ್ರಸನ್ನೇ ಜಗದೀಶ್ವರೇ || ೧೬೩ ||

ಅ || ಕಣಾದಯೋಗಾಕ್ಷಪಾದಾ ಅಪಿ = ಕೇವಲ ಹಿಂದೆ ಹೇಳಿದ ಸಾಂಖ್ಯಾದಿಗಳು ಮಾತ್ರ ಅನುಪಪನ್ನಭಾಷಿಗಳಲ್ಲ. ಮತ್ತೆ ಕಣಾದನು, ಯೋಗಾನುಶಾಸನವನ್ನು ಮಾಡಿರುವ ಪತಂಜಲಿಯು, ಅಕ್ಷಪಾದನೂ ಇವರೆಲ್ಲರೂ ಕೂಡ (ಅನುಪಪನ್ನ ಭಾಷಿಗಳು). (ಹಾಗಾದರೆ

ಇವರು ಮೂವರೂಕೂಡ ಮುಕ್ತಿಯನ್ನೇ ಈಶ್ವರಪ್ರಸಾದದಿಂದ ಸಾಧ್ಯವನ್ನಾಗಿಯೇ ಹೇಳುತ್ತಾರೆ. ಹೇಗೆಂದರೆ— (೧) ವೈಶೇಷಿಕನು ಯದ್ಯಪಿ ದ್ರವ್ಯಾದಿಪದಾರ್ಥಗಳ ಸಾಧರ್ಮ್ಯ-ವೈಧರ್ಮ್ಯ-ತತ್ವಜ್ಞಾನವು ಮೋಕ್ಷಕ್ಕೆ ಕಾರಣವೆಂದು ಹೇಳಿರುವನು. ಆದಾಗ್ಯೂ ಅದು ಸಾಕ್ಷಾತ್ತಲ್ಲ. ಮತ್ತೆ ಧರ್ಮದ್ವಾರದಿಂದಲೇ. ಇಲ್ಲದಿದ್ದರೆ **'ಯತೋಽಭ್ಯುದಯ ನಿಃಶ್ರೇಯಸಸಿದ್ಧಿಃ ಸ ಧರ್ಮಃ'** ಎನ್ನುವ ಸೂತ್ರವಿರೋಧವು ಬರುವುದು. ಧರ್ಮವೂ ಕೂಡ ಸಾಕ್ಷಾತ್ತಾಗಿ ಮೋಕ್ಷಕ್ಕೆ ಕಾರಣವಲ್ಲ. ಮತ್ತೆ ಈಶ್ವರಪ್ರಸಾದ ಸಹಕೃತವಾದುದೇ ಮೋಕ್ಷಕ್ಕೆ ಕಾರಣವು. ಹಾಗೆಯೇ ಹೇಳಲ್ಪಟ್ಟದೆ. **'ತಚ್ಚೇಶ್ವರಚೋದನಾಭಿವ್ಯಕ್ತಾದ್ಧರ್ಮಾದೇವ'** ಎಂದು ಮತ್ತು ಸ್ಪಷ್ಟವಾಗಿಯೂ ಹೇಳಿರುವರು. **'ತುಷ್ಟೇರ್ಮೇಽಚಯತೋ ಬದ್ಧಾನತುಷ್ಟೇರ್ಬಧ್ನತಃ ಪುನಃ । 'ಕಾರಾಗಾರಮಿದಂ ವಿಶ್ವಂ ಯಸ್ಯ ವಂದೇ ತಮೀಶ್ವರಂ'** ಎಂದು. (೨) ಪತಂಜಲಿಯಾದರೂ **'ತಪಃಸ್ವಾಧ್ಯಾಯೇಶ್ವರಪ್ರಣಿಧಾನಾದಿಕ್ರಿಯಾಯೋಗಃ'** ಇತ್ಯಾದಿ ಪ್ರಕಾರ ಸ್ಪಷ್ಟವಾಗಿಯೇ ಹೇಳಿರುವನು. (2) ಅಕ್ಷಪಾದನು ಯದ್ಯಪಿ ಪ್ರಮಾಣ ಮೊದಲಾದ ಹದಿನಾರು (೧೬) ಪದಾರ್ಥಗಳ ತತ್ವಜ್ಞಾನ ದೆಶೆಯಿಂದ ಮೋಕ್ಷಪ್ರಾಪ್ತಿಯೆಂದು ಹೇಳಿರುವನು. ಆದಾಗ್ಯೂ ಪ್ರಮಾಣ ಮೊದಲಾದ ಹದಿನೈದು ಪದಾರ್ಥಗಳ ತತ್ವಜ್ಞಾನವು ಆತ್ಮ ಮೊದಲಾದ ಹನ್ನೆರಡು ವಿಧ ಪ್ರಮೇಯಗಳ ತತ್ವಜ್ಞಾನಕ್ಕೆ ಕಾರಣವೇ. **'ಆತ್ಮಶರೀರೇಂದ್ರಿಯಾರ್ಥ ಬುದ್ಧಿಮನಃಪ್ರವೃತ್ತಿದೋಷಪ್ರೇತ್ಯಭಾವ ಫಲದುಃಖಾಪವರ್ಗಾಸ್ತು ಪ್ರಮೇಯಂ'** ಎನ್ನುವಲ್ಲಿ ತು ಶಬ್ದವನ್ನು ಹೇಳಿದರಿಂದ ಆತ್ಮಾದಿ ಜ್ಞಾನವೂ ಕೂಡ ಸಾಕ್ಷಾತ್ತಾಗಿ ಮೋಕ್ಷ ಸಾಧನವಲ್ಲ. ಮತ್ತೆ ಪರಮೇಶ್ವರನ ಪ್ರಸಾದಸಹಕೃತವಾದುದೇ. **'ಸ್ವರ್ಗಾಪವರ್ಗಯೋರ್ಮಾರ್ಗಮಾಮನಂತಿ ಮನೀಷಿಣಃ । ಯದುಪಾಸ್ತಿಮಸಾವತ್ರ ಪರಮಾತ್ಮಾ ನಿರೂಪ್ಯತೇ'** ಎಂದು ಸಂಪ್ರದಾಯಾಭಿಜ್ಞರ ವಚನವಿದೆ. ಆದಕಾರಣ ಅನುಪಪನ್ನಭಾಷಿಗಳು ಹೇಗೆ ಎಂದರೆ—) ಈಶಸ್ಯ=ಶ್ರೀ ಹರಿಯ, ಪ್ರಸಾದತಃ=ಅನುಗ್ರಹದೆಶೆಯಿಂದ, ಮುಕ್ತಿಂ ಬ್ರುವಾಣಾ ಅಪಿ=ಮೋಕ್ಷವನ್ನು ಹೇಳುವವರಾದಾಗ್ಯೂ ಇವರು, (ಯಾವ ಕಾರಣದಿಂದ,) (ವೈಶೇಷಿಕರು ನೈಯಾಯಿಕರೂ ಕೂಡ ಈಶ್ವರಪ್ರಸಾದವನ್ನು ಒಪ್ಪಿದರೂ ಕೂಡ ಅದಕ್ಕೆ ಧರ್ಮಾದಿ ಸಹಕಾರಿತ್ವವನ್ನೇ ಅಂಗೀಕರಿಸಿರುವರು. ಪತಂಜಲಿಯೂ ಕೂಡ ಈಶ್ವರಪ್ರಸಾದಕ್ಕೆ ತಪಃಸ್ವಾಧ್ಯಾಯಾದಿಗಳ ಸಮಕಕ್ಷತ್ವವನ್ನೇ ಹೇಳಿರುವನು. ಇದು ಮೊದಲಾದ ಅಯುಕ್ತ ಪ್ರಮೇಯವನ್ನು) ಹೇಳುತ್ತಾರೋ (ಆದಕಾರಣ ಅನುಪಪನ್ನಗಳಾದ, ವಚನಗಳುಳ್ಳವರು.) (ಕಾರಣಾಂತರದಿಂದಲೂ ಅನುಪಪನ್ನಭಾಷಿಗಳು ಎನ್ನುತ್ತಾರೆ.) ಕರ್ಮಣಾಂ=ಕರ್ಮಗಳಿಗೆ, ಭೋಗಾದೇವ ಚ=ಭೋಗದೆಶೆಯಿಂದಲೇ, ಕ್ಷಯಂ=ನಾಶವನ್ನು, ಪ್ರಾಹುಃ=ಹೇಳುತ್ತಾರೆ. (ಹೀಗೆ ಹೇಳುವವರು ಅನುಪಪನ್ನಭಾಷಿಗಳು, ಹೇಗೆಂದರೆ, ಈ ಅರ್ಥವು ಅಪ್ರಾಮಾಣಿಕವು ಆಗಿದೆ ಎನ್ನುತ್ತಾರೆ.) ಏತತ್ = ಜ್ಞಾನಿಗೂ ಕೂಡ ಕರ್ಮಗಳಿಗೆ ಫಲಭೋಗದಿಂದಲೇ ವಿನಾಶವು ಎನ್ನುವುದು, ಕುತಶ್ಚ=ಯಾವ ಪ್ರಮಾಣದಿಂದಲೇ, ತಿಳಿಯಬೇಕು. (ಯಾವುದರಿಂದಲೂ ಇಲ್ಲ. ಅಕ್ಷೀಣ ಕರ್ಮಿಗಳಿಗೆ ಮೋಕ್ಷವು ಕೂಡದಿರುವುದರಿಂದಲೂ, ಕರ್ಮಕ್ಷಯಕ್ಕೆ ಕಾರಣವಾದುದು ಬೇರೆ ಇಲ್ಲದಿರುವುದರಿಂದಲೂ, ಅತ್ಯಂತವಾಗಿ ಸುಖದುಃಖಗಳ ಭೋಗವೇ ಕರ್ಮಗಳ ನಾಶಕ್ಕೆ ಕಾರಣವೆಂದು ಕಲ್ಪಿಸುತ್ತೇವೆಂದರೆ—) ಜಗದೀಶ್ವರೇ=ಜಗನ್ನಿಯಾಮಕನಾದ ಶ್ರೀ ಹರಿಯು, ಪ್ರಸನ್ನೇ ಸತಿ=ಸಂತುಷ್ಟನಾಗುತ್ತಿರಲು, ಏತತ್=ಇದು, ಕುತಃ=ಯಾವುದರಿಂದ? ಅಂದರೆ—

ತಾ || ನ್ಯಾಯಸುಧಾ— ಜ್ಞಾನದಿಂದ ಪ್ರಸನ್ನನಾದ ಶ್ರೀ ಹರಿಯೇ ಭುಕ್ತವಾಗದಿರುವ ಫಲಗಳುಳ್ಳ ಕರ್ಮಗಳನ್ನೇವೇ ವಿನಾಶಪಡಿಸುತ್ತಾನೆಂದು ಬೇರೆಪ್ರಕಾರವೇ ಕೂಡುವುದರಿಂದ ಜ್ಞಾನಿಗೂಕೂಡ ಕರ್ಮಗಳಿಗೆ ಫಲಭೋಗದಿಂದಲೇ ನಾಶವೆನ್ನುವುದು ಏಕೆ ಕಲ್ಪಿಸುತ್ತೀರಿ; ಈಶ್ವರಪ್ರಸಾದಕ್ಕೆ ಮೋಕ್ಷಸಾಧನತ್ವವನ್ನು ಹೇಳತಕ್ಕ ಪ್ರಮಾಣಗಳನ್ನು ಹೇಳುತ್ತಾರೆ—

ವೈಶೇಷಿಕಾದಿಗಳು ತತ್ವಜ್ಞಾನಿಗಳಂತೆಯೇ ಜ್ಞಾನದೆಶೆಯಿಂದ ಮೊದಲಿನ ಕರ್ಮಗಳಿಗೆ ಜ್ಞಾನದಿಂದಲೇ ವಿನಾಶವನ್ನು ತಿಳಿಯುವುದಿಲ್ಲ. ಮತ್ತೆ ಸಮಾಧಿಯ ಮಹಿಮೆಯಿಂದ ಅಪರಿಮಿತಗಳಾದ ದೇಹವ್ಯೂಹಗಳನ್ನು ನಿರ್ಮಾಣಮಾಡಿ ಅನಂತಗಳಾದ ಮತ್ತು ವಿಷಮ ಫಲೋನ್ಮುಖತ್ವ ಕಾಲಗಳುಳ್ಳ ಕರ್ಮಗಳನ್ನು ಏಕೀಕರಿಸಿ ಅವುಗಳ ಫಲಭೂತಗಳಾದ ಸುಖದುಃಖಗಳ ಭೋಗದಿಂದಲೇ ಜ್ಞಾನಿಗಳು ವಿನಾಶಪಡಿಸಿಕೊಳ್ಳುತ್ತಾರೆ. ಎಂದು ಹೇಳುತ್ತಾರೆ— ಆದುದರಿಂದಲೂ ಅನುಪಪನ್ನಭಾಷಿಗಳು || ೧೬೨ || ೧೬೩ ||

**ಮೂ || ಭಿದ್ಯತೇ ಹೃದಯಗ್ರಂಥಿಚ್ಛಿದ್ಯಂತೇ ಸರ್ವಸಂಶಯಾಃ |**
**ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ || ೧೬೪ ||**
**ಭಿದ್ಯತೇ ಹೃದಯಗ್ರಂಥಿಚ್ಛಿದ್ಯಂತೇ ಸರ್ವಸಂಶಯಾಃ |**
**ಕ್ಷೀಯಂತೇ ಚಾಸ್ಯ ಕರ್ಮಾಣಿ ದೃಷ್ಟ ಏವಾತ್ಮನೀಶ್ವರೇ |**
**ಇತಿ ಶ್ರುತಿಪುರಾಣಾದಿ ವಚನೇಭ್ಯೋಽನ್ಯಥಾ ಗತೇಃ || ೧೬೫ ||**

ಅ || ಪರಾವರೇ=ಅಸ್ಮದಾದಿಗಳ ದೆಶೆಯಿಂದ ಉತ್ತಮರಾದ ಬ್ರಹ್ಮರುದ್ರಾದಿಗಳೂ ಯಾವ ಶ್ರೀ ಹರಿಗೆ ಅವರರೋ ಅಂತಹ, ಬ್ರಹ್ಮಾದ್ಯುತ್ತಮನಾದ, ತಸ್ಮಿನ್=ಆ ಶ್ರೀ ಹರಿಯು, ದೃಷ್ಟೇ ಸತಿ=ಕಾಣಲ್ಪಡುತ್ತಿರಲು, ಹೃದಯಗ್ರಂಥಿಃ=ಅವಿದ್ಯೆಯು, ಭಿದ್ಯತೇ = ನಾಶಹೊಂದಲ್ಪಡುತ್ತದೆ. ಸರ್ವಸಂಶಯಾಃ=ಎಲ್ಲಾ ಸಂಶಯಗಳೂ, ಛಿದ್ಯಂತೇ=ನಾಶಹೊಂದಲ್ಪಡುತ್ತವೆ. ಅಸ್ಯ=ಈ ಪುರುಷನ, ಕರ್ಮಾಣಿ=ಕರ್ಮಗಳು, ಕ್ಷೀಯಂತೇ=ನಾಶವಾಗುತ್ತವೆ (ಹೀಗೆ ಕಠಶ್ರುತಿಯು) ಆತ್ಮನಿ=ವ್ಯಾಪ್ತಗುಣಗಳುಳ್ಳ, ಈಶ್ವರೇ=ಜಗದೀಶ್ವರನು, ದೃಷ್ಟ ಏವ=ಕಾಣಲ್ಪಟ್ಟರೇನೇ, ಹೃದಯಗ್ರಂಥಿಃ=ಅವಿದ್ಯೆಯು, ಭಿದ್ಯತೇ=ನಾಶಹೊಂದಲ್ಪಡುತ್ತದೆ. ಸರ್ವಸಂಶಯಾಃ= ಎಲ್ಲಾ ಸಂಶಯಗಳೂ, ಛಿದ್ಯಂತೇ = ನಾಶಹೊಂದಲ್ಪಡುತ್ತವೆ. ಅಸ್ಯ = ಈ ಪುರುಷನ, ಕರ್ಮಾಣಿ=ಕರ್ಮಗಳು, ಕ್ಷೀಯಂತೇ = ಕ್ಷೀಣಗಳಾಗುತ್ತವೆ. (ಹೀಗೆ ಭಾಗವತವಾಕ್ಯವು) ಇತಿ=ಹೀಗೆ, ಶ್ರುತಿಪುರಾಣಾದಿವಚನೇಭ್ಯಃ=ಆಗಮವು ಪುರಾಣವು ಇವುಗಳೇ ಮೊದಲಾಗಿವುಳ್ಳ ವಚನಗಳದೆಶೆಯಿಂದ, ಅನ್ಯಥಾ = ಫಲಭೋಗ ಹೊರತು ಈಶ್ವರಪ್ರಸಾದದಿಂದಲೇ, (ಕರ್ಮಗಳಿಗೆ) ಗತೇಃ=ವಿನಾಶನಿಶ್ಚಯವಾಗುವುದರಿಂದ, ಅನ್ಯಥೈವ ಉಪಪತ್ತಿಯಾಗುತ್ತದೆ. ಅಂದರೆ ಕರ್ಮಗಳಿಗೆ ಭೋಗವಿಲ್ಲದೇನೇ ನಾಶವು ಕೂಡುತ್ತದೆ.

ತಾ || ನ್ಯಾಯಸುಧಾ— (1) **'ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ'** ಇದುಮೊದಲಾದ ಸಾಮಾನ್ಯವಚನವು ಅಜ್ಞಾನಿವಿಷಯಕವು. ಜ್ಞಾನಿಗಳಿಗೂ ಕೂಡ ಪ್ರಾರಬ್ಧಕರ್ಮವಿಷಯಕವು. (2) **'ಆತ್ಮನೋ ವೈ ಶರೀರಾಣಿ ಬಹೂನಿ ಮನುಜಾಧಿಪ | ಪ್ರಾಪ್ಯ ಯೋಗಫಲಂ ಕುರ್ಯಾತ್ತೈಶ್ಚ ಸರ್ವಾಂ ಮಹೀಂ ಚರೇತ್ | ಭುಂಜೀತ ವಿಷಯಾನ್ ಕೈಶ್ಚಿತ್ಕೈಶ್ಚಿದುಗ್ರಂ ತಪಶ್ಚರೇತ್ | ಸಂಹರೇಚ್ಚ ಪುನಸ್ತಾನಿ ಸೂರ್ಯ-**

ಸ್ತೇಜೋಗಣಾನಿವ' ಇದುಮೊದಲಾದುದೂ ಜ್ಞಾನಿಗಳಿಗೆ ಪ್ರಾರಬ್ಧಕರ್ಮವಿಷಯಕವು. ಏಕೆಂದರೆ— 'ತಸ್ಯಾಪ್ರಾರಬ್ಧಕಾರ್ಯಸ್ಯ ನ ವಿನಾಶೋಽಸ್ತಿ ಕುತ್ರಚಿತ್ । ಕರ್ಮಾಣಿ ಕ್ಷಪಯೇದ್ವಿಷ್ಣುರಪ್ರಾರಬ್ಧಾನಿ ವಿದ್ಯಯಾ । ಪ್ರಾರಬ್ಧಾನಿ ತು ಭೋಗೇನ ಕ್ಷಪಯನ್ ಸ್ವಗತಿಂ ನಯೇತ್' ಇದುಮೊದಲಾದ ವಿಶೇಷವಚನಬಲದಿಂದ ಅಪ್ರಾರಬ್ಧಕರ್ಮಗಳಿಗೆ ಜ್ಞಾನದಿಂದಲೇ ನಾಶವನ್ನೂ, ಪ್ರಾರಬ್ಧಕರ್ಮ ಮಾತ್ರಕ್ಕೆ ಭೋಗದಿಂದ ವಿನಾಶವನ್ನೂ ಹೇಳುವರು. (3) 'ಭಿನತ್ತಿ ಕರ್ಮಸಂಘಾತಂ ಪ್ರಸನ್ನೋ ಭಗವಾನ್ ಹರಿಃ' ಇತ್ಯಾದಿಪ್ರಮಾಣಗಳಿಂದ ಪ್ರಸನ್ನನಾದ ಶ್ರೀ ಹರಿಯೇ ಕರ್ಮಸಮೂಹವನ್ನು ನಾಶಮಾಡುತ್ತಾನೆ ॥ ೧೬೪ ॥ ೧೬೫ ॥

ಪಾಶುಪತಾದಿಗಳಿಂದ ಹೇಳಲ್ಪಟ್ಟ ಮೋಕ್ಷಸಾಧನವನ್ನು ನಿರಾಕರಿಸುತ್ತಾರೆ—

ಮೂ ॥ ನ ಚ ಪಾಶುಪತಾದ್ಯುಕ್ತಶಿವಾದೀನಾಮನುಗ್ರಹಾತ್ ॥ ೧೬೬ ॥
ನಾನ್ಯಃ ಪಂಥಾ ಇತಿ ಹ್ಯುಕ್ತಂ ಪುರುಷಜ್ಞಾನತಃ ಶ್ರುತೌ ।
ಸರ್ವೇ ನಿಮೇಷಾ ಜಜ್ಞಿರೇ ವಿದ್ಯುತಃ ಪುರುಷಾದಧಿ ॥ ೧೬೭ ॥
ಏವಂ ಪುರುಷಶಬ್ದಶ್ಚ ಪ್ರಯುಕ್ತೋಽಬ್ಧಿಶಯೇ ಹರೌ ।
ನ ತಸ್ಯೇಶೇ ಕಶ್ಚನ ತಸ್ಯ ನಾಮ ಮಹದ್ಯಶಃ ॥ ೧೬೮ ॥
ಇತಿ ಚಾಧಿಪತಿಸ್ತಸ್ಯ ಪ್ರತಿಷಿದ್ಧಃ ಸ್ವಯಂ ಶ್ರುತೌ ।
ವಿಶ್ವತಃ ಪರಮಾಂ ನಿತ್ಯಂ ವಿಶ್ವಂ ನಾರಾಯಣಂ ಹರಿಂ ॥ ೧೬೯ ॥
ಇತಿ ಸರ್ವಾಧಿಕತ್ವೋಕ್ತ್ಯಾ ಸಮೋಽಪಿ ವಿನಿವಾರಿತಃ ।
ಸಮಾಧಿಕಸ್ಯ ರಾಹಿತ್ಯಾನ್ನೋಪಚಾರ ಪುಮಾನಸೌ ॥ ೧೭೦ ॥

ಅ ॥ ಪಾಶುಪತಾದ್ಯುಕ್ತಶಿವಾದೀನಾಂ, ಪಾಶುಪತ=ಶೈವ, ಪಾಶುಪತ, ಕಾಲಾಮುಖ, ಮಹಾವ್ರತ ಎನ್ನುವ ನಾಲ್ಕು ವಿಧರಾದವರು, ಆದಿ=ಸ್ಕಾಂದ ಸೌರಾದಿಗಳು ಇವರಿಂದ, ಉಕ್ತ= ಹೇಳಲ್ಪಟ್ಟ, ಶಿವಾದೀನಾಂ = ಶಿವಸ್ಕಂದಾದಿಗಳ, ಅನುಗ್ರಹಾತ್ = ಅನುಗ್ರಹದೆಶೆಯಿಂದ, (ಮೋಕ್ಷವು) ನ ಚ ಭವತಿ=ಆಗುವುದೇ ಇಲ್ಲ. (ಅಂದರೆ – ಯಾವ ಶಿವಾದಿಗಳು ಪಾಶುಪತಾದ್ಯಾಗಮಗಳಲ್ಲಿ ಸರ್ವೋತ್ತಮರೆಂದು ಉಪಾಸ್ಯರಾಗಿ ಹೇಳಲ್ಪಟ್ಟಿರುವರೋ ಅವರು ಹಾಗೆ ಉಪಾಸನೆ ಮಾಡಲ್ಪಟ್ಟರೆ ಅವರ ಅನುಗ್ರಹವೇ ಆಗುವುದಿಲ್ಲ, ಮತ್ತೆ ಕೋಪವೆ! ಆದಕಾರಣ ಅವರ ಅನುಗ್ರಹದಿಂದ ಮೋಕ್ಷಕ್ಕೆ ದೂರದಲ್ಲಿಯೇ ನಿರಸ್ತವಾಗಿದೆ.) (ಶಿವಾದಿಗಳ ಅನುಗ್ರಹದಿಂದ ಮೋಕ್ಷವು ಯಾವ ಕಾರಣದಿಂದ ಆಗುವುದಿಲ್ಲವೆಂದರೆ—) ಅನ್ಯಃ = ಇತರವಾದ, ಪಂಥಾಃ= ಮಾರ್ಗವು, ನ=ಇಲ್ಲ. ಇತಿ=ಹೀಗೆ. (ಮೋಕ್ಷಕ್ಕೆ ಅನ್ಯಮಾರ್ಗವನ್ನು ನಿಷೇಧಮಾಡಿ) ಶ್ರುತೌ= 'ತಮೇವಂ ವಿದ್ವಾನ್' ಎನ್ನುವ ಶ್ರುತಿಯಲ್ಲಿ. ಪುರುಷಜ್ಞಾನತಃ='ಸಹಸ್ರಶೀರ್ಷಾ ಪುರುಷಃ' ಎಂದು ಪ್ರಕೃತನಾದ ಪುರುಷನ ಜ್ಞಾನದೆಶೆಯಿಂದಲೇ (ಅಮೃತತ್ವವು) ಹಿ=ಯಾವ ಕಾರಣದಿಂದ, ಉಕ್ತಂ=ಹೇಳಲ್ಪಟ್ಟದೋ, (ಆದಕಾರಣ ಪುರುಷೋತ ಮನ ಅನುಗ್ರಹವೇ 'ತಮೇವಂ ವಿದ್ವಾನಮೃತಃ' ಎನ್ನುವ ಶ್ರುತಿಯಲ್ಲಿ ಮೋಕ್ಷಕ್ಕೆ ಸಾಧನವೆಂದು ಹೇಳಲ್ಪಟ್ಟದ್ದೇ ಮುಕ್ತಿಗೆ ಕಾರಣವು. ಶಿವಾದಿಗಳ ಅನುಗ್ರಹವು ಅಲ್ಲವೇ ಅಲ್ಲ.) (ಹಾಗಾದರೆ— ಪುರುಷಸೂಕ್ತದಲ್ಲಿ ಪಶುಪುರುಷನೇ ಪ್ರತಿಪಾದಿಸಿಕೊಳ್ಳಲ್ಪಡುತ್ತಾನೆ, ವಿಷ್ಣುವಲ್ಲ ಆದಕಾರಣ ವಿಷ್ಣುಜ್ಞಾನವು ಮೋಕ್ಷಸಾಧನವು ಎನ್ನುವ ವಿಷಯದಲ್ಲಿ ಈ ಮಂತ್ರವನ್ನುದಾಹರಿಸಿದ್ದು ಹೇಗೆ? ಪಶುಪುರುಷನಜ್ಞಾನವೂ ಕೂಡ ಪಶುಪತಿಯು ಅನುಗ್ರಹದಲ್ಲಿ ಮುಖ್ಯನಾಗಿ ಉಪಯುಕ್ತವಾಗಿರುವುದರಿಂದ ಮುಕ್ತಿಗೆ ಸಾಧನ

ವೆಂದು ಹೇಳಲ್ಪಡುತ್ತದೆ. 'ನಾನ್ಯಃ ಪಂಥಾಃ' ಎನ್ನುವ ವಚನವೂ ವಿರುದ್ಧವಲ್ಲ. ಸಾಧನದಂತೆಯೇ ಸಾಧನ-ಸಾಧನವನ್ನು ಬಿಟ್ಟರೂ ಫಲವು ಹುಟ್ಟಲಾರದು, ಎಂದರೆ— ಹೀಗೆ ೧ ಇದು ಪುರುಷ ಶಬ್ದಕ್ಕೆ ವಿಷ್ಣುವಿನಲ್ಲಿ ಶಕ್ತಿಯಿಲ್ಲದಿರುವುದರಿಂದ ಕಲ್ಪಿಸಲ್ಪಡುತ್ತದೋ? ೨ ತಾತ್ಪರ್ಯಜ್ಞಾಪಕವು ಇಲ್ಲದಿರುವುದರಿಂದ ಕಲ್ಪಿಸಲ್ಪಡುತ್ತದೋ? ೩ ಬಾಧಕವಿದ್ದಪ್ರಯುಕ್ತವೋ? ೧ನೇದ್ದು ಕೂಡ ಲಾರದು. ನಾರಾಯಣಾನುವಾಕದಲ್ಲಿ ಪುರುಷಶಬ್ದಕ್ಕೆ ಶ್ರೀಹರಿಯಲ್ಲಿ ಪ್ರಯೋಗವಿದೆ ಎನ್ನುತ್ತಾರೆ.) ವಿದ್ಯುತಃ=ವಿಶೇಷವಾಗಿ ಪ್ರಕಾಶಿಸಿಕೊಂಡಿರುವ, ಅಧಿ = ಸರ್ವೋತ್ತಮನಾದ, ಪುರುಷಾತ್= ಗುಣಪರಿಪೂರ್ಣನಾದ ಶ್ರೀ ಹರಿಯದೆಶೆಯಿಂದ, ಸರ್ವೇ ನಿಮೇಷಾಃ=ಎಲ್ಲಾ ನಿಮೇಷಗಳೂ, ಜಜ್ಞಿರೇ=ಹುಟ್ಟಿದವು. ಏವಂ=ಈ ಪ್ರಕಾರ, ಪುರುಷಶಬ್ದಶ್ಚ = ಪುರುಷಶಬ್ದವಾದರೂ, ಅಬ್ಧಿ ಶಯೇ=ಕ್ಷೀರಾಬ್ಧಿಶಾಯಿಯಾದ, ಹರೌ=ಶ್ರೀ ಹರಿಯಲ್ಲಿ, ಪ್ರಯುಕ್ತಃ=ಪ್ರಯೋಗಿಸಲ್ಪಟ್ಟದೆ. (ಅಂದರೆ ಪುರುಷಜ್ಞಾನದ್ದೆಶೆಯಿಂದ ಅಮೃತತ್ವವು ಹೇಳಲ್ಪಟ್ಟದೆ ಎಂದು ಇಷ್ಟೇ ಅಲ್ಲ. ಮತ್ತೆ ಪುರುಷಶಬ್ದವು ಶ್ರೀ ಹರಿಯಲ್ಲಿ ಪ್ರಯುಕ್ತವೂ ಆಗಿದೆ) ('ವಿದ್ಯುತಃ ಪುರುಷಾತ್'' ಎಂದು ಹೇಳಲ್ಪಟ್ಟಾಗ್ಯೂ ಪಶುಪುರುಷನೇ ಏಕೆ ಆಗಲಾರದು ಎಂದರೆ– **'ಅಂಭಸ್ಯ ಪಾರೇ ಯಮಂತಃ ಸಮುದ್ರೇ'** ಎಂದು ಈ ಪುರುಷನಲ್ಲಿ ಅಬ್ಧಿಶಯಿತ್ವವು ಶ್ರುತವಾಗಿದೆ. **'ಮಹೋದಧಿ ಶಯೋಽಂತಕಃ'** ಇತ್ಯಾದಿಗಳಿಂದ ಅದು ವಿಷ್ಣುವಿನ ಲಿಂಗವೆಂದು ಅವಗತವಾಗಿದೆ.) (ಕಾರ ಣಾಂತರದಿಂದಲೂ ಈ ಪುರುಷನು ಶ್ರೀ ನಾರಾಯಣನೇ ಪಶುಪತಿಯಲ್ಲವೆನ್ನುತ್ತಾರೆ) ತಸ್ಯ= ಆ ಪುರುಷನಿಗೆ, ಕಶ್ಚನ=ಯಾರೊಬ್ಬನೂ, ನೇಶೇ=ಸಮರ್ಥನಿಲ್ಲ. ಮಹತ್=ಮಹತ್ ಎಂದೂ, ಯಶಃ=ಯಶಃ ಎಂದೂ, ತಸ್ಯ=ಆ ಪುರುಷನ, ನಾಮ=ಹೆಸರು, ಶ್ರುತೌ=ನಾರಾಯಣಾನು ವಾಕದಲ್ಲಿ, ('ನ ತಸ್ಯೇಶೇಕಶ್ಚನ' ಎನ್ನುವ ವಾಕ್ಯದಿಂದ) ತಸ್ಯ=ಆ ಪುರುಷನಿಗೆ, ಅಧಿಪತಿಃ= ನಿಯಾಮಕನು, ಸ್ವಯಂ=ಮುಖದಿಂದಲೇ, ಪ್ರತಿಷಿದ್ಧಃ=ನಿಷೇಧಿಸಿಕೊಳ್ಳಲ್ಪಟ್ಟದ್ದಾನೆ. ವಿಶ್ವತಃ= ಸರ್ವರಿಂದಲೂ, ಪರಮಾಂ=ಸರ್ವೋತ್ತಮನೂ ಅ ಎನ್ನುವ ಶಬ್ದವಾಚ್ಯನೂ ಆದ, ನಿತ್ಯಂ= ಅವಿನಾಶಿಯಾದ, ವಿಶ್ವಂ=ಪೂರ್ಣನಾದ, ಹರಿಂ=ಪಾಪಾದಿಪರಿಹಾರಕನಾದ, ನಾರಾಯಣಂ= ಶ್ರೀ ನಾರಾಯಣನನ್ನು, (ತಿಳಿದು ಮುಕ್ತನಾಗುತ್ತಾನೆ.) ಇತಿ=ಹೀಗೆ, ಸರ್ವಾಧಿಕತ್ವೋಕ್ತ್ಯಾ= ನಾರಾಯಣಾನುವಾಕ್ಯದಲ್ಲಿಯೇ ('ವಿಶ್ವತಃ' ಎನ್ನುವ ಶ್ರುತಿಯಲ್ಲಿ ಆ ಪುರುಷನಿಗೆ)ಸರ್ವರಿಂದಲೂ ಆಧಿಕ್ಯವನ್ನು ಹೇಳಿದರಿಂದ, ಸಮೋಽಪಿ=ಸಮಾನಿಕನೂ ಕೂಡ, ವಿನಿವಾರಿತಃ=ನಿವಾರಿಸಿಕೊಳ್ಳ ಲ್ಪಟ್ಟದ್ದಾನೆ (ಸರ್ವರಿಂದಲೂ ಉತ್ತಮನಾದವನಿಗೆ ಸಮಾನಿಕನು ಕೂಡಲಾರನು.) (ಅದರಿಂದ ಪ್ರಕೃತವೇನಾಯಿತೆಂದರೆ) ಸಮಾಧಿಕಸ್ಯ = ಸಮಾನಿಕನಿಗೂ, ಅಧಿಕನಾದವನಿಗೂ, ರಾಹಿ- ತ್ಯಾತ್ = ಇಲ್ಲದೆ ಇರುವುದರಿಂದ, ಅಸೌ = ನಾರಾಯಣಾನುವಾಕದಲ್ಲಿ ಹೇಳಲ್ಪಟ್ಟವನು, ಉಪಚಾರಪುಮಾನ್ = ('ಉಪಸಮೀಪೇ ಚಾರಃ ಯಸ್ಯಾಸೌ ಪ್ರಧಾನಸ್ಯ' ಎನ್ನುವ ವ್ಯುತ್ಪತ್ತಿ ಯಿಂದ) ಉಪಸರ್ಜನಭೂತನಾದ ಉಪಚಾರಪುರುಷನು ಪಶುಪುರುಷನು, ನ=ಆಗುವುದಿಲ್ಲ. (ನಾರಾಯಣ ನಾಮಾದಿಗಳಿಂದ ಈ ಪುರುಷನು ಶ್ರೀ ಹರಿಯೇ ಎಂದು ಶಿಷ್ಯರಿಂದಲೇ ತಿಳಿಯ ಲಿಕ್ಕೆ ಶಕ್ಯವಾಗುವುದರಿಂದ ಅದನ್ನು ಪ್ರತ್ಯೇಕ ಹೇಳಲಿಲ್ಲ.) (ಅಧಿಪತಿರಾಹಿತ್ಯವೂ ಸರ್ವಾಧಿ ಕತ್ವವೂ ಆದರಿಂದಲೇ ಅವಗತವಾದ ಸಮಾಧಿಕರಾಹಿತ್ಯವೂ ಪಶುವಿನಲ್ಲಿ ಕೂಡದಿರುವುದರಿಂದ ಈ ಪುರುಷಶಬ್ದವು ಪಶುಪತಿವಿಷಯಕವಲ್ಲ. ಮತ್ತೆ ನಾರಾಯಣಾದಿನಾಮದಿಂದಲೂ ಅಬ್ಧಿಶಯ ತ್ವಾದಿಲಿಂಗಗಳಿಂದಲೂ ವಿಷ್ಣುವಿಷಯಕವೇ ಆಗಲಿ, ಅಷ್ಟರಿಂದ ಪುರುಷಶಬ್ದಕ್ಕೆ ವಿಷ್ಣುವಿನಲ್ಲಿ ವಾಚಕತ್ವಶಕ್ತಿಯು ಸಿದ್ಧಿಸುವುದಿಲ್ಲ. ಪ್ರಯೋಗವು ಅಮುಖ್ಯವೃತ್ತಿಯಿಂದಲೂ ಕೂಡುತ್ತದೆ ಎಂದರೆ—) ಅಸೌ = ವಿಷ್ಣುವು, ಉಪಚಾರಪುಮಾನ್ = ಉಪಚಾರದಿಂದ ಪುರುಷಶಬ್ದಕ್ಕೆ

ವಿಷಯನು, ನ=ಆಗುವುದಿಲ್ಲ (ಮತ್ತೆ ಮುಖ್ಯವೃತ್ತಿಯಿಂದಲೇ, ಏಕೆಂದರೆ— ಮುಖ್ಯಾರ್ಥವು ಕೂಡದಿದ್ದರೆ ಉಪಚಾರವನ್ನು ಕಲ್ಪಿಸಬೇಕು. ಪುರುಷಶಬ್ದಕ್ಕೆ ಮುಖ್ಯಾರ್ಥವು ಪೂರ್ಣತ್ವವು. ಅದಾದರೂ ವಿಷ್ಣುವಿಗೇನೇ ಸಮಾಧಿಕರಾಹಿತ್ಯವಿದ್ದ ಪ್ರಯುಕ್ತ ಕೂಡುತ್ತದೆ.) ॥ ೧೬೬ ॥ ॥ ೧೬೭ ॥ ೧೬೮ ॥ ೧೬೯ ॥ ೧೭೦ ॥

ಹೀಗೆ ಪುರುಷಶಬ್ದಕ್ಕೆ ವಿಷ್ಣುವಿನಲ್ಲಿ ವಾಚಕತ್ವಶಕ್ತಿಯು ಇರಲಿ; ಆದಾಗ್ಯೂ ಪುರುಷ ಸೂಕ್ತದಲ್ಲಿ ವಿಷ್ಣುಜ್ಞಾಪಕವಾದುದು ಇಲ್ಲದಿರುವುದರಿಂದ ವಿಷ್ಣುಪರತ್ವವಿಲ್ಲವೆನ್ನುವ ಎರಡನೇ ದ್ದನ್ನು ನಿರಾಕರಿಸುತ್ತಾರೆ.

**ಮೂ ॥ ಪುರುಷ ಏವೇದಂ ಸರ್ವಂ ಯದ್ಭೂತಂ ಯಚ್ಚ ಭವ್ಯಂ ।**
**ಉತಾಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ ॥ ೧೭೧ ॥**
**ಮುಕ್ತಾಮುಕ್ತಪರೇಶತ್ವಮಿತಿ ತಸ್ಯಾಹ ಸಾ ಶ್ರುತಿಃ ।**
**ಅಮೃತೇಶಾನವಚನಾತ್ಸರ್ವಸ್ಯೇಶಾನತೋದಿತಾ ॥ ೧೭೨ ॥**

ಅ ॥ ಯತ್=ಯಾವುದು, ಭೂತಂ = ಅತೀತವಾದುದೋ, ಯಚ್ಚ = ಯಾವುದು, ಈಗ ಇರತಕ್ಕದ್ದೋ, ಭವ್ಯಂ=ಮುಂದೆಆಗತಕ್ಕ ಅಮುಕ್ತವಾದ ಜಗತ್ತೋ, ಇದಂಸರ್ವಂ= ಇದೆಲ್ಲವೂ, ಪುರುಷ ಏವ=ಪುರುಷಾಧೀನವೇ, ಯತ್=ಯಾವಕಾರಣದೆಶೆಯಿಂದ, ಅನ್ನೇನ= ಅದನೀಯವಾದ ಅಮುಕ್ತವರ್ಗವನ್ನು, ಅತಿರೋಹತಿ=ಅತಿಕ್ರಮಿಸುತ್ತಾನೋ, (ಅಂದರೆ ಅಮು ಕ್ತರಿಗೆ ಅಧಿಪತಿಯೋ) ಆದಕಾರಣ, ಅಮೃತಸ್ಯ ಉತ=ಮುಕ್ತರ ಸಮೂಹಕ್ಕೂ, ಈಶಾನಃ= ನಿಯಾಮಕನು. (ಸಂಸಾರದಲ್ಲಿ ತನ್ನ ಅಧೀನದಲ್ಲಿರತಕ್ಕ ಜಗತ್ತು ಮುಕ್ತಿಯಲ್ಲಿ ತನ್ನ ಸ್ವಾಧೀನ ವಾಗದೆ ಇರುವುದಾದರೆ ಅದಕ್ಕಪೇಕ್ಷಾವಂತನು ಮೋಕ್ಷವನ್ನೇ ಕೊಡಲಾರನು. ಆದಕಾರಣ ಮುಕ್ತಿಯಲ್ಲಿಯೂ (ಶ್ರೀ ಹರಿಯ ಅಧೀನವೇ) ಇತಿ=ಎಂದು, ಸಾ ಶ್ರುತಿಃ=ಆ ಪುರುಷಸೂಕ್ತ ಮಂತ್ರವು, ತಸ್ಯ=ಆ ಹರಿಗೆ, ಮುಕ್ತಾಮುಕ್ತಪರೇಶತ್ವಂ=ಮುಕ್ತರಿಗೂ ಅಮುಕ್ತರಿಗೂ ಮುಖ್ಯ ನಿಯಾಮಕತ್ವವನ್ನು, ಆಹ = ಹೇಳುತ್ತದೆ. (ಅದಾದರೂ '**ಮುಕ್ತಾನಾಂ ಪರಮಾ ಗತಿಃ**' ಇತ್ಯಾದಿಗಳಿಂದ ವಿಷ್ಣುವಿಗೇನೇ ಅವಗತವಾಗಿದೆ. ಪಶುವಿಗಾದರೂ ಅಸಂಭಾವಿತವೇ ಆಗಿರುವುದ ರಿಂದ ಪುರುಷಸೂಕ್ತವು ವಿಷ್ಣುಪರವೇ ಎಂದು ತಿಳಿಯಲ್ಪಡುತ್ತದೆ.) (ಹಾಗಾದರೆ '**ಪುರುಷ ಏವೇದಂ ಸರ್ವಂ**' ಎಂದು ಪುರುಷನಿಗೆ ಸರ್ವಾತ್ಮಕತ್ವವೇ ಹೇಳಲ್ಪಟ್ಟದೆ. ಆದಕಾರಣ ಶ್ರುತಿಯು ಮುಕ್ತಾಮುಕ್ತಪರೇಶತ್ವವನ್ನು ಹೇಗೆ ಹೇಳುತ್ತದೆ, ಎಂದರೆ—) ಅಮೃತೇಶಾನವಚ- ನಾತ್ = ಉತ್ತರಾರ್ಧದಲ್ಲಿ ಮುಕ್ತನಿಯಾಮಕತ್ವವನ್ನು ಹೇಳತಕ್ಕ ವಚನವಿದ್ದಪ್ರಯುಕ್ತ, ಸರ್ವಸ್ಯ=ಪೂರ್ವಾರ್ಧದಲ್ಲಿ ಹೇಳಲ್ಪಟ್ಟ ಅಮುಕ್ತರಿಗೆಲ್ಲರಿಗೂ, ಈಶಾನತೈವ=ನಿಯಾಮಕತ್ವವೇ, ಉದಿತಾ=ಹೇಳಲ್ಪಟ್ಟದೆ, (ಎಂದು ತಿಳಿಯತಕ್ಕದು. ಸರ್ವಾಭೇದವಲ್ಲವೇ ಅಲ್ಲ. ಯಾರೊಬ್ಬ ವಾದಿಯೂ ಮುಕ್ತಿಯಲ್ಲಿ ಭೇದವನ್ನೂ ಅಮುಕ್ತಿಯಲ್ಲಿ ಅಭೇದವನ್ನೂ ಅಂಗೀಕರಿಸುವುದಿಲ್ಲ, ಯುಕ್ತವೂ ಆಗುವುದಿಲ್ಲ, ಅಭಿನ್ನವಾದುದಕ್ಕೆ ಮೇಲೆ ಭೇದವೂ ತೋರಲಾರದು) ॥ ೧೭೧ ॥ ೧೭೨ ॥

ಹೇತ್ವಂತರವನ್ನು ಹೇಳುತ್ತಾರೆ—

**ಮೂ ॥ ಯದಿ ಸರ್ವತ್ವಮುದಿತಮುತೇಶ ಇತಿ ತದ್ವೃಥಾ ।**
**ಉತ ಶಬ್ದೋ ವದೇದೇಷ ಹೀಶತ್ವಸ್ಯ ಸಮುಚ್ಚಯಂ ॥ ೧೭೩ ॥**

ಅ || ಯದಿ=ಯಾವಪಕ್ಷದಲ್ಲಿ, (ಪೂರ್ವಾರ್ಧದಲ್ಲಿ ಪುರುಷನಿಗೆ) ಸರ್ವತ್ವಂ=ಸರ್ವಾತ್ಮಕತ್ವವು, ಉದಿತಂ=ಹೇಳಲ್ಪಟ್ಟದ್ದು ಆಗುವುದೋ. ತತ್=ಹಾಗಾದರೆ, ಉತೇಶ ಇತಿ=ಉತ್ತರಾರ್ಧದಲ್ಲಿ '**ಅಮೃತಸ್ಯೋತೇಶಾನಃ**' ಎನ್ನುವಲ್ಲಿ ಉತಶಬ್ದವು, ವೃಥಾ=ವ್ಯರ್ಥವಾಗುವುದು. (ಅದು ಹೇಗೆಂದರೆ—) ಹಿ=ಯಾವಕಾರಣದಿಂದ, ಏಷ ಉತ ಶಬ್ದಃ=ಉತ್ತರಾರ್ಧದಲ್ಲಿರತಕ್ಕ ಉತಶಬ್ದವು, ಈಶತ್ವಸ್ಯ = ಈಶತ್ವಕ್ಕೆ, ಸಮುಚ್ಚಯಂ = ಸಮುಚ್ಚಯವನ್ನು, ವದೇತ್=ಹೇಳುವುದೋ, (ಬೇರೆ ಅರ್ಥವು ಕೂಡಲಾರದು. ಎರಡರ ಈಶತ್ವವನ್ನು ಹೇಳದೆ ಇದ್ದರೆ ಆ ಎರಡರ ಸಮುಚ್ಚಯ ಉಕ್ತಿಗೆ ಅವಕಾಶವಿಲ್ಲ. ಆದಕಾರಣ ಉತಶಬ್ದವು ವ್ಯರ್ಥವೇ) || ೧೭೩ ||

ಯುಕ್ತ್ಯಂತರವನ್ನು ಹೇಳುತ್ತಾರೆ—

**ಮೂ || ಪುರುಷೇಣೈವೇದಂ ವ್ಯಾಪ್ತಮಿತಿ ಬ್ರಾಹ್ಮಣಂ ಚಾಹ ತಂ ಪ್ರತಿ |**
**ಏತಾವಾನಸ್ಯ ಮಹಿಮೇತಿ ಮಹಿಮ್ನೋ ವಚೋ ಹಿ ತತ್ || ೧೭೪ ||**

ಅ || ('**ಪುರುಷ ಏವೇದಂ ಸರ್ವಂ**' ಎಂದು) ಪುರುಷೇಣೈವ=ಪುರುಷನಿಂದಲೇ, ಇದಂ=ಇದೆಲ್ಲವೂ, ವ್ಯಾಪ್ತಂ = ವಶೀಕೃತವಾಗಿದೆ. '**ಆತೃಣಾದಾಕರೀಷಾತ್ಸರ್ವಂ ಭಗವಾನ್**' ಎನ್ನುವುದು ಮಿಥ್ಯಾದೃಷ್ಟಿಯು ಎಂದು, ಬ್ರಾಹ್ಮಣಂ ಚ=ಶಾಖಾಂತರ ಬ್ರಾಹ್ಮಣವೂ ಕೂಡ, ತಂ ಪ್ರತಿ='**ಪುರುಷ ಏವೇದಂ ಸರ್ವಂ**' ಎನ್ನುವ ಮಂತ್ರವನ್ನು ಕುರಿತು ಪ್ರವೃತ್ತವಾದುದು (ಅಂದರೆ ಆ ಮಂತ್ರಕ್ಕೆ ವ್ಯಾಖ್ಯಾನರೂಪವಾದುದು) ಆಹ ಚ='ಪುರುಷ ಏವೇದಂ ಸರ್ವಂ' ಎನ್ನುವ ವಾಕ್ಯವು ಸರ್ವಕ್ಕೆ ಪುರುಷಾಧೀನತ್ವವನ್ನು ಹೇಳುತ್ತದೆ ಎಂದು ಹೇಳುತ್ತದೆ. ಆದುದರಿಂದಲೂ ಸರ್ವತ್ವವು ಅಂದರೆ—ಪುರುಷನಿಗೆ ಸರ್ವಾಭೇದವು ಅರ್ಥವಲ್ಲ.) (ಕಾರಣಾಂತರದಿಂದಲೇ ಸರ್ವೇಶತ್ವವೇ ಪೂರ್ವಾರ್ಧದ ಅರ್ಥವು ಸರ್ವತ್ವವಲ್ಲವೆನ್ನುತ್ತಾರೆ.) 'ಏತಾವಾನಸ್ಯ ಮಹಿಮೇತಿ' ಈ ಪುರುಷನಿಗೆ ಪೂರ್ವವಾಕ್ಯದಲ್ಲಿ ಹೇಳಲ್ಪಟ್ಟದ್ದು ಯಾವುದೋ, ಅಷ್ಟೂ ಮಹಿಮೆಯು ಎನ್ನುವ ಉತ್ತರವಾಕ್ಯದ ಬಲದಿಂದ, ತತ್='**ಪುರುಷ ಏವೇದಂ ಸರ್ವಂ**' ಎಂದು ಪುರುಷನ, ಮಹಿಮ್ನಃ=ಮಹಿಮೆಯನ್ನು ಹೇಳತಕ್ಕ, ವಚೋಹಿ=ವಚನವೆಂದು, (ತಿಳಿಯಲ್ಪಡುತ್ತದೆ.) (ಅಂತೂ ಮಹಿಮಪ್ರತಿಪಾದಕವಾದುದು ಹೇಗೆ ಆಗುತ್ತದೋ ಹಾಗೆ ವ್ಯಾಖ್ಯಾನ ಮಾಡತಕ್ಕದ್ದು. ಅಪಕರ್ಷಕ್ಕೇನೇ ಕಾರಣವಾಗಿರುವುದರಿಂದ ಸರ್ವಾತ್ಮಕತ್ವವು ಮಹಿಮೆಯಲ್ಲ, ಮತ್ತೆ ಸರ್ವಾಧಿಪತ್ಯವೇ) || ೧೭೪ ||

**ಮೂ || ಸೋಽಮೃತಸ್ಯಾಭಯಸ್ಯೇಶೋ ಮರ್ತ್ಯಮನ್ನಂ ಯದತ್ಯಗಾತ್ |**
**ಇತ್ಯಮುಕ್ತಾಧಿಪತ್ಯಂ ತು ಪೂರ್ವಾರ್ಧೋಕ್ತಮನೂದ್ಯ ಚ || ೧೭೫ ||**
**ಉತಾಮೃತಸ್ಯೇಶ ಇತಿ ವಿಧತ್ತೇ ಮುಕ್ತಿಗೇಶತಾಂ |**
**ಅತೋಽವಿಷ್ಣುಪರಿಜ್ಞಾನಾದೇವ ಮುಕ್ತಿರ್ನಚಾನ್ಯತಃ || ೧೭೬ ||**

ಅ || ಯತ್=ಯಾವಕಾರಣದಿಂದ, ಮರ್ತ್ಯಂ = ಮರಣಶೀಲವಾದ, ಅನ್ನಂ=ಅದನೀಯವಾದ ಬ್ರಹ್ಮಾದಿಜಗತ್ತನ್ನು, ಅತ್ಯಗಾತ್ = ಅತಿಕ್ರಮಿಸಿರುವನೋ, (ಆದಕಾರಣ) ಅಭಯಸ್ಯ=ಭಯರಹಿತವಾದ, ಅಮೃತಸ್ಯ = ಮುಕ್ತವರ್ಗಕ್ಕೆ, ಸಃ = ಪುರುಷನು, ಈಶಃ = ನಿಯಾಮಕನು. ಇತಿ=ಈ ಪ್ರಕಾರ, (ಪುರುಷಸೂಕ್ತಾರ್ಥವನ್ನು ಪ್ರತಿಪಾದಿಸತಕ್ಕ ಭಾಗವತ

ವಚನವಿರೋಧದರದೆಶೆಯಿಂದ) ಪೂರ್ವಾರ್ಧೋಕ್ತಂ=ಪೂರ್ವಾರ್ಧದಲ್ಲಿ ಹೇಳಲ್ಪಟ್ಟ, ಅಮುಕ್ತಾಧಿಪತ್ಯಂತು = ಅಮುಕ್ತರ ಆಧಿಪತ್ಯವನ್ನಾದರೂ, ('ಯದನ್ನೇನಾತಿರೋಹಾತಿ' ಎನ್ನುವ ವಚನದೆಶೆಯಿಂದ ಹೇತುವಾಗಿ) ಅನೂದ್ಯ ಚ=ಅನುವಾದಮಾಡಿಕೊಂಡು, ಉತಾಮೃತಸ್ಯೇತಿ= 'ಉತಾಮೃತಸ್ಯೇಶಾನಃ' ಎನ್ನುವ ಶ್ರುತಿಯಿಂದ, ಮುಕ್ತಿಗೇಶತಾಂ=ಮುಕ್ತಿಯಲ್ಲಿರತಕ್ಕವರಿಗೂ ನಿಯಾಮಕತ್ವವನ್ನು, ವಿಧತ್ತೇ=ಪುರುಷಸೂಕ್ತರೂಪವಾದ ಶ್ರುತಿಯು ವಿಧಾನಮಾಡುತ್ತದೆ. ಅತಃ=ಆದಕಾರಣ, ವಿಷ್ಣುಪರಿಜ್ಞಾನಾದೇವ=ಶ್ರೀ ಹರಿಯ ಜ್ಞಾನದಿಂದುಂಟಾದ, ಪ್ರಸಾದದೆಶೆಯಿಂದಲೇ, ಮುಕ್ತಿಃ=ಮೋಕ್ಷವು. ಅನ್ಯತಃ=ಶಿವಾದಿಗಳ ಅನುಗ್ರಹದೆಶೆಯಿಂದ, ನ ಚ= ಮುಕ್ತಿಯಾಗುವುದೇ ಇಲ್ಲ.

**ತಾ ||** **ನ್ಯಾಯಸುಧಾ—** (1) ಉತ್ತರಾರ್ಧದಲ್ಲಿ ಅಮುಕ್ತರ ಆಧಿಪತ್ಯವನ್ನು ಹೇತುವಾಗಿ ಇಟ್ಟುಕೊಂಡು ಮುಕ್ತರ ಆಧಿಪತ್ಯವನ್ನು ಶ್ರುತಿಯು ಪ್ರತಿಜ್ಞಾಮಾಡುತ್ತದೆ. ಪುರುಷಸೂಕ್ತದ ವ್ಯಾಖ್ಯಾನ ಪ್ರಸಂಗದಲ್ಲಿ 'ಸೋಽಮೃತಸ್ಯ' ಎನ್ನುವ ಭಾಗವತ ವಚನದೆಶೆಯಿಂದ ಉತ್ತರಾರ್ಧವನ್ನು ಹಾಗೆಯೇ ವ್ಯಾಖ್ಯಾನ ಮಾಡಿರುವರು. (2) ಪೂರ್ವಾರ್ಧದಲ್ಲಿ ಅಮುಕ್ತರ ಆಧಿಪತ್ಯವು ವಿಹಿತವಾಗಿದೆ. ಉತ್ತರಾರ್ಧದಲ್ಲಿ ಆ ಪೂರ್ವಾರ್ಧದಲ್ಲಿ ಹೇಳಿದ ಅಮುಕ್ತಾಧಿಪತ್ಯವನ್ನು ಹೇತುವಾಗಿ ಅನುವಾದ ಮಾಡಿಕೊಂಡು, ಪುರುಷನಿಗೆ ಮುಕ್ತನಿಯಾಮಕತ್ವವನ್ನೂ ಶ್ರುತಿಯು ಹೇಳುತ್ತದೆ ॥ ೧೭೫ ॥ ೧೭೬ ॥

ಪಾಶುಪತರೂ ಕೂಡ ಜ್ಞಾನಿಯಾದವನಿಗೆ ಭೋಗದಿಂದಲೇ ಸಕಲ ಕರ್ಮವನ್ನು ಹೇಳುತ್ತಾರೆ, ಅದೂ ಅನುಪಪನ್ನವೆನ್ನುತ್ತಾರೆ—

**ಮೂ ||** **ತದ್ಯಥೇತಿ ಶ್ರುತೇಶ್ಚೈವ ತತಃ ಕರ್ಮಕ್ಷಯೋ ಭವೇತ್ ।**
**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ॥ ೧೭೭ ॥**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ।**
**ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ॥ ೧೭೮ ॥**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ।**
**ಇತ್ಯಾದಿ ಭಗವದ್ವಾಕ್ಯೈರುಕ್ತಾರ್ಥಶ್ಚಾವಸೀಯತೇ ॥ ೧೭೯ ॥**

**ಅ ||** ತದ್ಯಥೇತಿ ಶ್ರುತೇಶ್ಚೈವ = **'ತದ್ಯಥೇಷೀಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ'** ಹೇಗೆ ಯಥಾ= ಹುಲ್ಲು-ಹತ್ತಿಯ ರಾಶಿಯು ಅಗ್ನಿಯಲ್ಲಿ ಹಾಕಿದ್ದು ಭಸ್ಮೀಭೂತವಾಗುವುದೋ, ಏವಂ= ಹೀಗೆಯೇ, ಅಸ್ಯ=ಈ ಜ್ಞಾನಿಯ, ಸರ್ವೇ ಪಾಪ್ಮಾನಃ=ಎಲ್ಲಾ ಪಾಪಗಳೂ, ಪ್ರದೂಯಂತೇ= ವಿನಾಶಗಳಾಗುತ್ತವೆ.) ಎನ್ನುವ ಶ್ರುತಿಯದೆಶೆಯಿಂದ, ತತ ಏವ=ಆ ವಿಷ್ಣುವಿನ ಅಪರೋಕ್ಷ ಜ್ಞಾನದಿಂದಲೇ, ಕರ್ಮಕ್ಷಯಃ = ಸಕಲಕರ್ಮಗಳಿಗೆ ನಾಶವು, ಭವೇತ್ = ಆಗುವುದು. (ಹಾಗಾದರೆ ಈ ಶ್ರುತಿಯಲ್ಲಿ ಜ್ಞಾನಿಯಾದವನಿಗೆ ಸಕಲ ಕರ್ಮಗಳ ಪರಿತಾಪವು ಶ್ರುತವಾಗುತ್ತದೆ. ಜ್ಞಾನದಿಂದ ವಿನಾಶವಾಗುತ್ತದೆನ್ನುವುದು ವಿವಕ್ಷಿತವಾದ ಅರ್ಥವಲ್ಲ, ಎಂದರೆ ಭಗವದ್ವಾಕ್ಯದ ಸಮಾಖ್ಯೆಯನ್ನು ಹೇಳುತ್ತಾಗೆ.) ಅಥವಾ ಈ ಅರ್ಥವನ್ನು ಸ್ಪಷ್ಟವಾಗಿ ಪ್ರತಿಪಾದಿಸತಕ್ಕ ಭಗವದ್ವಾಕ್ಯವನ್ನು ಹೇಳುತ್ತಾರೆ. ಅರ್ಜುನ=ಎಲೋ ಅರ್ಜುನನೇ, ಸಮಿದ್ಧಃ=ಚೆನ್ನಾಗಿ

ದೀಪ್ತವಾದ, ಅಗ್ನಿಃ = ಅಗ್ನಿಯು, ಯಥಾ = ಹೇಗೆ, ಏಧಾಂಸಿ=ಕಟ್ಟಿಗೆಗಳನ್ನು, ಭಸ್ಮಸಾತ್ಕುರುತೇ=ಭಸ್ಮಾಧೀನವನ್ನಾಗಿ ಮಾಡುತ್ತದೊ ತಥಾ=ಹಾಗೆಯೇ, ಜ್ಞಾನಾಗ್ನಿಃ=ಜ್ಞಾನರೂಪವಾದ ಅಗ್ನಿಯು, ಸರ್ವಕರ್ಮಾಣಿ=ಎಲ್ಲಾ ಕರ್ಮಗಳನ್ನೂ, ಭಸ್ಮಸಾತ್ಕುರುತೇ=ಭಸ್ಮಾಧೀನವನ್ನಾಗಿ ಮಾಡುತ್ತದೆ. (ಆದಾಗ್ಯೂ ಕರ್ಮಗಳನ್ನು ಭಸ್ಮೀಕರಿಸುವುದೆಂದರೆ— ಮುಖ್ಯವಾದ ಅರ್ಥವು ಕೊಡದಿರುವುದರಿಂದ ಜೀವನಿಂದ ಬಿಡುಗಡೆ ಮಾಡುವುದೆ ಎಂದು ಪ್ರತಿಪಾದಿಸುವ ವಾಕ್ಯಾಂತರವನ್ನು ಪಠನಮಾಡುತ್ತಾರೆ.) ಸರ್ವಧರ್ಮಾನ್=ಅವೈಷ್ಣವಗಳಾದ ಧರ್ಮಗಳನ್ನೂ ಕಾಮ್ಯಕರ್ಮಗಳನ್ನೂಕೂಡ, ಪರಿತ್ಯಜ್ಯ = ಬಿಟ್ಟುಬಿಟ್ಟು, ಮಾಮೇಕಂ = ನನ್ನೊಬ್ಬನನ್ನೇ, ಶರಣಂ=ರಕ್ಷಕನನ್ನಾಗಿ, ವ್ರಜ=ಹೊಂದು. ಅಹಂ=ಆಮೇಲೆ ಪ್ರಸನ್ನನಾದ ನಾನು, ತ್ವಾ= ನಿನ್ನನ್ನು, ಸರ್ವಪಾಪೇಭ್ಯಃ=ಎಲ್ಲಾ ಪಾಪಗಳ ದೆಶೆಯಿಂದಲೂ, ಮೋಕ್ಷಯಿಷ್ಯಾಮಿ=ಬಿಡಿಸುವೆನು, ಮಾಶುಚಃ=ದುಃಖ ಪಡಬೇಡ. (ಮುಕ್ತನಾಗುವಿ.) ಇತ್ಯಾದಿ ಭಗವದ್ವಾಕ್ಯೈಶ್ಚ= ಇದುಮೊದಲಾದ '**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ । ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ**' ಇತ್ಯಾದಿ ಭಗವದ್ವಾಕ್ಯಗಳಿಂದಲೇ, ಉಕ್ತಾರ್ಥಃ= ತದ್ಯಥಾ ಎನ್ನುವ ಶ್ರುತಿಗೆಹೇಳಿದ ಅರ್ಥವು, ಅವಸೀಯತೇ = ನಿಶ್ಚಿತವಾಗುತ್ತದೆ ॥ ೧೭೭ ॥ ॥ ೧೭೮ ॥ ೧೭೯ ॥

ಭಟ್ಟರುಹೇಳಿದ ಮೋಕ್ಷಸಾಧನವನ್ನು ಅನುವಾದಮಾಡುತ್ತಾರೆ—

**ಮೂ ॥ ನಿತ್ಯನೈಮಿತ್ತಿಕಂ ಕರ್ಮ ಕುರ್ವನ್ನನ್ಯತ್ಪರಿತ್ಯಜನ್ ।**
**ಮುಚ್ಯತೇ ಸಂಸೃತೇಶ್ಚೈತದಪ್ಯೇತೇನ ನಿರಾಕೃತಂ ॥ ೧೮೦ ॥**

ಅ ॥ ನಿತ್ಯನೈಮಿತ್ತಿಕಂ ಕರ್ಮ = ನಿತ್ಯಕರ್ಮವನ್ನೂ, ನೈಮಿತ್ತಿಕ ಕರ್ಮವನ್ನೂ, ಕುರ್ವನ್=ಮಾಡುತ್ತಾ, ಅನ್ಯತ್ = ಇತರವಾದ ಕಾರ್ಯವನ್ನೂ, ನಿಷಿದ್ಧವನ್ನೂ, ಪರಿತ್ಯಜನ್=ಬಿಡುತ್ತಾ, ಚ = ಉಪಾತ್ತಕರ್ಮಗಳನ್ನು ಭೋಗದಿಂದಲೇ ನಾಶಪಡಿಸುವ ಪುರುಷನು, ಸಂಸೃತೇಶ್ಚ=ಸಂಸಾರ ದೆಶೆಯಿಂದ, ಮುಚ್ಯತೇ = ಬಿಡಲ್ಪಡುತ್ತಾನೆ. ಏತದಪಿ = ಭಟ್ಟರು ಹೇಳಿದ ಮೋಕ್ಷಸಾಧನವೂ ಕೂಡ, ಏತೇನ = ಭಗವಜ್ಜ್ಞಾನದಿಂದ, ವ್ಯತಿರಿಕ್ತವಾದ ಮೋಕ್ಷಸಾಧನವನ್ನು ನಿಷೇಧಿಸತಕ್ಕ 'ನಾನ್ಯಃ ಪಂಥಾ' ಎನ್ನುವ ಶ್ರುತಿವಾಕ್ಯದಿಂದಲೇ, ನಿರಾಕೃತಂ = ನಿರಾಕರಿಸಿಕೊಳ್ಳಲ್ಪಟ್ಟದೆ.

ತಾ ॥ ನ್ಯಾಯಸುಧಾ— (1) ಯಾವುದನ್ನು ಮಾಡದಿದ್ದರೆ ಪ್ರತ್ಯವಾಯುವಿದೆಯೋ, ಬ್ರಾಹ್ಮಣ್ಯಾದಿ ರೂಪವಾದ ಸಹಜ ಧರ್ಮವನ್ನು ನಿಮಿತ್ತವನ್ನಾಗಿ ಇಟ್ಟುಕೊಂಡು ಶಾಸ್ತ್ರದಲ್ಲಿ ವಿಹಿತವಾಗಿದೆಯೋ, ಅದು ನಿತ್ಯವೆಂದು ಹೇಳಿಸಿಕೊಳ್ಳಲ್ಪಡುತ್ತದೆ. ಉದಾ:- ಸಂಧ್ಯಾವಂದನ ಮೊದಲಾದುದು. (2) ಯಾವುದನ್ನು ಮಾಡದಿದ್ದರೆ ಪ್ರತ್ಯವಾಯುವಿದೆಯೋ, ಮತ್ತು ಪಿತೃಮರಣ ಮೊದಲಾದ ಆಗಂತುಕ ನಿಮಿತ್ತವನ್ನು ತೆಗೆದುಕೊಂಡು ಶಾಸ್ತ್ರದಲ್ಲಿ ವಿಹಿತವಾಗಿದೆಯೋ, ಅದೂ ನೈಮಿತ್ತಿಕವು. ಉದಾ; ಪಿತೃಶ್ರಾದ್ಧಾದಿಗಳು. (3) ಕಾಮ್ಯವೆಂದರೆ ಶಾಸ್ತ್ರದಲ್ಲಿ ಮಾಡಬಾರದೆಂದು ಹೇಳಿದ್ದು ಯಾವುದನ್ನು ಮಾಡಿದರೆ ಫಲವಿದೆಯೋ, ಮಾಡದಿದ್ದರೆ ಪ್ರತ್ಯವಾಯುವಿಲ್ಲವೋ, ಮಾಡುವುದರಲ್ಲಿ ಫಲಕಾಮನೆಯೋ, ನಿಮಿತ್ತವೋ, ಆ ಕರ್ಮವು ಕಾಮ್ಯವು. ಉದಾ = ಜ್ಯೋತಿಷ್ಟೋಮಾದಿಗಳು. ೨ ನಿಷಿದ್ಧವಾದುದು. ಉದಾ:- ಬ್ರಹ್ಮಹತ್ಯಾದಿಗಳು. (4) ಸುಖದುಃಖ ಮತ್ತು ಸುಖದುಃಖಗಳ ಕಾರಣರೂಪವಾದುದು ಸಂಸಾರವೂ, ಅದು ಕರ್ಮನಿಮಿತ್ತಕವೂ,

ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡದಿದ್ದರೆ ಅಧರ್ಮಗಳು ಅಭಿವೃದ್ಧಗಳಾಗಿ ದುಃಖ ದುಃಖ ಸಾಧನಗಳಾದ ಪ್ರಾಪ್ತಿಯು ಈತನಿಗೆ ಆಗುತ್ತದೆ ನಿಷಿದ್ಧವನ್ನು ಮಾಡಿದರೂ ಹಾಗೆಯೇ. ಕಾಮ್ಯ ಕರ್ಮವನ್ನು ಮಾಡಿದರೆ ಧರ್ಮವು ಉಂಟಾಗಿ ಸುಖ-ದುಃಖ ಸಾಧನಗಳ ಪ್ರಾಪ್ತಿಯು ಆಗುತ್ತದೆ. ಮುಮುಕ್ಷುವಾದರೂ ನಿತ್ಯಕರ್ಮವನ್ನೂ ನೈಮಿತ್ತಿಕ ಕರ್ಮವನ್ನೂ ನಿಯಮದಿಂದ ಮಾಡುತ್ತಾನೆ. ನಿಷಿದ್ಧವನ್ನು ಪರಿತ್ಯಾಗ ಮಾಡುತ್ತಾನೆ ಆದುದರಿಂದ ದುರಿತಗಳಿಗೆ ಉಪಚಯವಿಲ್ಲ. ಕಾಮ್ಯವನ್ನೂ ಪರಿತ್ಯಾಗ ಮಾಡುತ್ತಾನೆ. ಆದುದರಿಂದ ಧರ್ಮಗಳಿಗೆ ಉಪಚಯವಿಲ್ಲ. ಹೀಗೆ ಮುಂದೆ ಧರ್ಮ-ಅಧರ್ಮಗಳು ಹುಟ್ಟದಿದ್ದರೆ ಮೊದಲುಂಟಾದ ಧರ್ಮ ಅಧರ್ಮಗಳನ್ನು ಭೋಗಿಸಿ ಕ್ಷೀಣಪಡಿಸಿ ನಿರ್ಬೀಜವಾದ ಸಂಸಾರದಿಂದ ಮುಕ್ತನಾಗುತ್ತಾನೆ. ಎಂದು ಭಟ್ಟರು ಹೇಳುತ್ತಾರೆ. **'ಮೋಕ್ಷಾರ್ಥೀ ನ ಪ್ರವರ್ತೇತ ತತ್ರಕಾಮ್ಯನಿಷಿದ್ಧಯೋಃ । ನಿತ್ಯನೈಮಿತ್ತಿಕೇ ಕುರ್ಯಾತ್ ಪ್ರತ್ಯವಾಯಜಿಹಾಸಯಾ'** ಇದನ್ನು ನಿರಾಕರಿಸುತ್ತಾರೆ. 'ನಾನ್ಯಃ ಪಂಥಾಃ' ಎಂದು ಶ್ರುತವಾದ ಭಗವಜ್ಞಾನದಿಂದ ವ್ಯತಿರಿಕ್ತವಾದ ಮೋಕ್ಷಸಾಧನವನ್ನು ನಿಷೇಧಿಸಿದರಿಂದ ಹಿಂದೆ ಹೇಳಿದ್ದು ಅಯುಕ್ತವೇ. ಮತ್ತು **'ಚರಂತಿ ದೇವಾ ವಿಹಿತಂ ಸಮಸ್ತಮರ್ಧಮೇವ ಮುನಯೋ ದಶಾಂಶೋ ಮನುಷ್ಯಾಃ'** ಇತ್ಯಾದಿ ಶ್ರುತಿಗಳ ದೆಸೆಯಿಂದ ನಿತ್ಯನೈಮಿತ್ತಿಕ ಕರ್ಮಗಳನ್ನು ನಿಯಮದಿಂದ ಚೆನ್ನಾಗಿ ಮಾಡುವುದು ಎಲ್ಲರಿಗೆ ಅಶಕ್ಯವೇ. ಪ್ರಾಮಾದಿಕಗಳಾದ ಮಾನಸ-ವಾಚಿಕ-ಕಾಯಿಕ ಪಾಪಗಳು ಅಪರಿಹಾರ್ಯಗಳಾಗಿರುವುದರಿಂದ ನಿಷಿದ್ಧ ಕರ್ಮವನ್ನು ಮಾಡದಿರುವುದು ಸಂಭಾವಿತವಲ್ಲ. ಪ್ರಾಯಶ್ಚಿತ್ತದಿಂದಲೇ ಅವುಗಳು ನಾಶಹೊಂದುತ್ತವೆ ಎಂದು ಹೇಳಕೂಡದು. ಪ್ರಾಯಶ್ಚಿತ್ತವನ್ನು ಚೆನ್ನಾಗಿ ಮಾಡಲಿಕ್ಕೆ ಅಶಕ್ಯವೇ. ಪೂರ್ವದಲ್ಲಿ ಸಂಪಾದಿತಗಳಾದ ಕರ್ಮಗಳು ಅನಂತಗಳಾಗಿರುವುದರಿಂದ ಅವುಗಳಿಗೆ ಭೋಗದಿಂದಲೇ ಕ್ಷಯವು ಎನ್ನುವುದೂ ಕೂಡ ಅಸಂಭಾವಿತವೇ, ॥ ೧೮೦ ॥

ಹಾಗಾದರೆ ಸೂತ್ರದಲ್ಲಿ ಹೇಳದೆ ಇದ್ದ ವಾದ್ಯಂತರದಿಂದ ಹೇಳಲ್ಪಟ್ಟ ಮೋಕ್ಷಸಾಧನ ನಿರಾಕರಣವನ್ನು ಏಕೆ ಹೇಳಿದ್ದು ಎಂದರೆ—

**ಮೂ ॥ ವಿದ್ಯೈವೇತೀಮಮೇವಾರ್ಥಂ ಸ್ವಯಮೇವಾಹ ವೇದರಾಟ್ ।**
**ವಿನಾ ಕರ್ಮ ನ ಮೋಕ್ಷಃ ಸ್ಯಾಜ್ಜ್ಞಾನೇನೇತ್ಯಪಿ ಸಾ ಶ್ರುತಿಃ ॥**
**ನಾನ್ಯಃ ಪಂಥಾ ಇತಿ ಹ್ಯೇವ ನಿವಾರಯತಿ ಸಾದರಂ ॥ ೧೮೧ ॥**

ಅ ॥ ವಿದ್ಯೈವೇತಿ='ವಿದ್ಯೈವತು ನಿರ್ಧಾರಣಾತ್' ಎನ್ನುವ ಸೂತ್ರದಿಂದ, ಇಮಮೇವಾರ್ಥಂ = ಭಗವಜ್ಜ್ಞಾನದಿಂದಲೇ ಮೋಕ್ಷವೆನ್ನುವ ಅರ್ಥವನ್ನು, ವೇದರಾಟ್=ವೇದವ್ಯಾಸರು, ಸ್ವಯಮೇವ = ತಾನೇ ಸಾಕ್ಷಾತ್ತಾಗಿಯೇ (ಅರ್ಥತಃ ಅಲ್ಲ.) ಆಹ =ಹೇಳಿರುವರು. (ಇಷ್ಟರವರೆಗೆ ಸೂತ್ರಕಾರರಿಂದ ಪೂರ್ವಪಕ್ಷಿತಗಳಾದ ಮತಗಳನ್ನೂ ನಿರಾಕರಿಸಿ ಈಗ ಸೂತ್ರಗಳಿಗೆ ಯಾವ ವೃತ್ತಿಕಾರರು ಬೇರೆ ಪ್ರಕಾರ ಅರ್ಥವನ್ನು ಹೇಳುವರೋ ಅವರ ಮತಗಳನ್ನು ನಿರಾಕರಿಸುತ್ತಾ ಸಮುಚ್ಚಯನಿಯಮವಾದಿಗಳ ಮತವನ್ನು ನಿರಾಕರಿಸುತ್ತಾರೆ.) ಕೇವಲ ಜ್ಞಾನದಿಂದ ಸಂಸಾರನಿವೃತ್ತಿ ಮಾತ್ರವಾಗುತ್ತದೆ. ಆನಂದವೃದ್ಧಿಯಾದರೂ ಕರ್ಮ ಸಹಕೃತವಾದ ಜ್ಞಾನದಿಂದ ಎಂದು ವೇದವ್ಯಾಸರ ಸಿದ್ಧಾಂತವು. ಆದ ಕಾರಣ ಜ್ಞಾನಕರ್ಮಗಳಿಂದ ಮೋಕ್ಷವಾಗುತ್ತದೆ ಎಂದು ಹೇಳುತ್ತಾರೆ ಎಂದು ಅನುವಾದ ಮಾಡಿ, ಕರ್ಮವಿನಾ=

ಕರ್ಮವನ್ನು ಹೊರತು, ಜ್ಞಾನೇನ=ಕೇವಲ ಜ್ಞಾನದಿಂದ, ಮೋಕ್ಷಃ=ಮೋಕ್ಷವು, ನ ಸ್ಯಾತ್= ಆಗಲಾರದು, (ಮತ್ತೆ ಕರ್ಮಸಹಿತವಾದ ಜ್ಞಾನದಿಂದಲೇ) (ಎಂದು ಅನುವಾದಮಾಡಿದ್ದು ಅಂತೂ ಮೋಕ್ಷಕ್ಕೇನೇ ವೃತ್ತಿಕಾರಾದಿಗಳು ಜ್ಞಾನಕರ್ಮ ಸಮುಚ್ಚಯ ಸಾಧ್ಯತ್ವವನ್ನು ಹೇಳುತ್ತಾರೆ ) ಇತ್ಯಪಿ=ಎನ್ನುವ ಈ ಮತವನ್ನೂ ಕೂಡ, ಸೈವ=ಸೂತ್ರಗೃಹೀತವೇ ಆದ, ನಾನ್ಯಃಪಂಥಾ ಇತಿ ಶ್ರುತಿಃ=ನಾನ್ಯಃಪಂಥಾ ಎನ್ನುವ ಶ್ರುತಿಯು, ಸಾದರಂ=ಆದರಪೂರ್ವಕವಾಗಿ, ಸ್ಪಷ್ಟವಾಗಿ, ನಿವಾರಯತಿ=ನಿರಾಕರಿಸುತ್ತದೆ. ('ತಮೇವಂವಿದಿತ್ವಾ' ಎನ್ನುವುದರಿಂದ ಜ್ಞಾನಮಾತ್ರಕ್ಕೆ ಮೋಕ್ಷಸಾಧನತ್ವವನ್ನು ಹೇಳಿ ಪುನಃ 'ನಾನ್ಯಃಪಂಥಾ' ಎಂದು ಹೇಳಿದರಿಂದ ಆದರವು ಅವಗತ ವಾಗುತ್ತದೆ. ಅಂತೂ ಮೋಕ್ಷಕ್ಕೆ ನಿಯಮದಿಂದ ಜ್ಞಾನಕರ್ಮಗಳ ಸಮುಚ್ಚಯ ಸಾಧ್ಯತ್ವ ವಿಷಯದಲ್ಲಿ ಯಾವ ಪ್ರಮಾಣವೂ ನಿರವಕಾಶವಾದುದು ಇಲ್ಲ) ॥ ೧೮೧ ॥

ಪರಮೋಕ್ಷ ಅಪರಮೋಕ್ಷ ಎನ್ನುವ ಭೇದದಿಂದ ಮೋಕ್ಷವು ಎರಡುವಿಧವು. ಅದರಲ್ಲಿ ವೈಕುಂಠ ಸತ್ಯಲೋಕಾದಿ ಪ್ರಾಪ್ತಿರೂಪವಾದುದು ಅಪರಮುಕ್ತಿಯು. ಅವಿದ್ಯಾನಿವೃತ್ತಿಯಾಗಿ ಅದ್ವೈತ ಬ್ರಹ್ಮಾನಸ್ಥಾನರೂಪವಾದುದು ಪರಮುಕ್ತಿಯು. ಪ್ರತೀಕಾದಿ ವಿಷಯಕವಾದ ಅನ್ಯ ಥೋಪಾಸನೆಯು ಅಪರಮುಕ್ತಿಗೆ ಸಾಧನವಾದುದು. ಪರಸಾಧನವು ಮೋಕ್ಷಕ್ಕೆ ಏಕತ್ವಜ್ಞಾ ನವು. ಎಂದು ಮಾಯಾವಾದಿಗಳು ಹೇಳುತ್ತಾರೆ. ಅದರಲ್ಲಿ ಅನ್ಯಥೋಪಾಸನೆಗೆ ವೈಕುಂಠಾದಿ ಪ್ರಾಪ್ತಿ ಸಾಧನತ್ವವನ್ನು ನಿರಾಕರಿಸುತ್ತಾರೆ —

**ಮೂ ॥ ಅನ್ಯಥೋಪಾಸನಮಪಿ ತಮೇವಮಿತಿ ವಾದಿನೀ ॥ ೧೮೨ ॥**
**ನಿವಾರಯತ್ಯಾದರೇಣ ನ ಪ್ರತೀಕ ಇತಿ ಪ್ರಭುಃ ।**
**ಅಂಧಂತಮಃ ಪ್ರವಿಶಂತಿ ಯೇ ತ್ವವಿದ್ಯಾಮುಪಾಸತೇ ॥ ೧೮೩ ॥**
**ಇತಿ ಶ್ರುತಿವಿರೋಧಾಚ್ಚ ನಾನ್ಯಥೋಪಾಸನಂ ಭವೇತ್ ।**
**ನ ಚಾಪ್ಯೇಕತ್ವವಿಜ್ಞಾನಾದುಕ್ತನ್ಯಾಯೇನ ಮುಚ್ಯತೇ ॥ ೧೮೪ ॥**

ಅ ॥ (ತಮೇವಂ ವಿದ್ವಾನ್) ತಂ=ಆ ಮನುಷ್ಯನನ್ನು, ಏವಂ=ಯಥಾಸ್ಥಿತವಾದ ಪ್ರಕಾರದಿಂದಲೇ (ತಿಳಿದವನು) ಅವಿದ್ಯಮಾನ ಧರ್ಮದಿಂದ ಅಲ್ಲ ಎಂದು, ಇತಿ ವಾದಿನೀ=ಹೀಗೆ ಯಥಾರ್ಥ ಜ್ಞಾನಕ್ಕೇನೇ ಮೋಕ್ಷಸಾಧನತ್ವವನ್ನು ಹೇಳತಕ್ಕ ಶ್ರುತಿಯು, ಅನ್ಯಥೋಪಾಸನ ಮಪಿ=ಅವಿದ್ಯಮಾನ ಧರ್ಮದಿಂದ ಉಪಾಸನವನ್ನೂ ಕೂಡ, (ಪುರುಷಾರ್ಥಸಾಧನವಲ್ಲವೆಂದು) ಆದರೇಣ=ವಿಶ್ವಾಸದಿಂದ, (ತಾತ್ಪರ್ಯದಿಂದ) ನಿವಾರಯತಿ=ತಡೆಯುತ್ತದೆ. (ಈ ಶ್ರುತಿಯು ಪರಮೋಕ್ಷವಿಷಯವಾದುದು, ಆಗಲಿ, ಅನ್ಯಥೋಪಾಸನೆಯಿಂದ ಅವರ ಪುರುಷಾರ್ಥವು ಆಗು ವುದು ಎಂದರೆ— ) ಪ್ರಭುಃ=ವೇದವ್ಯಾಸರು, ಪ್ರತೀಕೇ=ಪ್ರತಿಮೆಯಲ್ಲಿ (ಬ್ರಹ್ಮಾಭೇದಬುದ್ಧಿಯು ಅಂದರೆ ಪ್ರತಿಮೆಯೇ ಬ್ರಹ್ಮನು ಎನ್ನುವ ಮಿಥ್ಯಾ ದೃಷ್ಟಿಯು,) ನ = ಮಾಡತಕ್ಕದ್ದಲ್ಲ. ಇತಿ=ಹೀಗೆ, ('ನ ಪ್ರತೀಕೇ ನ ಹಿ ಸಃ' ಎಂದು ಸೂತ್ರದಿಂದ ಅನ್ಯಥೋಪಾಸನೆಗೆ ಸರ್ವಥಾಪಿ ಅಕರ್ತವ್ಯತ್ವವನ್ನು ಹೇಳುವರು. ಆದ ಕಾರಣ ಅನ್ಯಥೋಪಾಸನೆಯು ಆ ಪುರುಷಾರ್ಥ ಲೇಶಕ್ಕೂ ಕಾರಣವಾಗುವುದಿಲ್ಲ.) (ಸೂತ್ರಕ್ಕೆ ಅರ್ಥಾಂತರವನ್ನು ಹೇಳುವೆನೆಂದು ಹೇಳುವವ ನನ್ನೂ ಕುರಿತು ಶ್ರುತಿವಿರೋಧವನ್ನು ಹೇಳುತ್ತಾರೆ.) ಯೇ ತು=ಯಾರು, ಅವಿದ್ಯಾಂ=ಅವಿದ್ಯ ಮಾನ ಧರ್ಮವನ್ನು, ಉಪಾಸತೇ=ಉಪಾಸನೆಗೆ ಮಾಡುತ್ತಾರೋ, ಅವರು ಅಂಧಂತಮಃ= ಅಂಧಂತಮಸ್ಸನ್ನು, ಪ್ರವಿಶಂತಿ=ಪ್ರವೇಶ ಮಾಡುತ್ತಾರೆ. ಇತಿ=ಹೀಗೆ, ಶ್ರುತಿವಿರೋಧಾಚ್ಚ=

ಶ್ರುತಿ ವಿರೋಧವಿದ್ದುದರಿಂದಲೂ ಕೂಡ, ಅನ್ಯಥೋಪಾಸನಂ=ಅಯಥಾರ್ಥೋಪಾಸನೆಯು, (ಪುರುಷಾರ್ಥಸಾಧನವು) ನ ಭವೇತ್=ಆಗಲಾರದು. (ಈಗ ಏಕತ್ವ ಜ್ಞಾನಕ್ಕೆ ಪರಮೋಕ್ಷ ಸಾಧನತ್ವವನ್ನು ನಿರಾಕರಿಸುತ್ತಾರೆ.) ಏಕತ್ವವಿಜ್ಞಾನಾದಪಿ = ಏಕತ್ವಜ್ಞಾನದೆಶೆಯಿಂದಲೂ ಕೂಡ, (ಪುರುಷನು) ನ ಮುಚ್ಯತೇ = ಸಂಸಾರದಿಂದ ಬಿಡುಗಡೆಯನ್ನು ಹೊಂದುವುದಿಲ್ಲ. (ಏಕೆಂದರೆ—) ಉಕ್ತನ್ಯಾಯೇನ = ಹಿಂದೆಹೇಳಿದ ನ್ಯಾಯದಿಂದ. (ಅಂದರೆ 'ತಮೇವಂ ವಿದ್ವಾನ್' ' ಎಂದು ಸಹಸ್ರ ಶಿರಸ್ಸ್ವ ಮೊದಲಾದ ಮಹಾಮಹಿಮೆಗಳಿಂದ ಕೂಡಿದ ಶ್ರೀ ಹರಿಯ ಜ್ಞಾನವೇ ಮುಕ್ತಿಗೆ ಸಾಧನವೆಂದು ಶ್ರುತಿಯು ಹೇಳಿ 'ನಾನ್ಯಃ ಪಂಥಾ' ಎಂದು ಐಕ್ಯಜ್ಞಾನಾದಿ ಗಳು ಸಾಧನಾಂತರವಲ್ಲವೆಂದು ಹೇಳುತ್ತವೆ )

ತಾ || ಸ. ರ. ವಿ. (1) ಯಾವ ಕಾರಣದೆಶೆಯಿಂದ ಇತರರಿಂದ ಶ್ರೀ ಹರಿಗೆ ಅಭೇದ ಜ್ಞಾನವು ಅನರ್ಥಕಾರಣವಾಗಿದೆಯೋ, ಆದಕಾರಣ ಜೀವನಿಂದ ಅಭೇದಜ್ಞಾನವೂ ಕೂಡ ಅನರ್ಥ ಕಾರಣವೇ ಆಗಿದೆ. ಮುಕ್ತಿಸಾಧನವಲ್ಲ, ಜೀವನಿಗೆ ಈ ಸರ್ವೇಶ್ವರನಿಂದ ಮುಕ್ತಿಯಲ್ಲಿಯೂ ಕೂಡ ಭೇದವೇ ಸಾಧಿತವಾಗಿದೆ. || ೧೬೨ || ೧೬೩ || ೧೬೪ ||

ಸ. ರ. ವಿ. ಹಿಂದೆಹೇಳಿದಪ್ರಕಾರ ಭಗವದುಪಾಸನೆ ಹೊರತು ಮುಕ್ತಿಗೆ ಬೇರೆಸಾಧನ ವಿಲ್ಲವೆಂದು ತರ್ಕದಿಂದಲೂ ಸದಾಗಮಗಳಿಂದಲೂ ನಿಶ್ಚಯಿಸಿ ಶ್ರೀ ಹರಿಯ ಉಪಾಸನೆಯನ್ನೇ ಮಾಡಬೇಕು. ಉಪಾಸನೆಯಾದರೂ 'ಆತ್ಮೇತ್ಯೇವೋಪಾಸೀತ' ಇತ್ಯಾದಿ ಶ್ರುತಿವಿಹಿತವಾ ಗಿದೆ. ಅದರಲ್ಲಿ ಎಂತಹ ಆತ್ಮನನ್ನು ಉಪಾಸನೆಮಾಡಬೇಕು ಎಂದಾಕಾಂಕ್ಷಿತಗಳಾದ ಗುಣ ಗಳನ್ನು ಪ್ರತಿಪಾದಿಸತಕ್ಕದು 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿರೂಪದಿಂದ ಶ್ರುತ ವಾಗಿದೆ. ಆದಕಾರಣ ಯಾವನು ಆಯಾವ ಶಾಖೆಗಳಲ್ಲಿ ಹೇಳಲ್ಪಟ್ಟ ವಿಶಿಷ್ಟಗಳಾದ ಆನಂದ ಮೊದಲಾದ ಎಷ್ಟು ಗುಣಗಳನ್ನು ಉಪಸಂಹಾರಮಾಡಿ ಧ್ಯಾನಿಸಲಿಕ್ಕೆ ಯೋಗ್ಯನೋ ಆತನು ಅಷ್ಟು ಗುಣಗಳಿಂದಲೇ ವಿಶಿಷ್ಟನಾದ ವಿಷ್ಣುವನ್ನು ಉಪಾಸನೆಮಾಡಬೇಕು. ಅದರಲ್ಲಿ ಚತುರ್ಮು ಖನು ವಿಶೇಷತಃ ಜ್ಞಾತಗಳಾದ ಸರ್ವಗುಣಗಳಿಂದಲೂ ವಿಶಿಷ್ಟನೆಂದೇ ಶ್ರೀ ಹರಿಯುನ್ನುಪಾಸನೆ ಮಾಡುತ್ತಾನೆ. ಸರಸ್ವತಿಯಾದರೂ ಸಾಮಾನ್ಯವಾಗಿಯೇ ತಿಳಿಯಲ್ಪಟ್ಟ ಕೆಲವು ಕ್ರಿಯಾ ವಿಶೇಷಗಳಿಂದಲೇ ವಿಶಿಷ್ಟನನ್ನಾಗಿ ಶ್ರೀ ಹರಿಯುನ್ನುಪಾಸನೆ ಮಾಡುತ್ತಾಳೆ. ರುದ್ರನಾದರೂ ಸಾಮಾನ್ಯವಾಗಿ ತಿಳಿಯಲ್ಪಟ್ಟ ಕೆಲವು ಗುಣವಿಶೇಷಗಳಿಂದಲೇ ವಿಷ್ಣುವನ್ನು ಉಪಾಸನೆಮಾಡು ತ್ತಾನೆ. ಇಂದ್ರಾದಿಗಳಾದರೂ ಸಾಮಾನ್ಯವಾಗಿಯೇ ತಿಳಿಯಲ್ಪಟ್ಟ ಕೆಲವು ಮೂರ್ತಿವಿಶೇಷ ಗಳಿಂದ ವಿಶಿಷ್ಟನನ್ನಾಗಿ ವಿಷ್ಣುವನ್ನುಪಾಸನೆಮಾಡುತ್ತಾರೆ. ಎಂದುಪಪಾದಿಸುತ್ತಾರೆ. ಅಥವಾ ಅಧಿಕರಣಾರ್ಥವನ್ನುಪಸಂಹಾರಮಾಡುತ್ತಾರೆ—

**ಮೂ || ಇತಿ ಸರ್ವಂ ಪ್ರವಿಜ್ಞಾಯ ಸರ್ವೈಸ್ತರ್ಕೈಃ(ರ್ಕೈ)ಸದಾಗಮೈಃ |**
**ಉಪಾಸೀತ ಹರಿಂ ನಿತ್ಯಂ ಗುಣೈರೇವ ಸ್ವಯೋಗ್ಯತಃ || ೧೬೫ ||**
**ಬ್ರಹ್ಮಾ ಸರ್ವೈರ್ಗುಣೈಶ್ಚೈವ ಕ್ರಿಯಾಸಾಮಾನ್ಯತಶ್ಚ ಗೀಃ |**
**ಗುಣಸಾಮಾನ್ಯತೋ ರುದ್ರೋ ದ್ರವ್ಯಸಾಮಾನ್ಯತಃ ಪರೇ || ೧೬೬ ||**

ಅ || ಇತಿ=ಹೀಗೆ, ಸರ್ವೈಃತರ್ಕೈಃ=ಎಲ್ಲಾ ಸದನುಮಾನಗಳಿಂದ, ಸದಾಗಮೈಃ= ಸದಾಗಮಗಳಿಂದಲೂ, ಸರ್ವಂ=ಎಲ್ಲವನ್ನು, ಪ್ರವಿಜ್ಞಾಯ=ತಿಳಿದು, (ಅಂದರೆ— ಮೋಕ್ಷವು ಇಲ್ಲವೇ ಇಲ್ಲ, ಇದ್ದರೂ ಸಾಧನಾಂತರಗಳಿಂದಲೇ ಸಾಧ್ಯವು ಎನ್ನುವುದು ಅಯುಕ್ತವು. ಮತ್ತೆ

ನಿಷ್ಕಾಮವಾಗಿ ಶ್ರೀ ಹರಿಯ ಉದ್ದೇಶದಿಂದ ಶ್ರುತ್ಯಾದಿಗಳಲ್ಲಿ ವಿಹಿತಗಳಾದ ಕರ್ಮಗಳನ್ನು ಅನುಷ್ಠಾನ ಮಾಡಿದರಿಂದ ಅಂತಃಕರಣವನ್ನು ಶುದ್ಧೀಕರಿಸಿಕೊಂಡವನಿಗೆ ರಾಗ ಮೊದಲಾದ ದೋಷಗಳು ಕ್ಷಯವಾಗೋಣ, ಭಗವದ್ಭಕ್ತಿಯು ಉಂಟಾದ ಮೇಲೆ ಶ್ರವಣ-ಮನನ ನಿದಿಧ್ಯಾಸನಗಳ ಅಭ್ಯಾಸವನ್ನು ಮಾಡಿಕೊಂಡು ಇರುವ ಪರಮಭಾಗವತ ಪುರುಷನಿಗೆ ಭಗವತ್ಸಾಕ್ಷಾತ್ಕಾರವಾಗೋಣ, ಪ್ರಸನ್ನನಾದ ಶ್ರೀ ಹರಿಯು ಪ್ರಾರಬ್ಧಗಳಾದ ಕರ್ಮಗಳನ್ನು ವಿನಾಶಪಡಿಸಿ, ಲೋಕದಲ್ಲಿ ಭಾಗವತ ಧರ್ಮಗಳ ಪ್ರವೃತ್ತಿಗಾಗಿ ಜ್ಞಾನಿಯಾದವನನ್ನು ಕೆಲವು ಕಾಲದಲ್ಲಿ ಇರಿಸುವವನಾಗಿ, ಅದಕ್ಕಾಗಿ ಪ್ರಾರಬ್ಧಕರ್ಮಗಳನ್ನು ಉಳಿಸಿ, ಅದರ ಫಲಭೋಗವಾದ ನಂತರದಲ್ಲಿ ಅವುಗಳನ್ನು ವಿನಾಶಪಡಿಸಿ, ಶ್ರೀ ಹರಿಯು ಪ್ರಕೃತಿಬಂಧದಿಂದ ಬಿಡಿಸುತ್ತಾನೆಂದು) ಎಲ್ಲವನ್ನು ತಿಳಿದು, ಸ್ವಯೋಗ್ಯತಃ=ತನ್ನ ಯೋಗ್ಯತಾನುಸಾರವಾಗಿ (ಅಂದರೆ— ತನಗೆ ಉಪಾಸನೆ ಮಾಡಲಿಕ್ಕೆ ಯೋಗ್ಯಗಳಾದ,) ಗುಣೈರೇವ=ಗುಣಗಳಿಂದಲೇ, ಯುಕ್ತಂ=ಕೂಡಿದ, ಹರಿಂ=ಶ್ರೀ ಹರಿಯನ್ನು, ಉಪಾಸೀತ=ಉಪಾಸನಾ ಮಾಡತಕ್ಕದು. (ಆ ಯೋಗ್ಯತೆಯನ್ನೇ ವಿವರಿಸುತ್ತಾರೆ.) ಬ್ರಹ್ಮೈವ=ಚತುರ್ಮುಖ ಬ್ರಹ್ಮನೇ, ಸರ್ವೈಃ=ವೇದದಲ್ಲಿ ಹೇಳಲ್ಪಟ್ಟ, ಗುಣೈಃ=ಎಲ್ಲಾ ಗುಣಗಳಿಂದಲೂ, ಹರಿಂ=ಹರಿಯನ್ನು, ಉಪಾಸೀತ=ಉಪಾಸನಾ ಮಾಡತಕ್ಕದು. (ಅಂದರೆ— ವೇದದಲ್ಲಿ ಹೇಳಲ್ಪಟ್ಟ ಸಮಸ್ತ ಗುಣಗಳಿಂದಲೂ, ಕ್ರಿಯೆಗಳಿಂದಲೂ ಯುಕ್ತನೆಂದು ಅನಂತಾನಂತ ರೂಪಗಳುಳ್ಳ ಶ್ರೀ ಹರಿಯನ್ನುಪಾಸನೆ ಮಾಡಲಿಕ್ಕೆ ಬ್ರಹ್ಮನೇ ಯೋಗ್ಯನು.) ಗೀಶ್ಚ=ಸರಸ್ವತಿಯಾದರೂ, ಕ್ರಿಯಾಸಾಮಾನ್ಯತಃ=ಕ್ರಿಯಾಸಂಕೋಚದಿಂದ (ಸಕಲ ವೇದಗಳಲ್ಲಿ ಹೇಳಲ್ಪಟ್ಟ ಗುಣಗಳಿಂದ ಯುಕ್ತನಾಗಿದ್ದಾನೆಂದು ಅನಂತರೂಪಗಳುಳ್ಳ ಶ್ರೀ ಹರಿಯನ್ನು ಉಪಾನೆ ಮಾಡತಕ್ಕದ್ದು.) (ಅಂದರೆ— ತ್ರಿವಿಕ್ರಮತ್ವಾದಿ ಕ್ರಿಯೆಗಳನ್ನು ನಿತ್ಯ ವಿಕ್ರಾಂತ್ಯಾದಿಗಳಲ್ಲಿ ಅಂತರ್ಭಾವಿಸುತ್ತಾಳೆ.) ಗುಣಸಾಮಾನ್ಯತಃ=ಗುಣಸಂಕೋಚದಿಂದ, ರುದ್ರಃ=ರುದ್ರನು, (ಸಮಸ್ತರೂಪಗಳನ್ನೂ) ಉಪಾಸನೆಮಾಡುತ್ತಾನೆ. (ಅಂದರೆ— ಗುಣಗಳನ್ನೂ, ಕ್ರಿಯೆಗಳನ್ನೂ ಸಂಕೋಚಮಾಡಿಕೊಂಡು ಉಪಾಸನೆಮಾಡುತ್ತಾನೆ.) ಪರೇ=ಇಂದ್ರಾದಿಗಳು, ದ್ರವ್ಯಸಾಮಾನ್ಯತಃ = ರೂಪಸಂಕೋಚದಿಂದ, ಗುಣಕ್ರಿಯಾ ಸಂಕೋಚದಿಂದಲೂ, ಉಪಾಸನಾ ಮಾಡುತ್ತಾರೆ ॥ ೮೫ ॥ ೮೬ ॥ ಅಧಿ. ॥ ೨೯ ॥

**ವಿದ್ಯಾಧಿಕರಣವು ಸಮಾಪ್ತವಾಯಿತು.**

---

# ಸಮಾನಾಧಿಕರಣವು.

(1) '**ಇತಿ ಸರ್ವಂ ಪ್ರವಿಜ್ಞಾಯ**' ಇತ್ಯಾದಿ ಮೂಲದಿಂದಲೇ '**ಸಮಾನ ಏವಂ ಚಾಭೇದಾತ್**' ಈಶಧರ್ಮಗಳಿಗೆ ಅಪೂರ್ವತ್ವವಿದ್ದಾಗ್ಯೂ ಯೋಗ್ಯ ಗುಣವಿಷಯದಲ್ಲಿಯೇ ಉಪಸಂಹಾರಮಾಡಬೇಕು; ಅಯೋಗ್ಯಗುಣವಿಷಯದಲ್ಲಿ ಉಪಸಂಹಾರ ಮಾಡಕೂಡದು, ಎನ್ನುವ ಅಧಿಕರಣದ ತಾತ್ಪರ್ಯವು ಉಕ್ತವಾಯಿತು. (2) ಹಾಗಾದರೆ '**ವಿದ್ಯೈವ ತು ನಿರ್ಧಾರಣಾತ್**' ಎನ್ನುವ ೨೯ನೇ ಅಧಿಕರಣದ ದೆಶೆಯಿಂದ ಮೊದಲೇ ಈ ೧೨ನೇ ಅಧಿಕರಣವನ್ನು ವ್ಯಾಖ್ಯಾನಮಾಡಬೇಕಿತ್ತು. ಆದಕಾರಣ ವ್ಯತ್ಯಾಸದಿಂದ ಏಕೆ ವ್ಯಾಖ್ಯಾನಮಾಡಿರುವರು ಎಂದರೆ— ಪ್ರಕರಣವು ಶುದ್ಧವಾದರೆ ಪ್ರಮೇಯವು ಸುಖದಿಂದ ತಿಳಿಯಲು ಶಕ್ಯವಾಗುತ್ತದೆ. ಎಂದಾದಕಾರಣ ಕ್ರಮಭಂಗವು. ಹೇಗೆಂದರೆ— ಉಪಾಸನಾಸ್ವರೂಪವು ನಿಶ್ಚಿತವಾಗದಿದ್ದರೆ

ಯಾವವಿಚಾರವೂ ಅವಕಾಶವನ್ನು ಹೊಂದುವುದಿಲ್ಲ. ಆದುದರಿಂದ ಅದರ ಸ್ವರೂಪವನ್ನು ಆದಿಯಲ್ಲಿ ತೋರಿಸಿರುವರು. ಆದಕಾರಣ ಆ ಉಪಾಸನಾಸ್ವರೂಪಕ್ಕೆ ಕರ್ತವ್ಯತ್ವವು ಸಮರ್ಥಿತವಾಗಿದೆ. ಅನಂತರದಲ್ಲಿ ಅದರ ಇತಿ ಕರ್ತವ್ಯತ್ವವನ್ನು ವಿಚಾರಮಾಡಿದರೆ ಯೋಗ್ಯತಾದಿ ವಿಚಾರವು ಆವಶ್ಯಕವು— ॥ ೮೫ ॥ ೮೬ ॥ ಅಧಿ. ॥ ೧೨ ॥

**ಸಮಾನಾಧಿಕರಣವು ಸಮಾಪ್ತವಾಯಿತು.**

---

# ಯಾವದಧಿಕರಣವು.

## ' ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ ಓಂ' ॥ಸೂ.೩೩॥

**(ಸೂತ್ರಾರ್ಥವು ಮೊದಲೇ ಉಕ್ತವಾಗಿದೆ.)**

**ಸ. ರ ವಿ—** (1) ಬ್ರಹ್ಮ-ರುದ್ರ-ಇಂದ್ರಾದಿ ದೇವತೆಗಳಿಗೆ ಭಗವದುಪಾಸನಾದಿಗಳಲ್ಲಿ ತಾರತಮ್ಯವೂ, ಅಧಿಕಾರಿತಾರತಮ್ಯಪ್ರಯುಕ್ತ ಸಾಧನತಾರತಮ್ಯವೂ, ಮುಕ್ತಿಯಲ್ಲಿ ಆನಂದ ತಾರತಮ್ಯವಿಶೇಷವೂ, ಹಾಗೆಯೇ ಬ್ರಹ್ಮಾದಿಗಳಿಗೆ ಜ್ಞಾನಾದಿಗುಣತಾರತಮ್ಯವೂ ಇದ್ದೇ ಇದೆ. (2) ಪರಬ್ರಹ್ಮನಲ್ಲಿಯೇ ಆಸಕ್ತವಾದ ಮನಸ್ಸುಳ್ಳ ಆ ಮುಕ್ತರಿಗೆ ಪರಮಾತ್ಮನ ಗುಣೋತ್ಕರ್ಷದಿಂದ ಸಂತಾಪಾದಿಗಳನ್ನು ಲೌಕಿಕರಂತೆ ಆಶಂಕಿಸಕೂಡದು. ಅವಿದ್ಯೆ ಮೊದಲಾದ ಸಕಲ ದೋಷಗಳಿಂದಲೂ ವಿರಹಿತರಾಗಿರುತ್ತಾರೆ. ಆದಕಾರಣ ಸಚ್ಛಿಷ್ಯನು ಗುರುಪ್ರಸಾದದಿಂದ ವಿದ್ಯಾದಿಗುಣಗಳನ್ನು ಸ್ವೀಕರಿಸಿರುವುದರಿಂದ ಹೇಗೆ ಗುರುಗಳ ಮೇಲೆ ಮಾತ್ಸರ್ಯವನ್ನು ಮಾಡುವುದಿಲ್ಲವೋ, ಹೀಗೆಯೇ ಮುಕ್ತಿಯಲ್ಲಿಯೂ ಕೂಡ ಉತ್ತಮರ ಪ್ರಸಾದದ ಅಧೀನವಾದ ಗುಣಗಳುಳ್ಳ ಉತ್ತಮರ ದಾಸಭೂತರಾದ ಅಧಮರಾದರೂ ಉತ್ತಮರ ಮೇಲೆ ಸ್ಪರ್ಧೆಯನ್ನು ಮಾಡುವುದಿಲ್ಲ. ಎಂದು ನಿರೂಪಿಸುತ್ತಾರೆ.

ಇದನ್ನು ಸ್ಪಷ್ಟವಾಗಿ ವ್ಯಾಖ್ಯಾನಮಾಡುತ್ತಾರೆ—

**ಮೂ ॥ ಅಧಿಕಾರವಿಶೇಷೇಣ ಭಕ್ತಿಜ್ಞಾನಸುಖಾದಿಭಿಃ ।**
**ವಿಶೇಷೋ ದೇವತಾದೀನಾಂ ಮೋಕ್ಷೇ ಚೈವ ವಿಶೇಷತಃ ॥ ೧೮೭ ॥**

**ಅ ॥** ಅಧಿಕಾರವಿಶೇಷೇಣ = ಯೋಗ್ಯತಾವಿಶೇಷದಿಂದ, ಭಕ್ತಿಜ್ಞಾನಸುಖಾದಿಭಿಃ = ಭಕ್ತಿ-ಜ್ಞಾನ-ಸುಖ ಮೊದಲಾದ ಗುಣಗಳಿಂದ, ದೇವತಾದೀನಾಂ = ದೇವತೆಗಳೇ ಮೊದಲಾದವರಿಗೆ, (ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ) ವಿಶೇಷಃ = ವಿಶೇಷವಿದೆ. (ಹಾಗಾದರೆ ಮುಕ್ತೌ ಎಂದು ಹೇಳಲು ಕಾರಣವೇನೆಂದರೆ) ವಿಶೇಷತಸ್ತು = ವಿಶೇಷವಾಗಿ ಆದರೂ, ಮೋಕ್ಷೇ ಏವ = ಮೋಕ್ಷದಲ್ಲಿಯೇ. (ಅಂದರೆ— ಸಂಸಾರದಲ್ಲಿ ವಿಕ್ಷೇಪವಿದ್ದಪ್ರಯುಕ್ತ ಸ್ವಲ್ಪ ಮಟ್ಟಿಗೆ ಯೋಗ್ಯತಾನುಸಾರಿತ್ವವು ಹೆಚ್ಚುಕಡಿಮೆಯಾಗುವುದು. ಮೋಕ್ಷದಲ್ಲಿ ವಿಕ್ಷೇಪವಿಲ್ಲದಿರುವುದರಿಂದ ಯೋಗ್ಯತಾನುಸಾರವಾಗಿಯೇ ಎನ್ನುವ ನಿಯಮದಿಂದ ಭಕ್ತ್ಯಾದಿಗಳು ಕೂಡುತ್ತವೆ, ಆದಕಾರಣ ಮುಕ್ತೌ ಎಂದು ಹೇಳಿರುವರು) ॥ ೧೮೭ ॥

ಹೀಗಾದರೆ ಮುಕ್ತರಿಗೂ ಪರಸ್ಪರವಾಗಿ ದ್ವೇಷ ಈರ್ಷ್ಯಾದಿಗಳು ಪ್ರಸಕ್ತಗಳಾಗಬೇಕಾಗುವುದರಿಂದ ಮುಕ್ತತ್ವವಿರೋಧವು ಬರಬೇಕಾಗುವುದು, ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಸೂತ್ರವು.

**'ಓಂ ಅಕ್ಷರಧಿಯಾಂ ತ್ವವಿರೋಧಃ ಸಾಮಾನ್ಯತದ್ಭಾವಾಭ್ಯಾಮೌಪಸದವತ್ತದುಕ್ತಂ ಓಂ'** ॥ ಸೂ. ೩೩ ॥

**(ಈ ಸೂತ್ರಾರ್ಥವು ಮೊದಲೇ ಉಕ್ತವಾಗಿದೆ.)**

ಈ ಸೂತ್ರವೂ ಕೂಡ ಭಾಷ್ಯದಲ್ಲಿ ಸ್ಪಷ್ಟವಾಗಿ ವ್ಯಾಖ್ಯಾತವಾಗಲಿಲ್ಲ. 'ದೋಷಾಭಾವಸಾಮ್ಯಾತ್'' ಎನ್ನುವ ಭಾಷ್ಯದಲ್ಲಿ ಸಾಮ್ಯಪದಕ್ಕೆ ಪ್ರಯೋಜನವೂ ಕಾಣುವುದಿಲ್ಲ. 'ಶಿಷ್ಯವತ್' ಎನ್ನುವುದೂ ಅಯುಕ್ತವು. ಏಕೆಂದರೆ— ಕೆಲವುಕಡೆ ಶಿಷ್ಯನಿಗೂ ಕೂಡ ಗುರುಗಳಲ್ಲಿ ದ್ವೇಷಾದಿಗಳು ಕಾಣುತ್ತವೆ. ಆದಕಾರಣ ಸ್ಪಷ್ಟವಾಗಿ ವ್ಯಾಖ್ಯಾನಮಾಡುತ್ತಾರೆ—

**ಮೂ ॥ ನ ತಾವತಾ ವಿರೋಧೋಽಸ್ತಿ ನಿರ್ದೋಷತ್ವಾತ್ಸಮಸ್ತಶಃ ।**
**ಆಭಾಸತ್ವಾತ್ಪರೇಷಾಂ ತದವರಾಣಾಂ ಚ ಸರ್ವಶಃ ॥ ೧೮೮ ॥**

ಅ ॥ ನಿರ್ದೋಷತ್ವಾತ್ = ಮಾತ್ಸರ್ಯಾದಿ ದೋಷವಿಲ್ಲದಿರುವುದರಿಂದಲೂ, ಸಮಸ್ತಶಃ = ದೋಷಾಭಾವದಿಂದ ಸಾಮ್ಯವಿದ್ದುದರಿಂದಲೂ, ತದವರಾಣಾಂ = ಉತ್ತಮರಿಂದ ಅಧಮರಾದ, ಸರ್ವಶಃ = ಎಲ್ಲರಿಗೂ, ಪರೇಷಾಂ = ಉತ್ತಮರ, ಆಭಾಸತ್ವಾಚ್ಚ = ಆಭಾಸತ್ವ (ಪ್ರತಿಬಿಂಬತ್ವ) ವಿದ್ದುದರಿಂದಲೂ, ತಾವತಾ = ಪರಸ್ಪರವಾಗಿ ತಾರತಮ್ಯವಿರೋಣದರಿಂದ ದ್ವೇಷಾದಿಗಳ ಪ್ರಸಕ್ತಿಯಿಂದ, ವಿರೋಧಃ = ಮುಕ್ತತ್ವಕ್ಕೆ, ವಿರೋಧಃ = ವಿರೋಧವು, ನ ಹಿ = ಇಲ್ಲವಷ್ಟೆ! ॥ ೧೮೮ ॥

ಇದನ್ನೇ ವಿವರಿಸುತ್ತಾ ದೃಷ್ಟಾಂತವನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ ಯತೋಽವರಾಣಾಂ ಸರ್ವೇಽಪಿ ಗುಣಾಃ ಸರ್ವಾಃ ಕ್ರಿಯಾ ಅಪಿ ।**
**ನಿಯಮೇನೈವ ಪೂರ್ವೇಷಾಂ ಸುಪ್ರಸಾದನಿಬಂಧನಾಃ ॥**
**ಅತಃ ಸಚ್ಛಿಷ್ಯವತ್ತೇಷಾಂ ನೈವೇರ್ಷ್ಯಾದಿಃ ಕಥಂಚನ ॥ ೧೮೯ ॥**

ಅ ॥ ಯತಃ = ಯಾವಕಾರಣದೆಶೆಯಿಂದ, ಅವರಾಣಾಂ = ನಿಕೃಷ್ಟರಾದವರ, ಸರ್ವೇಽಪಿ ಗುಣಾಃ = ಎಲ್ಲಾ ಗುಣಗಳೂ, ಸರ್ವಾಃಕ್ರಿಯಾ ಅಪಿ = ಎಲ್ಲಾ ಕ್ರಿಯೆಗಳೂ ಕೂಡ, ನಿಯಮೇನೈವ = ನಿಯಮದಿಂದಲೇ, ಪೂರ್ವೇಷಾಂ = ಮುಂಚಿನವರ, ಸುಪ್ರಸಾದನಿಬಂಧನಾಃ = ಶೋಭನಪ್ರಸಾದವೇ ಕಾರಣವಾಗಿವುಳ್ಳವುಗಳೋ, ಅತಃ = ಆದಕಾರಣ, ಸಚ್ಛಿಷ್ಯವತ್ = (ಗುರುಗಳಲ್ಲಿ ನಿರ್ದುಷ್ಟನಾದ ಅಂದರೆ— ಮಾತ್ಸರ್ಯಾದಿಗಳು ಇಲ್ಲದಿರುವ) ಶಿಷ್ಯನಂತೆಯೇ, ತೇಷಾಂ = ಮುಕ್ತರಿಗೆ, ಕಥಂಚನ = ಯಾವಪ್ರಕಾರದಿಂದಲೂ, ಈರ್ಷ್ಯಾದಿಃ = ಮಾತ್ಸರ್ಯಮೊದಲಾದುದು, ನೈವ = ಇಲ್ಲವೇ ಇಲ್ಲ ॥ ೧೮೯ ॥

(1) ಚಿರಂತನ ವೃತ್ತಿಕಾರರಾದರೂ 'ಯಾವದಧಿಕಾರಂ' 'ಅಕ್ಷರಧಿಯಾಂ' ಎನ್ನುವ ಎರಡು ಸೂತ್ರಗಳನ್ನು ಬೇರೆಪ್ರಕಾರ ವ್ಯಾಖ್ಯಾನಮಾಡುತ್ತಾರೆ. ಜ್ಞಾನಿಗಳಿಗೆ ಜ್ಞಾನವು ಹುಟ್ಟಿದೊಡನೆಯೇ ಮುಕ್ತಿಯೋ ಅಲ್ಲವೋ ಎಂದು ಸಂಶಯವು ಬಂದರೆ— ಜ್ಞಾನವು ಹುಟ್ಟಿದೊಡನೆಯೇ ಮುಕ್ತಿಯು ಎಂದು ಪೂರ್ವಪಕ್ಷವು ಬರುತ್ತಿರಲು ಈ ಸೂತ್ರವು ಹೇಳಲ್ಪಡುತ್ತದೆ. ಪರಮೇಶ್ವರನಿಂದ ಕೊಡಲ್ಪಟ್ಟ ಅಧಿಕಾರದಲ್ಲಿ ಇರತಕ್ಕ ಜ್ಞಾನಿಗಳಾದ ದೇವಾದಿಗಳಿಗೂ ಅಧಿಕಾರವಿರುವ ತನಕ ಸಂಸಾರದಲ್ಲಿ ಅವಸ್ಥಿತಿಯು. ಆಗಲೇ ಮುಕ್ತಿಯು ಅಲ್ಲ. ಹಾಗೆಯೇ ಶ್ರುತ್ಯಾದಿಗಳಲ್ಲಿ ಕೇಳದೆ. ಸಾಧನ ಸಂಪತ್ತು ಇದ್ದರೂ ಮೋಕ್ಷವಾಗದೆ ಇದ್ದರೆ ಆಗ ಅವರಿಗೆ ಯಾವಾಗಲೂ ಮೋಕ್ಷವು ಆಗದೆ ಹೋಗುವುದು, ಎನ್ನುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ 'ಅಕ್ಷರಧಿಯಾಂ' ಎನ್ನುವ ಸೂತ್ರವು. ಬ್ರಹ್ಮಜ್ಞಾನಿಗಳಿಗೆ ಮೋಕ್ಷಾಭಾವರೂಪವಾದ ವಿರೋಧವಿಲ್ಲ. ಸಾಮಾನ್ಯ ವಿಶೇಷಭಾವವಿದ್ದುದರಿಂದ. (2)ಯದ್ಯಪಿ **'ಕ್ಷೀಯಂತೇ ಚಾಸ್ಯ ಕರ್ಮಾಣಿ'** ಎಂದು ಸಾಮಾನ್ಯವಾಗಿ ಎಲ್ಲಾ ಕರ್ಮಗಳಿಗೂ ಜ್ಞಾನದಿಂದ ನಾಶವು ಹೇಳಲ್ಪಟ್ಟದೆ. ಆದಾಗ್ಯೂ **'ತಸ್ಯ ತಾವದೇವ ಚಿರಂ'** ಎಂದು ವಿಶೇಷವಚನವಿದ್ದುದರಿಂದ ಪ್ರಾರಬ್ಧ ಕರ್ಮಗಳು ಮಾತ್ರ ಉಳಿಯುತ್ತವೆ. ಅಂದರೆ— ಅಪ್ರಾರಬ್ಧ ಕರ್ಮಗಳು ನಿವೃತ್ತಗಳಾಗುತ್ತವೆ. ಪ್ರಾರಬ್ಧಗಳಿಗೆ ಭೋಗದಿಂದಲೇ ಕ್ಷಯವು. ಆದಕಾರಣ ಪ್ರಾರಬ್ಧಫಲಭೂತವಾದ ಅಧಿಕಾರದಲ್ಲಿದ್ದು ಪ್ರಾರಬ್ಧ ಕರ್ಮಗಳಿಗೆ ನಾಶವಾದಮೇಲೆ ಮೋಕ್ಷವನ್ನು ಹೊಂದುತ್ತಾರೆ. (3) ಮಾಯಾವಾದಿಗಳಾದರೂ ಪ್ರಥಮಸೂತ್ರಕ್ಕೇನೇ ಇವೆಲ್ಲಾ ಅರ್ಥವು ಎಂದು ಹೇಳುತ್ತಾ 'ಅಕ್ಷರಧಿಯಾಂ' ಎನ್ನುವುದು ಅಧಿಕರಣಾಂತರವೆಂದು ವ್ಯಾಖ್ಯಾನಮಾಡುತ್ತಾರೆ. ಇದನ್ನು ನಿರಾಕರಿಸುತ್ತಾರೆ—

**ಮೂ ॥ ನ ಚ ಸಂಸಾರಿದೇವಾನಾಂ ಕಾಲೇಯತ್ತಾಪರೇ ಇಮೇ ॥ ೧೯೦ ॥**

**ಸೂತ್ರೇ ಹ್ಯಾರಬ್ಧಮಾತ್ರಸ್ಯ ಭೋಗೇನೈವ ಕ್ಷಯೋ ಧ್ರುವಃ ।**

**ಅನಾರಬ್ಧಸ್ಯ (ಕಾರ್ಯೇ) ಭೋಗೇನ ತ್ವಿತರೇ ಇತಿ ಚೋದಿತಃ ॥**

**ಪೌನರುಕ್ತ್ಯೇನ ತೇನೈತೇ ಉಕ್ತಾರ್ಥೇ ಇತಿ ನಿಶ್ಚಯಃ ॥ ೧೯೧ ॥**

ಅ ॥ ಸಂಸಾರಿದೇವಾನಾಂ = ಸಂಸಾರಿಗಳಾದ ದೇವತೆಗಳಿಗೆ, ಕಾಲೇಯತ್ತಾಪರೇ= ಸಂಸಾರದ ಅವಸ್ಥಿತಿಗೆ ಪ್ರಾರಬ್ಧಕರ್ಮದ ಫಲಭೋಗದ ಅವಸಾನರೂಪವಾದ ಕಾಲಮರ್ಯಾದೆಯು ಉದ್ದೇಶ್ಯವಾಗಿವುಳ್ಳ (ಅಂದರೆ— ಪ್ರತಿಪಾದ್ಯವಾಗಿವುಳ್ಳ)ವುಗಳೂ, ಇಮೇ ಸೂತ್ರೇ= ಈ ಸೂತ್ರಗಳು, ನ ಚ=ಅಲ್ಲ. (ಏಕೆ ಅಲ್ಲವೆಂದರೆ—) ಹಿ = ಯಾವಕಾರಣದಿಂದ, ಅನಾರಬ್ಧಸ್ಯ = ಪ್ರಾರಬ್ಧವ್ಯತಿರಿಕ್ತವಾದ ಕರ್ಮಕ್ಕೆ, ಜ್ಞಾನೇನೈವ = ಜ್ಞಾನದಿಂದಲೇ, ಕ್ಷಯಃ = ನಾಶವು. ಆರಬ್ಧಮಾತ್ರಸ್ಯ=ಪ್ರಾರಬ್ಧಕ್ಕೆ ಮಾತ್ರ, ಭೋಗೇನೈವ=ಭೋಗದಿಂದಲೇ, ಕ್ಷಯಃ= ನಾಶವು, ಧ್ರುವಃ=ನಿಶ್ಚಯವು. ಇತ್ಯೇಷಃ = ಈ ಅರ್ಥವು, ಅನಾರಬ್ಧಕಾರ್ಯೇ ಭೋಗೇನ ತ್ವಿತರೇ ಇತಿ ಚ=**'ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ'** ಎನ್ನುವ ಸೂತ್ರದಿಂದಲೂ, **'ಭೋಗೇನ ತ್ವಿತರೇ ಕ್ಷಪಯಿತ್ವಾಥ ಸಂಪತ್ಸ್ಯತೇ'** ಎನ್ನುವ ಸೂತ್ರದಿಂದಲೂ, ಉದಿತಃ=ಹೇಳಲ್ಪಟ್ಟದೆ. (ಆದಕಾರಣ ಅಲ್ಲ.) (ಹೀಗೆ ಹೇಳಿದರೂ ಏಕೆ ಇಲ್ಲವೆನ್ನುವ ಆಶಂಕೆಯನ್ನು ಪರಿಹರಿಸುತ್ತಾ ಅಪವ್ಯಾಖ್ಯಾನನಿರಾಸಕ್ಕೆ ಪ್ರಯೋಜನವನ್ನು ಹೇಳುತ್ತಾರೆ.) ತೇನ= ಆ ಸೂತ್ರದಿಂದ, ಪೌನರುಕ್ತ್ಯೇನ = ಪರರ ಪಕ್ಷದಲ್ಲಿ ಪೌನರುಕ್ತ್ಯ ಬರೋಣದರಿಂದ,

ಏತೇ=ಈ ಸೂತ್ರಗಳು, ಉಕ್ತಾರ್ಥೇ=ನಮ್ಮಿಂದ ಹೇಳಲ್ಪಟ್ಟ ಅರ್ಥವುಳ್ಳವುಗಳು, ಇತಿ=ಹೀಗೆ, ನಿಶ್ಚಯಃ=ನಿಶ್ಚಯವು ॥ ೧೯೦ ॥ ೧೯೧ ॥ ಅಧಿ. ೨೦ ॥

**ಯಾವದಧಿಕರಣವು ಸಮಾಪ್ತವಾಯಿತು.**

---

# ಇಯದಾಮನನಾಧಿಕರಣವು.

**'ಓಂ ಇಯದಾಮನನಾತ್ ಓಂ'** ॥ ಸೂ. ೩೩ ॥

**(ಸೂತ್ರಾರ್ಥವು ಮೊದಲೇ ಉಕ್ತವಾಗಿದೆ.)**

ಯಾವ ಜ್ಞಾನಯೋಗ್ಯರಿಗೆ ಮುಕ್ತಿಸಂಸಾರಗಳಲ್ಲಿ ಈ ತಾರತಮ್ಯವು ಸಮರ್ಥಿಸಿಕೊಳ್ಳಲ್ಪಟ್ಟದೋ, ಆ ದಾವ ಛಂದೋಗರ ಉಪನಿಷತ್ತಿನಲ್ಲಿ ನಾಮವಾಗಾದಿಗಳ ಕ್ರಮದಿಂದ ಪ್ರಾಣಪರ್ಯಂತರಾದವರು ಪ್ರತಿಪಾದಿತರಾಗಿರುತ್ತಾರೆ. ಆದರಲ್ಲಿ ೧ ಪ್ರಾಣನೇ ಅಧಿಕಾರಿಗಳ ತಾರತಮ್ಯಕ್ಕೆ ಅವಧಿಯೋ ಅಥವಾ ಮತ್ತೊಬ್ಬನೂ ಇದ್ದಾನೋ, ಎಂದು ಸಂಶಯವು ಬಂದರೆ— ಇಷ್ಟೇ ದೇವತಾತಾರತಮ್ಯವು ಎಂದು ಸಿದ್ಧಾಂತಿತವಾಗಿದೆ. ಅದರಲ್ಲಿ ನಾಮಾದಿದೇವತೆಗಳು ಯಾರು? ಹದಿನೈದೇ ದೇವತೆಗಳು ಹೇಗೆ? ಅಧಿಕರೂ ಕೂಡ ಇದ್ದಪ್ರಯುಕ್ತ ಎನ್ನುವ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ ಬೃಹತ್ಸಂಹಿತಾವಚನವನ್ನೇ ಪಠನಮಾಡುತ್ತಾರೆ —

**ಮೂ ॥ ಉಷಾ ಸ್ವಾಹಾ ಚ ಪರ್ಜನ್ಯೋ ಮಿತ್ರೋಽಗ್ನಿರ್ವರುಣೋ ವಿಧುಃ ॥ ॥ ೧೯೨ ॥**

**ಪ್ರವಹೋಽನಿರುದ್ಧ ಇಂದ್ರೋಮೇ ರುದ್ರೋ ವಾಣೀ ಚ ಮಾರುತಃ ।**
**ಉತ್ತರೋತ್ತರತಸ್ತ್ವೇತೇ ಗುಣೈಃ ಸರ್ವೈಶ್ಚ ಮುಕ್ತಿಗಾಃ ॥ ೧೯೩ ॥**

ಅ ॥ ಉಷಾ=(ಅನಿರುದ್ಧನ ಹೆಂಡತಿಯಲ್ಲ, ಮತ್ತೆ) ಅಶ್ವಿನೀದೇವತೆಗಳ ಹೆಂಡತಿಯಾದ ಉಷಾದೇವಿಯು, ಸ್ವಾಹಾ=ಅಗ್ನಿಯ ಹೆಂಡತಿಯು, ಪರ್ಜನ್ಯಃ=ಪರ್ಜನ್ಯಾಖ್ಯ ಆದಿತ್ಯನು, ಮಿತ್ರಶ್ಚ=ಮಿತ್ರನಾಮಕ ಆದಿತ್ಯನೂ, ಅಗ್ನಿಃ=ಅಗ್ನಿಯು, ವರುಣಃ=ವರುಣನು, ವಿಧುಃ=ಚಂದ್ರನು, ಪ್ರವಹಃ=ಪ್ರವಹಾಖ್ಯವಾಯುವು, ಅನಿರುದ್ಧಃ=ಕಾಮನ ಮಗನು, ಇಂದ್ರೋಮೇ=ಇಂದ್ರನೂ ಪಾರ್ವತಿಯೂ ಇವರಿಬ್ಬರೂ, ರುದ್ರಃ=ರುದ್ರನು, ವಾಣೀ ಚ = ಭಾರತಿಯು, ಮಾರುತಃ=ಮುಖ್ಯಪ್ರಾಣನು, ಏತೇ ಮುಕ್ತಿಗಾಶ್ಚ=ಮುಕ್ತಿಯಲ್ಲಿರತಕ್ಕವರೂ, ಸಂಸಾರದಲ್ಲಿರತಕ್ಕವರೂ ಕೂಡ, ಸರ್ವೈಃ ಗುಣೈಃ=ಎಲ್ಲಾ ಗುಣಗಳಿಂದಲೂ, ಹಿಂದೆ ಹೇಳಿದ ಕ್ರಮದಿಂದಲೇ, ಉತ್ತರೋತ್ತರತಸ್ತು=ಮೇಲೆ ಮೇಲೆಯೇ, ವರ್ತಂತೇ=ಇರುತ್ತಾರೆ ॥ ೧೯೨ ॥ ೧೯೩ ॥

ಅಧಿಕರು ಇರುತ್ತಾರೆ ಎನ್ನುವ ಶಂಕೆಯನ್ನು ನಿರಾಕರಿಸುವುದಕ್ಕಾಗಿ ಇವರ ಸಮಾನಿಕರನ್ನೂ ಮಧ್ಯದಲ್ಲಿರತಕ್ಕವರನ್ನೂ ಹೇಳುತ್ತಾರೆ—

**ಮೂ ॥ ಸೂರ್ಯಧರ್ಮೌ ಯಥಾ ಸೋಮೋ ಮನುರ್ದಕ್ಷೋ ಬೃಹಸ್ಪತಿಃ ।**
**ಶಚೀ ರತಿಶ್ಚಾನಿರುದ ಸಮಾಸ್ತಾರಾ ಚ ಮಿತ್ರವತ್ ॥ ೧೯೪ ॥**

ಸೋಮವಚ್ಛತರೂಪಾ ತು ಪ್ರಸೂತಿರ್ವಹ್ನಿವದ್ವಿರಾಟ್ ।
ಪರ್ಜನ್ಯವದ್ವಾರುಣೀ ಚ ತಥಾ ಸಂಜ್ಞಾ ಚ ರೋಹಿಣೀ ॥ ೧೯೫ ॥
ಧಾಮಿರ್ನಾ ಚ ಮಿತ್ರವತ್ತೈವ ಪ್ರಾವಹೀ ಪರಿಕೀರ್ತಿತಾ ।
ಮಿತ್ರಪರ್ಜನ್ಯಮಧ್ಯಸ್ಥಾವಶ್ವಿನೌ ವಿಘ್ನವಿತ್ತಪೌ ॥ ೧೯೬ ॥
ಭೃಗುರಗ್ನಿಸಮೋ ಮಿತ್ರತನ್ಮಧ್ಯೇ ಬ್ರಹ್ಮಪುತ್ರಕಾಃ ।
ವರುಣಾಗ್ನ್ಯಂತರಾ ತತ್ರ ನಾರದಃ ಪ್ರಾಯ ಇಂದ್ರವತ್ ॥ ೧೯೭ ॥
ಕಾಮಃ ಸೌಪರ್ಣೀ ಚೋಮಾವದ್ವೀಂದ್ರೋ ರುದ್ರವದೀರಿತಃ ।
ನಿರ್ಋತಿರ್ಮಿತ್ರಸದೃಶೋ ವಿಶ್ವಾಮಿತ್ರಃ ಕಸೂನುವತ್ ॥ ೧೯೮ ॥
ವೈವಸ್ವತೋ ಮನುಶ್ಚಾಶ್ವಿಪಶ್ಚಾದನ್ಯೇ ತತೋಽವರಾಃ ।
ಚ್ಯವನೋಽಚಥ್ಯವೈನ್ಯಾಶ್ಚ ಶಶಬಿಂದುಶ್ಚ ಹೈಹಯಃ ॥ ೧೯೯ ॥
ತದ್ವಚ್ಚ ವಿಪ್ರರಾಜನ್ಯವಿಶೇಷೋಽತ್ರಾಪಿ ಕಶ್ಚನ ।
ತದ್ವತ್ಪ್ರಿಯವ್ರತಶ್ಚಾಪಿ ತದನ್ಯಾಃ ಶತದೇವತಾಃ ।
ಪರ್ಜನ್ಯಮಿತ್ರಾಂತರಾಲೇ ತದನ್ಯೇ ತು ತತೋಽವರಾಃ ॥ ೨೦೦ ॥

ಅ ॥ ಯಥಾ=ಹೇಗೆ, ಸೋಮಃ=ಸೋಮನೋ, ತಥಾ=ಹಾಗೆಯೇ, ಸೂರ್ಯಧರ್ಮೌ=ಸೂರ್ಯನು ಯಮನು ಇವರಿಬ್ಬರು, ಮನುಃ=ಸ್ವಾಯಂಭುವ ಮನುವು, ದಕ್ಷಃ=ದಕ್ಷಪ್ರಜಾಪತಿಯು, ಬ್ರಹಸ್ಪತಿಃ=ಬ್ರಹಸ್ಪತಿಯು, ಶಚೀ=ಶಚೀದೇವಿಯು, ರತಿಶ್ಚ=ರತಿ ದೇವಿಯೂ ಕೂಡ, ಇವರು ಐವರು, ಅನಿರುದ್ಧಸಮಾಃ=ಅನಿರುದ್ಧನಿಗೆ ಸಮಾನಿಕರು. ತಾರಾ ಚ=ಬೃಹಸ್ಪತಿಯ ಹೆಂಡತಿಯಾದ ತಾರಾದೇವಿಯಾದರೂ, ಮಿತ್ರವತ್=ಮಿತ್ರಾಖ್ಯ ಆದಿತ್ಯನಿಂದ ಸಮಾನಿಕಳು ಆಗಿರುತ್ತಾಳೆ. ಶತರೂಪಾ ತು=ಸ್ವಾಯಂಭುವನ ಹೆಂಡತಿಯಾದ ಶತರೂಪಾ ಎನ್ನುವವಳು, ಸೋಮವತ್=ಸೋಮನಿಂದ ಸಮಾನಿಕಳು ಆಗಿರುತ್ತಾಳೆ. ಪ್ರಸೂತಿಃ = ದಕ್ಷನ ಹೆಂಡತಿಯು, ವಹ್ನಿವತ್ = ವಹ್ನಿಯಿಂದ ಸಮಾನಿಕಳಾಗಿರುತ್ತಾಳೆ. ವಿರಾಟ್=ಅನಿರುದ್ಧನ ಹೆಂಡತಿಯು, ಪರ್ಜನ್ಯವತ್=ಪರ್ಜನ್ಯನಿಂದ ಸಮಾನಿಕಳಾಗಿರುತ್ತಾಳೆ. ವಾರುಣೀ = ವರುಣನ ಹೆಂಡತಿಯು, ಸಂಜ್ಞಾ=ಸೂರ್ಯನ ಹೆಂಡತಿಯು, ರೋಹಿಣೀ = ಸೋಮನ ಹೆಂಡತಿಯು, ಧಾಮಿರ್ನಾ = ಯಮನ ಹೆಂಡತಿಯು, ತಥಾ ಚ = ಪರ್ಜನ್ಯನಿಂದ ಸಮಾನಿಕರು. ಪ್ರಾವಹೀ ತು = ಪ್ರವಹನ ಹೆಂಡತಿಯಾದರೂ, ಮಿತ್ರವದೇವ = ಮಿತ್ರಾಖ್ಯ ಆದಿತ್ಯನಿಂದ ಸಮಾನಿಕಳೆಂದೇ, ಪರಿಕೀರ್ತಿತಾ = ಹೇಳಲ್ಪಟ್ಟಿರುತ್ತಾಳೆ. ಅಶ್ವಿನೌ = ಅಶ್ವಿನೀ ದೇವತೆಗಳು, ವಿಘ್ನವಿತ್ತಪೌ=ಗಣಪತಿಯೂ, ಕುಬೇರನೂ ಇವರಿಬ್ಬರೂ, ಮಿತ್ರಪರ್ಜನ್ಯ ಮಧ್ಯಸ್ಥೌ = ಮಿತ್ರ ಪರ್ಜನ್ಯರ ಮಧ್ಯದಲ್ಲಿರತಕ್ಕವರು (ಅಂದರೆ— ೨ ಅಶ್ವಿನೀ ದೇವತೆಗಳಿಬ್ಬರು, ೨ ಗಣಪತಿ, ಕುಬೇರ ಇವರು ನಾಲ್ವರು ಪರಸ್ಪರವಾಗಿ ಸಮಾನಿಕರು. ಮಿತ್ರಾಖ್ಯ ಆದಿತ್ಯನ ದೆಶೆಯಿಂದ ಅಧಮರು. ಪರ್ಜನ್ಯನದೆಶೆಯಿಂದ ಉತ್ತಮರು.) ಭೃಗುಃ = ಭೃಗುಋಷಿಯು, ಅಗ್ನಿಸಮಃ=ಅಗ್ನಿಗೆ ಸಮಾನಿಕನು. ಬ್ರಹ್ಮ ಪುತ್ರಕಾಃ=ಬ್ರಹ್ಮನ ಪುತ್ರರಾದ ಮರೀಚ್ಯಾದಿಗಳು, ಮಿತ್ರ ತನ್ಮಧ್ಯೇ=ಮಿತ್ರಾಖ್ಯ ಸೂರ್ಯ, ಅಗ್ನಿ ಇವರ ಮಧ್ಯದಲ್ಲಿ (ಅಂದರೆ— ಪರಸ್ಪರವಾಗಿ ಸಮಾನಿಕರು. ಮಿತ್ರನಿಂದ ಉತ್ತಮರು. ಅಗ್ನಿಯಿಂದ ಅಧಮರು.) ತತ್ರ=ಆ ಬ್ರಹ್ಮಪುತ್ರ ರಲ್ಲಿ, ನಾರದಃ=ನಾರದನು, ವರುಣಾಗ್ನ್ಯಂತರಾ=ವರುಣ, ಅಗ್ನಿ ಇವರ ಮಧ್ಯದಲ್ಲಿ, (ಅಂದರೆ,

ವರುಣನಿಂದ ಅಧಮನು, ಅಗ್ನಿಯಿಂದ ಉತ್ತಮನು. ಪ್ರಾಯಃ = ಪ್ರಾಯಶಃ, ಕಾಮಃ= ಮನ್ಮಥನು, ಇಂದ್ರವತ್=ಇಂದ್ರನಂತೆ, (ಅಂದರೆ— ಸ್ವಲ್ಪ ಕಡಿಮೆಯುವನು.) ಸೌಪರ್ಣೀ ಚ= ಗರುಡನ ಹೆಂಡತಿಯು, ಉಮಾವತ್=ಪಾರ್ವತಿಯಂತೆ. ವೀಂದಃ=ಗರುಡನು, ರುದ್ರವತ್= ರುದ್ರನಂತೆ, ಈರಿತಃ=ಹೇಳಲ್ಪಡುತ್ತಾನೆ. ನಿರ್ಋತಿಃ=ನಿರ್ಋತಿಯು, ಮಿತ್ರಸದೃಶಃ=ಮಿತ್ರಾಖ್ಯ ಸೂರ್ಯನಿಗೆ ಸಮಾನಿಕನು. ವಿಶ್ವಾಮಿತ್ರಃ = ವಿಶ್ವಾಮಿತ್ರಋಷಿಯು, ವೈವಸ್ವತೋ ಮನುಶ್ಚ= ವೈವಸ್ವತ ಮನುವೂ ಕೂಡ, ಕಸೂನುವತ್ = ಬ್ರಹ್ಮ ಪುತ್ರರಾದ ಮರೀಚ್ಯಾದಿಗಳಿಂದ ಸಮಾ ನಿಕನು. ಅನ್ಯೇ=ಸ್ವಾಯಂಭುವ ಮನುವಿನದೆಶೆಯಿಂದಲೂ, ವೈವಸ್ವತ ಮನುವಿನದೆಶೆಯಿಂದಲೂ, ಭಗವದವತಾರವಾದ ತಾಪಸನಿಂದಲೂ, ಇತರರಾದ ಮನುಗಳು. ತತಃ=ವೈವಸ್ವತನಿಂದಲೂ, ಅವರಾಃ=ನಿಕೃಷ್ಟರು. ತೇ=ಅವರು, ಅಶ್ವಿಪಶ್ಚಾತ್=ಅಶ್ವಿನೀ ದೇವತೆಗಳಿಂದ ಮೇಲಿನವರು. (ಅಂದರೆ— ಪರ್ಜನ್ಯನಿಂದ ಉತ್ತಮರು.) ಚ್ಯವನೋಚಥ್ಯವೈನ್ಯಾಶ್ಚ=ಚ್ಯವನನೂ, ಉಚಥ್ಯನೂ, ವೈನ್ಯನೂ ಇವರು, ಶಶಬಿಂದುಶ್ಚ = ಶಶಬಿಂದುವು, ಹೈಹಯಃ = ಹೈಹಯನು, ತದ್ವಚ್ಚ= ಹನ್ನೊಂದು ಮನುಗಳಿಗೆ ಸಮಾನಿಕರು. ಅತ್ರಾಪಿ = ಇವರಲ್ಲಿಯೂ, ಕಶ್ಚನ=ಯಾವುದೋ ಒಂದು, ವಿಪ್ರರಾಜಸ್ಯ ವಿಶೇಷಃ=ವಿಪ್ರತ್ವ, ಕ್ಷತ್ರಿಯತ್ವ ನಿಮಿತ್ತವಾದ ವಿಶೇಷವು ಇದೆ. (ಮುಕ್ತಿ ಯಲ್ಲಿಯೂ ವಿಪ್ರತ್ವಾದಿಗಳು ಇವೆ. ಚ್ಯವನ ಉಚಥ್ಯರು ವಿಪ್ರರು. ಬೇರೆಯುವರು ಕ್ಷತ್ರಿಯರು.) ಪ್ರಿಯವ್ರತೋಽಪಿ=ಪ್ರಿಯವ್ರತನೂ ಕೂಡ ತದ್ವತ್=ಅವರರಾದ ಮನುಗಳಂತೆ. ತದನ್ಯಾಃ= ಹಿಂದೆ ಹೇಳಿದವರಿಂದ ಇತರರಾದ, ಶತದೇವತಾಃ=ನೂರರಲ್ಲಿ ಅಂತರ್ಗತರಾದ, ಸೋಮಪಾನಕ್ಕೆ ಅರ್ಹರಾದ ದೇವತೆಗಳು, ಪರ್ಜನ್ಯಮಿತ್ರಾಂತರಾಲೇ=ಪರ್ಜನ್ಯನೂ, ಮಿತ್ರನೂ ಇವರ ಮಧ್ಯದಲ್ಲಿ (ಅಂದರೆ- ಪರ್ಜನ್ಯನಿಂದ ಉತ್ತಮರು ಮಿತ್ರನಿಂದ ಅಧಮರು, ಅಶ್ವಿನೀ ದೇವತೆಗಳಿಗೆ ಸಮಾನಿಕರು) ತದನ್ಯೇ ತು=ಹಿಂದೆ ಹೇಳಿದ ದೇವತೆಗಳಿಂದ ಇತರರಾದ ದೇವತೆಗಳು, ತತಃ = ಶತಾಂತರ್ಗತ ರಾದ ದೇವತೆಗಳಿಂದ, ಅವರಾಃ=ನಿಕೃಷ್ಟರು. (ಅಂದರೆ— ಅವರನಾದಮನುವಿಗೆ ಸಮಾನಿಕರು.)

**ತಾ ||** **ನ್ಯಾಯಸುಧಾ—** (1) ದಕ್ಷ-ಭೃಗು-ನಾರದರನ್ನು ಪ್ರತ್ಯೇಕವಾಗಿ ಹೇಳಿದರಿಂದ ಬ್ರಹ್ಮನ ಪುತ್ರರಾದ **‘ ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ | ವಸಿಷ್ಠ ಶ್ಚೇತಿ ಸಪ್ತೈವ’** ಈ ಮರೀಚ್ಯಾದಿ ಏಳು ಮಂದಿಯೇ ಮಿತ್ರ ಅಗ್ನಿಗಳ ಮಧ್ಯದಲ್ಲಿ, ಅಂದರೆ ಮಿತ್ರನಿಂದ ಉತ್ತಮರು, ಅಗ್ನಿಯಿಂದ ಅಧಮರು. (2) ೧ ಸ್ವಾರೋಚಿಷಃ, ೨ ಉತ್ತಮಃ ೩ ರೈವತಃ, ೪ ಚಾಕ್ಷುಷಃ, ೫ ಸಾವರ್ಣಿಃ, ೬ ಬ್ರಹ್ಮಸಾವರ್ಣಿಃ, ೭ ರುದ್ರಸಾವರ್ಣಿಃ, ೮ ವೇದ ಸಾವರ್ಣಿಃ, ೯ ಇಂದ್ರಸಾವರ್ಣಿಃ, ೧೦ ದಕ್ಷಸಾವರ್ಣಿಃ, ೧೧ ಧರ್ಮಸಾವರ್ಣಿಃ, ಎಂದು ಹನ್ನೊಂದು ಮನುಗಳು. (3) **‘ ನವ ಕೋಟ್ಯೋ ಹಿ ದೇವಾನಾಂ ತೇಷಾಂ ಮಧ್ಯೇ ಶತಸ್ಯ ತು| ಸೋಮಾಧಿಕಾರಃ’** ಎನ್ನುವ ಪ್ರಮಾಣಾನುಸಾರವಾಗಿ ಸೋಮಪಾಸನಕ್ಕೆ ಯೋಗ್ಯರಾದ ಯಾರು ದೇವತೆಗಳಲ್ಲಿ ಮುಂಚೆ ಹೇಳಿದ ಅಗ್ನಿ-ರುದ್ರ-ಪ್ರಧಾನವಾಯು ಇವರಿಂದ ಇತರರಾದ ವಸುರುದ್ರ-ಮರುತುಗಳ ಸಮೂಹಗಳೂ, ಬೃಹಸ್ಪತಿಯು ಋಭುವು ದ್ಯಾವಾಪೃಥಿವಿಗಳೂ, ಅಶ್ವಿನೀದೇವತೆಗಳೂ, ವಿಶ್ವೇದೇವತೆಗಳೂ, ಮೂರು ಪಿತೃದೇವತೆಗಳು; ಹೀಗೆ ಇವರು ಶತಾಂತ ರ್ಗತರು. **‘ ಪ್ರಧಾನವಾಯುರ್ವಸವೋ ರುದ್ರಾದಿತ್ಯಾ ಮರುದ್ಗಣಾಃ | ಬೃಹಸ್ಪತಿ ಋರ್ಭುರ್ದ್ಯಾವಾಪೃಥಿವ್ಯಾವಶ್ವಿನೌತಥಾ | ವಿಶ್ವೇದೇವಾಶ್ಚ ಪಿತರಃ ಶತಸ್ಥಾ ದೇವತಾ ಮತಾಃ’** ಎಂದು ಹೇಳಲ್ಪಟ್ಟದೆ. ಆದಿತ್ಯರಲ್ಲಿ ವಿಷ್ಣುವು ಸೇರಿಕೊಂಡು ಇದ್ದಾಗ್ಯೂ ಇಲ್ಲಿ ವಿಷ್ಣುವಿನಿಂದ ವ್ಯತಿರಿಕ್ತರಾದ ಹನ್ನೊಂದು ಆದಿತ್ಯರನ್ನೇ ಇಟ್ಟುಕೊಳ್ಳಬೇಕು || ೧೯೪ || ೧೯೫ || || ೧೯೬ || ೧೯೭ || ೧೯೮ || ೧೯೯ || ೨೦೦ ||

ಹಾಗಾದರೆ— ಮಹಾಲಕ್ಷ್ಮಿಯು ಪ್ರಾಣನಿಂದಲೂ ಉತ್ತಮಳು ಇದ್ದಾಳೆ. ಆದಕಾರಣ ಅಧಿಕಾರಿಗಳಲ್ಲಿ ಪ್ರಾಣಪರ್ಯಂತವಾಗಿ ಎನ್ನುವುದು ಹೇಗೆ ಎಂದರೆ—

**ಮೂ ॥ ಏತೇಭ್ಯೋಽಭ್ಯಧಿಕಾ ಶ್ರೀಸ್ತು ಸದಾ ಮುಕ್ತಾ ವಿಶೇಷತಃ ॥ ೨೦೧ ॥**
**ತತ್ಸಮೋ ನಾಸ್ತಿ ಪರಮೋ ಹರಿರೇವ ನ ಚಾಪರಃ ।**
**ಸಂಹಿತಾಯಾಂ ಬೃಹತ್ಯಾಂ ತು ಸ್ವಯಂ ಭಗವತೋದಿತಂ ॥ ೨೦೨ ॥**
**ತದೇತದಖಿಲಂ ಪ್ರಾಣ ಆಹಂಕಾರಿಕ ಏವ ಚ ।**
**ಇಂದ್ರಾದನಂತರೋ [ದೃಷ್ಟಿರಪಿ ಯೋಗ್ಯಾನುಸಾರತಃ] ॥ ೨೦೩ ॥**

**ಅ ॥** (ಯದ್ಯಪಿ) ಶ್ರೀಃ = ಲಕ್ಷ್ಮಿಯು, ಏತೇಭ್ಯಃ = ಈ ದೇವತೆಗಳದೆಶೆಯಿಂದ, ವಿಶೇಷತಃ=ವಿಶೇಷವಾಗಿ, ಅಭ್ಯಧಿಕಾ=ಅತ್ಯಧಿಕಳು, (ಆದಾಗ್ಯೂ,) ಸದಾ=ಯಾವಾಗಲೂ, ಮುಕ್ತಾ=ಬಂಧರಹಿತಳು (ಆದಕಾರಣ ಅಧಿಕಾರಿಗಳ ವರ್ಗದಲ್ಲಿ ಗೃಹೀತಳಾಗುವುದಿಲ್ಲ). ತತ್ಸಮಃ=ಆ ಲಕ್ಷ್ಮಿಗೆ ಸಮಾನಿಕನು, ನಾಸ್ತಿ=ಇಲ್ಲ. (ಇದರಿಂದ **'ಕಾಮಾದಿರತ್ರ ತತ್ರ ಚಾಯತನಾದಿಭ್ಯಃ'** ಎನ್ನುವ ಅಧಿಕರಣದ ತಾತ್ಪರ್ಯವು ಉಕ್ತಪ್ರಾಯವಾಯಿತು.) ಪರಮಃ=ಸರ್ವೋತ್ತಮನಾದವನು, ಹರಿರೇವ=ಶ್ರೀ ಹರಿಯೇ, ಅಪರಃ=ಮತ್ತೊಬ್ಬನು, ನ ಚ= ಇಲ್ಲವೇ ಇಲ್ಲ. (ಇದರಿಂದ (೧)**'ವ್ಯತಿಹಾರೋ ವಿಶಿಂಷಂತಿ ಹೀತರವತ್'** (೨)**'ಸೈವ ಹಿ ಸತ್ಯಾದಯಃ'** ಎನ್ನುವ ಎರಡು ಅಧಿಕರಣಗಳ ತಾತ್ಪರ್ಯವು ಉಕ್ತವಾಯಿತು.) ತದೇತದಖಿಲಂ= ಆ ಈ ಎಲ್ಲವೂ, ಬೃಹತ್ಯಾಂ ಸಂಹಿತಾಯಾಂ ತು=ಬೃಹತ್ ಸಂಹಿತೆಯಲ್ಲಿ ಆದರೂ, ಸ್ವಯಂ ಭಗವತಾ=ಸಾಕ್ಷಾತ್ ವೇದವ್ಯಾಸರಿಂದಲೇ, ಉದಿತಂ=ಹೇಳಲ್ಪಟ್ಟದೆ (ಹಾಗಾದರೆ ಉಪನಿಷತ್ತಿನಲ್ಲಿ ನಾಮವನ್ನಾರಂಭಿಸಿ ಪ್ರಾಣಪರ್ಯಂತವಾಗಿ ಹದಿನೈದು ಮಂದಿ ಹೇಳಲ್ಪಟ್ಟರುತ್ತಾರೆ. ಇಲ್ಲಿ **'ಉಷಾಃ ಸ್ವಾಹಾ ಚ'** ಇತ್ಯಾದಿಗಳಿಂದ ಹದಿನಾಲ್ಕನ್ನೇ ಹೇಳಿರುವುದರಿಂದ ವಿಸಂವಾದ ಹೇಗೆ ಇಲ್ಲ ಎಂದರೆ— ಬೃಹತ್ಸಂಹಿತಾವಚನದಿಂದ ಹೇಳಲ್ಪಡದಿರುವುದೊಂದನ್ನು ತಾನು ಹೇಳುತ್ತಾರೆ.) ಆಹಂಕಾರಿಕಃ=ತೈಜಸಾಹಂಕಾರದಿಂದ ಹುಟ್ಟಿರುವ, ಪ್ರಾಣಶ್ಚ=ಪ್ರಾಣನೂ ಕೂಡ ಮತ್ತೊಬ್ಬನು ಇದ್ದಾನೆ. (ಅವನಾದರೂ) ಇಂದ್ರಾತ್=ಇಂದ್ರನದೆಶೆಯಿಂದ, ಅನಂತರ ಏವ= ಮೇಲಿನವನೇ. (ಅನಿರುದ್ಧನದೆಶೆಯಿಂದ ಉತ್ತಮನು ಎಂದೂ ತಿಳಿಯತಕ್ಕದು )

## ತಾರತಮ್ಯ ಸಂಗ್ರಹವು.

**ತಾ ॥** ನ್ಯಾಯಸುಧಾ— (1) **'ಕಲಾಭ್ಯಶ್ಚಾನ್ಯದೇವೇಭ್ಯಃ ಕರ್ಮಪ್ರತ್ಯವರಂ ಯತಃ । ಕಲಾಭ್ಯಃ ಪೃಥಗುಕ್ತಂ ತತ್ಪುಷ್ಕರಃ ಕರ್ಮ ಚೋಚ್ಯತೇ'** ಎಂದು ಹೇಳಿದರಿಂದ ಪುಷ್ಕರನು ಸರ್ವರಿಂದಲೂ ಅವರ ದೇವತೆಯು. ಅವನಕ್ಕಿಂತ **'ತತಃ ಶನಿಃ ಪೃಥಿವ್ಯಾತ್ಮಾ'** ಎನ್ನುವ ವಚನದೆಶೆಯಿಂದ ಶನೈಶ್ಚರನು ಅಧಿಕನು. ಶನೈಶ್ಚರನಿಂದ ಉಷಾ ಅಧಿಕಳು. ಅವಳಕ್ಕಿಂತ ಬುಧನು. ಬುಧನಕ್ಕಿಂತ ಸ್ವಾಹಾದೇವತೆಯು ಶ್ರೇಷ್ಠವು. ಸ್ವಾಹಾದೇವತೆಯಿಂದ ಪರ್ಜನ್ಯನು, ವರುಣನ ಹೆಂಡತಿಯಾದ ವಾರುಣಿಯು, ಸೂರ್ಯನ ಹೆಂಡತಿಯಾದ ಸಂಜ್ಞೆಯು, ಚಂದ್ರನ ಹೆಂಡತಿಯಾದ ರೋಹಿಣಿಯು, ಯಮನ ಹೆಂಡತಿಯಾದ ಧಾರ್ಮಿಯು, ಅನಿರುದ್ಧನ ಹೆಂಡತಿಯಾದ ವಿರಾಟ್ ಎನ್ನುವವಳೂ ಶ್ರೇಷ್ಠರು. ಅವರಕ್ಕಿಂತ ಹನ್ನೊಂದು ಮನುಗಳು, ಚ್ಯವನನು, ಉಚಥ್ಯನು, ವೈನ್ಯನು, ಶಶಬಿಂದುವು, ಹೈಹಯನು, ಪ್ರಿಯವ್ರತನು, ಗಯನು, ಅನುಕ್ತದೇವತೆಗಳೂ ಕೂಡ ಅಧಿಕರು. ಅವರಕ್ಕಿಂತ ಅಶ್ವಿನೀದೇವತೆಗಳೂ, ಗಣಪತಿಯೂ,

ಕುಬೇರನೂ, ವಿಷ್ವಕ್ಸೇನನೂ ಕೂಡ ಉತ್ತಮರು. ಅವರಕ್ಕಿಂತ ಮಿತ್ರನು, ನಿರ್ಋತಿಯು, ಬೃಹಸ್ಪತಿಯ ಹೆಂಡತಿಯಾದ ತಾರಾದೇವಿಯು, ಪ್ರವಹನ ಹೆಂಡತಿಯಾದ ಪ್ರಾವಹಿಯು. ಅವರಿಂದ ಮರೀಚಿಯು, ಅತ್ರಿಯು, ಅಂಗಿರಋಷಿಯು, ಪುಲಸ್ತ್ಯಋಷಿಯು, ಪುಲಹಋಷಿಯು, ಕ್ರತುವು, ವಸಿಷ್ಠನು, ವಿಶ್ವಾಮಿತ್ರಋಷಿಯು, ವೈವಸ್ವತಮನುವೂ ಶ್ರೇಷ್ಠರು. ಅವರಕ್ಕಿಂತ ಅಗ್ನಿಯು, ಭೃಗುವು, ದಕ್ಷನ ಹೆಂಡತಿಯಾದ ಪ್ರಸೂತಿಯೂ ಶ್ರೇಷ್ಠರು. ಅವರಕ್ಕಿಂತ ನಾರದನು ಶ್ರೇಷ್ಠನು. ನಾರದನಕ್ಕಿಂತ ವರುಣನು ಶ್ರೇಷ್ಠನು. ವರುಣನಗಿಂತ ಚಂದ್ರ-ಸೂರ್ಯ-ಧರ್ಮರು ಶತರೂಪಳೂ ಕೂಡ ಶ್ರೇಷ್ಠರು. ಅವರಕ್ಕಿಂತ ಪ್ರವಹನು ಉತ್ತಮನು. ಪ್ರವಹ-ವಾಯುವಿಗಿಂತ ಅನಿರುದ್ಧ, ಸ್ವಾಯಂಭುವ, ಬೃಹಸ್ಪತಿ, ದಕ್ಷರೂ, ಶಚೀದೇವಿಯೂ, ರತಿಯೂ ಕೂಡ ಉತ್ತಮರು. ಅವರಕ್ಕಿಂತ ಅಹಂಕಾರಿಕಪ್ರಾಣನು ಉತ್ತಮನು. ಅವನಕ್ಕಿಂತ ಇಂದ್ರ-ಕಾಮರು ಉತ್ತಮರು. ಇಂದ್ರ-ಕಾಮರಿಗಿಂತಪಾರ್ವತೀ, ಸುಪರ್ಣೀ, ಪಾರ್ವತೀ ಸ್ವರೂಪಳಾದುದರಿಂದ ಶೇಷನ ಹೆಂಡತಿಯೂ ಉತ್ತಮರು. ಆ ಮೇಲೆ ಜಾಂಬವತೀ ಮೊದಲಾದವರು ಆರುಮಂದಿ ಶ್ರೀ ಕೃಷ್ಣನ ಹೆಂಡತಿಯರು. ಆ ಮೇಲೆ ರುದ್ರ-ಗರುಡರೂ, ರುದ್ರಾತ್ಮಕನಾದುದರಿಂದ ಶೇಷನೂ ಕೂಡ ಉತ್ತಮರು. ಆಮೇಲೆ ಭಾರತಿಯೂ, ಸರಸ್ವತಿಯೂ ಉತ್ತಮರು. ಅವರಕ್ಕಿಂತ ಮುಖ್ಯ ವಾಯುವೂ, ಬ್ರಹ್ಮನೂ ಕೂಡ ಉತ್ತಮರು. ಅವರಕ್ಕಿಂತ ಮಹಾಲಕ್ಷ್ಮಿಯು ಉತ್ತಮಳು. ಲಕ್ಷ್ಮಿಯಿಂದಲೂ ಶ್ರೀ ಹರಿಯು ಶ್ರೇಷ್ಠನು ॥ ೨೦೧ ॥ ೨೦೨ ॥ ೨೦೩ ॥ ಅಧಿ. ೨೧ ॥

**ಇಯದಾಮನನಾಧಿಕರಣವು ಸಮಾಪ್ತವಾಯಿತು.**

---

# ಪ್ರಜ್ಞಾಂತರಾಧಿಕರಣವು

**"ಓಂ ಪ್ರಜ್ಞಾಂತರಪೃಥಕ್ತ್ವವದ್ದೃಷ್ಟಿಶ್ಚ ತದುಕ್ತಂ ಓಂ"** ॥ ಸೂ. ೫೨ ॥

ಅವಿಚ್ಛಿನ್ನವಾದ ಪರೋಕ್ಷಜ್ಞಾನ ಸಂತಾನರೂಪ ಧ್ಯಾನದಲ್ಲಿ ತಾರತಮ್ಯವಿದ್ದಂತೆಯೇ ದೃಷ್ಟಿಯೂ ನಾನಾವಿಧವಾದುದು ದೃಷ್ಟಿತಾರತಮ್ಯವು '**ಅಂತರ್ದೃಷ್ಟಯೋ ಬಹಿರ್ದೃಷ್ಟಯೋऽವತಾರದೃಷ್ಟಯಃ**' ಇತ್ಯಾದಿ ಶ್ರುತಿಗಳಲ್ಲಿ ಹೇಳಲ್ಪಟ್ಟದೆ.

ಭಾಷ್ಯದಲ್ಲಿ ಸ್ಪಷ್ಟವಾಗಿ ವ್ಯಾಖ್ಯಾನಮಾಡದಿರುವುದರಿಂದ, ಸ್ಪಷ್ಟವಾಗಿ ವ್ಯಾಖ್ಯಾನಮಾಡುತ್ತಾರೆ—

**ಮೂ ॥ [ಇಂದ್ರಾದನಂತರೋ(] ದೃಷ್ಟಿರಪಿ ಯೋಗ್ಯಾನುಸಾರತಃ ॥ ೨೦೩ ॥**

**ಅ** ॥ ದೃಷ್ಟಿರಪಿ=ಪ್ರತ್ಯಕ್ಷವೂ ಕೂಡ, ಯೋಗ್ಯಾನುಸಾರತಃ = ಯೋಗ್ಯತಾನುಸಾರವಾಗಿ, ನಾನಾವಿಧಾ=ಅನೇಕವಿಧವಾದುದು ॥ ೨೦೩ ॥ ಸೂ. ೫೨ ॥ ಅಧಿ. ೩೨ ॥

**ಪ್ರಜ್ಞಾಂತರಾಧಿಕರಣವು ಸಮಾಪ್ತವಾಯಿತು.**

---

## ಪ್ರದಾನಾಧಿಕರಣವು.

"ಓಂ ಪ್ರದಾನವದೇವ ಹಿ ತದುಕ್ತಂ ಓಂ" ॥ ಸೂ. ೪೪ ॥

"ಓಂ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ" ॥ ಸೂ. ೪೫ ॥

**(ಸೂತ್ರಾರ್ಥಗಳು ಮೊದಲೇ ಉಕ್ತಗಳಾಗಿವೆ)**

ಪ್ರಕೃಷ್ಟವಾದ ದಾನವು ಪ್ರದಾನವು; ಪ್ರಶಬ್ದವು ಭಾಷ್ಯದಲ್ಲಿ ಸ್ಪಷ್ಟವಾಗಿ ವ್ಯಾಖ್ಯಾತವಾಗಲಿಲ್ಲ. ಆದಕಾರಣ ಸೂತ್ರಾರ್ಥವನ್ನು ಹೇಳುತ್ತಾರೆ—

**ಮೂ ॥ ಸಮ್ಯಗ್ಗುರುಪ್ರಸಾದಶ್ಚ ಮುಖ್ಯತೋ ದೃಷ್ಟಿಕಾರಣಂ ।**
**ಶ್ರವಣಾದಿ ಚ ಕರ್ತವ್ಯಂ ನಾನ್ಯಥಾ ದರ್ಶನಂ ಕ್ವಚಿತ್ ॥ ೨೦೪ ॥**

**ಅ** ॥ (ಕೇವಲ ಶ್ರವಣಾದಿಗಳಲ್ಲ, ಮತ್ತೆ) ಸಮ್ಯಕ್=ಚೆನ್ನಾಗಿ, ಗುರುಪ್ರಸಾದಶ್ಚ=ಗುರುಪ್ರಸಾದವೂ ಕೂಡ, (ಅಂದರೆ— ಸಮ್ಯಕ್ ಪ್ರಸಾದಪೂರ್ವಕವಾಗಿ ಗುರುಗಳದ್ದು ಯಾವುದು ವಿದ್ಯಾದಾನವೋ ಅದೂ ಕೂಡ) ಮುಖ್ಯತಃ=ಮುಖ್ಯವಾಗಿ, ದೃಷ್ಟಿಕಾರಣಂ = ಭಗವಂತನ ದೃಷ್ಟಿಗೆ ಕಾರಣವು. (ಲಿಂಗಭೂಯಸ್ತ್ವಾಧಿಕರಣದಲ್ಲಿ ಗುರುಪ್ರಸಾದಕ್ಕೆ ಪ್ರಾಬಲ್ಯವು ಉಕ್ತವಾಗಿದೆ. ಅದು ಅಯುಕ್ತವು. ಶ್ರವಣಾದಿಗಳಿಂದ ಪ್ರಾಬಲ್ಯವು ಉಕ್ತವಾಗಿದೆ. ಅದೂ ಕೂಡ ಪ್ರದಾನಶಬ್ದಾರ್ಥದಲ್ಲಿಯೇ ಅಂತರ್ಗತವಾಗಿದೆ. ತನ್ನ ದೆಶೆಯಿಂದಲೇ ತಾನು ಬಲಿಷ್ಠವೆನ್ನುವುದು ಕೂಡುವುದಿಲ್ಲ ಎಂದರೆ—) ಸಮ್ಯಕ್ = ಚೆನ್ನಾಗಿ, ಗುರುಪ್ರಸಾದಶ್ಚ = ಗುರುಪ್ರಸಾದವೂ ಕೂಡ, ಮುಖ್ಯತಃ=ಮುಖ್ಯವಾಗಿ, (ಅಂದರೆ ಶ್ರವಣಾದಿಗಳಿಗಿಂತ ಅತಿಶಯವಾಗಿ) ದೃಷ್ಟಿಕಾರಣಂ=ಪ್ರತ್ಯಕ್ಷಕ್ಕೆ ಕಾರಣವೂ (ಯಾವ ಆಖ್ಯಾಯಿಕೆಗಳಲ್ಲಿ ಲಿಂಗಗಳು ಕಾಣಲ್ಪಡುತ್ತವೋ ಅದರಲ್ಲಿ ಗುರುಪ್ರಸಾದದಿಂದಲೇ ಜ್ಞಾನಪ್ರಾಪ್ತಿಯು ಶ್ರುತವಾದಪ್ರಯುಕ್ತ ಶ್ರವಣಾದಿಗಳನ್ನು ಮಾಡಬೇಕಾಗಿಲ್ಲ, ಎನ್ನುವ ಶಂಕೆಯು ಬರುವುದು. ಅದನ್ನು ನಿವಾರಣೆಮಾಡುವುದಕ್ಕಾಗಿ 'ತದಪಿ' ಎಂದು ಸೂತ್ರದಲ್ಲಿ ಹೇಳಿರುತ್ತಾರೆ. ಅದನ್ನು ವ್ಯಾಖ್ಯಾನಮಾಡುತ್ತಾರೆ.) ಶ್ರವಣಾದಿ ಚ=ಶ್ರವಣ ಮೊದಲಾದುದೂ ಕೂಡ, ಕರ್ತವ್ಯಂ=ಮಾಡತಕ್ಕದ್ದು. (ಏಕೆಂದರೆ—) ಅನ್ಯಥಾ=ಇಲ್ಲವಾದರೆ, ಕ್ವಚಿತ್=ಎಲ್ಲಿಯೂ, ದರ್ಶನಂ=ದರ್ಶನವು, ನ=ಆಗಲಾರದು ॥೨೦೪॥ ಸೂ. ॥ ೪೪ ॥ ೪೫ ॥ ಅಧಿ. ೨೬ ॥ ೨೭ ॥

**ಪ್ರದಾನಾಧಿಕರಣ, ಲಿಂಗಭೂಯಸ್ತ್ವಾಧಿಕರಣಗಳು ಸಮಾಪ್ತಗಳಾದುವು.**

---

## ವಿಕಲ್ಪಾಧಿಕರಣವು.

"ಓಂ ಪೂರ್ವವಿಕಲ್ಪಃ ಪ್ರಕರಣಾತ್ಸ್ಯಾತ್ಕ್ರಿಯಾ ಮಾನಸವತ್ ಓಂ"
॥ ಸೂ. ೪೬ ॥

**(ಸೂತ್ರಾರ್ಥವು ಮೊದಲೇ ಉಕ್ತವಾಯಿತು.)**

ಪ್ರಥಮಪ್ರಾಪ್ತನಾದವನೇ ಗುರುವೋ ಅಥವಾ ಅವನನ್ನು ಬಿಟ್ಟು ಮತ್ತೊಬ್ಬನನ್ನು ಸ್ವೀಕರಿಸಲು ಶಕ್ಯವಾಗಬಹುದೋ ಎಂದು ಸಂಶಯವು ಬಂದರೆ— **'ಗುರುಮಂತ್ರಪರಿತ್ಯಾಗೀ ರೌರವಂ ನರಕಂ ವ್ರಜೇತ್'** ಎಂದು ಗುರುಗಳನ್ನು ಬಿಟ್ಟರೆ ದೋಷವು ಸ್ಮೃತವಾಗಿರುವುದರಿಂದ ಪ್ರಥಮಪ್ರಾಪ್ತ ಗುರುವೇ ಆಗಬೇಕು ಎಂದು ಪ್ರಾಪ್ತವಾದರೆ— ವಿಕಲ್ಪವು ಹೇಳಲ್ಪಡುತ್ತದೆ. ಆ ವಿಕಲ್ಪವು ಹೀನರೂ, ಸಮರೂ, ಉತ್ತಮರೂ ಆದ ಗುರುಗಳ ಮಧ್ಯದಲ್ಲಿ ಯಾರ ವಿಷಯದಲ್ಲಿ ಎಂದು ತಿಳಿಯುವುದಿಲ್ಲ; ದೋಷಸ್ಮರಣೆಗೆ ಯಾವುದು ಗತಿಯು ಎಂದರೆ— ವ್ಯಕ್ತವಾಗಿ ವ್ಯಾಖ್ಯಾನಮಾಡುತ್ತಾರೆ —

**ಮೂ || ಗುಣಾಧಿಕಂ ಗುರುಂ ಪ್ರಾಪ್ಯ ತದ್ಧೀನಂ ನಾಪ್ನುಯಾತ್ಕ್ವಚಿತ್ |**
**ವಿಪರ್ಯಯಸ್ತು ಕರ್ತವ್ಯಃ ಸರ್ವಥಾ ಶುಭಮಿಚ್ಛತಾ || ೨೦೫ ||**

ಅ || ಗುಣಾಧಿಕಂ=ಗುಣಗಳಿಂದ ಅಧಿಕನಾದ, ಗುರುಂ=ಗುರುವನ್ನು, ಪ್ರಾಪ್ಯ=ಹೊಂದಿ, ತದ್ಧೀನಂ=ಉತ್ತಮ ಗುರುಗಳಿಂದ ಹೀನನಾದ ಗುರುವನ್ನು, ಕ್ವಚಿತ್=ಯಾವ ಪ್ರಯೋಜನ ವಿಶೇಷದಲ್ಲಿಯೂ, ನಾಪ್ನುಯಾತ್ = ಹೊಂದಬಾರದು. (ದೋಷಸ್ಮರಣವು ಉತ್ತಮರನ್ನು ಬಿಟ್ಟು ಗುಣಹೀನ ಗುರುಗಳ ಸ್ವೀಕಾರವಿಷಯಕವಾದುದು.) (ಹೀಗಾದರೆ ಸೂತ್ರದಲ್ಲಿದ್ದ ವಿಕಲ್ಪವು ಅಧಿಕಗುರುಪ್ರಾಪ್ತಿವಿಷಯಕವಾದುದು ಏಕೆ ಆಗುವುದಿಲ್ಲ ಎನ್ನುತ್ತಾರೆ) ಸರ್ವಥಾ=ಸರ್ವಪ್ರಕಾರದಿಂದಲೂ, ಶುಭಂ=ಶುಭವನ್ನು, ಇಚ್ಛತಾ=ಇಚ್ಛಿಸುವ ಪುರುಷನಿಂದ, ವಿಪರ್ಯಯಸ್ತು=ಅಧಮಗುರುಗಳನ್ನು ಬಿಟ್ಟು ಉತ್ತಮಗುರುಗಳ ಸ್ವೀಕಾರವು, ಕರ್ತವ್ಯಃ=ಮಾಡತಕ್ಕುದು (ಇಲ್ಲದಿದ್ದರೆ ದೈವವಶಾತ್ ಆದಿಯಲ್ಲಿ ಅಲ್ಪಗುರುವನ್ನು ಹೊಂದಿದ ಪ್ರಜ್ಞೆಯ ಆಧಿಕ್ಯವುಳ್ಳ ಶಿಷ್ಯನಿಗೆ ಉಂಟಾಗುವ ಸಂಶಯ ವಿಪರ್ಯಯಗಳೂ, ಅಜ್ಞಾನವೂ ಇವುಗಳ ನಿವೃತ್ತಿಯೇ ಆಗದೆ ಹೋಗಬೇಕಾದೀತು.) || ೨೦೫ ||

ಪೂರ್ವದಲ್ಲಿ ಪ್ರಾಪ್ತರಾದ ಗುರುಗಳಿಂದ ಸಂಶಯ ವಿಪರ್ಯಯ ಮೊದಲಾದುವುಗಳು ನಿವೃತ್ತಗಳಾಗದೆ ಇದ್ದರೆ ಪರಿತ್ಯಾಗವು ಆವಶ್ಯಕವಾಗದೆ ಉಪದೇಶಮಾಡದಿರುವ ಉತ್ತಮ ಗುರುಗಳನ್ನು ಬಿಟ್ಟು ಉಪದೇಶ ಮಾಡತಕ್ಕ ಅಧಮ ಗುರುಗಳನ್ನು ಸ್ವೀಕಾರಮಾಡಬೇಕಾಗುವುದು ಎಂದರೆ— ಸತ್ಯವೇ. 'ಗುರುಮಂತ್ರಪರಿತ್ಯಾಗೀ' ಎನ್ನುವ ಪ್ರಮಾಣದಿಂದ ವಿಶೇಷ ಲಾಭಕ್ಕಾಗಿ ಮತ್ತೊಬ್ಬನನ್ನು ಹೊಂದಬೇಕು ಎನ್ನುವ ನ್ಯಾಯವನ್ನು ಅಧಮ ವಿಷಯದಲ್ಲಿ ಬಿಡಬೇಕು. ಹಾಗಾದರೆ ಸೂತ್ರದಲ್ಲಿರುವ ವಿಕಲ್ಪಕ್ಕೆ ಯಾವುದು ವಿಷಯವು ಎಂದರೆ—

**ಮೂ || ಸಮೇ ವಿಕಲ್ಪ ಏವ ಸ್ಯಾತ್ಪೂರ್ವಾನುಜ್ಞಾ ಚ ಸರ್ವಥಾ |**
**ತದುತ್ತಮಗುರುಪ್ರಾಪ್ತ್ಯೈ ಪೂರ್ವಾನುಜ್ಞಾ ನ ಮೃಗ್ಯತೇ || ೨೦೬ ||**

ಅ || ಸಮೇ=ಮೊದಲು ಸ್ವೀಕರಿಸಲ್ಪಟ್ಟ ಗುರುವಿನಿಂದ ಸಮಾನಿಕನಾದ ಗುರುವು ತನ್ನಷ್ಟಕ್ಕೇನೇ ಪ್ರಾಪ್ತನಾಗುತ್ತಿರಲು. ವಿಕಲ್ಪ ಏವ ಸ್ಯಾತ್=ಸ್ವೀಕಾರಕ್ಕೆ ವಿಕಲ್ಪವೇ ಬರುವುದು. (ನಿಯಮವಿಲ್ಲ.) (ದೋಷಸ್ಮರಣೆಗೆ ವಿಷಯಾಂತರವನ್ನು ತೋರಿಸುವುದಕ್ಕಾಗಿ ಹೇಳುತ್ತಾರೆ.) ಪೂರ್ವಾನುಜ್ಞಾ ಚ=ಸಮಾನಿಕರಾದ ಬೇರೆ ಗುರುಗಳನ್ನು ಸ್ವೀಕಾರಮಾಡಲಿಕ್ಕೆ ಪೂರ್ವಗುರುಗಳ ಅನುಜ್ಞೆಯೂ ಕೂಡ, ಸರ್ವಥಾ=ಸರ್ವಥಾ ಆವಶ್ಯಕವು. (ಅನುಜ್ಞೆ ಹೊರತು ಸಮಾನಿಕರಾದ ಪೂರ್ವಗುರುಗಳನ್ನು ಪರಿತ್ಯಾಗಮಾಡಿದರೆ ದೋಷಸ್ಮರಣವು.) ('ಪೂರ್ವಾನುಜ್ಞಾ ಚ'

ಎನ್ನುವುದು ಗುರ್ವಂತರಪ್ರಾಪ್ತಿಮಾತ್ರವಿಷಯಕವಾದುದು ಎನ್ನುವ ಅಲ್ಪಜ್ಞರ ಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ.) ತದುತ್ತಮ ಗುರುಪ್ರಾಪ್ತ್ಯೈ=ಅವರಿಂದ ಉತ್ತಮರಾದ ಗುರುಗಳ ಪ್ರಾಪ್ತಿಗೋಸ್ಕರ, ಪೂರ್ವಾನುಜ್ಞಾ = ಮೊದಲಿನ ಗುರುಗಳ ಅನುಜ್ಞೆಯು, ನ ಮೃಗ್ಯತೇ=ಹುಡುಕಬೇಕಾಗಿಲ್ಲ, (ಆವಶ್ಯಕವಾಗಿಲ್ಲ). ॥ ೨೦೬ ॥

ಗುರುಪ್ರಸಾದವು ಸರ್ವಥಾಪಿ ಆವಶ್ಯಕವೆಂದು ಸೂತ್ರಕಾರರು ಹೇಳಿದರು. ಅದು ಆಯಾವ ವಿದ್ಯಾ, ಮತ್ತು ದೇವತೆಯ ಪ್ರಸಾದಕ್ಕೆ ಉಪಲಕ್ಷಣವು ಎನ್ನುವ ಅಭಿಪ್ರಾಯದಿಂದ, ಗುರು, ವಿದ್ಯಾದೇವತೆ ಈ ಮೂರರ ಸ್ವರೂಪವನ್ನು ಹೇಳುತ್ತಾರೆ—

**ಮೂ ॥ ಗುರುರ್ಬ್ರಹ್ಮಾಖಿಲಾನಾಂ ಚ ವಿದ್ಯಾ ಚೈವ ಸರಸ್ವತೀ ।**
**ದೇವತಾ ಭಗವಾನ್ವಿಷ್ಣುಃ ಸರ್ವೇಷಾಮವಿಶೇಷತಃ ॥ ೨೦೭ ॥**
**ತತ್ಪ್ರಸಾದೇನ ಮುಕ್ತಿಃ ಸ್ಯಾನ್ನಾನ್ಯಥಾ ತು ಕಥಂಚನ ।**
**ಸ್ವೋತ್ತಮಾಸ್ತು ಕ್ರಮೇಣೈವ ಸರ್ವೇಷಾಂ ಗುರವಃ ಸ್ಮೃ(ಶ್ರು)ತಾಃ॥**
**ಉಪದೇಶೋ ಬ್ರಹ್ಮಣಸ್ತು ಸರ್ವೇಷಾಮೇವ ಮುಕ್ತಯೇ ॥ ೨೦೮ ॥**

ಅ ॥ ಅಖಿಲಾನಾಂ ಚ=ಎಲ್ಲರಿಗೂ ಕೂಡ, ಬ್ರಹ್ಮಾ=ಬ್ರಹ್ಮನು, ಗುರುಃ=ಗುರುವು, ವಿದ್ಯಾ ಚ=ವಿದ್ಯಾಭಿಮಾನಿದೇವತೆಯಾದರೂ, ಸರಸ್ವತೀ ಏವ=ಸರಸ್ವತಿಯೇ. ಅವಿಶೇಷತಃ= ಅವರಿಗೆ ಇವರಿಗೆ ಎನ್ನುವ ವಿಶೇಷವನ್ನು ಬಿಟ್ಟು, ಸರ್ವೇಷಾಮೇವ=ಎಲ್ಲರಿಗೂ, ಭಗವಾನ್= ಪೂಜ್ಯನಾದ, ವಿಷ್ಣುಃ=ಶ್ರೀ ಹರಿಯು, ದೇವತಾ=ದೇವತೆಯು. ತತ್ಪ್ರಸಾದೇನ=ಕೇವಲ ಗುರು ಪ್ರಸಾದದಿಂದ ಅಲ್ಲ. ಮತ್ತೆ ವಿದ್ಯಾ=(ಸರಸ್ವತೀ) ದೇವತೆ=(ಶ್ರೀ ಹರಿ) ಇವರ ಪ್ರಸಾದದಿಂದಲೂ ಕೂಡ, ಮುಕ್ತಿಃ=ಮೋಕ್ಷವು, ಸ್ಯಾತ್=ಆಗುವುದು. ಕಥಂ ಚ ನ=ಯಾವ ಪ್ರಕಾರದಿಂದಲೂ, ಅನ್ಯಥಾ=ಬೇರೆ ಪ್ರಕಾರ, ನ ಸ್ಯಾತ್ತು=ಆಗಲಾರದು (ಸಾಧಾರಣ ಗುರುಗಳನ್ನು ಹೇಳಿ ಅಸಾಧಾರಣ ಗುರುಗಳನ್ನು ಹೇಳುತ್ತಾರೆ.) ಸ್ವೋತ್ತಮಾಸ್ತು=ತಮ್ಮಿಂದ ಉತ್ತಮರಾದವ ರಾದರೂ, ಕ್ರಮೇಣೈವ=ಕ್ರಮದಿಂದಲೇ, (ಅಂದರೆ ಸಾಕ್ಷಾತ್ ಉತ್ತಮಗುರುವು. ಅವನ ಕ್ಕಿಂತಲೂ ಉತ್ತಮನಾದವನು ಗುರುತರನು.) ಸರ್ವೇಷಾಂ=ಎಲ್ಲರಿಗೂ, ಗುರವಃ=ಗುರು ಗಳೆಂದು, ಸ್ಮೃತಾಃ=ಹೇಳಲ್ಪಟ್ಟರುತ್ತಾರೆ. (ಹೀಗೆ ವಿದ್ಯಾವಿಶೇಷವಿದ್ದರೆ ದೇವತಾವಿಶೇಷವನ್ನೂ ತಿಳಿಯತಕ್ಕದ್ದು.) (ಹಾಗಾದರೆ ಸರಸ್ವತ್ಯಾದಿಗಳಿಗೆ ವಿದ್ಯಾಭಿಮಾನಿತ್ವವಿದ್ದುದರಿಂದ ವಿದ್ಯಾತ್ವ ವಿರಲಿ, ವಿಷ್ಣುವು ವಿದ್ಯಾಪ್ರತಿಪಾದ್ಯನಾದುದರಿಂದ ಅವನಿಗೆ ದೇವತಾತ್ವವೂ ಇರಲಿ; ಬ್ರಹ್ಮನಿ ಗಾದರೂ ಗುರುತ್ವವು ಯಾವುದರಿಂದ? ಏಕೆಂದರೆ— ವಿದ್ಯೋಪದೇಷ್ಟೃತ್ವವೇ ಗುರುತ್ವವು, ಎಲ್ಲರನ್ನು ಕುರಿತು ಬ್ರಹ್ಮನಿಗೆ ವಿದ್ಯೋಪದೇಷ್ಟೃತ್ವವು ಇರುವುದಿಲ್ಲ. ಎಂದರೆ—) ಸರ್ವೇಷಾ ಮೇವ=ಎಲ್ಲರಿಗೂ, ಮುಕ್ತಯೇ=ಮುಕ್ತಿಗೋಸ್ಕರ, ಬ್ರಹ್ಮಣಸ್ತು=ಬ್ರಹ್ಮನದ್ದೇ, ಉಪದೇಶಃ= ಉಪದೇಶವು. (ಅಂದರೆ— ಈ ಜನ್ಮದಲ್ಲಿ ಆಗಲೀ ಜನ್ಮಾಂತರದಲ್ಲಿ ಆಗಲೀ ಬ್ರಹ್ಮನ ಉಪದೇಶ ವಿಲ್ಲದೆ ಯಾರಿಗೂ ಮುಕ್ತಿಯಾಗಲಾರದು. ಆದಕಾರಣ ಬ್ರಹ್ಮನಿಗೆ ಗುರುತ್ವವು ಯುಕ್ತವೇ. ಬ್ರಹ್ಮನಿಂದ ವ್ಯತಿರಿಕ್ತರಾದ ನಮ್ಮಿಂದ ಉತ್ತಮರಾದವರಿಗೆ ವಿದ್ಯಾಸಂಪ್ರದಾಯ ಪ್ರವರ್ತಕತ್ವ ವಿದ್ದುದರಿಂದ ಗುರುತ್ವವು. ಅಪ್ರವರ್ತಕರಿಗಾದರೂ ಅನುಗ್ರಾಹಕತ್ವವಿದ್ದುದರಿಂದ ಗುರು ತ್ವವು.) ॥ ೨೦೭ ॥ ೨೦೮ ॥ ಸೂ. ೪೬ ॥ ಅಧಿ. ೨೮ ॥

**ವಿಕಲ್ಪಾಧಿಕರಣವು ಸಮಾಪ್ತವಾಯಿತು.**

---

# ನ ಸಾಮಾನ್ಯಾಧಿಕರಣವು.

**"ಓಂ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ ಓಂ"** ॥ ಸೂ. ೫೩ ॥

ಭಗವದ್ರೂಪಗಳಿಗೆ ಸಾಮ್ಯವಿದ್ದರೂ ರಾಮಕೃಷ್ಣಾದಿ ವಿಷಯಕ ಸಾಕ್ಷಾತ್ಕಾರ ದೆಶೆಯಿಂದ ಮುಕ್ತಿಯಲ್ಲ. ಸಾಧಾರಣಮರಣಾನಂತರದಲ್ಲಿ ಮುಕ್ತಿಯ ಅಭಾವದಂತೆಯೇ. ಮತ್ತೆ ಬಿಂಬಾಪರೋಕ್ಷರೂಪವಿಶೇಷದಿಂದಲೇ ಮುಕ್ತಿಯು. ಬ್ರಹ್ಮನಾಡ್ಯುತ್ಕ್ರಮಣಪೂರ್ವಕ ಮರಣ ವಿಶೇಷದೆಶೆಯಿಂದ ಅನಂತರದಲ್ಲಿಯೇ ಮುಕ್ತಿಯಂತೆ. ಸಾಮಾನ್ಯ ದರ್ಶನದಿಂದ ಸಾಧ್ಯವಾದ ಮಹರ್ಲೋಕಾದಿ ಪ್ರಾಪ್ತಿಮಾತ್ರವು ಮುಕ್ತಿಯಲ್ಲ. ॥ ಸೂ. ೫೩ ॥ ಅಧಿ. ೩೩ ॥

**ನ ಸಾಮಾನ್ಯಾಧಿಕರಣವು ಸಮಾಪ್ತವಾಯಿತು.**

---

# ಪರೇಣಾಧಿಕರಣವು.

**"ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ಓಂ"** ॥ ಸೂ ೫೪ ॥

ಪರಮಾತ್ಮನಿಂದಲೇ ಬ್ರಹ್ಮಾಪರೋಕ್ಷಾದಿಗಳು; ಸ್ವತಂತ್ರವಾದ ಭಕ್ತಿಯಿಂದ ಅಲ್ಲ. **'ಏತೈರುಪಾಯೈರ್ಯತತೇ ಯಸ್ತು ವಿದ್ವಾನ್ ತಸ್ಯೈಷ ಆತ್ಮಾ ವಿಶತೇ ಬ್ರಹ್ಮಧಾಮ'** ಎನ್ನುವ ಶ್ರುತಿಯದೆಶೆಯಿಂದ. 'ಭಕ್ತಿರೇವೈನಂ ನಯತಿ' ಎಂದು ಶ್ರುತಿಯದೆಶೆಯಿಂದ ಭಕ್ತಿಗೆ ಸ್ವಾತಂತ್ರ್ಯ, ಬೋಧಕತ್ವವಾದರೂ ಅದಕ್ಕೆ ಕಾರಣವಿದ್ದಪ್ರಯುಕ್ತ ಕೂಡುತ್ತದೆ. ಬ್ರಹ್ಮಜ್ಞಾನ ಸಾಧನಗಳಲ್ಲಿ ಪ್ರಧಾನವಾಗಿರುವುದರಿಂದ ಭಕ್ತಿಯು ಹೇಳಲ್ಪಟ್ಟದೆ ॥ ಸೂ. ೫೪ ॥ ಅಧಿ. ೩೪ ॥

**ಪರೇಣಾಧಿಕರಣವು ಸಮಾಪ್ತವಾಯಿತು.**

---

# ಏಕಾಧಿಕರಣವು.

**"ಓಂ ಏಕ ಆತ್ಮನಃ ಶರೀರೇ ಭಾವಾತ್ ಓಂ"** ॥ ಸೂ. ॥ ೫೫ ॥

ಅಂಶಿಯೂ ಅಂಶವೂ ಒಂದೇ; ಭೇದವಿಲ್ಲ. ಅಂಶಿಕರ್ಮ ನಿರ್ಮಿತ ಶರೀರದಲ್ಲಿ ಅಂಶವು ಇದ್ದುದರಿಂದ.

**"ಓಂ ವ್ಯತಿರೇಕಸ್ತದ್ಭಾವಭಾವಿತ್ವಾನ್ನ ತೂಪಲಬ್ಧಿವತ್ ಓಂ"** ॥ ಸೂ. ॥ ೫೬ ॥

ಜ್ಞಾನಸುಖಾದಿಗಳಲ್ಲಿ ಭೇದವಿದ್ದಂತೆಯೇ ಅಂಶಾಂಶಿಗಳಿಗೆ ಸ್ವರೂಪಭೇದವಿಲ್ಲ. ಅಂಶಿಯ ಉಪಾಸನಾದಿಗಳಿಂದಲೇ ಅಂಶಕ್ಕೆ ಫಲಾನುಸಂಧಾತೃತ್ವವಿದ್ದಪ್ರಯುಕ್ತ. ಅಂದರೆ— ಅಲ್ಪವಾದ ಜ್ಞಾನಾದ್ಯನುಸಂಧಾನವಿಲ್ಲದಿದ್ದರೂ ಅಂಶಿಯಲ್ಲಿರುವ ಉಪಾಸನಾದಿ ಫಲಾನುಸಂಧಾನವಿದೆ ಹಾಗೆಯೇ ಅಂಶದಲ್ಲಿರುವ ಜ್ಞಾನಾದಿ ಧರ್ಮದ ಅನುಸಂಧಾತೃತ್ವವು ಅಂಶಿಗೆ ಇದೆ ॥ ॥ ಸೂ. ॥ ೫೫ ॥ ೫೬ ॥ ಅಧಿ. ೩೫ ॥

**ಏಕಾಧಿಕರಣವು ಸಮಾಪ್ತವಾಯಿತು.**

---

## ಅಂಗಾವಬದ್ಧಾಧಿಕರಣವು.

**'ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಂ ಓಂ'**

॥ ಸೂ. ೫೭ ॥

ಅಪ್ರಧಾನರಾದ ಬ್ರಹ್ಮಾದಿಗಳಿಂದ ಸಂಬದ್ಧಗಳಾದ (ಅಂದರೆ- ಬ್ರಹ್ಮಾದಿವಿಷಯಕಗಳಾದ) ಉಪಾಸನಾದಿಗಳನ್ನು ಮಾಡಲೇಬೇಕು. ಉಪಸಂಹಾರದಲ್ಲಿ ವಿಶೇಷವಿದೆ. ಪ್ರತಿವೇದದಲ್ಲಿ ಯಾವ ಶಾಖೆಗಳು ಇರುತ್ತಾವೋ ಅವುಗಳಲ್ಲಿ ಹೇಳಲ್ಪಟ್ಟ ಉತ್ತಮರಾದ ಬ್ರಹ್ಮಾದಿಗಳ ಗುಣಸಮುದಾಯವು ರುದ್ರಾದ್ಯಧಮರಲ್ಲಿ ಉಪಸಂಹಾರಮಾಡಕೂಡದು. ಅಂದರೆ— ಉತ್ತಮರ ಗುಣಗಳನ್ನು ಅಧಮರಲ್ಲಿ ಅಥವಾ ಸಮರಲ್ಲಿ ಪರಸ್ಪರವಾಗಿ ಧ್ಯಾನಮಾಡಕೂಡದು.

**'ಓಂ ಮಂತ್ರಾದಿವದ್ವಾವಿರೋಧಃ ಓಂ'** ॥ ಸೂ. ೫೮ ॥

ಅಧಮರ ಗುಣಗಳನ್ನು ಉತ್ತಮರಲ್ಲಿ ಉಪಸಂಹಾರಮಾಡಿದರೂ ವಿರೋಧವಿಲ್ಲ. ಅಧಮಪರವಾದ ಮಂತ್ರವಿದ್ಯಾದಿಗಳಿಗೆ ಉತ್ತಮರ ವಿಷಯಕವಾಗಿ ಅಧ್ಯಯನವಿದ್ದಂತೆಯೇ. ॥ ಸೂ. ॥ ೫೭ ॥ ೫೮ ॥ ಅಧಿ. ೩೬ ॥

**ಅಂಗಾವಬದ್ಧಾಧಿಕರಣವು ಸಮಾಪ್ತವಾಯಿತು.**

---

## ಭೂಮಕೃತ್ವಧಿಕರಣವು.

**'ಓಂ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಚ ದರ್ಶಯತಿ ಓಂ'**

॥ ಸೂ. ೫೯ ॥

'ದೀಕ್ಷಾ ಪ್ರಾಯಣೀಯ ಉದಯನೀಯ, ಪ್ರಾತಃಸವನ, ಮಾಧ್ಯಂದಿನಸವನ, ತೃತೀಯಸವನಾವಭೃಥರೂಪವಾದ ಯಾಗೀಯ ಅಂಗಕಲಾಪಕ್ಕೆ ಶ್ರೇಷ್ಠತ್ವವಿದ್ದಂತೆಯೇ ಭೂಮಗುಣಕ್ಕೆ ಸರ್ವಗುಣಗಳಲ್ಲಿ ಪ್ರಾಧಾನ್ಯವು ಇದೆ. ಆದಕಾರಣ ಭೂಮಗುಣವು ಸರ್ವರಿಂದಲೂ ಉಪಾಸ್ಯವಾಗಿದೆ. 'ಭೂಮ್ನೈವ ದೇವಃ ಪರಮೋ ಹ್ಯುಪಾಸ್ಯಃ' ಎನ್ನುವ ಶ್ರುತಿಯು ಹಾಗೆಯೇ ತೋರಿಸುತ್ತದೆ ॥ ಸೂ. ೫೯ ॥ ಅಧಿ ೩೭ ॥

**ಭೂಮಕೃತ್ವಧಿಕರಣವು ಸಮಾಪ್ತವಾಯಿತು.**

---

## ನಾನಾಶಬ್ದಾಧಿಕರಣವು.

**'ಓಂ ನಾನಾಶಬ್ದಾದಿ ಭೇದಾತ್ ಓಂ' ॥ ಸೂ. ೬೦ ॥**

ಭೂಮತ್ವವು ನಾನಾಪ್ರಕಾರವಾದುದು. (ಅಂದರೆ ತಾರತಮ್ಯದಿಂದಲೇ ತೋರುತ್ತದೆ.) ಶಬ್ದಾದಿಪ್ರಮಾಣಗಳಿಗೆ ತಾರತಮ್ಯದಿಂದಲೇ ಜ್ಞಾನಜನಕತ್ವಸ್ವಭಾವವಿದ್ದುದರಿಂದ ॥ ಸೂ ೬೦॥ ॥ ಅಧಿ. ೩೮ ॥

**ನಾನಾಶಬ್ದಾಧಿಕರಣವು ಸಮಾಪ್ತವಾಯಿತು.**

---

## ವಿಕಲ್ಪಾಧಿಕರಣವು.

**'ಓಂ ವಿಕಲ್ಪೋವಿಶಿಷ್ಟಫಲತ್ವಾತ್ ಓಂ' ॥ ಸೂ. ೬೧ ॥**

ಬಿಂಬಾನ್ಯವಾದ ನೃಸಿಂಹೋಪಾಸನೆಗೆ ವಿವಿಧಕಲ್ಪವು. (ಅಂದರೆ ಮಾಡಲೂ ಬಹುದು. ಮಾಡದೇನೇ ಇರಲೂಬಹುದು. ಮಾಡಬಾರದೆಂದೇ ನಿಯಮವಿಲ್ಲ.) ದುರಿತನಿವೃತ್ತಿರೂಪವಾದ ಫಲವಿಶೇಷಹೇತುತ್ವವಿದೆ ॥ ಸೂ. ೬೧ ॥ ಅಧಿ. ೩೯ ॥

**ವಿಕಲ್ಪಾಧಿಕರಣವು ಸಮಾಪ್ತವಾಯಿತು.**

---

## ಕಾಮ್ಯಾಧಿಕರಣವು.

**'ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ನ ವಾ ಪೂರ್ವಹೇತ್ವಭಾವಾತ್ ಓಂ' ॥ ಸೂ. ॥ ೬೨ ॥**

ವಿತ್ತಾದಿ ಕಾಮ್ಯಸಾಧನಭೂತಗಳಾದ **'ವಸುಪೂರ್ಣಕರಂ. ರತ್ನಪರ್ವತಸ್ಥಂ ವಿಭಾವಯನ್ । ವಸುಸಿದ್ಧಿಮವಾಪ್ನೋತಿ'** ಇತ್ಯಾದ್ಯುಕ್ತಗಳಾದ ಶ್ರೀಕರಾದಿ ಭಗವದ್ರೂಪ ಗುಣಗಳು ವಿತ್ತಾದಿ ಕಾಮನಾನುಸಾರವಾಗಿ ಉಪಸಂಹಾರ ಮಾಡಲೂಬಹುದು. ಮಾಡದೇನೇ ಇರಲೂಬಹುದು. ಅಥವಾ ಅಮುಮುಕ್ಷುಗಳು ಉಪಸಂಹಾರಮಾಡಬೇಕು. ಮುಮುಕ್ಷುಗಳು ಉಪಸಂಹಾರಮಾಡಬೇಕಾಗಿಲ್ಲ, ಮೋಕ್ಷೇಚ್ಛೆಯಿಂದ ಮೊದಲು ಇರತಕ್ಕ ವಿತ್ತಾದಿ ಕಾಮಾಖ್ಯವಾದ ಹೇತುವು ಅವರಿಗೆ ಇಲ್ಲ ॥ ಸೂ. ೬೨ ॥ ಅಧಿ. ೪೦ ॥

**ಕಾಮ್ಯಾಧಿಕರಣವು ಸಮಾಪ್ತವಾಯಿತು.**

---

## ಅಂಗಾಧಿಕರಣವು.

**"ಓಂ ಅಂಗೇಷು ಯಥಾಶ್ರಯಭಾವಃ ಓಂ" ॥ ಸೂ. ೬೩ ॥**

ಸೂರ್ಯಾದ್ಯಂಗದೇವತೆಗಳಿಗೆ ಚಕ್ಷುರಾದಿ ಭಗವದಂಗಗಳಲ್ಲಿ ಯಾವಪ್ರಕಾರ ಆಶ್ರಯತ್ವವು ಹೇಳಲ್ಪಟ್ಟದೋ ಆ ಪ್ರಕಾರವಾಗಿಯೇ ಅಂಗದೇವತೆಗಳ ಉಪಾಸನವನ್ನು ಮಾಡಬೇಕು,

'ಓಂ ಶಿಷ್ಟೇಶ್ಚ ಓಂ' ॥ ಸೂ. ೬೪ ॥

**'ಯಸ್ಮಿನ್ಯಸ್ಮಿನ್ಯೋಹಿ ಚಾಂಗೇ ನಿವಿಷ್ಟಃ ಪರಸ್ಯ ಚಿಂತ್ಯಃ ಸ ತಥಾ ತಥೈವ'** ಎನ್ನುವ ಶ್ರುತಿಯಲ್ಲಿ ವಿಹಿತವಾಗಿರುವುದರಿಂದಲೂ, ಅಂಗಗಳಲ್ಲಿ ಸೂರ್ಯಾದಿಗಳ ಉಪಾಸನೆಯನ್ನು ಮಾಡಬೇಕು.

'ಓಂ ಸಮಾಹಾರಾತ್ ಓಂ' ॥ ಸೂ. ೬೫ ॥

ಅಂಗಗಳಲ್ಲಿ ಹೇಗೆ ಆಶ್ರಯತ್ವವು ಹೇಳಲ್ಪಟ್ಟದೋ, ಹಾಗೆ ದೇವತೆಗಳು ಆ ಗುಣಗಳನ್ನು ಉಪಸಂಹಾರಮಾಡಬೇಕು. **'ಅಂಗೈಃ ಪರಾದ್ಯೇಹಿ ದೇವಾ ವಿಸೃಷ್ಟಾಃ ತತ್ತದ್ಗುಣಾನ್ ಪರಮೋ ಸಂಹರೇತ । ತಾಂಶ್ಚಾಪಿ ತತ್ರೈವ ವಿಚಿಂತ್ಯ ದೇವಾನ್ ಸ್ಥಾನಂ ಮುಮುಕ್ಷುಃ ಪರಮಂ ವ್ರಜೇತ'** ಎಂದು ಶ್ರುತಿಯಿದ್ದ ಪ್ರಯುಕ್ತ.

'ಓಂ ಗುಣಸಾಧಾರಣ್ಯ ಶ್ರುತೇಶ್ಚ ಓಂ' ॥ ಸೂ. ೬೬ ॥

ಈಶ್ವರನ ಗುಣಗಳು ಉಪಾಸ್ಯಗಳಾದುದರಿಂದ ಸಾಮ್ಯವನ್ನು ಅಂದರೆ ಎಲ್ಲಾ ಗುಣಗಳಿಗೂ ಉಪಾಸ್ಯತ್ವವನ್ನು ಪ್ರತಿಪಾದಿಸತಕ್ಕ **'ಸಾಧಾರಣಾತ್ಸರ್ವಗುಣಾಃ ಪರಸ್ಯ ಸಮಾಹಾರ್ಯಾಃ ತತ್ಸದೃಶೋ ಮುಮುಕ್ಷೋಃ'** ಎಂದು ಶ್ರುತಿಯಿದ್ದ ಪ್ರಯುಕ್ತ, ಸೂರ್ಯಾಶ್ರಯಚಕ್ಷುಷ್ಟ್ವಾದಿ ಗುಣಗಳಿಗೂ ಈಶಗುಣತ್ವದಿಂದಲೇ ಉಪಾಸನೆ ಮಾಡತಕ್ಕದು. ॥ ಸೂ.

**ಅಂಗಾಧಿಕರಣವು ಸಮಾಪ್ತವಾಯಿತು.**

---

# ನವಾಧಿಕರಣವು.

'ಓಂ ನ ವಾ ತತ್ಸಹಭಾವ ಶ್ರುತೇಃ ಓಂ' ॥ ಸೂ. ೬೭ ॥

ಸರ್ವ ಶಾಖೆಗಳಲ್ಲಿರತಕ್ಕ ಉಪಾಸನದಿಂದ ಕೂಡಿಕೊಂಡು ಸತ್ವವು ಶ್ರುತವಾಗದಿರುವುದರಿಂದ ಅಂಗಗಳಲ್ಲಿ ಸೂರ್ಯಾದಿಗಳಿಗೆ ಉಪಾಸನವನ್ನು ಮಾಡಕೂಡದು.

'ಓಂ ದರ್ಶನಾಚ್ಚ ಓಂ' ॥ ಸೂ. ೬೮ ॥

**'ಸತ್ಯೋ ಜ್ಞಾನಃ ಪರಮಾನಂದರೂಪಃ'** ಇತ್ಯಾದಿ ಶ್ರುತಿಗಳಲ್ಲಿ ದೇವತೆಗಳು ಹಾಗೆ ಉಪಾಸನೆ ಮಾಡಬೇಕು. ಇತರರು ಹಾಗೆ ಉಪಾಸನೆ ಮಾಡಕೂಡದು ಎನ್ನುವ ಅರ್ಥವು ಕಂಡದೆ ॥ ಸೂ. ೬೭ ॥ ೬೮ ॥ ಅಧಿ. ೪೨ ॥

**ನವಾಧಿಕರಣವು ಸಮಾಪ್ತವಾಯಿತು.**

---

# ಪರೇಣಾಧಿಕರಣವು.

## 'ಓಂ ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನು-ಬಂಧಃ ಓಂ' ॥ ಸೂ. ೬೯ ॥

'ಭಕ್ತಿರೇವೈನಂ ನಯತಿ' ಇತ್ಯಾದಿ ಶ್ರುತಿಗಳದೆಶೆಯಿಂದ ಭಕ್ತಿಯೇ ಮೋಕ್ಷಾದಿಗಳಿಗೆ ಸಾಧನವು. ಶ್ರೀ ಹರಿಯಲ್ಲ. ಉದಾ— ಏಕಲವ್ಯನಿಗೆ ಗುರುಭಕ್ತಿಯೇ ವಿದ್ಯಾಪ್ರಾಪ್ತಿಗೆ ಸಾಧನವು; ಗುರುವಲ್ಲನೆಂದರೆ— 'ಪ್ರಧಾನಸಾಧನತ್ವಾತ್ ಭಕ್ತಿಃ ಕರಣತ್ವೇನೋಚ್ಯತೇ' ಎಂದು ಭಾಷ್ಯವು. ಆದರಲ್ಲಿ ಭಗವಂತನನ್ನು ಅಪೇಕ್ಷಿಸಿಯೇ ಭಕ್ತಿಗೆ ಪ್ರಾಧಾನ್ಯವು ಎಂದು ಪ್ರತೀತಿಯು ಬರಬೇಕಾಗುವುದು. ಅದನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ—

ಮೂ ॥ ಸಾಧನೇಭ್ಯೋಽಧಿಕಾಭಕ್ತಿರ್ನೈವಾನ್ಯತ್ತಾದೃಶಂ ಕ್ವಚಿತ್ ॥ ೨೦೯ ॥
ಭಕ್ತಿಶ್ಚೈವ ಹರಾವೇವ ಮುಖ್ಯಾನ್ಯತ್ರ ಯಥಾಕ್ರಮಂ ।
ಸ್ವಾಧಿಕತ್ವೇನ ಸರ್ವತ್ರ ಸ್ವೋತ್ತಮೇಷು ಕ್ರಮೇಣ ಚ ॥ ೨೧೦ ॥
ಅನುವರ್ತತೇ ಚ ಸಾ ಭಕ್ತಿಃ ಮುಕ್ತಾವಾನಂದರೂಪಿಣೀ ।
ತತ್ಪೂರ್ವಿ(ರ್ವ)ಕೋಪಾಸನ್ಯೇವಂ ಕರ್ತವ್ಯಾ ಮುಕ್ತಯೇ ಗುಣೈಃ ॥
॥ ೨೧೧ ॥

ಅ ॥ ಸಾಧನೇಭ್ಯಃ = ಮೋಕ್ಷಸಾಧನಗಳಾದ ಜ್ಞಾನಾದಿ ಗುಣಗಳಿಂದ, ಭಕ್ತಿಃ = ಭಕ್ತಿಯು, ಅಧಿಕಾ=ಶ್ರೇಷ್ಠವಾದುದು. ಕ್ವಚಿತ್=ಎಲ್ಲಿಯೂ, ಮುಕ್ತಿಯಲ್ಲಿಯೂ ಜ್ಞಾನಾದಿ ಗುಣಗಳಲ್ಲಿ ಆಗಲೀ, ಅನ್ಯತ್ ತಾದೃಶಂ = ಶ್ರೀ ಹರಿಯಿಂದ ಇತರವಾದ, ತಾದೃಶಂ = ಸಾಧನವು ಭಕ್ತಿಸದೃಶವಾದುದು, ನೈವ=ಇಲ್ಲವೇ ಇಲ್ಲ. (ಭಕ್ತಿಃ ಎಂದು ಸಾಮಾನ್ಯವಾಗಿ ಹೇಳಿದ್ದಕ್ಕೆ. ವಿಷಯವು ಯಾವುದು ಹೇಗೆ ಎಂದು ತಿಳಿಯುವುದಿಲ್ಲ, ಎಂದರೆ—) ಭಕ್ತಿಶ್ಚೈವ= ಭಕ್ತಿಯೇ, ಹರಾವೇವ=ಶ್ರೀ ಹರಿಯಲ್ಲಿಯೇ, ಮುಖ್ಯಾ=ಸರ್ವಾಧಿಕವಾದುದು, (ಹಾಗೆಯೇ ಬೇರೆ ಕಡೆಯಿಲ್ಲ) ಅನ್ಯತ್ರಾಪಿ=ಸ್ವೋತ್ತಮರಲ್ಲಿಯೂ, ಯಥಾಕ್ರಮಂ ಏವ=ಕ್ರಮಾನುಸಾರ ವಾಗಿಯೇ. (ಸಾಮ್ಯದಿಂದಲಾಗಲೀ ಅಕ್ರಮದಿಂದಲಾಗಲೀ ಅಲ್ಲ) (ಅದರ ಇಯತ್ತಾವನ್ನು ಹೇಳುತ್ತಾರೆ.) ಸ್ವೋತ್ತಮೇಷು=ಸಾಕ್ಷಾತ್ ಸ್ವೋತ್ತಮರಾದವರಲ್ಲಿ, ಸರ್ವತ್ರ=ಎಲ್ಲರಲ್ಲಿಯೂ, ಸ್ವಾಧಿಕತ್ವೇನ = ತಮ್ಮಕಿಂತ ಆಧಿಕ್ಯವಾಗಿಯೇ, ಮಾಡತಕ್ಕದು. ಬೇರೆ ಸ್ವೋತ್ತಮರಲ್ಲಿ, ಕ್ರಮೇಣ ಚ=ಉತ್ತಮತ್ವ ಕ್ರಮದಿಂದಲೇ (ಮಾಡತಕ್ಕದು) (ಭಕ್ತಿಯು ಸಾಧನವಾದರೆ ಮುಕ್ತಿ ಪ್ರಾಪ್ತ್ಯನಂತರದಲ್ಲಿ ಇಲ್ಲವೆಂದು ಪ್ರತೀತಿಯಾಗುವುದು. ಫಲಪ್ರಾಪ್ತಿಯಾದಾಗ ಸಾಧನ ನಿವೃತ್ತಿಯು ಕಂಡದೆ. ಅದರ ನಿವೃತ್ತಿಗಾಗಿ ಹೇಳುತ್ತಾರೆ.) ಸಾ ಭಕ್ತಿಃ = ಆ ಭಕ್ತಿಯು, ಮುಕ್ತೌ = ಮುಕ್ತಿಯಲ್ಲಿ, ಆನಂದರೂಪಿಣೀ = ಆನಂದಸ್ವರೂಪಿಯಾದುದು, (ಮುಕ್ತಿಯಲ್ಲಿ ಸ್ವಭಾವಭೂತವಾದ ಆವಿರ್ಭೂತಫಲರೂಪವೇ.) ಅನುವರ್ತತೇ = ಅನುವೃತ್ತವಾಗುತ್ತದೆ. (ಪಾದಾರ್ಥವನ್ನುಪಸಂಹಾರಮಾಡುತ್ತಾರೆ.) ಏವಂ=ಹೀಗೆ, ತತ್ಪೂರ್ವಿಕೋಪಾಸನಾ=ಭಕ್ತಿ ಪೂರ್ವಕವಾದ ಉಪಾಸನೆಯು, ಗುಣೈಃ=ಗುಣಗಳಿಂದ, ಮುಕ್ತಯೇ = ಮುಕ್ತಿಗೋಸ್ಕರ, ಕರ್ತವ್ಯಾ=ಮಾಡತಕ್ಕದು ॥ ೨೦೯ ॥ ೨೧೦ ॥ ೨೧೧ ॥ ಅಧಿ. ೩೪ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ
ತೃತೀಯಾಧ್ಯಾಯಸ್ಯ ತೃತೀಯಃ ಪಾದಃ ಸಮಾಪ್ತಃ

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ ಮೂರನೇ ಅಧ್ಯಾಯದಲ್ಲಿ
ಮೂರನೇ ಪಾದವು ಸಮಾಪ್ತವಾಯಿತು

ಅಖಿಲವಿಬುಧವಂದ್ಯಂ ವಿಶ್ವರೂಪಂ ಸುರೇಶ- ।
ಮಭಯವರದಹಸ್ತಂ ಕಂಜಜಾಕ್ಷಂ ರಮೇಶಂ ॥
ಜಲಧರನಿಭಕಾಂತಿಂ ಶ್ರೀಮಹಿಭ್ಯಾಂ ಸಮೇತಂ ।
ಪರಮಪುರುಷಮಾದ್ಯಂ ವೆಂಕಟೇಶಂ ನಮಾಮಿ ॥

ಸಂಜೀವಪರ್ವತೋದ್ಧಾರ ಮಮ ದುಃಖಾನ್ನಿವಾರಯ ।
ಘೋರಾನುಪದ್ರವಾನ್ಸರ್ವಾನ್ ನಾಶಯಾಕ್ಷಾಸುರಾಂತಕ ॥

॥ ಶ್ರೀ ಕೃಷ್ಣಾರ್ಪಣಮಸ್ತು ॥



॥ ಶ್ರೀಃ ॥

# ನಾಲ್ಕನೇ ಪಾದವು.

---

## ಪುರುಷಾರ್ಥಾಧಿಕರಣವು.

**‘ ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ’** ॥ ಸೂ. ೧ ॥

‘ಯಂ ಯಂ ಲೋಕಂ ಮನಸಾ’ ಇತ್ಯಾದಿ ಶ್ರುತಿಗಳದೆಶೆಯಿಂದ ಎಲ್ಲಾ ಪುರುಷಾರ್ಥವೂ ಜ್ಞಾನದಿಂದಲೇ ಆಗುತ್ತದೆ.

**‘ ಓಂ ಶೇಷತ್ವಾತ್ಪುರುಷಾರ್ಥವಾದೋ ಯಥಾನ್ಯೇಷ್ವಿತಿ ಜೈಮಿನಿಃ ಓಂ’** ॥ ಸೂ. ೨ ॥

ಈ ಜ್ಞಾನಕ್ಕೆ ‘ ಯಂಯಂ ಲೋಕಂ ’ ಎನ್ನುವ ಶ್ರುತಿಯಲ್ಲಿ ಸ್ವರ್ಗ ಮೊದಲಾದ ಮೋಕ್ಷದಿಂದ ಇತರವಾದ ಪುರುಷಾರ್ಥ ಕಾರಣತ್ವವಾದವು ಜ್ಞಾನಕ್ಕೆ ಕಾರಣವಾದ ಕರ್ಮದಲ್ಲಿ ಶೇಷತ್ವವಿದ್ದುದರಿಂದಲೇ, ಸಾಕ್ಷಾತ್ತಾಗಿ ಅಲ್ಲ. ‘ ಸ್ವರ್ಗಂಧನಾದ್ದೇಹತೋ ವೈ ಗೃಹಾಚ್ಚ ಪ್ರಾಪ್ಸ್ಯಂತಿ ’ ಎನ್ನುವ ಶ್ರುತಿಯಲ್ಲಿ ಸ್ವರ್ಗಕ್ಕೆ ಕಾರಣಗಳಾದ ಕರ್ಮಶೇಷಗಳಾದ ಧನಮೊದಲಾದವುಗಳಲ್ಲಿ ಹೇಗೋ ಹಾಗೆಯೇ ಎಂದು ಜೈಮಿನಿಯು ಹೇಳುತ್ತಾನೆ.

**‘ ಓಂ ಆಚಾರ ದರ್ಶನಾಚ್ಚ ಓಂ ’** ॥ ಸೂ. ೩ ॥

‘ ಯಜ್ಞೇನ ಯಜ್ಞಮಯಜಂತ ’ ಇತ್ಯಾದಿ ಶ್ರುತಿಗಳಲ್ಲಿ ಕರ್ಮಾನುಷ್ಠಾನವೂ ಕಂಡದೆ.

**‘ ಓಂ ತಚ್ಛ್ರುತೇಃ ಓಂ ’** ॥ ಸೂ. ೪ ॥

ಕರ್ಮವನ್ನು ಕುರಿತು ಜ್ಞಾನಕ್ಕೆ ಶೇಷತ್ವವು ‘ ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ ’ ಎನ್ನುವ ಶ್ರುತಿಯಲ್ಲಿ ಪ್ರತಿಪಾದಿತವಾಗಿದೆ.

**‘. ಓಂ ಸಮನ್ವಾರಂಭಣಾತ್ ಓಂ ’** ॥ ಸೂ. ೫ ॥

‘ ಕರ್ಮೈವ ದೇಹಂ ದೈವಿಕಂ ಮಾನುಷಂ ವಾಹ್ಯಸ್ವಾರಭೇತ್ ’ ಎನ್ನುವ ಶ್ರುತಿಯಿಂದ ಕರ್ಮದಿಂದಲೇ ಐಹಿಕ-ಆಮುಷ್ಮಿಕ ದೇಹಾದಿಗಳಿಗೆ ಉತ್ಪತ್ತ್ಯಾದಿಗಳು ಹೇಳಲ್ಪಟ್ಟದೆ.

**‘ ಓಂ ತದ್ವತೋ ವಿಧಾನಾತ್ ಓಂ ’** ॥ ಸೂ. ೬ ॥

‘ ಜ್ಞಾನೀ ಚ ಕರ್ಮಾಣಿ ಸದೋದಿತಾನಿ ಕುರ್ಯಾದಕಾಮಃ ’ ಎನ್ನುವ ಶ್ರುತಿಯಿಂದ ಜ್ಞಾನವುಳ್ಳವನಿಗೂ ಕರ್ಮವನ್ನು ವಾದಿಸಿದರಿಂದ ಲೀಲಾತ್ವವಿಲ್ಲ.

## ' ಓಂ ನಿಯಮಾಚ್ಚ ಓಂ ' ॥ ಸೂ. ೭ ॥

' ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ' ಎನ್ನುವ ಶ್ರುತಿಯಿಂದ ಜ್ಞಾನಿಗೂ ಕೂಡ ಕರ್ಮವು ನಿಯಮಿತವಾದುದರಿಂದಲೂ ಮಾಡದಿದ್ದರೆ ಪ್ರತ್ಯವಾಯವಿದ್ದುದರಿಂದಲೂ ಲೀಲಾತ್ವವಿಲ್ಲ.

## ' ಓಂ ಅಧಿಕೋಽಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ಓಂ ' ॥ ಸೂ. ೮ ॥

ಜ್ಞಾನದಿಂದಲೇ ಸರ್ವಪುರುಷಾರ್ಥವು ಆಗುತ್ತದೆನ್ನುವುದು ವೇದವ್ಯಾಸರ ಮತವು. ಜ್ಞಾನವು ಕರ್ಮಶೇಷವಲ್ಲ. (ಹಾಗಾದರೆ— ಜ್ಞಾನಿಯ ಆಚಾರಕ್ಕೆ ವೈಯರ್ಥ್ಯವು, ಹಿಂದೆಹೇಳಿದ ವಿದ್ಯಾದಿಗಳೂ ಕೂಡಲಾರವು ಎಂದು ಶಂಕಿಸಕೂಡದು. ಜ್ಞಾನಾರ್ಜಿತ ಫಲದಲ್ಲಿ ಅಧಿಕವಾದ ಕರ್ಮಾಧೀನವಾದ ಅತಿಶಯವು ' **ಯಥಾ ಯಥಾ ಕರ್ಮ ಕುರುತೇ ತಥಾ ತಥಾ ಅಧಿಕೋ ಭವತಿ** ' ಎಂದುಪದೇಶವಿದೆ. ಅಂದರೆ— ಕರ್ಮಕ್ಕೆ ಜ್ಞಾನಶೇಷತ್ವವನ್ನು ಹೇಳಿರುತ್ತಾರೆ. ಮತ್ತು ಜ್ಞಾನಫಲದಲ್ಲಿ ಕರ್ಮಾರ್ಜಿತವಾದ ಅತಿಶಯವು ರಾಜಸೂಯಾದಿಗಳಿಂದ ತೋರಿಯದೆ. ' **ರಾಜಸೂಯಾರ್ಜಿತಾನ್ ಲೋಕಾನಶ್ವಮೇಧಾಭಿವರ್ಧಿತಾನ್ । ಪ್ರಾಪ್ನುಹಿತ್ವಂ ಮಹಾಭಾಗ ತಪಸಶ್ಚ ಮಹಾಫಲಂ** ' ಎಂದು ತತ್ವಪ್ರದೀಪೋಕ್ತ ವಚನದಿಂದ ತಿಳಿಯತಕ್ಕದು.

## ' ಓಂ ತುಲ್ಯಂತು ದರ್ಶನಂ ಓಂ ' ॥ ಸೂ. ೯ ॥

ಜ್ಞಾನಿಗಳ ದರ್ಶನವು ಕರ್ಮವನ್ನು ಮಾಡಿದರೂ ಮಾಡದಿದ್ದರೂ ಪುರುಷಾರ್ಥ ಸಮರ್ಥವೇ.

(1) ' ಜ್ಞಾನಸಾಮರ್ಥ್ಯಮಸ್ಮಿನ್ ಪಾದ ಉಚ್ಯತೇ ' ಎಂದು ಪಾದಪ್ರತಿಪಾದ್ಯವಾದುದನ್ನು ಭಾಷ್ಯದಲ್ಲಿ ಹೇಳಿರುತ್ತಾರೆ. (2) ಹಾಗಾದರೆ ಜ್ಞಾನಕ್ಕೆ ಸ್ವತಂತ್ರವಾಗಿ ಮೋಕ್ಷಸಾಧನತ್ವವೇ ಸಾಮರ್ಥ್ಯವು. ಅದು ' **ವಿದ್ಯೈವತು ನಿರ್ಧಾರಣಾತ್** ' ಎನ್ನುವಲ್ಲಿ ಉಕ್ತವಾಗಿದೆ. ಇನ್ನು ಅವಶಿಷ್ಟವಾದುದು ಯಾವುದಿದೆ? ಏಕೆ ಪಾದವನ್ನು ಆರಂಭಿಸಬೇಕು ಎಂದರೆ- ಜ್ಞಾನಕ್ಕೆ ಸ್ವತಂತ್ರವಾಗಿ ಮೋಕ್ಷಸಾಧನತ್ವವು ಸಿದ್ಧವಾಗಿಯದೆ. ವಿಷಯಾಂತರದಲ್ಲಿ ಆದರೂ ಸಾಮರ್ಥ್ಯವನ್ನು ಸಮರ್ಥಿಸುತ್ತಾರೆ. (3)ಯದ್ಯಪಿ ಸಾಧಕನು ಮೋಕ್ಷಕ್ಕಾಗಿಯೇ ಇದನ್ನು ಸಾಧಿಸಿರುವನು. ಆದಾಗ್ಯೂ ಸ್ವಭಾವ ಬಲದಿಂದ ಪ್ರಾಪ್ತವಾದ ಇತರ ಪುರುಷಾರ್ಥಪ್ರದತ್ವ ರೂಪವಾದ ಸಾಮರ್ಥ್ಯವು ಯುಕ್ತವಾಗುತ್ತದೆ. ಹೇಗೆಂದರೆ— ಸುಡುವುದಕ್ಕಾಗಿ ಉತ್ಪಾದಿತವಾದ ದಹನವು ಸ್ವಭಾವ ವಶದಿಂದಲೇ ಪ್ರಕಾಶವನ್ನು ಪಡಿಸುತ್ತದೆ.—

## ' ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ ' ॥ ಸೂ. ೧೧

ಕರ್ಮಸಾಹಾಯ್ಯದಿಂದ ಜ್ಞಾನವು ಮೋಕ್ಷಕ್ಕೆ ಸಾಧನವೋ ಅಥವಾ ಸ್ವತಂತ್ರವೇ ಆದ ಜ್ಞಾನವು ಮೋಕ್ಷಕ್ಕೆ ಸಾಧನವೋ ಎಂದು ಸಂಶಯವು ಬಂದರೆ, ಸ್ವತಂತ್ರ ಜ್ಞಾನಕ್ಕೇನೇ ಮೋಕ್ಷ ಸಾಧನತ್ವವು ಇದರಿಂದ ಸಮರ್ಥಿಸಲ್ಪಡುತ್ತದೆ, ಎಂದು ಕೆಲವರು ವ್ಯಾಖ್ಯಾನಮಾಡುತ್ತಾರೆ.

ಅದು ಅಯುಕ್ತವು. ಈ ಅರ್ಥವು '**ವಿದ್ಯೈವ ತು ನಿರ್ಧಾರಣಾತ್**' ಎನ್ನುವಲ್ಲಿಯೇ ಸಮರ್ಥಿಸಲ್ಪಟ್ಟದೆ. ಮತ್ತೆ ಜ್ಞಾನವು ಮೋಕ್ಷವನ್ನೇ ಸಾಧಿಸಿಕೊಡುತ್ತದೋ, ಅಥವಾ ಬೇರೆ ಪುರುಷಾರ್ಥವನ್ನೂ ಸಾಧಿಸಿಕೊಡುತ್ತದೋ ಎಂದು ಸಂಶಯವು ಬಂದರೆ— ಜ್ಞಾನಿಗಳಿಗೆ ಬೇರೆ ಪುರುಷಾರ್ಥದಲ್ಲಿ ರಾಗವಿಲ್ಲದಿರುವುದರಿಂದ ಜ್ಞಾನವು ಮೋಕ್ಷವನ್ನೇ ಸಾಧಿಸಿಕೊಡುತ್ತದೆ ಎಂದು ಪ್ರಾಪ್ತವಾದರೆ ಈ ಅಧಿಕರಣವು ಪ್ರವೃತ್ತವಾಗಿದೆ ಎಂದು ಅಭಿಪ್ರಾಯವುಳ್ಳವರಾಗಿ '**ಪುರುಷಾರ್ಥೋಽತಃ**' ಎನ್ನುವುದನ್ನು ವ್ಯಾಖ್ಯಾನಮಾಡುತ್ತಾರೆ.—

**ಮೂ ॥ ಏವಮುತ್ಪನ್ನನಿರ್ದೋಷಭಗವದ್ದರ್ಶನಾತ್ಸದಾ ।**
**ಅಪೇಕ್ಷಿತಫಲಪ್ರಾಪ್ತಿರಾರಬ್ಧಸ್ಯಾನತಿಕ್ರಮಾತ್ ॥ ೧ ॥**
**ದೇವರ್ಷಿಮಾನುಷಾದೀನಾಂ ತತ್ತಜ್ಜಾತ್ಯನುಸಾರತಃ ।**
**ಜೈಮಿನ್ಯುಕ್ತಂ ಮಾನುಷಾಣಾಂ ತದ್ವಿಶೇಷಾಶ್ಚ ಕೇಚನ ॥ ೨ ॥**
**ಸಾಮಾನ್ಯಂ ಭಗವತ್ಪ್ರೋಕ್ತಂ ದೇವಾದೀನಾಂ ವಿಶೇಷತಃ ।**
**ಬಲವದ್ವಿರೋಧಿಸದ್ಭಾವೇ ಜೈಮಿನ್ಯಾದ್ಯುಕ್ತಿರಿಷ್ಯತೇ ॥ ೩ ॥**

**ಅ ॥** ಏವಂ=ಹಿಂದೆ ಹೇಳಿದಪ್ರಕಾರ, ಉತ್ಪನ್ನನಿರ್ದೋಷಭಗವದ್ದರ್ಶನಾತ್=ಉಪಾಸನದಿಂದ ಹುಟ್ಟದ, ದೋಷಲೇಶರಹಿತನಾದ ಶ್ರೀ ಹರಿಯದರ್ಶನದೆಶೆಯಿಂದ, ಸದಾ=ಜ್ಞಾನ ಹುಟ್ಟದ ಕ್ಷಣವನ್ನಾರಂಭಿಸಿ, ಅಪೇಕ್ಷಿತಫಲಪ್ರಾಪ್ತಿಃ=ಇಷ್ಟವಾದ ಫಲದಪ್ರಾಪ್ತಿಯು, (ಆಗುತ್ತದೆ.) (ಹಾಗಾದರೆ ಇದು ಅಯುಕ್ತವು. ಜ್ಞಾನಿಗಳ ಅಭಿಪ್ರಾಯಕ್ಕೂ ಕೂಡ ಕೆಲವುವೇಳೆ ವೈಯರ್ಥ್ಯವು ಕಂಡದೆ. ಎಂದರೆ—) ಆರಬ್ಧಸ್ಯ=ಪ್ರಾರಬ್ಧಕರ್ಮದ, ಅನತಿಕ್ರಮಾತ್=ಅತಿಕ್ರಮವನ್ನುಮಾಡದೇನೇ, ಅಪೇಕ್ಷಿತವಾದ ಫಲದ ಪ್ರಾಪ್ತಿಯಾಗುತ್ತದೆ. (ಪ್ರಾರಬ್ಧಪ್ರತಿಬದ್ಧವಾದ ಜ್ಞಾನವು ಮೋಕ್ಷವನ್ನು ಮಾಡುವುದಿಲ್ಲ. ಆದಕಾರಣ ಪ್ರಾರಬ್ಧ ಪ್ರತಿಬಂಧಕವಶದಿಂದ ಜ್ಞಾನಿಗಳ ಅಭಿಪ್ರಾಯಗಳೂಕೂಡ ವ್ಯರ್ಥಗಳಾಗುವುವು ) (ಜ್ಞಾನಕ್ಕೆ ಪುರುಷಾರ್ಥಹೇತುತ್ವದಲ್ಲಿಯೂ ವಿಶೇಷವದೆ ಎನ್ನುತ್ತಾರೆ.) ದೇವರ್ಷಿಮಾನುಷಾದೀನಾಂ=ದೇವತೆಗಳೂ, ಋಷಿಗಳೂ ಮನುಷ್ಯರೂ ಇವರಿಗೆ, ತತ್ತಜ್ಜಾತ್ಯನುಸಾರತಃ = ಅವರವರ ಯೋಗ್ಯತಾನುಸಾರವಾಗಿ, ಅಪೇಕ್ಷಿತಫಲಪ್ರಾಪ್ತಿಃ=ಇಷ್ಟವಾದ ಫಲದ ಪ್ರಾಪ್ತಿಯು ಆಗುತ್ತದೆ. (ಇಲ್ಲಿ ಜ್ಞಾನವು ಸ್ವತಂತ್ರವಾಗಿಯೇ ಸ್ವರ್ಗಾದಿ ಸಾಧನವಲ್ಲ, ಮತ್ತೆ ಕರ್ಮವೇ. ಜ್ಞಾನವಾದರೂ ಕರ್ಮಕ್ಕೆ ಶೇಷವಾಗಿರುವುದರಿಂದ ಸ್ವರ್ಗಕ್ಕೆ ಸಾಧನವೆಂದು ಹೇಳಲ್ಪಡುತ್ತದೆ. ಜ್ಞಾನಕ್ಕೆ ಅಂಗತ್ವವಾದರೂ ಕರ್ಮದಿಂದಲೇ ಸಿದ್ಧಿಸತಕ್ಕ ಪುರುಷಾರ್ಥದಲ್ಲಿ ಅತಿಶಯುವನ್ನು ಹೊಂದಿಸಿಕೊಡುವಿಕೆಯು. ಆದಕಾರಣ '**ಶೇಷತ್ವಾತ್ಪುರುಷಾರ್ಥವಾದೋ ಯಥಾನ್ಯೇಷ್ವಿತಿ ಜೈಮಿನಿಃ**' ಇತ್ಯಾದಿ ಆರು ಸೂತ್ರಗಳಿಂದ ಪೂರ್ವಪಕ್ಷ ಮಾಡಿ, '**ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್**' ಇತ್ಯಾದಿಗಳಿಂದ ಸ್ವತಂತ್ರವಾದ ಜ್ಞಾನಕ್ಕೇನೇ ಸ್ವರ್ಗಾದಿ ಸಾಧನತ್ವವನ್ನು ಪುನಃ ಸಿದ್ಧಾಂತಮಾಡಿರುತ್ತಾರೆ. ಅದರಲ್ಲಿ ಪೂರ್ವಪಕ್ಷಿಯಿಂದ ಉಪನ್ಯಾಸಮಾಡಲ್ಪಟ್ಟ ಪ್ರಮಾಣನಿರಾಸವು ಭಾಷ್ಯದಲ್ಲಿ ಸ್ಪಷ್ಟವಾಗಿದೆ. ಜೈಮಿನಿಮತವಿರೋಧಪರಿಹಾರವಾದರೂ ಹೇಗೆಂದರೆ—) ಜೈಮಿನ್ಯುಕ್ತಂ=ಜೈಮಿನಿಯಿಂದ ಹೇಳಲ್ಪಟ್ಟದ್ದು, ಮಾನುಷಾಣಾಂ=ಮನುಷ್ಯರಿಗೆ (ಅಂದರೆ—ಜ್ಞಾನಶೇಷವಾದ ಕರ್ಮಕ್ಕೇನೇ ಸ್ವರ್ಗಾದಿ ಸಾಧನತ್ವವು, ಮಾನುಷಜ್ಞಾನಿ ವಿಷಯುಕವಾದುದು. ಜೈಮಿನಿಯಿಂದ ಹೇಳಲ್ಪಟ್ಟದ್ದು ಮಾತ್ರವಲ್ಲ, ಮತ್ತೆ '**ಸ್ವರ್ಗಾದಯಃ ಕರ್ಮಣೈವ ನಾನ್ಯೇನೇತ್ಯಪರೇ ವಿದುಃ । ಅದೃಷ್ಟಮೇವ ಜ್ಞಾನೇನ ದೃಷ್ಟಂ**

**ನೈವೋಪಲಭ್ಯತೇ । ಇತಿ ಕೇಚಿದ್ವಿದಃ ಪ್ರಾಹುಃ'** ಇತ್ಯಾದಿಗಳಿಂದ ಹೇಳಲ್ಪಟ್ಟ) ಕೇಚನ ತದ್ವಿಶೇಷಾಶ್ಚ=ಜೈಮಿನಿಮತೈಕದೇಶಗಳಾದ ಕೆಲವು ಯಾವ ವಿಶೇಷಗಳೋ, ಅವುಗಳೂ ಕೂಡ, ಮಾನುಷಾಣಾಂ=ಮನುಷ್ಯರಿಗೆ, (ಇವುಗಳಿಗೆ ಜೈಮಿನಿಮತೈಕದೇಶತ್ವವು ಹೇಗೆ ಎಂದರೆ-ಸ್ವತಂತ್ರವಾದ ಜ್ಞಾನಕ್ಕೆ ಸ್ವರ್ಗಾದಿ ಸಾಧನತ್ವವು ಇಲ್ಲ. ಇಷ್ಟು ಅಂಶದಲ್ಲಿ ಸಾಮ್ಯವಿದೆ, ಎನ್ನುತ್ತೇವೆ. ಮನುಷ್ಯರೂ ಕೂಡ ಉತ್ತಮ-ಮಧ್ಯಮ-ಅಧಮರೆಂದು ಭೇದದಿಂದ ಭಿನ್ನರೆಂದು ಯಥಾಯೋಗ್ಯವಾಗಿ ವಿಚಿತ್ರವಾದ ಮತಕ್ಕೆ ವಿಷಯರಾಗುತ್ತಾರೆ.) (ಈಗ ಜೈಮಿನಿ ಮತ ವಿಷಯವನ್ನು ಹೇಳಿ ಸೂತ್ರಕಾರರ ಮತ ವಿಷಯವನ್ನು ತೋರಿಸುತ್ತಾರೆ.) ಸಾಮಾನ್ಯಂ=ಜ್ಞಾನವು ಸಕಲ ಪುರುಷಾರ್ಥಕ್ಕೂ ಸಾಧನವಾಗುತ್ತದೆ ಎಂದು ಸಾಮಾನ್ಯವೇ, ಭಗವತ್ಪ್ರೋಕ್ತಂ=ಶ್ರೀ ಹರಿಯಿಂದ ಹೇಳಲ್ಪಟ್ಟದೆ. (ಪುರುಷವಿಶೇಷನಿಷ್ಠವಾದ ಜ್ಞಾನವಲ್ಲ. ಆದ ಕಾರಣ ಸಾಮಾನ್ಯ ವಿಶೇಷ ನಿಯತಗಳಾಗಿರುವುದರಿಂದ ಈ ಮತಗಳಿಗೆ ವಿರೋಧವಿಲ್ಲ.) (ಹಾಗಾದರೆ ಸಾಮಾನ್ಯದಿಂದಲೂ ಕೂಡ ಕೆಲವು ವಿಶೇಷದಲ್ಲಿ ಅವಶ್ಯಕವು. ಆದಕಾರಣ ಇದೂ ಕೂಡ ಎಲ್ಲಿರುತ್ತದೆ ಎಂದರೆ—) ದೇವಾದೀನಾಂ ವಿಶೇಷತಃ=ಶ್ರೀ ವೇದವ್ಯಾಸರ ಮತವು ವಿಶೇಷವಾಗಿ ಅಪವಾದಗಳಿಂದ ಬಾಧಿತವಾಗಿ ದೇವಾದಿಗಳ ವಿಷಯಕವಾಗಿ ಇರುತ್ತದೆ. (ಯದ್ಯಪಿ ಅಪವಾದ ವಿಷಯವನ್ನು ಬಿಟ್ಟು ಸಾಮಾನ್ಯವು ಇರುತ್ತದೆ ಎನ್ನುವ ಈ ಅರ್ಥವು ಲೋಕವ್ಯವಹಾರದಿಂದಲೇ ಸಿದ್ಧವಾಗಿದೆ. ಆದಾಗ್ಯೂ ಮಂದರಿಗೆ ತಿಳಿಸುವುದಕ್ಕಾಗಿ ಆಚಾರ್ಯರೇ ಹೇಳಿರುವರು.) (ಪ್ರಕಾರಾಂತರದಿಂದ ಮತಗಳಿಗೆ ವಿಷಯಭೇದವನ್ನು ತೋರಿಸುತ್ತಾರೆ.) ಬಲವದ್ವಿರೋಧಿಸದ್ಭಾವೇ=ಪ್ರಬಲವಾದ ವಿರೋಧಿ (ಪ್ರತಿಬಂಧಕ)ಇದ್ದರೆ, ಜೈಮಿನ್ಯಾದ್ಯುಕ್ತಿಃ=ಜೈಮಿನಿ ಮೊದಲಾದವರ ಉಕ್ತಿಯು, ಇಷ್ಯತೇ = ಅಂಗೀಕರಿಸಲ್ಪಡುತ್ತದೆ. (ಅಂದರೆ— ಶ್ರೀ ವೇದವ್ಯಾಸರು ಜ್ಞಾನವು ಸಕಲ ಪುರುಷಾರ್ಥಕ್ಕೂ ಸಾಧನವು ಎಂದು ಸಾಮಾನ್ಯವಾಗಿ ಹೇಳಿರುವರು. ಜೈಮಿನ್ಯಾದಿಗಳಾದರೂ ಬಲಿಷ್ಠವಾದ ಪ್ರತಿಬಂಧಕೀಭೂತವಾದ ಕರ್ಮವು ಇದ್ದರೆ ಜ್ಞಾನವು ಪುರುಷಾರ್ಥಕ್ಕೆ ಸಾಧನವಲ್ಲವೆನ್ನುವ ಅಭಿಪ್ರಾಯದಿಂದ ಸ್ವತಂತ್ರಜ್ಞಾನದೆಶೆಯಿಂದ ಸ್ವರ್ಗಾದಿ ಪ್ರಾಪ್ತಿಯಾಗುವುದಿಲ್ಲವೆಂದು ಹೇಳಿರುವರು. ಅಂತೂ ಸಾಮಾನ್ಯ ವಿಶೇಷವಿಷಯಕವಾದುದರಿಂದ ವಿರೋಧವಿಲ್ಲ. ಅಂತೂ ವೇದವ್ಯಾಸರ ಮತವು ಅಪ್ರತಿಬದ್ಧಜ್ಞಾನವಿಷಯಕವು.)

**ತಾ ॥ ಸ. ರ. ವಿ—** (1) ಯಾವುದು ಶ್ರೀ ಹರಿಯ ದರ್ಶನವನ್ನುದ್ದೇಶಿಸಿ ಮೊದಲು ಭಕ್ತಿಪೂರ್ವಕವಾದ ಉಪಾಸನೆಯು ವಿಹಿತವಾಗಿದೆಯೋ, ಅಂತಹ ಭಗವದ್ದರ್ಶನದಿಂದ ಪ್ರಾರಬ್ಧ ಪ್ರತಿಬಂಧವು ಇಲ್ಲದಿರಲು ಜ್ಞಾನಫಲವೆಲ್ಲವೂ ಸಿದ್ಧಿಸುತ್ತದೆ ಎನ್ನುವುದೂ, ಇತರವಾದುದೂ ಪ್ರಸಕ್ತವಾದುದನ್ನು ಈ ಪಾದದಲ್ಲಿ ನಿರೂಪಿಸುತ್ತಾರೆ. ವಿಶೇಷಾಕಾರವಾಗಿ ಮೋಕ್ಷಾಖ್ಯಫಲವನ್ನು ಅಧಿಕರಿಸಿ ಉತ್ತರಾಧ್ಯಾಯವಿಚಾರವು ಪ್ರವೃತ್ತವಾಗುವುದು. ಅಪೇಕ್ಷಿತಫಲವು ಜ್ಞಾನ ತಾರತಮ್ಯದಿಂದಲೇ. ದೇವರ್ಷ್ಯಾದಿಗಳಿಗೆ ತಮ್ಮ ತಮ್ಮ ಯೋಗ್ಯತಾನುಸಾರವಾಗಿಯೇ ಸಿದ್ಧಿಸುತ್ತದೆ. ಬೇರೆಪ್ರಕಾರವಲ್ಲ. ಅಂತೂ **'ಯಂ ಯಂ ಲೋಕಂ ಮನಸಾ ಸಂವಿಭಾತಿ ವಿಶುದ್ಧ ಸತ್ವಃ ಕಾಮಯತೇ ಯಾಂಶ್ಚ ಕಾಮಾನ್ । ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾನ್ ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ಭೂತಿಕಾಮಃ'** ಎನ್ನುವ ಶ್ರುತಿಯಿಂದ ಪರಮಾತ್ಮನ ಜ್ಞಾನದಿಂದಲೇ ಅಪೇಕ್ಷಿತವಾದ ಅರ್ಥವು ಸಿದ್ಧವಾಗುವುದಾದರೂ ಕರ್ಮದಿಂದ ಆಧಿಕ್ಯವು ಸಿಗುತ್ತದೆ. ಜ್ಞಾನಿಗೆ ಕರ್ಮಕರಣವು ವ್ಯರ್ಥವಲ್ಲ, ಎಂದು ವೇದವ್ಯಾಸರ ಮತವು. ಜೈಮಿನಿಯಾದರೂ ಮೋಕ್ಷವ್ಯತಿರಿಕ್ತವಾದ ಫಲವು ಕರ್ಮದಿಂದಲೇ ಸಿದ್ಧಿಸುತ್ತದೆ. ಜ್ಞಾನದಿಂದ ಅಧಿಕವಾಗುತ್ತದೆ, ಎಂದು ತಿಳಿಯುತ್ತಾನೆ. **'ಯದೇವ ವಿದ್ಯಯಾ ಕರೋತಿ ಶ್ರದ್ಧ**

ಯೋಪನಿಷದಾ ತದೇವ ವೀರ್ಯವತ್ತರಂ ಭವತಿ' ಎನ್ನುವ ಶ್ರುತಿಯು ಬಲದಿಂದ, ಭಗವಂತನ ಮತಕ್ಕೂ ಜೈಮಿನಿಮತಕ್ಕೂ ಸಾಮಾನ್ಯವಿಶೇಷಭಾವದಿಂದ ವಿರೋಧವಿಲ್ಲವೆಂದ್ಯ ತಿಳಿಯತಕ್ಕದು. ಶ್ರೀ ವೇದವ್ಯಾಸರ ಮತವು ಜ್ಞಾನಿಸಾಮಾನ್ಯವಿಷಯಕವು, ಆದುದಾಗೂ ಜೈಮಿನಿ ಮತವನ್ನು ಅನುಸರಿಸಿ ದೇವಾದಿಗಳಲ್ಲಿ ವ್ಯವಸ್ಥಿತವಾಗುತ್ತದೆ. ಜೈಮಿನಿಮತವಾದರೂ ಜ್ಞಾನಿಗಳಾದ ಮನುಷ್ಯರ ವಿಷಯಕವಾದುದು. (4) ದೇವಾದಿಗಳಲ್ಲಿಯೂ ಪ್ರಬಲವಾದ ಪ್ರಾರಬ್ಧಪ್ರತಿಬಂಧಕವುಳ್ಳ ಜ್ಞಾನವಿಷಯಕವಾಗಲೀ ಆಗುವುದು. ಪ್ರತಿಬಂಧಕೀಭೂತವಾದ ಪ್ರಾರಬ್ಧಕರ್ಮದಿಂದ ಪ್ರತಿಬದ್ಧವಾದ ಜ್ಞಾನವು ಮೋಕ್ಷೇತರವು. ಅಪೇಕ್ಷಿತವಾಗಿದ್ದರೂ ಅದನ್ನು ಸಾಧಿಸಿಕೊಡಲಿಕ್ಕೆ ಶಕ್ತವಾಗಲಾರದು. ಜ್ಞಾನಿಗಳಿಗೆ ಮೋಕ್ಷವ್ಯತಿರಿಕ್ತವಾದ ಫಲದಲ್ಲ ಅಪೇಕ್ಷೆಯು ಸರ್ವಥಾ ಇಲ್ಲವೆಂದು ಹೇಳಕೂಡದು. ಸೌಭರ್ಯಾದಿಗಳಿಗೆ ಕಂಡದೆ ॥ ೧ ॥ ೨ ॥ ॥ ೩ ॥ ಸೂ. ॥ ೧ ॥ ೨ ॥ ೩ ॥ ೪ ॥ ೫ ॥ ೬ ॥ ೭ ॥ ೮ ॥ ೯ ॥ ಅಧಿ. ೧ ॥

**ಪುರುಷಾರ್ಥಾಧಿಕರಣವು ಸಮಾಪ್ತವಾಯಿತು.**

---

## ಅಸಾರ್ವತ್ರಿಕ್ಯಧಿಕರಣವು.

**'ಓಂ ಅಸಾರ್ವತ್ರಿಕೀ ಓಂ'** ॥ ಸೂ. ॥ ೧೦ ॥

ಮೋಕ್ಷಸಾಧನ ಜ್ಞಾನದಲ್ಲಿಯೂ, ಶ್ರವಣಾದಿಗಳಲ್ಲಿಯೂ ಅಧಿಕಾರಿತ್ವವು ಸರ್ವ ಜೀವರಲ್ಲಿ ರತಕ್ಕದಲ್ಲ.

**'ಓಂ ವಿಭಾಗಃ ಶತವತ್ ಓಂ'** ॥ ಸೂ. ॥ ೧೧ ॥

ಒಂಭತ್ತು ಕೋಟಿ ದೇವತೆಗಳಲ್ಲಿ ದೇವತ್ವವು ಸಮಾನವಾದುದಾಗ್ಯೂ ಪರಬ್ರಹ್ಮ-ಅಪರ ಬ್ರಹ್ಮ ಇವರಿಂದ ಅಧಿಕವಾದ ನೂರು ದೇವತೆಗಳಿಗೇನೇ ಸೋಮಾಧಿಕಾರ; ಇತರರಿಗೆ ಇಲ್ಲವೆನ್ನುವ ವ್ಯವಸ್ಥೆಯು ಹೇಗೋ ಹಾಗೆಯೇ ಅರ್ಥಿತ್ವಾದಿಗಳು ಸಮಾನವಾದಾಗ್ಯೂ ಕೆಲವರಿಗೆ ಅಧಿಕಾರವು; ಕೆಲವರಿಗೆ ಇಲ್ಲ, ಎನ್ನುವ ವಿಭಾಗವು ಪ್ರಾಮಾಣಿಕರಿಂದ ಅಂಗೀಕರಿಸಲ್ಪಡುತ್ತದೆ.

**'ಓಂ ಅಧ್ಯಯನಮಾತ್ರವತಃ ಓಂ'** ॥ ಸೂ. ೧೨ ॥

ಯಥಾಶಕ್ತಿ ನಿಖಿಲ ವೇದಾಧ್ಯಯನವುಳ್ಳವನಿಗೆ ಜ್ಞಾನದಲ್ಲಿ ಅಧಿಕಾರವು ॥ ೧೦ ॥ ೧೧ ॥ ॥ ೧೨ ॥ ಅಧಿ ೨ ॥

**ಅಸಾರ್ವತ್ರಿಕ್ಯಧಿಕರಣವು ಸಮಾಪ್ತವಾಯಿತು.**

---

## ನಾವಿಶೇಷಾಧಿಕರಣವು.

**'ಓಂ ನಾವಿಶೇಷಾತ್ ಓಂ'** ॥ ಸೂ. ೧೩ ॥

ದೇವತೆಗಳಿಗೆ ಜ್ಞಾನದಲ್ಲಿ ಅಧಿಕಾರವು ಏಕರೂಪವಲ್ಲ. ಜ್ಞಾನಕ್ಕೂ ಅವಿಶೇಷವು ಬರ ಬೇಕಾಗುವುದು. ಅಂತೂ ಜ್ಞಾನವು ಅಧಿಕಾರಾನುಸಾರಿಯಾದುದು ॥ ಸೂ. ೧೩ ॥ ಅಧಿ. ೩ ॥

**ನಾವಿಶೇಷಾಧಿಕರಣವು ಸಮಾಪ್ತವಾಯಿತು.**

---

# ಸ್ಮೃತ್ಯಧಿಕರಣವು.

## 'ಓಂ ಸ್ಮೃತಯೋಽನುಮತಿರ್ವಾ ಓಂ' ॥ ಸೂ. ೧೪ ॥

'ಸ ಬ್ರಾಹ್ಮಣಃ ಕೇನ ಸ್ಯಾದ್ಯೇನ ಸ್ಯಾತ್ ತೇನ ಈದೃಶ ಏವ' ಎನ್ನುವ ಶ್ರುತಿಯಲ್ಲಿ ಜ್ಞಾನಿಗೆ ಯಥೇಷ್ಟಾಚರಣವು ವಿಧಿಯಲ್ಲ. ಮತ್ತೆ ಜ್ಞಾನಿ ಸ್ತುತ್ಯರ್ಥವಾಗಿ ಅಂದರೆ—ಜ್ಞಾನಿಯು ಯಥೇಷ್ಟವಾಗಿ ಆಚಾರ ಮಾಡಿದರೂ ಮುಕ್ತನೇ ಆಗುತ್ತಾನೆ, ಎಂದು ಸಾಮರ್ಥ್ಯವನ್ನು ಪ್ರಕಟೀಕರಿಸುವುದಕ್ಕಾಗಿಯೇ ಹೇಳಲ್ಪಡುತ್ತಾನೆ. ಅಥವಾ ಅನುಷ್ಠಾನ ಯೋಗ್ಯಗಳಾದ ಸತ್ಕರ್ಮಗಳ ಮಧ್ಯದಲ್ಲಿಯೇ ಒಂದನ್ನು ಮಾಡಿದರೂ, ಒಂದನ್ನು ಬಿಟ್ಟರೂ ಅಭ್ಯನುಜ್ಞಾನವೇ.

ಈ ಅಧಿಕರಣದಲ್ಲಿ ಜ್ಞಾನಿಯಾದವನಿಗೆ ಸದಸತ್ಪ್ರವೃತ್ತಿಗಳಿಂದ ವಿಶೇಷವಿದೆ ಎಂದು ಸಮರ್ಥಿಸುತ್ತಾರೆ. ಅಂತೂ ಅಜ್ಞಾನಿಸಾಮ್ಯವನ್ನು ಸಮರ್ಥಿಸತಕ್ಕ ಈ ಅಧಿಕರಣಕ್ಕೆ ಜ್ಞಾನಸಾಮರ್ಥ್ಯಪ್ರತಿಪಾದನವೇ ಅರ್ಥವಾಗಿವುಳ್ಳ ಈ ಪಾದದಲ್ಲಿ ಅಂತರ್ಭಾವವು ಕೂಡುವುದಿಲ್ಲ. ಆದ ಕಾರಣ ಅಧಿಕರಣದ ತಾತ್ಪರ್ಯವನ್ನು ಹೇಳುತ್ತಾರೆ.—

**ಮೂ ॥ ವಿಕರ್ಮಲೇಪೋ ನೈವಾಸ್ತಿ ಸಮ್ಯಗ್ದೃಷ್ಟಿಮತಾಂ ಕ್ವಚಿತ್ ।**
**ಗುಣಹಾನಿಶ್ಚ ನೈವಾಸ್ತಿ ಬ್ರಹ್ಮಣಸ್ತ್ವವಿಕರ್ಮತಃ ॥ ೪ ॥**
**ದೇವಾನಾಮಪಿ ನ ಪ್ರಾಯಃ ಕ್ಲೃಪ್ತಸ್ಯ ತು ಕಥಂಚನ ।**
**ಪ್ರಾಪ್ತಹ್ರಾಸೋ ಭವೇತ್ಕ್ವಾಪಿ ಮಹತಾ ತು ವಿಕರ್ಮಣಾ ॥ ೫ ॥**
**ತಥಾಪಿ ತತ್ಕ್ಲೃಪ್ತಮೇವ ತಸ್ಮಾನ್ನ ನಿಯಮೋಜ್ಝಿತಿಃ ।**
**ಚಂದ್ರಸುಗ್ರೀವಯೋಶ್ಚೈವ ಸ್ವೋಚ್ಚದಾರಪರಿಗ್ರಹಾತ್ ॥ ೬ ॥**
**ಪ್ರಾಪ್ತಹಾನಿರಭೂನ್ನೈವ ಕ್ಲೃಪ್ತಹಾನಿಃ ಕಥಂಚನ ।**
**ಹ್ರಾಸೋಽಪಿ ಮಾನುಷಾದೀನಾಮಾನಂದಸ್ಯ ವಿಕರ್ಮಣಾ ॥**
**ಭವೇನ್ಮುಕ್ತೌ ವಿಶೇಷೇಣ ಸ್ವೋಚ್ಚಾನಾಮಪರಾಧತಃ ॥ ೭ ॥**

ಅ ॥ (ಯದ್ಯಪಿ ಇಲ್ಲಿ ಜ್ಞಾನಿಗಳಿಗೆ ಸದಸತ್ಪ್ರವೃತ್ತಿಗಳಿಂದ ವಿಶೇಷವದೆ ಎಂದು ಪ್ರತಿಪಾದಿಸಲ್ಪಡುತ್ತದೆ. ಆದಾಗ್ಯೂ) ಸಮ್ಯಗ್ದೃಷ್ಟಿಮತಾಂ=ಭಗವದಪರೋಕ್ಷಜ್ಞಾನವುಳ್ಳವರಿಗೆ, ಕ್ವಚಿತ್=ಎಲ್ಲಿಯೂ, ವಿಕರ್ಮಲೇಪಃ=ಕ್ಲೃಪ್ತಹ್ರಾಸ, ಅಶುಚಿತ್ವ, ಮೋಕ್ಷಪ್ರತಿಬಂಧಕತ್ವಾದಿರೂಪವಾದ ವಿಕರ್ಮಲೇಪವು, ನೈವಾಸ್ತಿ=ಇಲ್ಲವೇ ಇಲ್ಲ. (ಎನ್ನುವ ಅರ್ಥವು ಫಲತಃ ಸಿಗುವುದರಿಂದ ಅಂತರ್ಭಾವವು ಯುಕ್ತವು. ಅಜ್ಞಾನಿಗಳಿಗೆ ವಿಕರ್ಮಲೇಪಾಭಾವವು ಇಲ್ಲ). (ಎಲ್ಲಾ ಜ್ಞಾನಿಗಳಿಗೂ ವಿಕರ್ಮವು ಇದೆಯೋ; ಗುಣಹಾನಿಯು ಇದೆಯೋ ಎಂದಪೇಕ್ಷಿಸಿದರೆ-) ಬ್ರಹ್ಮಣಸ್ತು=ಚತುರ್ಮುಖನಿಗಾದರೂ, ನೈವಾಸ್ತಿ=ಸರ್ವಥಾ ವಿಕರ್ಮವಿಲ್ಲ. (ಅಂದರೆ— **'ನ ಭಾರತೀ ಮೇಽಂಗ ಮೃಷೋಪಲಕ್ಷ್ಯತೇ ನ ಕರ್ಹಿಚಿನ್ಮೇ ಮನಸೋ ಮೃಷಾ ಗತಿಃ । ನ ಮೇ ಹೃಷೀಕಾಣಿ ಪತಂತ್ಯಸತ್ಪಥೇ ಯನ್ಮೇ ಹೃದೌತ್ಕಂಠ್ಯವತಾ ಧೃತೋ ಹರಿಃ'** ॥ ಯಾವ ಕಾರಣದಿಂದ ನನ್ನ ಹೃದಯದಿಂದ ಶ್ರೀ ಹರಿಯು ಧರಿಸಲ್ಪಟ್ಟಿರುವನೋ, ಆದುದರಿಂದ ನನ್ನ ವಚನವು ಅನೃತರೂಪವಾಗುವುದಿಲ್ಲ. ನನ್ನ ಮನಸ್ಸಿಗೆ ಅನೃತರೂಪವಾದ ಗತಿಯೂ ಇರುವುದಿಲ್ಲ. ನನ್ನ ಇಂದ್ರಿಯಗಳು ದುರ್ಮಾರ್ಗದಲ್ಲಿ ಹೋಗುವುದಿಲ್ಲ, ಇತ್ಯಾದಿ ವಚನದೆಶೆಯಿಂದ ಬ್ರಹ್ಮನಿಗೆ

ಸರ್ವಥಾ ವಿರುದ್ಧಕರ್ಮವಿರುವುದಿಲ್ಲ). ಅವಿಕರ್ಮತಃ=ವಿರುದ್ಧಕರ್ಮವಿಲ್ಲದಿರುವುದರಿಂದಲೇ, ಗುಣಹಾನಿಶ್ಚ=ಆನಂದಾದಿ ಗುಣಗಳ ಹಾನಿಯೂ ಕೂಡ, ನೈವಾಸ್ತಿ=ಇಲ್ಲವೇ ಇಲ್ಲ ದೇವಾನಾಮಪಿ = ಚತುರ್ಮುಖನಿಂದ ಇತರರಾದ ದೇವತೆಗಳಿಗೂ ಕೂಡ, ಪ್ರಾಯಃ=ಪ್ರಾಯಶಃ, (ವಿಕರ್ಮಗುಣಹಾನಿಗಳು) ನ = ಇರುವುದಿಲ್ಲ. (ಸ್ವಲ್ಪ ವಿಕರ್ಮವೂ, ತನ್ನಿಮಿತ್ತವಾದ ಗುಣಹಾನಿಯೂ ಇದೆ). (ದೇವತೆಗಳಿಗೂ ವಿಕರ್ಮವು ಕೂಡಿದರೆ ಅದರಿಂದ ಆನಂದಾದಿ ಗುಣಹಾನಿಯೂ ಆಗುವುದಾದರೆ ಆಗ ಈ ದೇವತೆಯಿಂದ ಇಷ್ಟು ನ್ಯೂನನೂ, ಇಷ್ಟು ಗುಣದಿಂದ ಅಧಿಕನೂ, ಸಮಾನನೂ ಎಂದು ಶಾಸ್ತ್ರೀಯ ನಿಯಮಕ್ಕೆ ಭಂಗವು ಬಂದೀತು. ಅಂತೂ ಶಾಸ್ತ್ರಕ್ಕೆ ಅಪ್ರಾಮಾಣ್ಯವೂ ಬಂದೀತು ಎಂದರೆ—) ಕ್ಲೃಪ್ತಸ್ಯ ತು=ಕ್ಲೃಪ್ತವಾದ ಗುಣಕ್ಕಾದರೂ, ಕಥಂಚನ=ಯಾವ ಪ್ರಕಾರದಿಂದಲೂ ಹಾನಿಯು, ನ=ಇಲ್ಲ. (ಅಂದರೆ—ಯಾವ ದೇವತೆಗೆ ಎಷ್ಟು ಗುಣಗಳು ಕ್ಲೃಪ್ತಗಳಾಗಿದ್ದಾವೋ, ಅವರಿಗೆ ಯಾವ ವಿಕರ್ಮದಿಂದಲೂ ಆ ಗುಣಕ್ಕೆ ಹಾನಿಯಾಗುವುದಿಲ್ಲ.) (ಹಾಗಾದರೆ ದೇವತೆಗಳಿಗೆ ವಿಕರ್ಮದಿಂದ ಸ್ವಲ್ಪ ಗುಣಕ್ಕೆ ಹಾನಿಯಾಗುತ್ತದೆ ಎನ್ನುವುದಕ್ಕೆ ಏನು ಅರ್ಥವು ಎಂದರೆ) (ದೇವತೆಗಳಿಗೆ ಅಲ್ಪವಾದ ವಿಕರ್ಮದಿಂದ ಯಾವುದೊಂದು ಗುಣಕ್ಕೂ ಹ್ರಾಸವಾಗುವುದಿಲ್ಲ ) ಕ್ವಾಪಿ=ಎಲ್ಲಿಯೋ ಪ್ರಾಪ್ತವಾದ, ಮಹತಾ ತು ವಿಕರ್ಮಣಾ=ಮಹತ್ತಾದ ವಿರುದ್ಧ ಕರ್ಮದಿಂದಲಾದರೂ, ಪ್ರಾಪ್ತಹ್ರಾಸಃ=ಪ್ರಾಪ್ತವಾದ ಗುಣಕ್ಕೇನೇ ಹ್ರಾಸವು, ಭವೇತ್=ಆಗುವುದು. (ಸ್ವಯೋಗ್ಯಗಳಾದ ಗುಣಗಳ ಪೂರ್ತಿಗೋಸ್ಕರ ಎಷ್ಟು ಸಾಧನಗಳನ್ನು ಅನುಷ್ಠಾನ ಮಾಡಬೇಕೋ ಅದರಿಂದ ಅತಿರಿಕ್ತವಾದ ಸಾಧನವನ್ನು ಅನುಷ್ಠಾನ ಮಾಡಿದುದರಿಂದ ಯಾವುದು ಅಧಿಕಾನಂದವೊದಲಾದುದು ಪ್ರಸಕ್ತವಾಗುತ್ತದೋ ಅದರ ಅಭಾವವು ಆಗುತ್ತದೆ. ಸ್ವಯೋಗ್ಯಗುಣಗಳ ಪೂರ್ತಿಗೋಸ್ಕರ ಮಾಡತಕ್ಕ ಸಾಧನದಿಂದ ಅಧಿಕವಾದ ಸಾಧನವನ್ನು ದೇವತೆಗಳು ಅನುಷ್ಠಾನ ಮಾಡಿದರೆ ಆಗ ತಾರತಮ್ಯ ನಿಯಮಕ್ಕೆ ಭಂಗವು ಬಂದೀತು ಯಾವ ದೇವತೆಯು ಅತಿರಿಕ್ತವಾದ ಸಾಧನವನ್ನು ಮಾಡಿ ಮಹತ್ತಾದ ವಿಕರ್ಮವನ್ನು ಮಾಡುವುದಿಲ್ಲವೋ ಆತನಿಗೆ ಆ ಸಾಧನಾಧಿಕ್ಯಪ್ರಯುಕ್ತವಾದ ಗುಣಾಧಿಕ್ಯವು ಬರಲೇ ಬೇಕು. ಈಶ್ವರಾರಾಧನೆಗೆ ವೈಫಲ್ಯವು ಕೂಡಲಾರದು. ಅಂತೂ ಶಾಸ್ತ್ರಕ್ಕೆ ಅಪ್ರಾಮಾಣ್ಯವೆಂದರೆ) ತಥಾಪಿ=ಆದಾಗ್ಯೂ (ಅಂದರೆ—ಯದ್ಯಪಿ ದೇವತೆಗಳು ಸ್ವಯೋಗ್ಯ ಗುಣಗಳ ಪರಿಪೂರ್ತಿಗೋಸ್ಕರ ಸಾಧನದಿಂದ ಅತಿರಿಕ್ತವಾದ ಸಾಧನವನ್ನೂ ಅನುಷ್ಠಾನಮಾಡುತ್ತಾರೆ. ಆದಾಗ್ಯೂ) ತತ್=ಆ ದೇವತೆಗಳ ಸಾಧನಫಲಕೆ ವಿಘಾತಕವಾದ ಆ ವಿಕರ್ಮವು ಮಹತ್ತಾದುದು. (**'ಸ್ವಾಧಿಕಾರಾಧಿಕೋ ಯತ್ನಃ ಕಥಂಚಿನ್ನೋಪಪದ್ಯತೇ । ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ಸಮಾಪತೇತ್'** ಎನ್ನುವ ವಚನದೆಶೆಯಿಂದ, ಕ್ಲೃಪ್ತಮೇವ=ನಿಯತವೇ ಆಗಿದೆ. **'ಕ್ಲೃಪ್ತಸ್ಯ ತು ಕಥಂಚನ'** ತಥಾಪಿ ಕ್ಲೃಪ್ತಮೇವ ಎಂದು ಹೇಳಿದ್ದಕ್ಕೆ ಸಾಧ್ಯವಾದ ಅರ್ಥವನ್ನು ಹೇಳುತ್ತಾರೆ.) ತಸ್ಮಾತ್=ಕ್ಲೃಪ್ತಕ್ಕೆ ಹಾನಿಯಿಲ್ಲದಿರುವುದರಿಂದಲೂ ಅಧಿಕವಾದುದನ್ನು ಅನುಷ್ಠಾನಮಾಡಿದರೆ ವಿಕರ್ಮವು ಬಂದೇ ಬರುತ್ತದೆ ಎನ್ನುವ ನಿಯಮವಿದ್ದುದರಿಂದಲೂ, ನಿಯಮೋಜ್ಝಿತಿಃ=ಶ್ರೌತ ತಾರತಮ್ಯನಿಯಮಕ್ಕೆ ಭಂಗವು, ನ=ಇಲ್ಲ. (ಹಿಂದೆ ಹೇಳಿದ ಅರ್ಥವನ್ನು ಉದಾಹರಣೆಕೊಟ್ಟು ತೋರಿಸುತ್ತಾರೆ.) ಚ=ಹೇಗೆ, ಚಂದ್ರಸುಗ್ರೀವಯೋಃ = ಚಂದ್ರ ಸುಗ್ರೀವರಿಗೆ, ಸ್ವೋಚ್ಚದಾರಪರಿಗ್ರಹಾತ್ = ತನ್ನಿಂದ ಉತ್ತಮರಾದವರ ಹೆಂಡತಿಯನ್ನು ಸ್ವೀಕರಿಸಿದುದರಿಂದ, ಪ್ರಾಪ್ತಹಾನಿರೇವ=ಪ್ರಾಪ್ತಕ್ಕೆ ಹಾನಿಯೇ, ಅಭೂತ್=ಆಯಿತೋ, ಕಥಂಚನ=ಯಾವಪ್ರಕಾರದಿಂದಲೂ, ಕ್ಲೃಪ್ತಹಾನಿಃ=ಕ್ಲೃಪ್ತವಾದುದಕ್ಕೆ ಹಾನಿಯು, ನೈವ ಅಭೂತ್=ಆಗಲೇ ಇಲ್ಲವೋ, (ದೇವತೆಗಳಿಗೆ ವಿಕರ್ಮದಿಂದ

ಪ್ರಸಕ್ತಕ್ಕೇನೇ ಹಾನಿಯೇ ಆಗುತ್ತದೆ. ಕ್ಲೃಪ್ತಕ್ಕೆ ಹಾನಿಯಿಲ್ಲ ಎಂದು ಹೇಳಲ್ಪಟ್ಟಿತು. ದೇವತೆಗಳಿಂದ ಇತರರಿಗೆ ಹೇಗೆಂದರೆ—) ಮಾನುಷಾದೀನಾಂ = ಮನುಷ್ಯರೇ ಮೊದಲಾದವರ, ಆನಂದಸ್ಯಾಪಿ = ಕ್ಲೃಪ್ತಾನಂದಕ್ಕೂ, ವಿಕರ್ಮಣಾ = ವಿರುದ್ಧ ಕರ್ಮದಿಂದ, ಹ್ರಾಸಃ = ಹ್ರಾಸವು, ಮುಕ್ತೌ = ಮೋಕ್ಷದಲ್ಲಿ, ಭವೇತ್ = ಆಗುವುದು. (ಹ್ರಾಸವೆಂದರೆ— ಅನಭಿವ್ಯಕ್ತಿಯು. ಅದು ಈಶ್ವರನ ಇಚ್ಛಾಧೀನವಾದುದು. ವಿಕರ್ಮಗಳಲ್ಲಿಯೂ ಅಧಿಕವಾದುದನ್ನು ತೋರಿಸುತ್ತಾರೆ.) ಸ್ವೋಚ್ಚಾನಾಂ = ಸ್ವೋತ್ತಮರ ವಿಷಯಕವಾದ, ಅಪರಾಧತಃ = ಅಪರಾಧದೆಶೆಯಿಂದ, ವಿಶೇಷೇಣ = ವಿಶೇಷವಾಗಿ, ಆನಂದಸ್ಯ = ಆನಂದಕ್ಕೆ, ಹ್ರಾಸಃ = ಅಭಿವ್ಯಕ್ತಿಯು, ಭವೇತ್ = ಆಗುವುದು.

**ತಾ ॥ ಸ. ರ. ವಿ—** (1) ಹಾಗಾದರೆ ಹೇಗೆ ಜ್ಞಾನದ ಅಪೇಕ್ಷೆಯಿಲ್ಲದಿರುವ ಶಾರೀರ್ಯಾದಿಕರ್ಮವು ವೃಷ್ಟ್ಯಾದಿ ಫಲಗಳನ್ನು ಹುಟ್ಟಿಸುವುದಾದರೂ ಪ್ರತಿಬದ್ಧವಾದರೆ ಹುಟ್ಟಿಸುವುದಿಲ್ಲವೋ ಹಾಗೆಯೇ ಪ್ರತಿಬದ್ಧವಾದ ಆ ಕರ್ಮವು ಮೋಕ್ಷವನ್ನು ಹುಟ್ಟಿಸದೆ ಇರಲಿ, ಎಂದರೆ— ಅಜ್ಞಾನಿಯಂತೆ ಜ್ಞಾನಿಯು ವಿಕರ್ಮಗಳಿಂದ ಸಂಬದ್ಧನಾಗುವುದಿಲ್ಲ. **'ಅಥ ಮುನಿರಮೌನಂ ಚ ಮೌನಂ ಚ ನಿರ್ವಿದ್ಯಾಥ ಬ್ರಾಹ್ಮಣಃ ಸ ಬ್ರಾಹ್ಮಣಃ ಕೇನ ಸ್ಯಾದ್ಯೇನ ಸ್ಯಾತ್ತೇನೇದೃಶ ಏವ'** ಎನ್ನುವ ಶ್ರುತಿಯಿಂದ ಧ್ಯಾನಾದಿಗಳನ್ನು ಹುಟ್ಟಿಸಿ ಬ್ರಹ್ಮನನ್ನು ಅಪರೋಕ್ಷವಾಗಿ ತಿಳಿಯುವವನಿಗೆ ವಿಧಿಯನ್ನು ಅತಿಕ್ರಮಿಸಿ ಯಥೇಷ್ಟವಾಗಿ ಆಚರಣಮಾಡಿದರೂ ಅದರಿಂದ ಲೇಪಿಸಲ್ಪಡುವುದಿಲ್ಲವೆಂದು ಪ್ರತಿಪಾದಿತವಾಗಿದೆ. ಜ್ಞಾನೋತ್ತರ ವಿಕರ್ಮಗಳಿಂದ ಅಪವಿತ್ರತ್ವವಿಲ್ಲದಿದ್ದರೂ ಜ್ಞಾನಿಗೆ ಗುಣಹ್ರಾಸವು ಆಗಿಯೇ ಆಗುತ್ತದೆ. ಚತುರ್ಮುಖನಿಗೆ ಆದರೂ **'ನ ಭಾರತೀ ಮೇಽಂಗ'** ಇತ್ಯಾದಿ ವಾಕ್ಯಗಳಿಂದ ವಿಕರ್ಮವೇ ಇಲ್ಲದಿರುವುದರಿಂದ ಗುಣಹಾನಿಯೇ ಇಲ್ಲ. (2) ಹಿರಣ್ಯಗರ್ಭನಿಂದ ಇತರರಾದ ದೇವತೆಗಳಿಗೆ ತಮಗೆ ಕ್ಲೃಪ್ತವಾದ ಆನಂದಾದಿ ಗುಣದ್ವೆಶೆಯಿಂದ ಅಧಿಕವಾದುದು ಯಾವುದು ಪ್ರಯತ್ನಾತಿಶಯದಿಂದ ಸಂಪಾದಿಸಲ್ಪಡುತ್ತದೋ, ಅದೇವೇ ಎಲ್ಲಿಯಾದರೂ ಮಹತ್ತಾದ ವಿಕರ್ಮದಿಂದ ಹ್ರಾಸವಾಗುತ್ತದೆ. ಅವರಿಗೆ ಕ್ಲೃಪ್ತವಾದ ಆನಂದಾದಿಗಳು ಹ್ರಾಸವಾಗುವುದಿಲ್ಲ. ಕ್ಲೃಪ್ತದೆಶೆಯಿಂದ ಅಧಿಕಕ್ಕೆ ಆರ್ಜನವಿದ್ದರೆ ಅದಕ್ಕೆ ಹಾನಿಯೂ ಕ್ಲೃಪ್ತವೇ. ಆದಕಾರಣ ಪ್ರಾಪ್ತಹಾನಿಬಂದರೂ ಕ್ಲೃಪ್ತಕ್ಕೆ ಹಾನಿಯಿಲ್ಲ. ಕ್ಲೃಪ್ತದೆಶೆಯಿಂದ ಅಧಿಕವಾಗಿ ಸಂಪಾದಿಸಿಕೊಳ್ಳಲ್ಪಟ್ಟದ್ದು ಯಾವುದೋ, ಚಂದ್ರನಿಗೆ ರಾಜಸೂಯದಿಂದ ಸಂಪಾದಿಕೊಳ್ಳಲ್ಪಟ್ಟ ಪುಣ್ಯವು ಅದಕ್ಕೆ ತನ್ನಿಂದ ಉತ್ತಮನಾದ ಬೃಹಸ್ಪತಿಯ ಹೆಂಡತಿಯಾದ ತಾರೆಯನ್ನು ಪರಿಗ್ರಹಿಸಿದರಿಂದುಂಟಾದ ದೋಷದಿಂದ ಹಾನಿಯಾಯಿತು. ಸೂರ್ಯಾಂಶನಾದವನಾದಾಗ್ಯೂ ಸುಗ್ರೀವನಿಗೆ ತನ್ನಿಂದುತ್ತಮನಾದ ದೇವೇಂದ್ರನ ಅಂಶಭೂತನಾದ ವಾಲಿಯ ಭಾರ್ಯೆಯನ್ನುಪಭೋಗಿಸಿದರಿಂದುಂಟಾದ ದೋಷದಿಂದ ಶ್ರೀ ರಾಮನ ಸೇವಾತಿಶಯದಿಂದ ಕ್ಲೃಪ್ತಕ್ಕಿಂತಲೂ ಯಾವುದು ಅಧಿಕ ಪುಣ್ಯವು ಸಂಪಾದಿಸಿಕೊಳ್ಳಲ್ಪಡುತ್ತದೋ, ಅದಕ್ಕೆ ಹಾನಿಯಾಯಿತು. ದೇವಾನಂದಾದಿಗಳಿಗೆ ಕ್ಲೃಪ್ತಿಯು. **'ಸೈಷಾನಂದಸ್ಯ ಮೀಮಾಂಸಾ ಭವತಿ'** ಇತ್ಯಾದಿ ಶ್ರುತಿಸಿದ್ಧವಾಗಿದೆ. (3) ಮನುಷ್ಯರಿಗಾದರೂ ಕ್ಲೃಪ್ತಸುಖಕ್ಕೂ, ವಿಕರ್ಮದಿಂದ ಹ್ರಾಸವು ಆಗುತ್ತದೆ. ತಮ್ಮಿಂದ ಉತ್ತಮರಾದವರ ಅಪರಾಧದಿಂದ ವಿಶೇಷತಃ ಹ್ರಾಸವು ಆಗುತ್ತದೆ ॥ ೪ ॥ ೫ ॥ ೬ ॥ ೭ ॥

**'ಓಂ ಕಾಮಚಾರೇಣ ಚೈಕೇ ಓಂ' ॥ ಸೂ. ೧೫ ॥**

ಕೆಲವರು ಶಾಖಿಗಳು ಯಥೇಷ್ಟವಾಗಿ ಕರ್ಮಾಚರಣದಿಂದಲೂ ಜ್ಞಾನಿಯಾದವನಿಗೆ ಮೋಕ್ಷರೂಪವಾದ ಪುರುಷಾರ್ಥವನ್ನು **'ಕಾಮಚಾರಾ ಕಾಮಭಕ್ಷಾಃ'** ಎನ್ನುವ ಶ್ರುತಿಯಲ್ಲಿ ಪಠನಮಾಡುತ್ತಾರೆ.

**'ಓಂ ಉಪಮರ್ದಂ ಚ ಓಂ'** || ಸೂ. ೧೬ ||

ಕೆಲವರು ಶಾಖಿಗಳು ಅನಿವರ್ತ್ಯವಾಗಿ ಪ್ರಾಪ್ತವಾದ, ಸ್ವಲ್ಪ ಭುಕ್ತವಾದ ಪ್ರಾರಬ್ಧ ಕರ್ಮಕ್ಕೂಕೂಡ ಜ್ಞಾನದಿಂದ ಫಲಹ್ರಾಸವನ್ನು **'ಓಮಿತ್ಯುಚ್ಚಾರ್ಯಾಂತರಿಮನಾತ್ಮಾನ ಮಭಿಪಶ್ಯೋಪಸನ್ಮೃದ್ಯ ಪುಣ್ಯಂ ಚ ಪಾಪಂ ಚ'** ಎನ್ನುವ ಶ್ರುತಿಯಲ್ಲಿ ಪಠನಮಾಡುತ್ತಾರೆ.

**'ಓಂ ಊರ್ಧ್ವರೇತಸ್ಸು ಚ ಶಬ್ದೇ ಹಿ ಓಂ'** || ಸೂ. ೧೭ ||

ಊರ್ಧ್ವರೇತಸ್ತ್ವಾದಿ ಗುಣಯುಕ್ತರಾದ ಜ್ಞಾನಿಗಳಲ್ಲಿಯೇ ಜ್ಞಾನೋಪದೇಶವು. **'ಯ ಇಮಂ ಪರಮಂ ಗುಹ್ಯಯೂರ್ಧ್ವರೇತಸ್ಸು ಭಾಷಯೇತ್'** ಇತ್ಯಾದಿ ಶಬ್ದದಲ್ಲಿ ಕರ್ತವ್ಯ ವಾಗಿ ವಿಹಿತವಾಗಿದೆ. ಕಾಮಚಾರಿಗಳಲ್ಲಿ (ಜಿಜ್ಞಾಸುಗಳಲ್ಲಿ) ವಿಹಿತವಾಗಲಿಲ್ಲ.

**'ಓಂ ಪರಾಮರ್ಶಂ ಜೈಮಿನಿರಚೋದನಾ ಚಾಪವದತಿ ಹಿ ಓಂ'**
|| ಸೂ. ೧೮ ||

ಜ್ಞಾನಿಯಾದವನು ನಿಷಿದ್ಧಕರ್ಮವನ್ನು ಮಾಡಲೇಬೇಕು ಎಂದು ವಿಧಿಯಿಲ್ಲ, **'ಬ್ರಾಹ್ಮಣೋ ನ ಹಂತವ್ಯಃ'** ಎನ್ನುವ ಶ್ರುತಿಯು ಪಾಪಕರ್ಮವನ್ನು ನಿಷೇಧಿಸುತ್ತದೆ, ವಿಧಿ ಇಲ್ಲದಿರು ವುದರಿಂದಲೂ, ನಿಷೇಧವಿದ್ದ ಪ್ರಯುಕ್ತವೂ ಕೂಡ **'ಕೇನ ಸ್ಯಾದ್ಯೇನ ಸ್ಯಾತ್ ಕಾಮಚಾರಾಃ'** ಎನ್ನುವ ಶ್ರುತಿಯಿಂದಲೂ **'ಪ್ರಾತರುತ್ಥಾಯ'** ಇತ್ಯಾದಿ ಶ್ರುತ್ಯಂತರದಲ್ಲಿ ಹೇಳಲ್ಪಟ್ಟ ಸದಾಚಾರ ಕ್ಕೇನೇ ಪರಾಮರ್ಶವನ್ನು ಜೈಮಿನ್ಯಾಚಾರ್ಯರು ಅಂದರೆ– ಶ್ರುತ್ಯಂತರಗಳಲ್ಲಿ ವಿಹಿತಗಳಾದ ಸದಾಚಾರಗಳಲ್ಲಿಯೇ ವಿಧಿಬಂಧವಿಲ್ಲದೆ ತನ್ನ ಇಚ್ಛೆಯಿಂದ ಇರಬಹುದು. ಸದಸತ್ಕರ್ಮಗಳನ್ನು ಕುಸಿ ಬಂದಹಾಗೆ ಮಾಡಬಹುದು ಎಂದು ಅಭಿಪ್ರಾಯವಲ್ಲವೆಂದು ಜೈಮಿನ್ಯಾಚಾರ್ಯರ ಅಭಿಪ್ರಾಯವು.

**'ಓಂ ಅನುಷ್ಠೇಯಂ ಬಾದರಾಯಣಃ ಸಾಮ್ಯಶ್ರುತೇಃ ಓಂ'**
|| ಸೂ. ೧೯ ||

ಬಾದರಾಯಣಾಚಾರ್ಯರು ಅನುಷ್ಠೇಯ ಕರ್ಮಗಳ ಮಧ್ಯದಲ್ಲಿಯೇ ತನ್ನ ಇಚ್ಛಾನು ಸಾರವಾಗಿ ಕೆಲವು ಕರ್ಮಗಳಿಗೆ ಅನುಷ್ಠಾನವು, ಕೆಲವುಗಳಿಗೆ ಇಲ್ಲ ಎಂದು ಅನುಷ್ಠೇಯದಲ್ಲಿ 'ಕಾಮಚಾರಾನುಮತಿಯೇ,' ಕಾಮಚಾರವಿಧಿಯಲ್ಲ. ಯಾವಪ್ರಕಾರದಿಂದ ಪ್ರವೃತ್ತಿಮಾಡಿದರೂ **'ಈದೃಶ ಏವ ಭವತಿ'** ಎಂದು ಫಲಸಾಮ್ಯವನ್ನು ಶ್ರುತಿಯಲ್ಲಿ ಹೇಳಿಯದೆ ಎಂದು ಕಾಮಚಾರ ಶ್ರುತ್ಯರ್ಥವನ್ನು ಹೇಳುತ್ತಾರೆ.

**'ಓಂ ವಿಧಿರ್ವಾ ಧಾರಣವತ್ ಓಂ'** || ಸೂ. ೨೦ ||

**'ಕೇನ ಸ್ಯಾದ್ಯೇನ ಸ್ಯಾತ್'** ಎನ್ನುವುದು ಜ್ಞಾನಿಗೆ ಯಥೇಷ್ಟಾಚಾರವಿಧಿಯಾಗಲಿ, ಹಾಗಾದರೆ, ಅಜ್ಞಾನಿಗೂ ಹೀಗೆ ಆಗಬಹುದೆಂದರೆ— ಹೇಗೆ ವೇದಧಾರಣವು ತ್ರೈವರ್ಣಿಕರಿಗೇನೇ ವಿಹಿತವಾಗಿದೆಯೋ ಹಾಗೆಯೇ ಕಾಮಚಾರವೂ ಜ್ಞಾನಿಗಳಿಗೇನೇ ವಿಹಿತವಾಗಿದೆ.

## ‘ಓಂ ಸ್ತುತಿಮಾತ್ರಮುಪಾದಾನಾದಿತಿ ಚೇನ್ನಾಪೂರ್ವತ್ವಾತ್ ಓಂ’

|| ಸೂ. ೨೧ ||

ಜ್ಞಾನಿಗಳೂಕೂಡ ‘ಸಂಧ್ಯಾಮುಪಾಸೀತ’ ಇತ್ಯಾದಿ ಸಾಮಾನ್ಯ ವಿಧಿಯನ್ನು ಸ್ವೀಕಾರ ಮಾಡಿದರಿಂದ ‘ಕೇನ ಸ್ಯಾತ್’ ಎನ್ನುವ ಶ್ರುತಿಯು ಸ್ತುತಿಮಾತ್ರವು ವಿಧಿಯಲ್ಲ, ಎಂದು ಹೇಳಕೂಡದು, ಜ್ಞಾನಿಗಳಿಗೆ ಬ್ರಹ್ಮಾಧೀನತ್ವವಿದ್ದುದರಿಂದ.

## “ಓಂ ಭಾವಶಬ್ದಾಚ್ಚ ಓಂ” || ಸೂ. ೨೨ ||

‘ಯಥಾವಿಧಾನಮುಪರೇ ವಿಧಿರ್ಭಾವೇ ಪ್ರಜಾಪತೇಃ’ ಎನ್ನುವ ಶ್ರುತಿಯಲ್ಲಿ ಇಚ್ಛಾಪರ ಪರ್ಯಾಯವಾದ ಭಾವಶಬ್ದವಿದ್ದಪ್ರಯುಕ್ತವೂ ಸ್ವೇಚ್ಛಾಚಾರವಿಧಿಯು.

## “ಓಂ ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್ ಓಂ”

|| ಸೂ. ೨೩ ||

೧ ನಿಯಮದಿಂದ ಸರ್ವಧರ್ಮಾಚರಣವು, ೨ ವಿಹಿತಧರ್ಮಗಳ ಮಧ್ಯದಲ್ಲಿಯೇ ಇಚ್ಛಾನುಸಾರಾಚರಣವು, ೩ ಯಥೇಷ್ಟಾಚಾರವಿಧಿಯು ಎಂದು ಹೇಳಿದ ಮೂರು ಅರ್ಥಗಳಿಗೆ ವಿರೋಧವಿದ್ದುದರಿಂದ ‘ಕೇನ ಸ್ಯಾತ್’ ಇತ್ಯಾದಿ ಶ್ರುತಿಗಳು ಪರಸ್ಪರ ವಿರುದ್ಧಾರ್ಥವುಳ್ಳವುಗಳು ಎಂದು ಹೇಳಕೂಡದು, ‘ತ್ರೇಧಾ ಹ ಜ್ಞಾನಿನಃ’ ಇತ್ಯಾದಿ ಶುತಿಯಿಂದ ಜ್ಞಾನಿಗಳು ಅನೇಕ ಪ್ರಕಾರರಾಗಿರುತ್ತಾರೆ.

## ‘ಓಂ ತಥಾ ಚೈಕವಾಕ್ಯೋಪಬಂಧಾತ್ ಓಂ’ || ಸೂ. ೨೪ ||

ಜ್ಞಾನಿಗಳಲ್ಲಿ ತ್ರೈವಿಧ್ಯವು ಸಿದ್ಧವಾಗುತ್ತಿರಲು ‘ಪ್ರಾತರುತ್ಥಾಯ’ ಇತ್ಯಾದಿ ಶ್ರುತಿ ಸ್ಮೃತಿಗಳಿಗೆ ಏಕವಾಕ್ಯತ್ವಕ್ಕೆ ಅಧಿಕಾರಿಭೇದದಿಂದ ಅವಿರುದ್ಧಾರ್ಥಕತ್ವವು ಕೂಡುವುದರಿಂದ ‘ಪ್ರಾತರುತ್ಥಾಯ’ ಇತ್ಯಾದಿ ಶ್ರುತ್ಯಾದಿಗಳು ಪರಸ್ಪರ ವಿರುದ್ಧಾರ್ಥವುಳ್ಳವುಗಳಲ್ಲ.

## ‘ಓಂ ಅತ ಏವ ಚಾಗ್ನೀಂಧನಾದ್ಯನಪೇಕ್ಷಾ ಓಂ’ || ಸೂ. ೨೫ ||

‘ಕಾಮಚಾರಾಃ ಕಾಮಭಕ್ಷಾಃ’ ಎನ್ನುವ ಶ್ರುತಿಯಲ್ಲಿ ಇಚ್ಛಾನುಸಾರವಾಗಿದ್ದರೂ ಮೋಕ್ಷವು ನಿಯುತವೆಂದು ಹೇಳಿದರಿಂದಲೇ ಜ್ಞಾನಕ್ಕೆ ಮೋಕ್ಷವನ್ನು ಸಂಪಾದಿಸುವ ವಿಷಯದಲ್ಲಿ ಅಗ್ನಿಹೋತ್ರ ಮೊದಲಾದ ಆಶ್ರಮಧರ್ಮ- ವರ್ಣಧರ್ಮಗಳ ಅಪೇಕ್ಷೆಯು ಇಲ್ಲ.

## ‘ಓಂ ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್ ಓಂ’ ಸೂ. || ೨೬ ||

ಸರ್ವ ಧರ್ಮಗಳ ಅಪೇಕ್ಷೆಯೂ ಕೂಡ ಜ್ಞಾನವು ಹುಟ್ಟುವುದಕ್ಕಾಗಿಯೇ; ಮೋಕ್ಷಕ್ಕಾಗಿ ಅಲ್ಲ. ‘ವಿವಿದಿಷಂತಿ ಯಜ್ಞೇನ ದಾನೇನ ತಪಸಾ’ ಇತ್ಯಾದಿ ಶ್ರುತಿಗಳಿಂದ. ಗಮನವು ನಿವೃತ್ತವಾದಮೇಲೆ ಗಮನಸಾಧನವಾದ ಅಶ್ವಾದಿಗಳ ಅಪೇಕ್ಷೆಯು ಹೇಗೆ ಇಲ್ಲವೋ, ಹಾಗೆಯೇ ಜ್ಞಾನಾರ್ಥ ಕರ್ಮಗಳಿಗೆ ಜ್ಞಾನವು ಹುಟ್ಟುವುದರಲ್ಲಿಯೇ ಅಪೇಕ್ಷೆಯು ಮೊಕ್ಷವುಂಟಾಗುವುದರಲ್ಲಿ ಅಪೇಕ್ಷೆಯಿಲ್ಲ.

## 'ಓಂ ಶಮದಮಾದ್ಯುಪೇತಃ ಸ್ಯಾತ್ತಥಾಪಿ ತು ತದ್ವಿಧೇಸ್ತದಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ಓಂ' ಸೂ. ॥ ೨೭ ॥

ಜ್ಞಾನಕ್ಕೇನೇ ಮುಕ್ತಿಕಾರಣತ್ವವಿದ್ದಾಗ್ಯೂ ಜ್ಞಾನಿಯು ಶಮ-ದಮ ಮೊದಲಾದ ಸತ್ಪ್ರವೃತ್ತಿಯಿಂದ ಯುಕ್ತನು ಆಗಬೇಕು. ಜ್ಞಾನಿಯು ಶಮದಮಾದಿಗಳಿಂದ ಯುಕ್ತನಾಗಬೇಕೆಂದು 'ಆಚಾರ್ಯಾದ್ವಿದ್ಯಾಮವಾಪ್ಯೈತಮಾತ್ಮಾನಮಭಿಪಶ್ಯ ಶಾಂತೋ ಭವೇತ್ ದಾಂತೋ ಭವೇತ್' ಎನ್ನುವ ಶ್ರುತಿಯಲ್ಲಿ ವಿಹಿತವಾಗಿದೆ ವಿಧಿಯು ಏಕೆಂದರೆ— ಪ್ರಸ್ತುತವಾದ ಜ್ಞಾನಕ್ಕೆ ಅಂಗವಾಗಿ ಶಮದಮಾದಿಗಳು ಅವಶ್ಯವಾಗಿ ಅನುಷ್ಠೇಯಗಳೆಂದು ಹೇಳಲ್ಪಟ್ಟವೆ.

## 'ಓಂ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್ ಓಂ, ॥ ಸೂ. ೨೮ ॥

'ಯದಿಹ ವಾ' ಎನ್ನುವ ಶ್ರುತ್ಯುಕ್ತವಾದ ಸರ್ವಾನ್ನಾನುಮತಿಯು ಅಂದರೆ— ನಿಷಿದ್ಧ ಅನ್ನಭೋಜನಾನುಜ್ಞೆಯು ಪ್ರಾಣಾಪಗಮಕಾಲ ವಿಷಯಕವೇ. ಆ ಅರ್ಥವು 'ನ ವಾ ಅಜೀವಿಷ್ಯಂ' ಎನ್ನುವ ಉತ್ತರವಾಕ್ಯದಲ್ಲಿ ಕಂಡದೆ.

## 'ಓಂ ಅಬಾಧಾಚ್ಚ ಓಂ' ॥ ಸೂ. ೨೯ ॥

ನಿಷಿದ್ಧವನ್ನು ಮಾಡದಿದ್ದರೆ ಬಾಧಕವಿಲ್ಲದಿರುವುದರಿಂದಲೂ ಅದನ್ನು ಮಾಡಕೂಡದು.

## 'ಓಂ ಅಪಿ ಸ್ಮರ್ಯತೇ ಓಂ' ॥ ಸೂ. ॥ ೩೦ ॥

ಸದ ರ್ಮಗಳನ್ನು ಬಿಡಬಾರದೆನ್ನುವುದು 'ಅತೀತಾನಾಗತಜ್ಞಾನೀ' ಎನ್ನುವ ಸ್ಮೃತಿಸಿದ್ಧವೂ ಆಗಿದೆ.

## 'ಓಂ ಶಬ್ದಶ್ಚಾತೋಽಕಾಮಚಾರೇ ಓಂ' ॥ ಸೂ. ೩೧ ॥

ಇಚ್ಛಾನುಸಾರವಾಗಿ ಮಾಡದಿರುವ ವಿಷಯದಲ್ಲಿ ಅಂದರೆ, ಅಸತ್ಪ್ರವೃತ್ತಿಯನ್ನು ಮಾಡದಿರುವ ವಿಷಯದಲ್ಲಿ 'ಏವಂ ಪಶ್ಯನ್ನ ಕಾಮ ಚರತಿಂ ಚರೇತ್' ಎನ್ನುವ ಶ್ರುತಿಯೂ ಇದೆ. ಆದುದರಿಂದ ಅಸತ್ಪ್ರವೃತ್ತಿಯನ್ನು ಮಾಡಕೂಡದು.

## "ಓಂ ವಿಹಿತತ್ವಾಚ್ಚಾಶ್ರಮಕರ್ಮಾಪಿ ಓಂ" ಸೂ. ॥ ೩೨ ॥

'ಪಶ್ಯನ್ನಪೀಮಮಾತ್ಮಾನಂ ಕುರ್ಯಾತ್ಕರ್ಮ' ಎನ್ನುವ ಶ್ರುತಿಯಲ್ಲಿ ವಿಹಿತವಾಗಿರುವುದರಿಂದಲೂ ನಿಷಿದ್ಧವನ್ನು ಮಾತ್ರ ಮಾಡಬಾರದೆಂದಲ್ಲ. ಮತ್ತೆ ಆಶ್ರಮಾದಿಗಳಿಗೆ ಉಚಿತವಾದ ಕರ್ಮವನ್ನು ಮಾಡಬೇಕು.

## "ಓಂ ಸಹಕಾರಿತ್ವೇನ ಚ ಓಂ" ಸೂ. ॥ ೩೩ ॥

ಮೋಕ್ಷಕ್ಕೆ ಕಾರಣವಾದ ಜ್ಞಾನಕ್ಕೆ ಸಹಕಾರಿಯಾದುದರಿಂದಲೂ ವಿಹಿತವಾದ ಕರ್ಮವನ್ನು ಮಾಡಬೇಕು. ಈ ಅಧಿಕರಣದಲ್ಲಿ 'ಕಾಮಕಾರೇಣ ಚೈಕೇ' (ಸೂ. ೧೫) ಎನ್ನುವ ಸೂತ್ರದಿಂದ ಜ್ಞಾನೋತ್ತರಕಾಲದಲ್ಲಿ ಮಾಡಿದ ವಿಕರ್ಮದಿಂದ ಜ್ಞಾನಿಗೆ ಲೇಪಾಭಾವವು

ಹೇಳಲ್ಪಡುತ್ತದೆ. ಹಾಗೆಯೇ 'ಉಪಮರ್ದಂ ಚ' (ಸೂ. ೧೬) ಎನ್ನುವ ಸೂತ್ರದಿಂದ ಜ್ಞಾನದೆಶೆಯಿಂದ ಪೂರ್ವಕರ್ಮಗಳಿಗೆ ಜ್ಞಾನದಿಂದ ವಿನಾಶವು, ಇವೆರಡೂ ೪ನೇ ಅಧ್ಯಾಯದಲ್ಲಿ **ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ** (ಅಧ್ಯಾ. ೪. ಪಾ. ೧. ಅಧಿ. ೮. ಸೂ. ೧೩.) ಎನ್ನುವ ಸೂತ್ರದಿಂದ ಹೇಳಲ್ಪಡುತ್ತದೆ. ಆದುದರಿಂದ ಪುನರುಕ್ತಿದೋಷವು ಬರುತ್ತದೆಂದರೆ— 'ಕಾಮಕಾರೇಣ ಚೈಕೇ' ಎನ್ನುವುದಕ್ಕೆ ಪುನರುಕ್ತಿದೋಷವನ್ನು ಪರಿಹರಿ ಸುತ್ತಾರೆ.

**ಮೂ ॥ ಜ್ಞಾನೋತ್ತರಸ್ಯ ಪಾಪಸ್ಯ ಚತುರ್ಥೇಽಲೇಪ ಉಚ್ಯತೇ ॥ ೮ ॥**
**ಅಶುಚಿತ್ವಾದಿಕಂ ಚಾ(ತ)ಸ್ಯ ನ ಭವೇದಿತಿ ತತ್ಫಲಂ ।**
**ಅತ್ರ ಜ್ಞಾನಫಲಸ್ಯೈವ ಮುಕ್ತೇರ್ನಿಯತತೋಚ್ಯತೇ ॥ ೯ ॥**

**ಅ ॥** ಚತುರ್ಥೇ=ನಾಲ್ಕನೇ ಅಧ್ಯಾಯದಲ್ಲಿ, ('ಉತ್ತರಾಘಸ್ಯಾಶ್ಲೇಷಃ' ಎನ್ನುವುದರಿಂದ) ಜ್ಞಾನೋತ್ತರಸ್ಯ=ಜ್ಞಾನವು ಹುಟ್ಟಿದ ಮೇಲೆ ಮಾಡತಕ್ಕ, ಪಾಪಸ್ಯ=ಪಾಪಕ್ಕೆ, ಅಲೇಪಃ= ಪಾಪದ ಫಲಭೂತವಾದ ನರಕಾದಿ ಪ್ರಾಪ್ತ್ಯಭಾವವು, ಉಚ್ಯತೇ=ಹೇಳಲ್ಪಡುತ್ತದೆ. (ವಿಷಯಾಂ ತರವನ್ನು ಹೇಳುತ್ತಾರೆ.) ಅ(ತ)ಸ್ಯ=ಜ್ಞಾನಿಗೆ, ತತ್ಫಲಂ=ಜ್ಞಾನೋತ್ತರ ಪಾಪದ ಫಲಭೂತ ವಾದ, ಅಶುಚಿತ್ವಾದಿಕಂ = ಅಶುಚಿತ್ವ, ಅಸಂಭಾಷ್ಯತ್ವ ಮೊದಲಾದುದು, ನ ಭವೇತ್ = ಆಗಲಾರದು. ಇತಿ ಚ=ಎನ್ನುವುದೂ ('ಉತ್ತರಾಘಸ್ಯಾಶ್ಲೇಷಃ' ಎನ್ನುವುದರಿಂದ ಹೇಳ ಲ್ಪಡುತ್ತದೆ). (ಅದರಿಂದ ಏನಾಯಿತೆಂದರೆ) ಅತ್ರ=ಈ ಮೂರನೇ ಅಧ್ಯಾಯದಲ್ಲಿ, 'ಕಾಮಕಾ ರೇಣ ಚೈಕೇ' ಎನ್ನುವುದರಿಂದ, ಜ್ಞಾನಫಲಸ್ಯ = ಜ್ಞಾನಕ್ಕೆ ಫಲಭೂತವಾದ, ಮುಕ್ತೇಃ= ಮೋಕ್ಷಕ್ಕೆ, ನಿಯತತಾ=ನಿಯತತ್ವವು, ಉಚ್ಯತೇ=ಹೇಳಲ್ಪಡುತ್ತದೆ. (ಅಂದರೆ- ಜ್ಞಾನಿಯಿಂದ ಮಾಡಲ್ಪಟ್ಟ ಪಾಪಗಳು ಜ್ಞಾನಫಲವಾದ ಮೋಕ್ಷವನ್ನು ತಪ್ಪಿಸಲಿಕ್ಕೆ ಸಮರ್ಥಗಳಲ್ಲವೆಂದು ಅರ್ಥವು ಹೇಳಲ್ಪಡುತ್ತದೆ. ಆದುದರಿಂದ ಹೀಗೆ ಅರ್ಥಭೇದವಿದ್ದುದರಿಂದ ಪುನರುಕ್ತಿದೋಷ ವಿಲ್ಲ.) ॥ ೮ ॥ ೯ ॥

'ಉಪಮರ್ದಂ ಚ' ಎನ್ನುವ ಸೂತ್ರದಿಂದ ಪುನರುಕ್ತಿಯನ್ನು ಪರಿಹರಿಸುವುದಕ್ಕಾಗಿ ಪ್ರತಿಪಾದ್ಯವಾದ ಅರ್ಥವನ್ನು ಹೇಳುತ್ತಾರೆ—

**ಮೂ ॥ ಪ್ರಾರಬ್ಧಕರ್ಮಜಸ್ಯೈವ ವಿಷಭಕ್ಷಾನ್ಮೃತೇರಿವ ।**
**ಪ್ರಾಪ್ತಸ್ಯಾಪ್ಯನಿವರ್ತ್ಯಸ್ಯ ಕಿಂಚಿದ್ಭುಕ್ತಸ್ಯ ಸಂವಿದಾ ॥ ೧೦ ॥**
**ಉಪಮರ್ದ ಇಹ ಪ್ರೋಕ್ತೋ ದೇವಾದೀನಾಂ ಯಥಾ ಕ್ರಮಃ ।**
**ಸರ್ವಾತ್ಮನಾ ತ್ವಭೋಗೋ ಹಿ ಪ್ರಾರಬ್ಧಸ್ಯೈವ ಕರ್ಮಣಃ ॥ ೧೧ ॥**
**ನ ಬ್ರಹ್ಮದರ್ಶಿನೋಽಪಿ ಸ್ಯಾತ್ಫಲಹ್ರಾಸಸ್ತು ವಿದ್ಯತೇ ।**
**ಸರ್ವಾತ್ಮನಾ ಫಲಹ್ರಾಸೋ ಯದಿ ನಾರಬ್ಧಕರ್ಮಣಃ ।**
**ಸ್ಯಾತ್ಕಾಮ್ಯವಿಧಿವೈಯರ್ಥ್ಯಮಿತ್ಯುಕ್ತನಿಯಮೋ ಭವೇತ್ ॥ ೧೨ ॥**

**ಅ ॥** (ನಾಲ್ಕನೇ ಅಧ್ಯಾಯದಲ್ಲಿ ಪೂರ್ವತನವಾದ ಪಾಪಕ್ಕೆ ವಿನಾಶವು, ಎನ್ನುವುದ ರಿಂದ ಅಪ್ರಾರಬ್ಧವಾದ ಪೂರ್ವತನವಾದ ಪಾಪಕ್ಕೆ ಸ್ವರೂಪತಃ ವಿನಾಶವು ಹೇಳಲ್ಪಡುತ್ತದೆ.

ಈ ಮೂರನೇ ಅಧ್ಯಾಯದಲ್ಲಿ ಆದರೂ 'ಉಪಮರ್ದಂ ಚ' ಎನ್ನುವ ಸೂತ್ರದಿಂದ) ವಿಷ ಭಕ್ಷಾತ್=ವಿಷಭಕ್ಷಣದೆಶೆಯಿಂದ, ಮೃತೇರಿವ=ಮರಣದಂತೆಯೇ, (ಅಂದರೆ— ಹೇಗೆ ವಿಷ ಭಕ್ಷಣದಿಂದ ಪ್ರಾಪ್ತವಾದ ಮರಣವು ಸರ್ವಪ್ರಕಾರದಿಂದಲೂ ಅಪರಿಹಾರ್ಯವಾದುದಾದರೂ ಮೋಹಾದಿರೂಪದಿಂದ ಸ್ವಲ್ಪ ಭೋಗಿಸಿದಮೇಲೆ ವಿಷವನ್ನು ಅಪಹರಿಸತಕ್ಕ ಮಂತ್ರಾದಿಗಳಿಂದ ಹೇಗೆ ಮೃತಿಗೆ ಪರಿಹಾರವೋ ಹಾಗೆಯೇ) ಪ್ರಾರಬ್ಧಕರ್ಮಜಸ್ಯ = ಪ್ರಾರಬ್ಧಕರ್ಮದಿಂದ ಹುಟ್ಟತಕ್ಕ ಫಲಕ್ಕೆ, ಪ್ರಾಪ್ತಸ್ಯ = ಪ್ರಾಪ್ತವಾದುದಕ್ಕೆ, ಸರ್ವಾತ್ಮನಾ ತು = ಸರ್ವಪ್ರಕಾರ ದಿಂದಲೂ, ಅನಿವರ್ತ್ಯಸ್ಯ = ಭೋಗಿಸದೆ ನಿವರ್ತ್ಯವಾಗದಿರುವುದಕ್ಕೆ, ಕಿಂಚಿತ್ = ಸ್ವಲ್ಪ, ಭುಕ್ತಸ್ಯ=ಭುಕ್ತವಾದುದಕ್ಕೆ, ಸಂವಿದಾ=ಶ್ರೀ ಭಗವಂತನ ಅಪರೋಕ್ಷ ಜ್ಞಾನದಿಂದ, ಉಪ ಮರ್ದಃ = ಫಲಹ್ರಾಸವು, ಇಹ = ಈ ಮೂರನೇ ಅಧ್ಯಾಯದಲ್ಲಿ, ಪ್ರೋಕ್ತಃ = ಹೇಳಲ್ಪಟ್ಟದೆ. (ಹಾಗಾದರೆ ಎಲ್ಲಾ ಜ್ಞಾನಿಗಳಿಗೂ ಪ್ರಾರಬ್ಧಕರ್ಮದ ಫಲಹ್ರಾಸವು ಏಕಪ್ರಕಾರವೋ, ಅಥವಾ ನಾನಾವಿಧವೋ ಎಂದಪೇಕ್ಷಿಸಿದರೆ—)ದೇವಾದೀನಾಂ=ದೇವತೆಗಳೇ ಮೊದಲಾದವರಿಗೆ, ಯಥಾ ಕ್ರಮಃ=ಕ್ರಮಾನುಸಾರವಾಗಿ, (ಅಂದರೆ—ಯಾರಿಗೆ ಅಧಿಕ ಜ್ಞಾನವೋ ಅವರಿಗೆ ಅಧಿಕವು.) ಪ್ರಾರಬ್ಧಕರ್ಮಗಳಿಗೆ ಭೋಗಹೊರತು ನಾಶವಿಲ್ಲ. ಮತ್ತೆ ಬ್ರಹ್ಮಜ್ಞಾನದಿಂದ ಫಲಹ್ರಾಸವು ಆಗುತ್ತದೆ ಎಂದು ಹೇಳಲ್ಪಟ್ಟಿತು. ಅದರಲ್ಲಿ (೧) ಕೆಲವರು ತಿಳಿಯುತ್ತಾರೆ— ಬ್ರಹ್ಮಜ್ಞಾನದ ಮಹಿಮೆಯು ಅಚಿಂತ್ಯವಾದುದು. ಆದಕಾರಣ ಅದರ ಸಾಮರ್ಥ್ಯದಿಂದ ಅಪ್ರಾರಬ್ಧಗಳಂತೆಯೇ ಪ್ರಾರಬ್ಧಕರ್ಮಗಳೂ ಕೂಡ ಫಲಗಳನ್ನು ಭೋಗಿಸದೇನೇ ಕ್ಷೀಣಗಳಾಗುತ್ತವೆ. 'ನಾಭುಕ್ತಂ ಕ್ಷೀಯತೇ ಕರ್ಮ' ಇತ್ಯಾದಿ ವಾಕ್ಯಗಳಾದರೂ ಅಜ್ಞಾನಿವಿಷಯಕಗಳು. (ಮತ್ತು 'ಜ್ಞಾನಾಗ್ನಿಃಸರ್ವಕರ್ಮಾಣಿ' ಎನ್ನುವ ಗೀತೆಯಲ್ಲಿರುವ ಸರ್ವಶಬ್ದವು ಅಸಂಕುಚಿತವೇ ಆಗು ವುದು.)(೨) ಇತರರು ಪರಮೇಶ್ವರನ ಇಚ್ಛೆಯಿಂದ ಸಹಚರಿತಗಳಾದ ಪ್ರಾರಬ್ಧಕರ್ಮಗಳು ಎಲ್ಲಾ ತನ್ನ ಫಲವನ್ನೂ, ಭೋಗವನ್ನೂ ಕೊಡುತ್ತವೆ. ಸ್ವಲ್ಪವೂ ಫಲಹ್ರಾಸವಿಲ್ಲ ಎನ್ನುತ್ತಾರೆ. ಅದರಲ್ಲಿ ಆದ್ಯಮತವನ್ನು ನಿರಾಕರಿಸುತ್ತಾರೆ.) ಬ್ರಹ್ಮದರ್ಶಿನೋಽಪಿ=ಬ್ರಹ್ಮಾಪರೋಕ್ಷಜ್ಞಾನಿಗೂ ಕೂಡ, ಪ್ರಾರಬ್ಧಸ್ಯ ಕರ್ಮಣಃ=ಪಾರಬ್ಧಕರ್ಮಕ್ಕೆ, ಸರ್ವಾತ್ಮನಾ ತು = ಸರ್ವಪ್ರಕಾರದಿಂದಲೂ, ಅಭೋಗಃ=ಭೋಗಾಭಾವವು, ನ ಸ್ಯಾತ್ ಏವ ಹಿ=ಆಗಲಾರದಷ್ಟೇ! (ಅಂದರೆ— ಫಲವನ್ನು ಭೋಗಿಸದೆ ಬ್ರಹ್ಮಜ್ಞಾನದಿಂದಲೇ ಪ್ರಾರಬ್ಧಕರ್ಮಗಳೂ, ಕ್ಷೀಣಗಳಾಗುತ್ತವೆ ಎನ್ನುವ ಮತವು ಅಯುಕ್ತವು.) (ಏಕೆಂದರೆ— ಪ್ರಾರಬ್ಧಕರ್ಮಕ್ಕೂ ಕೂಡ, ಬ್ರಹ್ಮಜ್ಞಾನದಿಂದಲೇ ನಾಶವನ್ನು ಹೇಳಿದರೆ ಬ್ರಹ್ಮಾಪರೋಕ್ಷ ಜ್ಞಾನಿಗಳಾದ ಶುಕ-ವಾಮದೇವಾದಿಗಳಿಗೆ ಸಂಸಾರಾವಸ್ಥಾನವು ಕೂಡಲಾರದು.) ಹಿ='ತಸ್ಯ ತಾವದೇವ ಚಿರಂ' ಇತ್ಯಾದಿ ಶ್ರುತಿಯಿಂದಲೂ ಪ್ರಾರಬ್ಧ ಕರ್ಮಾವಸ್ಥಿತಿಯು ಅಪರೋಕ್ಷಜ್ಞಾನಿಗೂ ಅವಗತವಾಗುತ್ತದೆನ್ನುವುದು ಪ್ರಸಿದ್ಧವು. (೨ನೇ ಮತವನ್ನು ತಿರಸ್ಕರಿಸುತ್ತಾರೆ.) ('ಓಮಿತ್ಯುಚ್ಚಾರ್ಯಾಂತರಿಮಮಾತ್ಮಾನಮಭಿಪಶ್ಯೋಽಪ ನ್ಯುದ್ಯ ಪುಣ್ಯಂ ಚ ಪಾಪಂ ಚ ಕಾಮಮಾಚರಂತೋ ಬ್ರಹ್ಮಾನುವ್ರಜಂತಿ' ಎನ್ನುವ ಆಗಮದ್ದೆಶೆಯಿಂದ) ಪ್ರಾರಬ್ಧಸ್ಯ ಕರ್ಮಣಃ=ಅಪರೋಕ್ಷಜ್ಞಾನಿಯ ಪ್ರಾರಬ್ಧಕರ್ಮಕ್ಕೆ, ಫಲ ಹ್ರಾಸಸ್ತು=ಫಲ ಹ್ರಾಸವಾದರೂ, ವಿದ್ಯತೇ=ಇರುತ್ತದೆ. (ಯಾವನು ಆಗಮವು ಅಪ್ರಾರಬ್ಧ ವಿಷಯಕವೆಂದು ವ್ಯಾಖ್ಯಾನಮಾಡಿ ಪ್ರಾರಬ್ಧ ಕರ್ಮಫಲಕ್ಕೆ ಸ್ವಲ್ಪವೂ ಹ್ರಾಸವಿಲ್ಲವೆಂದು ಹೇಳು ವನೋ, ಅವನನ್ನು ಕುರಿತು ಹೇಳುತ್ತಾರೆ.) ಯದಿ=ಯಾವಪಕ್ಷದಲ್ಲಿ, ಸರ್ವಾತ್ಮನಾ=ಸರ್ವ ಪ್ರಕಾರದಿಂದಲೂ, ಸ್ವಲ್ಪವೂ ಕೂಡ, ಫಲಹ್ರಾಸಃ=ಫಲಹ್ರಾಸವು, ನ ಸ್ಯಾತ್=ಆಗಲಾರದೋ, (ಹಾಗಾದರೆ) ಕಾಮ್ಯವಿಧಿವೈಯರ್ಥ್ಯಂ = ಕಾಮ್ಯವಿಧಿಗೆ ವೈಯರ್ಥ್ಯವು, ಇತಿ = ಆದಕಾರಣ,

ಪ್ರಾರಬ್ಧಕರ್ಮಗಳಿಗೆ ಭೋಗದಿಂದಲೇ ಕ್ಷಯವು, ಆದಾಗ್ಯೂ ಫಲಹ್ರಾಸವೂ ಇದೆ ಎಂದು. ಉಕ್ತನಿಯಮಃ=ಹೇಳಲ್ಪಟ್ಟ ನಿಯಮವು, (ಉಪಪನ್ನಃ=ಯುಕ್ತವಾದುದು) ಭವೇತ್=ಆಗುವುದು

**ತಾ ॥ ಸ. ರ. ವಿ—** (1) 'ಉಪಮರ್ದಂಚ' ಎನ್ನುವ ಸೂತ್ರದಲ್ಲಿ ಸ್ವಲ್ಪ ಉಪಭುಕ್ತಗಳಾದ ಆರಬ್ಧಕಾರ್ಯವುಳ್ಳ ಪುಣ್ಯಪಾಪಗಳಿಗೆ ಬ್ರಹ್ಮಜ್ಞಾನದಿಂದ ಹ್ರಾಸವನ್ನು ಹೇಳುತ್ತದೆ. ಹೇಗೆ ಅಜ್ಞಾನಿಯು ಪ್ರಾರಬ್ಧಕರ್ಮಫಲವೆಲ್ಲವನ್ನು ಭೋಗಿಸಿಯೇ ನಾಶಪಡಿಸುತ್ತಾನೋ, ಹಾಗೆಯೇ ಜ್ಞಾನಿಯು ನಾಶಪಡಿಸುವುದಿಲ್ಲ. ವಿಷಭಕ್ಷಣದಿಂದುಂಟಾಗತಕ್ಕ ಮರಣವನ್ನು ನಿವೃತ್ತಿಸಲಿಕ್ಕೆ ಅವಶ್ಯವಾಗಿ ಪ್ರಾಪ್ತವಾದ ಪ್ರಾರಬ್ಧಕರ್ಮಫಲಕ್ಕೆ ಸ್ವಲ್ಪವೂ ಕೂಡ ಯಾವುದರಿಂದಲೂ ಹ್ರಾಸವಾಗುವುದಿಲ್ಲ ಎಂದು ಹೇಳಕೂಡದು ಹಾಗಿದ್ದರೆ ಕ್ಷಯರೋಗಾದಿಗಳು ನಿವೃತ್ತಿಯಾಗಬೇಕೆಂದು ಇಚ್ಛಿಸುವವನನ್ನು ಕುರಿತು ಆ ಕ್ಷಯರೋಗಾದಿಗಳ ನಿವೃತ್ತಿಯ ಉಪಾಯವನ್ನು ವಿಧಿಸತಕ್ಕ ಶಾಸ್ತ್ರಕ್ಕೆ ವೈಯರ್ಥ್ಯವು ಬರಬೇಕಾಗುವುದು. **'ಬ್ರಹ್ಮಹಾ ಕ್ಷಯರೋಗೀ ಸ್ಯಾತ್'** ಇತ್ಯಾದಿಗಳಿಂದ ಕ್ಷಯರೋಗಾದಿಗಳು ಪ್ರಾರಬ್ಧಕರ್ಮದ ವಿಪಾಕಗಳಿಂದವಗತಗಳಾಗುತ್ತವೆ. ಆದಕಾರಣ **'ನಾವಿಶೇಷಾತ್'** ಎನ್ನುವ ಸೂತ್ರದಿಂದ ನಿರ್ದಿಷ್ಟವಾದ ಅಧಿಕಾರ ತಾರತಮ್ಯವುಳ್ಳ ದೇವಾದಿಗಳಿಗೆ ಜ್ಞಾನತಾರತಮ್ಯದಿಂದ ಪ್ರಾರಬ್ಧಕರ್ಮಹ್ರಾಸದ ತಾರತಮ್ಯವು ಯುಕ್ತವು, ಮುಕ್ತಿಯಲ್ಲಿ ಆನಂದತಾರತಮ್ಯವೂ ಯುಕ್ತವು.

**ನ್ಯಾಯಸುಧಾ—** (1) ಹಾಗಾದರೆ– 'ಇಲ್ಲಿ ಪ್ರಾರಬ್ಧಕರ್ಮಣಃ' ಎಂದಿಷ್ಟೇ ಹೇಳದೆ 'ಪ್ರಾರಬ್ಧಕರ್ಮಜಸ್ಯ' ಎಂದು ಏಕೆ ಹೇಳಿದರೆಂದರೆ– **'ಭೋಗೇನ ತ್ವಿತರೇ'** ಎನ್ನುವುದರಿಂದ ಪ್ರಾರಬ್ಧಕರ್ಮಕ್ಕೆ ಭೋಗ ವಿನಾಶತ್ವವನ್ನು ಹೇಳಿದೆ. (2) ಫಲಕ್ಕೆ ಹ್ರಾಸವಾದರೆ, ಕರ್ಮಕೆ ಹ್ರಾಸವೇ ಅರ್ಥಾತ್ ಉಕ್ತವಾಯಿತು. ಅಂತೂ ಭೋಗೇನ ಎನ್ನುವ ಸೂತ್ರವಿರೋಧವು ತಪ್ಪಿದ್ದಲ್ಲ ಎಂದರೆ— 'ಕಿಂಚಿದ್ಭುಕ್ತಸ್ಯ' ಎಂದು ಹೇಳಿರುವರು. ಅಂದರೆ ಎಲ್ಲಾ ಪ್ರಾರಬ್ಧಕರ್ಮಫಲಕ್ಕೆ ಹ್ರಾಸವು ಅಪರೋಕ್ಷಜ್ಞಾನದಿಂದ ಹೇಳಲ್ಪಡುವುದಿಲ್ಲ. ಮತ್ತೆ ಸ್ವಲ್ಪ ಭುಕ್ತವಾದುದಕ್ಕೇನೆ, ಆದುದರಿಂದ ಸೂತ್ರವಿರೋಧವಿಲ್ಲ. (3) **'ನನ್ವೈ ಜನೋ ಜಾತು ಕಥಂಚನಾವ್ರಜೇಸ್ಮುಕುಂದಸೇವ್ಯನ್ಯವದಂಗ ಸಂಸೃತಿಂ'** ಎನ್ನುವ ಭಾಗವತ ವಚನದಿಂದ ಕರ್ಮಗಳು ಜ್ಞಾನಿಗೆ ಅಜ್ಞಾನಿಯಂತೆ ತನ್ನ ಫಲವನ್ನು ಸಂಪೂರ್ಣಕೊಡುವುದಿಲ್ಲ. (4) ಹಾಗಾದರೆ— **'ಅವಶ್ಯಮನು ಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ'** ಎಂದು ಪ್ರಾರಬ್ಧಕರ್ಮಫಲೋಪಭೋಗವು ಅಪರಿಹಾರ್ಯವೆಂದು ಸ್ಮೃತವಾಗಿರುವುದರಿಂದ ಹ್ರಾಸವು ಹೇಗೆಂದರೆ–'ಅನಿವರ್ತ್ಯಸ್ಯ ಪ್ರಾಪ್ತಸ್ಯಾಪಿ ಅಪರಿಹಾರ್ಯವಾಗಿ ಪ್ರಸಕ್ತವಾದುದಕ್ಕೂ ಹ್ರಾಸವಾಗುತ್ತದೆ. (5) ಹೇಗೆ ವಿಷಭಕ್ಷಣದಿಂದ ಮೃತಿಯು ಅನಿವರ್ತ್ಯವೆಂದು ಪ್ರಸಕ್ತವೇ ಆಗಿದೆ. ಪುನಃ ವಿಷವನ್ನು ಪರಿಹರಿಸತಕ್ಕ ಮಂತ್ರ ಔಷಧಾದಿಗಳಿಂದ ನಿವೃತ್ತಿಯು ಕಂಡದರಿಂದ ಅನಿವರ್ತ್ಯವೇ ಅಲ್ಲವೋ? ಹಾಗೆಯೇ ಪ್ರಾರಬ್ಧಕರ್ಮಫಲೋಪಭೋಗವೂ ಕೂಡ ಅನಿವರ್ತ್ಯವಾಗಿ ಪ್ರಸಕ್ತವೇ ಆಗಿದೆ; ಅನಿವರ್ತ್ಯವೇ ಅಲ್ಲ. ಜ್ಞಾನಾದಿಗಳಿಂದ ನಿವೃತ್ತವಾಗುವುದು, ಅಂತೂ ವಿಷಭಕ್ಷಣದಿಂದ ಮರಣವು ಅವಶ್ಯವಾಗುವುದು ಎನ್ನುವ ವಚನದಂತೆಯೇ **'ಅವಶ್ಯಮನುಭೋಕ್ತವ್ಯಂ'** ಎನ್ನುವ ವಚನಕ್ಕೂ ಅರ್ಥವನ್ನು ಮಾಡಬೇಕು. ಪ್ರಾರಬ್ಧಕರ್ಮಗಳನ್ನು ಭೋಗಿಸಬೇಕು ಎನ್ನುವುದು ಸಾಮಾನ್ಯ ನಿಯಮವು. ಅಪವಾದವಿದ್ದರೆ ಬಾಧಿತವಾಗುವುದು. (6) ಬ್ರಹ್ಮಹತ್ಯಾದಿ ಕರ್ಮಗಳ ಫಲಭೂತವಾದ ಕ್ಷಯರೋಗಾದಿಗಳ ನಿವೃತ್ತಿಯೇ ಪ್ರಯೋಜನವಾಗಿ ಉಳ್ಳವುಗಳು, ಪ್ರಾಯಶ್ಚಿತ್ತವಿಧಿಗಳು ಕಾಮ್ಯವಿಧಿಗಳೆಂದು ವಿವಕ್ಷಿತಗಳಾಗಿವೆ. (7) **'ಬ್ರಹ್ಮಹಾ ಕ್ಷಯರೋಗೀ ಸ್ಯಾತ್ಸುರಾಪೀಶ್ಯಾವದಂತಕಃ । ಹೇಮಹಾರೀ ತು ಕುನಖೀ ದುಶ್ಚರ್ಮಾಗುರುತಲ್ಪಗಃ'**

ಇತ್ಯಾದಿ ಸ್ಮೃತಿಗಳಿಂದ ಬ್ರಹ್ಮಹತ್ಯಾದಿಗಳಿಗೆ ಕ್ಷಯರೋಗಾದಿಗಳು ಫಲವೆಂದು ತಿಳಿದುಬರುತ್ತದೆ. ಅದರಿಂದುಂಟಾದ ಕ್ಷಯಾದಿಗಳು ಬ್ರಹ್ಮಹತ್ಯಾದಿಗಳ ಪ್ರಾರಬ್ಧಫಲವು. ಆ ಪ್ರಾರಬ್ಧ ಕರ್ಮದ ಫಲಭೂತವಾದ ಕ್ಷಯಾದಿಗಳಿಗೆ, **'ಅಯುತಾಮೃತ ಸಮಿದ್ಧೋಮಾದ್ಘೋಘೃತಕ್ಷೀರಸಂಯುತಾತ್ । ಸರ್ವೇ ರೋಗಾ ವಿನಶ್ಯಂತಿ ವಿಮುಖೋ ನ ಹರೇರ್ಯದಿ'** ಇತ್ಯಾದ್ಯುಕ್ತವಾದ ಪ್ರಾಯಶ್ಚಿತ್ತವನ್ನು ಮಾಡಿದರೆ ನಿವೃತ್ತಿಯು ಕಂಡದೆ. ಆದಕಾರಣ ಪ್ರಾರಬ್ಧ ಕರ್ಮಫಲಕ್ಕೆ ಸರ್ವಥಾಪಿ ಅನುಪಮರ್ದವು (ಹ್ರಾಸಾಭಾವವು) ಹೇಗೆ ಹ್ರಾಸವು ಇದ್ದೇ ಇದೆ? (೮) ಪ್ರಾಯಶ್ಚಿತ್ತವು ಕ್ಷಯರೋಗದ ನಿವೃತ್ತಿಗೆ ಕಾರಣವಲ್ಲ. ಮತ್ತೆ ಕ್ಷಯರೋಗದ ಭೋಗದಲ್ಲಿ ನಿಮಿತ್ತವಾದ ಯಾವ ಕರ್ಮವೋ ಅದರ ನಾಶದಲ್ಲಿಯೇ ಕಾರಣವೆಂದು ಹೇಳುವುದಾದರೆ ಆಗ ಪ್ರಾಯಶ್ಚಿತ್ತ ವಿಧಿಗಳು ಕ್ಷಯರೋಗಾದಿಗಳಿಗೆ ನಿವರ್ತಕಗಳಾಗದೆ ಇರುವುದರಿಂದ ವ್ಯರ್ಥಗಳಾಗಬೇಕಾಗುವುವು ॥ ೧೦ ॥ ೧೧ ॥ ೧೨ ॥

'ಏವಮುತ್ಪನ್ನ ನಿರ್ದೋಷ' (ಶ್ಲೋಕ ೧) ಇತ್ಯಾದಿಗಳಿಂದ ಹೇಳಿದ ಅರ್ಥದಲ್ಲಿ ಸ್ಮೃತಿ ಸಮ್ಮತಿಯನ್ನು ಹೇಳುತ್ತಾರೆ.

**ಮೂ ॥ ಏವಮಾದ್ಯಪಿ ಸಂಪ್ರೋಕ್ತಂ ತಂತ್ರಭಾಗವತೇ ಸ್ಫುಟಂ ॥ ೧೩ ॥**
**ತಾರತಮ್ಯಂ ಫಲೇ ನೋ ಚೇತ್ ಬ್ರಹ್ಮಾದೀನಾಂ ಕಥಂ ಶ್ರುತಿಃ ।**
**ಅವೃಜಿನೋಽಕಾಮಹತ ಇತಿ ಮುಕ್ತಿಂ ನಿಗದ್ಯ ಚ ॥ ೧೪ ॥**
**ಆನಂದತಾರತಮ್ಯಂ ಚ ತೇಷಾಂ ಬ್ರೂಯಾತ್ಪೃಥಕ್ ಪೃಥಕ್ ।**
**ಸಂಸಾರ ಏವ ಚೇದೇತತ್ ತಾರತಮ್ಯಂ ನ ಮುಖ್ಯತಃ ॥**
**ಅಕಾಮಹತಶಬ್ದಾರ್ಥೋಽವೃಜಿನತ್ವಂ ಚ ನೋ ಭವೇತ್ ॥ ೧೫ ॥**

ಅ ॥ ಏವಮಾದ್ಯಪಿ = ಇದೇ ಮೊದಲಾಗಿವುಳ್ಳದ್ದು, ಇದಕ್ಕೆ ಉಪಯುಕ್ತವಾದುದು, ಭಾಷ್ಯಾದಿಗಳಲ್ಲಿ ಉದಾಹೃತಗಳಾದ ವಚನಗಳಿಂದಲೂ, ಅಥವಾ ಈ ಅಧಿಕರಣಪ್ರಮೇಯವೂ ಅದಕ್ಕೆ ಉಪಯುಕ್ತವಾದ ಅಪೌನರುಕ್ತ್ಯಾದಿಗಳೂ, ಪ್ರಥಮಾಧಿಕರಣಪ್ರಮೇಯವೂ ಅಥವಾ ೧ ಪುರುಷಾರ್ಥಾಧಿಕರಣ, ೪ ಸ್ತುತ್ಯಧಿಕರಣ-ಇವುಗಳ ಅರ್ಥಗಳು ದ್ವಿತೀಯಾದ್ಯಧಿಕರಣಾರ್ಥವೂ ಕೂಡ, ತಂತ್ರಭಾಗವತೇ = ತಂತ್ರಭಾಗವತದಲ್ಲಿ, ಸ್ಫುಟಂ=ಸ್ಪಷ್ಟವಾಗಿ, ಸಂಪ್ರೋಕ್ತಂ= ಹೇಳಲ್ಪಟ್ಟದೆ. (ಪುರುಷಾರ್ಥಾಧಿಕರಣದಲ್ಲಿಯೂ ಸ್ತುತ್ಯಧಿಕರಣದಲ್ಲಿಯೂ ಜ್ಞಾನಫಲಕ್ಕೆ ನೀಚೋಚ್ಚಭಾವವು, ಹೇಳಲ್ಪಟ್ಟದೆ. ಅದು ಸಾಂಸಾರಿಕಫಲಕ್ಕೆ ವಿಪ್ರತಿಪನ್ನವಾಗದಿರುವುದರಿಂದ ಮುಕ್ತಿಗತಫಲಕ್ಕೆ ತಾರತಮ್ಯವನ್ನು ಸಾಧಿಸುವುದಕ್ಕಾಗಿ ಉತ್ತರಗ್ರಂಥವು.) (ಯಾರು ಮೋಕ್ಷದಲ್ಲಿ ಭೇದವನ್ನೇ ಅಂಗೀಕರಿಸುವುದಿಲ್ಲವೋ, ಭೇದವನ್ನು ಅಂಗೀಕರಿಸಿಯೂ ಆನಂದಾದಿಗಳನ್ನು ಅಂಗೀಕರಿಸುವುದಿಲ್ಲವೋ, ಅವರನ್ನು ಕುರಿತು ತಾರತಮ್ಯವನ್ನು ಸಾಧಿಸಲಿಕ್ಕೆ ಅವಕಾಶವಿಲ್ಲ. ಮತ್ತೆ ಭೇದಾದಿಗಳ ಸಾಧನವನ್ನೇ ಮಾಡಬೇಕು. ಯಾರು ತಾನೇ ಭೇದವನ್ನೂ ಆನಂದಾದಿಗಳನ್ನೂ ಅಂಗೀಕರಿಸಿಯೂ ತಾರತಮ್ಯವನ್ನು ತಿಳಿಯುವುದಿಲ್ಲವೋ, ಅವರನ್ನು ಕುರಿತು ತಾರತಮ್ಯವನ್ನು ಸಾಧಿಸಲಿಕ್ಕೆ ಪ್ರಯತ್ನಮಾಡಲ್ಪಡುತ್ತದೆ. ಅದರಲ್ಲಿ ಪ್ರಕೃತದಲ್ಲಿ ಶ್ರುತಿಯಿಂದ ಮುಕ್ತಿಯಲ್ಲಿ ಆನಂದತಾರತಮ್ಯವನ್ನುಪಪಾದಿಸುತ್ತಾರೆ ) ಬ್ರಹ್ಮಾದೀನಾಂ=ಬ್ರಹ್ಮನೇ ಮೊದಲಾದವರ, ಫಲೇ=ಜ್ಞಾನಫಲದಲ್ಲಿ. ಅಂದರೆ ಮುಕ್ತಿಗಾಮಿಯಾದ ಆನಂದದಲ್ಲಿ, ತಾರತಮ್ಯಂ= ತಾರತಮ್ಯವು, ನೋ ಚೇತ್=ಇಲ್ಲದೆ ಇದ್ದರೆ, ಕಥಂ=ಹೇಗೆ, ಶ್ರುತಿಃ = **'ಸ ಯೋ ಹ ವೈ**

ಮನುಷ್ಯಾಣಾಂ ರಾದ್ಧಃ' ಇತ್ಯಾದಿ ವಾಜಸನೇಯಿಗಳ ಶ್ರುತಿಯೂ 'ಸೈಷಾನಂದಸ್ಯ ಮೀಮಾಂಸಾ ಭವತಿ' ಇದುಮೊದಲಾದ ತೈತ್ತಿರೀಯರ ಶ್ರುತಿಯೂ, ತೇಷಾಂ=ಆ ಬ್ರಹ್ಮಾದಿಗಳ, ಆನಂದತಾರತಮ್ಯಂ=ಆನಂದಕ್ಕೆ ತಾರತಮ್ಯವನ್ನು, ಬ್ರೂಯಾತ್=ಹೇಳೀತು. ಪೃಥಕ್ ಪೃಥಕ್=(ಎಲ್ಲರೂ ಮೇಲೆ ಮೇಲಿನವರು ಕೆಳಗಿನವರಿಂದ ನೂರು ಇಮ್ಮಡಿ ಆನಂದವುಳ್ಳವರು ಎಂದು ಸಾಮಾನ್ಯವಾಗಿ ಹೇಳದೆ) ಪ್ರತ್ಯೇಕ ಪ್ರತ್ಯೇಕವಾಗಿಯೇ, (ಹೇಳುತ್ತದೆ) (ಆದುದರಿಂದ ಆನಂದತಾರತಮ್ಯದಲ್ಲಿ ತಾತ್ಪರ್ಯವಿದೆ ಎಂದು ತಿಳಿದು ಬರುತ್ತದೆ.) (ಹಾಗಾದರೆ ಬ್ರಹ್ಮಾದಿಗಳ ಆನಂದಕ್ಕೆ ತಾರತಮ್ಯವನ್ನು ಶ್ರುತಿಯು ಹೇಳುತ್ತದೆ. ಮುಕ್ತಾನಂದದ ತಾರತಮ್ಯವನ್ನು ಸಾಧಿಸುವುದಕ್ಕಾಗಿ ಮುಕ್ತತ್ವ ಜ್ಞಾಪಕವು ಏನಿದೆ ಎಂದರೆ—) ಅವೃಜಿನೋऽಕಾಮಹತ ಇತಿ= 'ಯಶ್ಚ ಶ್ರೋತ್ರಿಯೋऽವೃಜಿನೋऽಕಾಮಹತಃ' ಎನ್ನುವ 'ಶ್ರೋತ್ರಿಯಸ್ಯ ಚಾಕಾಮಹತಸ್ಯ' ಎನ್ನುವ ಶ್ರುತಿಯೂ, ಮುಕ್ತಿಂ=ಮೋಕ್ಷವನ್ನು, ನಿಗದ್ಯ ಚ=ಹೇಳಿಯೂ, ತೇಷಾಂ= ಮುಕ್ತರಿಗೆ, ಆನಂದತಾರತಮ್ಯಂ ಚ=ಆನಂದತಾರತಮ್ಯವನ್ನು ಹೇಳುತ್ತದೆ. (ಎರಡು ಶ್ರುತಿಗಳಲ್ಲಿ ಹೇಳಲ್ಪಟ್ಟ ಆನಂದತಾರತಮ್ಯವು ಸಂಸಾರವಿಷಯಕವೇ; ಮುಕ್ತಿವಿಷಯಕವಲ್ಲ. ಎಂದಾಶಂಕಿಸಿಕೊಂಡು ಪರಿಹರಿಸುತ್ತಾರೆ.) ಏತತ್ತಾರತಮ್ಯಂ=ಈ ತಾರತಮ್ಯವು, ಸಂಸಾರ ಏವ= ಸಂಸಾರದಲ್ಲಿಯೇ, ನ ತು ಮುಖ್ಯತಃ=ಮುಖ್ಯವಾದ ಪುರುಷಾರ್ಥವಾದ ಮೋಕ್ಷದಲ್ಲಿ ಅಲ್ಲ. ಇತಿ ಚೇತ್=ಹೀಗೆ ಹೇಳಿದರೆ, ಅಕಾಮಹತಶಬ್ದಾರ್ಥಃ=ಅಕಾಮಹತತ್ವವೂ, ಅವೃಜಿನತ್ವಂ ಚ= ಪಾಪರಾಹಿತ್ಯವೂ, (ಯುಕ್ತವು) ನೋ ಭವೇತ್=ಆಗಲಾರದು.

ತಾ || ಸ. ರ. ವಿ.—(1) 'ಸ ಯೋ ಮನುಷ್ಯಾಣಾಂ ರಾಟ್ ಸಮೃದ್ಧೋ ಭವತ್ಯನ್ಯೇಷಾಮಧಿಪತಿಃ ಸರ್ವೈಃ ಮಾನುಷ್ಯಕೈಃ ಭೋಗೈಃ ಸಂಪನ್ನತಮಃ ಸ ಮನುಷ್ಯಾಣಾಂ ಪರಮಾನಂದಃ ಅಥ ಯೇ ಶತಂ ಮನುಷ್ಯಾಣಾಮಾನಂದಾಃ ಸ ಏಕಃ ಪಿತೃಣಾಂ ಚಿರಲೋಕಲೋಕಾನಾಮಾನಂದಃ' ಎಂದಾರಂಭಿಸಿ ಅನಂತರದಲ್ಲಿ ಪಿತೃಗಳಿಂದ ನೂರು ಅಧಿಕಾನಂದದಿಂದ ವಿಶಿಷ್ಟವಾದ ಗಂಧರ್ವರನ್ನೂ ಅದಕ್ಕಿಂತ ನೂರು ಆನಂದ ಜಾಸ್ತಿಯಾಗಿ ಕರ್ಮದೇವತೆಗಳನ್ನೂ, ಅವರಕ್ಕಿಂತ ನೂರು ಆನಂದ ಜಾಸ್ತಿಯಿರುವ ಆಜಾನದೇವತೆಗಳನ್ನು ಹೇಳಿ 'ಯಶ್ಚ ಶ್ರೋತ್ರಿಯೋऽವೃಜಿನೋऽಕಾಮಹತಃ' ಇತ್ಯಾದಿ ವಾಜಸನೇಯಕದಲ್ಲಿ ಅವೃಜಿನತ್ವ-ಅಕಾಮಹತತ್ವಾದಿಗಳು ಹೇಳಿದೆ. ಅದರಲ್ಲಿ ಹೇಗೆ ಬ್ರಹ್ಮನನ್ನು ಪಾಸನೆ ಮಾಡತಕ್ಕ ಮನುಷ್ಯಾಧಿಪತಿಯನ್ನಾರಂಭಿಸಿ ಬ್ರಹ್ಮಪರ್ಯಂತರಾದ ಮೊದಲು ಮೊದಲಿನವರಿಂದ ಉತ್ತರೋತ್ತರರಿಗೆ ಶತಾಧಿಕವಾದ ಆನಂದವತ್ವವು ಹೇಳಲ್ಪಡುತ್ತದೋ, ಹೀಗೆಯೇ ಮನುಷ್ಯರ ಅಧಿಪತಿಗಳೇ ಮೊದಲಾದ ಮುಕ್ತಿಯಲ್ಲಿರತಕ್ಕ ಅಕಾಮಹತ-ಅವೃಜಿನ ಮೊದಲಾದ ಶಬ್ದಗಳಿಂದ ವಾಚ್ಯರಾದ ಮೊದಲು ಮೊದಲಿನವರದಿಂದ ಉತ್ತರೋತ್ತರರಿಗೆ ಶತಾಧಿಕವಾದ ಆನಂದವತ್ವವು ಹೇಳಲ್ಪಡುತ್ತದೆ. ಇದಾದರೂ ಮುಕ್ತರಿಗೆ ಆನಂದ ತಾರತಮ್ಯವನ್ನು ಅಂಗೀಕರಿಸದೆ ಇದ್ದರೆ ಕೂಡಲಾರದು. (2) ಹಾಗಾದರೆ ಕೆಲವು ಅಮುಕ್ತರಲ್ಲಿ ಆನಂದ ತಾರತಮ್ಯವು 'ಯಶ್ಚ ಶ್ರೋತ್ರಿಯೋऽವೃಜನೋऽಕಾಮಹತಃ' ಎನ್ನುವುದರಿಂದ ಹೇಳಲ್ಪಡುತ್ತದೆ ಎಂದು ಏಕೆ ಆಗಲಾರದು, ಎಂದರೆ— ಅಕಾಮಹತ ಅವೃಜಿನಶಬ್ದಗಳು ಅಮುಕ್ತ ವಿಷಯಕಗಳಾದರೆ ಮುಖ್ಯಾರ್ಥವನ್ನು ಪರಿತ್ಯಾಗಮಾಡಬೇಕಾಗುವುದು. || ೧೩ || ೧೪ || ೧೫ ||

ಸ. ರ. ವಿ— ಅದರಲ್ಲಿ ಅಕಾಮಹತತ್ವವು ಮುಖ್ಯವಾಗಿ ಮುಕ್ತನಿಗೇನೇ ಸರಿಯೆನ್ನುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—

ನ್ಯಾಯಸುಧಾ— ಹಾಗಾದರೆ— ಸಂಸಾರಿಗಳಲ್ಲಿಯೂ ಅಕಾಮಹತತ್ವಾದಿಗಳು ಕಥಂ ಚಿತ್ ಕೂಡುತ್ತವೆ, ಎಂದರೆ— ಮುಖ್ಯವಾಗಿ ಕೂಡುವುದಿಲ್ಲವೆನ್ನುತ್ತೇವೆ. ಬಾಧಕವಿಲ್ಲದೆ ಅಮುಖ್ಯವಾದ ಅರ್ಥವನ್ನು ಅಂಗೀಕರಿಸುವುದು ಯುಕ್ತವಲ್ಲ. ಅಕಾಮಹತತ್ವಾದಿಗಳು ಸಂಸಾರಿಗಳಲ್ಲಿ ಕೂಡದಿರುವುದು ಹೇಗೆ ಎಂದರೆ— ಅಕಾಮಹತತ್ವವು ಕೂಡುವುದಿಲ್ಲವೆನ್ನುವುದನ್ನುಪಪಾದಿಸುತ್ತಾರೆ—

**ಮೂ ॥ ಕಾಮಸ್ಯ ಯತ್ರಾಪ್ತಾಃ ಕಾಮಾಃ ತತ್ರ ಮಾಮಮೃತಂ ಕೃಧಿ ॥ ೧೬ ॥**
**ಇತಿ ಯಲ್ಲಕ್ಷಣಂ ಮುಕ್ತೇಃ ಶ್ರುತಿರಾಹ ಬಲೀಯಸೀ ।**
**ಕಾಮಾಹತಿಃ ಕುತೋಽನ್ಯತ್ರ ಪ್ರಾಪ್ತಕಾಮಸ್ಯ ಸಾ ಭವೇತ್ ॥ ೧೭ ॥**

ಅ ॥ ಯತ್ರ=ಯಾವ ಲೋಕದಲ್ಲಿ, ಕಾಮಸ್ಯ=ಇಚ್ಛೆಯ, ಕಾಮಾಃ=ವಿಷಯಗಳು, ಆಪ್ತಾಃ=ಪರ್ಯಾಪ್ತಗಳಾಗಿದ್ದಾವೋ, ಪೂರ್ಣಗಳಾಗಿದ್ದಾವೋ, ತತ್ರ=ಆ ಲೋಕ(ವೈಕುಂಠ) ದಲ್ಲಿ, ಮಾಂ=ನನ್ನನ್ನು, ಅಮೃತಂ = ಮುಕ್ತನನ್ನಾಗಿ, ಕೃಧಿ=ಮಾಡು. (ಹೀಗೆ ವಾಯುವನ್ನು ಪ್ರಾರ್ಥಿಸಿದ್ದು.) ಯತ್=ಯಾವ ಕಾರಣದೆಶೆಯಿಂದ, ಇತಿ=ಹೀಗೆ, ಬಲೀಯಸೀ= ಬಲಿಷ್ಠವಾದ, ಶ್ರುತಿಃ=ಶ್ರುತಿಯು, ಆಪ್ತಕಾಮತ್ವಂ=ಕಾಮ್ಯಾರ್ಥದ ಹೊಂದುವಿಕೆಯನ್ನು ಮುಕ್ತೇಃ = ಮುಕ್ತಿಗೆ, ಆಹ = ಲಕ್ಷಣವನ್ನಾಗಿ ಹೇಳುತ್ತದೆ. (ನಿರವಕಾಶತ್ವಾದಿಗಳಿಂದ ಪ್ರಬಲವಾದ ಶ್ರುತಿಯನ್ನು ಅನ್ಯಥಾ ಮಾಡಲಿಕ್ಕೆ ಸಾಧ್ಯವಿಲ್ಲ.) (ಹಾಗಾದರೆ ಇಲ್ಲಿ ಸರ್ವ ಕಾಮ ವಿಷಯಗಳ ಪ್ರಾಪ್ತಿಯೇ ಮುಕ್ತನಿಗೆ ತೋರುತ್ತದೆ. ಅಕಾಮಹತತ್ವವು ತೋರುವುದಿಲ್ಲ, ಎಂದರೆ—) ಕಾಮಾಹತಿಃ = ಅಕಾಮಹತತ್ವವು, ಅನ್ಯತ್ರ = ಮುಕ್ತನಿಂದ ಇತರ ಕಡೆಯಲ್ಲಿ, ಕುತಃ=ಯಾವಕಾರಣದಿಂದ, (ಸಂಭವೇತ್=ಕೂಡುವುದು?) (ಆಪ್ತಕಾಮತ್ವವು ಮುಕ್ತಲಕ್ಷಣವಾಗಿ ಶ್ರುತಿಯಲ್ಲಿ ಹೇಳಲ್ಪಡುವುದಾದರೆ ಆ ಲಕ್ಷಣವೇ ಸಂಸಾರಿಗಳಲ್ಲಿ ಅಸಂಭವಿಯಾಗಲಿ. ಅಕಾಮಹತತ್ವವಾದರೂ ಹೇಗೆ ಅಸಂಭವಿಯೆಂದರೆ-) ಸಾ=ಕಾಮಾಹತಿಯು, ಪ್ರಾಪ್ತಕಾಮಸ್ಯ= ಪ್ರಾಪ್ತವಾದ ಇಚ್ಛೆಯುಳ್ಳವನಿಗೆ, ಭವೇತ್=ಆಗುವುದು. (ಅಕಾಮಹತತ್ವಕ್ಕೆ ಆಪ್ತಕಾಮತ್ವವು ಹೇತುವು. ನಿಮಿತ್ತವಿಲ್ಲದಿದ್ದರೆ ನೈಮಿತ್ತಿಕವು ಕೂಡುವುದಿಲ್ಲ, ಅದರಲ್ಲಿ ನಿಮಿತ್ತವಾದ ಆಪ್ತಕಾಮತ್ವವು ಸಂಸಾರಿಗಳಲ್ಲಿ ಕೂಡುವುದಿಲ್ಲವೆಂದುಕ್ತವಾಯಿತು. ಆದಕಾರಣ ನೈಮಿತ್ತಿಕವಾದ ಅಕಾಮಹತತ್ವವೂ ಅಲ್ಲಿ ಕೂಡುವುದಿಲ್ಲ.) ॥ ೧೬ ॥ ೧೭ ॥

ಆಪ್ತಕಾಮನಿಗೆ ಅಕಾಮಹತತ್ವವನ್ನು ವಿವರಿಸುತ್ತಾರೆ.

**ಮೂ ॥ ಅಪ್ರಯತ್ನೇನ ಕಾಮಾನಾಮವಾಪ್ತಿಃ ಸಾ ಯದಾ ಭವೇತ್ ।**
**ತದೈವಾಕಾಮಹತತಾ ಕುತ ಏವಾನ್ಯಥಾ ಭವೇತ್ ॥ ೧೮ ॥**

ಅ ॥ ಯದಾ=ಯಾವಾಗ, ಅಪ್ರಯತ್ನೇನ=ಪ್ರಯತ್ನವಿಲ್ಲದೆ, ಕಾಮಾನಾಂ=ಕಾಮಿತಾರ್ಥಗಳ, ಅವಾಪ್ತಿಃ=ಪ್ರಾಪ್ತಿಯು, ಭವೇತ್=ಆಗುವುದೋ, ತದೈವ=ಆವಾಗಲೇ, ಸಾ= ಅಕಾಮಹತಶಬ್ದದೆಶೆಯಿಂದ ಪ್ರತೀತವಾಗುವ, ಅಕಾಮಹತತಾ = ಕಾಮೋಪದ್ರವಾಭಾವವು, ಭವೇತ್=ಕೂಡುವುದು. ಅನ್ಯಥಾ=ಪ್ರಯತ್ನವಿಲ್ಲದೆ ಕಾಮಗಳ ಪ್ರಾಪ್ತಿಯಿಲ್ಲದೆ ಇದ್ದರೆ, ಕುತ ಏವ=ಯಾವ ಕಾರಣದಿಂದ, ಅಕಾಮಹತತಾ = ಅಕಾಮಹತತ್ವವು, ಭವೇತ್=ಆಗುವುದು. (ಯಾವುದರಿಂದಲೂ ಆಗಲಾರದು.)

ಟೀ ॥ ಕಾಮದಿಂದ ಉಪದ್ರವವೇ ಕಾಮಹತತ್ವವು. ಅದರ ಅಭಾವವು ಅಕಾಮಹತತ್ವವು. ಕಾಮನಿಮಿತ್ತವಾದ ಉಪದ್ರವಾಭಾವವು ಅನಾಯಾಸದಿಂದಲೇ ಆಯಾಯ ವಿಷಯಗಳ ಪ್ರಾಪ್ತಿಯಾದರೇನೇ ಆಗುತ್ತದೆ. ಬೇರೆಪ್ರಕಾರವಾಗಲಾರದು, ಎಂದನುಭವಸಿದ್ಧವು. ಆಯಕಾರಣ ಪ್ರಾಪ್ತಕಾಮತ್ವ-ಅಕಾಮಹತತ್ವಗಳಿಗೆ ನಿಮಿತ್ತನೈಮಿತ್ತಿಕಭಾವವು ಯುಕ್ತವೇ ಆಗಿದೆ. ಅಥವಾ ಯಾವನು ಕಾಮಿತವಾದುದನ್ನು ನಿಯಮದಿಂದ ಹೊಂದುತ್ತಾನೋ ಆತನು ಅಕಾಮಹತನು. ಆತನು ಮುಕ್ತನೇ ಆಗಲು ಅರ್ಹನಾಗಿರುತ್ತಾನೆ. ॥ ೧೮ ॥

ಸ. ರ. ವಿ— ಹಾಗಾದರೆ ಮುಕ್ತನು ಅಕಾಮನೇ ಆಗಿರುತ್ತಾನೆ. ಅಕಾಮಹತನಲ್ಲವೆಂದರೆ—

ನ್ಯಾಯಸುಧಾ— (1) ಆಪ್ತಕಾಮನಿಗೇನೇ ಕಾಮನಿಮಿತ್ತಕವಾದ ಉಪದ್ರವಾಭಾವವು. ಬೇರೆಪ್ರಕಾರವಲ್ಲ ಎನ್ನುವ ಈ ನಿಯಮವಿಲ್ಲ. ಕಾಮವಿಲ್ಲದಿದ್ದರೂ ಕಾಮನಿಮಿತ್ತಕವಾದ ಉಪದ್ರವಾಭಾವವು ಕೂಡಬಹುದು; ಎಂದರೆ— ಚೇತನರಲ್ಲಿ ಕಾಮಾಭಾವವೇ ಕೂಡಲಾರದು. ಏಕೆಂದರೆ— 'ಬ್ರಹ್ಮಾದಯೋ ನ ಕಾಮರಹಿತಾಃ ಅಸುಪ್ತಾಮೂಢಚೇತನತ್ವಾತ್ ದೇವದತ್ತವತ್' ಎನ್ನುವ ಅನುಮಾನವಿರೋಧವು ಬರುತ್ತದೆ ಎಂಬ ಅಭಿಪ್ರಾಯದಿಂದ ಅನುಮಾನಕ್ಕೆ ವ್ಯಾಪ್ತಿಯನ್ನುಪಪಾದಿಸುತ್ತಾರೆ—

ಮೂ ॥ ಚೇತನಸ್ಯ ತ್ವಸುಪ್ತಸ್ಯ ಕುತ್ರ ದೃಷ್ಟಾ ಹ್ಯಕಾಮತಾ ।
ಅವ್ಯಕ್ತಿರೇವ ಕಾಮಾನಾಂ ನ ನಾಶೋ ಮೋಹಸುಪ್ತಯೋಃ ॥ ೧೯ ॥
ಯತ್ಕಾಮಃ ಸ್ವಾಪಮಾಪ್ನೋತಿ ತದೇವೋತ್ಥಾಪಿತಃ ಪುನಃ ।
ಅವಶೋಽಪಿ ವ್ಯಾಹರತಿ ಕುತಃ ಸುಪ್ತಾವಕಾಮತಾ ॥ ೨೦ ॥

ಅ ॥ ಅಸುಪ್ತಸ್ಯ = ಸುಷುಪ್ತಿಯನ್ನು ಹೊಂದದೆ ಇರುವ, (ಮತ್ತು ಮೋಹವನ್ನು ಹೊಂದದಿರುವ) ಚೇತನಸ್ಯ=ಚೇತನನಿಗೆ, ಅಕಾಮತಾ = ಕಾಮನಾಭಾವವು, ಕುತ್ರ=ಎಲ್ಲಿ, ದೃಷ್ಟಾ=ಕಂಡದೆ? ಹಿ=ಆದುದರಿಂದ ವ್ಯಾಪ್ತಿಯು ಸಿದ್ಧವಾಯಿತು. (ಸುಪ್ತ್ಯವಸ್ಥೆಯಲ್ಲಿಯೂ, ಮೋಹಾವಸ್ಥೆಯಲ್ಲಿಯೂ ವ್ಯಕ್ತವಾದ ಕಾಮವು ಇಲ್ಲದಿರುವುದರಿಂದ ಹಿಂದೆ ಹೇಳಿದ ಅನುಮಾನದಲ್ಲಿ ಅಸುಪ್ತ ಅಮೂಢ ಎಂದು ವಿಶೇಷಣಕೊಟ್ಟದ್ದು ಎನ್ನುವ ಅಭಿಪ್ರಾಯದಿಂದ ಎನ್ನುತ್ತಾರೆ.) ಕಾಮಾನಾಂ=ಕಾಮಗಳಿಗೆ, ಮೋಹಸುಪ್ತಯೋಃ=ಮೂರ್ಚ್ಛಾವಸ್ಥೆಯಲ್ಲಿಯೂ, ಸುಪ್ತ್ಯವಸ್ಥೆಯಲ್ಲಿಯೂ, ಅವ್ಯಕ್ತಿರೇವ=ವ್ಯಕ್ತ್ಯಭಾವವೇ ನಾಶಃ = ಸರ್ವಥಾ ಅಭಾವವು, ನ=ಅಲ್ಲ. (ಸುಪ್ತ್ಯಾದಿಗಳಲ್ಲಿ ಕಾಮವದೆ ಎಂದು ಸಿದ್ಧವಾದರೆ ವ್ಯಕ್ತಿಯಿಲ್ಲವೆಂದು ಕಲ್ಪಿಸುವುದು ಯುಕ್ತವು. ಕಾಮವದೆ ಎಂದು ಯಾವುದರಿಂದ ಸಿದ್ಧವಾಗುತ್ತದೆ, ಎಂದರೆ—) ಯತ್ಕಾಮಃ = ಯಾವ ಭೋಜನಾದಿಗಳನ್ನು ಇಚ್ಛಿಸತಕ್ಕ ಪುರುಷನು, ಸ್ವಾಪಂ = ಸ್ವಾಪಾದಿಗಳನ್ನು, ಆಪ್ನೋತಿ= ಹೊಂದುತ್ತಾನೋ, ಉತ್ಥಾಪಿತಃ ಪುನಃ = ಎದ್ದವನಾಗಿ, ತದೇವ=ಆ ಭೋಜನಾದಿಗಳನ್ನೇ, ಅವಶೋಽಪಿ=ಪರವಶನಾದಾಗ್ಯೂ, (ಕೆಲವುವೇಳೆ) ವ್ಯಾಹರತಿ=ಹೇಳುತ್ತಾನೆ. ಸುಪ್ತೌ=ಸುಪ್ತಿಯಲ್ಲಿ, ಅಕಾಮತಾ=ಕಾಮನಾಭಾವವು, ಕುತಃ=ಯಾವುದರಿಂದ ಸಿದ್ಧಿಸುತ್ತದೆ? (ವ್ಯಾಹರಣ ವಿಶೇಷವಿದ್ದಪ್ರಯುಕ್ತವೂ ಸುಪ್ತನಿಗೆ ಸ್ವಾಪಕಾಲದಲ್ಲಿಯೂ ಕಾಮವದೆ ಎಂದು ಸಿದ್ಧಿಸುತ್ತದೆ. ಆ ಕಾಮವಾದರೂ ಎಚ್ಚತ್ತವಾದ ಮೇಲೆಯೇ ಹುಟ್ಟಿದ್ದಲ್ಲ. ಎಚ್ಚತ್ತವಾದಮೇಲೆ ಪುರುಷನು ಪರವಶನಾಗಿರುತ್ತಾನೆ. ಅಂದರೆ ವಸ್ತುದರ್ಶನವಾದರೆ ಅನುಮಾನಾದಿಗಳಿಂದ ಇಷ್ಟಸಾಧನತಾಜ್ಞಾನವು

ಬಂದರೆ ಕಾಮವು ಹುಟ್ಟುವುದು. ಅವಶನಾದ ಪುರುಷನಿಗೆ ಇಂತಹ ಕಾಮಸಾಮಗ್ರಿಯು ಇದೆ ಎಂದು ಕಲ್ಪಿಸಲಿಕ್ಕೆ ಬರುವುದಿಲ್ಲ. ಆದುದರಿಂದ ಹಿಂದೆ ಇದ್ದ ಕಾಮವೇ ಸುಪ್ತ್ಯಾದ್ಯವಸ್ಥೆಯಲ್ಲಿ ಅವ್ಯಕ್ತವಾಗಿದ್ದದ್ದಾಗಿ ಪುನಃ ಸಹಕಾರಿಬಲದಿಂದ ವ್ಯಕ್ತವಾಗುತ್ತದೆಂದೇ ಒಪ್ಪಬೇಕು.)

ತಾ ॥ 'ಮುಕ್ತ್ಯವಸ್ಥಃ ಜೀವಃ ಸಕಾಮಃ ಚೇತನತ್ವಾತ್ ಸಾಂಸಾರಿಕವತ್' ಸುಪ್ತ್ಯವಸ್ಥೆಯಲ್ಲಿಯೂ ಅವ್ಯಕ್ತವಾದ ಕಾಮವನ್ನು ಅಂಗೀಕರಿಸಿದರಿಂದ ಹೇತುವಿಗೆ ವ್ಯಭಿಚಾರವಿಲ್ಲ ॥ ೧೯ ॥ ೨೦ ॥

**ಸ. ರ. ವಿ.— 'ಸೋಽಶ್ನುತೇ ಸರ್ವಾನ್ ಕಾಮಾನ್ ಸಹ । ಬ್ರಹ್ಮಣಾ ವಿಪಶ್ಚಿತಾ । ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ । ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ ಅಜ್ಞಾತಿಭಿರ್ವಾ । ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್ ಏತತ್ಸಾಮ ಗಾಯನ್ನಾಸ್ತೇ'** ಇದುಮೊದಲಾದ ಶ್ರುತಿಗಳಿಂದಲೂ ಮುಕ್ತನಿಗೆ ಸಕಾಮತ್ವವು ಸಿದ್ಧಿಸುತ್ತದೆ ಎನ್ನುತ್ತಾರೆ—

**ನ್ಯಾಯಸುಧಾ—** ಹಿಂದೆ ಹೇಳಿದ ಅನುಮಾನಕ್ಕೆ ಕಾಮರೂಪಸಾಧ್ಯವಿಲ್ಲದಿರುವುದರಿಂದ ಮುಕ್ತರಲ್ಲಿ ವ್ಯಭಿಚಾರವು. ಎಂದರೆ—

**ಮೂ ॥ ಸರ್ವಕಾಮಾನವಾಪ್ನೋತಿ ಬ್ರಹ್ಮಣಾ ಸಹ ಮುಕ್ತಿಗಃ ।**
**ಪರ್ಯೇತಿ ತತ್ರ ಜಕ್ಷಂಶ್ಚ ಕ್ರೀಡನ್ರತಿಮವಾಪ್ನುಯಾತ್ (ವನ್) ॥ ೨೧ ॥**
**ಕಾಮಾನ್ನೀ ಕಾಮರೂಪೀ ಸನ್ನಿಮಾನ್ ಲೋಕಾಂಶ್ಚ ಸಂಚರನ್ ।**
**ಆಸ್ತೇ ಗಾಯನ್ ಸಾಮ ಮುಕ್ತ ಇತ್ಯಾದಿಶ್ರುತಿಸದ್ಬಲಾತ್ ॥ ೨೨ ॥**
**ಅಕಾಮಃ ಸ್ಯಾತ್ಕಥಂ ಮುಕ್ತಃ ಕಾಮಾ ಯೇಽಸ್ಯ ಹೃದಿ ಶ್ರಿತಾಃ ।**
**ಇತ್ಯಂತಃಕರಣಸ್ಥಾನಾಂ ಕಾಮಾನಾಂ ಮೋಕ್ಷಮೇವ ಹಿ ।**
**ಆಹ ಶ್ರುತಿರ್ಹೃದೀತ್ಯೇವ ನ ಚೇದ್ವ್ಯರ್ಥಂ ವಿಶೇಷಣಂ ॥ ೨೩ ॥**

ಅ ॥ ಮುಕ್ತಿಗಃ = ಮುಕ್ತಿಯಲ್ಲಿರತಕ್ಕವನು, ಬ್ರಹ್ಮಣಾ ಸಹ = ಪರಬ್ರಹ್ಮನಿಂದ ಕೂಡಿಕೊಂಡು, ಸರ್ವಕಾಮಾನ್=ಎಲ್ಲಾ ಅಭೀಷ್ಟಗಳನ್ನು, ಅವಾಪ್ನೋತಿ=ಹೊಂದುತ್ತಾನೆ. (ಇದರಿಂದ **'ಸೋಽಶ್ನುತೇ ಸರ್ವಾನ್'** ಎನ್ನುವ ಶ್ರುತಿಯನ್ನು ತೆಗೆದುಕೊಂಡರು.) ತತ್ರ= ಮುಕ್ತಿಯಲ್ಲಿ, ಜಕ್ಷನ್ = ಭಕ್ಷಿಸುತ್ತಾ, ಕ್ರೀಡನ್ = ಕ್ರೀಡಿಸುತ್ತಾ, ರತಿಂ = ರಮಣನನ್ನು, ಅವಾಪ್ನುವನ್ = ಹೊಂದುವವನಾಗಿ, ಪರ್ಯೇತಿ = ತಿರುಗಾಡುತ್ತಾ ಇರುತ್ತಾನೆ. (ಇದರಿಂದ **'ಸ ತತ್ರ ಪರ್ಯೇತಿ'** ಎನ್ನುವ ಶ್ರುತಿಯು ಉಕ್ತವಾಯಿತು) ಮುಕ್ತಃ=ಮುಕ್ತನು, ಕಾಮಾನ್ನೀ = ಇಚ್ಛಾನುಸಾರವಾದ ಅನ್ನವುಳ್ಳವನಾಗಿ, ಕಾಮರೂಪೀ ಸನ್=ಇಚ್ಛಾನುಸಾರವಾದ ರೂಪವುಳ್ಳವನಾಗಿ, ಇಮಾನ್ ಲೋಕಾಂಶ್ಚ = ಈ ಲೋಕಗಳನ್ನು ಸಂಚಾರಮಾಡುತ್ತಾ, ಸಾಮ=ಸಾಮವೇದವನ್ನು, ಗಾಯನ್=ಗಾನಮಾಡುತ್ತಾ, ಆಸ್ತೆ=ಇರುತ್ತಾನೆ. (ಇದರಿಂದ **'ಇಮಾನ್ ಲೋಕಾನ್'** ಇತ್ಯಾದಿ ಶ್ರುತಿಯು ಉಕ್ತವಾಯಿತು.) ಇತ್ಯಾದಿಶ್ರುತಿಸದ್ಬಲಾತ್= ಇದೇಮೊದಲಾಗಿವುಳ್ಳ ಶ್ರುತಿಗಳ (ಅಂದರೆ **'ಸ ಏಕಧಾ ಭವತಿ'** ಇತ್ಯಾದಿ ಶ್ರುತಿಗಳ)

ಬಲದೆಶೆಯಿಂದ, (ಕಾಮವದೆ ಎಂದು ತಿಳಿದುಬರುವುದರಿಂದ) ಅಕಾಮಃ=ಕಾಮನಾವಿಲ್ಲದವನು, ಮುಕ್ತಃ=ಮುಕ್ತನು, ಕಥಂ=ಹೇಗೆ, ಸ್ಯಾತ್=ಆದಾನು? (ಹಾಗಾದರೆ—ಮುಕ್ತರಿಗೆ ಕಾಮವಿಲ್ಲವೆನ್ನುವ ವಿಷಯದಲ್ಲಿಯೂ 'ಯದಾ ಸರ್ವೇ ಪ್ರಮುಚ್ಯಂತೇ' ಇತ್ಯಾದಿ ಶ್ರುತಿಗಳೂ ಇವೆ. ಆದಕಾರಣ 'ಕಾಮವದೆ' ಎನ್ನುವ ನಿಶ್ಚಯವು ಹೇಗೆ ಎಂದರೆ—) ಯೇ ಕಾಮಾಃ=ಯಾವ ಕಾಮಗಳು, ಅಸ್ಯ=ಜೀವನ, ಹೃದಿ=ಹೃದಯದಲ್ಲಿ, ಶ್ರಿತಾಃ = ಆಶ್ರಿತಗಳಾಗಿವೆಯೋ, ಇತಿ=ಹೀಗೆ, ಶ್ರುತಿಃ=ಶ್ರುತಿಯು, ಅಂತಃಕರಣಸ್ಥಾನಾಂ ಏವ=ಅಂತಃಕರಣದಲ್ಲಿಯೇ ಇರುವ, ಕಾಮಾನಾಂ=ಕಾಮಗಳಿಗೆ, ಮೋಕ್ಷಂ=ಬಿಡುಗಡೆಯನ್ನೇ, ಹಿ=ಯಾವ ಕಾರಣದಿಂದ, ಆಹ=ಪ್ರತಿಪಾದಿಸುತ್ತದೋ, ಈ ಶ್ರುತಿಯು ಅಂತಃಕರಣದಲ್ಲಿರುವ ಪ್ರಾಕೃತ ಕಾಮರಾಹಿತ್ಯವನ್ನು ಹೇಳುತ್ತದೆ. ಅಲ್ಲದೆ ಸರ್ವಥಾ ಕಾಮಾಭಾವವನ್ನು ಹೇಳುವುದಿಲ್ಲ. (ಆದುದರಿಂದ ಅಕಾಮನು ಮುಕ್ತನು ಹೇಗೆ ಆದಾನು?) (ಯದಾ ಸರ್ವೇ=ಶ್ರುತಿಗೆ ಅರ್ಥ ಸಂಕೋಚವನ್ನು ಯಾವುದರಿಂದ ಮಾಡುತ್ತೀರಿ ಎಂದರೆ—) ನ ಚೇತ್=ಈ ಶ್ರುತಿಯನ್ನು ಈ ಪ್ರಕಾರ ವ್ಯಾಖ್ಯಾನಮಾಡದಿದ್ದರೆ, ಸರ್ವಥಾ=ಕಾಮಾಭಾವಪರವೆಂದು ವ್ಯಾಖ್ಯಾನಮಾಡಿದರೆ, ಆಗ, 'ಹೃದಿ ಶ್ರಿತಾಃ' ಎಂದು ಹೃದಿ=ಹೃದಯದಲ್ಲಿ, (ಆಶ್ರಿತಗಳು ಎಂದು) ವಿಶೇಷಣಂ= ಕಾಮಗಳಿಗೆ ವಿಶೇಷಣವು, ವ್ಯರ್ಥಂ=ವ್ಯರ್ಥವೇ ಆಗುವುದು.

ತಾ ॥ ಸ. ರ. ವಿ— (1) 'ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ । ಅಥ ಮರ್ತ್ಯೋಽಮೃತೋ ಭವತಿ' ಎನ್ನುವ ಶ್ರುತಿಯಿಂದ ಅಂತಃಕರಣ ಪರಿಣಾಮಗಳೇ ಆದ ಕಾಮಗಳಿಗೆ ಮುಕ್ತಿಯಲ್ಲಿ ನಿವೃತ್ತಿಯು ಹೇಳಲ್ಪಡುತ್ತದೆ. ಜೀವಸ್ವರೂಪಭೂತಗಳಿಗೆ ಅಲ್ಲ. ಇಲ್ಲದಿದ್ದರೆ 'ಹೃದಿ ಸ್ಥಿತಾಃ' ಎನ್ನುವ ವಿಶೇಷಣವು ವ್ಯರ್ಥವಾಗಬೇಕಾಗುವುದು. (2) ಅಂತಃಕರಣದೆಶೆಯಿಂದ ಬೇರೆಕಡೆ ಕಾಮಗಳ ಅಭಾವವಿಲ್ಲ. ಮುಕ್ತರಿಗೂ ಕೂಡ ಶ್ರುತಿಗಳಲ್ಲಿ ಕಾಮನೆಯು ಶ್ರುತವಾಗಿದೆ. ಆದಕಾರಣ ಮುಕ್ತರಿಗೇನೇ ಅಕಾಮಹತ ಶಬ್ದಾರ್ಥತ್ವವು ಮುಖ್ಯವು. ನಿರ್ನಿಮಿತ್ತವಾಗಿ ಮುಖ್ಯಾರ್ಥವನ್ನು ಬಿಡುವುದು ಮಾಯಾವಾದಿ ವ್ಯತಿರಿಕ್ತವಾದ ವಾದಿಗಳಿಗೆ ಅನುಚಿತವೇ ॥ ೨೧ ॥ ೨೨ ॥ ೨೩ ॥

ಇದು ವಿಶೇಷಣವು ಆಗಿದ್ದರೆ ಹೀಗಾಗುತ್ತಿತ್ತು. ವಿಶೇಷಣವಲ್ಲ. 'ಏತತ್ಸರ್ವಂ ಮನ ಏವ' ಎನ್ನುವ ಶ್ರುತಿಯಿಂದ ಎಲ್ಲಾ ಕಾಮಗಳ ಮನಃಪರಿಣಾಮಗಳೇ. ಆತ್ಮಧರ್ಮವಾದ ಕಾಮವಿಲ್ಲ. ಆದುದರಿಂದ 'ಹೃದಿ ಶ್ರಿತಾಃ' ಎನ್ನುವುದು ಸ್ವರೂಪಕಥನಮಾತ್ರವು, ಎಂದಾ ಶಂಕಿಸಿಕೊಂಡು ನಿಷೇಧಿಸುತ್ತಾರೆ—

ಮೂ ॥ ಹೃದ್ಯೇವ ತೇಷಾಂ ಶ್ರಯಣಮಿತಿ ಪಕ್ಷೋ ನ ಭಾಸತೇ ॥ ೨೪ ॥
ಮುಕ್ತಾನಾಂ ಕಾಮಿತಾಮಾಹ ಪೃಥಕ್ ಶಾಖಾಸು ಯಚ್ಛ್ರುತಿಃ ।
ಅತೋಽಕಾಮಹತತ್ವಂ ತು ಮುಕ್ತಾನಾಮೇವ ಮುಖ್ಯತಃ ॥
ಮುಖ್ಯಾರ್ಥಸ್ಯ ವೃಥಾ ತ್ಯಾಗೋ ಮಾಯಿನಾಮೇವ ಭೂಷಣಂ ॥ ೨೫ ॥

ಅ ॥ ಹೃದ್ಯೇವ = ಅಂತಃಕರಣದಲ್ಲಿಯೇ, ತೇಷಾಂ = ಕಾಮಗಳಿಗೆ, ಶ್ರಯಣಂ = ಆಶ್ರಯಣವು, ಇತಿ = ಈ ಪ್ರಕಾರ, ಪಕ್ಷಃ = ಪಕ್ಷವು, ನ ಭಾಸತೇ = ಪ್ರಕಾಶಿಸುವುದಿಲ್ಲ. (ಏಕೆ ಪ್ರಕಾಶಿಸುವುದಿಲ್ಲವೆಂದರೆ—) ಯತ್=ಯಾವ ಕಾರಣದೆಶೆಯಿಂದ, ಶ್ರುತಿಃ=ಶ್ರುತಿಯು,

ಪ್ರಥಕ್=ಪ್ರತ್ಯೇಕವಾಗಿ, ಶಾಖಾಸು=ಶಾಖೆಗಳಲ್ಲಿ, ಮುಕ್ತಾನಾಂ=ಅಂತಃಕರಣರಹಿತರಾದ ಮುಕ್ತರಿಗೆ, ಕಾಮಿತಾಂ = ಕಾಮುವನ್ನು, ಆಹ = ಹೇಳುತ್ತದೋ, (ಆದಕಾರಣ ಶೋಭಿಸುವುದಿಲ್ಲ.) ('ಕಾಮಸ್ಯ ಯತ್ರ' ಇತ್ಯಾದಿಗಳಿಂದ ಹೇಳಲ್ಪಟ್ಟ ಅರ್ಥವನ್ನುಪಸಂಹಾರ ಮಾಡುತ್ತಾರೆ.) ಅತಃ=ಆದುದರಿಂದ, (ಅಂದರೆ ಕಾಮನಿಮಿತ್ತವಾದ ಉಪದ್ರವಾಭಾವರೂಪವಾದ ಅಕಾಮಹತತ್ವವು, ಅಕಾಮತ್ವ-ಆಪ್ತಕಾಮತ್ವಗಳಿಂದಲೇ ಕೂಡುವುದರಿಂದ ಅಕಾಮತ್ವವು ಚೇತನಮಾತ್ರದಲ್ಲಿ ಕೂಡದಿರುವುದರಿಂದ, ಆಪ್ತಕಾಮತ್ವವು ಮುಕ್ತಲಕ್ಷಣವಾಗಿರುವುದರಿಂದ, ಮುಕ್ತರಲ್ಲಿಯೇ ಕೂಡುವುದರಿಂದ, ಅಮುಕ್ತರಲ್ಲಿ ಕೂಡದಿರುವುದರಿಂದ, ಮುಖ್ಯತಃ=ಮುಖ್ಯವಾಗಿ, ಅಕಾಮಹತತ್ವಂ ತು=ಅಕಾಮಹತತ್ವವಾದರೂ, ಮುಕ್ತಾನಾಮೇವ=ಮುಕ್ತರಿಗೇನೇ, (ಧರ್ಮವೆಂದು ಸಿದ್ಧವಾಯಿತು.) (ಮುಖ್ಯವೃತ್ತಿಯಿಂದ ಅಕಾಮಹತತ್ವವು ಮುಕ್ತರಲ್ಲಿಯೇ ಕೂಡುತ್ತದೆ. ಆದಾಗ್ಯೂ ಕಾಮನಿಮಿತ್ತವಾದ ಬಹುತರ ಉಪದ್ರವವು ಇಲ್ಲದಿರುವುದರಿಂದ ಬ್ರಹ್ಮಾದಿಗಳಲ್ಲಿಯೂ ಅಮುಖ್ಯವಾದ ಅಕಾಮಹತತ್ವವು ಯುಕ್ತವೇ ಆಗುತ್ತದೆ. ಆದುದರಿಂದ ಸಂಸಾರಿಗಳೇ ಶ್ರುತಿಪಾದ್ಯರು ಏಕೆ ಆಗಲಾರರು? ಎಂದರೆ— ೧ ಮುಖ್ಯಾರ್ಥವನ್ನು ಸ್ವೀಕರಿಸಿದರೆ ಬಾಧಕವಿದ್ದ ಪ್ರಯುಕ್ತ ಬಿಡುವುದೋ, ೨ ವ್ಯರ್ಥವಾಗಿಯೇ ಬಿಡುವುದೋ, ೧ನೇದ್ದು ಕೂಡಲಾರದು. ಮುಖ್ಯಾರ್ಥವನ್ನು ಸ್ವೀಕರಿಸಿದರೆ ಬಾಧಕವಿಲ್ಲ.) (೨ನೇದ್ದನ್ನು ದೂಷಿಸುತ್ತಾರೆ.) ಮುಖ್ಯಾರ್ಥಸ್ಯ = ಮುಖ್ಯವಾದ ಅರ್ಥಕ್ಕೆ, ವೃಥಾ = ವ್ಯರ್ಥವಾಗಿ, ತ್ಯಾಗಃ = ಬಿಡುವಿಕೆಯು, ಮಾಯಿನಾಮೇವ=ಮಾಯಿಗಳಿಗೇನೇ, ಭೂಷಣಂ=ಭೂಷಣವು. (ಅಂದರೆ— ಅಪರೋಕ್ಷಕರೇ ಆದ ಮಾಯಾವಾದಿ ಮೊದಲಾದವರು ಬಾಧಕವಿಲ್ಲದೇನೇ ಮುಖ್ಯಾರ್ಥವನ್ನು ಬಿಡುತ್ತಾರೆ. ವಾಚ್ಯಾರ್ಥನಾದ ಶ್ರೀ ಹರಿಯನ್ನು ಬಿಟ್ಟು, ನಿರ್ಗುಣ ಬ್ರಹ್ಮನಲ್ಲಿ ಲಕ್ಷಣಾವನ್ನಂಗೀಕರಿಸಿರುವರು. ನ್ಯಾಯಾಭಿಜ್ಞರು ವ್ಯರ್ಥವಾಗಿ ಮುಖ್ಯಾರ್ಥವನ್ನು ಬಿಡಲಾರರು. ॥ ೨೪ ॥ ೨೫ ॥

ಹೀಗೆ ಅಕಾಮಹತತ್ವವು ಅಮುಕ್ತರಲ್ಲಿ ಕೂಡುವುದಿಲ್ಲವೆಂದುಹೇಳಿ ಅವೃಜಿನತ್ವವೂ ಕೂಡುವುದಿಲ್ಲವೆಂದು ಹೇಳುತ್ತಾ ಅವೃಜಿನತ್ವವನ್ನು ವ್ಯಾಖ್ಯಾನಮಾಡುತ್ತಾರೆ—

ಮೂ ॥ ಅಪಾಪತ್ವಮದುಃಖತ್ವಂ ವಾ ವೃಜಿನತ್ವಮಿಹೋದಿತಂ ॥ ೨೬ ॥
ಅಪ್ರಿಯಂ ವೃಜಿನಂ ದುಃಖಮಘಂ ತೋದ ಇತೀರ್ಯತೇ ।
ತತ್ಕಾರಣತ್ವಾತ್ಪಾಪಂ ವಾ ವೃಜಿನಂ ನಾಮ ಕಥ್ಯತೇ ॥ ೨೭ ॥
ಇತ್ಯುಕ್ತೇಃ ಸ್ವಯಮೀಶೇನ ನಾಮಾರ್ಥಃ ಶಬ್ದನಿರ್ಣಯೇ ।
ಅಪಾಪತ್ವಂ ಚ ನೈವಾಸ್ತಿ ಯಾವತ್ಸಂಸಾರಮಸ್ಯ ಹಿ ॥ ೨೮ ॥

ಅ ॥ ಇಹ=ಇಲ್ಲಿ, ಉದಿತಂ = ಹೇಳಲ್ಪಟ್ಟ, ಅವೃಜಿನತ್ವಂ = ಅವೃಜಿನತ್ವವಾದರೂ, ಅಪಾಪತ್ವಂ = ಪಾಪರಾಹಿತ್ಯವೂ, ಅದುಃಖತ್ವಂ ವಾ = ದುಃಖಾಭಾವವಾಗಲೀ ಆಗುವುದು, ದುಃಖಂ=ದುಃಖವು, ಅಪ್ರಿಯಂ-ವೃಜಿನಂ-ಅಘಂ ತೋದಃ. ಇತಿ=ಇತ್ಯಾದಿಗಳಿಂದ ಈರ್ಯತೇ= ಹೇಳಲ್ಪಡುತ್ತದೆ. ತತ್ಕಾರಣತ್ವಾತ್ = ದುಃಖಕಾರಣತ್ವವಿದ್ದುದರಿಂದ, ಪಾಪಂ ವಾ = ಪಾಪವಾಗಲೀ, ವೃಜಿನಂ ನಾಮ=ವೃಜಿನವೆಂದು, ಕಥ್ಯತೇ=ಹೇಳಲ್ಪಡುತ್ತದೆ. ಇತಿ=ಈಪ್ರಕಾರ, ಶಬ್ದನಿರ್ಣಯೇ=ಶಬ್ದನಿರ್ಣಯದಲ್ಲಿ, ಈಶೇನ = ಶ್ರೀ ಹರಿಯಿಂದ, ಸ್ವಯಂ=ತಾನಾಗಿಯೇ,

ನಾಮಾರ್ಥಃ=ವೃಜಿನಶಬ್ದಾರ್ಥವು, ಉಕ್ತಃ=ಹೇಳಲ್ಪಟ್ಟದೆ. (ವೃಜಿನಶಬ್ದಕ್ಕೆ ದುಃಖಾದ್ಯರ್ಥತ್ವವಿದ್ದರೆ ಅವೃಜಿನಶಬ್ದಕ್ಕೆ ಅದುಃಖಾದ್ಯರ್ಥತ್ವವು ಸಿದ್ಧವೇ.) (ಅಪಾಪತ್ವಾದಿಗಳು ಅವೃಜಿನ ಶಬ್ದಾರ್ಥವಾದರೆ ಅದರಿಂದ ಪ್ರಕೃತವೇನಾಯಿತೆಂದರೆ) ಅಸ್ಯ=ಇವನಿಗೆ, ಯಾವತ್ಸಂಸಾರಂ= ಸಂಸಾರವಿರುವತನಕ, ಅಪಾಪತ್ವಂ ಚ=ಪಾಪರಾಹಿತ್ಯವೂಕೂಡ, ನೈವಾಸ್ತಿ=ಇರುವುದೇ ಇಲ್ಲ.

ತಾ || ಸ. ರ. ವಿ— (1) ವೃಜಿನವಿಲ್ಲದಿರುವುದರಿಂದ ಅವೃಜಿನ ಶಬ್ದಾರ್ಥವು ಮುಕ್ತನೇ ಆಗಲು ಯೋಗ್ಯನಾಗಿರುತ್ತಾನೆ. ವೃಜಿನಶಬ್ದವು ದುಃಖಪಾಪಗಳಿಗೆ ವಾಚಕವಾಗಿ **'ಅಪ್ರಿಯಂ ವೃಜಿನಂ ದುಃಖಂ'** ಇತ್ಯಾದಿ ಶಬ್ದನಿರ್ಣಯದಲ್ಲಿ ಪಠಿತವಾಗಿದೆ. ಸಂಸಾರಿಗೆ ಮುಕ್ತಿಪರ್ಯಂತ ಪಾಪವೂ ದುಃಖವೂ ಇದ್ದೇ ಇದೆ. ಆದಕಾರಣ ಅವೃಜಿನಶಬ್ದವಾಚ್ಯತ್ವವು ಕೂಡುವುದಿಲ್ಲ || ೨೬ || ೨೭ || ೨೮ ||

**'ತದ್ಯಥೈಷೀಕಾತೂಲಮಗ್ನೌ ಪ್ರೋತಂ ಪ್ರದೂಯತೇ ಏವಂ ಹೈವಾಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ'** ಇತ್ಯಾದಿ ಶ್ರುತಿಗಳಲ್ಲಿ ಜ್ಞಾನಿಗಳಿಗೂ ಕೂಡ ಪಾಪವಿಲ್ಲವೆಂದು ಪ್ರತಿಪಾದಿಸುವುದರಿಂದ ಪಾಪಾಭಾವವೂ, ಮುಕ್ತಲಕ್ಷಣವೂ ಹೇಗೆ ಕೂಡುತ್ತದೆಂದರೆ—

**ಮೂ || ಆರಬ್ಧಪಾಪಮಸ್ತ್ಯೇವ ದುಃಖಂ ಚ ಜ್ಞಾನಿನೋಽಪಿ ಹಿ |**
**ತಸ್ಮಾತ್ತಸ್ಮಾದಕಾಮತ್ವಮಿತಿ ಚಾಶ್ರುತಕಲ್ಪನಾ || ೨೯ ||**

ಅ || ಜ್ಞಾನಿನೋಽಪಿ=ಜ್ಞಾನಿಗೂ ಕೂಡ, ಆರಬ್ಧಪಾಪಂ=ಪ್ರಾರಬ್ಧವಾದ ಪಾಪವೂ, ದುಃಖಂ ಚ=(ಪಾಪವಿದ್ದಪ್ರಯುಕ್ತ) ದುಃಖವೂ ಕೂಡ, ಅಸ್ತ್ಯೇವ=ಇದ್ದೇ ಇದೆ. ಹಿ= ಪ್ರಸಿದ್ಧವು, (ಆದುದರಿಂದ ಅವೃಜಿನತ್ವವೂ ಕೂಡ ಮುಕ್ತರದೆಶೆಯಿಂದ ಬೇರೆಕಡೆ ಕೂಡಲಾರದು ಎಂದು ಸಿದ್ಧವಾಯಿತು.) ಜ್ಞಾನಿಗೆ ಪಾಪವಿಲ್ಲವೆಂದು ಹೇಳತಕ್ಕ ಶ್ರುತಿಯು ಅಪ್ರಾರಬ್ಧ ಪಾಪವಿಲ್ಲವೆಂದು ಪ್ರತಿಪಾದಿಸುತ್ತದೆ. ಸರ್ವಥಾ ಪಾಪಾಭಾವವನ್ನು ಹೇಳುವುದಿಲ್ಲ.) (ಕೆಲವರು ಈ ಶ್ರುತಿಯನ್ನು ಬೇರೆಪ್ರಕಾರ ವ್ಯಾಖ್ಯಾನಮಾಡುತ್ತಾರೆ **'ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ'** ಎನ್ನುವುದೂ **'ಶ್ರೋತ್ರಿಯಸ್ಯ ಚಾಕಾಮಹತಸ್ಯ'** ಎನ್ನುವುದೂ ಕೂಡ ಮುಕ್ತರಿಗೆ ಸಂಗ್ರಾಹಕವಲ್ಲ. ಮತ್ತೆ ಪ್ರಕೃತರಾದ ಮನುಷ್ಯ ಗಂಧರ್ವಾದಿಗಳನ್ನೇ ಹೇಳತಕ್ಕದ್ದು. ಅವರಲ್ಲಿ ಅವೃಜಿನತ್ವಾದಿಗಳು ಹೇಗೆಂದರೆ— ಮನುಷ್ಯ-ಗಂಧರ್ವಾದಿಗಳು ಸರ್ವಜ್ಞಕಲ್ಪರಾದುದರಿಂದ ಅವರಿಗೆ ಪ್ರಾರಬ್ಧವಾದ ಪಾಪವು ಇದ್ದರೂ ಅವರು ಆಗ ಪಾಪವನ್ನು ಮಾಡದಿರುವುದರಿಂದ ಅವೃಜಿನರು ಎಂದು ಹೇಳಲ್ಪಡುತ್ತಾರೆ. ವಿಷಯವೈರಾಗ್ಯಗಳಿಂದ ಕೂಡಿರುವಪ್ರಯುಕ್ತ ಅಕಾಮಹತರೂ ಆಗಿರುತ್ತಾರೆ. ವ್ಯಾವರ್ತ್ಯವಿಲ್ಲದಿರುವುದರಿಂದ ವೈಯರ್ಥ್ಯವೆಂದು ಹೇಳಕೂಡದು. ನಾವು ಶ್ರೋತ್ರಿಯತ್ವಾದಿಗಳನ್ನು ವಿಶೇಷಣವೆಂದು ಹೇಳುವುದಿಲ್ಲ. ಮತ್ತೆ ಮನುಷ್ಯರಿಂದ ಮನುಷ್ಯ-ಗಂಧರ್ವರಿಗೆ ನೂರುಪಾಲು ಆನಂದವನ್ನು ಹೇಳೋಣ, ಅಲ್ಲಿ ಹೇತ್ವಾಕಾಂಕ್ಷೆಯು ಬರಲು **'ಯಶ್ಚ ಶ್ರೋತ್ರಿಯಃ'** ಎನ್ನುವ ವಾಕ್ಯವು ಹೇಳಲ್ಪಡುತ್ತದೆ. ಹೀಗೆಯೇ ಮನುಷ್ಯ ಗಂಧರ್ವರಿಂದ ದೇವ-ಗಂಧರ್ವರಿಗೆ ನೂರುಗುಣ ಆನಂದವನ್ನು ಹೇಳಲಿಕ್ಕೆ ಶ್ರೋತ್ರಿಯತ್ವಾದಿಗಳು ಹೇತುವೆಂದು ಹೇಳಲ್ಪಡುತ್ತದೆ. (2) ಸರ್ವರಲ್ಲಿ ಇರತಕ್ಕ ಶ್ರೋತ್ರಿಯತ್ವಾದಿಗಳು ಆನಂದಾತಿಶಯದಲ್ಲಿ ಹೇಗೆ ಹೇತುವೆಂದು ಹೇಳಕೂಡದು? ಮನುಷ್ಯರಿಂದಲೂ ಅತಿಶಯವಾಗಿ ಮನುಷ್ಯ ಗಂಧರ್ವರೂ ಶ್ರೋತ್ರಿಯರೂ ಅವೃಜಿನರೂ ಅಕಾಮಹತರೂ ಆಗಿರುತ್ತಾರೆ ಹೀಗೆ ಮನುಷ್ಯ ಗಂಧರ್ವರಿಂದ ದೇವ-ಗಂಧರ್ವರಿಗೆ ಹೀಗೆ ಪೂರ್ವ ಪೂರ್ವ ನಿರ್ದಿಷ್ಟರಿಂದಲೂ ಅತಿಶಯವಾಗಿ

ಉತ್ತರೋತ್ತರ ನಿರ್ದಿಷ್ಟರಾದವರು ಶ್ರೋತ್ರಿಯತ್ವಾದಿ ಗುಣಗಳುಳ್ಳವರು; ಹೀಗೆ ವ್ಯಾಖ್ಯಾನ ಮಾಡುತ್ತಾರೆ. ಅದನ್ನು ನಿರಾಕರಿಸುತ್ತಾರೆ—) ತಸ್ಮಾತ್ ತಸ್ಮಾತ್=ಮೊದಲು ಮೊದಲು ನಿರ್ದಿಷ್ಟರಾದವರಿಂದ ಅತಿಶಯವಾಗಿ ಉತ್ತರೋತ್ತರರಿಗೆ, ಅಕಾಮತ್ವಂ=ಕಾಮನಾವಿಲ್ಲದಿರು ವಿಕೆಯೂ ಶ್ರೋತ್ರಿಯತ್ವಾದಿಗಳೂ ಕೂಡ ಇವೆ. ಇತಿಚ=ಹೀಗೆ ವ್ಯಾಖ್ಯಾನ ಮಾಡಿದರೆ, ಅಶ್ರುತಕಲ್ಪನಾ=ಅಶ್ರುತಕಲ್ಪನಾ ದೋಷವು ಬರುವುದು.

**ತಾ ॥ ಸ. ರ. ವಿ.**— (1) ಮನುಷ್ಯಾಧಿಪತಿಗಳ ಪದದಲ್ಲಿ ಯಾವನು ಇಚ್ಛೆಯಿಲ್ಲ ದಿರುವವನೋ, ಪಿತ್ರಾದಿ ಪದಗಳಲ್ಲಿ ಕಾಮವುಳ್ಳವನೋ ಅವನೂ ಕೂಡ ಮನುಷ್ಯಾಧಿಪನಿಗೆ ಸಮಾನವಾದ ಆನಂದವುಳ್ಳವನು. ಯಾರು ಪಿತೃಪದದಲ್ಲಿ ಇಚ್ಛೆಯಿಲ್ಲದಿರುವವರೋ, ವಿಶಿಷ್ಟ ಗಂಧರ್ವಾದಿ ಪದದಲ್ಲಿ ಇಚ್ಛೆಯುಳ್ಳವರೋ, ಅವರು ಅವರಕ್ಕಿಂತ ನೂರು ಆನಂದ ಜಾಸ್ತಿಯುಳ್ಳ ವರು. ಈ ಪ್ರಕಾರ ಬ್ರಹ್ಮಪರ್ಯಂತವಾಗಿ ಕಾಮನಿವೃತ್ತಿ ತಾರತಮ್ಯದಿಂದ ಆನಂದ ತಾರ ತಮ್ಯವು ಸರ್ವಮುಕ್ತರಲ್ಲಿಯೇ. ಕಾಮವಿಲ್ಲದಿರುವವರಲ್ಲಿ '**ಯಶ್ಚ ಶ್ರೋತಿಯೋಽವೃಜಿನಃ ಅಕಾಮಹತಃ**' ಎನ್ನುವ ತನಕ ಹೇಳಲ್ಪಡುತ್ತದೆಂದು ಕಲ್ಪಿಸಿದರೆ ಅಶ್ರುತಕಲ್ಪನೆಯು. ಹೇಗೆಂದರೆ— ಪಿತೃಪದದಲ್ಲಿ ಕಾಮರಹಿತನು, ಗಂಧರ್ವಾದಿ ಪದದಲ್ಲಿ ಕಾಮವಿದ್ದವನು ಎಂದು ವಿಶೇಷ ಶ್ರವಣವಿಲ್ಲ. ಮತ್ತು ಹತಶಬ್ದವೂ ವ್ಯರ್ಥವಾಗುವುದು. 'ಅಕಾಮಃ' ಎಂದಷ್ಟರಿಂದಲೇ ಪೂರ್ಣವಾಗುವುದು. ಹೀಗೆ ಆನಂದತಾರತಮ್ಯವನ್ನು ಕಲ್ಪಿಸಿದರೆ ಅನುಭವ ವಿರೋಧವೂ ಬರುವುದು. ಹೇಗೆಂದರೆ— ಕರ್ಮದೇವ ಪದದಲ್ಲಿ ಕಾಮವಿಲ್ಲದಿರುವ ಪುರುಷನದೆಶೆಯಿಂದ ಆಜಾನ ದೇವಶಬ್ದವಾಚ್ಯರಾದ ಇಂದ್ರಾದಿಗಳ ಪದಗಳಲ್ಲಿ ಕಾಮವಿಲ್ಲದಿದ್ದವನಿಗೆ ಶತೋತ್ತರಾ ನಂದವೆಂದರೆ, ಇಂದ್ರಾದಿಗಳ ಆನಂದಕ್ಕೆ ಸದೃಶವಾದುದು ಆನಂದವು ಮನುಷ್ಯನಿಗೆ ಕೂಡಲಾ ರದು. ಅತ್ಯಂತವಾಗಿ ಅಸಂಭವಿಯಾಗಿದೆ. ಮತ್ತು ಕಾಮಗಳ ನಿವೃತ್ತಿಯಿಂದಲೇ ಇಂದ್ರಾದಿ ಪದಗಳ ಸುಖವು ಸಿಗುವಾಗ ಶತಕ್ರತು (೧೦೦ಯಾಗ) ಮೊದಲಾದ ಗುರುತರ ಸಾಧನಗಳನ್ನು ಅನುಷ್ಠಾನಮಾಡುವುದು ವ್ಯರ್ಥವಾಗಬೇಕಾಗುವುದು ॥ ೨೯ ॥

ದೋಷಾಂತರವನ್ನು ಹೇಳುತ್ತಾರೆ—

**ಮೂ ॥ ಅಕಾಮಹತ ಇತ್ಯುಕ್ತೇಃ ಶ್ರುತಹಾನಿರಪಿ ಸ್ಫುಟಾ ।**
**ಕುತ್ರಚಿತ್ಕಾಮಿನಃ ಪುಂಸಃ ಕಾಮಾಭಾವಾತ್ಕ್ವಚಿತ್ಕ್ವಚಿತ್ ॥ ೩೦ ॥**
**ಇಂದ್ರಾದಿಸುಖಭೋಗೋಽಸ್ತೀತ್ಯನುಭೂತಿರ್ಹಿ ಕುಪ್ಯತಿ ।**
**ತಸ್ಮಾದಮುಕ್ತಸುಖಗಂ ತಾರತಮ್ಯಂ ಪೃಥಕ್ ಪೃಥಕ್ ॥ ೩೧ ॥**
**ಉಕ್ತ್ವಾ ಯಶ್ಚೇತಿ ಮುಕ್ತಾನಾಂ ತಾರತಮ್ಯಂ ಸುಖೇ ಶ್ರುತಿಃ ।**
**ಆಹೇತಿ ಪೇಶಲಂ ತಚ್ಚ ಚಶಬ್ದಾದೇವ ಗಮ್ಯತೇ ॥ ೩೨ ॥**

ಅ ॥ ಅಕಾಮಹತ ಇತ್ಯುಕ್ತೇಃ = ಶ್ರುತಿಯಲ್ಲಿದ್ದ 'ಅಕಾಮಹತಃ' ಎನ್ನುವ ಉಕ್ತಿಗೆ (ಪರರಿಂದ ಅಕಾಮಃ ಎಂದು ವ್ಯಾಖ್ಯಾತತ್ವವಿದ್ದಪ್ರಯುಕ್ತ) (ಅಂದರೆ—'ಅಕಾಮಹತಃ' ಎನ್ನುವ ಉಕ್ತಿಯನ್ನು 'ಅಕಾಮಃ' ಎಂದು ಪರರು ವ್ಯಾಖ್ಯಾನಮಾಡಿದುದರಿಂದ) ಶ್ರುತಹಾನಿರಪಿ=ಶ್ರುತ ವಾದ ಹತಶಬ್ದಕ್ಕೆ ಹಾನಿಯೂ ಕೂಡ, ಸ್ಫುಟಾ=ಸ್ಪಷ್ಟವಾಗಿ ಪ್ರತೀತವಾಗುತ್ತದೆ. (ಹತಶಬ್ದಕ್ಕೆ ಯಾವ ಪ್ರಯೋಜನವೂ ಇಲ್ಲ. ಆದಕಾರಣ ಶ್ರುತವಾದುದಕ್ಕೆ ಬಿಡುವಿಕೆಯೂ, ಅಶ್ರುತ ವಾದುದಕ್ಕೆ ಉಪಾದಾನವೂ ಬರಬೇಕಾಗುವುದರಿಂದ ಈವ್ಯಾಖ್ಯಾನವು ಅಯುಕ್ತವು.)

(ಅಧಿಕವಾದ ದೋಷವನ್ನು ಹೇಳುತ್ತಾರೆ.) ಕುತ್ರಚಿತ್=ಇಂದ್ರಾದಿಪದಗಳಿಂದ ವ್ಯತಿರಿಕ್ತವಾದ ಯಾವುದಾದರೊಂದರಲ್ಲಿ, ಕಾಮಿನಃ=ಇಚ್ಛೆಯುಳ್ಳ, ಪುಂಸಃ=ಪುರುಷನಿಗೆ, ಕ್ವಚಿತ್ ಕ್ವಚಿತ್=ಯಾವುದಾದರೊಂದು ಇಂದ್ರಾದಿ ಪದದಲ್ಲಿ, ಕಾಮಾಭಾವಾತ್ = ಇಚ್ಛೆಯಿಲ್ಲದಿರುವುದರಿಂದ, ಇಂದ್ರಾದಿಸುಖಭೋಗಃ = ಇಂದ್ರಾದಿಗಳಿಗೆ ಸಮಾನವಾದ ಸುಖಾನುಭವವು, ಅಸ್ತಿ = ಇದೆ. ಇತಿ=ಹೀಗೆ ವ್ಯಾಖ್ಯಾನಮಾಡಿದರೆ, ಅನುಭೂತಿಃ=ಅನುಭವವು, ಕುಪ್ಯತಿ=ವಿರುದ್ಧವಾಗುತ್ತದೆ. ಹಿ=ಪ್ರಸಿದ್ಧವು. (ಅಂದರೆ ಅನುಭವವಿರೋಧವು.) (ರಾಜ್ಯವನ್ನು ಇಚ್ಛಿಸದೆ ಇದ್ದವನಿಗೆ ರಾಜಸಮಾನ ಸುಖಾನುಭವವು ಅನುಭವಬಾಧಿತವಾಗಿದೆ ಎನ್ನುವುದು ಸ್ಪಷ್ಟವಾಗಿದೆ.) (ಹಾಗಾದರೆ ಶ್ರುತ್ಯರ್ಥವು ಯಾವುದೆಂದರೆ) ತಸ್ಮಾತ್=ಅರ್ಥಾಂತರಪ್ರತೀತಿಯು ನಿರಸ್ತವಾಗಿರುವುದರಿಂದ, ಅಮುಕ್ತಸುಖಗಂ = ಅಮುಕ್ತರಾದ ಮನುಷ್ಯಾದಿಗಳ ಸುಖಸಂಬಂಧಿಯಾದ, ತಾರತಮ್ಯಂ = ತಾರತಮ್ಯವನ್ನು ('ತೇ ಯೇ ಶತಂ' ಇತ್ಯಾದಿ ವಾಕ್ಯಗಳಿಂದ) ಪೃಥಕ್ ಪೃಥಕ್=ಬೇರೆಬೇರೆಯಾಗಿ, ಉಕ್ತ್ವಾ = ಹೇಳಿ, ಯಶ್ಚೇತಿ = 'ಶ್ರೋತ್ರಿಯಸ್ಯ ಚ' ಎನ್ನುವ ವಾಕ್ಯದಿಂದ, ಮುಕ್ತಾನಾಂ=ಮುಕ್ತರಾದ ಮನುಷ್ಯಗಂಧರ್ವಾದಿಗಳಿಗೆ, ಸುಖೇ=ಸುಖದಲ್ಲಿ, ತಾರತಮ್ಯಂ=ತಾರತಮ್ಯವನ್ನು, ಶ್ರುತಿಃ=ಶ್ರುತಿಯು, ಆಹ = ಅತಿದೇಶದಿಂದ ಹೇಳುತ್ತದೆ. ಇತಿ=ಹೀಗೆ ವ್ಯಾಖ್ಯಾನವೇ, ಪೇಶಲಂ=ನಿರ್ದೋಷವಾದುದು. (ಹೀಗಾದರೆ, ವಾಕ್ಯಭೇದ ರೂಪವಾದ ದೋಷವು ಬರಬೇಕಾಗುವುದು ಎಂದರೆ, ಹೀಗೆ ಹೇಳಕೂಡದು. ಜ್ಞಾಪಕವದೆ ಎನ್ನುತ್ತಾರೆ.) ತಚ್ಚ=ಯಶ್ಚ ಎನ್ನುವ ವಾಕ್ಯಕ್ಕೆ ಪ್ರಕೃತವಾದ ಅರ್ಥದೆಶೆಯಿಂದ ಬೇರೆ ವಿಷಯವಿದೆ ಎನ್ನುವುದು, ಚ ಶಬ್ದಾದೇವ=ಚ ಶಬ್ದದಿಂದಲೇ, ಗಮ್ಯತೇ=ತಿಳಿಯಲ್ಪಡುತ್ತದೆ ॥ ೩೦ ॥ ॥ ೩೧ ॥ ೩೨ ॥

ಮನುಷ್ಯರನ್ನು ಆರಂಭಿಸಿ ಹಿರಣ್ಯಗರ್ಭಪರ್ಯಂತ ಅಮುಕ್ತರಿಗೂ, ಮುಕ್ತರಿಗೂ ಮೇಲೆ ಮೇಲೆ ನೂರು ಗುಣ ಆನಂದ ಜಾಸ್ತಿಯಿದೆ ಎಂದು ಎರಡು ಶ್ರುತಿಗಳು ಹೇಳುತ್ತವೆ ಎನ್ನುವುದು ಅಯುಕ್ತವು. ಮನುಷ್ಯರ ಆನಂದವನ್ನು ನಿರ್ದೇಶಮಾಡಿ ಮುಕ್ತಜ್ಞಾಪಕವು ಇಲ್ಲ. ಅಲ್ಲಿ ಅಕಾಮಹತತ್ವಾದಿಗಳಾಗಲೀ, ಬೇರೆ ಯಾವುದಾಗಲೀ ಶ್ರುತವಾಗಲಿಲ್ಲ ಎನ್ನುವ ಆಶಂಕೆಯನ್ನು ನಿರಾಕರಿಸುತ್ತಾ ಶ್ರುತ್ಯರ್ಥವನ್ನು 'ರಾದ್ಧಃ' ಇತ್ಯಾದಿಗಳನ್ನು ಆರಂಭಿಸಿ, 'ಅಭಿವೀಕ್ಷಿತಃ' ಎನ್ನುವ ತನಕ ವಿವರಿಸುತ್ತಾರೆ. ಅದರಲ್ಲಿ ಬೃಹದಾರಣ್ಯಕದಲ್ಲಿ ಮನುಷ್ಯಮುಕ್ತನ ಜ್ಞಾಪಕವನ್ನು ತೋರಿಸುತಾರೆ—

**ಮೂ ॥ ರಾದ್ಧಃ ಸಂಸಿದ್ಧ ಇತ್ಯೇವ ಮುಕ್ತ ಏವಾವಗಮ್ಯತೇ ।**
**ಸಾಧುನಾ ವಿಷ್ಣುನಾ ಯುಕ್ತೋ ಮುಕ್ತಃ ಸಾಧುಯುವಾ ಮತಃ ॥ ೩೩ ॥**
**ಯೌವನಂ ನಿತ್ಯಮೇತಸ್ಯ ಮುಕ್ತಸ್ಯೇತಿ ಯುವಾ ಸ ಚ ।**
**ಫಲಮಧ್ಯಯನಸ್ಯಾಪ್ತಂ ತೇನಾಧ್ಯಾಯಕ ಈರಿತಃ ॥ ೩೪ ॥**
**ನಿಹ್ರಾಸಾನಂದಸಂಪ್ರಾಪ್ತ್ಯಾ ಚಾಶಿಷ್ಟ ಇತಿ ಗೀಯತೇ ।**
**ಸ್ಥಿತಸ್ಯಾನನ್ಯಥಾ ಪ್ರಾಪ್ತೇರ್ದ್ರಢಿಷ್ಠ ಇತಿ ಚೋದಿತಃ ॥ ೩೫ ॥**
**ಬಲಿಷ್ಠಶ್ಚ ಸ್ವಭಾವೇನ ಮುಕ್ತೋ ಭವತಿ ಕೇವಲಂ ।**
**ತಸ್ಯೇಯಂ ಪೃಥಿವೀತ್ಯಾದಿ ಪೂರ್ವಭಾವವ್ಯಪೇಕ್ಷಯಾ ॥ ೩೬ ॥**

**ಸ ಏಕಸಂಸಾರಗತ ಮುಕ್ತ್ವಾ ಸುಖಂ ಪುನಃ ।**
**ಶ್ರೋತ್ರಿಯಸ್ಯೇತಿ ವದತಿ ಮುಕ್ತಾಚ್ಛತಗುಣಾತ್ಮತಾಂ ॥ ೩೭ ॥**
**ಸಂಸಾರಗಾಚ್ಚ ಸಂಸಾರಗತಸ್ಯೈವ ಶತಾಧಿಕಂ ।**
**ಮುಕ್ತಾನ್ಮುಕ್ತಸ್ಯ ಯುಕ್ತಂ ಸ್ಯಾಚ್ಛ್ರುತ್ಯುಕ್ತಮಭಿವೀಕ್ಷಿತಃ ॥ ೩೮ ॥**

ಅ ॥ ರಾದ್ಧಃ='**ಸ ಯೋ ಮನುಷ್ಯಾಣಾಂ ರಾದ್ಧಃ ಸಮೃದ್ಧೋ ಭವತಿ**' ಎನ್ನುವ ಉಪಕ್ರಮವಾಕ್ಯದಲ್ಲಿದ್ದ ರಾದ್ಧಃ ಎನ್ನುವ ಪದವಾಚ್ಯನು, ಸಂಸಿದ್ಧ ಇತ್ಯೇವ=ನಿತ್ಯವಾಗಿರುವುದರಿಂದಲೂ ದುಃಖದಿಂದ ಮಿಶ್ರವಾಗದಿರುವುದರಿಂದಲೂ ಸಮೀಚೀನ ಸಿದ್ಧಿ ಇರುವವನೇ, ಮುಕ್ತ ಏವ=ಮುಕ್ತನೇ, ಅವಗಮ್ಯತೇ=ತಿಳಿಯಲ್ಪಡುತ್ತಾನೆ. (ಅಂದರೆ— ರಾದ್ಧಃ ಎನ್ನುವ ಪದದಿಂದ **ಶಕ್ತಿವೃತ್ತಿಯಿಂದಲೇ ಮುಕ್ತನೇ ಸ್ವೀಕರಿಸಲ್ಪಡುತ್ತಾನೆ.** ಅಮುಕ್ತನಲ್ಲ.) (ಹೀಗೆಯೇ ಮುಕ್ತಿಯಾಗದೆ ಇರುವಕಾಲದಲ್ಲಿ ಚೆನ್ನಾಗಿ ಖುದ್ಧಿಯು ಆಗದಿರುವುದರಿಂದ ಸಮೃದ್ಧ ಶಬ್ದವೂ ಮುಕ್ತನಿಗೇನೇ ವಾಚಕವು. (ಈಗ ತೈತಿರೀಯ ಶ್ರುತಿಯಲ್ಲಿ ಮುಕ್ತಮನುಷ್ಯ ಜ್ಞಾಪಕವನ್ನು ತೋರಿಸುತ್ತಾ '**ಯುವಾ ಸ್ಯಾತ್**' ಇತ್ಯಾದಿ ಪದಗಳನ್ನು ವ್ಯಾಖ್ಯಾನಮಾಡುತ್ತಾರೆ.) ಸಾಧುನಾ= **ದೋಷಲೇಶರಹಿತನಾದ,** ವಿಷ್ಣುನಾ = ಶ್ರೀ ಹರಿಯಿಂದ, ಯುಕ್ತಃ = ಕೂಡಿದ, ಮುಕ್ತಃ= ಮುಕ್ತನು, ಅಥವಾ ಭಗವತ್ಸಾಮೀಪ್ಯರೂಪವಾದ ಮೋಕ್ಷವುಳ್ಳವನು, ಸಾಧುಯುವಾ=ಸಾಧು ಯುವಾ ಎಂದು, ಮತಃ=ಸಮ್ಮತನು (ಯುವ ಶಬ್ದದಿಂದಲೂ ಅತಿಶಯವಾಗಿ ಸಾಧು ಯುವಶಬ್ದವು ಮುಕ್ತನಿಗೆ ಜ್ಞಾಪಕವಾಗಿರುವುದರಿಂದ ಕ್ರಮವನ್ನು ಬಿಟ್ಟು ಆದಿಯಲ್ಲಿ ವ್ಯಾಖ್ಯಾತವಾಗಿದೆ.) (ಯದ್ಯಪಿ ಯುವಶಬ್ದವು ಯೌವನನಿಮಿತ್ತಕವು. ಆದಾಗ್ಯೂ '**ಮುಖ್ಯ ಅಮುಖ್ಯಯೋಃ ಮುಖ್ಯೇ ಕಾರ್ಯಸಂಪ್ರತ್ಯಯಃ**' ಎನ್ನುವ ನ್ಯಾಯದಿಂದ ನಿತ್ಯಯೌವನವನ್ನು ಅಂಗೀಕರಿಸಬೇಕು.) ನಿತ್ಯಂ ಯೌವನಂ=ನಿತ್ಯವಾದ ಯೌವನವು, ಏತಸ್ಯ ಮುಕ್ತಸ್ಯ= ಈ ಮನುಷ್ಯನಾದ ಮುಕ್ತನಿಗೇನೇ, (ಕೂಡುತ್ತದೆ. ಸಂಸಾರಿಗೆ ಕೂಡುವುದಿಲ್ಲ.) ಇತಿ= ಈ ಕಾರಣದಿಂದ, ಯುವಾಚ=ಯುವಶಬ್ದವಾಚ್ಯನೂ ಕೂಡ, ಸ ಚ=ಮುಕ್ತನೇ. (ಅಧ್ಯಾಯಕ ಶಬ್ದವು ಯದ್ಯಪಿ ಅಜ್ ಅಧಿಪೂರ್ವಕವಾದ ಇಙ್‌ಅಧ್ಯಯನೇ ಎನ್ನುವ ಧಾತುವಿನಿಂದ ಣ್ವುಲ್ ಪ್ರತ್ಯಯ ಮಾಡಿದರೆ ಚೆನ್ನಾಗಿ ಅಧ್ಯಯನಮಾಡತಕ್ಕವನನ್ನು ಹೇಳುತ್ತದೆ. ಆದರೂ ಇಲ್ಲಿ ಪುರುಷಾರ್ಥದ ಪ್ರಸಕ್ತಿಯಿಂದ ಅಧ್ಯಯನವು ಪುರುಷಾರ್ಥವಾಗದಿರುವುದರಿಂದ ಅಧ್ಯಯನ ಫಲಪ್ರಾಪ್ತಿಗೆ ಲಕ್ಷಕವೆಂದು ಹೇಳಬೇಕು.) ಅಧ್ಯಯನಸ್ಯ=ಅಧ್ಯಯನದ, ಫಲಂ=ಫಲವಾದ ಮುಕ್ತಿಯು, ತೇನ=ಮುಕ್ತನಿಂದಲೇ, ಆಪ್ತಂ = ಹೊಂದಲ್ಪಟ್ಟಿದೆ. ತೇನ=ಆ ಕಾರಣದಿಂದ, (ಮುಕ್ತನೇ) ಅಧ್ಯಾಯಕಃ=ಅಧ್ಯಾಯಕನೆಂದು, ಈರಿತಃ=ಹೇಳಿಸಿಕೊಳ್ಳಲ್ಪಡುತ್ತಾನೆ. ನಿಹ್ರಾಸಾನಂದಸಂಪ್ರಾಪ್ತ್ಯಾ = ಯೋಗ್ಯತಾನುಸಾರವಾಗಿ ಪೂರ್ಣವಾದ ಆನಂದದ ಸಂಪ್ರಾಪ್ತಿಯಿಂದ, (ಮುಕ್ತನೇ) ಆಶಿಷ್ಠ ಇತಿ=(ಆ=ಚೆನ್ನಾಗಿ, ಶಂ=ಸುಖವು, ಅಸ್ಯ=ಇವನಿಗೆ ಎನ್ನುವವ್ಯುತ್ಪತ್ತಿಯಿಂದ, ಆಶಃ=ಚೆನ್ನಾಗಿ ಸುಖವಿದ್ದವನು, ಅತಿಶಯೇನ ಆಶಃ=ಹ್ರಾಸವಿಲ್ಲದಿರುವ ಅತಿಶಯ ಸುಖವುಳ್ಳವನಾದುದರಿಂದ) ಆಶಿಷ್ಠನೆಂದು, ಗೀಯತೇ=ಹೇಳಲ್ಪಡುತ್ತಾನೆ. ಮುಕ್ತಃ=ಮುಕ್ತನೇ, ಸ್ಥಿತಸ್ಯ=ಇದ್ದದ್ದಕ್ಕೆ, ಅನನ್ಯಥಾಪ್ರಾಪ್ತೇಃ=ಅನ್ಯಥಾ ಪ್ರಾಪ್ತಿಯಾಗದಿರುವುದರಿಂದ, ದೃಢಿಷ್ಠ ಇತಿ ಚ = ಅತಿಶಯವಾಗಿ ವಿಕಾರವಿಲ್ಲದಿರುವುದರಿಂದ ದೃಢಿಷ್ಠನೆಂದೂ, ಉದಿತಃ = ಹೇಳಲ್ಪಟ್ಟಿದ್ದಾನೆ. (ಅತಿಶಯವಾಗಿ ಅಂದರೆ ಸ್ವಾಭಾವಿಕವಾಗಿ ಬಲವುಳ್ಳವನು ಬಲಿಷ್ಠನು ಎನ್ನುವ ವ್ಯುತ್ಪತ್ತಿಯಿಂದ) ಸ್ವಭಾವೇನ=ಸ್ವಭಾವದಿಂದ, ಬಲಿಷ್ಠಶ್ಚ=ಬಲಿಷ್ಠನು, ಕೇವಲಂ=ಮುಖ್ಯವಾಗಿ,

ಮುಕ್ತಃ=ಮುಕ್ತನು, ಭವತಿ=ಆಗುತ್ತಾನೆ. (ಅಮುಕ್ತನಲ್ಲ. ಆದಕಾರಣ ಬಲಿಷ್ಠ ಎನ್ನುವ ಪದದಿಂದಲೂ ಮುಕ್ತನೇ ಹೇಳಲ್ಪಡುತ್ತಾನೆ.) (ಹಾಗಾದರೆ ಮುಕ್ತನಿಗೆ '**ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್**' ಎಂದು ವಿತ್ತಪರಿಪೂರ್ಣವಾದ ಪೃಥಿವೀಪತಿತ್ವವು ಹೇಳಲ್ಪಟ್ಟದ್ದು ಹೇಗೆ ಕೂಡುತ್ತದೆಂದರೆ—) ತಸ್ಯೇಯಂ ಪೃಥಿವೀತ್ಯಾದಿ '**ತಸ್ಯೇಯಂ ಪೃಥಿವೀ**' ಇತ್ಯಾದಿ ವಾಕ್ಯವು, ಪೂರ್ವಭಾವವ್ಯಪೇಕ್ಷಯಾ = ಅಮುಕ್ತತ್ವವಿವಕ್ಷೆಯಿಂದ, (ಅಂದರೆ— ಮುಕ್ತ-ಅಮುಕ್ತ ಮನುಷ್ಯರನ್ನು ವಿವಕ್ಷೆಮಾಡಿಕೊಂಡು '**ಯುವಾ ಸ್ಯಾತ್**' ಇತ್ಯಾದಿ ವಾಕ್ಯವು ಪ್ರವೃತ್ತವಾಗಿದೆ. ಅದರಲ್ಲಿ '**ಯುವಾ ಸ್ಯಾತ್**' ಇತ್ಯಾದಿಗಳಿಂದ ಮುಕ್ತರನ್ನು ಪ್ರತಿಪಾದಿಸಿ, ಅಮುಕ್ತರನ್ನು ವಿವಕ್ಷಾಮಾಡಿಕೊಂಡು, 'ತಸ್ಯ' ಇತ್ಯಾದಿ ವಾಕ್ಯವು ಪ್ರವೃತ್ತವಾಗಿದೆ. ಇದೇ ನ್ಯಾಯದಿಂದಲೇ 'ಅನ್ಯೇಷಾಮಧಿಪತಿಃ' ಇತ್ಯಾದಿಗಳು ಅಮುಕ್ತ ವಿಷಯಕಗಳೆಂದು ತಿಳಿಯತಕ್ಕದು.) (ಹಾಗಾದರೆ— '**ಯುವಾ ಸ್ಯಾತ್**' ಇತ್ಯಾದಿಗಳಿಗೆ ಮುಕ್ತಾಮುಕ್ತವಿಷಯಕತ್ವವನ್ನು ಅಂಗೀಕರಿಸಿದರೆ- ಏಕವಿಷಯತ್ವ ಪ್ರತೀತಿಯಿಂದ ವಿರೋಧವು ಎನ್ನುವ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ 'ಅಮುಕ್ತಃ' ಎಂದು ಹೇಳುವ ಬದಲಿಗೆ ಪೂರ್ವಭಾವ ಎಂದು ಹೇಳಿರುವರು. ಒಬ್ಬ ಚೇತನನೇ ಯುವಾದಿ ಶಬ್ದಗಳಿಂದ ಪ್ರತಿಪಾದಿಸಿ ಕೊಳ್ಳಲ್ಪಡುತ್ತಾನೆ. ಅವನಿಗೆ ಅವಸ್ಥಾಭೇದದಿಂದ ವಿಶೇಷಗುಣಗಳು ವ್ಯವಸ್ಥಿತಗಳಾಗುತ್ತವೆ. ಆದುದರಿಂದ ಏಕವಿಷಯತ್ವ ಪ್ರತೀತಿಯು ಅಯುಕ್ತವಲ್ಲ. ಹೀಗೆಯೇ ವಾಜಸನೇಯ ಶ್ರುತಿ ಯಲ್ಲಿ '**ಸ ಯೋ ಹ ವೈ ಮನುಷ್ಯಾಣಾಂ**' ಎನ್ನುವುದನ್ನು ಆರಂಭಿಸಿ 'ಸಂಪನ್ನತಮಃ' ಎನ್ನುವ ತನಕವೂ, ತೈತ್ತಿರೀಯ ಶ್ರುತಿಯಲ್ಲಿ '**ಯುವಾ ಸ್ಯಾತ್**' ಎನ್ನುವುದನ್ನು ಆರಂಭಿಸಿ '**ಪೂರ್ಣಾ ಸ್ಯಾತ್**' ಎನ್ನುವ ಪರ್ಯಂತ, ಮುಕ್ತ-ಅಮುಕ್ತಪರತ್ವವನ್ನು ವರ್ಣಿಸಿ '**ಸ ಮನುಷ್ಯಾಣಾಂ ಪರಮ ಆನಂದಃ ಅಥ ಯೇ ಶತಂ ಮನುಷ್ಯಾಣಾಂ ಆನಂದಾಃ**' ಎನ್ನುವುದೂ, '**ಸ ಏಕೋ ಮಾನುಷ ಆನಂದಃ । ತೇ ಯೇ ಶತಂ ಮಾನುಷಾ ಆನಂದಾಃ**' ಎನ್ನುವುದೂ ಕೂಡ ಮುಕ್ತಾಮುಕ್ತವಿಷಯವೆಂದು ಸಿದ್ಧವಾಗುವಾಗ ತೈತ್ತಿರೀಯ ಶ್ರುತಿಯಲ್ಲಿರತಕ್ಕ '**ಸ ಏಕೋ ಮನುಷ್ಯಗಂಧರ್ವಾಣಾಮಾನಂದಃ ಶ್ರೋತ್ರಿಯಸ್ಯ ಚಾಕಾಮಹತಸ್ಯ**' ಇಷ್ಟನ್ನು ವ್ಯಾಖ್ಯಾನಮಾಡುತ್ತಾರೆ.) (ಶ್ರುತಿಯು) ಸ ಏಕ ಇತಿ= ಸ ಏಕಃ ಎನ್ನುವ ವಾಕ್ಯದಿಂದ, ಸಂಸಾರಗತಂ=ಸಂಸಾರದಲ್ಲಿರತಕ್ಕ, ಸುಖಂ=ಸುಖವನ್ನು ಉಕ್ತ್ವಾ=ಹೇಳಿ, (ಅಂದರೆ— ಸಂಸಾರಿಗಳಾದ ಮನುಷ್ಯರ ಸುಖದೆಶೆಯಿಂದ ನೂರು ಗುಣ ಜಾಸ್ತಿ ಸಂಸಾರಿಯಾದ ಮನುಷ್ಯ ಗಂಧರ್ವನ ಸುಖವನ್ನು ಹೇಳಿ) ಪುನಃ=ಮತ್ತು, ಶ್ರೋತ್ರಿಯ ಸ್ಯೇತಿ=ಶ್ರೋತ್ರಿಯಸ್ಯ ಎನ್ನುವ ವಾಕ್ಯದಿಂದ, ಮುಕ್ತಾತ್=ಮುಕ್ತಮನುಷ್ಯನ ದೆಶೆಯಿಂದ, (ಮುಕ್ತಮನುಷ್ಯ ಗಂಧರ್ವನಿಗೆ) ಶತಗುಣಾತ್ಮತಾಂ = ನೂರುಪಾಲುಜಾಸ್ತಿ ಸುಖಸ್ವರೂಪ ತ್ವವನ್ನು, ವದತಿ=ಹೇಳುತ್ತದೆ. (ಇದೇ ನ್ಯಾಯದಿಂದ '**ತೇ ಯೇ ಶತಂ ಮನುಷ್ಯಗಂಧ ರ್ವಾಣಾಮಾನಂದಾಃ**' ಇದುಮೊದಲಾದ ವಾಕ್ಯವನ್ನು ವ್ಯಾಖ್ಯಾನಮಾಡಬೇಕು ಎನ್ನುವ ಅಭಿಪ್ರಾಯವುಳ್ಳವರಾಗಿ ಹೇಳುತ್ತಾರೆ.) ಸಂಸಾರಗಾತ್=ಸಂಸಾರಿಗಳಾದ ಮನುಷ್ಯಗಂಧರ್ವಾ ದಿಗಳ ಸುಖದೆಶೆಯಿಂದ, ಸಂಸಾರಗತಸ್ಯೈವ=ಸಂಸಾರದಲ್ಲಿರತಕ್ಕ ದೇವಗಂಧರ್ವಾದಿಗಳಿಗೆ, ಶತಾಧಿಕಂ=ಶತಗುಣವಾದ ಸುಖವನ್ನು, ಉಕ್ತ್ವಾ=ಹೇಳಿ, ಮುಕ್ತಾತ್=ಮುಕ್ತಮನುಷ್ಯ ಗಂಧರ್ವಾದಿಗಳ ಸುಖದೆಶೆಯಿಂದ, ಶತಾಧಿಕಂ=ಮುಕ್ತದೇವಗಂಧರ್ವಾದಿಗಳಿಗೆ, ನೂರುಪಾಲು ಜಾಸ್ತಿಸುಖವನ್ನು, ವದತಿ = ಹೇಳುತ್ತದೆ. (ಎರಡು ಶ್ರುತಿಗಳ ವ್ಯಾಖ್ಯಾನವನ್ನುಪಸಂಹಾರ ಮಾಡುತ್ತಾರೆ.) ಶ್ರುತ್ಯುಕ್ತಂ=ಶ್ರುತಿಯಲ್ಲಿ ಹೇಳಲ್ಪಟ್ಟದ್ದನ್ನು, ಅಭಿವೀಕ್ಷತಃ=ಚೆನ್ನಾಗಿ ವಿಚಾರ

ಮಾಡತಕ್ಕವನ ಮತದಿಂದ, (ಈ ವ್ಯಾಖ್ಯಾನವೇ) ಯುಕ್ತಂ=ಯುಕ್ತವಾದುದು, ಸ್ಯಾತ್=ಆಗುವುದು. ಅಥವಾ ಅಭಿವೀಕ್ಷತಃ = ಚೆನ್ನಾಗಿ ವಿಚಾರದೆಶೆಯಿಂದ, ಶ್ರುತ್ಯುಕ್ತಂ=ಶ್ರುತಿಯಲ್ಲಿ ಹೇಳಲ್ಪಟ್ಟ ಇದೇವೇ, ಯುಕ್ತಂ=ಯುಕ್ತವು, ಸ್ಯಾತ್=ಆಗುವುದು.

ಸ. ರ. ವಿ— (1) '**ಯಶ್ಚ ಶ್ರೋತ್ರಿಯಃ**' ಇತ್ಯಾದಿ ಶ್ರುತಿಯು ಅಮುಕ್ತರ ಆನಂದ ತಾರತಮ್ಯವನ್ನೂ, ಮುಕ್ತರ ಆನಂದತಾರತಮ್ಯವನ್ನೂ ಎರಡನ್ನೂ ಪ್ರತಿಪಾದಿಸುತ್ತದೆ. ಹೇಗೆಂದರೆ— ಪ್ರಥಮತಃ ಅಮುಖ್ಯವಾಗಿ ರಾದ್ಧಾದಿ ಶಬ್ದಗಳಿಂದ ವಾಚ್ಯನಾದ ಅಮುಕ್ತ ಚಕ್ರವರ್ತಿಯ ಆನಂದವೂ ಅದೇ ವಾಕ್ಯದಿಂದ ಹೇಳಲ್ಪಡುತ್ತದೆ. '**ಸ ಮನುಷ್ಯಾಣಾಂ ಪರಮ ಆನಂದಃ**' ಎನ್ನುವ ವಾಕ್ಯದಿಂದ ಮೇಲೆ ಚೆನ್ನಾಗಿ ಸಿದ್ಧರಾದುದರಿಂದ ಮುಖ್ಯವಾಗಿ ರಾದ್ಧಾದಿ ಶಬ್ದಗಳಿಂದ ವಾಚ್ಯನಾದ, ಇತರ ಮುಕ್ತ ಮನುಷ್ಯರಿಗೆ ಅಧಿಪತಿಯಾದ '**ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ**' ಎನ್ನುವ ವಾಕ್ಯದಿಂದ ನಿರ್ದಿಷ್ಟನಾದ ಮುಕ್ತ ಸಾರ್ವಭೌಮನ ಆನಂದವೂ ಅದೇ ವಾಕ್ಯದಿಂದಲೇ ಹೇಳಲ್ಪಡುತ್ತದೆ. ಅದರಲ್ಲಿ ಮುಕ್ತ ಚಕ್ರವರ್ತಿಯ ಆನಂದದಿಂದ ನೂರು ಪಾಲು ಆನಂದವನ್ನು ಅಮುಕ್ತ ಪಿತೃಗಳಿಗೆ ನಿರ್ದೇಶ ಮಾಡಿ, ಮುಕ್ತ ಚಕ್ರವರ್ತಿಯ ಆನಂದದೆಶೆಯಿಂದ ನೂರು ಪಾಲು ಆನಂದವೂ '**ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ**' ಎಂದು ನಿರ್ದಿಷ್ಟನಾದ ಪಿತೃಶಬ್ದವಾಚ್ಯನಿಗೆ '**ಸ ಏಕಃ ಪಿತೄಣಾಮಾನಂದಃ**' ಎನ್ನುವ ವಾಕ್ಯದಿಂದಲೇ ನಿರ್ದಿಷ್ಟನಾಗಿರುತ್ತಾನೆ. ಹೀಗೆಯೇ ಬ್ರಹ್ಮಪರ್ಯಂತ ಆನಂದತಾರತಮ್ಯವನ್ನು ಇಟ್ಟುಕೊಳ್ಳಬೇಕು ) (2) '**ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತಃ**' ಎನ್ನುವುದು ಆಜಾನದೇವಾದಿಗಳಲ್ಲಿಯೇ ಶ್ರುತವಾದುದಾಗ್ಯೂ ಮನುಷ್ಯಾಧಿಪತ್ಯಾದಿಗಳಲ್ಲಿಯೂ ಶ್ರುತ್ಯಂತರವನ್ನು ಅನುಸರಿಸಿ ಇಟ್ಟುಕೊಳ್ಳಬೇಕು. (3) ಇಲ್ಲಿ ಸಾರ್ವಭೌಮ, ಮನುಷ್ಯಗಂಧರ್ವ-ದೇವಗಂಧರ್ವ-ಪಿತ್ರಾದಿಗಳಿಗೆ ಮೇಲೆ ಮೇಲೆ ಶತ (೧೦೦) ಆನಂದವು ಶ್ರುತವಾಗಿರುವುದರಿಂದ '**ತೇ ಯೇ ಶತಂ**' ಎನ್ನುವ ಶತ ಶಬ್ದವು ನ್ಯೂನಸಂಖ್ಯಾವ್ಯವಚ್ಛೇದಾರ್ಥಕವು. ಅಧಿಕಸಂಖ್ಯಾವ್ಯವಚ್ಛೇದಾರ್ಥವಲ್ಲ. (4) ತೈತ್ತಿರೀಯದಲ್ಲಿ '**ಯುವಾ ಸ್ಯಾತ್ಸಾಧುಯುವಾಧ್ಯಾಯಕಃ । ಆಶಿಷ್ಠೋ ದೃಢಿಷ್ಠೋ ಬಲಿಷ್ಠಃ । ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್**' । ಎಂದು ವಿತ್ತದಿಂದ ಪೂರ್ಣವಾದ ಪೃಥಿವೀಪತಿತ್ವವ್ಯಪದೇಶವು ಮುಕ್ತಸಾರ್ವಭೌಮನಿಗೆ ಮೊದಲು ಸಂಸಾರಾವಸ್ಥೆಯಲ್ಲಿ ಇದ್ದುದರಿಂದ ಕೂಡುತ್ತದೆ. '**ಸ ಏಕೋ ಮನುಷ್ಯಆನಂದಃ**' ಎನ್ನುವುದರಿಂದ ಮುಕ್ತಾಮುಕ್ತ ಸಾರ್ವಭೌಮಾನಂದವು ಹೇಳಲ್ಪಡುತ್ತದೆ. ಅದರಲ್ಲಿ '**ಯೇ ಶತಂ ಮಾನುಷಾ ಆನಂದಾಃ । ಸ ಏಕೋ ಮನುಷ್ಯ ಗಂಧರ್ವಾಣಾಮಾನಂದಃ**' ಎಂದು ಅಮುಕ್ತರಾದ ಸಾರ್ವಭೌಮರ ಆನಂದದಿಂದ ನೂರುಪಾಲು ಆನಂದವನ್ನು ಮುಕ್ತ ಮನುಷ್ಯ-ಗಂಧರ್ವರಿಗೆ ಹೇಳಿ '**ಶ್ರೋತ್ರಿಯಸ್ಯ ಚಾ ಕಾಮಹತಸ್ಯ**' ಎಂದು ಹೇಳಿರುತ್ತಾರೆ. ಯಾರು ಶ್ರುತಿಫಲವನ್ನು ಹೊಂದಿದರಿಂದ ಶ್ರೋತ್ರಿಯ ಶಬ್ದವಾಚ್ಯನಾದ ಅಕಾಮಹತನಾದ ಮುಕ್ತ ಮನ್ಯುಷ್ಯಗಂಧರ್ವನೋ, ಅವನಿಗೂ ಮುಕ್ತಸಾರ್ವಭೌಮನ ಆನಂದದಿಂದ ನೂರು ಪಾಲು ಆನಂದವು. ಹೀಗೆಯೇ '**ತೇ ಯೇ ಶತಂ ಮನುಷ್ಯ ಗಂಧರ್ವಾಣಾಮಾನಂದಾಃ। ಸ ಏಕೋ ದೇವಗಂಧರ್ವಾಣಾಮಾನಂದಃ । ಶ್ರೋತ್ರಿಯಸ್ಯ ಚಾ ಕಾಮಹತಸ್ಯ**' ಇತ್ಯಾದಿಗಳನ್ನು ಆರಂಭಿಸಿ, '**ಸ ಏಕೋ ಬ್ರಹ್ಮಣ ಆನಂದಃ । ಶ್ರೋತ್ರಿಯಸ್ಯ ಚಾಕಾಮಹತಸ್ಯ**' ಎನ್ನುವತನಕ ವಚನವು ಹಿಂದೆ ಹೇಳಿದಪ್ರಕಾರದಿಂದಲೇ

ಅಮುಕ್ತರಲ್ಲಿದ್ದಂತೆಯೇ ಮುಕ್ತರಾದ ಮನುಷ್ಯ-ಗಂಧರ್ವಾದಿಗಳಲ್ಲಿ ಆನಂದ ತಾರತಮ್ಯವನ್ನು ಪ್ರತಿಪಾದಿಸುತ್ತದೆಂದು ಸಿದ್ಧವಾಯಿತು. ॥ ೩೩ ॥ ೩೪ ॥ ೩೫ ॥ ೩೬ ॥ ೩೭ ॥ ೩೮ ॥

ಹೀಗೆ ಶ್ರುತಿಯಿಂದ ಮುಕ್ತಿಯಲ್ಲಿ ತಾರತಮ್ಯವನ್ನುಪಪಾದಿಸಿ ಯುಕ್ತಿಯಿಂದಲೂ ಉಪಪಾದಿಸುತ್ತಾರೆ—

**ಮೂ ॥ ಯುಕ್ತಂ ಚ ಸಾಧನಾಧಿಕ್ಯಾತ್ಸಾಧ್ಯಾಧಿಕ್ಯಂ ಸುರಾದಿಷು ।**
**ನಾಧಿಕ್ಯಂ ಯದಿ ಸಾಧ್ಯೇ ಸ್ಯಾತ್ಪ್ರಯತ್ನಃ ಸಾಧನೇ ಕುತಃ ॥ ೩೯ ॥**
**ಯತ್ನಶ್ಚ ದೃಶ್ಯತೇ ತೇಷಾಂ ಮಹಾನೇವ ಮಹಾತ್ಮನಾಂ ।**
**ಯತ್ರ ಸಾಧನಬಾಹುಲ್ಯಂ ಸಾಧ್ಯಬಾಹುಲ್ಯಮತ್ರ ಚ ॥ ೪೦ ॥**
**ದೃಷ್ಟಂ ನಿಯಮತೋ ನೋ ಚೇನ್ನ ಯತ್ನಂ ಕುರ್ಯುರಂಜಸಾ ।**
**ಕೃಚ್ಛ್ರೇಣ ಸಾಧನಾದೇವ ನ ಮುಕ್ತವದುದೀರ್ಯತೇ ॥ ೪೧ ॥**

ಅ ॥ ಸುರಾದಿಷು=ದೇವತೆಗಳೇ ಮೊದಲಾದವರಲ್ಲಿ, (ಮನುಷ್ಯರೇ ಮೊದಲಾದವರ ದೆಶೆಯಿಂದ) ಸಾಧ್ಯಾಧಿಕ್ಯಂ=ಮುಕ್ತಿಯಲ್ಲಿರತಕ್ಕ ಫಲಾಧಿಕ್ಯವು, ಸಾಧನಾಧಿಕ್ಯಾತ್=ಸಾಧನಾಧಿಕ್ಯರೂಪವಾದ ಹೇತುವಿನಿಂದ, ಯುಕ್ತಂ ಚ=ಅನುಮಿತವೂ ಆಗಿದೆ. (ದೇವಾದಯಃ ಮಾನುಷಾದಿಭ್ಯಃ ಅಧಿಕಸೌಖ್ಯಫಲಭಾಜಃ ತದಪೇಕ್ಷಯಾ ಅಧಿಕತತ್ಸಾಧನವತ್ವಾತ್ = ದೇವತೆಗಳೇ ಮೊದಲಾದವರು ಮನುಷ್ಯಾದಿಗಳಿಗಿಂತ ಹೆಚ್ಚು ಮುಕ್ತಿಯಲ್ಲಿರತಕ್ಕ ಸುಖವನ್ನು ಹೊಂದುವವರು ಮನುಷ್ಯಾದಿಗಳಿಗಿಂತ ಹೆಚ್ಚು ಮುಕ್ತಿಸಾಧನವುಳ್ಳವರಾದುದರಿಂದ ಎಂದುಕ್ತವಾಯಿತು.) (ಹೇತುವನ್ನು ಅಂಗೀಕರಿಸಿ ಸಾಧ್ಯವನ್ನು ಅಂಗೀಕರಿಸದೆ ಇದ್ದರೆ ಬಾಧಕವಿಲ್ಲದಿರುವುದರಿಂದ ಈ ಹೇತುವು ಅಪ್ರಯೋಜಕವು. ಎಂದರೆ—) ಸುರಾದಿಷು = ದೇವತೆಗಳೇ ಮೊದಲಾದವರಲ್ಲಿ, ಯದಿ=ಯಾವ ಪಕ್ಷದಲ್ಲಿ, ಸಾಧ್ಯೇ=ಸಾಧ್ಯವಾದ ಫಲದಲ್ಲಿ, ಆಧಿಕ್ಯಂ=ಮನುಷ್ಯಾದಿಗಳಿಂದ ಆಧಿಕ್ಯವು, ನ ಸ್ಯಾತ್=ಆಗದೆ ಹೋಗುವುದೋ, ಹಾಗಾದರೆ, ಸಾಧನೇ=ಸಾಧನಾಧಿಕ್ಯದಲ್ಲಿ, ಪ್ರಯತ್ನಃ=ಪಯತ್ನವು, ಕುತಃ=ಯಾವುದರಿಂದ, ಸ್ಯಾತ್=ಆಗುವುದು? (ಅಂದರೆ— ದೇವಾದಿಗಳು ಮನುಷ್ಯಾದಿಗಳಿಂದ ಅಧಿಕ ಮುಕ್ತಿಸುಖವನ್ನು ಹೊಂದದೆ ಇದ್ದರೆ ಆಗ ಮನುಷ್ಯಾದಿಗಳಿಂದ ಅಧಿಕವಾಗಿ ಮುಕ್ತಿಸಾಧನಕ್ಕಾಗಿ ಪ್ರಯತ್ನವುಳ್ಳವರು ಆಗದೆ ಹೋಗುವರು. ಅನಧಿಕಫಲಕ್ಕಾಗಿ ಅಧಿಕಪ್ರಯತ್ನವನ್ನು ಮಾಡುವವರು ಪ್ರೇಕ್ಷಾವುಳ್ಳವರು ಆಗದೆಹೋಗುವರು. ಎಂದು ವಿಪಕ್ಷದಲ್ಲಿ ಬಾಧಕವಿಲ್ಲದಿರುವುದರಿಂದ ಹೇತುವು ಅಪ್ರಯೋಜಕವು ಅಲ್ಲ. ಪ್ರಮಾಣವಿಲ್ಲದಿರುವುದರಿಂದ ಸ್ವರೂಪಾಸಿದ್ಧವಾಗಲಿ ಎಂದರೆ—) ಮಹಾತ್ಮನಾಂ = ಮಹಾಫಲವನ್ನು ಹೊಂದತಕ್ಕವರೆಂದು ಅನುಮೇಯರಾದ, ತೇಷಾಂ=ಆ ದೇವಾದಿಗಳಿಗೆ, ಮಹಾನ್=ಮನುಷ್ಯಾದಿಗಳಿಂದ ಹೆಚ್ಚುಆದ, ಯತ್ನಃ=ಪ್ರಯತ್ನವು, (ಅಂದರೆ— ಅಧಿಕಮೋಕ್ಷಸಾಧನಾನುಷ್ಠಾನವು, ದೃಶ್ಯತೇ ಏವ=ಪ್ರಮಾಣಗಳಿಂದ ಕಾಣಲ್ಪಡುತ್ತದೆಯೇಸರಿ. (ಪ್ರಮಾಣಗಳನ್ನಾದರೂ ಮುಂದೆ ಹೇಳುವೆವು ) (ವ್ಯಾಪ್ತಿಯನ್ನುಪಪಾದಿಸುತ್ತಾರೆ.) ಯತ್ರ=ಯಾವ ಪುರುಷನಲ್ಲಿ, ಸಾಧನಬಾಹುಲ್ಯಂ=ಯಾರಕ್ಕಿಂತ ಸಾಧನಾಧಿಕ್ಯವಿದೆಯೋ, ಅತ್ರ=ಈ ಪುರುಷನಲ್ಲಿ, ಸಾಧ್ಯಬಾಹುಲ್ಯಂ=ಅವನಕ್ಕಿಂತ ಸಾಧ್ಯಾಧಿಕ್ಯವೂ, ನಿಯಮತಃ=ನಿಯಮದಿಂದ, ದೃಷ್ಟಂ=ಕಾಣಲ್ಪಟ್ಟದೆ. (ಅಂದರೆ ಕರ್ಷಕ, ವ್ಯಾಪಾರಿ, ರಾಜಪುರುಷಾದಿಗಳಲ್ಲಿ, ಲೋಕದಲ್ಲಿ, ವೇದದಲ್ಲಿ, ಆಹಿತಾಗ್ನ್ಯಾದಿಗಳಲ್ಲಿಯೂ ಯಾರು ಯಾರಕ್ಕಿಂತ ಹೆಚ್ಚು ಸಾಧನವುಳ್ಳವರೋ ಇವರು ಅವರಕ್ಕಿಂತ ಹೆಚ್ಚು ಸಾಧ್ಯವುಳ್ಳವರು ಎಂದು

ನಿಯಮದಿಂದ ಆವಾವ ಪ್ರಮಾಣಗಳಿಂದ ಉಪಲಬ್ಧರಾಗಿರುತ್ತಾರೆ.) (ಯಾವನು ಅಗ್ನ್ಯಾಧಾನಾದಿ ಫಲಗಳಿಗೆ ತಾರತಮ್ಯವನ್ನು ತಿಳಿಯದೆಯಿದ್ದವನಾಗಿ ಕೃಷ್ಯಾದಿಫಲವಾದ ಧಾನ್ಯಾದಿಗಳಲ್ಲಿ ತಾರತಮ್ಯವು ಕಾರಣಾಂತರಾಧೀನವು. ಕೃಷ್ಯಾದಿ ಸಾಧನಗಳ ತಾರತಮ್ಯಾಧೀನವಲ್ಲವೆಂದು ತಿಳಿಯುವವನಾಗಿ ದೃಷ್ಟಾಂತಗಳಲ್ಲಿ ವಿಪ್ರತಿಪತ್ತಿ ಮಾಡುತ್ತಾನೋ ಆತನನ್ನು ಕುರಿತು ಹೇಳುತ್ತಾನೆ.) ನೋ ಚೇತ್=(ಲೋಕದಲ್ಲಿಯೂ ವೇದದಲ್ಲಿಯೂ ಸಾಧನಾಧಿಕ್ಯದಿಂದ ಸಾಧ್ಯಾಧಿಕ್ಯವು) ಆಗದೆಹೋದರೆ, (ಆಗ ಯಾರೂ ಕೂಡ,) ಅಂಜಸಾ=ಚೆನ್ನಾಗಿ, ಯತ್ನಂ=ಸಾಧನಾತಿಶಯಾನುಷ್ಠಾನವನ್ನು, ನ ಕುರ್ಯುಃ=ಮಾಡಲಾರರು. ಸಮವಾಗಿಯೇ ಮಾಡಿಯಾರು. ಇಲ್ಲದಿದ್ದರೆ ಪ್ರೇಕ್ಷಾವುಳ್ಳವರು ಆಗದೆಹೋಗುವರು.) (ಮುಕ್ತರೂ ಕೂಡ ಉಪಾಸನವನ್ನೂ, ಕರ್ಮವನ್ನೂ ಮಾಡುತ್ತಾರೆ ಎಂದು ಗುಣೋಪಸಂಹಾರಪಾದದಲ್ಲಿ ಸಮರ್ಥಿಸಲ್ಪಟ್ಟದೆ. ಅವರ ಅನುಷ್ಠಾನವು ಏಕಪ್ರಕಾರವೇ ಎನ್ನುವಲ್ಲಿ ನಿಯಾಮಕವಿಲ್ಲ. ತಥಾಚ ಅವರಿಗೆ ಉಪಾಸನಾದಿತಾರತಮ್ಯವಿದ್ದರೂ ಉಪಾಸನಾಪ್ರಯುಕ್ತ ಫಲತಾರತಮ್ಯವಿಲ್ಲದಿರುವುದರಿಂದ ತರ್ಕಸಹಿತಗಳಾದ ಅನುಮಾನಗಳು ಅಯುಕ್ತಗಳೇ. ಸಾಧ್ಯವಿಲ್ಲದಿರುವುದರಿಂದ ಮುಕ್ತರಿಂದ ಅನುಷ್ಠಿತವಾದುದು ಸಾಧನವೇ ಆಗುವುದಿಲ್ಲವೆಂದರೆ— ಅಮುಕ್ತರಿಂದ ಮಾಡಲ್ಪಟ್ಟ ಅಧಿಕವಾದ ಸಾಧನಕ್ಕೂ ಸಾಧನತ್ವಾಬಾವವೇ ಬರಬೇಕಾಗುವುದು. ಅನುಷ್ಠಾನವಾದರೂ ಮುಕ್ತರಂತೆ ಲೀಲಾರೂಪವು ಆಗುವುದು ಎಂದರೆ—) (ಮೋಕ್ಷೇಚ್ಛುಗಳಿಂದ) ಕೃಚ್ಛ್ರೇಣೈವ=ಕಷ್ಟದಿಂದಲೇ, ಸಾಧನಾತ್ = ಸಾಧನಗಳನ್ನು ಅನುಷ್ಠಾನ ಮಾಡಿದರಿಂದ, ಮುಕ್ತವತ್ = ಮುಕ್ತರ ಅನುಷ್ಠಾನದಂತೆಯೇ, (ಲೀಲೆಯಿಂದ ಅನುಷ್ಠಾನವು) ನ=ಆಗುವುದಿಲ್ಲ. (ಕಷ್ಟದಿಂದ ಮುಮುಕ್ಷುಗಳು ಸಾಧನವನ್ನು ಅನುಷ್ಠಾನಮಾಡುತ್ತಾರೆ ಎನ್ನುವ ವಿಷಯದಲ್ಲಿ ಏನು ಪ್ರಮಾಣವೆಂದರೆ) ಉದೀರ್ಯತೇ=ಇದು ಆಗಮದಿಂದ ಹೇಳಲ್ಪಡುತ್ತದೆ.

ತಾ || ಸ. ರ. ವಿ— (1) ಜ್ಞಾನಿಗಳೇ ಆದ ದೇವಾದಿಗಳಲ್ಲಿ ಒಬ್ಬನು ಮಾಡಿದ ಸಾಧನದೆಶೆಯಿಂದ ಹೆಚ್ಚು ಸಾಧನವನ್ನು ಮಾಡುವುದರಲ್ಲಿ ಮತ್ತೊಬ್ಬನಿಗೆ ಪ್ರವೃತ್ತಿಯು. ಅವನು ಮಾಡಿದ ಸಾಧನದೆಶೆಯಿಂದ ಹೆಚ್ಚು ಸಾಧನಮಾಡುವುದರಲ್ಲಿ ಮತ್ತೊಬ್ಬನ ಪ್ರವೃತ್ತಿಯು ಕಂಡದೆ. ಈ ಪ್ರವೃತ್ತಿಯು ಸಾಧ್ಯವಾದ ಮೋಕ್ಷದಲ್ಲಿ ಸಾಧನಾನುರೂಪವಾದ ವಿಶೇಷವಿಲ್ಲವಾದರೆ ಕೂಡಲಾರದು. ಪೂರ್ಣವಾದ ಜ್ಞಾನವುಳ್ಳವನು ಪ್ರಯೋಜನರಹಿತವಾದ ಕರ್ಮದಲ್ಲಿ ಪ್ರವರ್ತಿಸಲಾರನು. ಮುಕ್ತರಾದರೂ ಪೂರ್ಣಕಾಮರಾದುದರಿಂದ ಶ್ರೀ ಹರಿಯ ಧ್ಯಾನ-ಪೂಜಾ-ಪ್ರಣಾಮಾದಿಗಳಲ್ಲಿ ಲೀಲೆಯಿಂದಲೇ ಪ್ರವರ್ತಿಸುತ್ತಾರೆಂದು ಕೂಡುತ್ತದೆ. ಜ್ಞಾನಿಗಳಾದರೂ ವೈದಿಕ ಕರ್ಮಾನುಷ್ಠಾನದಲ್ಲಿ ಹೆಚ್ಚು ಹೆಚ್ಚು ಕ್ಲೇಶದಿಂದ ಪ್ರವರ್ತಿಸುವವರಾಗಿ ಫಲವಿಶೇಷವಿಲ್ಲದಿದ್ದರೂ ಪ್ರವರ್ತಿಸುತ್ತಾರೆನ್ನುವುದು ಕೂಡಲಾರದು.

**ನ್ಯಾಯಸುಧಾ—** (1) ಅಗ್ನ್ಯಾಧಾನದಿಂದ ಎಂತಹ ಸುಖವಿಶಿಷ್ಟವಾದ ಸ್ವರ್ಗವು ಸಿಗುವುದೋ, ಅಶ್ವಮೇಧದಿಂದಲೂ ಅಂತಹ ಸ್ವರ್ಗವೇ ಸಿಗುವುದಾದರೆ ಅಶ್ವಮೇಧದಲ್ಲಿ ಯಾರೊಬ್ಬನೂ ಪ್ರವೃತ್ತಿಮಾಡಲಾರನು. ಪ್ರವರ್ತಿಮಾಡಿದರೆ ಬುದ್ಧಿಯುಳ್ಳವನು ಆಗದೆಹೋದಾನು. (2) ಒಂದು ಸೇರು ಬೀಜಹಾಕಿ ಊಳಿದರಿಂದ ಎಷ್ಟು ಧಾನ್ಯವು ಲಾಭವಾಗುತ್ತದೋ, ಅಷ್ಟೇ ಲಾಭವು. ಒಂದು ಕಳಸಿಗೆ ಬೀಜ ಹಾಕಿ ಊಳಿದಪಕ್ಷದಲ್ಲಿಯೂ ಆಗುವುದಾದರೆ ಅದರಲ್ಲಿ ಯಾರೊಬ್ಬನೂ ಪ್ರವರ್ತಿಸಲಾರನು. ಅಂತಹದರದಲ್ಲಿಯೂ ಪ್ರವೃತ್ತಿಮಾಡಿದರೆ ಮಂದನಾಗಬೇಕಾಗುವನು. (3) ದೃಷ್ಟವಾದ ವೃಷ್ಟ್ಯಾದಿಗಳೂ ಅದೃಷ್ಟವಾದ ಧರ್ಮಾದಿಗಳೂ

ಸಾಧನದಲ್ಲಿ ಅಂತರ್ಭೂತವೇ ಆಗಿರುವುದರಿಂದ ವ್ಯಭಿಚಾರವನ್ನು ಶಂಕಿಸಕೂಡದು. (4) ಹೀಗೆಯೇ ೧ 'ಮಾನುಷಾದಯಃ ದೇವಾದಿಭ್ಯಃ ಅಲ್ಪಮುಕ್ತಿಫಲಭಾಜಃ ತದಪೇಕ್ಷಯಾ ಅಲ್ಪ ಸಾಧನವತ್ವಾತ್ ಯಃ ಯದಪೇಕ್ಷಯಾ ಅಲ್ಪಸಾಧನವಾನ್ ಸಃ ತತಃ ಅಲ್ಪಫಲವಾನ್ ದೃಷ್ಟಃ' ಮನುಷ್ಯಾದಿಗಳು ದೇವಾದಿಗಳಿಗಿಂತ ಅಲ್ಪವಾದ ಮುಕ್ತಿಫಲವನ್ನು ಹೊಂದಿದವರು, ದೇವಾದಿ ಗಳಿಗಿಂತ ಅಲ್ಪಸಾಧನವುಳ್ಳವರಾದುದರಿಂದ, ಯಾರು ಯಾರಕ್ಕಿಂತ ಅಲ್ಪಸಾಧನವುಳ್ಳವನೋ ಅವನು ಅವನಕ್ಕಿಂತ ಅಲ್ಪಫಲವುಳ್ಳವನಾಗಿ ಕಾಣಲ್ಪಟ್ಟಿರುತ್ತಾನೆ, ಸಮ್ಮತನಂತೆ. ೨ 'ದೇವಾ ದಯಃ ಮಾನುಷಾಂತಾಃ ಮುಕ್ತೌ ಫಲತಾರತಮ್ಯವಂತಃ ಸಾಧನತಾರತಮ್ಯೋಪೇತತ್ವಾತ್ ಯೇ ಯತ್ಸಾಧನತಾರತಮ್ಯವಂತಃ ತೇ ತತ್ಸಾಧನತಾರತಮ್ಯವಂತಃ ಯಥಾ ಸಮ್ಮತಾಃ' ದೇವತೆಗಳೇ ಮೊದಲಾದ ಮನುಷ್ಯಪರ್ಯಂತರಾದವರು ಮುಕ್ತಿಯಲ್ಲಿ ಫಲತಾರತಮ್ಯವುಳ್ಳವರು ಸಾಧನ ತಾರತಮ್ಯದಿಂದ ಕೂಡಿರುವುದರಿಂದ ಯಾರು ಯಾವ ಸಾಧನದ ತಾರತಮ್ಯವುಳ್ಳವರೋ ಅವರು ಅದರ ಸಾಧನದ ತಾರತಮ್ಯವುಳ್ಳವರು, ಸಮ್ಮತರಂತೆ. ೩ 'ಬ್ರಹ್ಮಾದಿಮಾನುಷಾಂತೈರನು ಷ್ಠಿತಾನಿ ಮೋಕ್ಷಸಾಧನಾನಿ ತಾರತಮ್ಯವತ್ಫಲವಂತಿ ತಾರತಮ್ಯವತ್ವಾತ್ ಸಮ್ಮತವತ್' ಬ್ರಹ್ಮ ನನ್ನು ಆರಂಭಿಸಿ ಮನುಷ್ಯಪರ್ಯಂತರಾದವರಿಂದ ಅನುಷ್ಠಿತಗಳಾದ ಮೋಕ್ಷಸಾಧನಗಳು ತಾರತಮ್ಯದಿಂದ ಕೂಡಿರುವ ಫಲವುಳ್ಳವುಗಳು ತಾರತಮ್ಯವಿದ್ದಪ್ರಯುಕ್ತ, ಸಮ್ಮತರಂತೆ. ೪ 'ಬ್ರಹ್ಮಾದೀನಾಂ ಮಾನುಷಾಂತಾನಾಂ ಮೋಕ್ಷಫಲಾನಿ ತಾರತಮ್ಯವಂತಿ ತಾರತಮ್ಯವತ್ಸಾಧನ ಸಾಧ್ಯತ್ವಾತ್ ಸಮ್ಮತವತ್' ಇತ್ಯಾದ್ಯನುಮಾನಗಳನ್ನು ಇಲ್ಲಿ ತಿಳಿಯಬೇಕು ॥೩೯॥ ೪೦ ॥ ೪೧ ॥

ಆ ಆಗಮಗಳನ್ನು ಪಠನಮಾಡುತ್ತಾರೆ—

ಮೂ ॥ ದಶಕಲ್ಪಂ ತಪಶ್ಚೀರ್ಣಂ ರುದ್ರೇಣ ಲವಣಾರ್ಣವೇ ।
ತ್ಯಕ್ತ್ವಾ ಸುಖಾನಿ ಸರ್ವಾಣಿ ಕ್ಲಿಷ್ಟೇನ ಲವಣಾಂಭಸಾ ॥ ೪೨ ॥
ಶಕ್ರೇಣ ವರ್ಷಕೋಟೀಶ್ಚ ಧೂಮಃ ಪೀತೋಽತಿದುಃಖತಃ ।
ವರ್ಷಾಯುತಂ ಚ ಸೂರ್ಯೇಣ ತಪೋಽವಾಕ್ ಶಿರಸಾ ಕೃತಂ ॥ ೪೩ ॥
ಸುದುಃಖೇನ ಸುಖಂ ತ್ಯಕ್ತ್ವಾ ಧರ್ಮೇಣಾಕಾಶಶಾಯಿನಾ ।
ಪೀತಾ ಮರೀಚಯೋ ವರ್ಷಸಾಹಸ್ರಮಿತಿ ಸಾದರಂ ॥ ೪೪ ॥
ಅತಿಕೃಚ್ಛ್ರೇಣ ಕುರ್ವಂತಿ ಯತ್ನಂ ಬ್ರಹ್ಮವಿದೋಽಪಿ ಚ (ಹಿ) ।
ಇತ್ಯೇತದಖಿಲಂ ಮೋಕ್ಷವಿಶೇಷಾಭಾವತಃ ಕಥಂ ॥ ೪೫ ॥

ಅ ॥ ದಶಕಲ್ಪಂ = ಹತ್ತುಕಲ್ಪಪರ್ಯಂತ (ಮಹಾಕಲ್ಪವಲ್ಲ, ದೈನಂದಿನಕಲ್ಪವು. ಅಂದರೆ— ಕಲ್ಪವು ಬ್ರಹ್ಮನ ದಿವಸವು.) ಅಥವಾ ಹತ್ತುಕಲ್ಪವುಳ್ಳ, ತಪಃ=ತಪಸ್ಸು, ರುದ್ರೇಣ= ರುದ್ರನಿಂದ, ಸರ್ವಾಣಿ=ಎಲ್ಲಾ, ಸುಖಾನಿ=ಸುಖಗಳನ್ನು, ತ್ಯಕ್ತ್ವಾ=ಬಿಟ್ಟು, ಕ್ಲಿಷ್ಟೇನ=ಕ್ಲೇಶ ಸಾಧ್ಯವಾದ, ಲವಣಾಂಭಸಾ=ಲವಣಜಲದಿಂದ, (ಅಂದರೆ— ಉಪ್ಪುನೀರನ್ನು ಕುಡಿಯುತ್ತಾ) ಲವಣಾರ್ಣವೇ=ಲವಣಸಮುದ್ರದಲ್ಲಿ, ಚೀರ್ಣಂ=ಮಾಡಲ್ಪಟ್ಟಿತು. ಶಕ್ರೇಣ=ದೇವೇಂದ್ರನಿಂದ, ವರ್ಷಕೋಟೀಶ್ಚ = ಕೋಟಿ (೧೦೦೦೦೦೦೦) ವರ್ಷಗಳಲ್ಲಿ, ಅತಿದುಃಖತಃ = ಅತಿದುಃಖದಿಂದ. ಧೂಮಃ=ಹೋಮಧೂಮವು, ಪೀತಃ=ಕುಡಿಯಲ್ಪಟ್ಟಿತು. ಸೂರ್ಯೇಣ = ಸೂರ್ಯನಿಂದ, ವರ್ಷಾಯುತಂ = ಅಯುತ (೧೦೦೦೦) ವರ್ಷಗಳಲ್ಲಿ, ಅವಾಕ್ ಶಿರಸಾ = ಕೆಳಗೆ ಮಾಡಲ್ಪಟ್ಟ

ನಿಯಮದಿಂದ ಆಯಾಯ ಪ್ರಮಾಣಗಳಿಂದ ಉಪಲಬ್ಧರಾಗಿರುತ್ತಾರೆ.) (ಯಾವನು ಅಗ್ನ್ಯಾಧಾನಾದಿ ಫಲಗಳಿಗೆ ತಾರತಮ್ಯವನ್ನು ತಿಳಿಯದೆಯಿದ್ದವನಾಗಿ ಕೃಷ್ಯಾದಿಫಲವಾದ ಧಾನ್ಯಾದಿಗಳಲ್ಲಿ ತಾರತಮ್ಯವು ಕಾರಣಾಂತರಾಧೀನವು. ಕೃಷ್ಯಾದಿ ಸಾಧನಗಳ ತಾರತಮ್ಯಾಧೀನವಲ್ಲವೆಂದು ತಿಳಿಯುವವನಾಗಿ ದೃಷ್ಟಾಂತಗಳಲ್ಲಿ ವಿಪ್ರತಿಪತ್ತಿ ಮಾಡುತ್ತಾನೋ ಆತನನ್ನು ಕುರಿತು ಹೇಳುತ್ತಾನೆ.) ನೋ ಚೇತ್=(ಲೋಕದಲ್ಲಿಯೂ ವೇದದಲ್ಲಿಯೂ ಸಾಧನಾಧಿಕ್ಯದಿಂದ ಸಾಧ್ಯಾಧಿಕ್ಯವು) ಆಗದೆಹೋದರೆ, (ಆಗ ಯಾರೂ ಕೂಡ,) ಅಂಜಸಾ=ಚೆನ್ನಾಗಿ, ಯತ್ನಂ=ಸಾಧನಾತಿಶಯಾನುಷ್ಠಾನವನ್ನು, ನ ಕುರ್ಯುಃ=ಮಾಡಲಾರರು. ಸಮವಾಗಿಯೇ ಮಾಡಿಯಾರು. ಇಲ್ಲದಿದ್ದರೆ ಪ್ರೇಕ್ಷಾವುಳ್ಳವರು ಆಗದೆಹೋಗುವರು.) (ಮುಕ್ತರೂ ಕೂಡ ಉಪಾಸನವನ್ನೂ, ಕರ್ಮವನ್ನೂ ಮಾಡುತ್ತಾರೆ ಎಂದು ಗುಣೋಪಸಂಹಾರಪಾದದಲ್ಲಿ ಸಮರ್ಥಿಸಲ್ಪಟ್ಟದೆ. ಅವರ ಅನುಷ್ಠಾನವು ಏಕಪ್ರಕಾರವೇ ಎನ್ನುವಲ್ಲಿ ನಿಯಾಮಕವಿಲ್ಲ. ತಥಾಚ ಅವರಿಗೆ ಉಪಾಸನಾದಿತಾರತಮ್ಯವಿದ್ದರೂ ಉಪಾಸನಾಪ್ರಯುಕ್ತ ಫಲತಾರತಮ್ಯವಿಲ್ಲದಿರುವುದರಿಂದ ತರ್ಕಸಹಿತಗಳಾದ ಅನುಮಾನಗಳು ಅಯುಕ್ತಗಳೇ. ಸಾಧ್ಯವಿಲ್ಲದಿರುವುದರಿಂದ ಮುಕ್ತರಿಂದ ಅನುಷ್ಠಿತವಾದುದು ಸಾಧನವೇ ಆಗುವುದಿಲ್ಲವೆಂದರೆ— ಅಮುಕ್ತರಿಂದ ಮಾಡಲ್ಪಟ್ಟ ಅಧಿಕವಾದ ಸಾಧನಕ್ಕೂ ಸಾಧನತ್ವಾಭಾವವೇ ಬರಬೇಕಾಗುವುದು. ಅನುಷ್ಠಾನವಾದರೂ ಮುಕ್ತರಂತೆ ಲೀಲಾರೂಪವು ಆಗುವುದು ಎಂದರೆ—) (ಮೋಕ್ಷೇಚ್ಛುಗಳಿಂದ) ಕೃಚ್ಛ್ರೇಣೈವ=ಕಷ್ಟದಿಂದಲೇ, ಸಾಧನಾತ್ = ಸಾಧನಗಳನ್ನು ಅನುಷ್ಠಾನ ಮಾಡಿದರಿಂದ, ಮುಕ್ತವತ್ = ಮುಕ್ತರ ಅನುಷ್ಠಾನದಂತೆಯೇ, (ಲೀಲೆಯಿಂದ ಅನುಷ್ಠಾನವು) ನ=ಆಗುವುದಿಲ್ಲ. (ಕಷ್ಟದಿಂದ ಮುಮುಕ್ಷುಗಳು ಸಾಧನವನ್ನು ಅನುಷ್ಠಾನಮಾಡುತ್ತಾರೆ ಎನ್ನುವ ವಿಷಯದಲ್ಲಿ ಏನು ಪ್ರಮಾಣವೆಂದರೆ) ಉದೀರ್ಯತೇ=ಇದು ಆಗಮದಿಂದ ಹೇಳಲ್ಪಡುತ್ತದೆ.

**ತಾ ॥ ಸ. ರ. ವಿ—** (1) ಜ್ಞಾನಿಗಳೇ ಆದ ದೇವಾದಿಗಳಲ್ಲಿ ಒಬ್ಬನು ಮಾಡಿದ ಸಾಧನದೆಶೆಯಿಂದ ಹೆಚ್ಚು ಸಾಧನವನ್ನು ಮಾಡುವುದರಲ್ಲಿ ಮತ್ತೊಬ್ಬನಿಗೆ ಪ್ರವೃತ್ತಿಯು. ಅವನು ಮಾಡಿದ ಸಾಧನದೆಶೆಯಿಂದ ಹೆಚ್ಚು ಸಾಧನಮಾಡುವುದರಲ್ಲಿ ಮತ್ತೊಬ್ಬನ ಪ್ರವೃತ್ತಿಯು ಕಂಡದೆ. ಈ ಪ್ರವೃತ್ತಿಯು ಸಾಧ್ಯವಾದ ಮೋಕ್ಷದಲ್ಲಿ ಸಾಧನಾನುರೂಪವಾದ ವಿಶೇಷವಿಲ್ಲವಾದರೆ ಕೂಡಲಾರದು. ಪೂರ್ಣವಾದ ಜ್ಞಾನವುಳ್ಳವನು ಪ್ರಯೋಜನರಹಿತವಾದ ಕರ್ಮದಲ್ಲಿ ಪ್ರವರ್ತಿಸಲಾರನು. ಮುಕ್ತರಾದರೂ ಪೂರ್ಣಕಾಮರಾದುದರಿಂದ ಶ್ರೀ ಹರಿಯ ಧ್ಯಾನ-ಪೂಜಾ-ಪ್ರಣಾಮಾದಿಗಳಲ್ಲಿ ಲೀಲೆಯಿಂದಲೇ ಪ್ರವರ್ತಿಸುತ್ತಾರೆಂದು ಕೂಡುತ್ತದೆ. ಜ್ಞಾನಿಗಳಾದರೂ ವೈದಿಕ ಕರ್ಮಾನುಷ್ಠಾನದಲ್ಲಿ ಹೆಚ್ಚು ಹೆಚ್ಚು ಕ್ಲೇಶದಿಂದ ಪ್ರವರ್ತಿಸುವವರಾಗಿ ಫಲವಿಶೇಷವಿಲ್ಲದಿದ್ದರೂ ಪ್ರವರ್ತಿಸುತ್ತಾರೆನ್ನುವುದು ಕೂಡಲಾರದು.

**ನ್ಯಾಯಸುಧಾ—** (1) ಅಗ್ನ್ಯಾಧಾನದಿಂದ ಎಂತಹ ಸುಖವಿಶಿಷ್ಟವಾದ ಸ್ವರ್ಗವು ಸಿಗುವುದೋ, ಅಶ್ವಮೇಧದಿಂದಲೂ ಅಂತಹ ಸ್ವರ್ಗವೇ ಸಿಗುವುದಾದರೆ ಅಶ್ವಮೇಧದಲ್ಲಿ ಯಾರೊಬ್ಬನೂ ಪ್ರವೃತ್ತಿಮಾಡಲಾರನು. ಪ್ರವರ್ತಿಮಾಡಿದರೆ ಬುದ್ಧಿಯುಳ್ಳವನು ಆಗದೆಹೋದಾನು. (2) ಒಂದು ಸೇರು ಬೀಜಹಾಕಿ ಊಳಿದರಿಂದ ಎಷ್ಟು ಧಾನ್ಯವು ಲಾಭವಾಗುತ್ತದೋ, ಅಷ್ಟೇ ಲಾಭವು. ಒಂದು ಕಳಸಿಗೆ ಬೀಜ ಹಾಕಿ ಊಳಿದಪಕ್ಷದಲ್ಲಿಯೂ ಆಗುವುದಾದರೆ ಅದರಲ್ಲಿ ಯಾರೊಬ್ಬನೂ ಪ್ರವರ್ತಿಸಲಾರನು. ಅಂತಹದರದಲ್ಲಿಯೂ ಪ್ರವೃತ್ತಿಮಾಡಿದರೆ ಮಂದನಾಗಬೇಕಾಗುವನು. (3) ದೃಷ್ಟವಾದ ವೃಷ್ಟ್ಯಾದಿಗಳೂ ಅದೃಷ್ಟವಾದ ಧರ್ಮಾದಿಗಳೂ

ಸಾಧನದಲ್ಲಿ ಅಂತರ್ಭೂತವೇ ಆಗಿರುವುದರಿಂದ ವ್ಯಭಿಚಾರವನ್ನು ಶಂಕಿಸಕೂಡದು. (4) ಹೀಗೆಯೇ ೧ 'ಮಾನುಷಾದಯಃ ದೇವಾದಿಭ್ಯಃ ಅಲ್ಪಮುಕ್ತಿಫಲಭಾಜಃ ತದಪೇಕ್ಷಯಾ ಅಲ್ಪ ಸಾಧನವತ್ವಾತ್ ಯಃ ಯದಪೇಕ್ಷಯಾ ಅಲ್ಪಸಾಧನವಾನ್ ಸಃ ತತಃ ಅಲ್ಪಫಲವಾನ್ ದೃಷ್ಟಃ' ಮನುಷ್ಯಾದಿಗಳು ದೇವಾದಿಗಳಿಗಿಂತ ಅಲ್ಪವಾದ ಮುಕ್ತಿಫಲವನ್ನು ಹೊಂದಿದವರು, ದೇವಾದಿ ಗಳಿಗಿಂತ ಅಲ್ಪಸಾಧನವುಳ್ಳವರಾದುದರಿಂದ, ಯಾರು ಯಾರಕ್ಕಿಂತ ಅಲ್ಪಸಾಧನವುಳ್ಳವನೋ ಅವನು ಅವನಕ್ಕಿಂತ ಅಲ್ಪಫಲವುಳ್ಳವನಾಗಿ ಕಾಣಲ್ಪಟ್ಟಿರುತ್ತಾನೆ, ಸಮ್ಮತನಂತೆ. ೨ 'ದೇವಾದಯಃ ಮಾನುಷಾಂತಾಃ ಮುಕ್ತೌ ಫಲತಾರತಮ್ಯವಂತಃ ಸಾಧನತಾರತಮ್ಯೋಪೇತತ್ವಾತ್ ಯೇ ಯತ್ಸಾಧನತಾರತಮ್ಯವಂತಃ ತೇ ತತ್ಸಾಧನತಾರತಮ್ಯವಂತಃ ಯಥಾ ಸಮ್ಮತಾಃ' ದೇವತೆಗಳೇ ಮೊದಲಾದ ಮನುಸ್ಯಪರ್ಯಂತರಾದವರು ಮುಕ್ತಿಯಲ್ಲಿ ಫಲತಾರತಮ್ಯವುಳ್ಳವರು ಸಾಧನ ತಾರತಮ್ಯದಿಂದ ಕೂಡಿರುವುದರಿಂದ ಯಾರು ಯಾವ ಸಾಧನದ ತಾರತಮ್ಯವುಳ್ಳವರೋ ಅವರು ಅದರ ಸಾಧನದ ತಾರತಮ್ಯವುಳ್ಳವರು, ಸಮ್ಮತರಂತೆ. ೩ 'ಬ್ರಹ್ಮಾದಿಮಾನುಷಾಂತೈರನುಷ್ಠಿತಾನಿ ಮೋಕ್ಷಸಾಧನಾನಿ ತಾರತಮ್ಯವತ್ಫಲವಂತಿ ತಾರತಮ್ಯವತ್ವಾತ್ ಸಮ್ಮತವತ್' ಬ್ರಹ್ಮನನ್ನು ಆರಂಭಿಸಿ ಮನುಷ್ಯಪರ್ಯಂತರಾದವರಿಂದ ಅನುಷ್ಠಿತಗಳಾದ ಮೋಕ್ಷಸಾಧನಗಳು ತಾರತಮ್ಯದಿಂದ ಕೂಡಿರುವ ಫಲವುಳ್ಳವುಗಳು ತಾರತಮ್ಯವಿದ್ದಪ್ರಯುಕ್ತ, ಸಮ್ಮತರಂತೆ. ೪ 'ಬ್ರಹ್ಮಾದೀನಾಂ ಮಾನುಷಾಂತಾನಾಂ ಮೋಕ್ಷಫಲಾನಿ ತಾರತಮ್ಯವಂತಿ ತಾರತಮ್ಯವತ್ಸಾಧನ ಸಾಧ್ಯತ್ವಾತ್ ಸಮ್ಮತವತ್' ಇತ್ಯಾದ್ಯನುಮಾನಗಳನ್ನು ಇಲ್ಲಿ ತಿಳಿಯಬೇಕು ॥೩೯॥ ೪೦ ॥ ೪೧ ॥

ಆ ಆಗಮಗಳನ್ನು ಪಠನಮಾಡುತ್ತಾರೆ—

ಮೂ ॥ ದಶಕಲ್ಪಂ ತಪಶ್ಚೀರ್ಣಂ ರುದ್ರೇಣ ಲವಣಾರ್ಣವೇ ।
ತ್ಯಕ್ತ್ವಾ ಸುಖಾನಿ ಸರ್ವಾಣಿ ಕ್ಲಿಷ್ಟೇನ ಲವಣಾಂಭಸಾ ॥ ೪೨ ॥
ಶಕ್ರೇಣ ವರ್ಷಕೋಟೀಶ್ಚ ಧೂಮಃ ಪೀತೋಽತಿದುಃಖತಃ ।
ವರ್ಷಾಯುತಂ ಚ ಸೂರ್ಯೇಣ ತಪೋಽವಾಕ್ ಶಿರಸಾ ಕೃತಂ ॥ ೪೩ ॥
ಸುದುಃಖೇನ ಸುಖಂ ತ್ಯಕ್ತ್ವಾ ಧರ್ಮೇಣಾಕಾಶಶಾಯಿನಾ ।
ಪೀತಾ ಮರೀಚಯೋ ವರ್ಷಸಾಹಸ್ರಮಿತಿ ಸಾದರಂ ॥ ೪೪ ॥
ಅತಿಕೃಚ್ಛ್ರೇಣ ಕುರ್ವಂತಿ ಯತ್ನಂ ಬ್ರಹ್ಮವಿದೋಽಪಿ ಚ (ಹಿ) ।
ಇತ್ಯೇತದಖಿಲಂ ಮೋಕ್ಷವಿಶೇಷಾಭಾವತಃ ಕಥಂ ॥ ೪೫ ॥

ಅ ॥ ದಶಕಲ್ಪಂ = ಹತ್ತುಕಲ್ಪಪರ್ಯಂತ (ಮಹಾಕಲ್ಪವಲ್ಲ, ದೈನಂದಿನಕಲ್ಪವು. ಅಂದರೆ— ಕಲ್ಪವು ಬ್ರಹ್ಮನ ದಿವಸವು.) ಅಥವಾ ಹತ್ತುಕಲ್ಪವುಳ್ಳ, ತಪಃ=ತಪಸ್ಸು, ರುದ್ರೇಣ= ರುದ್ರನಿಂದ, ಸರ್ವಾಣಿ=ಎಲ್ಲಾ, ಸುಖಾನಿ=ಸುಖಗಳನ್ನು, ತ್ಯಕ್ತ್ವಾ=ಬಿಟ್ಟು, ಕ್ಲಿಷ್ಟೇನ=ಕ್ಲೇಶ ಸಾಧ್ಯವಾದ, ಲವಣಾಂಭಸಾ=ಲವಣಜಲದಿಂದ, (ಅಂದರೆ— ಉಪ್ಪುನೀರನ್ನು ಕುಡಿಯುತ್ತಾ) ಲವಣಾರ್ಣವೇ=ಲವಣಸಮುದ್ರದಲ್ಲಿ, ಚೀರ್ಣಂ=ಮಾಡಲ್ಪಟ್ಟಿತು. ಶಕ್ರೇಣ=ದೇವೇಂದ್ರನಿಂದ, ವರ್ಷಕೋಟೀಶ್ಚ = ಕೋಟಿ (೧೦೦೦೦೦೦೦) ವರ್ಷಗಳಲ್ಲಿ, ಅತಿದುಃಖತಃ = ಅತಿದುಃಖದಿಂದ, ಧೂಮಃ=ಹೋಮಧೂಮವು, ಪೀತಃ=ಕುಡಿಯಲ್ಪಟ್ಟಿತು. ಸೂರ್ಯೇಣ = ಸೂರ್ಯನಿಂದ, ವರ್ಷಾಯುತಂ = ಅಯುತ (೧೦೦೦೦) ವರ್ಷಗಳಲ್ಲಿ, ಅವಾಕ್ ಶಿರಸಾ = ಕೆಳಗೆ ಮಾಡಲ್ಪಟ್ಟ

ಶಿರಸ್ಸಿನಿಂದ, ತಪಃ=ತಪಸ್ಸು, ಕೃತಂ = ಮಾಡಲ್ಪಟ್ಟಿತು. ಆಕಾಶಶಾಯಿನಾ = ಆಕಾಶದಲ್ಲಿ ಮಲಗಿಕೊಂಡು ಇರತಕ್ಕ, ಧರ್ಮೇಣ = ಯಮನಿಂದ, ಸುದುಃಖೇನ = ಅತಿದುಃಖದಿಂದ, ಸುಖಂ=ಸುಖವನ್ನು, ತ್ಯಕ್ತ್ವಾ=ಬಿಟ್ಟು, ವರ್ಷಸಾಹಸ್ರಂ=ಸಹಸ್ರ (೧೦೦೦)ವರ್ಷಪರ್ಯಂತ, ಅತಿಸಾದರಂ=ಅತ್ಯಂತ ಆದರಪೂರ್ವಕ ಹೇಗೆ ಆದೀತೋ ಹಾಗೆ, ಮರೀಚಯಃ=ಕಿರಣಗಳು, ಪೀತಾಃ=ಕುಡಿಯಲ್ಪಟ್ಟವು. ಬ್ರಹ್ಮವಿದೋಽಪಿ=ಬ್ರಹ್ಮಜ್ಞಾನಿಗಳೂ ಕೂಡ, ಅತಿ ಕೃಚ್ಛ್ರೇಣ= ಅತಿ ಕಷ್ಟದಿಂದ, ಯತ್ನಂ=ಪ್ರಯತ್ನವನ್ನು, ಕುರ್ವಂತಿ=ಮಾಡುತ್ತಾರೆ. ಇತಿ=ಹೀಗೆ (ಆಗಮ ವಾಕ್ಯವು ಸಮಾಪ್ತವಾಯಿತು.) (ಅನುಮಾನವನ್ನುಪಸಂಹಾರಮಾಡುತ್ತಾರೆ.) ಏತದಖಿಲಂ= ಇವೆಲ್ಲಾ (ಅಂದರೆ ಕಷ್ಟದಿಂದ ಸಾಧನಾನುಷ್ಠಾನವು,) ಮೋಕ್ಷವಿಶೇಷಾಭಾವತಃ = ಮೋಕ್ಷದಲ್ಲಿ ವೈಚಿತ್ರ್ಯವಿಲ್ಲದಿದ್ದರೆ, ಕಥಂ ಹೇಗೆ ಕೂಡುತ್ತದೆ? (ಆದಕಾರಣ ಇದರಿಂದ ಮೋಕ್ಷದಲ್ಲಿ ವಿಶೇಷವು ಸಿದ್ಧವಾಯಿತು.) ॥ ೪೨ ॥ ೪೩ ॥ ೪೪ ॥ ೪೫ ॥

'ಪರಮಂ ಸಾಮ್ಯಮುಪೈತಿ' ಇತ್ಯಾದಿ ಶ್ರುತಿಗಳಿಂದ ವಿರುದ್ಧವಾಗಿರುವುದರಿಂದ ಮುಕ್ತಿಯಲ್ಲಿ ತಾರತಮ್ಯಾನುಮಾನವು ಬಾಧಿತವಾಯಿತು ಎಂದರೆ— ಹೀಗೆ ಹೇಳಕೂಡದು. ಶ್ರುತಿಯು ಶ್ರುತಿಸ್ಮೃತಿಗಳಿಂದ ಬಾಧಿತವಾಗಿರುವುದರಿಂದ ಶ್ರುತಿಗೆ ಬಾಧಕತ್ವವು ಕೂಡಲಾರದು ಎನ್ನುವ ಅಭಿಪ್ರಾಯದಿಂದ ಮೋಕ್ಷದಲ್ಲಿ ತಾರತಮ್ಯವನ್ನು ಹೇಳತಕ್ಕ ಶ್ರುತಿಸ್ಮೃತಿಗಳನ್ನು ಹೇಳುತ್ತಾರೆ—

ಮೂ ॥ ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।
ಇತಿ ಮೋಕ್ಷವಿಶೇಷಶ್ಚ ಸ್ವಯಂ ಭಗವತೋದಿತಃ ॥ ೪೬ ॥
ತಮೇವ ಯೂಯಂ ಭಜತಾತ್ಮವೃತ್ತಿಭಿಃ
ಮನೋವಚಃ ಕಾಯಗುಣೈಃ ಸ್ವಕರ್ಮಭಿಃ ।
ಅಮಾಯಿನಃ ಕಾಮದುಘಾಂಘ್ರಿಪಂಕಜಂ
ಯಥಾಧಿಕಾರಾವಸಿತಾರ್ಥಸಿದ್ಧಯೇ ॥ ೪೭ ॥
ಅಕ್ಷಣ್ವಂತಃ ಕರ್ಣವಂತಃ ಸಖಾಯೋ
ಮನೋಜವೇಷ್ವಸಮಾ ಬಭೂವುಃ ।
ಆದಘ್ನಾಸ ಉಪಕಕ್ಷಾಸ ಉ ತ್ವೇ—
ಹ್ರದಾ ಇವ ಸ್ನಾತ್ವಾ ಉ ತ್ವೇ ದದೃಶ್ರೇ ॥ ೪೮ ॥
ಇತ್ಯಾದೀನಿ ಚ ವಾಕ್ಯಾನಿ ತಾರತಮ್ಯಂ ವಿಮುಕ್ತಿಗಂ ।
ವ್ಯಕ್ತಂ ವದಂತಿ ತತ್ಕೇನ ಸಾಮ್ಯಂ ಮುಕ್ತೇಷು ಗಮ್ಯತೇ ॥ ೪೯ ॥

ಅ ॥ ದೈವೀ=ದೇವತೆಗಳಿಗೆ ಸಂಬಂಧಿಯಾದ, ಸಂಪತ್=ಯೋಗ್ಯತೆಯು, ವಿಮೋಕ್ಷಾಯ = ವಿಶಿಷ್ಟ ಮೋಕ್ಷಕ್ಕೋಸ್ಕರವೂ, ಆಸುರೀ = ಅಸುರಸಂಬಂಧಿಯಾದ ಸಂಪತ್ತು, ನಿಬಂಧಾಯ=ನೀಚಸ್ಥಾನದಲ್ಲಿ ಅಂಧಂತಮಸ್ಸಿನಲ್ಲಿ ಬಂಧಕ್ಕಾಗಿಯೇ, ಮತಾ=ಸಮ್ಮತವಾಗಿದೆ. ಇತಿ=ಈ ಪ್ರಕಾರ, ಮೋಕ್ಷವಿಶೇಷಶ್ಚ=ಮುಕ್ತಿವಿಶೇಷವಾದರೂ, ಭಗವತಾ=ವೇದವ್ಯಾಸರಿಂದ, ಸ್ವಯಂ ಚ=ತಾನಾಗಿಯೇ, ಉದಿತಃ=ಹೇಳಲ್ಪಟ್ಟದೆ. (೨) (ಮುನಿಗಳನ್ನು ಕುರಿತು ಪೃಥುರಾಜನ ವಾಕ್ಯವೂ) ಆತ್ಮವೃತ್ತಿಭಿಃ=ಸರ್ವ ಕರ್ಮಗಳನ್ನೂ ಶ್ರೀ ಹರಿಯಲ್ಲಿಯೇ ಅರ್ಪಿಸಬೇಕೆನ್ನುವ ಬುದ್ಧಿಯಿಂದ ಶ್ರೀ ಹರಿಯಲ್ಲಿಯಲ್ಲಿರತಕ್ಕ, ಮನೋವಚಃ ಕಾಯಗುಣೈಃ=ಮನಸ್ಸು-

ವಚನ-ಶರೀರ-ಕಾರ್ಯಗಳಾದ, ಸ್ವಕರ್ಮಭಿಃ=ತಂತಮ್ಮ ಕರ್ಮಗಳಿಂದ, ಯೂಯಂ=ನೀವು, ಅಮಾಯಿನಃ = ಕಪಟರಹಿತರಾಗಿ ಅಂದರೆ ಕಾಮರಹಿತರಾಗಿ, ಯಥಾಧಿಕಾರಾವಸಿತಾರ್ಥ ಸಿದ್ಧಯೇ=ಯೋಗ್ಯತಾನುಸಾರವಾಗಿ ನಿಶ್ಚಿತವಾದ ಮೋಕ್ಷರೂಪವಾದ ಅರ್ಥದ ಸಿದ್ಧಿಗೋಸ್ಕರ, ಕಾಮದುಘಾಂಘ್ರಿಪಂಕಜಂ=ಅಭೀಷ್ಟವನ್ನು ಕೊಡತಕ್ಕ ಪಾದಪದ್ಮವುಳ್ಳ, ತಮೇವ=ಆ ಶ್ರೀಹರಿಯನ್ನೇ, ಭಜತ=ಸೇವಿಸಿರಿ. (೩) ಅಕ್ಷಣ್ವಂತಃ=ಪ್ರಶಸ್ತಗಳಾದ ಅಕ್ಷಿಗಳುಳ್ಳ, ಕರ್ಣವಂತಃ= ಪ್ರಶಸ್ತ ಕಿವಿಗಳುಳ್ಳ (ಅಂದರೆ— ಸಮಸ್ತ ಇಂದ್ರಿಯಫಲಗಳನ್ನು ಹೊಂದಿರತಕ್ಕ) ಸಖಾಯಃ= ಪರಸ್ಪರ ಮಿತ್ರರಾದ ಮುಕ್ತರೂ, ಮನೋಜವೇಷು=ಜ್ಞಾನಾದಿ ಗುಣಗಳಲ್ಲಿ, ಅಸಮಾಃ=ತಾರತಮ್ಯದಿಂದ ಕೂಡಿದವರು, ಬಭೂವುಃ=ಆದರು. (ಭಗವತ್ಸಾಮೀಪ್ಯದಲ್ಲಿಯೂ ತಾರತಮ್ಯವು ಹೇಳಲ್ಪಡುತ್ತದೆ.)(ಅವರಲ್ಲಿಯೂ ಕೆಲವರು) ಆದಘ್ನಾಸಃ='ಆಸ್ಯಂ ಪರಿಮಾಣಂ ಅಸ್ಯ' ಎನ್ನುವ ವ್ಯುತ್ಪತ್ತಿಯಿಂದ ಆದಘ್ನಂ ಆಸ್ಯಪರಿಮಿತವಾಗಿರತಕ್ಕ ಅಮೃತವು ಸ್ಥಾನವಾಗಿರುವವರು, (ಅಂದರೆ ಆಸ್ಯಪರಿಮಾಣವಾದ ಸುಧಾಸಮುದ್ರದಲ್ಲಿ ಕ್ರೀಡಿಸಿಕೊಂಡು ಇರುವವರು ಎಂದು ದೂರತ್ವವು ಹೇಳಲ್ಪಡುತ್ತದೆ.) ಅಥವಾ ಚೆನ್ನಾಗಿ ಅಮೃತಸಮುದ್ರದಲ್ಲಿ ಮುಳುಗಿದವರು, ತ್ವೇ= ಕೆಲವರು, ಉಪಕಕ್ಷಾಸ ಏವ=ವನವನ್ನು ಹೊಂದಿದವರೇ. (ಅಂದರೆ ಶ್ವೇತದ್ವೀಪದಲ್ಲಿರತಕ್ಕ ವನದಲ್ಲಿ ಕ್ರೀಡೆಯಲ್ಲಿ ಆಸಕ್ತರಾದವರೇ, (ಎಂದು ಮಧ್ಯಮತ್ವವು ಹೇಳಲ್ಪಡುತ್ತದೆ.) ತ್ವೇ ಉ= ಕೆಲವರು, ಸ್ನಾತ್ವಾಃ=ಸ್ನಾನಮಾಡಲರ್ಹಗಳಾದ, ಹ್ರದಾ ಇವ=ಹ್ರದಗಳಂತೆ, (ಪರಮೇಶ್ವರನನ್ನು) ದದೃಶ್ರೇ=ನೋಡಿದರು. (ಇದರಿಂದ ಅತಿ ಸಾಮೀಪ್ಯವು ಹೇಳಲ್ಪಡುತ್ತದೆ.) ('ಶ್ರುತ್ವಾ ವಿಷ್ಣುಂ' ಇತ್ಯಾದಿ ಸ್ಮೃತಿಗಳಿಂದ ಈ ಮಂತ್ರವು ವ್ಯಾಖ್ಯಾತವಾಗಿರುವುದರಿಂದ ಅರ್ಥಾಂತರವನ್ನು ಕಲ್ಪಿಸಕೂಡದು.) ಇತ್ಯಾದೀನಿ ಚ=ಇವೇ ಮೊದಲಾಗಿವುಳ್ಳ, ವಾಕ್ಯಾನಿ = ವಾಕ್ಯಗಳು, ವಿಮುಕ್ತಿಗಂ=ಮೋಕ್ಷದಲ್ಲಿರತಕ್ಕ, ತಾರತಮ್ಯಂ = ನೀಚೋಚ್ಚಭಾವವನ್ನು, ವ್ಯಕ್ತಂ=ಸ್ಪಷ್ಟವಾಗಿ, ಅಂದರೆ— ನಿರವಕಾಶವಾಗಿ, ವದಂತಿ=ಹೇಳುತ್ತವೆ. ತತ್=ಆದ ಕಾರಣ, ನಿರವಕಾಶ ಶ್ರುತಿ ಸ್ಮೃತಿಗಳಿಂದ ಬಾಧಿತವಾದ ಪ್ರಯುಕ್ತ, ಮುಕ್ತೇಷು=ಮುಕ್ತರಲ್ಲಿ, ಸಾಮ್ಯಂ=ಸಾಮ್ಯವು, ಕೇನ=ಯಾವುದರಿಂದ, ಗಮ್ಯತೇ=ತಿಳಿಯಲ್ಪಡುತ್ತದೆ? (ಯಾವುದರಿಂದಲೂ ತಿಳಿಯಲ್ಪಡುವುದಿಲ್ಲ.) ('ಪರಮಂ ಸಾಮ್ಯಮುಪೈತಿ' ಎಂದುದಾಹೃತವಾದ ವಾಕ್ಯವು ಸಾಮ್ಯಪ್ರತಿಪಾದಕವಲ್ಲ.)

**ತಾ ॥ ಸ. ರ. ವಿ—** (1) **'ಶ್ರುತ್ವಾ ವಿಷ್ಣುಂ ಕರ್ಣಫಲಂ ಪ್ರಾಪ್ತಾ ಸ್ತ್ವಾತ್ಕರ್ಣ ಸಂಯುತಾಃ । ಅಕ್ಷಣ್ವಂತೋ ದರ್ಶನಾಚ್ಚ ವಿಷ್ಣೋರ್ಮುಕ್ತಾಸ್ತು ಯೇ ಗಣಾಃ । ತಾರತಮ್ಯಂ ಚ ತೇಷಾಂ ತು ಶ್ರುತಾವುದಿತಮಂಜಸಾ । ಕ್ಷೀರಸಾಗರದಘ್ನಾಸ್ತು ಕೇಚಿತ್ತಿಷ್ಠಂತಿ ಮುಕ್ತಿಗಾಃ । ಉಪಸ್ಥಿತಾ ಬ್ರಹ್ಮವನಂ ಕೇಚಿದಶ್ವತ್ಥಮಂಡಲಂ । ಪರೇ ಹ್ರದೇ ಕೇಚಿದಪಿ ದೇವಾ ಏವ ಸದಾ ಹರಿಂ । ನಾಗಭೋಗಶಯಂ ಮುಕ್ತಾ ದದೃಶ್ರೇಽಧಿಕಮೋದಿನಃ । ಸಾಗರಾದಿಸ್ಥಿತಾ ವಿಷ್ಣುಂ ಪಶ್ಯಂತಿ ಕ್ವಚಿದೇವ ಹಿ' ॥** ಎಂದು ಬ್ರಹ್ಮಸಾರದಲ್ಲಿ ಮುಕ್ತಿವಿಷಯಕವಾದ ಈ ಶ್ರುತಿಯು ವ್ಯಾಖ್ಯಾತವಾಗಿದೆ. (2) ಎಲ್ಲಿಯಾದರೂ ಮುಕ್ತರಿಗೆ ಸಾಮ್ಯಪ್ರತಿಪಾದಕವಾದ ವಚನವಿದೆಯೋ ಅದು ದುಃಖಾದಿ ದೋಷ ರಾಹಿತ್ಯದಿಂದಲೇ ಸಾಮ್ಯ ಅಭಿಪ್ರಾಯವುಳ್ಳದ್ದು. ಸರ್ವಗುಣಗಳಲ್ಲಿಯೂ ಸಾಮ್ಯವೆಂದು ಆ ಶ್ರುತಿಗೆ ಅಭಿಪ್ರಾಯವಲ್ಲ ॥ ೪೬ ॥ ೪೭ ॥ ೪೮ ॥ ೪೯ ॥

ಕಶ್ಚನ=ಯಾರೊಬ್ಬನೂ, ನ ಜಾನಾತಿ ಹಿ=ತಿಳಿಯುವುದಿಲ್ಲ. (ಇದರಿಂದ ಯಮನಿಗೆ ಬ್ರಹ್ಮಾದಿಗಳಿಂದ ವ್ಯತಿರಿಕ್ತರಾದವರಿಂದ ಜ್ಞಾನಾಧಿಕ್ಯವು ಉಕ್ತವಾಯಿತು) (ಮುಕ್ತಾನಾಂ ಎನ್ನುವುದು ಭಾಗವತ ಶ್ಲೋಕವು.) ಮಹಾಮತೇ=ಮಹಾ ಜ್ಞಾನಿಯೇ, ಮುಕ್ತಾನಾಂ=ಶರೀರಾದ್ಯಭಿಮಾನ ರಹಿತರಾದ, ಸಿದ್ಧಾನಾಂ = ಜ್ಞಾನಿಗಳ, ಅಥವಾ ಮುಕ್ತರ ಮಧ್ಯದಲ್ಲಿಯೂ ಯಾರು ವ್ಯಾಪ್ತ ದರ್ಶನಾದಿ ಮಹಾ ಸಾಧನಗಳಿಂದ ಸಿದ್ಧರಾಗಿರುತ್ತಾರೋ ಅವರ, ಕೋಟಿಷ್ವಪಿ = ಕೋಟಿಗಳಲ್ಲಿಯೂ, ನಾರಾಯಣಪರಾಯಣಃ = ನಿರುಪಾಧಿಕ ಭಕ್ತಿಯಿಂದ ನಾರಾಯಣನೊಬ್ಬನೇ ರಕ್ಷಕನಾಗಿವುಳ್ಳ, ಪ್ರಶಾಂತಾತ್ಮಾ = ಚೆನ್ನಾಗಿ ಶ್ರೀ ಹರಿಯಲ್ಲಿಯೇ ಆಸಕ್ತವಾದ ಬುದ್ಧಿಯುಳ್ಳವನು, ಸುದುರ್ಲಭಃ=ಹೊಂದಲಶಕ್ಯನು.

**ತಾ ||** ಸ. ರ. ವಿ— ದೇವಾಸುರರಿಗೆ ಯಾವ ಶ್ರೀ ಹರಿಯಿಂದ ಹರ್ಷವಿಷಾದಗಳು ಆಗುತ್ತವೋ, ಆ ಶ್ರೀ ಹರಿಯನ್ನು 'ಮದನ್ಯಃ ಕೋ ಜ್ಞಾತುಮರ್ಹತಿ' ಎಂದು ಹೇಳಿದರಿಂದ ಯಮನಿಗೆ ಇತರರಿಂದ ಅತಿಶಯಿತಜ್ಞಾನವೆಂದು ಶಂಕಿಸಕೂಡದು. 'ಬ್ರಹ್ಮೈವ ಕಿಂಚಿತ್' ಎನ್ನುವ ವಚನದಿಂದ ಬ್ರಹ್ಮನು ತಿಳಿಯಲರ್ಹನಾಗಿರುತ್ತಾನೆ ಎಂದೂ ತಿಳಿಯತಕ್ಕದ್ದು. (2) ಮುಕ್ತರ ಮಧ್ಯದಲ್ಲಿಯೂ ಯಾರು ಉದ್ಯೋಗಾತಿಶಯದಿಂದ ಸಮಗ್ರ ಆವಿರ್ಭೂತಗಳಾದ ಸ್ವಯೋಗ್ಯಗಳಾದ ಆನಂದಾದಿಗಳಿಂದ ಸಿದ್ಧರಾಗಿರುತ್ತಾರೋ ಅವರ ಮಧ್ಯದಲ್ಲಿ ನಾರಾಯಣನೇ ಮುಖ್ಯಾಶ್ರಯನಾದವನು, ದುರ್ಲಭನು. ಬ್ರಹ್ಮಾದಿಗಳೇ ಆಗಲು ಯೋಗ್ಯರಾಗಿರುತ್ತಾರೆ. ಇತರರು ಸಾಮಾನ್ಯವಾಗಿಯೇ ನಾರಾಯಣಾಶ್ರಯರಾಗಿರುತ್ತಾರೆ. ಈ ಶ್ಲೋಕವನ್ನು ಜೀವನ್ಮುಕ್ತರಾದ ಜ್ಞಾನಿಗಳಿಗೂ ತಾರತಮ್ಯಪ್ರತಿಪಾದಕವೆಂದು ಕೂಡಿಸಬೇಕು || ೫೫ || ೫೬ ||

**ಮೂ ||** ಇಯಂ ವಿಸೃಷ್ಟಿರ್ಯತ ಆಬಭೂವ
ಯದಿ ವಾ ದಧೇ ಯದಿ ವಾ ನ |
ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್
ಸೋ ಅಂಗ ವೇದ ಯದಿ ವಾ ನ ವೇದ || ೫೭ ||
ಯಃ ಸ್ವಾತ್ಮಮಾಯಾವಿಭವಂ ಸ್ವಯಂ ಗತೋ
ನಾಹಂ ನಭಸ್ವಾಂಸ್ತಮಥಾಪರೇ ಕುತಃ |
ಬ್ರಹ್ಮಾಪಿ ಯಂ ವೇತ್ತಿ ನ ಚೇಹ (ನೈವೇಹ)
ಸಮ್ಯಗನ್ಯೇ ಕುತೋ ದೇವಮುನೀಂದ್ರಮರ್ತ್ಯಾಃ || ೫೮ ||
ನಮಸ್ತೇಽಮಿತತತ್ವಾಯ ಬ್ರಹ್ಮಾ(ಧರ್ಮಾ)ದೀನಾಂ ಚ ಸೂತಯೇ |
ನಿರ್ಗುಣಾಯ ಚ ಸತ್ಕಾಷ್ಠಾಂ ನಾಹಂ ವೇದಾಪರೇ ಕುತಃ || ೫೯ ||
ನಾಹಂ ಪರಾಯುರ್ಋಷಯೋ ನ ಮರೀಚಿಮುಖ್ಯಾಃ
ಜಾನಂತಿ ಯದ್ವಿರಚಿತಂ ಖಲು ಸತ್ವಸಂಘಾಃ (ಗಾಃ) |
ಯನ್ಮಾಯಯಾ ಮುಷಿತಚೇತಸ ಈಶದೈತ್ಯ-
ಮರ್ತ್ಯಾದಯಃ ಕಿಮುತ ಶಶ್ವದಭದ್ರವೃತ್ತಾಃ || ೬೦ ||

**ಅ||** (ಇಯಂ ವಿಸೃಷ್ಟಿಃ ಎನ್ನುವುದು ಋಙ್ಮಂತ್ರವು) ಇಯಂ=ಈ ಪ್ರತ್ಯಕ್ಷಾದಿ ಸಿದ್ಧವಾದ, ವಿಸೃಷ್ಟಿಃ=ವಿವಿಧವಾದ ಸೃಷ್ಟಿಯು ಅಥವಾ ಆದಿಸೃಷ್ಟಿಯು, ಯತಃ=ಯಾವ ಹಿರಣ್ಯಗರ್ಭನ

ದೆಶೆಯಿಂದ, ಆ=ಚೆನ್ನಾಗಿ, ಬಭೂವ=ಉಂಟಾಯಿತೋ, (ಆ ಬ್ರಹ್ಮನೇ) ಯದಿ=ಯಾವ ಪಕ್ಷ ದಲ್ಲಿ, ದಧೇ ವಾ=ಜಗತ್ತನ್ನು ಧರಿಸುವನೋ, ಯದಿ ವಾ ನ ದಧೇ=ಅಥವಾ ಧರಿಸದೆ ಇರುವನೋ, ಯಃ=ಯಾವಾತನು, ಅಸ್ಯ=ಈ ಪ್ರಪಂಚಕ್ಕೆ, ಅಧ್ಯಕ್ಷಃ=ಅಧಿಪತಿಯೋ, ಸೋऽಪಿ=ಅವನೂ ಕೂಡ, ಪರಮೇ ವ್ಯೋಮನ್=ಹೃದಯಾಕಾಶದಲ್ಲಿರತಕ್ಕ ಶ್ರೀ ಹರಿಯನ್ನು ಅಥವಾ ವೈಕುಂಠ ದಲ್ಲಿರತಕ್ಕ ಮುಖ್ಯಪ್ರಾಣನ ತಂದೆಯಾದ ವಿಷ್ಣುವನ್ನು, ಅಂಗ=ಪ್ರಿಯನೇ, ಯದಿ ವಾ ವೇದ=ತಿಳಿ ಯುತ್ತಾನೋ, ಯದಿ ವಾ ನ ವೇದ=ಅಥವಾ ತಿಳಿಯುವುದಿಲ್ಲವೋ, (ಇದರಿಂದ ಇತರರಕ್ಕಿಂತ ಬ್ರಹ್ಮನು ಅಧಿಕವಾಗಿ ಧ್ಯಾನಮಾಡುತ್ತಾನೆ, ಮತ್ತು ತಿಳಿಯುತ್ತಾನೆ. ಸಂಪೂರ್ಣವಾಗಿ ಧ್ಯಾನಿಸು ವುದಿಲ್ಲ, ತಿಳಿಯುವುದೂ ಇಲ್ಲ. ಅಂತೂ ಹಿರಣ್ಯಗರ್ಭನಿಗೆ ಇತರರಿಗಿಂತ ಅತಿಶಯಜ್ಞಾನವು ತೋರಿ ಸಲ್ಪಟ್ಟಿತು.)('ಯಃ ಸ್ವಾತ್ಮಮಾಯಾ'ಇತ್ಯಾದಿಗಳು ಭಾಗವತವಾಕ್ಯಗಳು. ಅದರಲ್ಲಿ 'ಯಃ ಸ್ವಾತ್ಮ ಮಾಯಾ' ಎನ್ನುವುದು ಚತುರ್ಮುಖನ ವಾಕ್ಯವು.) (೧) ಯಃ=ಯಾವ ಶ್ರೀ ಹರಿಯು, ಸ್ವಾತ್ಮ ಮಾಯಾವಿಭವಂ=ಸ್ವರೂಪಮಹಿಮೆಯ ವಿಸ್ತಾರವನ್ನು, ಅಥವಾ ತನ್ನ ಶಕ್ತಿಯ ವಿಸ್ತಾರವನ್ನು, ಸ್ವಯಂ=ತಾನೇ, ಗತಃ=ತಿಳಿದಿರುವನೋ, ಅಹಂ ನ ಗತಃ=ಚತುರ್ಮುಖನಾದ ನಾನೂ ಕೂಡ ಚೆನ್ನಾಗಿ ತಿಳಿಯುವುದಿಲ್ಲ. ನಭಸ್ವಾನ್ ನ=ಮುಖ್ಯಪ್ರಾಣನೂ ತಿಳಿಯುವುದಿಲ್ಲ. ಅಥ=ಆ ಮೇಲೆ, ಅಪರೇ=ಇತರರು, ತಂ=ಆ ಭಗವಂತನ ಶಕ್ತಿಯ ವಿಸ್ತಾರವನ್ನು, ನ ಜಾನಂತೀತಿ ಕುತಃ=ತಿಳಿ ಯುವುದಿಲ್ಲವೆಂದು ಏನು ಹೇಳಬೇಕು? ಇಹ=ಜೀವರಲ್ಲಿ, ಬ್ರಹ್ಮಾಪಿ ಚ=ಚತುರ್ಮುಖನೂ ಕೂಡ, ಯಂ=ಯಾರನ್ನು, ವೇತ್ತಿ=ತಿಳಿಯುತ್ತಾನೋ, ಸಮ್ಯಕ್=ಚೆನ್ನಾಗಿ, ನೈವ ವೇತ್ತಿ=ತಿಳಿಯು ವುದೇ ಇಲ್ಲವೋ. ಅನ್ಯೇ=ಇತರರಾದ, ದೇವಮುನೀಂದ್ರಮುತ್ಸ್ಯಾಃ = ದೇವತೆಗಳೂ, ಮುನಿ ಶ್ರೇಷ್ಠರೂ, ಮನುಷ್ಯರೂ, ಕುತಃ=ತಿಳಿಯುವುದಿಲ್ಲವೆಂದು ಏನು ಹೇಳಬೇಕು. (೨) (ನಮಸ್ತೇ ಎನ್ನುವುದು ಹಿರಣ್ಯಗರ್ಭನ ವಾಕ್ಯವು.) ಅಮಿತತತ್ವಾಯ=ಅಪರಿಮಿತಸ್ವರೂಪವುಳ್ಳ, ಬ್ರಹ್ಮಾ (ಧರ್ಮ) ದೀನಾಂ ಚ=ಬ್ರಹ್ಮನೇ ಮೊದಲಾದವರಿಗೆ, ಸೂತಯೇ=ಕಾರಣನಾದ, ನಿರ್ಗು ಣಾಯ ಚ = ಸತ್ವಾದಿಗುಣರಹಿತನಾದ, ತೇ = ನಿನಗೋಸ್ಕರ, ನಮಃ = ನಮಸ್ಕಾರವು. ಸತ್ಕಾಷ್ಠಂ=ಯಾವ ಶ್ರೀ ಹರಿಯ ಸಮ್ಯಕ್ ದಿಙ್ಮಾತ್ರವನ್ನ (ಅಂದರೆ- ಯಾವ ಶ್ರೀ ಹರಿಯ ಮಾಹಾತ್ಮ್ಯೆಯ ಏಕದೇಶವನ್ನು) ಅಥವಾ ಶ್ರೀ ಹರಿಯ ಪೂರ್ಣತ್ವವನ್ನು, ಅಹಂ=ನಾನು. ನ ವೇದ=ತಿಳಿಯಲಾರೆನು. ಅಪರೇ=ಇತರರು, ಕುತಃ=ತಿಳಿಯುವುದಿಲ್ಲವೆಂದು ಏನು ಹೇಳ ಬೇಕು? (ನಾಹಂ ಪರಾಯುಃ=ಎನ್ನುವುದು ಶಿವನ ವಾಕ್ಯವು.) ಅಹಂ=ನಾನು, ನ=ತಿಳಿಯ ಲಾರೆನೋ, ಪರಾಯುಃ=ಬ್ರಹ್ಮನೂ, ನ=ತಿಳಿಯಲಾರನೋ, ಮರೀಚಿಮುಖ್ಯಾಃ = ಮರೀಚಿ ಋಷಿಯೇ ಪ್ರಧಾನವಾಗಿಉಳ್ಳ, ಸ ಸತ್ವಸಂಗಾಃ = ವಿಶೇಷವಾಗಿ ಸತ್ವಗುಣ ಸಂಬಂಧವುಳ್ಳ, ಋಷಯಃ=ಋಷಿಗಳೂ, ಯದ್ವಿರಚಿತಂ=ಯಾವ ಶ್ರೀ ಹರಿಯ ಚರಿತ್ರೆಯನ್ನು, ನ ಜಾನಂತಿ= ತಿಳಿಯುವುದಿಲ್ಲವೋ, ಹೇ ಈಶ=ಎಲೋ ಶ್ರೀ ಹರಿಯೋ, ಯನ್ಮಾಯಯಾ=ಯಾವ ಶ್ರೀ ಹರಿಯ ಮಾಯೆಯಿಂದ, ಮುಷಿತಚೇತಸಃ=ನಷ್ಟವಾದ ಮನಸ್ಸುಳ್ಳ, ಶಶ್ವತ್=ಯಾವಾಗಲೂ, ಅಭದ್ರ ವೃತ್ತಾಃ = ಅಮಂಗಲವಾದ ವರ್ತನವುಳ್ಳ, ದೈತ್ಯಮರ್ತ್ಯಾದಯಃ=ದೈತ್ಯರೂ ಮನುಷ್ಯರೇ ಮೊದಲಾದ, ಸತ್ವಸಂಘಾಃ=ಪ್ರಾಣಿಗಳ ಸಮೂಹಗಳು, ಕಿಮುತ=ತಿಳಿಯುವುದಿಲ್ಲವೆಂದು ಏನು ಹೇಳಬೇಕು? ॥ ೫೭ ॥ ೫೮ ॥ ೫೯ ॥ ೬೦ ॥

**ಮೂ ॥ ಅಹಂ ಮಹೇಂದ್ರೋ ನಿರ್ಋತಿಃ ಪ್ರಚೇತಾಃ ।**

**ಸೋಮೋऽಗ್ನಿರೀಶಃ ಪವನೋऽರ್ಕೋऽರ್ಕ ವಿರಿಂಚಃ ॥ ೬೧ ॥**

ಆದಿತ್ಯವಿಶ್ವೇ ವಸವೋಽಥ ಸಾಧ್ಯಾಃ
ಮರುದ್ಗಣಾ ರುದ್ರಗಣಾಃ ಸಸಿದ್ಧಾಃ ।
ಅನ್ಯೇ ಚ ಯೇ ವಿಶ್ವಸೃಜೋಽಮರೇಶಾಃ
ಭೃಗ್ವಾದಯೋಽಸ್ಪೃಷ್ಟರಜಸ್ತಮಸ್ಕಾಃ ॥
ಯಸ್ಯೇಹಿತಂ ನ ವಿದುಃ ಸ್ಪೃಷ್ಟಮಾಯಾಃ
ಸತ್ವಪ್ರಧಾನಾ ಅಪಿ ಕಿಂ ತತೋಽನ್ಯೇ ॥ ೬೨ ॥

ಅ ॥ (ಅಹಂ ಇತ್ಯಾದಿಯು ಯುಮುನ ವಚನವು.) ಅಹಂ=ನಾನು, ಮಹೇಂದ್ರಃ=ದೇವೇಂದ್ರನು, ನಿರ್ಋತಿಃ=ನಿರ್ಋತಿಯು, ಪ್ರಚೇತಾಃ = ವರುಣನು, ಸೋಮಃ=ಕುಬೇರನು, ಅಗ್ನಿಃ=ಅಗ್ನಿಯು, ಈಶಃ=ರುದ್ರನು, ಪವನಃ=ವಾಯುವು, ಅರ್ಕಃ=ಸೂರ್ಯನು, ವಿರಿಂಚಃ=ಬ್ರಹ್ಮನು, ಆದಿತ್ಯ ವಿಶ್ವೇ ವಸವಃ=ಆದಿತ್ಯನೂ, ವಿಶ್ವೇದೇವತೆಗಳೂ, ಅಷ್ಟವಸುಗಳೂ, ಅಥ=ಹಾಗೆಯೇ, ಸಾಧ್ಯಾಃ=ಗಣದೇವತೆಗಳೂ, ಮರುದ್ಗಣಾಃ=ವಾಯುಗಣಗಳೂ, ರುದ್ರಗಣಾಃ=ರುದ್ರನ ಗಣಗಳೂ, ಸಸಿದ್ಧಾಃ=ಸಿದ್ಧರಿಂದ ಸಹಿತರಾದ,ಅನ್ಯೇ ಚ=ಇತರರಾದ, ಯೇ=ಯಾವ, ವಿಶ್ವಸೃಜಃ=ಸರ್ವಜಗತ್ತನ್ನು ಸೃಷ್ಟಿಮಾಡತಕ್ಕ , ಅಮರೇಶಾಃ=ದೇವತೆಗಳ ಅಧಿಪತಿಗಳೋ, ಅಸ್ಪೃಷ್ಟರಜಸ್ತಮಸ್ಕಾಃ=ಮುಟ್ಟಲ್ಪಡದೆ ಇದ್ದ ರಜೋಗುಣ-ತಮೋಗುಣಗಳುಳ್ಳ,ಭೃಗ್ವಾದಯಃ=ಭೃಗುಋಷಿಯೇ ಮೊದಲಾದವರು, ಯಸ್ಯ=ಯಾವ ಶ್ರೀ ಹರಿಯು, ಈಹಿತಂ=ಚೇಷ್ಟೆಯನ್ನು, ನ ವಿದುಃ=ತಿಳಿಯಲಾರರೋ, ಸ್ಪೃಷ್ಟಮಾಯಾಃ = ಮಾಯಾಸಂಬಂಧರಾದ, ಸತ್ವಪ್ರಧಾನಾ ಅಪಿ=ಸತ್ವಗುಣವೇ ಪ್ರಧಾನರಾಗಿ ಉಳ್ಳವರಾದಾಗ್ಯೂ, ತತಃ=ಅವರಕ್ಕಿಂತ, ಅನ್ಯೇ=ಇತರರಾದವರು, ಕಿಂ=ತಿಳಿಯುವುದಿಲ್ಲವೆಂದು ಏನು ಹೇಳಬೇಕು? ॥ ೬೧ ॥ ೬೨ ॥

ಮೂ ॥ ಸರ್ವಸ್ಯಾದೌ ಸ್ಮೃತೋ ಬ್ರಹ್ಮಾ ತಸ್ಮಾದ್ದೇವಾದನಂತರಃ ॥ ೬೩ ॥
ಜಾನಾತಿ ದೇವಪ್ರವರಂ ಭೂಯಶ್ಚಾತೋಧಿಕಂ ನೃಪ ।
ನ ತ್ವಾಮತಿಶಯಿಷ್ಯಂತಿ ಮುಕ್ತಾವಪಿ ಕಥಂಚನ ॥ ೬೪ ॥
ಮದ್ಭಕ್ತಿಯೋಗಾಜ್ಜ್ಞಾನಾಚ್ಚ ಸರ್ವಾನತಿಶಯಿಷ್ಯಸಿ ।
ಯಥಾ ಭಕ್ತಿವಿಶೇಷೋಽತ್ರ ದೃಶ್ಯತೇ ಪುರುಷೋತ್ತಮೇ ॥ ೬೫ ॥
ತಥಾ ಮುಕ್ತಿವಿಶೇಷೋಽಪಿ ಜ್ಞಾನಿನಾಂ ಲಿಂಗಭೇದನೇ ।
ಸಾಯುಜ್ಯಂ ಸಮನುಪ್ರಾಪ್ತಾ ಅಪಿ ದೇವಾದಯೋಽಖಿಲಾಃ ।
ತಾರತಮ್ಯಾದ್ಧಿ ತಿಷ್ಠಂತಿ ತಾರತಮ್ಯಂ ಹಿ ಸಾಧನೇ ॥ ೬೬ ॥

ಅ ॥ ('ಸರ್ವಸ್ಯಾದೌಸ್ಮೃತೋಬ್ರಹ್ಮಾ' ಎನ್ನುವುದು ಮೋಕ್ಷಧರ್ಮವಚನವು.) ಬ್ರಹ್ಮಾ = ಚತುರ್ಮುಖನು, ಸರ್ವಸ್ಯ = ಎಲ್ಲಾ ಜಗತ್ತಿನ, ಆದೌ = (ಕಾಲದಿಂದಲೂ ಗುಣದಿಂದಲೂ) ಪ್ರಥಮದಲ್ಲಿ, ಸ್ಮೃತಃ = ಸ್ಮೃತನಾಗಿರುತ್ತಾನೆ. (ಅಂದರೆ— ಸರ್ವರಕ್ಕಿಂತಲೂ ಆದ್ಯನೆಂತಲೂ ಸ್ಮೃತನಾಗಿರುತ್ತಾನೆ.) ತಸ್ಮಾತ್=ಆದುದರಿಂದ, ದೇವಾತ್ = ವಿಷ್ಣುವಿನಿಂದ, ಅನಂತರಃ=ಕಮ್ಮಿಯಾದ, ಬ್ರಹ್ಮಾ = ಚತುರ್ಮುಖನು, ನೃಪ = ರಾಜನೇ, ದೇವಪ್ರವರಂ = ದೇವತೆಗಳಲ್ಲಿ ಶ್ರೇಷ್ಠನಾದ ಶ್ರೀಹರಿಯನ್ನು,ಅತಃ=ಜ್ಞಾನಿವರ್ಗದೆಶೆಯಿಂದ,ಭೂಯಶ್ಚ ಅಧಿಕಂ=ಅತಿಶಯವಾಗಿ, ಅಧಿಕನನ್ನಾಗಿ,ಜಾನಾತಿ=ತಿಳಿಯುತ್ತಾನೆ. ೭(ನ ತ್ವಾಂ ಎನ್ನುವುದು ಬ್ರಹ್ಮನನ್ನು

ಕುರಿತು ಭಗವಂತನ ವಾಕ್ಯವು.) ಮುಕ್ತಾವಪಿ = ಮುಕ್ತಿಯಲ್ಲಿಯೂ, ಕಥಂಚನ = ಯಾವ ಪ್ರಕಾರದಿಂದಲೂ, ತ್ವಾಂ = ನಿನ್ನನ್ನು, ನಾತಿಶಯಿಷಂತಿ = ಯಾರೂ ಅತಿಕ್ರಮಿಸುವುದಿಲ್ಲ. ಮದ್ಭಕ್ತಿಯೋಗಾತ್ = ನನ್ನ ಭಕ್ತಿಯ ಸಂಬಂಧದಿಂದಲೂ, ಜ್ಞಾನಾಚ್ಚ = ಜ್ಞಾನದಿಂದಲೂ, ಸರ್ವಾನ್ = ಎಲ್ಲರನ್ನೂ, ಅತಿಶಯಿಷ್ಯಸಿ = ಅತಿಕ್ರಮಿಸುತ್ತಿ, ಅತ್ರ = ಈ ಸಂಸಾರದಲ್ಲಿ, ಯಥಾ = ಹೇಗೆ, ಪುರುಷೋತ್ತಮೇ = ಶ್ರೀ ಹರಿಯಲ್ಲಿ, ಭಕ್ತಿವಿಶೇಷಃ = ಭಕ್ತಿವಿಶೇಷವು, ದೃಶ್ಯತೇ = ಕಾಣಲ್ಪಡುತ್ತದೋ, ತಥಾ = ಹಾಗೆಯೇ, ಜ್ಞಾನಿನಾಂ = ಜ್ಞಾನಿಗಳಿಗೆ, ಲಿಂಗಭೇದನೇ = ಲಿಂಗಶರೀರಭಂಗವು ಉಂಟಾಗುತ್ತಿರಲು, ಮುಕ್ತಿವಿಶೇಷೋಽಪಿ = ಮುಕ್ತಿವಿಶೇಷವೂಕೂಡ, ದೃಶ್ಯತೇ = ಕಾಣಲ್ಪಡುತ್ತದೆ. ದೇವಾದಯಃ = ದೇವತೆಗಳೇ ಮೊದಲಾಗಿವುಳ್ಳ, ಅಖಿಲಾ ಅಪಿ = ಎಲ್ಲರೂ ಕೂಡ, ಸಾಯುಜ್ಯಂ = ಸಾಯುಜ್ಯವನ್ನು, ಅನುಪ್ರಾಪ್ತಾ ಅಪಿ = ಹೊಂದಿದರೂ ಕೂಡ, ತಾರತಮ್ಯಾತ್ ಹಿ = ತಾರತಮ್ಯದಿಂದಲೇ, ತಿಷ್ಠಂತಿ = ಇರುತ್ತಾರೆ. ಸಾಧನೇ = ಸಾಧನದಲ್ಲಿ, ತಾರತಮ್ಯಂ = ತಾರತಮ್ಯವು, ಹಿ = ಪ್ರಮಾಣಪ್ರಸಿದ್ಧವು. ॥ ೬೩ ॥ ೬೪ ॥ ೬೫ ॥ ೬೬ ॥

ಮೂ ॥ ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ವತಃ ॥ ೬೭ ॥
(ಗೀತಾ ಅಧ್ಯಾಯ ೭ ಶ್ಲೋಕ ೩.)

ಯ ಇಮಂ (ದಂ) ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।
ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮ ॥
ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।
ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯ ॥
ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।
ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦ ॥
ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।
ಸೋಽಪಿ ಮುಕ್ತಃ ಶುಭಾಲ್ಲೋಕಾನ್ಪ್ರಾಪ್ನುಯಾತ್ಪುಣ್ಯಕರ್ಮಣಾಂ॥೭೧॥
(ಗೀತಾ ಅಧ್ಯಾ. ೧೮. ಶ್ಲೋಕ ೬೮ ೬೯. ೭೦. ೭೧.)

ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।
ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥ ೭೨ ॥
ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ ।
ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೭೩ ॥
(ಗೀತಾ. ಅಧ್ಯಾಯ ೧೩. ಶ್ಲೋಕ ೨೫. ೨೬.)

ಅ ॥ ('ಮನುಷ್ಯಾಣಾಂ' ಇತ್ಯಾದಿಗಳು ಗೀತಾವಾಕ್ಯಗಳು.) ಮನುಷ್ಯಾಣಾಂ = ಮನುಷ್ಯರ, ಸಹಸ್ರೇಷು = ಅಪರಿಮಿತಸಹಸ್ರರ ಮಧ್ಯದಲ್ಲಿ, ಕಶ್ಚಿದೇವ = ಕೆಲವು ಮುಮುಕ್ಷುವರ್ಗವು, ಸಿದ್ಧಯೇ = ಮುಕ್ತ್ಯಾಖ್ಯಸಿದ್ಧಿಗೋಸ್ಕರ, ಅಥವಾ ಜ್ಞಾನಕ್ಕೋಸ್ಕರ, ಯತತಿ = ಪ್ರಯತ್ನಮಾಡುತ್ತದೆ. ಯತತಾಮಪಿ = ಪ್ರಯತ್ನಮಾಡುವವರ ಮಧ್ಯದಲ್ಲಿ (ನಿರ್ವಿಘ್ನವಾಗಿ ಕೆಲವರೇ ಸಿದ್ಧಿಯನ್ನು ಹೊಂದುತ್ತಾರೆ.) ಸಿದ್ಧಾನಾಂ = ಸಿದ್ಧಿಯನ್ನು ಹೊಂದಿರುವ ಅಂದರೆ ಶ್ರೀ ಹರಿಯನ್ನು

ತಿಳಿದವರ ಮಧ್ಯದಲ್ಲಿಯೂ, ಕಶ್ಚಿತ್=ಕೆಲವರೇ ಬ್ರಹ್ಮರುದ್ರಾದಿಗಳು, ತತ್ವತಃ=ಯಥಾರ್ಥ ವಾಗಿ ಪ್ರಾಚುರ್ಯದಿಂದ, ಮಾಂ=ನನ್ನನ್ನು, ವೇತ್ತಿ=ತಿಳಿಯುತ್ತಾರೆ. ('ಯ ಇಮಂ' ಎನ್ನುವ ಪರಮಗುಹ್ಯವಾದ ಗೀತಾಶಾಸ್ತ್ರಕ್ಕೆ ಪ್ರವಕ್ತೃಅಧ್ಯೇತೃ ಶ್ರೋತೃಗಳಲ್ಲಿ ಭಗವತ್ಪ್ರೀತಿಯಲ್ಲಿ ತಾರತಮ್ಯವು ಶ್ರುತವಾದುದರಿಂದ ಜ್ಞಾನಿಗಳಿಗೆ ಮುಕ್ತಿಯಲ್ಲಿ ತಾರತಮ್ಯವು ಸಿದ್ಧಿಸುತ್ತದೆ.) ಯಃ=ಯಾವಾತನು, ಇಮಂ=ಈದಾವ, ಪರಮಂ ಗುಹ್ಯಂ=ಅತಿಗೋಪ್ಯವಾದ ಗೀತಾಶಾಸ್ತ್ರ ವನ್ನು, ಮದ್ಭಕ್ತೇಶು=ನನ್ನ ಭಕ್ತರಲ್ಲಿ, ಅಭಿಧಾಸ್ಯತಿ=ಉಪದೇಶಿಸುವನೋ, (ಅವನು)ಮಯಿ= ನನ್ನಲ್ಲಿ, ಪರಾಂ=ಉತ್ಕೃಷ್ಟವಾದ, ಭಕ್ತಿಂ=ಭಕ್ತಿಯನ್ನು, ಕೃತ್ವಾ=ಮಾಡಿ, ಮಾಮೇವ= ನನ್ನನ್ನೇ, ಏಷ್ಯತಿ=ಹೊಂದುತ್ತಾನೆ. ಅಸಂಶಯಃ=ಸಂದೇಹವಿಲ್ಲ. ಮನುಷ್ಯೇಷು=ಮನುಷ್ಯರಲ್ಲಿ, ತಸ್ಮಾತ್=ಆ ಜ್ಞಾನಿಯದೆಶೆಯಿಂದ, ಅಂದರೆ— ಗೀತಾಶಾಸ್ತ್ರವನ್ನುಪದೇಶಕೊಡುವವನಕ್ಕಿಂತ, ಕಶ್ಚಿತ್=ಯಾರೊಬ್ಬನೂ, ಮೇ=ನನಗೆ, ಪ್ರಿಯಕೃತ್ತಮಃ = ಅತಿಶಯವಾಗಿ ಪ್ರೀತಿಯನ್ನು ಮಾಡುವವನು, ನ ಚ=ಯಾವಾಗಲೂ ಇಲ್ಲವೇ ಇಲ್ಲ. ತಸ್ಮಾತ್=ಆತನದೆಶೆಯಿಂದ, ಅನ್ಯಃ= ಮತ್ತೊಬ್ಬನು, ಮೇ=ನನಗೆ, ಭುವಿ=ಭೂಲೋಕದಲ್ಲಿ, ಪ್ರಿಯತರಃ=ಅತಿಶಯವಾಗಿ ಪ್ರಿಯನಾದ ವನು, ನ ಚ ಭವಿತಾ=ಆಗಲಾರನು. ಯಃ=ಯಾವಾತನು, ಆವಯೋಃ=ನಮ್ಮಿಬ್ಬರ, ಇಮಂ= ಈದಾವ, ಧರ್ಮ್ಯಂ = ಧರ್ಮಸಾಧನೀಭೂತವಾದ, ಅಥವಾ ಸರ್ವಧಾರಕನಾದುದರಿಂದ ಧರ್ಮಶಬ್ದವಾಚ್ಯನಾದ ಶ್ರೀ ಹರಿಸಂಬಂಧಿಕವಾದ, ಸಂವಾದಂ = ಗೀತಾಪ್ರಬಂಧರೂಪವಾದ ಸಂವಾದವನ್ನು, ಅಧ್ಯೇಷ್ಯತೇ=ಅಧ್ಯಯನಮಾಡುವನೋ, ತೇನ = ಆದಾವ ಪುರುಷನಿಂದ, ಜ್ಞಾನಯಜ್ಞೇನ=ಜ್ಞಾನಾಖ್ಯಯಜ್ಞದಿಂದ, ಅಹಂ=ನಾನು, ಇಷ್ಟಃ=ಪೂಜಿಸಿಕೊಳ್ಳಲ್ಪಟ್ಟವನು, ಸ್ಯಾಂ=ಆಗುವೆನು. ಇತಿ = ಈಪ್ರಕಾರ, ಮೇ = ನನ್ನ, ಮತಿಃ=ಬುದ್ಧಿಯು, ಶ್ರದ್ಧಾವಾನ್= ಆಸ್ತಿಕ್ಯಬುದ್ಧಿಯುಳ್ಳ, ಅನಸೂಯಶ್ಚ = ಅಸೂಯಾದಿ ದೋಷರಹಿತನಾದ, ಯೋಽಪಿ=ಯಾವ ನಾದರೂ, ನರಃ=ಮನುಷ್ಯನು (ನಮ್ಮಿಬ್ಬರ ಸಂವಾದರೂಪವಾದ ಗೀತಾಶಾಸ್ತ್ರವನ್ನು), ಶೃಣು ಯಾತ್=ಕೇಳಿಯಾನೋ, ಸೋಽಪಿ=ಅವನೂ ಕೂಡ, ಮುಕ್ತಃ ಸನ್=ಮುಕ್ತನಾಗಿ, ಪುಣ್ಯ ಕರ್ಮಣಾಂ=ಪುಣ್ಯಕರ್ಮಿಗಳ, ಅಥವಾ, ಪುಣ್ಯಕರ್ಮಣಾ = ಪುಣ್ಯಕರ್ಮದಿಂದ, ಶುಭಾನ್ ಲೋಕಾನ್=ಉತ್ತಮ ಲೋಕಗಳನ್ನು, ಪ್ರಾಪ್ನುಯಾತ್=ಹೊಂದಿಯಾನು, (ಋಷಿದೇವಾದಿ ಗಳಿಗೆ ಸಾಧನವೈಚಿತ್ರ್ಯದಿಂದ ಭಗವದ್ದರ್ಶನವೈಚಿತ್ರ್ಯವೂ ಕೂಡ, ಅದರಿಂದಲೇ ಮೋಕ್ಷ ವೈಚಿತ್ರ್ಯವೂ ಧ್ಯಾನೇನ ಇತ್ಯಾದಿಗಳಿಂದ ಸಿದ್ಧಿಸುತ್ತದೆನ್ನುತ್ತಾರೆ.) ಕೇಚಿತ್=ಕೆಲವರು (ಶ್ರವಣ ಮನನಗಳಿಂದ ಕೂಡಿದವರು), ಆತ್ಮಾನಂ = ಶ್ರೀ ಹರಿಯನ್ನು, ಧ್ಯಾನೇನ= ಧ್ಯಾನದಿಂದಲೇ, ಆತ್ಮನಾ=ಬುದ್ಧಿಯಿಂದ, ಆತ್ಮನಿ=ಹೃದಯದಲ್ಲಿ, ಪಶ್ಯಂತಿ=ನೋಡುತ್ತಾರೆ. ಅನ್ಯೇ=ಕೆಲವರು, ಸಾಂಖ್ಯೇನ ಯೋಗೇನ = ವೇದೋಕ್ತಭಗವತ್ಸ್ವರೂಪಪರೋಕ್ಷಜ್ಞಾನರೂಪವಾದ ಉಪಾಯ ದಿಂದಲೂ, ಧ್ಯಾನದಿಂದಲೂ, ಪಶ್ಯಂತಿ=(ಶ್ರೀ ಹರಿಯನ್ನು) ನೋಡುತ್ತಾರೆ. ಅಪರೇ=ಶ್ರವಣಾದಿ ಗಳಿಲ್ಲದಿದ್ದವರು, ಕರ್ಮಯೋಗೇನ ಚ=ಕರ್ಮರೂಪ ಉಪಾಯದಿಂದಲೂ (ಅಂದರೆ ಸಾಧು ಕರ್ಮಾನುಷ್ಠಾನದಿಂದ ಲಬ್ಧವಾದ ಭಗವತ್ಪ್ರಸಾದದಿಂದುಂಟಾದ ಶ್ರವಣಮನನ ಧ್ಯಾನಗಳಿಂದ, ಪಶ್ಯಂತಿ=ನೋಡುತ್ತಾರೆ. ಅಥವಾ ಕೆಲವರು ಋಷಿಗಳು ತಮ್ಮ ಪ್ರತಿಭೆಯಿಂದಲೂ, ಶ್ರವಣ ದಿಂದಲೂ ಶ್ರೀ ಹರಿಯನ್ನು ತಿಳಿದು ಮನಸ್ಸಿನಿಂದ ಹೃದಯದಲ್ಲಿ ಶ್ರೀ ಹರಿಯನ್ನು ಧ್ಯಾನದಿಂದ ಸಾಕ್ಷಾತ್ಕರಿಸುತ್ತಾರೆ. ನಾರದಾದಿ ಋಷಿಗಳು ಹೊರಗೂ ನೋಡುತ್ತಾರೆ. ಇತರ ದೇವತೆಗಳು ಸ್ವಪ್ರತಿಭಾಖ್ಯವಾದ ಜ್ಞಾನರೂಪವಾದ ಉಪಾಯದಿಂದ ಹೊರಗೂ ಒಳಗೂ ವಿಷ್ಣುವನ್ನು ನೋಡುತ್ತಾರೆ. ಕ್ಷತ್ರಿಯಶ್ರೇಷ್ಠರು ಅಶ್ವಮೇಧಾದಿರೂಪವಾದ ಕರ್ಮರೂಪ ಉಪಾಯದಿಂದಲೂ ಶ್ರವಣದಿಂದಲೂ ತಮ್ಮ ಪ್ರತಿಭೆಯಿಂದಲೂ ನಿತ್ಯದಲ್ಲಿಯೂ ಹರಿಯನ್ನು ಸ್ಮರಿಸುತಾ

ಅಶ್ವಮೇಧಾದಿಯಜ್ಞಕರ್ಮಕಾಲದಲ್ಲಿ ಯಜ್ಞಭಾಗಕ್ಕಾಗಿ ಬಂದಿರತಕ್ಕ ಶ್ರೀ ಹರಿಯನ್ನು ನೋಡುತ್ತಾರೆ.) ಅನ್ಯೇ ತು=ಇತರರಾದ ಮನುಷ್ಯರಾದರೂ, ಏವಂ=ಹೀಗೆ, ತಮ್ಮ ಪ್ರತಿಭಾಬಲದಿಂದ ಶ್ರೀಹರಿಯನ್ನು, ಅಜಾನಂತಃ=ತಿಳಿಯದೆ ಇದ್ದವರಾಗಿ, ಅನ್ಯೇಭ್ಯಃ=ಇತರರಿಂದ, ಶ್ರುತ್ವಾ=ಕೇಳಿ, ಮತ್ತು ಮನನಮಾಡಿ, ಉಪಾಸತೇ=ಉಪಾಸನಾಮಾಡುತ್ತಾರೆ; ಧ್ಯಾನಮಾಡುತ್ತಾರೆ ಮತ್ತು ನೋಡುತ್ತಾರೆ. ತೇಽಪಿ ಚ=ಅವರು ಅತ್ಯಲ್ಪಪ್ರತಿಭಾವುಳ್ಳವರಾದಾಗ್ಯೂ, ಶ್ರುತಿಪರಾಯಣಾಃ=ಬಹುಶ್ರವಣವುಳ್ಳವರಾಗಿ, ಮೃತ್ಯುಂ=ಸಂಸಾರವನ್ನು, ಅತಿತರಂತ್ಯೇವ=ಅತಿಕ್ರಮಿಸುತ್ತಾರೆಯೋ ಸರಿ. (ಅಂದರೆ— ಧ್ಯಾನಯೋಗಾದಿಗಳು ಮಿಲಿತಗಳಾಗಿಯೇ ದರ್ಶನಕ್ಕೆ ಸಾಧನಗಳಾದಾಗ್ಯೂ ಒಂದೊಂದಕ್ಕೆ ಸಾಧನತ್ವವನ್ನು ಹೇಳಿದ್ದು ಪ್ರಾಚುರ್ಯಾಭಿಪ್ರಾಯದಿಂದ ಕೂಡುತ್ತದೆ.)

ತಾ ॥ ನ. ಚ. ವಿ. ಅನಾದಿಯೋಗ್ಯತಾಭೇದಾತ್ಸ್ವಂಸಾಂ ದರ್ಶನಸಾಧನಂ । ನಾನ್ಯೈವ ತತ್ರ ವಿಷ್ಣೋಽಸ್ತು ಪ್ರಸಾದಾದ್ವ್ಯೈಷ್ಣವಂ ವಪುಃ ॥ ಸ್ವಯಂ ವಿಜ್ಞಾಯತೇ ಕಿಂಚಿಚ್ಛ್ರೂಯತೇ ಕಿಂಚಿದನ್ಯತಃ । ತಥಾ ಜ್ಞಾತ್ವಾ ಹರಿಂ ಜ್ಞಾತ್ವಾ ಸ್ವಾಂತಃ ಪಶ್ಯಂತಿ ಕೇಚನ ॥ ಋಷಯಃ ಕೇಚಿದೃಷಯೋ ನಾರದಾದ್ಯಾಃ ಬಹಿಸ್ತ್ವಪಿ । ದೇವಾ ವಿಷ್ಣುಪ್ರಸಾದೇನ ಲಬ್ಧಸತ್ಪ್ರತಿಭಾಬಲಾತ್ ॥ ಸರ್ವಂ ಕ್ರಮೇಣ ವಿಜ್ಞಾಯ ಪ್ರತಿಭಾಸ್ಪಷ್ಟತಾ ಕ್ರಮಾತ್ । ಪಶ್ಯಂತಿ ಬಹಿರಂತಶ್ಚ ವಿಷ್ಣುಂ ಧ್ಯಾನಮ್ಸ್ವತೇಽಪಿ ತು । ಯೇಷಾಂ ಧ್ಯಾನಮೃತೇ ದೃಷ್ಟಿಸ್ತೇಷಾಂ ಧ್ಯಾನೇಽಪಿ ದರ್ಶನಂ । ಸ್ಯಾದೇವ ಸಾಂಖ್ಯಯೋಗಾಸ್ತೇ ದೇವಾ ಬ್ರಹ್ಮಾಧಿಕೋತ್ರ ಚ ॥ ಕೇಚಿತ್ತು ಕ್ಷತ್ರಿಯಪರಾಃ ಅಶ್ವಮೇಧಾದಿಕರ್ಮಭಿಃ । ಯಜಂತೋ ಭಕ್ತಿಮಂತಶ್ಚ ಯಜ್ಞಭಾಗಾರ್ಥಮಾಗತಂ ॥ ಶ್ರವಣಪ್ರತಿಭಾಭ್ಯಾಂ ಚ ಸ್ಮರಂತಃ ಪುರುಷೋತ್ತಮಂ । ಪಶ್ಯಂತ್ಯನ್ಯೇ ತಥಾನ್ಯೇಭ್ಯಃ ಸರ್ವಂ ಶ್ರುತ್ವಾನುಮತ್ಯ ಚ ॥ ಉಪ್ಯಾಸ್ಯೈವ ತು ಪಶ್ಯಂತಿ ನಾನ್ಯಥಾ ತು ಕಥಂಚನ । ಋಷೀನ್ಪ್ರಾಜ್ಞಸ್ತಥಾರಭ್ಯ ಪ್ರತಿಭಾಭ್ಯಧಿಕಾ ಕ್ರಮಾತ್ ॥ ಯಾವದ್ಬ್ರಹ್ಮಾ ಬ್ರಹ್ಮಣಸ್ತು ಪ್ರಾಯೋ ನಾಪ್ರತಿಭಾಸಿತಂ । ವಿಷ್ಣೋಃ ಪ್ರೀತ್ಯರ್ಥಮೇವಾಸ್ಯ ಶ್ರೋತವ್ಯಂ ಪ್ರಾಯಶೋ ನರೈಃ ॥ ಅನ್ಯೇಷಾಂ ಶ್ರವಣಾಜ್ಜ್ಞಾನಂ ಕ್ರಮಶೋ ಮಾನುಷೋತ್ತರಂ । ಅತ್ಯಲ್ಪಪ್ರತಿಭಾನತ್ವಾನ್ಮಾನುಷಾಃ ಶ್ರುತವೇದಿನಃ । ಸರ್ವೇ ತೇ ದರ್ಶನಾತ್ತಸ್ಮಾತ್ ಸ್ವಯೋಗ್ಯಾನ್ಮುಕ್ತಿಗಾಮಿನಃ' ಇತ್ಯಾದಿ ಪ್ರಕಾರ ಧ್ಯಾನೇನ ಇತ್ಯಾದಿಗಳ ಅರ್ಥವು ಸಪ್ರಮಾಣವಾಗಿ ಗೀತಾತಾತ್ಪರ್ಯದಲ್ಲಿ ಹೇಳಲ್ಪಟ್ಟದೆ ॥ ೭೭ ॥ ೭೮ ॥ ೭೯ ॥ ೭೦ ॥ ೭೧ ॥ ೭೨ ॥ ೭೩॥

ಮುಕ್ತಿತಾರತಮ್ಯಕ್ಕೆ ನಿಮಿತ್ತವಾದ ದರ್ಶನತಾರತಮ್ಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ.

ಮೂ ॥ ಸುಸೂಕ್ಷ್ಮೈರಪ್ಯಶೇಷೈಶ್ಚ ವಿಶೇಷೈಃ ಸಹ ಪಶ್ಯತಿ ॥ ೭೪ ॥
ಸ್ವಾತ್ಮಾನಂ ಭಗವಾನ್ವಿಷ್ಣುಃ ಸರ್ವರೂಪೋಽಪಿ ಸರ್ವದಾ ॥
ಸರ್ವತ್ರ ಚಾನ್ಯದಪ್ಯೇವಂ ತೇನಾದೃಷ್ಟಂ ನ ಹಿ ಕ್ವಚಿತ್ ॥ ೭೫ ॥
ಸರ್ವತ್ರ ಸರ್ವದೈವೇಶಂ ಪಶ್ಯತ್ಯೇವ ರಮಾಪಿ ತು ॥
ನ ತು ಸರ್ವೈರ್ವಿಶೇಷೈಸ್ತಂ ಪಶ್ಯಂತ್ಯಪ್ಯನ್ಯತೋಽಧಿಕಂ ॥ ೭೬ ॥
ಸ್ವಾತ್ಮಾನಮನ್ಯಚ್ಚಾಶೇಷಂ ಪಶ್ಯತ್ಯೇವ ಹಿ ಸರ್ವದಾ ॥
ಬ್ರಹ್ಮಾ ತು ಸರ್ವಗಂ ಪಶ್ಯೇದ್ಗುಣಾನಪ್ಯನ್ಯತೋಽಧಿಕಂ ॥ ೭೭ ॥

ನ ತು ಸರ್ವೇಷು ಕಾಲೇಷು ತಥಾ ಪಶ್ಯತ್ಯಮುಕ್ತಿಗಃ ||
ಮುಕ್ತಸ್ತು ಸರ್ವದಾ ಪಶ್ಯೇತ್ಸರ್ವಗತ್ವೇನ ಚಾಪಿ ತು || ೭೮ ||
ನ ರಮಾವದ್ವಿಶೇಷಾಣಾಂ ದರ್ಶನಂ ಶಕ್ನುಯಾತ್ಕ್ವಚಿತ್ ||
ಸ್ವಾತ್ಮಾನಮನ್ಯಚ್ಚ ಸದಾ ವಿಶೇಷೈರಖಿಲೈರಪಿ || ೭೯ ||
ಪಶ್ಯಂತ್ಯಂಜಸ್ತಥಾ ವಾಣೀ ವಿಶೇಷಾಂಸ್ತಾವತೋ ನ ತು ||
ತ್ರೈಗುಣ್ಯಾತ್ಪರತಃ ಪಶ್ಯೇದ್ವ್ಯಾಪ್ತಂ ಶತಗುಣಂ ಹರಿಂ || ೮೦ ||
ಗಿರೀಶೋ ಗರುಡಶ್ಚೈವ ತಮೋಮಾತ್ರಗತಂ ಹರಿಂ |
ಪಶ್ಯೇದ್ವಿಶೇಷಾನಪಿ ಹಿ ವಾಣೀದೃಷ್ಟಾನ್ನ ಪಶ್ಯತಿ || ೮೧ ||

ಅ || ಭಗವಾನ್=ಪೂಜ್ಯನಾದ, ವಿಷ್ಣುಃ=ಶ್ರೀ ಹರಿಯು, ಸರ್ವದಾ=ಯಾವಾಗಲೂ, ಸರ್ವರೂಪೋऽಪಿ=ಪೂರ್ಣಸ್ವರೂಪವುಳ್ಳವನಾದಾಗ್ಯೂ, ಸುಸೂಕ್ಷ್ಮೈರಪಿ = ಅತಿಸೂಕ್ಷ್ಮಗಳೂ ಆದ, ಅಶೇಷೈಶ್ಚ ವಿಶೇಷೈಃ=ಎಲ್ಲಾ ವಿಶೇಷಗಳಿಂದಲೂ, ಸಹ=ಕೂಡಿಕೊಂಡು, ಸ್ವಾತ್ಮಾನಂ= ಸ್ವಸ್ವರೂಪವನ್ನು, ಪಶ್ಯತಿ=ನೋಡುತ್ತಾನೆ. ಸರ್ವತ್ರ ಚ=ಎಲ್ಲಾ ಕಡೆಗಳಲ್ಲಿಯೂ, ಅನ್ಯದಪಿ=ತನ್ನಿಂದ ಇತರವಾದ ಜಗತ್ತನ್ನೂ ಕೂಡ, ಏವಂ=ಹೀಗೆಯೇ, ಪಶ್ಯತಿ=ನೋಡುತ್ತಾನೆ. ತೇನ=ಆ ಶ್ರೀ ಹರಿಯಿಂದ, ಅದೃಷ್ಟಂ=ಕಾಣಲ್ಪಡದೆ ಇದ್ದುದು, ಕ್ವಚಿತ್=ಎಲ್ಲಿಯೂ, ನ ಹಿ= ಇಲ್ಲವೇ ಇಲ್ಲ. ರಮಾ=ಲಕ್ಷ್ಮೀದೇವಿಯು, ಸರ್ವತ್ರ = ಎಲ್ಲಾ ಕಡೆಗಳಲ್ಲಿಯೂ, ಸರ್ವದೈವ= ಯಾವಾಗಲೂ, ಈಶಂ=ಶ್ರೀ ಹರಿಯನ್ನು, ಪಶ್ಯತ್ಯೇವ=ನೋಡುತ್ತಾಳೆ. ಅಪಿ ತು=ಆದರೆ, ಅನ್ಯತಃ=ಜ್ಞಾನಿವರ್ಗದಿಶೆಯಿಂದ, ಅಧಿಕಂ=ಅಧಿಕವು ಹೇಗೆ ಆದೀತೋ ಹಾಗೆ, ಪಶ್ಯಂತ್ಯಪಿ= ನೋಡುವವಳಾದಾಗ್ಯೂ, ಸರ್ವೈಃ ವಿಶೇಷೈಃ=ಎಲ್ಲಾ ವಿಶೇಷಗಳಿಂದ ಯುಕ್ತನಾದ, ತಂ=ಆ, ಸ್ವಾತ್ಮಾನಂ=ಶ್ರೀ ಹರಿಯನ್ನು, ನ ತು ಪಶ್ಯತಿ=ನೋಡುವುದೇ ಇಲ್ಲ. ಅನ್ಯಚ್ಚ ಅಶೇಷಂ= ವಿಷ್ಣುವಿನಿಂದಲೂ, ತನ್ನಿಂದಲೂ ಇತರವಾದ ಎಲ್ಲಾ ವಸ್ತುವನ್ನೂ, ಪಶ್ಯತ್ಯೇವ ಹಿ = ನೋಡುತ್ತಾಳೆ. ಬ್ರಹ್ಮಾ ತು=ಬ್ರಹ್ಮನಾದರೂ, ಸರ್ವಗಂ=ಸರ್ವತ್ರ ವ್ಯಾಪ್ತನಾದ ಶ್ರೀ ಹರಿಯನ್ನು, ಪಶ್ಯೇತ್=ನೋಡುವನು. ಗುಣಾನಪಿ=ಗುಣಗಳನ್ನೂ ಕೂಡ, ಅನ್ಯತಃ = ಇರತರಾದ ಸರಸ್ವತ್ಯಾದಿಗಳಿಂದ, ಅಧಿಕಂ=ಅಧಿಕವು ಹೇಗೆ ಆದೀತೋ ಹಾಗೆ, ಪಶ್ಯೇತ್=ನೋಡುವನು. ಅಮುಕ್ತಿಗಃ=ಮುಕ್ತಿಯಾಗದೆ ಇದ್ದ ಬ್ರಹ್ಮನು, ಸರ್ವೇಷು ಕಾಲೇಷು=ಎಲ್ಲಾ ಕಾಲಗಳಲ್ಲಿ, ತಥಾ=ಹಾಗೆ, ನ ತು ಪಶ್ಯತಿ=ನೋಡುವುದಿಲ್ಲ. ಅಪಿ ತು=ಆದರೆ, ಮುಕ್ತಸ್ತು=ಮುಕ್ತನಾದರೂ, ಸರ್ವದಾ= ಯಾವಾಗಲೂ, ಸರ್ವಗತ್ವೇನ ಚ=ಸರಸ್ವತ್ಯಾದಿಗಳಿಂದ ಕಾಣಲ್ಪಟ್ಟದ್ದರಿಂದ ಹೆಚ್ಚುಗುಣವುಳ್ಳತನದಿಂದಲೂ, ಸರ್ವತ್ರ ವ್ಯಾಪ್ತತನದಿಂದಲೂ, ಪಶ್ಯೇತ್ = ನೋಡುವನು. ಅಪಿ ತು=ಆದರೆ, ಕ್ವಚಿತ್=ಎಲ್ಲಿಯೂ, ರಮಾವತ್=ಲಕ್ಷ್ಮಿಯಂತೆ, ವಿಶೇಷಾಣಾಂ = ವಿಶೇಷಗಳ, ದರ್ಶನಂ= ದರ್ಶನವನ್ನು (ಕರ್ತುಂ=ಮಾಡಲಿಕ್ಕೆ,) ನ ಶಕ್ನುಯಾತ್ = ಸಮರ್ಥನಾಗಲಾರನು ತಥಾ= ಹಾಗೆಯೇ, ವಾಣೀ=ಸರಸ್ವತಿಯು, ಅಖಿಲೈರಪಿ ವಿಶೇಷೈಃ=ಎಲ್ಲಾ ವಿಶೇಷಗಳಿಂದಲೂ, ಸದಾ= ಯಾವಾಗಲೂ, ಅಂಜಃ=ಚೆನ್ನಾಗಿ, ಸ್ವಾತ್ಮಾನಂ=ಶ್ರೀ ಹರಿಯ ಸ್ವರೂಪವನ್ನು, ಅನ್ಯಚ್ಚ=ಶ್ರೀ ಹರಿಯಿಂದ ಇತರವಾದುದನ್ನೂ, ಪಶ್ಯಂತ್ಯಪಿ=ನೋಡುವವನಾದಾಗ್ಯೂ, ತಾವತಃ ವಿಶೇಷಾನ್= ಅಷ್ಟು ವಿಶೇಷಗಳನ್ನು (ಅಂದರೆ, ಹೇಗೆ ಬ್ರಹ್ಮನು ಲಕ್ಷ್ಮಿಯಿಂದ ಕಾಣಲ್ಪಟ್ಟವುಗಳನ್ನು ನೋಡುವುದಿಲ್ಲವೋ, ಹಾಗೆಯೇ ಬ್ರಹ್ಮನಿಂದ ಎಷ್ಟು ಕಾಣಲ್ಪಡುತ್ತವೋ, ಅಷ್ಟು ಗುಣಗಳನ್ನು), ನ ತು ಪಶ್ಯೇತ್=ನೋಡಲಾರಳು. ತ್ರೈಗುಣ್ಯಾತ್ = ಪಂಚಾಶತ್ಕೋಟ ವಿಸ್ತೀರ್ಣವಾದ ಬ್ರಹ್ಮಾಂಡ

ಪರಿಮಿತ ದೇಶವನ್ನು ಆರಂಭಿಸಿ ಮಹದಾದ್ಯಾವರಣರೂಪವಾದ ತ್ರೈಗುಣ್ಯದೇಶದಿಂದ, ಪರತಃ= ಮೇಲೆ, ಶತಗುಣಂ=ಶತೋತ್ತರ ಪರಿಮಿತ ದೇಶಪರ್ಯಂತ, ವ್ಯಾಪ್ತಂ=ವ್ಯಾಪ್ತನಾದ, ಹರಿಂ= ಶ್ರೀ ಹರಿಯನ್ನು, ಪಶ್ಯೇತ್=ನೋಡುವಳು. ಗಿರಿಶಃ=ರುದ್ರನು, ಗರುಡಶ್ಚೈವ = ಗರುಡನೂ ಕೂಡ, ತಮೋಮಾತ್ರಗತಂ=ತಮೋಗುಣದಿಂದ ಪರಿಮಿತವಾದ ದೇಶಪರ್ಯಂತವಾಗಿರತಕ್ಕ, ಹರಿಂ=ಶ್ರೀ ಹರಿಯನ್ನು, ಪಶ್ಯೇತ್=ನೋಡುವನು. ವಾಣೀದೃಷ್ಟಾನ್=ಸರಸ್ವತಿಯಿಂದ ಕಾಣ ಲ್ಪಟ್ಟ ವಿಶೇಷಗಳನ್ನು, ನ ಪಶ್ಯತಿ = ನೋಡುವುದಿಲ್ಲ ॥ ೭೪ ॥ ೭೫ ॥ ೭೬ ॥ ೭೭ ॥ ೭೮ ॥ ೭೯ ॥ ॥ ೮೦ ॥ ೮೧ ॥

ಮೂ ॥ ಉಮಾ ಸುಪರ್ಣೀ ಚ ಮಹತ್ತತ್ವಂ ಯಾವತ್ಪ್ರಪಶ್ಯತಿ ।
ರುದ್ರದೃಷ್ಟಾನ್ ವಿಶೇಷಾಂಶ್ಚ ನೈವ ಪಶ್ಯೇತ್ಕದಾಚನ ॥ ೮೨ ॥
ಸ್ವರೂಪಮನ್ಯರೂಪಂ ಚ ಮುಕ್ತಾ ದೇವಾಃ ಸಮಸ್ತಶಃ ।
ಜಾನಂತೀಂದ್ರಶ್ಚ ಕಾಮಶ್ಚ ಬ್ರಹ್ಮ ಯಾವದಹಂಕೃತಿಃ ॥ ೮೩ ॥
ಪಶ್ಯಂ(ಶ್ಯ)ತೋ ಮನುದಕ್ಷಾದ್ಯಾ ಬುದ್ಧಿತತ್ವಸ್ಥಿತಂ ಹರಿಂ ।
ಪಶ್ಯಂತಿ ಸೋಮಸೂರ್ಯೌ ತು ಮನಸ್ಥಂ ಪರಮೇಶ್ವರಂ ॥ ೮೪ ॥
ಅನ್ಯೇ ಭೂತಸ್ಥಿತಂ ವಿಷ್ಣುಂ ದೇವಾಃ ಪಶ್ಯಂತಿ ಸರ್ವದಾ ।
ಬಹುಸಾಹಸ್ರವರ್ಷೇಣ ಮಹತ್ತತ್ವೇ ಕ್ವಚಿತ್ಕ್ವಚಿತ್ ॥ ೮೫ ॥
ಅನ್ಯೇ ಚೈವ ಯಥಾಯೋಗ(ಗ್ಯ)ಮಂಡಾಂತರ್ವರ್ತಿನಂ ಹರಿಂ ।
ಶ್ವೇತದ್ವೀಪಪತಿಂ ಚೈವ ಹೃದ್ಯೇವಾನ್ಯೇ ತು ಕೇಚನ ॥ ೮೬ ॥
ಕದಾಚಿದೇವ ತತ್ರಾಪಿ ಕೇಚಿತ್ಪಶ್ಯಂತಿ ಕೇಶವಂ ।
ಉಮಾಯಾವದನಂತಾಂಶಾನ್ಪೂ(ತ್ಪೂ)ರ್ವದೃಷ್ಟೇಭ್ಯ ಏವ ತು ॥
॥ ೮೭ ॥
ವಿಶೇಷಾನ್ವಾಸುದೇವಸ್ಯ ಪಶ್ಚಾದುಕ್ತಾ ವಿಚಕ್ಷತೇ ।
ಶಕ್ರಕಾಮಾದಯಶ್ಚೈವ ವಿಶೇಷಾನ್ಬ್ರಹ್ಮಣಿ ಸ್ಥಿತಾನ್ ।
ಉಮಾದಿಭಿಃ ಪ್ರಬುದ್ಧೇಭ್ಯಃ ಶತಾಂಶಾನೇವ ಚಕ್ಷತೇ ॥ ೮೮ ॥

ಅ ॥ ಉಮಾ=ಪಾರ್ವತಿಯೂ, ಸುಪರ್ಣೀಚ = ಗರುಡನ ಹೆಂಡತಿಯೂ ಕೂಡ, ಯಾವತ್ = ಎಷ್ಟರತನಕ, ಮಹತ್ತತ್ವಂ = ಮಹತ್ತತ್ವವಿದೆಯೋ, (ಅಂದರೆ— ಮಹತ್ತತ್ವಪ ರ್ಯಂತ ವ್ಯಾಪ್ತನಾದ ಶ್ರೀ ಹರಿಯನ್ನು) ಪ್ರಪಶ್ಯತಿ=ನೋಡುತ್ತಾರೋ, ಕದಾಚನ=ಯಾವಾ ಗಲೂ, ರುದ್ರದೃಷ್ಟಾನ್=ರುದ್ರನಿಂದ ಕಾಣಲ್ಪಡತಕ್ಕ, ವಿಶೇಷಾಂಶ್ಚ = ವಿಶೇಷಗಳನ್ನಾದರೂ, ನೈವ ಪಶ್ಯೇತ್=ನೋಡಲಾರರು. ಸಮಸ್ತಶಃ=ಎಲ್ಲಾ, ಮುಕ್ತಾ ದೇವಾಃ=ಮುಕ್ತರಾದ ದೇವತೆ ಗಳು, ಸ್ವರೂಪಂ=ಸ್ವಸ್ವರೂಪವನ್ನು, ಅನ್ಯರೂಪಂಚ=ಸ್ವಾಧಮರೂಪವನ್ನೂ, ಜಾನಂತಿ= ತಿಳಿಯುತ್ತಾರೆ. ಇಂದ್ರಶ್ಚ=ಇಂದ್ರನೂ, ಕಾಮಶ್ಚ=ಕಾಮನೂಕೂಡ, ಯಾವದಹಂಕೃತಿಃ= ಅಹಂಕಾರತತ್ವವಿರುವತನಕ (ಅಂದರೆ— ಅಷ್ಟರವರೇಗೆ ವ್ಯಾಪಿಸಿಕೊಂಡು ಇರತಕ್ಕ), ಬ್ರಹ್ಮ= ಪರಬ್ರಹ್ಮನನ್ನೂ, ಪಶ್ಯತಃ = ನೋಡುತ್ತಾರೆ. ಮನುದಕ್ಷಾದ್ಯಾಃ = ಮನುದಕ್ಷ-ಪ್ರಜಾಪತಿ ಮೊದಲಾದವರು, ಬುದ್ಧಿತತ್ವಸ್ಥಿತಂ=ಬುದ್ಧಿತತ್ವದಲ್ಲಿರತಕ್ಕ (ಅಂದರೆ— ಅಷ್ಟರವರೇಗೆ ವ್ಯಾಪಿಸಿ ಕೊಂಡಿರತಕ್ಕ), ಹರಿಂ=ಶ್ರೀ ಹರಿಯನ್ನು, ಪಶ್ಯಂತಿ=ನೋಡುತ್ತಾರೆ. ಸೋಮಸೂರ್ಯೌ ತು=

ಚಂದ್ರ-ಸೂರ್ಯರಾದರೂ, ಮನಸ್ಥಂ=ಮನಸ್ಸಿನಲ್ಲಿರತಕ್ಕ (ಅಂದಗೆ— ಮನಸ್ತತ್ವದಿಂದ ಪರಿಮಿತ ದೇಶಪರ್ಯಂತ ಇರತಕ್ಕ), ಪರಮೇಶ್ವರಂ=ಶ್ರೀ ಹರಿಯನ್ನು, ಪಶ್ಯತಃ=ನೋಡುತ್ತಾರೆ. ಅನ್ಯೇ ದೇವಾಃ=ಇತರ ದೇವತೆಗಳು, ಭೂತಸ್ಥಿತಂ = ಪಂಚಭೂತಗಳಲ್ಲಿರತಕ್ಕ (ಅಂದರೆ— ಪಂಚಭೂತಗಳು ಇರತಕ್ಕ, ದೇಶಪರ್ಯಂತವಾಗಿ ವ್ಯಾಪಿಸಿಕೊಂಡು ಇರತಕ್ಕ), ವಿಷ್ಣುಂ = ಶ್ರೀ ಹರಿಯನ್ನು, ಸರ್ವದಾ=ಯಾವಾಗಲೂ, ಪಶ್ಯಂತಿ=ನೋಡುತ್ತಾರೆ. ಬಹುಸಾಹಸ್ರವರ್ಷೇಣ=ಬಹುಸಾಹಸ್ರವರ್ಷಗಳಲ್ಲಿ ಅನುಷ್ಠಿತವಾದ ಸಾಧನವಿಶೇಷದಿಂದ, ಕ್ವಚಿತ್ ಕ್ವಚಿತ್=ಕೆಲವು ಕೆಲವುಕಾಲದಲ್ಲಿ, ಮಹತ್ತತ್ವೇ=ಮಹತ್ತತ್ವದಲ್ಲಿರತಕ್ಕ ವಿಷ್ಣುವನ್ನು, ಪಶ್ಯಂತಿ=ನೋಡುತ್ತಾರೆ. ಅನ್ಯೇಚ = ಕೆಲವರಿತರರು, ಯಥಾಯೋಗಂ(ಗ್ಯಂ) = ಯೋಗ್ಯತಾನುಸಾರವಾಗಿ, ಅಂಡಾಂತವರ್ತಿನಂ=ಬ್ರಹ್ಮಾಂಡದೊಳಗೆ ಇರತಕ್ಕ, ಹರಿಂ = ಶ್ರೀ ಹರಿಯನ್ನು, ಪಶ್ಯಂತಿ = ನೋಡುತ್ತಾರೆ. ಅನ್ಯೇ ತು ಕೇಚನ=ಇತರರು ಕೆಲವರು, ಶ್ವೇತದ್ವೀಪ ಪತಿಂಚೈವ=ಶ್ವೇತದ್ವೀಪ ಪತಿಯಾದ ಶ್ರೀ ಹರಿಯನ್ನು, ಹೃದ್ಯೇವ = ಹೃದಯದಲ್ಲಿಯೇ, ಪಶ್ಯಂತಿ = ನೋಡುತ್ತಾರೆ. ತತ್ರಾಪಿ=ಹೃದಯದಲ್ಲಿಯೂ ಕೂಡ, ಕೇಚಿತ್=ಕೆಲವರು, ಕದಾಚಿದೇವ = ಕೆಲವುವೇಳೆಯೇ, ಕೇಶವಂ=ಶ್ರೀ ಹರಿಯನ್ನು, ಪಶ್ಯಂತಿ=ನೋಡುತ್ತಾರೆ. (ಪರಿಮಾಣ ದರ್ಶನದಂತೆ ವಿಶೇಷ ದರ್ಶನದಲ್ಲಿ ತಾರತಮ್ಯವು ಸ್ಪಷ್ಟವಾಗಿ ಹೇಳಲ್ಪಡಲಿಲ್ಲವೆಂದರೆ—) ಉಮಾಯಾವತ್‌ತು = ಪಾರ್ವತೀ ಪರ್ಯಂತವಾಗಿಯಾದರೂ, ಪಶ್ಚಾತ್ = ಹಿಂದುಕಡೆ, ಉಕ್ತಾಃ = ಹೇಳಲ್ಪಟ್ಟರುವರು, ಪೂರ್ವದೃಷ್ಟೇಭ್ಯಃ=ಲಕ್ಷ್ಮಿಯೇ ಮೊದಲ್ಗೊಂಡಿರತಕ್ಕ ಮೊದಲಿನವರಿಂದ ಕಾಣಲ್ಪಟ್ಟ ಈಶಧರ್ಮಗಳ ಮಧ್ಯದಲ್ಲಿ, ಅನಂತಾಂಶಾನೇವ = ಅನಂತಗಳ ಅಂಶಗಳೇಆದ, ವಾಸುದೇವಸ್ಯ ವಿಶೇಷಾನ್=ಶ್ರೀ ಹರಿಯ ವಿಶೇಷಣಗಳನ್ನು, ವಿಚಕ್ಷತೇ=ತಿಳಿಯುತ್ತಾರೆ. ಶಕ್ರಕಾಮಾದಯಶ್ಚ=ದೇವೇಂದ್ರ-ಮನ್ಮಥನೇ ಮೊದಲಾದವರೂ, ಉಮಾಭಿರೇವ=ಪಾರ್ವತ್ಯಾದಿಗಳಿಂದಲೇ, ಪ್ರಬುದ್ಧೇಭ್ಯಃ=ಚೆನ್ನಾಗಿ ತಿಳಿಯಲ್ಪಟ್ಟ ಈಶಧರ್ಮಗಳ ಮಧ್ಯದಲ್ಲಿ, ಶತಾಂಶಾನೇವ=ನೂರರ ಅಂಶಭೂತಗಳೇ ಆದ, ಬ್ರಹ್ಮಣಿ=ಪರಬ್ರಹ್ಮನಲ್ಲಿ, ಸ್ಥಿತಾನ್=ಇರತಕ್ಕ, ವಿಶೇಷಾನ್=ವಿಶೇಷಗಳನ್ನು, ಚಕ್ಷತೇ=ನೋಡುತ್ತಾರೆ.

**ತಾ || ಸ. ರ. ವಿ—** (1) ಬ್ರಹ್ಮಾದಿಗಳ ದರ್ಶನ ತಾರತಮ್ಯವೇ ಸಾಧನದ ಅಧೀನವಾದುದು. ವಿಷ್ಣು-ಲಕ್ಷ್ಮಿಯರ ದರ್ಶನ ತಾರತಮ್ಯವು ಸಾಧನಾಧೀನವಾದುದಲ್ಲ. ಚತುರ್ಮುಖ ಬ್ರಹ್ಮನು ಹೊರಗೂ ಇರತಕ್ಕ ಶ್ರೀಹರಿಯ ರೂಪವನ್ನು ಸರ್ವದಾ ನೋಡುತ್ತಾನೆ. (2) ಸರಸ್ವತಿಯಾದರೂ ಐವತ್ತು ಕೋಟಿ ವಿಸ್ತೀರ್ಣವಾದ ಬ್ರಹ್ಮಾಂಡ ಪರಿಮಿತವಾದ ದೇಶವನ್ನು ಆರಂಭಿಸಿ ಅಂದರೆ— ಜಲ-ತೇಜಸ್ಸು-ವಾಯು-ಆಕಾಶ-ಅಹಂಕಾರತತ್ವ-ಮಹತ್ತತ್ವ-ತ್ರೈಗುಣ್ಯ ಪ್ರದೇಶಗಳಲ್ಲಿ ಕ್ರಮದಿಂದ ಒಂದರಿಂದ ಒಂದು ಹತ್ತುಪಾಲು ಜಾಸ್ತಿಯಾದ ಬ್ರಹ್ಮಾಂಡಾವರಣಗಳಲ್ಲಿ ವ್ಯಾಪ್ತವಾದ ಮಹತ್ತತ್ವದಿಂದ ಮೇಲೆ ಶತೋತ್ತರ ಪರಿಮಿತ ದೇಶಪರ್ಯಂತ ಇರತಕ್ಕ ವಿಷ್ಣುವನ್ನು ನೋಡುತ್ತಾಳೆ. (3) ರುದ್ರಗರುಡರಾದರೂ ಮಹತ್ತತ್ವಕ್ಕೆ ಆವರಣ ಭೂತವಾದ ಅದರಿಂದ ಹತ್ತುಪಾಲು ಜಾಸ್ತಿಯಾದ ತಮೋಗುಣದಿಂದ ಪರಿಮಿತವಾದ ದೇಶಪರ್ಯಂತ ಇರತಕ್ಕ ವಿಷ್ಣುವನ್ನೇ ನೋಡುತ್ತಾರೆ. (4) ಪಾರ್ವತೀ ಸುಪರ್ಣಿಯರಾದರೂ ತಮೋಗುಣದಿಂದ ಪರಿಮಾಣದಿಂದ ಹತ್ತು ಪಾಲು ಕಮ್ಮಿಯಾದ ಮಹತ್ತತ್ವದಿಂದ ಪರಿಮಿತವಾದ ದೇಶಪರ್ಯಂತವಾಗಿಯೇ ಇರತಕ್ಕ ಶ್ರೀ ಹರಿಯನ್ನೇ ನೋಡುತ್ತಾರೆ. (5) ಇಂದ್ರಕಾಮರಾದರೂ ಮಹತ್ತತ್ವದೆಶೆಯಿಂದ ಪರಿಮಾಣದಿಂದ ಹತ್ತು ಪಾಲು ಕಮ್ಮಿಯಾದ ಅಹಂಕಾರತತ್ವದಿಂದ ಪರಿಮಿತವಾದ ದೇಶಪರ್ಯಂತವಾಗಿಯೇ ಇರತಕ್ಕ ವಿಷ್ಣುವನ್ನೇ ನೋಡುತ್ತಾರೆ. (6) ಮನುಬೃಹಸ್ಪತ್ಯಾದಿಗಳು

ಅಹಂಕಾರತತ್ವದೆಶೆಯಿಂದ ಪರಿಮಾಣದಿಂದ ಹತ್ತು ಪಾಲು ಕಮ್ಮಿಯಾದ ಬುದ್ಧಿತತ್ವದಿಂದ ಪರಿಮಿತವಾದ ದೇಶಪರ್ಯಂತವಾಗಿಯೇ ಇರತಕ್ಕ ವಿಷ್ಣುವನ್ನು ನೋಡುತ್ತಾರೆ. (7) ಸೋಮಸೂರ್ಯರಾದರೂ ಬುದ್ಧಿತತ್ವದ್ದೆಶೆಯಿಂದ ಪರಿಮಾಣದಿಂದ ಹತ್ತು ಪಾಲು ಕಮ್ಮಿಯಾದ ಮನಸ್ತತ್ವದಿಂದ ಪರಿಮಿತದೇಶಪರ್ಯಂತವಾಗಿಯೇ ಇರತಕ್ಕ ವಿಷ್ಣುವನ್ನು ನೋಡುತ್ತಾರೆ. (8) ವರುಣಾದಿಗಳಾದರೂ ಕ್ರಮವಾಗಿ ಪರಿಮಾಣದಿಂದ ಹತ್ತು ಪಾಲು ಕಮ್ಮಿಯಾದ ಆಕಾಶವಾಯ್ವಾದಿಭೂತಗಳಿಂದ ಪರಿಮಿತದೇಶಪರ್ಯಂತವಾಗಿ ಇರತಕ್ಕ ವಿಷ್ಣುವನ್ನು ಯೋಗ್ಯತಾನುಸಾರವಾಗಿ ನೋಡುತ್ತಾರೆ. (9) ಶ್ರೀ ಹರಿಯ ವ್ಯಾಪ್ತ್ಯಾದಿಗಳಂತೆಯೇ ಬೇರೆ ಧರ್ಮಗಳನ್ನೂ ಕೂಡ ಲಕ್ಷ್ಮ್ಯಾದಿಗಳು ತಾರತಮ್ಯದಿಂದಲೇ ನೋಡುತ್ತಾರೆ. ಅದರಲ್ಲಿ ಲಕ್ಷ್ಮೀದೇವಿಯು ಎಷ್ಟು ವಾಸುದೇವನ ಗುಣಗಳನ್ನು ನೋಡುತ್ತಾಳೋ, ಅಷ್ಟರಲ್ಲಿ ಅನಂತಪ್ರಕಾರ ವಿಭಕ್ತಗಳಾದ ಗುಣಗಳ ಪೈಕಿ ಒಂದೇ ಭಾಗವನ್ನು ಬ್ರಹ್ಮನು ನೋಡುತ್ತಾನೆ. (10) ಬ್ರಹ್ಮನು ನೋಡತಕ್ಕ ಅನಂತಪ್ರಕಾರ ವಿಭಕ್ತವಾದ ಭಾಗದ ಪೈಕಿ ಒಂದೇ ಭಾಗವನ್ನು ಸರಸ್ವತಿಯು ನೋಡುತ್ತಾಳೆ, ಇತ್ಯಾದಿ ಪ್ರಕಾರ ರುದ್ರಪಾರ್ವತಿಯರಿಗೂ ಶ್ರೀ ಹರಿಯ ಗುಣಗಳನ್ನು ನೋಡುವುದರಲ್ಲಿ ತಾರತಮ್ಯವನ್ನು ತಿಳಿಯತಕ್ಕದು. (11) ಪಾರ್ವತಿಯೂ ಕೂಡ ಎಷ್ಟು ಶ್ರೀ ಹರಿಯ ಗುಣಗಳನ್ನು ನೋಡುತ್ತಾಳೋ ನೂರುಪ್ರಕಾರ ವಿಭಕ್ತಗಳಾದ ಅಷ್ಟು ಗುಣಗಳ ಒಂದೇ ಭಾಗವನ್ನು ಇಂದ್ರನು ನೋಡುತ್ತಾನೆ. (12) ಅನಂತಧಾವಿಭಕ್ತವಾದ ಆ ಭಾಗದಲ್ಲಿಯೂ ಒಂದೇ ಭಾಗವನ್ನು ಅನಿರುದ್ಧನು ನೋಡುತ್ತಾನೆ. ಹೀಗೆಯೇ ಪ್ರವಹಾದಿಗಳಿಗೆ ಶ್ರೀ ಹರಿಯ ಗುಣಗಳನ್ನು ನೋಡುವುದರಲ್ಲಿ ಹ್ರಾಸಕ್ರಮವನ್ನು ತಿಳಿಯತಕ್ಕದು. (13) ಈ ಕಾರಣದಿಂದಲೂ ಸಾಧನತಾರತಮ್ಯವನ್ನನುಸರಿಸಿ ಮುಕ್ತರಲ್ಲಿ ತಾರತಮ್ಯವನ್ನು ಅಂಗೀಕರಿಸಬೇಕು ॥ ೮೨ ॥ ೮೩ ॥ ೮೪ ॥ ೮೫ ॥ ೮೬ ॥ ॥ ೮೭ ॥ ೮೮ ॥

ಉದಾಹೃತಗಳಾದ ವಚನಗಳಿಗೆ ಪ್ರಯೋಜನವನ್ನು ಹೇಳುತ್ತಾರೆ—

**ಮೂ ॥ ಇತ್ಯಾದಿವೇದಸ್ಮೃತಿಗವಚನೇಭ್ಯೋ ಯಥಾರ್ಥತಃ ॥ ೮೯ ॥**
**ತಾರತಮ್ಯಂ ಚ(ವಿ)ಮುಕ್ತಾನಾಂ ಸಾಧನಾನಾಂ ಚ ದೃಶ್ಯತೇ ।**
**ಸಾಧ್ಯಸಾಧನವೈರೂಪ್ಯಮದೃಷ್ಟಂ ಕೇನ ಕಲ್ಪ್ಯತೇ ॥ ೯೦ ॥**

ಅ ॥ ಇತ್ಯಾದಿ ವೇದಸ್ಮೃತಿಗವಚನೇಭ್ಯಃ=ಇವೇ ಮೊದಲಾಗಿವುಳ್ಳ ವೇದಗಳೂ-ಸ್ಮೃತಿಗಳೂ ಇವುಗಳಲ್ಲಿರತಕ್ಕ ವಚನಗಳದೆಶೆಯಿಂದ, ಯಥಾರ್ಥತಃ = ಯಥಾರ್ಥವಾಗಿಯೇ, (ಪರಮತಾನುವಾದ ರೂಪದಿಂದ ಅಲ್ಲ.) ವಿಮುಕ್ತಾನಾಂ=ವಿಮುಕ್ತರಿಗೂ, ಸಾಧನಾನಾಂ ಚ= ಸಾಧನಗಳಿಗೂ ಕೂಡ, ತಾರತಮ್ಯಂ = ನೀಚೋಚ್ಚಭಾವವು, ದೃಶ್ಯತೇ = ಕಾಣಲ್ಪಡುತ್ತದೆ. (ಸಾಧನಗಳಲ್ಲಿ ತಾರತಮ್ಯವನ್ನು ಪ್ರತಿಪಾದಿಸುವುದಕ್ಕಾಗಿ ಉದಾಹೃತಗಳಾದ ಕೆಲವು ವಾಕ್ಯಗಳಲ್ಲಿ ಮುಕ್ತರಿಗೆ ತಾರತಮ್ಯವು ಪ್ರತೀತವಾಗುತ್ತದೆ. ಅದೂ ಪ್ರಕೃತವಾಗಿರುವುದರಿಂದ ಗ್ರಾಹ್ಯವೇ ಆಗಿದೆ.) (ಮುಮುಕ್ಷುಗಳಿಗೆ ಸಾಧನಗಳಲ್ಲಿ ತಾರತಮ್ಯವು ಇರಲಿ. ಮೋಕ್ಷದಲ್ಲಿ ತಾರತಮ್ಯವು ಬೇಡ ಎನ್ನುವ ಆಶಂಕೆಯಲ್ಲಿ ಮೊದಲು ಬಾಧಕವು ಹೇಳಲ್ಪಟ್ಟಿತು. ಈಗ ಈ ಶಂಕೆಯೇ ಕೂಡುವುದಿಲ್ಲ. ದೂಷಣಾಭಿಧಾನವು ಸುತರಾಂ ಕೂಡಲಾರದು ಎನ್ನುತ್ತಾರೆ.) ಸಾಧ್ಯಸಾಧನವೈರೂಪ್ಯಂ=ಸಾಧ್ಯವು ಅವಿಚಿತ್ರವು, ಸಾಧನವು ವಿಚಿತ್ರವು ಎಂದು ಸಾಧ್ಯಸಾಧನಗಳಿಗೆ ವೈಚಿತ್ರ್ಯವು, ಅದೃಷ್ಟಂ=ಎಲ್ಲಿಯೂ ಕಾಣಲ್ಪಡದೆ ಇದ್ದುದು, ಕೇನ=ಯಾವಬೀಜದಿಂದ,

ಕಲ್ಪ್ಯತೇ=ಶಂಕಿಸಲ್ಪಡುತ್ತದೆ. (ಯಾವುದರಿಂದಲೂ ಅಲ್ಲ.) ಲೋಕದಲ್ಲಿ ಸಾಧನವೈಚಿತ್ರ್ಯ ವಿದ್ದರೆ ಸಾಧ್ಯವೈಚಿತ್ರ್ಯವು ಕಂಡಿದೆ. ಸಾಧ್ಯಕ್ಕೆ ವೈಚಿತ್ರ್ಯವಿಲ್ಲದೆ ಸಾಧನದಲ್ಲಿಮಾತ್ರ ವೈಚಿತ್ರ್ಯವು ಎಲ್ಲಿಯೂ ತೋರಿಬರಲಿಲ್ಲ. ಪ್ರಕೃತ ಮೋಕ್ಷರೂಪಸಾಧ್ಯದಲ್ಲಿ ವೈಚಿತ್ರ್ಯವಿಲ್ಲದಿದ್ದರೂ ಅದರ ಸಾಧನದಲ್ಲಿ ವೈಚಿತ್ರ್ಯವಿರಲಿ ಎನ್ನುವ ಈ ಶಂಕೆಯು ಯಾವುದಾದರೊಂದು ಬೀಜವಿದ್ದರೆ ಬರಬಹುದು. ನಿರ್ಬೀಜವಾಗಿ ಶಂಕಿಸುವವನು ಲೌಕಿಕನೂ ಅಲ್ಲ, ಪರೀಕ್ಷಕನೂ ಅಲ್ಲ. ಉನ್ಮತ್ತನಂತೆ ಬಿಡಲರ್ಹನು. ॥ ೮೯ ॥ ೯೦ ॥

'ಈಶ್ವರಃ ಮುಮುಕ್ಷುಭ್ಯಃ ವಿಚಿತ್ರಂ ಫಲಂ ದದಾತಿ ವಿಚಿತ್ರಸಾಧನೈರಾರಾಧಿತತ್ವಾತ್ ವಿಚಿತ್ರಸಾಧನಾನ್ಯಪೇಕ್ಷ್ಯ ಫಲದಾತೃತ್ವಾತ್' ಈಶ್ವರನು ಮುಮುಕ್ಷುಗಳಿಗೋಸ್ಕರ ವಿಚಿತ್ರಫಲವನ್ನು ಕೊಡುತ್ತಾನೆ. ವಿಚಿತ್ರಸಾಧನಗಳಿಂದ ಆರಾಧಿಸಿಕೊಳ್ಳಲ್ಪಟ್ಟಪ್ರಯುಕ್ತ ವಿಚಿತ್ರಸಾಧನಗಳನ್ನು ಅಪೇಕ್ಷಿಸಿ ಫಲವನ್ನು ಕೊಡುವುದರಿಂದ ಎನ್ನುವ ಅನುಮಾನವನ್ನು ಹೃದಯದಲ್ಲಿಟ್ಟುಕೊಂಡು ಅನ್ಯಥಾ ಸಿದ್ಧಿಯನ್ನು ನಿರಾಕರಿಸುವುದಕ್ಕಾಗಿ ವಿಪಕ್ಷದಲ್ಲಿ ಬಾಧಕವನ್ನು ಹೇಳುತ್ತಾರೆ—

**ಮೂ ॥ ವೈಷಮ್ಯಂ ನಿರ್ಘೃಣತ್ವಂ ಚ ತೇನ ಸ್ಯಾತಾಂ ಪರಸ್ಯ ಚ ।**
**ಸಾಪೇಕ್ಷತ್ವಾದಿತಿ ಚ ತೌ ವಿದ್ಯಾಧೀಶೇನ ವಾರಿತೌ ॥ ೯೧ ॥**
**ತಾರತಮ್ಯಾತ್ಸಾಧನಾನಾಂ ಸಾಧ್ಯತಾದೃಕ್ತ್ವಮೀಶತಃ ।**
**ಅವೈಷಮ್ಯಾದಿ ಹೇತುಃ ಸ್ಯಾತ್ಸದೈವ ಪರಮೇಶ್ವರೇ ॥ ೯೨ ॥**

ಅ ॥ ತೇನ=ಸಾಧ್ಯಸಾಧನವೈರೂಪ್ಯದಿಂದ, ಪರಸ್ಯ ಚ=ಪರಮಾತ್ಮನಿಗೆ, ವೈಷಮ್ಯಂ=ವಿಷಮತ್ವವೂ, ನಿರ್ಘೃಣತ್ವಂಚ=ದಯಾರಾಹಿತ್ಯವೂ, ಸ್ಯಾತಾಂ = ಬರಬೇಕಾಗುವವು, ಇತಿ= ಹೀಗೆ, ತೌ ಚ=ಆ ವೈಷಮ್ಯ ನೈರ್ಘೃಣ್ಯರೂಪದೋಷಗಳು, ವಿದ್ಯಾಧೀಶೇನ=ಶ್ರೀ ವೇದವ್ಯಾಸರಿಂದ, ಸಾಪೇಕ್ಷತ್ವಾತ್ ಇತಿ=**'ವೈಷಮ್ಯನೈರ್ಘೃಣ್ಯೇ ನ ಸಾಪೇಕ್ಷತ್ವಾತ್ತಥಾ ಹಿ ದರ್ಶಯತಿ'** (ಸೂತ್ರ. ಅಧ್ಯಾ. ೨. ಪಾ. ೧. ಅಧಿ. ೧೦. ಸೂ. ೩೫.) ಎನ್ನುವ ಸೂತ್ರದಲ್ಲಿ ಕರ್ಮಸಾಪೇಕ್ಷತ್ವವನ್ನು ಅಂಗೀಕರಿಸಿಕೊಂಡು ವಾರಿತೌ = ನಿರಾಕರಿಸಲ್ಪಟ್ಟವು. (ಸಾಧನತಾರತಮ್ಯವನ್ನು ಒಪ್ಪಿಕೊಂಡು ಸಾಧ್ಯದಲ್ಲಿ ತಾರತಮ್ಯವನ್ನು ಒಪ್ಪಿಕೊಳ್ಳದಿದ್ದರೆ ಫಲವನ್ನು ಕೊಡುವ ಈಶ್ವರನಿಗೆ ವೈಷಮ್ಯ ನೈರ್ಘೃಣ್ಯಾದಿಗಳು ಬರಬೇಕಾಗುವವು ಎನ್ನುವ ಪ್ರಸಂಗಕ್ಕೆ ವಿಪರ್ಯಯ ಪರ್ಯವಸಾನವನ್ನುಪಪಾದಿಸುತ್ತಾರೆ) ಸಾಧನಾನಾಂ = ಸಾಧನಗಳ, ತಾರತಮ್ಯಾತ್=ನೀಚೋಚ್ಚಭಾವದಿಂದ, ಸದೈವ=ನಿಯಮದಿಂದ, ಈಶತಃ=ಶ್ರೀ ಹರಿಯಿಂದ ಉಂಟಾಗತಕ್ಕ, ಸಾಧ್ಯತಾದೃಕ್ತ್ವಂ=ಸಾಧ್ಯದ ತಾರತಮ್ಯವು, ಪರಮೇಶ್ವರೇ=ಶ್ರೀ ಹರಿಯಲ್ಲಿ, ಅವೈಷಮ್ಯಾದಿ ಹೇತುಃ= ಅವೈಷಮ್ಯಾದಿಗಳಿಗೆ ಕಾರಣವು, ಸ್ಯಾತ್=ಆಗುವುದು.

**ತಾ ॥ ನ್ಯಾಯಸುಧಾ—** (1) ಈಶ್ವರನು ಅನುಷ್ಠಿತವಾದ ಅಲ್ಪವಾದ ಸಾಧನಮಾಡಿದವನಿಗೆ ಅನುಷ್ಠಿತ ಮಹಾಸಾಧನವುಳ್ಳವರ ಸಮಾನಫಲವನ್ನು ಕೊಡುವುದಾದರೆ— ಆಗ ಇವನು ವಿಷಮನಾಗುವನು. ಅನುಷ್ಠಿತವಾದ ಮಹಾಸಾಧನವುಳ್ಳವನಿಗೆ ಅನುಷ್ಠಿತವಾದ ಅಲ್ಪಸಾಧನವುಳ್ಳವನ ಸಮಾನಫಲವನ್ನು ಕೊಟ್ಟಪಕ್ಷದಲ್ಲಿ ಆಗ ದಯಾರಹಿತನು ಆಗುವನು. (2) ಯಾವುದು ಪ್ರಮಾಣವಿರುದ್ಧವೋ, ಅಪ್ರಮಾಣಿಕವೋ ಅದು ಅನಿಷ್ಟವೆನ್ನಿಸುತ್ತದೆ. ಸೂತ್ರಕಾರರು

ಈಶ್ವರನಿಗೆ ವೈಷಮ್ಯಾದಿಗಳನ್ನು ವಾರಣಮಾಡಿದರಿಂದ ಅದು ಪ್ರಮಾಣವಿರುದ್ಧವಾಗಿರುವುದರಿಂದ ಹೇಗೆ ಅನಿಷ್ಟವಲ್ಲ? ಸೂತ್ರಪ್ರಾಮಾಣ್ಯವನ್ನು ಯಾರು ಅಂಗೀಕರಿಸುತ್ತಾರೋ ಅವರನ್ನು ಕುರಿತು ಹೇಳಿದ್ದು. (3) ಯಾರು ಸೂತ್ರಪ್ರಾಮಾಣ್ಯವನ್ನು ಅಂಗೀಕರಿಸದೆ ಈಶ್ವರನಿಗೆ ವೈಷಮ್ಯಾದಿಗಳ ಆಪಾದನಕ್ಕೆ ಇಷ್ಟತ್ವವನ್ನು ತಿಳಿಯುತ್ತಾರೋ, ಅವರನ್ನು ಕುರಿತು ವೇದಗಳ ಅಪ್ರಾಮಾಣ್ಯಕ್ಕೆ ಕಾರಣವಾಗಿ ವೈಷಮ್ಯಾದಿಗಳಿಗೆ ದೋಷತ್ವವನ್ನು ಸೂಚಿಸುವುದಕ್ಕಾಗಿ 'ತೌ ವಿದ್ಯಾಧೀಶೇನ ವಾರಿತೌ' ಎಂದು ಪುಲ್ಲಿಂಗಪ್ರಯೋಗವು. ಇಲ್ಲದಿದ್ದರೆ 'ತೇ ವಾರಿತೇ' ಎಂದು ಹೇಳುತ್ತಿರುವರು. ॥ ೯೧ ॥ ೯೨ ॥

ಸಾಧನ ಸಂಸ್ಕಾರ ಪೂರ್ವಕರ್ಮಗಳ ಅಪೇಕ್ಷೆಯನ್ನು ಅಂಗೀಕರಿಸಿಕೊಂಡು ಈಶ್ವರನು ಫಲವನ್ನು ಕೊಡುವುದರಿಂದ ವೈಷಮ್ಯಾದಿ ದೋಷಗಳು ಅವನಿಗೆ ಇರುವುದಿಲ್ಲವೆಂದು ಸೂತ್ರಕಾರರು ಪರಿಹಾರಮಾಡಿದ್ದು ವ್ಯರ್ಥವೇ. ಏಕೆಂದರೆ— ಫಲದಲ್ಲಿ ವೈಷಮ್ಯಾದಿಗಳನ್ನು ಪರಿಹರಿಸಿದರೂ ಸಾಧನಾದಿಗಳಲ್ಲಿ ಪರಿಹರಿಸಲಿಕ್ಕೆ ಅಶಕ್ಯವಾಗಿದೆ. ಹೇಗೆಂದರೆ— ಸಾಧನಾದಿಗಳಲ್ಲಿ ಪರಮೇಶ್ವರನಿಗೆ ಪ್ರೇರಕತ್ವವು ೧ ಇದೆಯೋ, ೨ ಇಲ್ಲವೋ, ೨ ಇಲ್ಲವಾದರೆ ಸರ್ವನಿಯಾಮಕತ್ವರೂಪಪರಮೇಶ್ವರತ್ವಕ್ಕೆ ಹಾನಿಯು ಬರಬೇಕಾಗುವುದು. ೧ ಪ್ರೇರಕತ್ವವು ಇದ್ದರೆ— ನಿಷ್ಕಾರಣವಾಗಿ ವಿಚಿತ್ರಸಾಧನಗಳನ್ನುಮಾಡಿಸುವವನಿಗೆ ವೈಷಮ್ಯಾದಿಗಳು ಬರುವುದರಿಂದ ಹಿಂದೆ ಸೂತ್ರದಲ್ಲಿ ಹೇಳಿದ ವೈಷಮ್ಯಾದಿ ನಿವಾರಣವು ಅನುಪಪನ್ನವು. ಎಂದರೆ— ಹೀಗೆ ಹೇಳಕೂಡದು. ಈ ಆಕ್ಷೇಪವನ್ನು ಸೂತ್ರಕಾರರೇ ನಿರಾಕರಿಸುತ್ತಾರೆ ಎನ್ನುತ್ತಾರೆ -

ಮೂ ॥ ಸ್ವಾತಂತ್ರ್ಯೇವಿದ್ಯಮಾನೇಽಪಿ ಸಾಧನಾದೌ ಪರೇಶಿತುಃ ।
ಅಪೇಕ್ಷ್ಯಾನಾದಿವೈಚಿತ್ರ್ಯಂ ನ ದೋಷ ಇತಿ ತದ್ವಚಃ ॥ ೯೩ ॥
ನಾನಾದಿತ್ವಾದಿತಿ ಹ್ಯುಕ್ತಮುಪಪದ್ಯತ ಇತ್ಯಪಿ ।
ಅಪೇಕ್ಷ್ಯೋಽಪಾಯವೈಷಮ್ಯಮುಪೇಯಸ್ಯ ತಥಾ ಸ್ಥಿತಿಃ ॥ ೯೪ ॥
ಮಯಾ ಕಯಾ ವಿರುದ್ಧಾ ಸ್ಯಾದ್ರಾಜಾದಾವಪಿ ದೃಶ್ಯತೇ ।
ತ್ಯಾಗೋ ದೃಷ್ಟಸ್ಯ ಚಾದೃಷ್ಟಕಲ್ಪನೇತಿ ಸುದುಷ್ಕರೌ ॥ ೯೫ ॥
ಮಾಯಿಭ್ಯೋಽನ್ಯೇನ ಕೇನಾಪಿ ತತ್ಕಿಮನ್ಯೈಶ್ಚ ವಾದಿಭಿಃ ।
ಮಾಯಿನೋಽತ್ರಾನುಗಮ್ಯಂತೇ ಶ್ರುತಹಾನ್ಯ ಶ್ರುತಗ್ರಹೌ ।
ಅನ್ಯತ್ರ ಮಾಯಿನಾಂ ಲಿಂಗೇ ತರ್ಕೇ ದೋಷಾಸ್ತತೋಽಧಿಕಾಃ ॥ ೯೬ ॥

ಅ ॥ ಪರೇಶಿತುಃ = ಸರ್ವೇಶ್ವರನಾದ ಶ್ರೀ ಹರಿಗೆ, ಸಾಧನಾದೌ = ಸಾಧನಾದಿಗಳಲ್ಲಿ, ಸ್ವಾತಂತ್ರ್ಯೇ = ಪ್ರಯೋಜಕಕರ್ತೃತ್ವವು, ವಿದ್ಯಮಾನೇಽಪಿ = ಇದ್ದಾಗ್ಯೂಕೂಡ, ಅನಾದಿ ವೈಚಿತ್ರ್ಯಂ = ಸಾಧನಾದಿಗಳಲ್ಲಿರುವ ಅನಾದಿಯಾದ ವೈಚಿತ್ರ್ಯವನ್ನು, ಅಪೇಕ್ಷ್ಯ = ಅಪೇಕ್ಷಿಸಿಕೊಂಡು, (ಪ್ರೇರಿಸುವುದರಿಂದ) ದೋಷಃ = ವೈಷಮ್ಯಾದಿದೋಷವು, ನ = ಇಲ್ಲ. ಇತಿ = ಹೀಗೆ, ತದ್ವಚಃ = ಸೂತ್ರಕಾರರ ವಚನವು, ಅಸ್ತಿ = ಇದೆ. (ಹಾಗಾದರೆ ಹೀಗೆ ಎಲ್ಲಾ ಕಡೆಗಳಲ್ಲಿಯೂ ಕರ್ಮಾದಿಗಳನ್ನು ಅಪೇಕ್ಷಿಸಿಕೊಂಡೇ ಫಲಾದಿಗಳನ್ನು ಕೊಡತಕ್ಕ ಶ್ರೀ ಹರಿಗೆ ಸ್ವಾತಂತ್ರ್ಯಹಾನಿ ರೂಪವಾದ ದೋಷವು ಬರಬೇಕಾಗುವುದು ಎಂದರೆ—) ದೋಷಃ = ಈ ದೋಷವೂಕೂಡ, ನ = ಇಲ್ಲ. (ಏಕೆಂದರೆ) ಪರೇಶಿತುಃ = ಶ್ರೀ ಹರಿಗೆ, ಸಾಧನಾದೌ = ಸಾಧನಾದಿಗಳಲ್ಲಿ,

ಸ್ವಾತಂತ್ರ್ಯೇ = ಸ್ವಾತಂತ್ರ್ಯವು, ವಿದ್ಯಮಾನೇಽಪಿ = ಇದ್ದಾಗ್ಯೂ (ತನ್ನ ಇಚ್ಛೆಯಿಂದಲೇ), ಅನಾದಿವೈಚಿತ್ರ್ಯಂ=ಅನಾದಿಯಾದ ಸಾಧನದ ವೈಚಿತ್ರ್ಯವನ್ನು, ಅಪೇಕ್ಷ್ಯ=ಅಪೇಕ್ಷಿಸಿಕೊಂಡು, ತದ್ವಚಃ = ಪ್ರೇರಕತ್ವವಿದೆ ಎನ್ನುವ ಅರ್ಥವನ್ನು ಪ್ರತಿಪಾದಿಸತಕ್ಕ ವೇದವ್ಯಾಸರ ವಚನವು, ಅಸ್ತಿ=ಇದೆ. (ಆ ವಚನವು ಯಾವುದೆಂದರೆ- ಕ್ರಮದಿಂದ ಎರಡು ಸೂತ್ರಗಳನ್ನು ಹೇಳುತ್ತಾರೆ.) ನಾನಾದಿತ್ವಾತ್=ಅನಾದಿತ್ವವಿದ್ದ ಪ್ರಯುಕ್ತ ದೋಷವಿಲ್ಲ. (ಅಂದರೆ— ಅದರಲ್ಲಿ ಆದ್ಯದೋಷವನ್ನು ಪರಿಹರಿಸುವುದಕ್ಕಾಗಿ, '**ನಕರ್ಮಾವಿಭಾಗಾದಿತಿ ಚೇನ್ನಾನಾದಿತ್ವಾತ್**' ಎನ್ನುವ (ಅಧ್ಯಾ. ೨. ಪಾ ೧. ಅಧಿ. ೧೦. ಸೂ. ೩೬.) ಸೂತ್ರವನ್ನು ಇದರಿಂದ ತೆಗೆದುಕೊಂಡಿರುವರು.) (ಎರಡನೇ ದೋಷವನ್ನು ಪರಿಹರಿಸುವುದಕ್ಕಾಗಿ) ಉಪಪದ್ಯತೇ ಇತ್ಯಪಿ= '**ಉಪಪದ್ಯತೇ ಚಾಪ್ಯುಪಲಭ್ಯತೇ ಚ**' (ಅಧ್ಯಾ. ೨. ಪಾ. ೧. ಅಧಿ. ೧೦. ಸೂ. ೩೭.) ಎನ್ನುವ ಸೂತ್ರವೂಕೂಡ, ಉಕ್ತ ಹಿ=ಹೇಳಲ್ಪಟ್ಟದಷ್ಟೆ. (ಈ ಪ್ರಕಾರ ಅನುಮಾನಕ್ಕೆ ಅನ್ಯಥಾ ಸಿದ್ಧಿಯನ್ನು ನಿರಾಕರಿಸಿ ಬಾಧಪ್ರತಿರೋಧಗಳನ್ನು ನಿರಾಕರಿಸುತ್ತಾರೆ.) ಉಪಾಯವೈಷಮ್ಯಂ = ಸಾಧನಕ್ಕೆ ವೈಷಮ್ಯವನ್ನು, ಅಪೇಕ್ಷ್ಯ = ಅಪೇಕ್ಷಿಸಿಕೊಂಡು, ಉಪೇಯಸ್ಯ = ಸಾಧ್ಯವಾದ ಫಲಕ್ಕೆ, ತಥಾಸ್ಥಿತಿಃ=ವೈಷಮ್ಯವು, (ಈಶ್ವರನಿಂದ ಮಾಡಲ್ಪಡುತ್ತದೆ ಎಂದು ನಮ್ಮಿಂದ ಸಾಧಿಸಲ್ಪಡತಕ್ಕದ್ದು. ಮಯಾ=ಪ್ರಮಾಣದಿಂದ, ಕಯಾ=ಯಾವುದರಿಂದ, ವಿರುದ್ಧಾ = ವಿರುದ್ಧವಾದುದು, ಸ್ಯಾತ್ = ಆಗುವುದು. (ಅನುಮಾನಾದಿಗಳಿಗೆ ವ್ಯಾಪ್ತಿಜ್ಞಾನಕ್ಕಾಗಿ ದೃಷ್ಟಾಂತವನ್ನು ಹೇಳುತ್ತಾರೆ ) ರಾಜಾದಾವಪಿ=ಪ್ರೇಕ್ಷಾವುಳ್ಳ, ವಿವೇಕವುಳ್ಳ ರಾಜಾದಿಗಳಲ್ಲಿ (ಸೇವಾನುರೂಪವಾದ ಫಲದಾನವೂ, ಪ್ರೇಕ್ಷಾವಂತನಲ್ಲದಿದ್ದವನಲ್ಲಿ ಸೇವಾನನುಗುಣ ಫಲವನ್ನು ಕೊಡುವ ಅವಿವೇಕಿಗಳಾದ ರಾಜಾದಿಗಳಲ್ಲಿ ವೈಷಮ್ಯಾದಿಗಳೂ ಕೂಡ) ದೃಶ್ಯತೇ = ಕಾಣಲ್ಪಡುತ್ತದೆ. (ಸಾಧ್ಯಸಾಧನಗಳಿಗೆ ವೈರೂಪ್ಯವನ್ನು ಕಲ್ಪಿಸಿದರೆ ಬಾಧಕಾಂತರವನ್ನು ಹೇಳುತ್ತಾರೆ.) (ಎಲ್ಲಾ ಕಡೆಗಳಲ್ಲಿಯೂ ಸಾಧ್ಯಸಾಧನೈಕರೂಪ್ಯವು ದೃಷ್ಟವಾಗಿರುವುದರಿಂದ ಸಾಧ್ಯಸಾಧನವೈರೂಪ್ಯವು ಎಲ್ಲಿಯೂ ದೃಷ್ಟವಾಗಿರುವದರಿಂದ ಪ್ರಕೃತದಲ್ಲಿ ವೈರೂಪ್ಯವನ್ನು ಶಂಕಿಸುವವನಿಗೆ) ದೃಷ್ಟಸ್ಯ ತ್ಯಾಗಃ=ದೃಷ್ಟವಾದುದಕ್ಕೆ ಪರಿತ್ಯಾಗವು, ಅದೃಷ್ಟಕಲ್ಪನಾಚ = ಅದೃಷ್ಟಕಲ್ಪನೆಯೂ ಕೂಡ, ಇತಿ=ಹೀಗೆ, (ದೋಷಗಳು ಪ್ರಸಕ್ತಗಳಾಗುವವು.) ಮಾಯಿಭ್ಯಃ ಅನ್ಯೇನ = ಮಾಯಾವಾದಿಗಳಿಂದ ವ್ಯತಿರಿಕ್ತನಾದ, ಕೇನಾಪಿ=ಯಾರಿಂದಲೂ ಈ ದೋಷಗಳು, ಸುದುಷ್ಕರೌ=ಅಂಗೀಕರಿಸಲಿಕ್ಕೆ ಅಶಕ್ಯಗಳು. (ಮಾಯಾವಾದಿಗಳು ಪ್ರಪಂಚಕ್ಕೆ ದೃಷ್ಟವಾದ ಸತ್ಯತ್ವಾದಿಗಳನ್ನು ಬಿಡುತ್ತಾರೆ. ಅದೃಷ್ಟವಾದ ಅನಿರ್ವಾಚ್ಯತ್ವಾದಿಗಳನ್ನು ಕಲ್ಪಿಸುತ್ತಾರೆ. ಆದಕಾರಣ ಅವರಿಗೆ ದೃಷ್ಟತ್ಯಾಗ ಅದೃಷ್ಟಕಲ್ಪನಾದಿಗಳೂ ಬಂದೇ ಬರುತ್ತವೆ. (ಇತರರು ಮಾಡದೆ ಇರುವ ದೃಷ್ಟತ್ಯಾಗಾದಿಗಳನ್ನು ಮಾಡುವವರಿಗೆ ದೋಷವು ಯಾವುದೆಂದರೆ-) ತತ್=ಹಾಗಾದರೆ, ಅತ್ರ= ದೃಷ್ಟತ್ಯಾಗಾದ್ಯನುಷ್ಠಾನ ವಿಷಯದಲ್ಲಿ, ಮಾಯಿನಃ=ಮಾಯಾವಾದಿಗಳು, ಅನ್ಯೈಶ್ಚವಾದಿಭಿಃ= ಇತರವಾದಿಗಳಿಂದ, ಅನುಗಮ್ಯಂತೇ ಕಿಂ = ಅನುಸರಿಸಲ್ಪಡುತ್ತಾರೋ ಏನು? (ಅಂದರೆ— ದೃಷ್ಟತ್ಯಾಗಾದಿಗಳ ಪ್ರಸಂಗದಿಂದ ಮಾಯಾವಾದಿಗಳನ್ನು ದೂಷಿಸತಕ್ಕವರಿಗೆ ಪುನಃ ಇಲ್ಲಿ ದೃಷ್ಟತ್ಯಾಗಾದಿಗಳನ್ನು ತಾವಾಗಿಯೇ ಮಾಡಿದರೆ ವ್ಯಾಹತಿಯು ಬರಬೇಕಾಗುವುದು.) (ಸಾಧ್ಯಸಾಧನಗಳಿಗೆ ವೈರೂಪ್ಯವನ್ನು ಶಂಕಿಸುವವನಿಗೆ ಅನಿಷ್ಟಾಂತರವನ್ನು ಹೇಳುತ್ತಾರೆ.) (ಹಿಂದೆ ಹೇಳಿದ ಪ್ರಕಾರ ಸಾಧ್ಯಸಾಧನಗಳಿಗೆ ಸಾರೂಪ್ಯವು ಶ್ರುತವಾದುದರಿಂದ, ಬೇರೆಪ್ರಕಾರ ಅಶ್ರುತವಾದುದರಿಂದ), ಅತ್ರ=ಇಲ್ಲಿ ವೈರೂಪ್ಯವನ್ನು ಅಂಗೀಕರಿಸಿದರೆ, ಮಾಯಿನಾಂ=ಮಾಯಿಗಳಿಗೆ, ಲಿಂಗೇ=ಜ್ಞಾಪಕಗಳಾದ, ಶ್ರುತಹಾನ್ಯಶ್ರುತಗ್ರಹಾವಪಿ=ಶ್ರುತಾರ್ಥಪರಿತ್ಯಾಗ, ಅಶ್ರುತಾರ್ಥ

ಸ್ವೀಕಾರಗಳೂ ಕೂಡ ಪ್ರಸಕ್ತಗಳಾಗುವವು. (ಮಾಯಾವಾದಿಗಳಾದರೂ ಶ್ರುತಿಸಿದ್ಧನಾದ, ಸರ್ವಜ್ಞತ್ವಾದಿಗಳಿಂದ ಯುಕ್ತನಾದ ಸಗುಣ ಬ್ರಹ್ಮನನ್ನು ಬಿಟ್ಟು, ಅಶ್ರುತನಾದ ನಿರ್ಗುಣನಾದ ಬ್ರಹ್ಮನನ್ನು ಅಂಗೀಕರಿಸುತ್ತಾರೆ. ದೃಷ್ಟತ್ಯಾಗ ಮೊದಲಾದ ನಾಲ್ಕನ್ನೂ, ೧ ದೃಷ್ಟತ್ಯಾಗ, ೨ ಅದೃಷ್ಟಕಲ್ಪನಾ, ೩ ಶ್ರುತಹಾನಿ, ೪ ಅಶ್ರುತಕಲ್ಪನಾ ಎನ್ನುವ ನಾಲ್ಕನ್ನು ಅಂಗೀಕರಿಸುವವರಿಗೆ ಬಾಧಕಾಂತರವನ್ನು ಹೇಳುತ್ತಾರೆ.) ತತ್ = ಪ್ರಕೃತದೋಷಗಳ ಮಧ್ಯದಲ್ಲಿ, ತತಃ = ದೃಷ್ಟತ್ಯಾಗಾದಿಗಳದೆಶೆಯಿಂದ, ಅಧಿಕಾಃ = ಬಹಿರ್ಭೂತಗಳಾದ, ದೋಷಾಃ = ದೋಷಗಳು, ಕೇ = ಯಾವುವು? (ಅಂದರೆ— ದೃಷ್ಟತ್ಯಾಗಾದಿಗಳನ್ನು ಮಾಡತಕ್ಕವನು ಪ್ರಮಿತವಾದ ಬೇರೆ ಪದಾರ್ಥವನ್ನು ಬಿಡಬೇಕಾಗುವುದು. ಅದೃಷ್ಟಕಲ್ಪನಾದಿಗಳನ್ನು ಮಾಡುವವನು ಅಪ್ರಾಮಾಣಿಕವಾದ ಇತರವಾದುದನ್ನು ಕಲ್ಪಿಸಬೇಕಾಗುವುದು.)

ತಾ || ಸ. ರ. ವಿ— (1) ಹಾಗಾದರೆ, ಅಧಿಕ ಸೇವೆಯಿಂದ ಅಧಿಕಫಲವೂ, ಅಲ್ಪ ಸೇವೆಯಿಂದ ಅಲ್ಪ ಫಲವೂ ರಾಜಾದಿಗಳಿಂದ ಕೊಡಲ್ಪಟ್ಟದ್ದು ದೃಷ್ಟವಾಗಿದೆ. ಬಹು ಕರ್ಮದಿಂದ ಬಹು ಸುಖವುಳ್ಳ ಸ್ವರ್ಗವೂ, ಅಲ್ಪ ಕರ್ಮದಿಂದ ಅಲ್ಪ ಸುಖವುಳ್ಳ ಸ್ವರ್ಗವೂ ವೇದದಿಂದ ಸಿದ್ಧವಾಗಿದೆ. ಇಲ್ಲವಾದರೆ ಕರ್ಮಬಾಹುಲ್ಯಕ್ಕೆ ವೈಯರ್ಥ್ಯವು ಬರಬೇಕಾಗುವುದು. ಹೀಗೆ ದೃಷ್ಟವಾದ, ನ್ಯಾಯಸಿದ್ಧವಾದ ಮೋಕ್ಷ ತಾರತಮ್ಯವನ್ನು ಬಿಟ್ಟು ವಿಪರೀತವಾಗಿ ಅಂಗೀಕರಿಸಿದರೆ, ಎಲ್ಲಾ ವಾದಿಗಳಿಗೂ ದೃಷ್ಟಹಾನಿಯೂ, ಅದೃಷ್ಟಕಲ್ಪನಾರೂಪಗಳಾದ ದೋಷಗಳೂ ಪ್ರಸಕ್ತಗಳಾಗುವವು. ಸರ್ವಶಬ್ದವಾಚ್ಯನಾದ ಬ್ರಹ್ಮನನ್ನು ಹೇಳತಕ್ಕ ಮಾಯಾವಾದಿಗಾದರೂ ಶ್ರುತಹಾನಿ, ಅಶ್ರುತ ಗ್ರಹರೂಪದೋಷಗಳೂ ಲಜ್ಜಾಕರಗಳಲ್ಲ ॥ ೯೩ ॥ ೯೪ ॥ ೯೫ ॥ ೯೬ ॥

ಹಾಗಾದರೆ ಮುಕ್ತಿಯಲ್ಲಿ ತಾರತಮ್ಯವಿದ್ದರೆ ಲೋಕದಂತೆಯೇ ಮುಕ್ತರಲ್ಲಿಯೂ, ಉಚ್ಚರಾದವರನ್ನು ನೋಡಿ ನೀಚರಿಗೆ ಈರ್ಷ್ಯಾದಿಗಳು ಏಕೆ ಬರಲಾರವು ಎಂದರೆ

**ಮೂ || ನಿಃಶೇಷಗತದೋಷಾಣಾಂ ಬಹುಭಿರ್ಜನ್ಮಭಿಃ ಪುನಃ || ೯೭ ||**
**ಸ್ಯಾದಾಪರೋಕ್ಷ್ಯಂ ಹಿ ಹರೇರ್ದ್ವೇಷೇರ್ಷ್ಯಾದಿಸ್ತತಃ ಕುತಃ |**
**ಭವೇಯುರ್ಯದಿ ಚೇರ್ಷ್ಯಾದ್ಯಾಃ ಸಮೇಷ್ವಪಿ ಕುತೋ ನ ತೇ || ೯೮ ||**

ಅ || ಹಿ = ಯಾವ ಕಾರಣದಿಂದ, ಬಹುಭಿಃ ಜನ್ಮಭಿಃ = ಬಹುಜನ್ಮಗಳಿಂದ, ನಿಃಶೇಷಗತದೋಷಾಣಾಂ = ಸಂಪೂರ್ಣವಾಗಿ ಹೋಗಲ್ಪಟ್ಟ ದೋಷಗಳುಳ್ಳ, ಪುನಃ = ಮತ್ತು (ಶ್ರವಣಾದಿಗಳುಳ್ಳ,) ಜ್ಞಾನಿಗಳಿಗೆ, ಹರೇಃ = ಶ್ರೀ ಹರಿಯು, ಆಪರೋಕ್ಷ್ಯಂ = ಪ್ರತ್ಯಕ್ಷತ್ವವು, (ಅಂದರೆ— ಅವರನ್ನು ಕುರಿತು ಹರಿಗೆ ಪ್ರತ್ಯಕ್ಷತ್ವವು,) ಸ್ಯಾತ್ = ಆಗುವುದೋ, ಹಿ = ಈ ಅರ್ಥವು, 'ಅನುಬಂಧಾದಿಭ್ಯಃ' ಎನ್ನುವಲ್ಲಿ ಪ್ರತಿಪಾದಿಸಿಕೊಳ್ಳಲ್ಪಟ್ಟದ್ದು ಪ್ರಸಿದ್ಧವಾಗಿದೆ. ತತಃ = ಆ ಕಾರಣದಿಂದ ಅಜ್ಞಾನಾದಿ ದೋಷಗಳು ಇಲ್ಲದಿರುವುದರಿಂದ ತನ್ಮೂಲಕವಾದ, ದ್ವೇಷೇರ್ಷ್ಯಾದಿಃ = ದ್ವೇಷ-ಈರ್ಷ್ಯೆ ಮೊದಲಾದ ದೋಷವು, ಕುತಃ = ಯಾವ ಕಾರಣದಿಂದ, ಅಂದರೆ ಮುಕ್ತರಿಗೆ ಅಂತಹ ದೋಷಗಳು ಆಪಾದಿಸಲಿಕ್ಕೆ ಶಕ್ಯವಾಗುವುದಿಲ್ಲ. (ಅಜ್ಞಾನಾದಿ ದೋಷಗಳಿಗೇನೇ ದ್ವೇಷಾದಿಗಳಲ್ಲಿ ಪ್ರಯೋಜಕತ್ವವು ಎನ್ನುವ ಅರ್ಥವನ್ನು ಪರರಿಂದಲೂ ಸ್ವೀಕಾರಮಾಡುವುದಕ್ಕಾಗಿ ಪ್ರತಿಬಂದಿಯನ್ನು ತೆಗೆದ ಕೊಳ್ಳುತ್ತಾರೆ.) (ತಾರತಮ್ಯವನ್ನು ಅಂಗೀಕರಿಸಿದರೆ ಮುಕ್ತರಿಗೆ) ಈರ್ಷ್ಯಾದ್ಯಾಃ = ಈರ್ಷ್ಯೆ ಮೊದಲಾದ ದೋಷಗಳು, ಯದಿ ಚ = ಯಾವ ಪಕ್ಷದಲ್ಲಿ, ಭವೇಯುಃ = ಆಪಾದಿಸಲ್ಪಡುತ್ತವೋ (ಆಗ) ಸಮೇಷ್ವಪಿ = ಸಮರಾಗಿ ಅಂಗೀಕೃತರಾದ ಮುಕ್ತರಲ್ಲಿಯೂ, (ಅಂದರೆ ಮುಕ್ತರಲ್ಲಿ

ಸಾಮ್ಯವನ್ನು ಅಂಗೀಕರಿಸಿದರೂ) ತೇ=ಆ ದೋಷಗಳು, ಕುತಃ=ಯಾವಕಾರಣದಿಂದ, ನ= ಬರಲಾರದು.

ಸ. ರ. ವಿ— (1) ಮೊದಲೇ ಬಹು ಜನ್ಮಗಳಲ್ಲಿ ಅನುಷ್ಠಿತವಾದ ತಪಸ್ಸು-ಜ್ಞಾನ ಮೊದಲಾದವುಗಳಿಂದ ಎಲ್ಲಾ ದೋಷಗಳನ್ನು ಕಳಕೊಂಡು ಆ ಮೇಲೆ ವಿಷ್ಣುವನ್ನು ಅಪರೋಕ್ಷೀಕರಿಸಿ ಮುಕ್ತಿಯನ್ನು ಹೊಂದಿದವರಲ್ಲಿ ಈರ್ಷ್ಯಾದಿ ದೋಷಶಂಕೆಯು ಇಲ್ಲ. ಹೀಗೆ ಉಚ್ಚ-ನೀಚಭಾವವು ಮುಕ್ತರಿಗೆ ಈರ್ಷ್ಯಾದಿ ದೋಷಗಳನ್ನು ಹೊಂದಿಸಿಕೊಡುವುದಾದರೆ ಸಮತ್ವವನ್ನು ತಿರಸ್ಕರಿಸುವುದು. ಲೋಕದಲ್ಲಿ ವಿದ್ಯೆ-ಐಶ್ವರ್ಯಾದಿಗಳಿಂದ ಸಮಾನಿಕರನ್ನು ನೋಡಿದರೂ ಈರ್ಷ್ಯಾದಿಗಳನ್ನು ಮಾಡತಕ್ಕ ಅವಿವೇಕಿಗಳೇ ದೃಷ್ಟರಾಗಿರುತ್ತಾರೆ. ಆದಕಾರಣ ಅನ್ವಯ ವ್ಯತಿರೇಕಗಳಿಂದ ಅವಿವೇಕಾದಿ ದೋಷವೇ ಈರ್ಷ್ಯಾದಿಗಳು ಹುಟ್ಟುವ ವಿಷಯದಲ್ಲಿ ಕಾರಣವು ಎಂದು ತಿಳಿಯತಕ್ಕದು. ಪರರ ಉನ್ನತಿಯಾಗಲೀ, ಸಮತ್ವವಾಗಲೀ ಕಾರಣವಲ್ಲ. ವಿವೇಕಾದಿ ಗುಣಗಳುಳ್ಳವರಲ್ಲಿ ಪರರ ಉನ್ನತಿಯಿಂದ ಉಪತಾಪಾದಿಗಳು ಹುಟ್ಟುವುದಿಲ್ಲ. ಮತ್ತೆ ಸಜ್ಜನರು ಪರೋನ್ನತಿಯಿಂದ ಸಂತೋಷಪಡುತ್ತಾರೆ. ಆದಕಾರಣ ಅಶೇಷದೋಷರಹಿತವಾದ ಮುಕ್ತರ ಉಚ್ಚ-ನೀಚಭಾವವು ಈರ್ಷ್ಯಾದಿ ದೋಷಗಳನ್ನು ಹೊಂದಿಸಿಕೊಡತಕ್ಕದಲ್ಲ

ತಾ || ನ್ಯಾಯಸುಧಾ— (1) ಯಾರು ನೀಚೋಚ್ಚಭಾವದಿಂದ ಕೂಡಿರುತ್ತಾರೋ, ಅವರು ಪರಸ್ಪರ ದ್ವೇಷಾದಿಗಳುಳ್ಳವರಾಗಿ ಕಾಣಲ್ಪಟ್ಟಿರುತ್ತಾರೆ. ಲೌಕಿಕಪುರುಷರಂತೆ ಎಂದು ವ್ಯಾಪ್ತಿಯನ್ನು ಹೇಳಬೇಕು, ಎಂದರೆ— ಹೀಗೆ ಹೇಳಬೇಕು. ಲೌಕಿಕರಿಗೆ ದ್ವೇಷಾದಿಗಳು ಇವೆ ಎನ್ನುವಲ್ಲಿ ಅಜ್ಞಾನಾದಿ ದೋಷತ್ವವೇ ಪ್ರಯೋಜಕವು. 'ಯತ್ರ ದ್ವೇಷಾದಿಮತ್ವಂ ತತ ದೋಷಿತ್ವಂ' ಎನ್ನುವ ವ್ಯಾಪ್ತಿಯು ಕಂಡದೆ. ಮುಕ್ತರಲ್ಲಿ ದೋಷವು ಕೂಡಲಾರದು. ಮುಕ್ತರಲ್ಲಿ ಔಪಾಧಿಕ ದೋಷಗಳನ್ನು ಹೇಳಬೇಕು. ಸ್ವಾಭಾವಿಕಗಳಾದ ದೋಷಗಳನ್ನು ಶಂಕಿಸಲಿಕ್ಕೂ ಅಶಕ್ಯವು. ಆ ದೋಷಗಳು ಭಗವಂತನ ಸಾಕ್ಷಾತ್ಕಾರವು ಹುಟ್ಟುವುದಕ್ಕಿಂತ ಮೊದಲೇ ಪ್ರಚುರವಾಗಿ ಹೋಗಿರುತ್ತವೆ. ಸಾಕ್ಷಾತ್ಕಾರದಿಂದ ಆದರ ಮೂಲವೇ ನಾಶವಾಗುತ್ತದೆ. ಮುಕ್ತಿಯಲ್ಲಿ ಉಪಾಧಿಯೇ ನಷ್ಟವಾದಪ್ರಯುಕ್ತ ಸ್ವಲ್ಪವೂ ಇರುವುದಿಲ್ಲ. ಆದಕಾರಣ ವ್ಯಾಪಕವೇ ಇಲ್ಲದಿರುವುದರಿಂದ, ವ್ಯಾಪ್ಯವೂ ಸುತರಾಂ ಇರುವುದಿಲ್ಲ. (2) ಮುಕ್ತರು ತಾರತಮ್ಯದಿಂದ ಯುಕ್ತರಾಗಿರುವುದಾದರೆ ಆಗ ದ್ವೇಷಾದಿಗಳುಳ್ಳವರು ಆಗಬೇಕಾಗುವರು ಎಂದು ಹೇಳುವವರು ಮುಕ್ತರ ಸಾಮ್ಯವುಳ್ಳವರೇ ಆಗಿರುತ್ತಾರೆ ಎಂದು ಹೇಳಬೇಕು. ಸಾಮ್ಯವನ್ನೂ ಅಂಗೀಕರಿಸಲಿಕ್ಕೆ ಶಕ್ಯವಲ್ಲ. ಮುಕ್ತರು ಸಮಾನಿಕರು ಆದರೆ ಆಗ ದ್ವೇಷಾದಿಗಳುಳ್ಳವರು ಆಗಬೇಕಾಗುವರು ಎಂದು ಅಲ್ಲಿಯೂ ಹಿಂದೆಹೇಳಿದ ಅನಿಷ್ಟವು ಬರಬೇಕಾಗುವುದು. ॥ ೯೭ ॥ ೯೮ ॥

ಸಾಮ್ಯವಿದ್ದರೆ ದ್ವೇಷಾದಿಗಳ ಪ್ರಸಕ್ತಿಯು ಹೇಗೆ ಎಂದರೆ— 'ಮುಕ್ತಾಃ ಯದಿ ತಾರತಮ್ಯೋಪೇತಾಃ ತರ್ಹಿ ದ್ವೇಷಾದಿಮಂತಃ ಸ್ಯುಃ' ಎಂದು ಪರರು ಹೇಳಿದ ಪ್ರಸಂಗದಲ್ಲಿ ಮೋಕ್ಷದಲ್ಲಿ ಹೇಗೆ ಆಪಾದಕ ಆಪಾದ್ಯಗಳಿಗೆ ಸಾಹಚರ್ಯವಿದೆಯೋ, ಹಾಗೆಯೇ ಸಾಮ್ಯಕ್ಕೂ ದ್ವೇಷಾದಿ ಸಾಹಚರ್ಯವು ದೃಷ್ಟವಾಗಿದೆ ಎನ್ನುತ್ತಾರೆ.

**ಮೂ || ತಪ್ಯಮಾನಾಃ ಸಮಾನ್ ದೃಷ್ಟ್ವಾ ದ್ವೇಷೇರ್ಷ್ಯಾದಿಯುತಾ ಅಪಿ ।**
**ದೃಶ್ಯಂತೇ ಬಹವೋ ಲೋಕೇ ದೋಷಾ ಏವಾತ್ರ ಕಾರಣಂ ॥ ೯೯ ॥**
**ಯದಿ ನಿರ್ದೋಷತಾ ತತ್ರ ಕಿಮಾಧಿಕ್ಯೇನ ದೂಷ್ಯತೇ ।**
**ಯದ್ಯನ್ಯದರ್ಶನಾಭಾವಾದೀರ್ಷ್ಯಾದಿರ್ವಿನಿವಾರ್ಯತೇ ॥ ೧೦೦ ॥**

ಅ || ಸಮಾನ್=ಸಮಾನಿಕರನ್ನು, ದೃಷ್ಟ್ವಾ = ನೋಡಿ, ತಪ್ಯಮಾನಾಃ=ದುಃಖ ಪಡತಕ್ಕವರು, ದ್ವೇಷೇರ್ಷ್ಯಾದಿ ಯುತಾ ಅಪಿ=ದ್ವೇಷ-ಈರ್ಷ್ಯ ಮೊದಲಾದ ದೋಷಗಳಿಂದ ಕೂಡಿದವರೂ ಕೂಡ. ಬಹವಃ=ಬಹುಮಂದಿ, ಲೋಕೇ=ಲೋಕದಲ್ಲಿ, ದೃಶ್ಯಂತೇ=ಕಾಣಲ್ಪ ಡುತ್ತಾರೆ. (ಈ ಪ್ರಕಾರ ನಾವು ಸಾಮ್ಯವಾದಿಗೆ ಅತಿಪ್ರಸಂಗವನ್ನು ಹೇಳುತ್ತಿರಲು ಆತನು ಇಷ್ಟೇ ಹೇಳಬೇಕು.) ಅತ್ರ ಲೋಕೇ=ಲೋಕದಲ್ಲಿ, ದೋಷಾ ಏವ = ದೋಷಗಳೇ, ಕಾರಣಂ=ದ್ವೇಷಾದಿಗಳಿಗೆ ಕಾರಣವು. (ಸಾಮ್ಯವು ಇದ್ದರೂ ಸಖಿಗಳಲ್ಲಿ ದ್ವೇಷಾದಿಗಳು ಇಲ್ಲ. ಸಾಮ್ಯವಿಲ್ಲದಿದ್ದರೂ ಕೆಲವುಕಡೆ ದ್ವೇಷಾದಿಗಳು ಇವೆ. ಮುಕ್ತರಲ್ಲಿ ದೋಷಗಳೇ ಇಲ್ಲ. ಆದುದರಿಂದ ಸಾಮ್ಯವಿದ್ದರೂ ದ್ವೇಷಾದಿಗಳಿಗೆ ಪ್ರಸಕ್ತಿಯಿಲ್ಲ) (ಆದುದರಿಂದ ಪ್ರಕೃತವೇನಾ ಯಿತೆಂದರೆ—) ಯದಿ=ಯಾವ ಪಕ್ಷದಲ್ಲಿ, (ಹೀಗೆ ದೋಷಗಳಿಗೇನೇ ದ್ವೇಷಾದಿಕಾರಣತ್ವವಿದ್ದುದ ರಿಂದ) ತತ್ರ=ಮುಕ್ತರಲ್ಲಿ, ನಿರ್ದೋಷತಾ=ನಿರ್ದೋಷತ್ವವನ್ನು ಅಂಗೀಕರಿಸಿದರೆ, ಆಧಿಕ್ಯೇನ= ಹೀನಾಧಿಕಭಾವವನ್ನು ಅಂಗೀಕರಿಸಿದರಿಂದ, ಕಿಂ = ಏನು, ದೂಷ್ಯತೇ=ದೂಷಿಸಲ್ಪಡುತ್ತದೆ. (ಯಾವುದೂ ದೂಷಿಸಲ್ಪಡುವುದಿಲ್ಲ.) (ಸಾಮ್ಯವನ್ನು ಅಂಗೀಕರಿಸುವವನೂ ನಿರ್ದೋಷತ್ವ ದಿಂದಲೇ ದ್ವೇಷಾದಿಪ್ರಸಂಗಗಳನ್ನಿವಾರಣೆಮಾಡಬೇಕು. ತಾರತಮ್ಯವನ್ನು ಅಂಗೀಕರಿಸುವ ನಾವೂ ಕೂಡ ನಿರ್ದೋಷತ್ವದಿಂದಲೇ ಈರ್ಷ್ಯಾದಿಗಳನ್ನು ನಿರಾಕರಿಸುವೆವು. ಇಷ್ಟು ವಿಶೇಷವು. ಮುಕ್ತರಲ್ಲಿ ತಾರತಮ್ಯವು ಪ್ರಮಾಣಸಿದ್ಧವೇ. ಸಾಮ್ಯವು ಪ್ರಮಾಣಪ್ರಮಿತವಲ್ಲ, ಎಂದು ಸಿದ್ಧ ವಾಯಿತು.) (ಪುನಃ ಶಂಕಿಸುತ್ತಾನೆ) ಯದಿ=ಯಾವ ಪಕ್ಷದಲ್ಲಿ, (ಸಾಮ್ಯದಿಂದ ಪ್ರಸಕ್ತಗಳಾದ ದ್ವೇಷಾದಿಗಳನ್ನು ನಿರ್ದೋಷತ್ವದಿಂದ ನಿವಾರಣೆಮಾಡಿದ್ದಗೆ ಹಿಂದೆ ಹೇಳಿದ್ದು ಕೂಡಬಹುದಿತ್ತು. ಹೀಗೆ ಹೇಳುವುದಿಲ್ಲ) ಅನ್ಯದರ್ಶನಾಭಾವಾತ್=ತನ್ನಿಂದ ಸಮಾನಿಕನಾದ ಮುಕ್ತಾಂತರನ ದರ್ಶನವೇ ತನಗೆ ಇಲ್ಲದಿರುವುದರಿಂದ, ಈರ್ಷ್ಯಾದಿಃ = ಈರ್ಷ್ಯೆಮೊದಲಾದುದು. ದೋಷವು ವಿನಿವಾರ್ಯತೇ=ನಿವಾರಿಸಲ್ಪಡುತ್ತದೆ. (ಅಂದರೆ — ಕೇವಲ ಸಮಾನಿಕರು ಇರೋಣಮಾತ್ರವೇ ದ್ವೇಷಾದಿಗಳಿಗೆ ಕಾರಣವಲ್ಲ. ಮತ್ತೆ ಸಮಾನಿಕರ ದರ್ಶನವೂ, ಮುಕ್ತನು ಸಮನಾದ ಮುಕ್ತಾಂತರನನ್ನು ನೋಡುವುದಿಲ್ಲ ಆದುದರಿಂದ ದ್ವೇಷಾದಿಗಳು ಇಲ್ಲ.) || ೯೯ || ೧೦೦ ||

ಹೀಗಾದರೆ— ತಾರತಮ್ಯ ಇರೋಣ ಮಾತ್ರವು ದ್ವೇಷಾದಿಗಳಿಗೆ ಕಾರಣವಲ್ಲ. ಮತ್ತೆ ತನ್ನಕ್ಕಿಂತ ಅಧಿಕರನ್ನು ನೋಡೋಣವೇ ದ್ವೇಷಾದಿಗಳಿಗೆ ಕಾರಣವು. ಮುಕ್ತನು ತನ್ನಿಂದ ಅಧಿಕನಾದ ಮುಕ್ತಾಂತರನನ್ನು ನೋಡುವುದಿಲ್ಲ. ಆದುದರಿಂದ ತಾರತಮ್ಯವು ಇದ್ದರೂ ದ್ವೇಷಾದಿಗಳು ಪ್ರಸಕ್ತಗಳಾಗುವುದಿಲ್ಲವೆಂದು ತಾರತಮ್ಯವಿದ್ದರೂ ಪರಿಹಾರವನ್ನು ಇಲ್ಲಿ ಹೇಳಲಿಕ್ಕೆ ಶಕ್ಯವಾಗುತ್ತದೆ. ಆದಾಗ್ಯೂ ಮುಕ್ತನು ಮುಕ್ತಾಂತರವನ್ನು ನೋಡುವುದಿಲ್ಲವೆನ್ನುವುದು ಪ್ರಾಮಾಣಿಕವಾಗದಿರುವುದರಿಂದ ಅನ್ಯದರ್ಶನಾಭಾವವನ್ನೇ ದೂಷಿಸುತ್ತಾರೆ—

**ಮೂ || ಅದರ್ಶನಾದರತ್ಯಾದಿಃ ಕಥಂ ತೇನ ನಿವಾರ್ಯತೇ |**
**ಬ್ರಹ್ಮಣೋಽಪ್ಯರತಿರ್ದೃಷ್ಟಾ ಪೂರ್ವಮೇಕಾಕಿನಃ ಶ್ರುತೌ || ೧೦೧ ||**

ಅ || ತೇನ=ಹೀಗೆ ಅನ್ಯದರ್ಶನಾಭಾವದಿಂದ ದ್ವೇಷಾದಿಗಳನ್ನು ನಿವಾರಣೆಮಾಡತಕ್ಕ ಆ ಪುರುಷನಿಂದ, ಅದರ್ಶನಾತ್ = ಅನ್ಯದರ್ಶನಾಭಾವದಿಂದ ಪ್ರಸಕ್ತವಾದ, ಅರತ್ಯಾದಿಃ= ಸುಖಾಭಾವ-ಆಲಸ್ಯ-ಭಯ ಮೊದಲಾದುದು, ಕಥಂ=ಹೇಗೆ, ನಿವಾರ್ಯತೇ=ನಿರಾಕರಿಸಲ್ಪಡು ತ್ತದೆ. (ಅಂದರೆ— ಮುಕ್ತನಿಗೆ ಅನ್ಯದರ್ಶನಾಭಾವವು ಕೂಡುವುದಾದರೆ ಈ ಪರಿಹಾರವು ಕೂಡುತ್ತಿತ್ತು. ಹೀಗೆ ಮುಕ್ತನಿಗೆ ಅನ್ಯದರ್ಶನಾಭಾವವೇ ಇಲ್ಲ. ಏಕೆಂದರೆ— ಮುಕ್ತನು

ಅಚೇತನನಲ್ಲ. ಹಾಗಾದರೆ ಅಪಸಿದ್ಧಾಂತವು ಬರಬೇಕಾಗುವುದು, ಆದಕಾರಣ ಚೇತನನಿಗೆ ಅನ್ಯ ದರ್ಶನವಿಲ್ಲದಿದ್ದರೆ ಸುಖಾಭಾವಾದಿಗಳು ಪ್ರಸಕ್ತಗಳೇ ಆಗುತ್ತವೆ.) (ಹಾಗಾದರೆ— ಇತರ ಪದಾರ್ಥಗಳ ದರ್ಶನದಲ್ಲಿ ಆಸಕ್ತರಾದ ಲೌಕಿಕರೇ ಅನ್ಯದರ್ಶನಾದಿಗಳು ಇಲ್ಲದಿದ್ದರೆ ದುಃಖಾದಿ ಗಳನ್ನು ಹೊಂದುವರು. ಮುಕ್ತರು ಹಾಗಲ್ಲ. ಆದಕಾರಣ ಮುಕ್ತರಿಗೆ ದುಃಖಾದಿಗಳು ಪ್ರಸಕ್ತ ಗಳಾಗುವುದಿಲ್ಲ. ಎಂದರೆ) ಏಕಾಕಿನಃ ಬ್ರಹ್ಮಣೋಽಪಿ = '**ಜ್ಞಾನಮಪ್ರತಿಘಂ ಯಸ್ಯ ವೈರಾಗ್ಯಂ ಚ ಜಗತ್ಪತೇಃ । ಐಶ್ವರ್ಯಂ ಚೈವ ಸಹ ಸಿದ್ಧಂ ಚತುಷ್ಟಯಂ**' ಎಂದು ಪ್ರಮಿತನಾದಾಗ್ಯೂ ಏಕಾಕಿಯಾದ ಬ್ರಹ್ಮನಿಗೂ, ಪೂರ್ವಂ = ಆದಿಕಾಲದಲ್ಲಿ, ಶ್ರುತೌ = ಶ್ರುತಿಯಲ್ಲಿ, ಅರತಿಃ = ಸುಖಾಭಾವವು, ದೃಷ್ಟಾ = ಕಾಣಲ್ಪಟ್ಟದೆ.

**ತಾ ॥ ಸ. ರ. ವಿ—** (1) ಹೀಗೆ ಮುಕ್ತನಿಗೆ ದೋಷವಿಲ್ಲದಿರುವುದರಿಂದಲೇ ಈರ್ಷ್ಯಾದಿ ನಿವಾರಣವು ಸಮೀಚೀನವು. ಅನ್ಯರ ಅದರ್ಶನದಿಂದ ಅಲ್ಲ. ಹಾಗಿದ್ದರೆ ಸುಖಾಭಾವಾದಿಗಳೂ ಬರಬೇಕಾಗುವವು. ಏಕಾಕಿಯಾಗಿ ಇತರರನ್ನು ನೋಡದಿರುವವರಿಗೆ ಲೋಕದಲ್ಲಿ ಭೀತ್ಯಾದಿಗಳು ಕಂಡಿವೆ. ಅಂತಹ ಚತುರ್ಮುಖನಿಗೂ ಜಗದಾದಿಗಳಲ್ಲಿ ಸುಖಾಭಾವವು ಕಂಡಿದೆ. '**ಸ ವೈ ನೈವ ರೇಮೇ ತಸ್ಮಾದೇಕಾಕೀ ನ ರಮತೇ ಸದ್ವಿತೀಯಮೈಚ್ಛತ್**' ಎಂದು ಶ್ರುತಿಯು ॥೧೧॥

ಆ ಶ್ರುತಿಗಳನ್ನು ಅರ್ಥತಃ ಪಠನಮಾಡುತ್ತಾರೆ—

**ಮೂ ॥ ನೈವ ರೇಮೇ ಸ ಚೈಕಾಕೀ ತಸ್ಮಾನ್ನ ರಮತೇ ಕ್ವಚಿತ್ ।**
**ದ್ವಿತೀಯಮೈಚ್ಛತ್ತೇನಾಸಾವಿತಿ ಶ್ರುತಯಃ ಊದಿರೇ ॥ ೧೦೨ ॥**
**ಯದೀಚ್ಛಾ ನೈವ ತತ್ರಾಸ್ತೀತ್ಯೇವ ತತ್ಕಲ್ಪ್ಯತೇ ಮೃಷಾ ।**
**ಶ್ರುತ್ಯುಕ್ತನಿರ್ದೋಷತ್ವೈವಂ ಕಿಂ ನಾಂಗೀಕ್ರಿಯತೇ ಸ್ವಯಂ ॥ ೧೦೩ ॥**

ಅ ॥ ಸ ಚ ಏಕಾಕೀ = ಆ ಏಕಾಕಿಯಾದ ಬ್ರಹ್ಮನಾದರೂ, ನೈವ ರೇಮೇ = ಕ್ರೀಡಿಸ ಲಿಲ್ಲ. ತಸ್ಮಾತ್ = ಆದುದರಿಂದ, ಕ್ವಚಿತ್ = ಎಲ್ಲಿಯೂ ಈಗಲೂ, ನ ರಮತೇ = ಏಕಾಕಿಯಾದರೆ ಯಾರೊಬ್ಬನೂ ಸುಖಪಡುವುದೇ ಇಲ್ಲ. ತೇನ = ಆದುದರಿಂದ, ಅಸೌ = ಬ್ರಹ್ಮನು, ದ್ವಿತೀಯಂ = ಎರಡನೇ ವಸ್ತುವನ್ನು, ಐಚ್ಛತ್ = ಇಚ್ಛಿಸಿದನು. ಇತಿ = ಈ ಪ್ರಕಾರ, ಶ್ರುತಯಃ = '**ಸ ವೈ ನೈವ ರೇಮೇ ತಸ್ಮಾದೇಕಾಕೀ ನ ರಮತೇ ಸ ದ್ವಿತೀಯಮೈಚ್ಛತ್**' ಇತ್ಯಾದಿ ಶ್ರುತಿಗಳು, ಊದಿರೇ = ಹೇಳಿದವು. (ಮುಕ್ತನು ಇನ್ನೊಬ್ಬರನ್ನು ನೋಡದಿದ್ದರೂ ಆತನಿಗೆ ದುಃಖಾದಿಗಳನ್ನು ಆಪಾದಿಸಲಿಕ್ಕೆ ಬರುವುದಿಲ್ಲ. ಲೋಕದಲ್ಲಿ ಅನ್ಯದರ್ಶನೆಯಲ್ಲಿ ಇಚ್ಛೆಯಿದ್ದಾಗ ಅನ್ಯದರ್ಶನವಾಗ ದಿದ್ದರೆ ದುಃಖಾದಿಗಳು ದೃಷ್ಟಗಳಾಗಿವೆ. ಮುಕ್ತನಿಗೆ ಅನ್ಯದರ್ಶನೇಚ್ಛೆಯೇ ಇಲ್ಲ. ಆದುದರಿಂದ ಮುಕ್ತನಿಗೆ ಅನ್ಯದರ್ಶನವಿಲ್ಲದಿದ್ದರೂ ದುಃಖಾದಿಗಳು ಪ್ರಸಕ್ತಗಳಾಗುವುದಿಲ್ಲವೆಂದರೆ—) ಯದಿ = ಯಾವ ಪಕ್ಷದಲ್ಲಿ, ತತ್ = ಆ ಮುಕ್ತಿಯಲ್ಲಿ, ತತ್ರ = ಅನ್ಯದರ್ಶನವಿಷಯದಲ್ಲಿ, ಇಚ್ಛಾ = ಇಚ್ಛೆಯು, ನೈವ ಅಸ್ತಿ = ಇಲ್ಲವೇ ಇಲ್ಲ. ಇತಿ = ಹೀಗೆ, ಮೃಷೈವ = ಪ್ರಮಾಣವಿಲ್ಲದೇನೇ, ಕಲ್ಪ್ಯತೇ = ಕಲ್ಪಿಸ ಲ್ಪಡುತ್ತದೋ, ತತ್ = ಹಾಗಾದರೆ, ಏವಂ = ಹೀಗೆಯೇ, ಸ್ವಯಂ = ಸಾಕ್ಷಾತ್ತಾಗಿ ಶ್ರುತ್ಯುಕ್ತ ವಾದ, ಶ್ರುತ್ಯುಕ್ತನಿರ್ದೋಷತಾ = '**ಭಿದ್ಯತೇ ಹೃದಯಗ್ರಂಥಿಃ**' ಇತ್ಯಾದಿ ಶ್ರುತಿಗಳಲ್ಲಿ ಹೇಳ ಲ್ಪಟ್ಟ ದೋಷಲೇಶಾತ್ಯಂತಾಭಾವವು, ಕಿಂ = ಯಾವುದಕ್ಕಾಗಿ, ನಾಂಗೀಕ್ರಿಯತೇ = ಅಂಗೀಕರಿಸ ಲ್ಪಡುವುದಿಲ್ಲ.

ತಾ || ಸ. ರ. ವಿ— (1) ಸ್ವೇಚ್ಛಾನುಸಾರಿ ಮುಕ್ತರಲ್ಲಿಯೂ ಸಾಧನಭೇದದಿಂದ ಉಚ್ಚ ನೀಚಭಾವವು ಆವಶ್ಯಕವು. ಅದರಲ್ಲಿ ಪ್ರಮಾಣವಿರಹಿತವಾದ ಅನ್ಯದರ್ಶನೇಚ್ಛಾರಾಹಿತ್ಯವನ್ನು ಕಲ್ಪಿಸಿಕೊಂಡು ಈರ್ಷ್ಯಾದಿಗಳನ್ನು ನಿವಾರಣಮಾಡುವುದಕ್ಕಿಂತ ಶ್ರುತಿಯಲ್ಲಿ ಹೇಳಿದ ನಿರ್ದೋಷತ್ವದಿಂದಲೇ ನಿವಾರಿಸುವುದು ಶ್ರೇಷ್ಠವು. ಆದಕಾರಣ ಶ್ರುತಿಯಲ್ಲಿ ಹೇಳಲ್ಪಟ್ಟ ಇಚ್ಛೆಯನ್ನು ಬಿಟ್ಟು ಅರತ್ಯಾದಿಪರಿಹಾರಕಲ್ಪನದಂತೆಯೇ ಶ್ರುತಿಯಲ್ಲಿ ಹೇಳಿದ ತಾರತಮ್ಯವನ್ನು ಬಿಟ್ಟು ಮುಕ್ತರಿಗೆ ಸಾಮ್ಯವನ್ನು ಕಲ್ಪಿಸುವುದೂ ಕೂಡ ಪ್ರಮಾಣವಿಲ್ಲದಿರುವ ಕೇವಲ ಆಗ್ರಹದಿಂದಲೇ ತೋರಿದ್ದು

ನ್ಯಾಯಸುಧಾ— (1) ಮುಕ್ತರಿಗೆ ಸಾಮ್ಯವನ್ನು ಅಂಗೀಕರಿಸಿ ಅನ್ಯದರ್ಶನಾಭಾವದಿಂದ ದ್ವೇಷಾದಿಗಳನ್ನು ಪರಿಹರಿಸಿಕೊಂಡು ಅನ್ಯದರ್ಶನೇಚ್ಛಾಭಾವದಿಂದಲೂ ದುಃಖಾದಿಗಳನ್ನು ಪರಿಹರಿಸುವವನಿಗೆ ಅಪ್ರಾಮಾಣಿಕ ಅನೇಕ ಪದಾರ್ಥಗಳ ಕಲ್ಪನೆಯು ಪ್ರಾಮಾಣಿಕಪರಿತ್ಯಾಗವೂ ಕೂಡ ಆಗುವವು. ಸಾಮ್ಯ, ಅನ್ಯದರ್ಶನಾಭಾವ, ಅನ್ಯದರ್ಶನೇಚ್ಛಾಭಾವಗಳು ಅಪ್ರಾಮಾಣಿಕಗಳಾಗಿವೆ. ತಾರತಮ್ಯಾದಿಗಳು ಅಪ್ರಾಮಾಣಿಕಗಳಾಗಿವೆ. ಅಪ್ರಾಮಾಣಿಕವಾದ ಅನೇಕ ಕಲ್ಪನೆಗಿಂತ ಪ್ರಮಾಣಪ್ರಮಿತವಾದ ತಾರತಮ್ಯವನ್ನು ಅಂಗೀಕರಿಸಿಕೊಂಡು ದ್ವೇಷಾದಿಗಳನ್ನು ನಿರಾಕರಿಸುವುದಕ್ಕಾಗಿ ಶ್ರುತಿಸಿದ್ಧವಾದ ನಿರ್ದೋಷತ್ವಸ್ವೀಕಾರವೇ ಶ್ರೇಷ್ಠವು. || ೧೦೨ || ೧೦೩ ||

ಹಿಂದೆ ಹೇಳಿದ್ದನ್ನೇ ಸ್ಪಷ್ಟವಾಗಿ ಹೇಳುತ್ತಾರೆ—

**ಮೂ || ತಾರತಮ್ಯಂ ಚ ಕಾಮಂ ಚ ಶ್ರುತಮೇವಾತಿಹಾಯ ತು |**
**ಅಶ್ರುತಾ ಸಮತಾ ಕೇನ ಕಲ್ಪ್ಯತೇ ಯುಕ್ತಿಮಾನಿನಾ || ೧೦೪ ||**
**ಕಿಂ ತನ್ಮಾನಂ ಸಮತ್ವೇ ತೇ ಮುಕ್ತಾನಾಮುಪಲಭ್ಯತೇ |**
**ವೃಥಾಯಮಾಗ್ರಹಃ ಕೇನ ಶ್ರುತಹಾನ್ಯಶ್ರುತಗ್ರಹೇ || ೧೦೫ ||**

ಅ || ತಾರತಮ್ಯಂ ಚ=ನೀಚೋಚ್ಚಭಾವವನ್ನು , ಕಾಮಂ ಚ=ಇಚ್ಛೆಯನ್ನೂ ಅನ್ಯದರ್ಶನವನ್ನೂ ಕೂಡ, ಶ್ರುತಮೇವ = 'ಸ ಯೋ ಮನುಷ್ಯಾಣಾಂರಾದ್ಧಃ' 'ಕಾಮಸ್ಯ ಯತ್ರಾಪ್ತಾಃ ಕಾಮಾಃ' 'ಅಕ್ಷಣ್ವಂತಃ ಕರ್ಣವಂತಃ ಸಖಾಯಃ' ಇತ್ಯಾದಿಗಳಲ್ಲಿ ಶ್ರುತವಾದುದನ್ನೇ, ಅತಿಹಾಯ=ಬಿಟ್ಟು, ಅಶ್ರುತಾ = ಕೇಳಲ್ಪಡದೆ ಇದ್ದ, ಸಮತಾ = ಸಾಮ್ಯವು, ಅನ್ಯದರ್ಶನಾಭಾವವೂ ಇಚ್ಛಾಭಾವವೂ ಕೂಡ, ಯುಕ್ತಿಮಾನಿನಾ=ಯುಕ್ತಿಯಲ್ಲಿ ಬಹುಮಾನವುಳ್ಳ, ಕೇನ=ಯಾರಿಂದ, ಕಲ್ಪ್ಯತೇ=ಕಲ್ಪಿಸಲ್ಪಡುತ್ತದೆ. (ಅಂದರೆ— ಯಾರಿಂದಲೂ ಹೀಗೆ ಕಲ್ಪಿಸಲ್ಪಡುವುದಿಲ್ಲ.) (ಹಾಗಾದರೆ— ಸಾಮ್ಯವು ಅಶ್ರುತವಾದಾಗ್ಯೂ ಅಪ್ರಾಮಾಣಿಕವಲ್ಲ. ಸಾಮ್ಯದಲ್ಲಿ ಶ್ರುತಿಯೇ ಪ್ರಮಾಣವಲ್ಲ, ಎಂದರೆ—) ತೇ=ನಿನಗೆ, ಮುಕ್ತಾನಾಂ=ಮುಕ್ತರಿಗೆ, ಸಮತ್ವೇ = ಸಾಮ್ಯವಿಷಯದಲ್ಲಿ, ತತ್ = ಶ್ರುತಿಯಿಂದ ಇತರವಾದ, ಕಿಂ ಮಾನಂ=ಯಾವ ಪ್ರಮಾಣವು, ಉಪಲಭ್ಯತೇ=ಕಾಣಲ್ಪಡುತ್ತದೆ. (ಶ್ರುತಿಯಿಂದ ಇತರವಾದುದು ಯಾವ ಪ್ರಮಾಣವೂ ಕಾಣುವುದಿಲ್ಲ. ಆದಕಾರಣ ಇತರ ಪ್ರಮಾಣವಿಲ್ಲದಿರಲು ಅಶ್ರುತವಾದುದರಿಂದ ಅಪ್ರಾಮಾಣಿಕತ್ವವೇ ಸಿದ್ಧಿಸುತ್ತದೆ.) ('ಯದ್ಯನ್ಯದರ್ಶನಾಭಾವಾತ್' ಇತ್ಯಾದಿಗಳಿಂದ ಹೇಳಲ್ಪಟ್ಟದ್ದನ್ನು ಉಪಸಂಹಾರಮಾಡುತ್ತಾರೆ.) ಶ್ರುತಹಾನ್ಯಶ್ರುತಗ್ರಹೇ=ಶ್ರುತಾರ್ಥಪರಿತ್ಯಾಗ ಅಶ್ರುತಾರ್ಥಸ್ವೀಕಾರ ಇವುಗಳ ವಿಷಯದಲ್ಲಿ ಅಥವಾ ಶ್ರುತಹಾನಿಯಿಂದ ಸಹಿತವಾದ ಅಶ್ರುತಾರ್ಥಸ್ವೀಕಾರದಲ್ಲಿ, ಅಯಂ ಆಗ್ರಹಃ = ಈ ಆಗ್ರಹವು, ವೃಥಾ=ವ್ಯರ್ಥವಾಗಿ, ಕೇನ=ಯಾವುದರಿಂದ? (ಯಾವಕಾರಣದಿಂದಲೂ ಆಗಲಾರದು. ಆದುದರಿಂದ ಮಾಡಕೂಡದು.) || ೧೦೪ || ೧೦೫ ||

ಮುಕ್ತರಿಗೆ ತಾರತಮ್ಯ ವಿಷಯದಲ್ಲಿ ಅನುಮಾನಾಂತರವನ್ನು ಹೇಳುತ್ತಾರೆ—

**ಮೂ ॥ ಮೋಕ್ಷೇಽಪಿ ತಾರತಮ್ಯೇತಶ್ಚೇತನತ್ವಾದ್ಯಥಾ ಪುರಾ (ತ್ಪುರಾ ಯಥಾ) ।**
**ಇತ್ಯುಕ್ತ ಉತ್ತರಂ ಕಿಂ ತೇ ಕಲ್ಪನಾಮಾತ್ರವಾದಿನಃ ॥**
**ನ ಚ ದುಃಖಾದಿಕಂ ಕಲ್ಪ್ಯಂ ನಿರ್ದುಃಖತ್ವ ಶ್ರುತೇರ್ಬಲಾತ್ ॥ ೧೦೬ ॥**

**ಅ ॥** ಯಥಾ ಪುರಾ=ಮೊದಲಿನಂತೆಯೇ, ಚೇತನತ್ವಾತ್ = ಚೈತನ್ಯವಿದ್ದುದರಿಂದ, ಮೋಕ್ಷೇಪಿ=ಮುಕ್ತಿಯಲ್ಲಿಯೂ ಕೂಡ, ತಾರತಮ್ಯೇತಃ=ನೀಚೋಚ್ಚಭಾವದಿಂದ ಕೂಡಿದವನು, ಇತಿ=ಹೀಗೆ, ಉಕ್ತೇ=ಪ್ರಯೋಗಿಸುತ್ತಿರಲು, ಕಲ್ಪನಾಮಾತ್ರವಾದಿನಃ=ಕೇವಲ ಕಲ್ಪನೆಯಿಂದ ಹೇಳತಕ್ಕ, ತೇ=ನಿನಗೆ, ಕಿಮುತ್ತರಂ=ಏನು ಉತ್ತರವು? (ವ್ಯಾಪ್ತಿಪಕ್ಷಧರ್ಮತೆಗಳು ಪ್ರಮಿತಗಳಾಗಿರುವುದರಿಂದ ಯಾವ ಉತ್ತರವೂ ಇಲ್ಲ). ನಿರ್ದುಃಖತ್ವ ಶ್ರುತೇಃ= ನಿರ್ದುಃಖತ್ವಪ್ರತಿಪಾದಕಶ್ರುತಿಯ, ಬಲಾತ್ = ಸಾಮರ್ಥ್ಯದಿಂದ, ದುಃಖಾದಿಕಂ = ದುಃಖ ಮೊದಲಾದುದು, ನ ಚ ಕಲ್ಪ್ಯಂ=ಮುಕ್ತನಿಗೆ ಅನುಮೇಯವಲ್ಲ.

**ತಾ ॥ ನ್ಯಾಯಸುಧಾ—** (1) 'ಮುಕ್ತಾಃ ತದಾನೀಂತನೇನ ಪರಸ್ಪರಂ ತಾರತಮ್ಯೇನೋಪೇತಾಃ ಚೇತನತ್ವಾತ್ ಸಂಸಾರಿಣೋ ಯಥಾ=ಮುಕ್ತರು ಆಗ ಇರತಕ್ಕ ತಾರತಮ್ಯದಿಂದ ಪರಸ್ಪರವಾಗಿ ಯುಕ್ತರು ಚೇತನತ್ವವಿದ್ದಪ್ರಯುಕ್ತ ಸಂಸಾರಿಗಳಂತೆಯೇ, ಅಥವಾ 'ಮುಕ್ತ್ಯುತ್ತರಕ್ಷಣವರ್ತೀ ಮುಕ್ತಃ ಪ್ರಾಗ್ಯತಃ ಅಧಿಕತ್ವ ಹೀನತ್ವಾಭ್ಯಾಮುಪೇತಸ್ವರೂಪೋಽಭೂತ್ ಇದಾನೀಮಪಿ ತಾಭ್ಯಾಮುಪೇತಃ=ಮುಕ್ತಿಯ ಉತ್ತರಕ್ಷಣದಲ್ಲಿರತಕ್ಕ ಮುಕ್ತನು ಮೊದಲು ಯಾವ ಆಧಿಕ್ಯಹೀನತ್ವಗಳಿಂದ ಯುಕ್ತವಾದ ಸ್ವರೂಪವುಳ್ಳವನು ಆಗಿದ್ದನೋ ಈಗಲೂ ಆ ಸ್ವರೂಪಗಳಿಂದಲೇ ಯುಕ್ತನು ಎಂದನುಮೇಯಿಸಬೇಕು. ಸಾಮಾನ್ಯವಾಗಿಯೇ ವ್ಯಾಪ್ತಿಯನ್ನು ಹೇಳಬೇಕು. ಹೀಗೆ ಕಲ್ಪನಾಮಾತ್ರದಿಂದ ಹೇಳತಕ್ಕ ನಿನಗೆ ಏನು ಉತ್ತರವು? ಅಂದರೆ— ಶ್ರುತಿಗಳಿಗೆ ಅರ್ಥಾಂತರವಿರುವುದರಿಂದಲೂ, ಬೇರೆ ಪ್ರಮಾಣಗಳು ಇಲ್ಲದಿರುವುದರಿಂದಲೂ ತನ್ನ ಉತ್ಪ್ರೇಕ್ಷಾಮೂಲಕವಾಗಿಯೇ ಮುಕ್ತರಿಗೆ ತಾರತಮ್ಯ ಭಾವವನ್ನು ಹೇಳತಕ್ಕ ನಿನಗೆ ಏನು ಉತ್ತರವು? (2) ಹೀಗೆ ಅನುಮೇಯಿಸಿದರೆ-- ಆಗ **'ಮುಕ್ತಾಃ ದುಃಖಾದ್ಯುಪೇತಾಃ ಚೇತನತ್ವಾತ್ ಸಂಸಾರಿವತ್'** ಮುಕ್ತರು ದುಃಖಾದಿಗಳಿಂದ ಕೂಡಿರುತ್ತಾರೆ, ಚೇತನತ್ವವಿದ್ದಪ್ರಯುಕ್ತ ಸಂಸಾರಿಗಳಂತೆಯೇ ಎಂದೂ ಅನುಮೇಯಿಸಬಹುದು. ಹೀಗೆ ಅನುಮಾನವು ಅತಿಪ್ರಸಂಗದಿಂದ ಪರಾಹತವಾಗಿದೆ. ಎಂದರೆ— ನಿರ್ದುಃಖತ್ವಾದಿ ಪ್ರತಿಪಾದಕ ಶ್ರುತಿಯ ಬಲದಿಂದ ದುಃಖಾಪರಿಪೂರ್ಣ ಆನಂದಾದಿಗಳನ್ನು ಕಲ್ಪಿಸಕೂಡದು. (೩) ಅಂದರೆ— ಸಮಾನ ಯೋಗಕ್ಷೇಮವುಳ್ಳ ಅನುಮಾನದಿಂದಲೇ ದುಃಖಾದಿರೂಪವಾದ ಅನಿಷ್ಟವನ್ನು ಸಾಧಿಸಬೇಕು. ಮುಕ್ತರಿಗೆ ಚೇತನತ್ವವನ್ನು ಸಾಧಿಸಿಕೊಡತಕ್ಕ ಅನುಮಾನವು ಮುಕ್ತರಿಗೆ ತಾರರಮ್ಯವನ್ನು ಸಾಧಿಸಿಕೊಡತಕ್ಕ ಅನುಮಾನದಿಂದ ಸಮಾನ ಯೋಗಕ್ಷೇಮವುಳ್ಳದ್ದಲ್ಲ. ಏಕೆಂದರೆ- ದುಃಖಾದಿಗಳನ್ನು ಸಾಧಿಸತಕ್ಕ ಅನುಮಾನವು ನಿರ್ದುಃಖತ್ವಾದಿಗಳನ್ನು ಪ್ರತಿಪಾದಿಸತಕ್ಕ ಶ್ರುತಿಯಿಂದ ಬಾಧಿತವಾಗಿದೆ. ಶ್ರುತಿಯು ಅಪೌರುಷೇಯವಾದುದರಿಂದಲೂ, ಧರ್ಮಿಗ್ರಾಹಕವಾದುದರಿಂದಲೂ ಅನುಮಾನಕ್ಕಿಂತ ಬಲಿಷ್ಟವಾಗಿದೆ. ತಾರತಮ್ಯಾನುಮಾನವು ಅಬಾಧಿತವಾಗಿದೆ. ॥ ೧೦೬ ॥

ಇದನ್ನೇ ವಿವರಿಸುತ್ತಾ ಮುಕ್ತನಿಗೆ ನಿರ್ದುಃಖತ್ವಾದಿಗಳನ್ನು ಪ್ರತಿಪಾದಿಸತಕ್ಕ ಶ್ರುತಿಗಳನ್ನು ಪಠನಮಾಡಿ ಅವುಗಳ ತಾತ್ಪರ್ಯವನ್ನು ಹೇಳುತ್ತಾರೆ—

**ಮೂ ॥ ಶೋಕಂ ತರತ್ಯಾತ್ಮವೇತ್ತಾ ತೀರ್ಣಃ ಸರ್ವಾನದುಃಖಭಾಕ್ ॥ ೧೦೭ ॥**
**ಯೇನಾನಂದ್ಯೇವ ಭವತಿ ನ ಶೋಚತಿ ಕದಾಚನ ।**
**ಕಿಲ್ಬಿಷಸ್ಪೃತ್ಪಿತುಷಣಿರರಂಹಿತ ಇಹೇಶ್ವರಃ ॥ ೧೦೮ ॥**
**ಯಂ ಯಮಂತಮಭಿಪ್ರೇಪ್ಸುಃ ಸ ಸಂಕಲ್ಪಾದ್ಭವೇದಿಹ ।**
**ಇತ್ಯಾದಿಶ್ರುತಯೋ ಮಾನಂ ನಿರ್ದುಃಖತ್ವಾದಿ ಸಂಪದಿ ॥ ೧೦೯ ॥**
**ಅತೋ ದುಃಖಾದ್ಯನುಮಯಾ ನಾವಕಾಶೋಽತ್ರ ಲಭ್ಯತೇ ।**
**ತಾರತಮ್ಯಾನುಮಾ ತೇನ ಭವೇನ್ನಾತಿಪ್ರಸಂಗಿನೀ ॥ ೧೧೦ ॥**
**ಶ್ರುತಿಯುಕ್ತಿಬಲಾದೇವ(ವಂ)ತಾರತಮ್ಯಂ ವಿಭಾವ್ಯತೇ ।**
**ಮುಕ್ತಾವಪಿ ತತಃ ಕೋಽತ್ರ ವಿರೋಧಂ ಕರ್ತುಮೀಶತೇ ॥ ೧೧೧ ॥**
॥ ಸೂ ॥ ೧೪ ॥ ೧೫ ॥ ೧೬ ॥ ೧೭ ॥ ೧೮ ॥ ೧೯ ॥ ೨೦ ॥ ೨೧ ॥ ೨೨ ॥
॥ ೨೩ ॥ ೨೪ ॥ ೨೫ ॥ ೨೬ ॥ ೨೭ ॥ ೨೮ ॥ ೨೯ ॥ ೩೦ ॥ ೩೧ ॥ ೩೨ ॥
॥ ೩೩ ॥ ಅಧಿ ॥ ೪ ॥

ಅ ॥ ಆತ್ಮವೇತ್ತಾ=ಆತ್ಮಜ್ಞಾನಿಯು, ಶೋಕಂ=ದುಃಖವನ್ನು, ತರತಿ=ದಾಟುತ್ತಾನೆ. (ಇದರಿಂದ ೧ **'ತರತಿ ಶೋಕಮಾತ್ಮವಿತ್'** ಎನ್ನುವ ಶ್ರುತಿಯು) ಸರ್ವಾನ್=ಎಲ್ಲಾ ಶೋಕಗಳನ್ನು, ತೀರ್ಣಃ=ದಾಟದವನು, (ಇದರಿಂದ ೨ **'ತೀರ್ಣೋಽಹಿತದಾಸರ್ವಾನ್ ಶೋಕಾನ್ ಹೃದಯಸ್ಯಭವತಿ'** ಎನ್ನುವ ಶ್ರುತಿಯು) ಅದುಃಖಭಾಕ್=ದುಃಖವನ್ನು ಹೊಂದುವುದಿಲ್ಲ. (ಇದರಿಂದ ೩ **'ನಾನಂದಂ ಕಂಚಿದುಪಸ್ಪೃಶತಿ'** ಎನ್ನುವ ಶ್ರುತಿಯು) ಯೇನ=ಯಾವುದರಿಂದ, ಆನಂದೀ ಏವ=ಆನಂದವುಳ್ಳವನೇ, ಭವತಿ=ಆಗುತ್ತಾನೆ. ಕದಾಚನ=ಯಾವಾಗಲೂ, ನ ಶೋಚತಿ = ದುಃಖಪಡುವುದಿಲ್ಲವೋ, (ಇದರಿಂದ ೪ **'ತದ್ವೈ ಜ್ಯೈವಂ ಮನೋ ಯೇನಾನಂದ್ಯೇವ ಭವತ್ಯಥ ನ ಶೋಚತಿ'** ಎನ್ನುವ ಶ್ರುತಿಯು) (ಮುಕ್ತರ) ಕಿಲ್ಬಿಷಸ್ಪೃತ್=ದುಃಖವನ್ನು ಸಹಿಸುವುದಿಲ್ಲ, (ಮುಕ್ತರಿಗೆ) ಪಿತುಷಣಿಃ=ಅನ್ನವನ್ನು ಕೊಡತಕ್ಕವನು, ಅರಂ=ಅತ್ಯಂತವಾಗಿ, ಹಿತಃ=ಇಂದ್ರಿಯಗಳಿಗೋಸ್ಕರ ಹಿತಕರನಾಗುತ್ತಾನೆ. ಇಹ = ಈ ಮುಕ್ತರ ವಿಷಯದಲ್ಲಿ ಶ್ರೀ ಹರಿಯೇ, ಈಶ್ವರಃ=ನಿಯಾಮಕನಾಗಿರುತ್ತಾನೆ. (ಇದರಿಂದ ೫ **'ಸರ್ವೇ ನಂದಂತಿ ಯಶಸಾ ಗತೇನ ಸಭಾಸಾಹೇನ ಸಖ್ಯಾ ಸಹಾಯುಃ । ಕಿಲ್ಬಿಷಸ್ಪೃತ್ಪಿತುಷಣಿರ್ಹ್ಯೇಷಾಮರಂ ಹಿತೋ ಭವತಿ ವಾಜಿನಾಯ'** ಪರಸ್ಪರವಾಗಿ ಮಿತ್ರರಾದ ಎಲ್ಲಾ ಮುಕ್ತರೂ ಸುಖಾಗಮನವುಳ್ಳ ಯಶಸ್ಸುಳ್ಳ, ಸಖಿಯಾದ ಪರಮೇಶ್ವರ ನಿಮಿತ್ತದಿಂದ ಸಂತೋಷಪಡುತ್ತಾರೆ. ಅಥವಾ ಕೀರ್ತಿಯಿಂದಲೂ, ವ್ಯಾಪ್ತಿಯಿಂದಲೂ, ಪ್ರತಿಭಾದಿಗುಣಗಳಿಂದಲೂ ಸಭೆಯನ್ನು ಗೆಲ್ಲತಕ್ಕ ಚೇತನನಿಗೆ ಸಖಿಯಾದ ಈಶ್ವರನಿಂದ ಎಲ್ಲಾ ಮುಕ್ತರೂ ಸಂತೋಷಪಡುತ್ತಾರೆ. ಏಕೆಂದರೆ ಈಶ್ವರನಾದ ಶ್ರೀ ಹರಿಯೇ ಈ ಮುಕ್ತರ ದುಃಖವನ್ನು ಸಹಿಸುವುದಿಲ್ಲ, ಅನ್ನವನ್ನು ಕೊಡತಕ್ಕವನು, ಅತ್ಯಂತವಾಗಿ ಶ್ರೀ ಹರಿಯೇ ಇಂದ್ರಿಯಗಳಿಗೋಸ್ಕರ ಆಯಾ ವಿಷಯಭೋಗಗಳನ್ನುಕೊಟ್ಟು ಅತಿಶಯವಾಗಿ ಹಿತಕರನಾಗಿರುತ್ತಾನೆ, ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು ) ಯಂ ಯಂ ಅಂತಂ=ಯಾವಯಾವ ಸ್ಥಾನವನ್ನು, ಅಭಿಪ್ರೇಪ್ಸುಃ=ಇಚ್ಛಿಸುತ್ತಾನೋ, ಸಃ = ಅದು, ಸಂಕಲ್ಪಾತ್=ಸಂಕಲ್ಪದಿಂದಲೇ, ಇಹ=ಮುಕ್ತಿಯಲ್ಲಿ, ಭವೇತ್=ಆಗುವುದು. (ಇದರಿಂದ ೬ **'ಯಂ ಯಮಂತಮಭಿಕಾಮೋ ಭವತಿ ಯಂ ಕಾಮಂ ಕಾಮಯತೇ ಸೋಽಸ್ಯ ಸಂಕಲ್ಪಾದೇವ ಸಮುತ್ತಿಷ್ಠತಿ'** ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು.) ಇತ್ಯಾದಿ

ಶ್ರುತಯಃ=ಇವೇ ಮೊದಲಾದ ಶ್ರುತಿಗಳು (ಮುಕ್ತರಿಗೆ) ನಿರ್ದುಃಖತ್ವಾದಿಸಂಪದಿ=ನಿರ್ದುಃಖತ್ವವೊದಲಾದ ಸಂಪತ್ತಿನಲ್ಲಿ, ಮಾನಂ=ಪ್ರಮಾಣವು, ಅತಃ=ಶ್ರುತಿ ಬಾಧಿತವಾದಪ್ರಯುಕ್ತ, ದುಃಖಾದ್ಯನುಮಯಾ=ದುಃಖಾದಿಗಳನ್ನು ಸಾಧಿಸಿಕೊಡತಕ್ಕ ಅನುಮಾನದಿಂದಲೂ,('ಮುಕ್ತಾಃ ದುಃಖಾದ್ಯುಪೇತಾಃ' ಎನ್ನುವ ಪ್ರತಿಜ್ಞೆಯು ಸ್ವವ್ಯಾಹತವಾಗಿರುವುದರಿಂದಲೂ) ಅವಕಾಶಃ=ಅವಕಾಶವು, ಅತ್ರ=ಮುಕ್ತರಲ್ಲಿ, ನ ಲಭ್ಯತೇ=ಹೊಂದಲ್ಪಡುವುದಿಲ್ಲ. (ತಸ್ಮಾತ್=ಬಾಧವಿಲ್ಲದಿರುವುದರಿಂದ, ಸಮಾನ ಯೋಗಕ್ಷೇಮತ್ವ ವಿಲ್ಲದಿರುವುದರಿಂದ) ತೇನ=ಅದರಿಂದ ದುಃಖಸಾಧಕವಾದ ಚೇತನತ್ವಾನುಮಾನದಿಂದ, ತಾರತಮ್ಯಾನುಮಾ=ತಾರತಮ್ಯಾನುಮಾನವು, ಅತಿಪ್ರಸಂಗಿನೀ=ಅತಿಪ್ರಸಂಗವುಳ್ಳದ್ದೋ, ನ ಭವೇತ್ = ಆಗಲಾರದು. (ಮುಕ್ತತಾರತಮ್ಯ ಸಾಧನವನ್ನುಪಸಂಹಾರಮಾಡುತ್ತಾರೆ.) ಏವಂ=ಹೀಗೆ, ಶ್ರುತಿಯುಕ್ತಿಬಲಾದೇವ=ಶ್ರುತಿಯುಕ್ತಿಗಳ ಬಲದಿಂದಲೇ, ತಾರತಮ್ಯಂ = ತಾರತಮ್ಯವು, ವಿಭಾವ್ಯತೇ = ಚೆನ್ನಾಗಿ ಅನುಭವ ಸಿದ್ಧವಾಗಿದೆ. ತತಃ=ಆದಕಾರಣ, ಮುಕ್ತಾವಪಿ=ಮುಕ್ತಿಯಲ್ಲಿಯೂ, ಅತ್ರ = ಮುಕ್ತರ ತಾರತಮ್ಯ ವಿಷಯದಲ್ಲಿ, ಕೇ = ಯಾವ ವಾದಿಗಳು, ವಿರೋಧಂ = ವಿರೋಧವನ್ನು, ಕರ್ತುಂ = ಮಾಡಲಿಕ್ಕೆ, ಈಶತೇ=ಸಮರ್ಥರಾಗುತ್ತಾರೆ.

ತಾ || ಸ. ರ. ವಿ— (೧) 'ಮುಕ್ತಬ್ರಹ್ಮಾದಯಸ್ತಾರತಮ್ಯೋಪೇತಾಃ ಚೇತನತ್ವಾತ್ ಸಂಸಾರಿ ಬ್ರಹ್ಮಾದಿವತ್' ಎಂದನುಮಾನವು, ಮುಕ್ತರಲ್ಲಿ ತಾರತಮ್ಯವನ್ನು ಸಾಧಿಸಿದಂತೆಯೇ ಈ ಅನುಮಾನವು ದುಃಖಾದಿಗಳನ್ನು ಸಾಧಿಸುತ್ತದೆ ಎಂದು ಹೇಳಕೂಡದು. ಬಹು ಶ್ರುತಿಗಳಿಂದ ಬಾಧಿತವಾದಪ್ರಯುಕ್ತ ಮುಕ್ತರಲ್ಲಿ ದುಃಖಾದಿಗಳನ್ನು ಅನುಮೇಯಿಸಲಿಕ್ಕೆ ಅಶಕ್ಯವಾಗಿದೆ. (2) ವಿಷಮ ಸಾಧನಗಳಿಗೆ ಯೋಗ್ಯವಾಗಿ ವಿಷಮವಾದ ಮೋಕ್ಷವನ್ನೇ ಮುಮುಕ್ಷುಗಳಿಗೆ ಈಶ್ವರನು ಕೊಡದಿದ್ದರೆ ಈಶ್ವರನಿಗೆ ವೈಷಮ್ಯ ನೈರ್ಘೃಣ್ಯಗಳೇ ಬರಬೇಕಾಗುವುವು. ಅಧಿಕ ಸಾಧನವುಳ್ಳ ಜ್ಞಾನಿಗೆ ಎಂತಹ ಮೋಕ್ಷವನ್ನು ಕೊಡುತ್ತಾನೋ ಅಂತಹ ಮೋಕ್ಷವನ್ನೇ ಅಲ್ಪ ಸಾಧನವುಳ್ಳವನಿಗೂ ಈಶ್ವರನು ಕೊಟ್ಟರೆ ವಿಷಮನಾಗುವನು ಅಲ್ಪಸಾಧನವುಳ್ಳವನಿಗೆ ಎಂತಹ ಮುಕ್ತಿಯನ್ನು ಕೊಡುತ್ತಾನೋ ಅಂತಹ ಮುಕ್ತಿಯನ್ನೇ ಅಧಿಕಸಾಧನವುಳ್ಳವನಿಗೂ ಕೊಡುವವನಾದರೆ ನೈರ್ಘೃಣ್ಯವು ಬರಬೇಕಾಗುವುದು. ಈಶ್ವರನಿಗಾದರೂ ವೈಷಮ್ಯ-ನೈರ್ಘೃಣ್ಯ ದೋಷಗಳನ್ನು ಅಂಗೀಕರಿಸಲಿಕ್ಕೆ ಅಶಕ್ಯಗಳು, ಆದಕಾರಣ ಜ್ಞಾನಾದಿ ಸಾಧನ ತಾರತಮ್ಯವನ್ನು ಅನುಸರಿಸಿ, ಮುಕ್ತಿತಾರತಮ್ಯವನ್ನು ಮಾಡುವುದಾದರೇನೇ ಈಶ್ವರನಿಗೆ ವೈಷಮ್ಯಾದಿ ದೋಷರಾಹಿತ್ಯವು ಸಿದ್ಧಿಸುತ್ತದೆ. ಇಲ್ಲವಾದರೆ ಸಿದ್ಧಿಸಲಾರದು. ಮುಕ್ತಿಗೆ ಅನೇಕವಿಧಗಳಾದ ಸಾಧನಗಳನ್ನು ಮಾಡಿಸಲಿಕ್ಕೆ ಈಶ್ವರನು ಸಮರ್ಥನಾದಾಗ್ಯೂ ಪುರುಷರ ಅನಾದಿ ಜನ್ಮದಿಂದ ಮಾಡಲ್ಪಟ್ಟ ಅದೃಷ್ಟವೈಚಿತ್ರ್ಯವನ್ನು ಅಪೇಕ್ಷಿಸಿಕೊಂಡು ಬಹುವಿಧಗಳಾದ ಸಾಧನಗಳನ್ನು ಮಾಡಿರುತ್ತಾನೆ. ವೈಷಮ್ಯಾದಿಗಳನ್ನು ಶಂಕಿಸಕೂಡದು. (3) ಅನಾದ್ಯದೃಷ್ಟವೈಚಿತ್ರ್ಯವನ್ನೂ ತನ್ನ ಇಚ್ಛೆಯಿಂದಲೇ ಅನುಸರಿಸತಕ್ಕ ವಿಷ್ಣುವಿಗೆ ನಿರಂಕುಶವಾದ ಐಶ್ವರ್ಯವೂ ಯುಕ್ತವು. (4) ಪೌರುಷೇಯಾಪೌರುಷೇಯಾಗಮಗಳಲ್ಲಿ ಸಾಧನ ತಾರತಮ್ಯವು ಕಂಡಪ್ರಯುಕ್ತ ಯಾವ ಪ್ರಮಾಣದಿಂದಲೂ ವಿರುದ್ಧವಲ್ಲ. ಲೋಕದಲ್ಲಿ ಅಧಿಕಮುಕ್ತರಲ್ಲಿ ದುಃಖಾದಿಗಳನ್ನು ಅನುಮೇಯಿಸಲಿಕ್ಕೆ ಅಶಕ್ಯವಾಗಿದೆ. ಮತ್ತು ಮುಕ್ತರಲ್ಲಿ ನಿರ್ದುಃಖತ್ವವೂ ಆಪ್ತಕಾಮತ್ವವೂ ಶ್ರುತಿಸಿದ್ಧವೂ ಆಗಿದೆ. (5) ಆದುದರಿಂದ ೧ **'ತರತಿಶೋಕಮಾತ್ಮವಿತ್'** ೨ **'ಶೀರ್ಣೋಽಹಿ ತದಾ'** ೩ **'ಯೇನಾನಂದ್ಯೇವ ಭವತಿ'** ೪ **'ಯಂ ಯಮಂತಮಭಿಕಾಮೋ ಭವತಿ ಯಂ ಯಂ ಕಾಮಯತೇ ಸೋಽಸ್ಯ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ'**

'ಸರ್ವೇ ನಂದಂತಿ' ಇತ್ಯಾದಿ ಶ್ರುತಿಗಳಿಂದ ವಿರುದ್ಧವಾದ ದುಃಖಾದಿಗಳನ್ನು ಬಿಟ್ಟು ಮುಕ್ತರಿಗೆ ತಾರತಮ್ಯವನ್ನು ಸಾಧಿಸತಕ್ಕ ಅನುಮಾನವು ಅತಿಪ್ರಸಕ್ತವಾಗುವುದಿಲ್ಲ. ಆದ ಕಾರಣ ಮುಕ್ತರ ತಾರತಮ್ಯವು ಹಿಂದೆ ಹೇಳಿದ ಪ್ರಕಾರ ಶ್ರುತಿಯುಕ್ತಿಗಳಿಂದ ಸಿದ್ಧವಾಗಿದೆ. ॥ ೧೦೭ ॥ ॥ ೧೦೮ ॥ ೧೦೯ ॥ ೧೧೦ ॥ ೧೧೧ ॥ ಸೂ. ೧೪ ॥ ೧೫ ॥ ೧೬ ॥ ೧೭ ॥ ೧೮ ॥ ೧೯ ॥ ೨೦ ॥ ೨೧ ॥ ॥ ೨೨ ॥ ೨೩ ॥ ೨೪ ॥ ೨೫ ॥ ೨೬ ॥ ೨೭ ॥ ೨೮ ॥ ೨೯ ॥ ೩೦ ॥ ೩೧ ॥ ೩೨ ॥ ೩೩ ॥ ಅಧಿ. ೪ ॥

ಸ್ತುತ್ಯಧಿಕರಣವು ಸಮಾಪ್ತವಾಯಿತು.

---

# ಉಭಯಲಿಂಗಾಧಿಕರಣವು.

## ಅಧಿಕಾರಿಕಾರಿಕಾಧಿಕರಣವು.

### 'ಓಂ ಸರ್ವಥಾಪಿ ತು ತಏವೋಭಯಲಿಂಗಾತ್ ಓಂ'

॥ ಸೂ. ೩೪ ॥

ದೇಶ ಕಾಲ ಗುರೂಪಸತ್ತಿ ಮೊದಲಾದ ಅಂಗಗಳಿಂದ ಯುಕ್ತವಾದ ಶ್ರವಣಾದಿರೂಪವಾದ ಮಹಾಪ್ರಯತ್ನವಿದ್ದರೂ ಜ್ಞಾನಯೋಗ್ಯರೇ ಜ್ಞಾನವನ್ನು ಹೊಂದುತ್ತಾರೆ. ಅಯೋಗ್ಯರು ಹೊಂದುವುದಿಲ್ಲ. ಅಯೋಗ್ಯರು ವಿಪರೀತ ಜ್ಞಾನವನ್ನು ಹೊಂದುತ್ತಾರೆ. 'ಯ ಆತ್ಮಾಪಹತಪಾಪ್ಮಾ' ಇತ್ಯಾದಿ ಶ್ರುತಿಗಳಲ್ಲಿ ಯೋಗ್ಯಾಯೋಗ್ಯರಾದ ಇಂದ್ರವಿರೋಚನರಿಗೆ ಗುರೂಪಸತ್ತಿಪೂರ್ವಕ ಚತುರ್ಮುಖಕರ್ತೃಕವಾದ ಉಪದೇಶವು ಸಮಾನವಾಗಿದ್ದರೂ ಸುಜ್ಞಾನ ದುರ್ಜ್ಞಾನ ಪ್ರಾಪ್ತಿರೂಪವಾದ ಉಭಯ ವಿಧವಾದ ಅಂಗವು ಕಂಡದೆ.

### 'ಓಂ ಅನಭಿಭವಂ ಚ ದರ್ಶಯತಿ ಓಂ' ॥ ಸೂ. ೩೫ ॥

ಸ್ವಭಾವಭೂತಗಳಾದ ಯೋಗ್ಯತಾ ಅಯೋಗ್ಯತೆಗಳಿಗೆ ತಿರಸ್ಕಾರಾಭಾವವನ್ನು 'ದೈವೀಮೇವ ಸಂಪತ್ತಿಂ ದೇವಾ ಅಭಿಗಚ್ಛಂತಿ ಆಸುರೀಮೇವ ಚಾಸುರಾಃ ನೈವೇತಯೋರಭಿಭವಃ ಕದಾಚಿತ್ಸ್ವಭಾವ ಏದ ಹ್ಯವತಿಷ್ಠತೇ' ಎನ್ನುವ ಶ್ರುತಿಯು ತೋರಿಸುತ್ತದೆ.

### 'ಓಂ ಅಂತರಾ ಚಾಪಿ ತು ತದ್ದೃಷ್ಟೇಃ ಓಂ' ॥ ಸೂ. ೩೬ ॥

ಮಧ್ಯಮ ಮನುಷ್ಯರಿಗೆ ಸಮ್ಯಕ್ ಜ್ಞಾನ, ಅಸಮ್ಯಕ್ ಜ್ಞಾನಗಳ ಮಧ್ಯದಲ್ಲಿ ಅಂದರೆ—ಮಿಶ್ರ ಜ್ಞಾನದಲ್ಲಿಯೇ ಅವಸ್ಥಿತಿಯು. ಅವರ ಸ್ವಭಾವಕ್ಕೆ ತಿರಸ್ಕಾರವಿಲ್ಲ. ಅವರಿಗೆ ಮಿಶ್ರ ಜ್ಞಾನದಲ್ಲಿಯೇ ವಿಶೇಷಾಕಾರವಾಗಿ ದಾರ್ಢ್ಯವು ದೃಷ್ಟವಾಗಿರುವುದರಿಂದ.

### 'ಓಂ ಅಪಿ ಸ್ಮರ್ಯತೇ ಓಂ' ॥ ಸೂ. ೩೭ ॥

ತ್ರಿವಿಧ ಜೀವರಿಗೆ ಅಂತಹ ಸ್ವಭಾವವಿದೆ ಎನ್ನುವುದೂ ಅದಕ್ಕೆ ಅನುಗುಣವಾದ ಫಲವಿದೆ ಎನ್ನುವುದೂ 'ಅಸುರಾ ಆಸುರೇಷ್ವೈವ' ಎನ್ನುವ ಸ್ಮೃತಿಯಿಂದಲೂ ಸಿದ್ಧವಾಗಿದೆ.

**'ಓಂ ವಿಶೇಷಾನುಗ್ರಹಂ ಚ ಓಂ'** ॥ ಸೂ. ೩೮ ॥

**'ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್'** ಎನ್ನುವ ಶ್ರುತಿಯು ಪರಮೇಶ್ವರನ ವಿಶೇಷಾನುಗ್ರಹವನ್ನು ದೇವತೆಗಳಲ್ಲಿಯೇ ತೋರಿಸುತ್ತದೆ.

**'ಓಂ ಅತಸ್ತ್ವಿತರಜ್ಜ್ಯಾಯೋ ಲಿಂಗಾಚ್ಚ ಓಂ'** ॥ ಸೂ. ೩೯ ॥

ದೇವತೆಗಳ ಸಮುದಾಯದೆಶೆಯಿಂದ ಅಸುರರ ಸಮುದಾಯವೇ ಅತಿಬಹುಲವಾದುದು, ಆದಕಾರಣ ಸ್ವಭಾವಕ್ಕೆ ತಿರಸ್ಕಾರವಿಲ್ಲ. (ಬಾಹುಲ್ಯವು ಹೇಗೆಂದರೆ—) **'ತಸ್ಮಾನ್ನ ಜನತಾಮಿಯಾತ್'** ಎಂದು ಜನರ ಸಂಘವನ್ನು ಪ್ರವೇಶಮಾಡಬಾರದು ಎನ್ನುವ ಉಕ್ತ್ಯನ್ಯಥಾನುಪಪತ್ತಿರೂಪವಾದ ಲಿಂಗದೆಶೆಯಿಂದಲೂ **'ಕನೀಯಸಾ ಏವ ದೇವಾಃ ಜ್ಯಾಯಸಾ ಅಸುರಾಃ'** ಎನ್ನುವ ಶ್ರುತಿಯಿಂದಲೂ ಸಿದ್ಧವಾಗುತ್ತದೆ.

**'ಓಂ ತದ್ಭೂತಸ್ಯ ತು ತದ್ಭಾವೋ ಜೈಮಿನೇರಪಿ ನಿಯಮಾ ತದ್ರೂಪಾಭಾವೇಭ್ಯಃ'** ॥ ಸೂ. ೪೦ ॥

ದೇವಾದಿತ್ವವನ್ನು ಹೊಂದಿದವನಿಗೇನೇ ದೇವಾದಿಭಾವವವು ಜೈಮಿನಿಋಷಿಗೂ ಸಿದ್ಧವಾಗಿದೆ. ವ್ಯಾಸರಿಗೆ ಮಾತ್ರವಲ್ಲ. **'ನಾಸುರಾ ದೈವೀಂ'** ಎಂದು ನಿಯಮಘಟಿತವಾದ ಶ್ರುತಿಯಿಂದಲೂ, **'ನಾಸುರಾಣಾಂ ದೈವಂ ರೂಪಂ'** ಎಂದು ಅತದ್ರೂಪತ್ವ ಶ್ರುತಿಯಿಂದಲೂ **'ತಂಭೂತಿರಿತಿ ದೇವಾ ಉಪಾಸಾಂ ಚಕ್ರಿರೇ ತೇ ಬಭೂವುಃ ಅಭೂತರಿತ್ಯಸುರಾಃ ತೇ ಹ ಪರಾಬಭೂವುಃ'** ಎಂದು ದೇವಾಸುರರಿಗೆ ಭೂತ್ಯಭೂತಿಪ್ರತಿಪಾದಕ ಶ್ರುತಿಯುದೆಶೆಯಿಂದ್ರ ॥ ಸೂ. ॥ ೩೪ ॥ ೩೫ ॥ ೩೬ ॥ ೩೭ ॥ ೩೮ ॥ ೩೯ ॥ ೪೦ ॥

**'ಓಂ ನ ಚಾಧಿಕಾರಿಕಮಪಿ ಪತನಾನುಮಾನಾತ್ತದಯೋಗಾತ್ ಓಂ'** ॥ ಸೂ. ೪೧ ॥

ಯಾವ ಯಾವ ಪದದಲ್ಲಿ ಅಧಿಕಾರವು ಶ್ರುತ್ಯಾದಿ ಸಿದ್ಧವಾಗಿದೆಯೋ ಆ ಬ್ರಹ್ಮಾದಿ ದೇವಪದವು ಜ್ಞಾನಾರ್ಥಿಯಿಂದ ಆಕಾಂಕ್ಷ್ಯವಲ್ಲ. ಈಶಸಂಬಂಧಿಯಾದ ಐಶ್ವರ್ಯವು ಆಕಾಂಕ್ಷಿಸಬಾರದು ಎಂದು ಏನು ಹೇಳಬೇಕು? ಏಕೆಂದರೆ— ಆ ಬ್ರಹ್ಮಾದಿ ಪದದ ಆಕಾಂಕ್ಷೆಯೇ ಕೂಡಲಾರದು. ಏಕೆಂದರೆ— ಅಯೋಗ್ಯವನ್ನು ಏರಲಿಕ್ಕೆ ಪ್ರಯತ್ನಮಾಡುವವನಿಗೆ ಲೋಕದಲ್ಲಿ ಪತನವು ತೋರಿಬಂದುದರಿಂದ ಇಲ್ಲಿಯೂ 'ಬ್ರಹ್ಮಾದಿಪದಾಕಾಂಕ್ಷಾವಾನ್ ಪತತಿ ಅಯೋಗ್ಯಾರೋಹಪ್ರಯತ್ನವತ್ತ್ವಾತ್ ಏಮತಃ ದೇವಾದಿಭಿಃ ಪಾತ್ಯತೇ ಅಶಕ್ಯತತ್ಪದೇಚ್ಛುತ್ವಾತ್ ರಾಜಪದೇಚ್ಛುವತ್' ಎಂದು ಪತನವು ಅನುಮಿತವಾಗುತ್ತದೆ.

**'ಓಂ ಉಪಪೂರ್ವಮಪೀತ್ಯೇಕೇ ಭಾವಶಮನವತ್ತದುಕ್ತಂ ಓಂ'** ॥ ಸೂ. ೪೨ ॥

ಗಂಧರ್ವಾದಿಗಳ ಪದವೂ ವಸಿಷ್ಠಮೊದಲಾದ ಪ್ರಧಾನ ಋಷಿಗಳ ಪದದಂತೆಯೇ ಆಕಾಂಕ್ಷಿಸಬಾರದು ಎಂದು ಕೆಲವರು ಹೇಳುತ್ತಾರೆ. ಆ ಪ್ರಮೇಯವೂ **'ಯಥರ್ಷೀನ್ ಪ್ರಜಾಪತೀನ್ನಾಕಾಂಕ್ಷೇತ್ ಏವಂ ನ ಗಂಧರ್ವಾನ್'** ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟದೆ.

'ಓಂ ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ ಓಂ' ॥ ಸೂ. ೪೩ ॥

ದೇವರ್ಷಿ ಗಂಧರ್ವಪದಗಳ ದೆಸೆಯಿಂದ ಬಹಿರ್ಭೂತಗಳಾದ ಜ್ಞಾನಭಕ್ತ್ಯಾದಿಗಳಲ್ಲಿ ವಿಶೇಷವದೆ. ಆಕಾಂಕ್ಷಿಸಿದರೂ ಆಕಾಂಕ್ಷಿಸದೆ ಇದ್ದರೂ ಪತನವಿಲ್ಲ. 'ದೇವರ್ಷಿಗಂಧರ್ವಾಣಾಂ' ಎನ್ನುವ ಸ್ಮೃತಿಯಿಂದಲೂ, 'ನಾನಾತ್ವಮೇವ ಕಾಮಾನಾಂ ನಾಕಾಮಃ ಕ್ವಚ ದೃಶ್ಯತೇ। ಅತೋ ವಿರುದ್ಧಕಾಮಃ ಸ್ಯಾದಕಾಮಸ್ತೇನ ಭಣ್ಯತೇ' ಎಂದು ಅವಿರುದ್ಧಕಾಮದಿಂದ ಆಚಾರಪ್ರತಿಪಾದಕವಾಕ್ಯದಿಂದಲೂ, ಸಿದ್ಧವಾಗುತ್ತದೆ ॥ ಸೂ. ೪೧ ॥ ೪೨ ॥ ೪೩ ॥ ॥ ಅಧಿ ೬ ॥

'ಓಂ ಸರ್ವಥಾಪಿ ತು ತಏವೋಭಯಲಿಂಗಾತ್ ಓಂ' ॥ ಸೂ. ೩೪ ॥

'ಓಂ ನ ಚಾಧಿಕಾರಿಕಮಪಿ ಪತನಾನುಮಾನಾತ್ತದಯೋಗಾತ್ ಓಂ' ॥ ಸೂ. ೪೧ ॥

ಇಲ್ಲಿ ಈ ೫ನೇ ಅಧಿಕರಣದಲ್ಲಿ ಅನಾದಿಕಾಲೀನವಾದ ಜ್ಞಾನಯೋಗ್ಯತೆಯುಳ್ಳವರಿಗೇನೇ ಜ್ಞಾನಪ್ರಾಪ್ತಿಯು. ಇತರರಿಗೆ ಆಗುವುದಿಲ್ಲವೆಂದು ಹೇಳಲ್ಪಟ್ಟದೆ. ೬ನೇ ಅಧಿಕರಣದಲ್ಲಿ ದೇವತಾ ಮೊದಲಾದ ಪದಪ್ರಾಪ್ತಿಯು ಅನಾದಿಯಾದ ಪದಪ್ರಾಪ್ತಿ ಯೋಗ್ಯತೆಯಿದ್ದವರಿಗೇನೇ. ಇತರರಿಗೆ ಇಲ್ಲವೆಂದು ಹೇಳಲ್ಪಟ್ಟದೆ. ಆ ಈದಾವ ಜೀವರ ನಾನಾವಿಧವಾದ ಅನಾದಿಯೋಗ್ಯತೆಯನ್ನು ಪ್ರಸಿದ್ಧಗಳಾದ ಪ್ರಯತ್ನಾದಿರೂಪಗಳಾದ ಕಾರಣಗಳಿಂದಲೇ ಉತ್ಕರ್ಷ-ಅಪಕರ್ಷ ಪ್ರಾಪ್ತಿಯಾಗುತ್ತದೆ ಎಂದು ಹೇಳುವ ವಾದಿಗಳು ಅಂಗೀಕರಿಸುವುದಿಲ್ಲ. ಆದಕಾರಣ ಆ ಯೋಗ್ಯತೆಯನ್ನು ಸಾಧಿಸುವುದಕ್ಕಾಗಿ ಹೇಳುತ್ತಾರೆ—

ಮೂ ॥ ಅನಾದಿಯೋಗ್ಯತಾಂ ಚೈವ ಕಲಿವಾಣೀಶ್ವರಾವಧಿಂ ।
ಕೋ ನಿವಾರಯಿತುಂ ಶಕ್ತೋ ಯುಕ್ತ್ಯಾಗಮಬಲೋದ್ಧತಾಂ ॥೧೧೨॥
ಬ್ರಹ್ಮಣೋಽನ್ಯತ ಆಧಿಕ್ಯಯುಕ್ತಃ ಕಾಲೋ ವಿವಾದವಾನ್ ।
ಕಾಲೋ ಹ್ಯಯಂ ಯಥೇತ್ಯಾದಿ ನಾನುಮಾ ಮಾನಿನೋ ಭವೇತ್ ॥
॥ ೧೧೩ ॥
ಅನ್ಯಶಬ್ದೋ ಹರಿ ಶ್ರೀಸ್ವಸಮೇಭ್ಯೋಽನ್ಯ ವಿವಕ್ಷಯಾ ।
ಪ್ರಯುಕ್ತೋ ನೈವ ದೋಷಾಯ ರುದ್ರಾದಿಷು ಚ ಯುಕ್ತಿತಃ ॥೧೧೪॥

ಅ ॥ ಕಲಿವಾಣೀಶ್ವರಾವಧಿಂ=ಕಲಿಯೂ ಸರಸ್ವತಿಗೆ ನಿಯಾಮಕನಾದ ಬ್ರಹ್ಮನೂ ಇವರೇವೇ ಅವಧಿಯಾಗಿಉಳ್ಳ, (ಅಂತೂ ಯೋಗ್ಯತಾಪಕರ್ಷ ಪರಂಪರೆಗೆ ಕಲಿಯು ಅವಧಿಭೂತನು. ಉತ್ಕರ್ಷ ಪರಂಪರೆಗೆ ಚತುರ್ಮುಖನು ಅವಧಿಭೂತನು.) ಯುಕ್ತ್ಯಾಗಮಬಲೋದ್ಧತಾಂ=ಯುಕ್ತಿಯೂ ಆಗಮವೂ ಇವುಗಳ ಬಲದಿಂದ ಅಪ್ರತಿಹತವಾದ, ಅನಾದಿಯೋಗ್ಯತಾಂ ಚ=ಕೇವಲ ಮುಕ್ತರ ತಾರತಮ್ಯವಲ್ಲ, ಮತ್ತೆ ಅನಾದಿಯೋಗ್ಯತೆಯನ್ನೂಕೂಡ, ಕ ಏವ= ಯಾರುತಾನೇ, ನಿವಾರಯಿತುಂ=ನಿವಾರಿಸಲಿಕ್ಕೆ, ಶಕ್ತಃ = ಸಮರ್ಥನಾದಾನು? (ಆ ಯೋಗ್ಯತೆಯು ಹೇಗೆ ಯುಕ್ತ್ಯಾಗಮಗಳಿಂದ ಸಿದ್ಧವಾಗುತ್ತದೆ. ಎಂದರೆ— ಆಗಮಗಳಿಗೆ ಸಾವಕಾಶತ್ವವಿದೆ ಎನ್ನುವ ಅಭಿಮಾನದಿಂದ ಯುಕ್ತಿಯಲ್ಲಿಯೇ ಬಹುಮಾನವಿದ್ದವನನ್ನು ಕುರಿತು ಆದಿ

ಯಲ್ಲಿ ಯುಕ್ತಿಯನ್ನು ಹೇಳುತ್ತಾರೆ.) ವಿವಾದವಾನ್=ವಿವಾದವಿಷಯವಾದ, ಕಾಲಃ=ಕಾಲವು. (ಅಂದರೆ — ವರ್ತಮಾನ ಮಹಾಕಲ್ಪದಿಂದ ವ್ಯತಿರಿಕ್ತವಾದ ಅತೀತಕಾಲವೂ, ಭವಿಷ್ಯತ್ಕಾಲವೂ) ಬ್ರಹ್ಮಣಃ=ಈ ಬ್ರಹ್ಮನಿಗೆ, ಅನ್ಯತಃ ಆಧಿಕ್ಯ ಯುಕ್ತಃ=ಇತರರಿಂದ ಯಾವುದೊಂದು ಆಧಿಕ್ಯವೋ ಅದರಿಂದ ಯುಕ್ತವಾಗಿದೆ, ಕಾಲೋ ಹಿ=ಕಾಲತ್ವವಿದ್ದ ಪ್ರಯುಕ್ತ, ಅಯಂ ಯಥಾ=ವರ್ತಮಾನ ಕಾಲದಂತೆ, ಇತ್ಯಾದಿನಾ='ಅಯಂಬ್ರಹ್ಮಾ ಅತೀತಾದಿಕಾಲೇಽಪಿ, ಅನ್ಯತೋಽಧಿಕಃ ಬ್ರಹ್ಮತ್ವಾತ್ ತತ್ಕಾಲವರ್ತಿ ಬ್ರಹ್ಮವತ್=ಈಗ ಇದ್ದ ಬ್ರಹ್ಮನು ಅತೀತಾದಿಕಾಲದಲ್ಲಿಯೂ ಇತರರಿಂದ ಅಧಿಕನು ಬ್ರಹ್ಮತ್ವವಿದ್ದ ಪ್ರಯುಕ್ತ ಆ ಕಾಲದಲ್ಲಿದ್ದ ಬ್ರಹ್ಮನಂತೆ ಇದುಮೊದಲಾದ ಅನುಮಾನದಿಂದ, ಅನುಮಾ ಮಾನಿನಃ=ಅನುಮಾನದಲ್ಲಿ ಬಹುಮಾನವುಳ್ಳವನ (ಜ್ಞಾನಕ್ಕಾಗಿ ಪ್ರಯೋಗಿಸಲಿಕ್ಕೆ ಯೋಗ್ಯವಾದುದು) ಭವೇತ್=ಆಗುವುದು. ಅಥವಾ ಅನುಮಾಮಾನಿನಃ=ಅನುಮಾನದಲ್ಲಿ ಬಹು ಮಾನವುಳ್ಳವರನ್ನೂಕುರಿತು (ಪ್ರಯೋಗಿಸಲಿಕ್ಕೆ ಅರ್ಹವಾದುದು) ಭವೇತ್ = ಆಗುವುದು. (ಈ ಪ್ರತಿಜ್ಞೆಯು ಪ್ರಮಾಣಬಾಧಿತವಾಗಿದೆ. ದೃಷ್ಟಾಂತದಲ್ಲಿ ಸಾಧ್ಯವೈಕಲ್ಯವು. ಈ ಅನ್ಯಶಬ್ದ ವಾದರೂ ಪ್ರಕರಣದಿಂದ ಬ್ರಹ್ಮನಿಂದ ವ್ಯತಿರಿಕ್ತವಾದ ಎಲ್ಲಾ ವಸ್ತುವನ್ನು ಹೇಳುತ್ತದೆ. ಅದರಲ್ಲಿ ಬ್ರಹ್ಮನಿಗೆ ಕಾಲತ್ರಯದಲ್ಲಿಯೂ ಶ್ರೀ ಹರಿಯಿಂದಲೂ, ಮಹಾಲಕ್ಷ್ಮಿಯಿಂದಲೂ, ಋಜುಗಳಿಂದಲೂ ಆಧಿಕ್ಯವು ಇಲ್ಲ. ಶ್ರೀ ಹರಿಯೂ ಲಕ್ಷ್ಮಿಯೂ ಕೂಡ ಅಧಿಕರೆಂದೂ ಋಜು ಗಳು ಸಮರೆಂದೂ ಪ್ರಮಿತರಾಗಿರುತ್ತಾರೆ. ಎಂದರೆ—) ಅನ್ಯಶಬ್ದಃ = ಅನ್ಯವೆನ್ನುವಶಬ್ದವು, ಹರಿ ಶ್ರೀ ಸ್ವಸಮೇಭ್ಯಃ=ಹರಿಯೂ ಲಕ್ಷ್ಮಿಯೂ ಬ್ರಹ್ಮನೂ ಬ್ರಹ್ಮನಿಗೆ ಸಮಾನಿಕರೂ ಇವರ ದೆಶೆ ಯಿಂದ, ಅನ್ಯವಿವಕ್ಷಯಾ = ಇತರರೂ ಎನ್ನುವ ವಿವಕ್ಷೆಯಿಂದ, ಪ್ರಯುಕ್ತಃ = ಪ್ರಯೋಗಿಸ ಲ್ಪಟ್ಟದ್ದಾಗಿ, ನೈವ ದೋಷಾಯ=ಬಾಧಾದಿರೂಪದೋಷಕ್ಕಾಗಿ ಕಾರಣವು ಆಗುವುದೇ ಇಲ್ಲ. (ಹೇಳಿದ ನ್ಯಾಯವನ್ನು ಬೇರೆಕಡೆಯಲ್ಲಿಯೂ ಅತಿದೇಶಮಾಡುತ್ತಾರೆ.) (ಇದೇರೀತಿಯಿಂದ) ರುದ್ರಾದಿಷ್ವಪಿ=ರುದ್ರನೇ ಮೊದಲಾದವರಲ್ಲಿಯೂ, ಯುಕ್ತಿತಃ = ಯುಕ್ತಿಯಿಂದ, (ಅನಾದಿ ಯೋಗ್ಯತೆಯನ್ನು ಸಾಧಿಸಬೇಕು.) (ಅಂದರೆ — ' ವಿಮತಃ ಕಾಲಃ ಅಸ್ಯ ರುದ್ರಸ್ಯ ಈಶ್ವರಾದಿ ವ್ಯತಿರಿಕ್ತಾದ್ಯದಾಧಿಕ್ಯಂ ತೇನ ಯುಕ್ತಃ ಕಾಲತ್ವಾತ್ ಏತತ್ಕಾಲವತ್ ಇತ್ಯಾದಿ)

ತಾ || ಸ. ರ. ವಿ— (1) ಕೇವಲ ಮುಕ್ತರ ತಾರತಮ್ಯವೇ ಶ್ರುತಿಯುಕ್ತಿಗಳಿಂದ ಸಿದ್ಧವಾಗಿರುವುದರಿಂದ ನಿರಾಕರಿಸಲಿಕ್ಕೆ ಅಶಕ್ಯವೆಂದಲ್ಲ. ಮತ್ತೆ ಬ್ರಹ್ಮನನ್ನು ಆರಂಭಿಸಿ ಕಲಿ ಪರ್ಯಂತವಾಗಿ ಅಪಕರ್ಷ ತಾರತಮ್ಯವೂ ಕಲಿನಾಮಕನಾದ ಅಸುರನನ್ನು ಆರಂಭಿಸಿ ಚತು ರ್ಮುಖ ಪರ್ಯಂತವಾಗಿ ಉತ್ಕರ್ಷತಾರತಮ್ಯವೂಕೂಡ ಸರ್ವಜೀವರಲ್ಲಿರತಕ್ಕದ್ದೂ ನಿರಾಕರಿ ಸಲಿಕ್ಕೆ ಅಶಕ್ಯವು. ಶ್ರುತಿಯುಕ್ತಿಗಳ ಬಲದಿಂದ ಯುಕ್ತವಾಗಿದೆ. (2) ಚತುರ್ಮುಖನಿಗೆ ಅನಾದಿಲಾಗ್ಯಾತು ಸರ್ವಜೀವರಿಂದಲೂ ಆಧಿಕ್ಯವಿಷಯದಲ್ಲಿ ಯುಕ್ತಿಯು. ೧ 'ಪೂರ್ವತನಕಾಲಃ ಹಿರಣ್ಯಗರ್ಭಜೀವಸ್ಯ ಹರಿ ಶ್ರೀ ಋಜುಗಣ ವ್ಯತಿರಿಕ್ತೇಭ್ಯಃ ಯತ್ ಆಧಿಕ್ಯಂ ತದ್ಯುಕ್ತಃ ಕಾಲತ್ವಾತ್ ಯಥಾಽಯಂ ಕಾಲಃ ಪೂರ್ವತನಕಾಲವು ಚತುರ್ಮುಖನಿಗೆ ಹರಿ-ಲಕ್ಷ್ಮೀ ಋಜು ಗಣಗಳಿಂದ ವ್ಯತಿರಿಕ್ತರಾದವರಿಂದ ಯಾವುದು ಆಧಿಕ್ಯವೋ ಅದರಿಂದ ಯುಕ್ತವಾದುದು ಕಾಲತ್ವವಿದ್ದ ಪ್ರಯುಕ್ತ ಈ ಕಾಲದಂತೆ. ೨ ಇದೇಪ್ರಕಾರ ಅನುಮಾನದಿಂದ ರುದ್ರಾದಿಜೀವ ರಿಗೂ ಹರಿ ಶ್ರೀ ಬ್ರಹ್ಮಪದಸ್ಥ ಪದಗಳಿಗೆ ಯೋಗ್ಯರಾದವರಿಂದ ಆಧಿಕ್ಯವು ಸಾಧಿಸಬೇಕು. ೩ ಹಾಗೆಯೇ ಇಂದ್ರಾದಿ ಜೀವರಲ್ಲಿಯೂ ಅನಾದಿಲಾಗ್ಯಾತು ಆಧಿಕ್ಯಕ್ರಮವನ್ನು ಅನುಮೇಯಿಸ ಬೇಕು. ೪ ಹಾಗೆಯೇ, 'ಮುಕ್ತ್ಯುತ್ತರ ಕಾಲೋಽಪಿ ಮುಕ್ತ ಹಿರಣ್ಯಗರ್ಭಸ್ಯ ಹರಿ ಶ್ರೀ ಹಿರಣ್ಯ ಗರ್ಭಾಂತರ ವ್ಯತಿರಿಕ್ತೇಭ್ಯಃ ಯತ್ ಆಧಿಕ್ಯಂ ತದ್ಯುಕ್ತಃ ಕಾಲತ್ವಾತ್ ಯಥಾ ಅಯಂ ಕಾಲಃ'

ಇದೇಪ್ರಕಾರ ಮುಕ್ತ ರುದ್ರಾದಿಗಳಿಗೂ ಆಧಿಕ್ಯ ತಾರತಮ್ಯವನ್ನು ಅನುಮೇಯಿಸಬೇಕು. ॥ ೧೧೨ ॥ ೧೧೩ ॥ ೧೧೪ ॥

ಸ. ರ. ವಿ— ಹಾಗಾದರೆ— ಅಮುಕ್ತ ಬ್ರಹ್ಮನಿಗೆ ಈ ಕಾಲದಲ್ಲಿ ಮುಕ್ತರಾದ ಮನುಷ್ಯಾದಿಗಳಿಂದ ಉತ್ತಮತ್ವವಿಲ್ಲದಿರುವುದರಿಂದ ದೃಷ್ಟಾಂತವು ಸಾಧ್ಯವಿಕಲವಾಗಿದೆ ಎಂದರೆ—

ನ್ಯಾಯಸುಧಾ— ಹಾಗಾದರೆ— ಮುಕ್ತರೆಲ್ಲರೂ ಬ್ರಹ್ಮನಿಂದ ಅಧಿಕರು. ಅವರು ಮುಕ್ತರಾಗಿರುತ್ತಾರೆ. ಬ್ರಹ್ಮನು ಸಂಸಾರಿಯಾಗಿದ್ದಾನೆ. ಆದಕಾರಣ ಅನ್ಯಶಬ್ದವ್ಯಾಖ್ಯಾನದಲ್ಲಿ ಮುಕ್ತರನ್ನೂ ಏಕೆ ತೆಗೆದುಕೊಳ್ಳುವುದಿಲ್ಲವೆಂದರೆ—

**ಮೂ ॥ ಉತ್ತಮತ್ವಂ ತು ಮುಕ್ತಾನಾಮಪಿ ನ ಬ್ರಹ್ಮಣೋ ಭವೇತ್ ।**
**ವ್ಯಕ್ತಿಃ ಸುಖಸ್ಯ ತು ಭವೇನ್ನ ತ್ವಾಧಿಕ್ಯಂ ಸುಖಸ್ಯ ಚ ॥ ೧೧೫ ॥**
**ಬಲಜ್ಞಾನಾಧಿಕತ್ವಂ ತು(ಚ)ತೇಭ್ಯೋ ಹಿ ಬ್ರಹ್ಮಣಃ ಸದಾ ।**
**ಆಧಿಕ್ಯಸ್ಯ ತ್ವನಿತ್ಯತ್ವೇ ನ ಕಿಂಚನ್ಮಾನಮೀಯತೇ ॥ ೧೧೬ ॥**

ಅ ॥ ಮುಕ್ತಾನಾಮಪಿ = ಮುಕ್ತರಾದ ಮನುಷ್ಯಾದಿಗಳಿಗಾದರೂ, ಬ್ರಹ್ಮಣಃ=ಚತುರ್ಮುಖನದೆಶೆಯಿಂದ, ಉತ್ತಮತ್ವಂ=ಉತ್ತಮತ್ವವು, ನ ಭವೇತ್=ಬರಲಾರದು. (ಆದಕಾರಣ ಹಿಂದಿನ ಅನುಮಾನದಲ್ಲಿರುವ ಅನ್ಯಶಬ್ದದಿಂದ ಅವರನ್ನು ತೆಗೆದುಕೊಳ್ಳದಿದ್ದರೂ ದೋಷವಿಲ್ಲ.) (ಅದು ಹೇಗೆಂದರೆ-) ಸುಖಸ್ಯ ತು=ಮೊದಲು ಇರತಕ್ಕ ಸ್ವರೂಪಸುಖಾದಿಗಳಿಗೆ (ಮುಕ್ತಿಕಾಲದಲ್ಲಿ ಅವಿದ್ಯೆ ಮೊದಲಾದ ಆವರಣಗಳ ಹೋಗುವಿಕೆಯಿಂದ) ವ್ಯಕ್ತಿಃ = ಅನುಭವರೂಪವಾದ ಅಭಿವ್ಯಕ್ತಿಯು, ಭವೇತ್=ಆಗುವುದು. ಸುಖಸ್ಯ ಚ = ಸುಖಾದಿಗಳಿಗೆ, ಆಧಿಕ್ಯಂ ನ ತು= ಮುಕ್ತಿಕಾಲದಲ್ಲಿ ಆಧಿಕ್ಯವು ಹುಟ್ಟುವುದು ಇಲ್ಲ. (ಆಧಿಕ್ಯವು ಹುಟ್ಟುವುದಾದರೆ ಅದು ಅನಿತ್ಯವಾಗಬೇಕಾಗುವುದು. ಬ್ರಹ್ಮನ ಸ್ವರೂಪದಿಂದ ಇತರರ ಸ್ವರೂಪವು ಅಧಿಕವಲ್ಲ. ಚೆನ್ನಾಗಿ ತೊಳೆದ ಕಾಂಸ್ಯಪಾತ್ರವು, ತೊಳೆಯದೆ ಇದ್ದ ಸುವರ್ಣಕ್ಕಿಂತ ಅಧಿಕವಾಗಲಾರದಷ್ಟೆ.) (ಮುಕ್ತರಿಗೆ ಬ್ರಹ್ಮನಿಂದ ಆಧಿಕ್ಯವಿಲ್ಲವೆಂದಿಷ್ಟೇ ಅಲ್ಲ; ಮತ್ತೇನೆಂದರೆ—) ಬ್ರಹ್ಮಣಃ=ಬ್ರಹ್ಮನಿಗೆ, ಸದಾ=ಸಂಸಾರದಲ್ಲಿಯೂ ಮುಕ್ತಿಯಲ್ಲಿಯೂ, ತೇಭ್ಯಃ=ಆ ಮುಕ್ತರದೆಶೆಯಿಂದ, ಬಲಜ್ಞಾನಾಧಿಕತ್ವಂ ತು=ಬಲಜ್ಞಾನಾದಿ ಎಲ್ಲಾ ಗುಣಗಳಿಂದ ಆಧಿಕ್ಯವು, (ಇದೆ)(ಈ ಆಧಿಕ್ಯವು ಮುಕ್ತಿಯಲ್ಲಿ ಹುಟ್ಟುವುದರಿಂದ ಅನಿತ್ಯವೆಂದು ಹೇಳಕೂಡದು. ಏಕೆಂದರೆ—) ಆಧಿಕ್ಯಸ್ಯ ತು = ಬ್ರಹ್ಮನ ಆಧಿಕ್ಯಕ್ಕಾದರೂ, ಅನಿತ್ಯತ್ವೇ = ಅನಿತ್ಯತ್ವವಿಷಯದಲ್ಲಿಯೂ ಸಾದಿತ್ವವಿಷಯದಲ್ಲಿಯೂ, ಕಿಂಚಿತ್=ಯಾವುದೊಂದೂ, ಮಾನಂ=ಪ್ರಮಾಣವು, ನೇಯತೇ=ಹೊಂದಲ್ಪಡುವುದಿಲ್ಲ.

ತಾ ॥ ಸ. ರ. ವಿ— (1)ಬಲಜ್ಞಾನಾದಿಗುಣಗಳಿಂದ ಜ್ಯೇಷ್ಠನಾದ ಅಮುಕ್ತಬ್ರಹ್ಮನಿಂದ ಮುಕ್ತಮನುಷ್ಯಾದಿಗಳಿಗೆ ಆಧಿಕ್ಯವು ಯುಕ್ತವಲ್ಲ. ತೊಳೆಯದೆ ಇದ್ದ ಸುವರ್ಣಗೊಂಬೆಯಿಂದ ತೊಳೆದ ಬೆಳ್ಳಿಯ ಗೊಂಬೆಯು ಶ್ರೇಷ್ಠವಾಗುವುದಿಲ್ಲ. ಆದುದರಿಂದ ಬ್ರಹ್ಮಾದಿಗಳಿಗೆ ಆಧಿಕ್ಯತಾರತಮ್ಯವು ಸ್ವಾಭಾವಿಕವೇ. (2) ಇದೇ ನ್ಯಾಯದಿಂದ ಕಲ್ಯಾದ್ಯಸುರರಿಗೆ ಅಪಕರ್ಷತಾರತಮ್ಯವನ್ನು ಸ್ವಾಭಾವಿಕವೆಂದೇ ತಿಳಿಯಬೇಕು ॥ ೧೧೫ ॥ ೧೧೬ ॥

ಶ್ರುತಿ- ಸ್ಮೃತಿಗಳಿಂದಲೂ ಇದನ್ನೇ ಸ್ಪಷ್ಟಪಡಿಸುತ್ತಾರೆ. ಅಥವಾ ಹೀಗೆ ಬ್ರಹ್ಮಾದಿ ಜೀವರಲ್ಲಿ ಅನಾದಿನಿತ್ಯವಾದ ನಾನಾವಿಧವಾದ ಯೋಗ್ಯತೆಯನ್ನು ಸಾಧಿಸಿ ಈಗ ಆಗಮದಿಂದಲೂ ಸಾಧಿಸುತ್ತಾ ಆದಿಯಲ್ಲಿ ಶ್ರುತಿಗಳನ್ನು ಪಠನಮಾಡುತ್ತಾರೆ—

ಮೂ || ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನ-
ನ್ಯಮನ್ಯಮತಿ ನೇನೀಯಮಾನಃ |
ಏಧಮಾನದ್ವಿಳುಭಯಸ್ಯ ರಾಜಾ-
ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ || ೧೧೭ ||
ಪರಾ ಪೂರ್ವೇಷಾಂ ಸಖ್ಯಾ ವೃಣಕ್ತಿ
ವಿತರ್ತುರಾಣೋಽಪರೇ ಭಿರೇತಿ |
ಅನಾನುಭೂತೀರವಧೂನ್ವಾನಃ
ಪೂರ್ವೀರಿಂದ್ರಃ ಶರದಸ್ತರ್ತರೀತಿ || ೧೧೮ ||
ದಿವೇ ದಿವೇ ಸದೃಶೀರನ್ಯಮರ್ಧಂ
ಕೃಷ್ಣಾ ಅಸೇಧದಪ ಸದ್ಮನೋಜಾಃ |
ಅಹನ್ ದಾಸಾ ವೃಷಭೋ ವಸ್ನಯಂತೋ-
ದವ್ರಜೇ ವರ್ಚಿನಂ ಶಂಬರಂ ಚ || ೧೧೯ ||
ತಂ ಭೂತಿರಿತಿ ದೇವಾ ಉಪಾಸಾಂಚಕ್ರಿರೇ
ತೇ ಬಭೂವುಸ್ತಸ್ಮಾದ್ಧಾಪ್ಯೇತರ್ಹಿ
ಸುಪ್ತೋ ಭೂರ್ಭೂರಿತ್ಯೇವ ಪ್ರಶ್ವಸಿತ್ಯ-
ಭೂತಿರಿತ್ಯಸುರಾಸ್ತೇ ಹ ಪರಾ ಬಭೂವುಃ |
ತದ್ಯಥಾ ಪೇಶಸ್ಕರೀ ಪೇಶಸೋ ಮಾತ್ರಾ-
ಮುಪಾದಾಯಾನ್ಯನ್ನವತರಂ ಕಲ್ಯಾಣತರಂ ರೂಪಂ ತನುತೇ || ೧೨೦ ||
ಏವಮೇವಾಯಮಾತ್ಮೇದಂ ಶರೀರಂ ನಿಹತ್ಯಾ-
ವಿದ್ಯಾಂ ಗಮಯಿತ್ವಾನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ |
ಪಿತ್ರ್ಯಂ ವಾ ಗಾಂಧರ್ವಂ ವಾ ದೈವಂ ವಾ
ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾ ಅನ್ಯೇಷಾಂ ವಾ ಭೂತಾನಾಂ ||೧೨೧||

ಅ || ವೀರಃ=ಅರಬ್ಧಾಂತಗಾಮಿಯಾದ, ಇಂದ್ರಃ=ಪರಮೇಶ್ವರನು, ಉಗ್ರಮುಗ್ರಂ= ಯಾರು ಯಾರು ಅಸುರಪ್ರಕೃತಿಯೋ ಅವರವರನ್ನು, ಅಂದರೆ— ಎಲ್ಲಾ ದುಷ್ಟಪ್ರಕೃತಿಗಳನ್ನು, ದಮಾಯನ್=ನಿತ್ಯನರಕವನ್ನು ಹೊಂದಿಸಿಕೊಡತಕ್ಕವನಾಗಿ, ಅನ್ಯಮನ್ಯಂ=ಅಸುರಪ್ರಕೃತಿಗಳಿಂದ ಇತರವಾದ ದೈವಪ್ರಕೃತಿಗಳನ್ನು, ಅಂದರೆ— ಸತ್ವಸ್ವಭಾವವುಳ್ಳವರೆಲ್ಲರನ್ನೂ, ಅತಿ ನೇನೀಯಮಾನಃ = ಸ್ವಕೀಯವಾದ ಅಧಿಕವಾದ ಪದವನ್ನು ಹೊಂದಿಸಿ ಕೊಡುವವನಾಗಿ, ಅಂದರೆ— ಸಂಸಾರವನ್ನು ಚೆನ್ನಾಗಿ ಅತಿಕ್ರಮಿಸಿ ಕೊಡುವವನಾಗಿ, ಶೃಣ್ವೇ=ಕೇಳಲ್ಪಡುತ್ತಾನೆ. ಅವನೇ, ಏಧಮಾನದ್ವಿಟ್=ಸ್ವಯೋಗ್ಯತೆಯನ್ನು ಅತಿಕ್ರಮಿಸಿ ಅಭಿವೃದ್ಧನಾದವನನ್ನು ದ್ವೇಷಿಸ ತಕ್ಕವನು, ಉಭಯಸ್ಯ=ದೇವವರ್ಗ-ಅಸುರವರ್ಗ ಈ ಎರಡಕ್ಕೂ, ರಾಜಾ = ಅರಸನು, ಮನುಷ್ಯಾನ್‌ವಿಶಃ = ಕೇವಲ ರಾಜಸಸ್ವಭಾವವುಳ್ಳ ಮಧ್ಯಮಮನುಷ್ಯಪ್ರಜೆಗಳನ್ನಾದರೂ, ಚೋಷ್ಕೂಯತೇ=(ಅಂಧಂತಮಸ್ಸನ್ನು ಹೊಂದಿಸಿ ಕೊಡುವುದಿಲ್ಲ. ಮೋಕ್ಷವನ್ನೂ ಹೊಂದಿಸಿಕೊಡುವುದಿಲ್ಲ. ಮತ್ತೆ ಸಂಸಾರಮಂಡಲದಲ್ಲಿಯೇ) ನಿತ್ಯದಲ್ಲಿಯೂ ತಿರುಗಿಸುತ್ತಾನೆ.

(೨) ಸ ಏವ=ಆ ಶ್ರೀ ಹರಿಯೇ, ಪೂರ್ವೇಷಾಂ=ಅತೀತ ಮಂತ್ರದಲ್ಲಿ ಪೂರ್ವ ನಿರ್ದಿಷ್ಟರಾದ ಉಗ್ರಶಬ್ದೋಕ್ತರಾದ ಅಸುರರ, ಸಖ್ಯಾ = ಮೈತ್ರ್ಯಗಳನ್ನು, ಪರಾವೃಣಕ್ತಿ = ಪರಿತ್ಯಾಗ ಮಾಡುತ್ತಾನೆ. (ಅಂದರೆ ಯಾವಾಗಲೂ ದುರ್ಬುದ್ಧಿಯುಳ್ಳ ಅಸುರರಿಂದ ಮಾಡಲ್ಪಟ್ಟ ಮೈತ್ರ್ಯಗಳನ್ನು ಸ್ವೀಕರಿಸುವುದಿಲ್ಲ.) ಅಪರೇಭಿಃ=ಇತರರಾದ ದೇವಪ್ರಕೃತಿಗಳಿಂದ ಕೂಡಿ ಕೊಂಡು, ವಿತತುರಾಣಃ=ಅತಿಶಯವಾಗಿ ವೇಗಪಡುವವನಾಗಿ, ಏತಿ=(ಮೈತ್ರ್ಯಗಳನ್ನು) ಹೊಂದುತ್ತಾನೆ. ಅನಾನುಭೂತೀಃ=ಚೆನ್ನಾಗಿ ಅನುಭವ ಯೋಗ್ಯತೆಯಿಲ್ಲದಿರುವ ನಿತ್ಯಸಂಸಾರಿ ಜೀವರನ್ನು, ಅವಧೂನ್ವಾನಃ=ಅಧಮವಾದ ಸಂಸಾರದಲ್ಲಿಯೇ ಇರಿಸುವ, ಅಥವಾ ದೈತ್ಯರನ್ನು ಅಂಧಂತಮಸ್ಸಿನಲ್ಲಿಯೇ ಇರಿಸಿಕೊಡುವ, ಇಂದ್ರಃ=ಶ್ರೀ ಹರಿಯು, ಪೂರ್ವೀಃ ಶರದಃ=ಅತೀತ ಸಂವತ್ಸರಗಳನ್ನು (ದಾಟದವನಾಗಿ ಈಗ ಇದ್ದ ಸಂವತ್ಸರಗಳನ್ನು) ತರ್ತರೀತಿ=ದಾಟುತ್ತಾನೆ. (ಮುಂದೆ ಬರುವ ಸಂವತ್ಸರಗಳನ್ನು ದಾಟುವನು.) (ಅನಾದಿಲಾಗಾತ್ಯು ಇರತಕ್ಕ ವ್ಯವಸ್ಥೆಯನ್ನು ಅತಿಕ್ರಮಿಸಿ ಅಸುರರಿಗೆ ಅನುಗ್ರಹವನ್ನೂ, ದೇವತೆಗಳಿಗೆ ನಿಗ್ರಹವನ್ನೂ ಯಾವಾಗಲೂ ಮಾಡುವುದೇ ಇಲ್ಲ ಈ ಎರಡು ಮಂತ್ರಗಳಲ್ಲಿ ಅಸುರರಿಗೆ ಅನಾದಿಲಾಗ್ಯಾತು ಶ್ರೀ ಹರಿಯ ಭಜನಾಭಾವವೂ, ನಿತ್ಯ ನರಕಪ್ರಾಪ್ತಿಯೂ ಶ್ರುತವಾಗುತ್ತದೆ. ದೇವತೆಗಳಿಗೆ ಯಾವಾಗಲೂ ಶ್ರೀ ಹರಿಯ ಸೇವೆಯೂ, ಮೋಕ್ಷಪ್ರಾಪ್ತಿಯೂ ಶ್ರುತವಾಗುತ್ತದೆ. ಮನುಷ್ಯರಿಗೆ ಸರ್ವದಾ ಸಂಸಾರವೆಂದೂ ಶ್ರುತವಾಗುತ್ತದೆ.) (2) ವೃಷಭಃ=ಅಭೀಷ್ಟವನ್ನು ವರ್ಷಿಸತಕ್ಕ ಶ್ರೀ ಹರಿಯು, ದಿವೇ ದಿವೇ=ಪ್ರತಿ ದಿವಸದಲ್ಲಿಯೂ, ಸದೃಶೀಃ = ಕರಚರಣಾದಿಗಳು ಇದ್ದುದರಿಂದ ಅಥವಾ ಚೇತನತ್ವಮಾತ್ರದಿಂದ ದೇವಭಾಗಕ್ಕೆ ಸದೃಶಗಳಾದ, ಅನ್ಯಂ ಅರ್ಧಂ = ದೇವಭಾಗದಿಂದ ಇತರ ಅರ್ಧವಾದ, ಕೃಷ್ಣಾಃಜಾಃ=ಕೇವಲ ತಮೋಗುಣ ಪ್ರಧಾನರಾದ ಅಸುರ ಪ್ರಜೆಗಳನ್ನು, ಸದ್ಮನಃ = ಸ್ವಕೀಯವಾದ, ಶಾಶ್ವತವಾದ ಲೋಕದ್ದೆಸೆಯಿಂದ, ಅಪಾಸೇಧತ್ = ನಿವಾರಣೆ ಮಾಡಿದನು. (ಅಂದರೆ, ಯಾವಾಗಲೂ ಅಸುರ ಪ್ರಜೆಗಳನ್ನು ತನ್ನ ಲೋಕಕ್ಕೆ ಸ್ವೀಕರಿಸುವು ದಿಲ್ಲ ) ದಾಸಾ=ಲೋಕವನ್ನು ನಾಶಮಾಡತಕ್ಕ. ಅಥವಾ ದಸ್ಯುಭೂತರಾದ, ವಸ್ನಯಂತಾ= ಜಗತ್ತನ್ನು ಆಚ್ಛಾದನೆಮಾಡತಕ್ಕ, ವರ್ಚಿನಂ ಶಂಬರಂ ಚ=ವರ್ಚಿನ-ಶಂಬರನಾಮಕ ಅಸುರ ರನ್ನೂ, ಉದವ್ರಜೇ = ಜಲರಾಶಿಯಾದ ಸಮುದ್ರತೀರದಲ್ಲಿ, ಅಹನ್=ಸಂಹಾರಮಾಡಿದನು. (೧) ಈ ಋಕ್ಕಿನಿಂದಲೂ ದೇವಾಸುರ ವರ್ಗಗಳಲ್ಲಿ ದೇವಭಾಗದಿಂದ ಇತರವಾದ ಅಸುರ ಭಾಗ ವನ್ನೇ ಅಂಧಂತಮಸ್ಸಿಗೆ ಒಯ್ಯುತ್ತಾನೆಂದುಕ್ತವಾಯಿತು. (೨) ಇಲ್ಲಿ ಅಸುರರಿಗೆ ಹನನವೆಂದರೆ ನಿತ್ಯ ನರಕದಲ್ಲಿ ಬೀಳಿಸುವಿಕೆಯೇ ವಿವಕ್ಷಿತವಾಗಿದೆ. ಏಕೆಂದರೆ— ಅಸುರರೇ ನಿತ್ಯ ನರಕಕ್ಕೆ ಯೋಗ್ಯರಾಗಿರುತ್ತಾರೆ. ದೇಹ ವಿಯೋಗವನ್ನಾದರೂ ದೇವತೆಗಳಿಗೂ ಸರ್ವ ಕಾರಣನಾದ ಶ್ರೀ ಹರಿಯೇ ಮಾಡುತ್ತಾನೆ. ಅಸುರರಿಗೇನೇ ಎನ್ನುವ ವಿಶೇಷವಿಲ್ಲ. ತಥಾಚ ಈ ಶ್ರುತಿಯಲ್ಲಿ ದೈತ್ಯರಿಗೆ ಯಾವಾಗಲೂ ಮೋಕ್ಷವಾಗುವುದಿಲ್ಲವೆಂದು ಪ್ರತೀತವಾಗುತ್ತದೆ (೩) ತಂ = ಸುಖಜ್ಞಾನಾದಿ ಗುಣಗಳಿಂದ ಪೂರ್ಣನಾದ ಪರಮೇಶ್ವರನನ್ನು, ಭೂತಿರಿತಿ=ಐಶ್ವರ್ಯ ರೂಪ ನೆಂದು ಅಥವಾ ಜ್ಞಾನೈಶ್ವರ್ಯಾದಿ ಭೂತಿದಾಯಕನೆಂದು, ದೇವಾಃ = ವಾಯು ಮೊದಲಾದ ದೇವತೆಗಳು, ಉಪಾಸಾಂಚಕ್ರಿರೇ = ಉಪಾಸನಾಮಾಡಿದರು. ತಸ್ಮಾತ್ = ಆದುದರಿಂದ, ತೇ=ಆ ದೇವತೆಗಳು, ಬಭೂವುಃ=(ಮುಕ್ತರು) ಆದರು ಹಿ=ಆದುದರಿಂದ, ಏತರ್ಹ್ಯಪಿ= ಈಗಲೂ ಕೂಡ, ಸುಪ್ತಃ=ಸುಪ್ತರಲ್ಲಿರತಕ್ಕ ವಾಯುದೇವರು, ಭೂಃ ಭೂಃ ಇತ್ಯೇವ=ಭೂಃ ಭೂಃ ಎಂದೇ, ಪ್ರಶ್ವಸಿತಿ = ಶ್ವಾಸಬಿಡುತ್ತಾರೆ, ಹೊಗಳುತ್ತಾರೆ. ಅಸುರಾಃ = ಅಸುರರು, ಅಭೂತಿರಿತಿ=ಅಭೂತಿಕಾರಣನೆಂದೂ, ಉಪಾಸತೇ = ಉಪಾಸನಾಮಾಡುತ್ತಾರೆ. ತೇ ಹ = ಆ

ಅಸುರರಾದರೂ, ಪರಾಬಭೂವುಃ=ನಿತ್ಯ ನರಕವನ್ನು ಹೊಂದಿದರು. (ಈ ಶ್ರುತಿಯಲ್ಲಿ ದೇವಾಸುರರಿಗೆ ಕ್ರಮವಾಗಿ ಸಮ್ಯಗುಪಾಸನೆ-ವಿಪರೀತೋಪಾಸನೆಗಳಿಂದ ಮೋಕ್ಷ-ತಮಸ್ಸುಗಳ ಪ್ರಾಪ್ತಿಯು ಶ್ರುತವಾಗುತ್ತದೆ. ಅದರಿಂದ ದೇವತ್ವವೂ, ಅಸುರತ್ವವೂ ಕೂಡ ಸಹಜವೆಂದು ತಿಳಿಯುತ್ತದೆ.) (೪) ತತ್ = ಮೇಲೆ ಹೇಳತಕ್ಕ ದೃಷ್ಟಾಂತವು, ಯಥಾ = ಹೇಗೆಂದರೆ— ಪೇಶಸ್ಕರೀ=ಸ್ವರ್ಣಕಾರನು, ಪೇಶಸಃ=ಸುವರ್ಣದ, ಮಾತ್ರಾಂ=ಅಂಶವನ್ನು, ಉಪಾದಾಯ= ತೆಗೆದುಕೊಂಡು, ಅನ್ಯತ್=ಮತ್ತೊಂದರಂತೆ, ನವತರಂ = ಮೊದಲು ಅನುಭವವಿಲ್ಲದಿರುವುದರಿಂದ ಅತಿ ನೂತನವಾದ, ಕಲ್ಯಾಣತರಂ=ಮಲವನ್ನು ತೆಗದುದರಿಂದ ಅತಿ ಮಂಗಲಕರವಾದ, ರೂಪಂ=ಕಂಠಭೂಷಣಾದಿಗಳನ್ನು, ತನುತೇ=ಮಾಡುತ್ತಾನೆ. ಏವಮೇವ=ಹೀಗೆಯೇ, ಅಯಮಾತ್ಮಾ=ಈ ಪರಮಾತ್ಮನು, ಇದಂ ಶರೀರಂ = ಈ ಶರೀರವನ್ನು, ನಿಹತ್ಯ = ನಾಶಮಾಡಿ, (ಆಪಾವಭೂತಗಳಲ್ಲಿ ಸೇರಿಸಿ) ಅವಿದ್ಯಾಂ=ಅವಿದ್ಯೆಯನ್ನು, ಗಮಯಿತ್ವಾ = ಹೋಗಲಾಡಿಸಿ, ಅನ್ಯತ್=ಇತರವಾದ, ನವತರಂ=ಅತಿ ನೂತನವಾದ, ಕಲ್ಯಾಣತರಂ=ಅತಿ ಮಂಗಲಕರವಾದ, ರೂಪಂ=ರೂಪವನ್ನು, ಕುರುತೇ = ಮಾಡುತ್ತಾನೆ. ಪಿತ್ರ್ಯಂ ವಾ = ಪಿತೃ ಜೀವನಿಗೆ ಪಿತೃ ಸಂಬಂಧಿಯಾದ ಶರೀರವನ್ನು, ಗಾಂಧರ್ವಂ ವಾ=ಗಂಧರ್ವರಿಗೆ ಗಂಧರ್ವ ಸಂಬಂಧಿಯಾದ ಶರೀರವನ್ನು, ದೈವಂ ವಾ=ದೇವತೆಗಳಿಗೆ ದೇವಸಂಬಂಧಿಯಾದ ಶರೀರವನ್ನು, ಪ್ರಾಜಾಪತ್ಯಂ ವಾ=ಪ್ರಜಾಪತಿಗೆ (ಶಿವನಿಗೆ) ಪ್ರಜಾಪತಿ ಸಂಬಂಧಿಯಾದ ಶರೀರವನ್ನು, ಬ್ರಾಹ್ಮಂ ವಾ=ಚತುರ್ಮುಖನಿಗೆ ಚತುರ್ಮುಖಸಂಬಂಧಿಯಾದ ಶರೀರವನ್ನು, ಅನ್ಯೇಷಾಂ ಭೂತಾನಾಂ ವಾ=ಇತರ ಮನುಷ್ಯೋತ್ತಮರಿಗೆ ಅವರವರ ಸಂಬಂಧಿಯಾದ ಶರೀರವನ್ನಾಗಲೀ, ಕುರುತೇ=ಮಾಡುತ್ತಾನೆ. (ಈ ಶ್ರುತಿಯಲ್ಲಿ ಸುವರ್ಣಕ್ಕೇನೇ ಹೇಗೆ ಕಂಠಭೂಷಣಾದಿಭಾವವು ಸುವರ್ಣಕಾರನಿಂದ ಮಾಡಲ್ಪಡುತ್ತದೋ, ಯಾವುದಾದರೊಂದು ದ್ರವ್ಯಕ್ಕೆ ಮಾಡಲ್ಪಡುವುದಿಲ್ಲವೋ, ಹಾಗೆಯೇ ಮುಕ್ತಿಯೋಗ್ಯರಿಗೇನೇ ಮುಕ್ತತ್ವವು ಈಶ್ವರನಿಂದ ಮಾಡಲ್ಪಡುತ್ತದೆ. ಇತರರಿಗೆ ಮುಕ್ತತ್ವವು ಮಾಡಲ್ಪಡುವುದಿಲ್ಲ )

ಟೀ॥ ಸ. ರ. ವಿ (1) 'ಸ ಏವ ಭೂತಿನಾಮಾಪಿ ಜ್ಞಾನೈಶ್ವರ್ಯಾದಿಭೂತಿದಃ। ಅಜ್ಞಾನಾದಿ ಪ್ರದಾತೃತ್ವಾತ್ಸ ಏವಾಭೂತಿನಾಮಕಃ ॥ ಸುಖಜ್ಞಾನಾದಿಗುಣದಂ ಪೂರ್ಣಂ ಸರ್ವಗುಣೈಃ ಪ್ರಭುಂ । ಉಪಾಸತೇ ತಂ ವಾಯ್ವಾದಿದೇವಾಸ್ತಸ್ಮಾಚ್ಚ ತೇಽಖಿಲಾಃ । ಬಭೂವುಃ ಸುಖಸಜ್ಜ್ಞಾನಪೂರ್ಣೈಃ ಸರ್ವಗುಣೈಃ ಯುತಾಃ । ದೇವಾನಾಮಪಿ ಸರ್ವೇಷಾಂ ಪ್ರಧಾನೋಽದ್ಯಾಪಿ ಮಾರುತಃ । ಸ್ಥಿತ್ವಾ ಸುಪ್ತೇಷು ವಿಷ್ಣುಂ ತಂ ಭೂರ್ಭೂರಿತ್ಯೇವ ಶಂಸತಿ ॥ ಭೂಃ ಶಬ್ದಾರ್ಥೋ ಭೂತಿರಿತಿ ವೈಪರೀತ್ಯೇನ ಚಾಸುರಾಃ । ಅಭೂತಿಕಾರಣೋಽಸ್ಮಾಕಮೈಶ್ವರ್ಯಾದಿ ಗುಣೋಜ್ಝಿತಃ । ಇತ್ಯೇವೋಪಾಸತೇ ತಸ್ಮಾತ್ಪರಾಭೂತಾಶ್ಚ ತೇಽಖಿಲಾಃ । ಜ್ಞಾನೈಶ್ವರ್ಯಾದಿಭಿರ್ಹೀನಾಃ ಪೇತುರಂಧೇತಮಸ್ಯಥ' ॥ ಎಂದು ತಂ ಭೂತಿರಿತ್ಯಾದಿ ಶ್ರುತ್ಯರ್ಥವು ಐತರೇಯ ಸಂಹಿತೆಯಲ್ಲಿ ಹೇಳಿಯದೆ. (2) 'ಇದಂ ಶರೀರಂ ಭೂತೇಷು ವಿಲಾಪಯತಿ ಕೇಶವಃ। ಅವಿದ್ಯಾಂ ಚೈವ ಜೀವಸ್ಯ ಗಮಯೇಜ್ಜ್ಞಾನಸರ್ಜನಾತ್ । ಸ್ವರ್ಣಕಾರೋ ಯಥಾ ಸ್ವರ್ಣಮಲಮಗ್ನೌ ನಿಹತ್ಯ ಚ। ಶುದ್ಧೇನ ತೇನ ಚಾತ್ಮೇಷ್ಟಂ ಕುರುತೇ ರೂಪಮಂಜಸಾ । ಏವಂ ಸ ಭಗವಾನ್ವಿಷ್ಣುಃ ಜೀವಸ್ವರ್ಣಸ್ಯ ಯನ್ಮಲಂ। ಅವಿದ್ಯಾಕಾಮಕರ್ಮಾದ್ಯಮಾತ್ಮಾಗ್ನೌ ನಾಶ್ಯ ಸರ್ವಕೃತ್ । ಸ್ವೇಚ್ಛಯಾ ಕುರುತೇ ರೂಪಂ ಯದ್ಯೋಗ್ಯಂ ಯಸ್ಯ ಮುಕ್ತಿಗಂ। ಪಿತೃಜೀವಸ್ಯ ಪಿತ್ರ್ಯಂ ಸಃ ಗಾಂಧರ್ವಂ ತಸ್ಯ ಚೈವ ಹಿ । ದೈವಂತು ದೇವಜೀವಸ್ಯ

ಪ್ರಾಜಾಪತ್ಯಂ ಪ್ರಜಾಪತೇಃ । ಬ್ರಹ್ಮಣೋ ಬ್ರಾಹ್ಮಮೇವೇತಿ ನಿತ್ಯಾನಂದಸ್ವರೂಪಕಂ। ನ ಯೋಗ್ಯತಾಂ ವಿನಾ ಕ್ವಾಪಿ ' ॥ ಇತ್ಯಾದಿತದ್ಯಥಾ ಇತ್ಯಾದಿ ಶ್ರುತ್ಯರ್ಥವು ॥ ೧೧೭ ॥ ॥ ೧೧೮ ॥ ೧೧೯ ॥ ೧೨೦ ॥ ೧೨೧ ॥

ಈಗ ಈ ವಿಷಯದಲ್ಲಿಯೇ ಸ್ಮೃತಿಗಳನ್ನು ಪಠನಮಾಡುತ್ತಾರೆ—

ಮೂ ॥ ಪ್ರಯಾಂತಿ ಪರಮಾಂ ಸಿದ್ಧಿಮೈಹಿಕಾಮುಷ್ಮಿಕೀಂ ದ್ರುತಂ ।
ಯಾ ನ ಪ್ರಾಪ್ಯಾ ಸುರೈಃ ಸರ್ವೈರಕ್ಷಯಾ ಕ್ಲೇಶವರ್ಜಿತಾ ॥
ನ ತಾಂ ಗತಿಂ ಪ್ರಪದ್ಯಂತೇ ವಿನಾ ಭಾಗವತಾನ್ನರಾನ್ ॥ ೧೨೨ ॥

ಅ ॥ (' ಪುರಾ ಸತ್ಯಯುಗೇ ದೇವಿ ವಿಶುದ್ಧಮತಯೋಽಖಿಲಾಃ । ಯಜಂತಿ ವಿಷ್ಣುಮೇವೈಕಂ ಜ್ಞಾತ್ವಾ ಸರ್ವೇಶ್ವರೇಶ್ವರಂ 'ಇತ್ಯಾದಿ ಪದ್ಮಪುರಾಣ ವಚನವು. ಮೊದಲು ಸತ್ಯಯುಗದಲ್ಲಿ ವಿಶುದ್ಧ ಸ್ವಭಾವವುಳ್ಳ ದೇವತೆಗಳೆಲ್ಲರೂ ಶ್ರೀ ಹರಿಯನ್ನೇ ಸರ್ವೋತ್ತಮನನ್ನಾಗಿ ತಿಳಿದು ಪೂಜಿಸುತ್ತಾರೆ. ಅಂತವರು) ದ್ರುತಂ=ಶೀಘ್ರದಲ್ಲಿ, ಐಹಿಕಾಮುಷ್ಮಿಕೀಂ=ಐಹಿಕ-ಆಮುಷ್ಮಿಕ ರೂಪವಾದ, ಪರಮಾಂ=ಉತ್ಕೃಷ್ಟವಾದ ಸಿದ್ಧಿಂ=ಸಿದ್ಧಿಯನ್ನು (ಮೋಕ್ಷಾದಿ ಫಲಪ್ರಾಪ್ತಿಯನ್ನು) ಪ್ರಯಾಂತಿ=ಶೀಘ್ರದಲ್ಲಿ ಹೊಂದುತ್ತಾರೆ. ಸರ್ವೈಃ ಅಸುರೈಃ=ಎಲ್ಲಾ ಅಸುರರಿಂದಲೂ, ಅಕ್ಷಯಾ ನಾಶವಿಲ್ಲದಿರುವ, ಕ್ಲೇಶವರ್ಜಿತಾ = ಕ್ಲೇಶ(ದುಃಖ)ವಿಲ್ಲದಿರುವ, ಯಾ = ಯಾವ ಹಿಂದೆಹೇಳಿದ ಸಿದ್ಧಿಯು, ನ ಪ್ರಾಪ್ಯಾ = ಹೊಂದಲಸಾಧ್ಯವಾದುದೋ, ತಾಂ ಗತಿಂ=ಅಂತಹ ಗತಿಯನ್ನು, ಭಾಗವತಾನ್ ನರಾನ್=ಭಗವದ್ಭಕ್ತರಾದ ಮನುಷ್ಯರನ್ನು, ವಿನಾ=ಹೊರತು, (ಇತರರು) ನ ಪ್ರಪದ್ಯಂತೇ=ಹೊಂದುವುದಿಲ್ಲ. (ಅಂತೂ ' ಪುರಾ ಸತ್ಯೇಯುಗೇ' ಎಂದು ಪ್ರಕೃತರಾದ ದೇವತಾ ಸ್ವಭಾವವುಳ್ಳವರಿಗೆ ' ಪ್ರಯಾಂತಿ ' ಎನ್ನುವುದರಿಂದ ಮೋಕ್ಷಾದಿ ಫಲ ಪ್ರಾಪ್ತಿಯನ್ನು ಹೇಳಿ ' ಯಾ ನ ಪ್ರಾಪ್ಯಾ ' ಎಂದು ಅಸುರರಿಗೂ, ' ನ ತಾಂ ಗತಿಂ ' ಎನ್ನುವುದರಿಂದ ಮನುಷ್ಯರಿಗೂ, ಯಾವಾಗಲೂ ಮೋಕ್ಷಾದಿ ಫಲಪ್ರಾಪ್ತಿಯು ಆಗುವುದಿಲ್ಲವೆಂದು ಹೇಳಲ್ಪಟ್ಟಿತು) ॥ ೧೨೨ ॥

ಮೂ ॥ ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ ।
ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಂ ॥ ೧೨೩ ॥
ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।
ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೨೪ ॥
ಮಹಾತ್ಮಾನಸ್ತು ಮಾಂಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।
ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಂ ॥ ೧೨೫ ॥
(ಗೀತಾ ಅಧ್ಯಾ ೯. ಶ್ಲೋ. ೧೧, ೧೨, ೧೩.)

ಅ ॥ ಮಾನುಷೀಂ ತನುಂ=ಮನುಷ್ಯದೇಹ ಸಾದೃಶ್ಯದಿಂದ ತೋರತಕ್ಕ ಶರೀರವನ್ನು, ಆಶ್ರಿತಂ=ಆಶ್ರಯಿಸಿರತಕ್ಕ, ಮಾಂ=ನನ್ನನ್ನು, ಮೂಢಾಃ=ತಾಮಸರು, ಭೂತಮಹೇಶ್ವರಂ= ಸರ್ವದಾ ಇರತಕ್ಕ, ಶ್ರೇಷ್ಠವಾದ, ಗುಣಪರಿಪೂರ್ಣವಾದ, ಪರಂ=ಉತ್ತಮವಾದ, ಮಮ= ನನ್ನ, ಭಾವಂ = ಯಥಾರ್ಥವಾಗಿರತಕ್ಕ ಸ್ವರೂಪವನ್ನು, ಅಜಾನಂತಃ=ತಿಳಿಯದೆ ಇದ್ದು, ಮೋಘಾಶಾಃ=ವ್ಯರ್ಥವಾದ ಆಶೆಯುಳ್ಳ, ಮೋಘಕರ್ಮಾಣಃ=ವ್ಯರ್ಥವಾದ ಯಜ್ಞಾದಿ ಕರ್ಮವುಳ್ಳ, ಮೋಘಜ್ಞಾನಾಃ = ವ್ಯರ್ಥವಾದ ತತ್ವವಿಷಯಕ ಜ್ಞಾನವುಳ್ಳ, ವಿಚೇತಸಃ=ವಿರುದ್ಧವಾದ

ಮನಸ್ಸುಳ್ಳವರು, ಮೋಹಿನೀಂ = ಬುದ್ಧಿಭ್ರಂಶವನ್ನು ಮಾಡತಕ್ಕ, ರಾಕ್ಷಸೀಂ = ರಾಕ್ಷಸರ ಸಂಬಂಧಿಯಾದ, ಆಸುರೀಂ ಚೈವ=ಅಸುರ ಸಂಬಂಧಿಯಾದ, ಪ್ರಕೃತಿಂ = ಸ್ವಭಾವವನ್ನು, ಆಶ್ರಿತಾಃ=ಆಶ್ರಯಿಸಿದವರಾಗಿ ತಮೋಯೋಗ್ಯರಾದವರಾಗಿ, ಮಾಂ=ನನ್ನನ್ನು, ಅವಜಾನಂತಿ= ಅಧಮನೆಂದು ತಿಳಿಯುತ್ತಾರೆ ಪಾರ್ಥ=ಎಲೋ ಅರ್ಜುನನೇ, ದೈವೀಂ=ಮುಕ್ತಿ ಯೋಗ್ಯರಾದ, ಉತ್ತಮ ಜೀವರ ಸಂಬಂಧಿಯಾದ, ಪ್ರಕೃತಿಂ=ಸ್ವಭಾವವನ್ನು. ಆಶ್ರಿತಾಃ=ಆಶ್ರಯಿಸಿರತಕ್ಕ, ಮಹಾತ್ಮಾನಸ್ತು=ಮಹಾ ಮನಸ್ಸುಳ್ಳವರಾದರೂ. ಭೂತಾದಿಂ=ಭೂತಗಳಿಗೆ ಕಾರಣನಾದ, ಅವ್ಯಯಂ='ಅನಿತ್ಯತ್ವಂ ದೇಹಹಾನಿಃ ದುಃಖಪ್ರಾಪ್ತಿರಪೂರ್ಣತಾ' ಎಂದು ಹೇಳಿದ ನಾಲ್ಕು ವಿಧ ನಾಶರಹಿತನಾದ, ಮಾಂ=ನನ್ನನ್ನು, ಜ್ಞಾತ್ವಾ=ತಿಳಿದು, ಅನನ್ಯಮನಸಃ=ಅನ್ಯ ವಿಷಯಕ ಮನೋರಹಿತರಾಗಿ, ಮಾಂ=ನನನ್ನು, ಭಜಂತಿ=ಸೇವಿಸುತ್ತಾರೆ.

ತಾ ॥ (1) ಅವಜಾನಂತಿ ಎನ್ನುವುದರಿಂದ ಶ್ರೀ ಹರಿಯ ಅವಜ್ಞಾದಿರೂಪವಾದ ರಾಕ್ಷಸಾದಿ ಸ್ವಭಾವವುಳ್ಳವರಿಗೆ ಯಾವಾಗಲೂ ಪುರುಷಾರ್ಥ ಪ್ರಾಪ್ತಿಯು ಆಗುವುದಿಲ್ಲವೆಂದು ಹೇಳಲ್ಪಡುತ್ತದೆ. (2) ಮಹಾತ್ಮಾನಃ ಎನ್ನುವಲ್ಲಿ ಭಗವಂತನ ಭಜನಾದಿ ರೂಪವಾದ ದೇವತ್ವವು ಸ್ವಭಾವವೆಂದು ಪ್ರತೀತವಾಗುತ್ತದೆ ॥ ೧೨೩ ॥ ೧೨೪ ॥ ೧೨೫ ॥

**ಮೂ ॥ ಅಭಯಂ ಸತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಂ ॥ ೧೨೬ ॥**
**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಂ ।**
**ದಯಾ ಭೂತೇಷ್ವಲೋಲುತ್ವಂ ಮಾರ್ದವಂ ಹ್ರೀರಚಾಪಲಂ ॥ ೧೨೭ ॥**
**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ ೧೨೮ ॥**
**ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥಸಂಪದಮಾಸುರೀಂ ॥ ೧೨೯ ॥**

(ಗೀತಾ ಅಧ್ಯಾ. ೧೬. ಶ್ಲೋ. ೧, ೨, ೩, ೪.)

ಅ ॥ ಅಭಯಂ=ತನ್ನಿಂದ ಇತರರಿಗೂ, ಇತರರಿಂದ ತನಗೂ ಭಯವಿಲ್ಲದಿರುವಿಕೆಯು, ಸತ್ವಸಂಶುದ್ಧಿಃ=ಚಿತ್ತಪ್ರಸಾದವು, ಜ್ಞಾನಯೋಗವ್ಯವಸ್ಥಿತಿಃ=ಜ್ಞಾನೋಪಾಯದಲ್ಲಿ ಆಸಕ್ತಿಯು, ದಾನಂ=ಸತ್ಪಾತ್ರದಲ್ಲಿ ದ್ರವ್ಯಾದಿಗಳ ತ್ಯಾಗವು, ದಮಶ್ಚ=ಇಂದ್ರಿಯ ನಿಗ್ರಹವೂ, ಯಜ್ಞಶ್ಚ= ಜ್ಯೋತಿಷ್ಟೋಮಾದಿ ಯಜ್ಞವೂ ಅಥವಾ ದೈವಯಜ್ಞ, ಪಿತೃಯಜ್ಞಾದಿಗಳು, ಸ್ವಾಧ್ಯಾಯಃ= ವೇದಾಧ್ಯಯನವು, ತಪಃ=ಬ್ರಹ್ಮಚರ್ಯಾದಿಯು, ಆರ್ಜವಂ=ಮನೋವಾಕ್ಕಾಯಕರ್ಮಗಳಲ್ಲಿ ಐಕರೂಪ್ಯವು, ಅಹಿಂಸಾ=ಪರಪ್ರಾಣಾವಿಯೋಜನವೂ, ಸತ್ಯಂ=ಯಥಾರ್ಥವಾದ ನುಡಿಯು, ಅಕ್ರೋಧಃ=ಪರರಿಗೆ ಪೀಡೆಯನ್ನುಂಟುಮಾಡತಕ್ಕ ಚಿತ್ತವಿಕಾರಾಭಾವವು, ತ್ಯಾಗಃ = ಔದಾರ್ಯವೂ, ಶಾಂತಿಃ=ಶ್ರೀ ಹರಿಯಲ್ಲಿ ಆಸಕ್ತವಾದ ಬುದ್ಧಿಯು, ಅಪೈಶುನಂ=ಪರೋಪದ್ರವ ನಿಮಿತ್ತ ದೋಷಗಳನ್ನು ಹೇಳದಿರುವಿಕೆಯು, ಭೂತೇಷು = ಪ್ರಾಣಿಗಳಲ್ಲಿ, ದಯಾ=ಪರರಿಗೆ ಹಿತವನ್ನುಂಟುಮಾಡತಕ್ಕ, ಮನಸ್ಸಿನಲ್ಲಿರತಕ್ಕ ಧರ್ಮವಿಶೇಷವು, ಅಥವಾ ಪರರ ದುಃಖವನ್ನು ಸಹಿಸದೆ ಇರುವಿಕೆಯು, ಅಲೋಲುತ್ವಂ=ವಿಷಯಗಳಲ್ಲಿ ರಾಗವಿಲ್ಲದಿರುವಿಕೆಯು, ಮಾರ್ದವಂ=

ತನ್ನನ್ನು ಹಿಂಸಾಮಾಡುವವರಲ್ಲಿಯೂ ವಿರೋಧವಿಲ್ಲದಿರುವಿಕೆಯು ಅಥವಾ ಕ್ರೌರ್ಯಾಭಾವವೂ, ಹ್ರೀಃ=ಅಕಾರ್ಯವನ್ನು ಮಾಡುವುದರಲ್ಲಿ ನಾಚಿಕೆಯು, ಅಚಾಪಲಂ = ಸ್ಥಿರತ್ವವು, ತೇಜಃ= ಪರರಿಂದ ತಿರಸ್ಕಾರವಿಲ್ಲದಿರುವಿಕೆಯು, ಕ್ಷಮಾ = ಅಪಕಾರಮಾಡಿದವನಿಗೂ ಅಪಕಾರಮಾಡ ದಿರುವಿಕೆಯು, ಧೃತಿಃ = ಆತಂಕವಿಲ್ಲದಿರುವಿಕೆಯು, ಶೌಚಂ = ಮೃತ್ತಿಕಾದಿಗಳಿಂದ ಬಾಹ್ಯ ಶೌಚವೂ, ಶ್ರೀ ಹರಿಯ ಸ್ಮರಣಾದಿಗಳಿಂದ ಆಂತರ ಶೌಚವೂ, ಅದ್ರೋಹಃ=ಪರರಿಗೆ ದ್ರೋಹ ಮಾಡದಿರುವಿಕೆಯು, ನಾತಿಮಾನಿತಾ=ಅಹಂಕಾರ ರಾಹಿತ್ಯವು, (ಈ ಗುಣಗಳು) ದೈವೀಂ= ದೇವ ಸಂಬಂಧಿಯಾದ, ಸಂಪದಂ=ಸಂಪತ್ತನ್ನು, ಅಭಿಜಾತಸ್ಯ=ಹೊಂದಿದವನಿಗೆ, ಭಾರತ= ಎಲೋ ಅರ್ಜುನನೇ, ಭವಂತಿ=ಆಗುತ್ತವೆ. ದಂಭಃ=ತಾನು ಅಲ್ಪನೆಂದು ತಿಳಿದಾಗ್ಯೂ ಮಹತ್ವ ವನ್ನು ತೋರಿಸುವಿಕೆಯು, ದರ್ಪಃ = ಭಯಕಾರಣವಿದ್ದಾಗ್ಯೂ ಮದದಿಂದ ಅದು ಇಲ್ಲವೆಂದು ತೋರಿಸುವುದು, ಅಭಿಮಾನಃ=ಪ್ರಮಾಣಾತಿಕ್ರಮವು, ಕ್ರೋಧಃ=ಪರರಿಗೆ ಪೀಡೆಯನ್ನುಂಟು ಮಾಡತಕ್ಕ ಚಿತ್ತವಿಕಾರವು, ಪಾರುಷ್ಯಮೇವ ಚ=ನಿಷ್ಠುರತ್ವವೂ, ಅಜ್ಞಾನಂ ಚ=ಅಜ್ಞಾನವೂ ಕೂಡ, ಪಾರ್ಥ=ಅರ್ಜುನನೇ, ಆಸುರೀಂ ಸಂಪದಂ=ಅಸುರ ಸಂಪತ್ತನ್ನು, ಅಭಿಜಾತಸ್ಯ= ಹೊಂದಿದವನಿಗೆ, ಭವಂತಿ=ಆಗುತ್ತವೆ. (ಅಂತೂ ಅಭಯಂ ಎನ್ನುವುದರಿಂದ ಅಭಯಾದಿ ರೂಪವಾದುದು ದೇವತ್ವವೂ, ದಂಭಾದಿರೂಪವಾದುದು ಆಸುರತ್ವವೂ ಸ್ವಭಾವವೆಂದೇ ತಿಳಿಯು ತ್ತದೆ) ॥ ೧೬ ॥ ೧೭ ॥ ೧೮ ॥ ೧೯ ॥

**ಮೂ ॥ ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ ೧೩೦ ॥**
**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೩೧ ॥**
**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ॥೧೩೨॥**
(ಗೀತಾ ಅಧ್ಯಾ. ೧೬. ಶ್ಲೋ. ೧೮, ೧೯, ೨೦.)

ಅ ॥ ಆತ್ಮಪರದೇಹೇಷು=ತನ್ನ ಶರೀರದಲ್ಲಿಯೂ, ಪರರ ಶರೀರಗಳಲ್ಲಿಯೂ ನಿಯಾ ಮಕನಾಗಿರತಕ್ಕ, ಮಾಂ=ನನ್ನನ್ನು, ಪ್ರದ್ವಿಷಂತಃ = ಶ್ರೀ ಹರಿಯ ಅಪಲಾಪಾದಿ ರೂಪವಾದ ಪ್ರದ್ವೇಷವನ್ನು ಮಾಡುವವರಾಗಿ, ಅಭ್ಯಸೂಯಕಾಃ=ನಿರ್ದೋಷನಾದ ಶ್ರೀ ಹರಿಯಲ್ಲಿ ದೋಷ ಗಳನ್ನು ಹೇಳುತ್ತಾ ಗುಣಪೂರ್ಣನಲ್ಲಿ ಗುಣರಾಹಿತ್ಯವನ್ನು ಹೇಳುತ್ತಾ (ಯಾಗ ಮಾಡುತ್ತಾರೆ.) ಅಹಂ=ನಾನು, ತಾನ್=ಅಂತಹ, ದ್ವಿಷತಃ=ದ್ವೇಷಮಾಡತಕ್ಕ, ಕ್ರೂರಾನ್ = ಕ್ರೂರರಾದ, ಅಶುಭಾನ್=ಅಮಂಗಲರಾದ, ನರಾಧಮಾನ್=ಮನುಷ್ಯಾಧಮರನ್ನು, ಸಂಸಾರೇಷು=ಸಂಸಾರ ಗಳಲ್ಲಿ, ಆಸುರೀಷ್ವೇವ ಯೋನಿಷು = ಅಸುರ ಯೋನಿಗಳಲ್ಲಿಯೇ, ಅಜಸ್ರಂ = ನಿರಂತರದಲ್ಲಿ, ಕ್ಷಿಪಾಮಿ=ಸ್ಥಾಪಿಸುತ್ತೇನೆ. ಕೌಂತೇಯ = ಅರ್ಜುನನೇ, ತತಃ = ಅದರಿಂದ, ಮೂಢಾಃ= ತಾಮಸ ಸ್ವಭಾವವುಳ್ಳವರು, ಜನ್ಮನಿ ಜನ್ಮನಿ = ಅನೇಕ ಜನ್ಮಗಳಲ್ಲಿ, ಆಸುರೀಂ ಯೋನಿಂ ಆಪನ್ನಾಃ=ಅಸುರ ಯೋನಿಯನ್ನು ಹೊಂದಿದವರಾಗಿ, ಮಾಂ = ನನ್ನನ್ನು. ಅಪ್ರಾಪ್ಯೈವ= ಹೊಂದದೇನೇ, ಅಧಮಾಂಗತಿಂ=ನಿತ್ಯ ನರಕರೂಪವಾದ ಗತಿಯನ್ನು, ಯಾಂತಿ=ಹೊಂದು ತ್ತಾರೆ. (ಅಂತೂ ಮಾಮಾತ್ಮ ಎನ್ನುವುದರಿಂದ ಅಸುರಸ್ವಭಾವವುಳ್ಳವರಿಗೆ ಅಂಧಂತಮಸ್ಸಿನ ಪ್ರಾಪ್ತಿಯು ಹೇಳಲ್ಪಟ್ಟಿತು.) ॥ ೧೩೦ ॥ ೧೩೧ ॥ ೧೩೨ ॥

ಮೂ ॥ ದ್ವಿವಿಧೋ ಭೂತ(ಪ)ಸರ್ಗೋಽತ್ರ ದೈವ ಆಸುರ ಏವ ಚ ।
ವಿಷ್ಣು ಭಕ್ತಿಪರೋ ದೈವೋ ವಿಪರೀತಸ್ತಥಾಸುರಃ ॥ ೧೩೩ ॥

(ವಿಷ್ಣು ಧರ್ಮ ವಚನವು)

ದೇವಾನಾಂ ಪರಮೋ ಧರ್ಮಃ ಸದಾ ಯಜ್ಞಾದಿಕಾಃ ಕ್ರಿಯಾಃ ।
ಸ್ವಾಧ್ಯಾಯಸ್ತತ್ವವೇದಿತ್ವಂ ವಿಷ್ಣುಪೂಜಾರತಿಃ ಸ್ಮೃತಿಃ ॥ ೧೩೪ ॥
ದೈತ್ಯಾನಾಂ ಬಾಹುಶಾಲಿತ್ವಂ ಮಾತ್ಸರ್ಯಂ ಯುದ್ಧಸತ್ಕ್ರಿಯಾ ।
ನೀತಿಶಾಸ್ತ್ರಪ್ರವೇದಿತ್ವಂ ಶಿವಪೂಜಾರತಿಃ ಸ್ಮೃತಿಃ ॥ ೧೩೫ ॥
ವರ್ಣಾಶ್ರಮಾಚಾರವತ್ವಂ ಸ್ವಾಧ್ಯಾಯೋ ಭಕ್ತಿರಚ್ಯುತೇ ।
ಶಿವೇ ಸೂರ್ಯೇ ತಥಾ ದೇವ್ಯಾಂ ಸ್ವಭಾವೋ ಮಾನುಷಃ ಸ್ಮೃತಃ ॥
॥ ೧೩೬ ॥

ಅನಾದಿವೈಷ್ಣವಾ ಏವ ದೇವತಾಸ್ತು ಸ್ವಭಾವತಃ ।
ವಿಪರೀತಾಃ ಸ್ಮೃತಾ(ತತೋ)ದೈತ್ಯಾಃ ಸದೈವಾನಾದಿಕಾಲತಃ ॥ ೧೩೭ ॥
ಮಾನುಷಾ ಮಿಶ್ರಮ(ಗ) ತಯೋಃ ವಿಮಿಶ್ರಮ(ಗ) ತಯೋಽಪಿ ಚ ।

(ವಾಮನ ಪುರಾಣವು)

ಇತ್ಯಾದಿವಾಕ್ಯಸಂದರ್ಭೈರ್ಜ್ಞಾಯತೇಽನಾದಿ ಯೋಗ್ಯತಾ ॥ ೧೩೮ ॥

ಅ ॥ ಅತ್ರ=ಇಲ್ಲಿ, ದೈವಃ=ದೈವವೆಂದೂ, ಆಸುರಃ ಚ = ಅಸುರ ಎಂದೂ, ಭೂತ ಸರ್ಗಃ=ಪ್ರಾಣಿಗಳ ಸ್ವಭಾವವು, ಅಥವಾ, ಭೂಪಃ=ಎಲೋ ರಾಜನೇ, ಸರ್ಗಃ=ಸೃಷ್ಟಿಯು, ದ್ವಿವಿಧ ಏವ=ಎರಡೇ ವಿಧವು. (**'ಸರ್ಗಾಣಾಂ ಸುಬಹುತ್ವೇಽಪಿ ಶುಭಾಶುಭಫಲಾಧಿಕೌ । ದೇವಾಸುರಾಖ್ಯೌ ದ್ವಾವೇವ ಗಂಧರ್ವಾದ್ಯಾಸ್ತದಂತರಾಃ'** ॥ ಎನ್ನುವ ವಚನದಿಶೆಯಿಂದ ಅವಧಾರಣವು ಕೂಡುತ್ತದೆ.) ದೈವಃ=ದೈವವು, ವಿಷ್ಣುಭಕ್ತಿಪರಃ=ಶ್ರೀ ಹರಿಯ ಭಕ್ತಿಯಲ್ಲಿಯೇ, ಆಸಕ್ತಿಯುಳ್ಳದ್ದು. ತಥಾ=ಹಾಗೆ, ಆಸುರಃ=ಆಸುರ ಸ್ವಭಾವವು, ವಿಪರೀತಃ=ವಿಪರೀತವಾದುದು ದೇವಾನಾಂ=ದೇವತೆಗಳಿಗೆ, ಸದಾ=ಯಾವಾಗಲೂ, ಪರಮಃ ಧರ್ಮಃ=ಶ್ರೀ ಹರಿಯಲ್ಲಿ ಅರ್ಪಣ ಬುದ್ಧಿಯಿಂದ ಮುಖ್ಯಧರ್ಮ ರೂಪವಾದ, ಯಜ್ಞಾದಿಕಾಃ = ಯಾಗವೇ ಮೊದಲಾಗಿವುಳ್ಳ, ಕ್ರಿಯಾಃ=ಕ್ರಿಯೆಗಳು, ಸ್ವಾಧ್ಯಾಯಃ=ವೇದಾಧ್ಯಯನವು, ತತ್ವವೇದಿತ್ವಂ = ಯಥಾರ್ಥವಾಗಿ ತಿಳಿದುಕೊಳ್ಳುವಿಕೆಯು, ವಿಷ್ಣುಪೂಜಾರತಿಃ=ಶ್ರೀ ಹರಿಯ ಪೂಜೆಯಲ್ಲಿಯೇ ಆಸಕ್ತಿಯು, ಸ್ಮೃತಿಃ=ವಿಷ್ಣುವಿನ ಸ್ಮರಣೆಯು, ಪರಮಧರ್ಮವು. ದೈತ್ಯಾನಾಂ=ದೈತ್ಯರಿಗೆ, ಬಾಹುಶಾಲಿತ್ವಂ= ಭುಜಪರಾಕ್ರಮವು, (ಅನುಪಯುಕ್ತಸ್ಥಲದಲ್ಲಿ ಬಾಹುಬಲ ಪ್ರಯೋಗವು,) ಮಾತ್ಸರ್ಯಂ=ಅನ್ಯ ಶುಭದ್ವೇಷವು, ಯುದ್ಧಸತ್ಕ್ರಿಯಾ=ಯುದ್ಧಕೌಶಲವು, ನೀತಿಶಾಸ್ತ್ರಪ್ರವೇದಿತ್ವಂ=ನೀತಿಶಾಸ್ತ್ರವನ್ನು ತಿಳಿದುಕೊಳ್ಳುವಿಕೆಯು, ಶಿವಪೂಜಾರತಿಃ=ರುದ್ರನ ಪೂಜೆಯಲ್ಲಿಯೇ ಆಸಕ್ತಿಯು, ಸ್ಮೃತಿಃ= ರುದ್ರನ ಸ್ಮರಣೆಯು, ಧರ್ಮಃ=ಧರ್ಮವು. ವರ್ಣಾಶ್ರಮಾಚಾರವತ್ವಂ=ವರ್ಣಾಶ್ರಮಾಚಾರಗಳ ಅನುಷ್ಠಾನವು, ಸ್ವಾಧ್ಯಾಯಃ=ವೇದಾಧ್ಯಯನವು, ಅಚ್ಯುತೇ ಶ್ರೀ ಹರಿಯಲ್ಲಿಯೂ, ಶಿವೇ=ರುದ್ರ ನಲ್ಲಿಯೂ, ಸೂರ್ಯೇ=ಸೂರ್ಯನಲ್ಲಿಯೂ, ತಥಾ=ಹಾಗೇಯೇ, ದೇವ್ಯಾಂ=ಲಕ್ಷ್ಮೀದೇವಿಯ ಲ್ಲಿಯೂ, ಭಕ್ತಿಃ = ಸಾಮ್ಯದಿಂದ ಭಕ್ತಿಯು, ಮಾನುಷಃ ಸ್ವಭಾವಃ=ಮನುಷ್ಯಸಂಬಂಧಿಯಾದ

ಸ್ವಭಾವವೆಂದು, ಸ್ಮೃತಃ=ಹೇಳಲ್ಪಟ್ಟದೆ. ಸ್ವಭಾವತಃ=ಸ್ವಾಭಾವಿಕವಾಗಿ, ದೇವತಾಸ್ತು=ದೇವತೆಗಳಾದರೂ, ಅನಾದಿವೈಷ್ಣವಾ ಏವ=ಅನಾದಿಕಾಲದಿಂದ ವಿಷ್ಣುಭಕ್ತರೇ. ದೈತ್ಯಾಃ=ದೈತ್ಯರು, ಸದೈವ = ಯಾವಾಗಲೂ, ಅನಾದಿಕಾಲತಃ = ಅನಾದಿಕಾಲವನ್ನು ಆರಂಭಿಸಿ, ವಿಪರೀತಾಃ ಸ್ಮೃತಾಃ = ಮಿಥ್ಯಾಜ್ಞಾನವುಳ್ಳವರೆಂದು ಹೇಳಲ್ಪಟ್ಟರುತ್ತಾರೆ. ಮಾನುಷಾಃ = ಮನುಷ್ಯರು, ಅನಾದಿಕಾಲತಃ = ಅನಾದಿಕಾಲವನ್ನು ಆರಂಭಿಸಿ, ಮಿಶ್ರಮತಯಃ=ಯಥಾರ್ಥ ಅಯಥಾರ್ಥ ಜ್ಞಾನವುಳ್ಳವರು, ಅಪಿ ಚ=ಮತ್ತು, ವಿಮಿಶ್ರಗತಯಃ = ಸುಖದುಃಖಾತ್ಮಕಸಂಸಾರ ಫಲವುಳ್ಳವರು, ಇತ್ಯಾದಿ ವಾಕ್ಯಸಂದರ್ಭೈಃ = ಇದು ಮೊದಲಾದ ವಾಕ್ಯಗಳ ಸಂದರ್ಭಗಳಿಂದ, ಅನಾದಿಯೋಗ್ಯತಾ = ಅನಾದಿಯೋಗ್ಯತೆಯು, ಜ್ಞಾಯತೇ = ತಿಳಿಯಲ್ಪಡುತ್ತದೆ. (ಅಂತೂ ದೇವತ್ವ-ಅಸುರತ್ವಾದಿಗಳು ಸ್ವಭಾವವೆಂದುಹೇಳಲ್ಪಟ್ಟತು) ॥ ೧೩೩ ॥ ೧೩೪ ॥ ೧೩೫ ॥ ೧೩೬ ॥ ॥ ೧೩೭ ॥ ೧೩೮ ॥

ಸ. ರ. ವಿ— ಯಾವ ಈ ವಿಷ್ಣುಭಕ್ತ್ಯಾದಿ ಧರ್ಮಗಳು ಅನಾದಿಯಿಂದ ತಾರತಮ್ಯದಿಂದ ಇರತಕ್ಕವುಗಳು ಶ್ರುತಿ-ಸ್ಮೃತಿಗಳ ಸಾಮರ್ಥ್ಯದಿಂದ ಬ್ರಹ್ಮಾದಿಗಳಿಗೆ ಸ್ವಾಭಾವಿಕ ಲಕ್ಷಣವಾಗಿ ಹೇಳಲ್ಪಟ್ಟವೆಯೋ, ಯಾವ ವಿಷ್ಣುಪ್ರಾತಿಕೂಲ್ಯಾದಿ ದೋಷಗಳು ಅನಾದಿಯಿಂದ ತಾರತಮ್ಯದಿಂದಲೇ ಇರತಕ್ಕವುಗಳು ಕಲಿಮೊದಲಾದ ಅಸುರರಿಗೆ ಸ್ವಾಭಾವಿಕ ಲಕ್ಷಣವಾಗಿ ಹೇಳಲ್ಪಟ್ಟವೆಯೋ, ಅವುಗಳಿಗೆ ಅನಾದಿತ್ವವನ್ನು ಅಂಗೀಕರಿಸದೆ ಇದ್ದರೆ ಬಾಧಕವನ್ನು ಹೇಳುತ್ತಾರೆ.

**ನ್ಯಾಯಸುಧಾ**— ಹಿಂದೆ ಹೇಳಿದ ಅನುಮಾನಗಳಿಗೆ ವ್ಯಾಪ್ತಿಯನ್ನು ನಿಶ್ಚೈಸುವುದಕ್ಕಾಗಿಯೂ ಆಗಮಗಳಿಗೆ ಅನ್ಯಾರ್ಥವ್ಯಾಖ್ಯಾನವನ್ನು ನಿರಾಕರಿಸುವುದಕ್ಕಾಗಿಯೂ ಅನುಗ್ರಾಹಕವಾದ ತರ್ಕವನ್ನು ಹೇಳುತ್ತಾರೆ—

**ಮೂ ॥ ಯದ್ಯನಾದಿವಿಶೇಷೋ ನ ಸಾಂಪ್ರತಂ ಕಥಮೇವ ಸಃ ॥**
**ಅದೃಷ್ಟಾದೇವ ಚಾದೃಷ್ಟಂ ಸ್ವೀಕೃತಂ ಸರ್ವವಾದಿಭಿಃ ॥ ೧೩೯ ॥**
**ಆಕಸ್ಮಿಕೋ ವಿಶೇಷಶ್ಚೇದದೃಷ್ಟೇ ಕ್ವಚಿದಿಷ್ಯತೇ ।**
**ಸರ್ವತ್ರಾಕಸ್ಮಿಕತ್ವಂ ಸ್ಯಾನ್ನಾದೃಷ್ಟಾಪೇಕ್ಷತಾ ಭವೇತ್ ॥**
**ಅದೃಷ್ಟಾಚ್ಚೇದ್ವಿ(ಚ್ಚವಿ)ಶೇಷೋಽಯಮನಾದಿತ್ವಂ ಕುತೋ ನ ತತ್ ॥**
**॥ ೧೪೦ ॥**

ಅ ॥ ಯದಿ=ಯಾವ ಪಕ್ಷದಲ್ಲಿ, ಅನಾದಿವಿಶೇಷಃ=ಚತುರ್ಮುಖನಿಗೆ ಅನಾದಿಯಾದ ಸರ್ವೋತ್ಕೃಷ್ಟವಾದ ಯೋಗ್ಯತಾ ರೂಪವಾದ ವಿಶೇಷವು, ನ=ಇಲ್ಲವೋ, (ಆಗ) ಸಾಂಪ್ರತಂ= ಈಗ, ಸಃ = ಕಾಣಲ್ಪಡತಕ್ಕ ಅತಿಶಯರೂಪವಾದ ವಿಶೇಷವು, ಕಥಮೇವ = ಹೇಗೆತಾನೇ ಕೂಡುವುದು? (ಅಂದರೆ— ಕಾಣಲ್ಪಡತಕ್ಕ ಸರ್ವೋತ್ಕೃಷ್ಟತ್ವವು ಬಾರದೆ ಹೋಗುವುದು. ಸರ್ವೋತ್ಕೃಷ್ಟತ್ವಕ್ಕೆ ಅನಾದಿಯಾದ ಯೋಗ್ಯತೆಯು ಕಾರಣವು. ಕಾರಣವಿಲ್ಲದಿದ್ದರೆ ಕಾರ್ಯವೂ ಆಗಲಾರದು. ಇಲ್ಲದಿದ್ದರೆ ಸರ್ವರಿಗೂ ಸರ್ವೋತ್ಕೃಷ್ಟತ್ವವು ಬರಬೇಕಾಗುವುದು.) (ಹಾಗಾದರೆ ಬ್ರಹ್ಮಾದಿಗಳಿಗೆ ಯೋಗ್ಯತಾರೂಪವಾದ, ಅನಾದಿಯಾದ ವಿಶೇಷವಿಲ್ಲದಿದ್ದರೂ ಸಾದಿಯಾದ ವಿಶಿಷ್ಟವಾದ ಅದೃಷ್ಟದಿಂದಲೇ, ಜೀವೋತ್ಕೃಷ್ಟತ್ವಾದಿಗಳು ಬರುವುವು. **'ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ವಿರಿಂಚಿತಾಮೇತಿ'** ಇತ್ಯಾದಿ ಸ್ಮೃತಿಯು, ಎಂದರೆ— ೧ ವಿರಿಂಚನ

ಸರ್ವೋತ್ಕೃಷ್ಟಕ್ಕೆ ಕಾರಣೀಭೂತವಾದ ವಿಶಿಷ್ಟವಾದ ಅದೃಷ್ಟವು ಅದಕ್ಕಿಂತ ಹಿಂದಿನದ್ದಾದ ಅಂತಹ ಅದೃಷ್ಟವನ್ನು ಅಪೇಕ್ಷಿಸದೇನೇ ಹುಟ್ಟುತ್ತದೋ, ೨ ಅಪೇಕ್ಷಿಸಿಕೊಂಡು ಹುಟ್ಟುತ್ತದೋ, ೧ನೇದ್ದನ್ನು ದೂಷಿಸುತ್ತಾರೆ.) ಅದೃಷ್ಟಾದೇವ ಚ=ಅದೃಷ್ಟದಿಂದಲೇ, ಅದೃಷ್ಟಂ = ಅದೃಷ್ಟವು, ಸರ್ವವಾದಿಭಿಃ ಚ = ಎಲ್ಲಾ ವಾದಿಗಳಿಂದಲೂ, ಸ್ವೀಕರಿಸಿಕೊಳ್ಳಲ್ಪಟ್ಟದೆ. (ಅಂದರೆ, ಆವಾವ ದ್ರವ್ಯಾದಿಗಳು ಅದೃಷ್ಟದ ಉತ್ಪತ್ತಿಯಲ್ಲಿ ನಿಮಿತ್ತಗಳೆಂದು ಶ್ರುತಿ-ಸ್ಮೃತಿಗಳಿಂದ ಉಪಲಬ್ಧಗಳಾ ಗುತ್ತವೆ. ಆ ದ್ರವ್ಯಾದಿಗಳ ಪ್ರಾಪ್ತಿಯೂ ಅದೃಷ್ಟನಿಮಿತ್ತಕವೇ. ಆದಕಾರಣ ಕೇವಲ ಫಲವಲ್ಲ. ಮತ್ತೆ ಉತ್ತರೋತ್ತರ ಅದೃಷ್ಟವೂ, ಪೂರ್ವಾಪೂರ್ವ ಅದೃಷ್ಟದಿಂದಲೇ ಉಂಟಾಗುತ್ತದೆಂದು ಚಾರ್ವಾಕನು ಹೊರತು ಬೇರೆ ಎಲ್ಲಾ ವಾದಿಗಳೂ ಸ್ವೀಕರಿಸಿರುವರು. ಆದಕಾರಣ ಸರ್ವೋತ್ಕರ್ಷಕ್ಕೆ ಕಾರಣವಾದ, ವಿಶಿಷ್ಟವಾದ ಅದೃಷ್ಟವು, ಅಂತಹ ಹಿಂದಿನ ಅದೃಷ್ಟವನ್ನು ಅಪೇಕ್ಷಿಸದೆ ಹುಟ್ಟುತ್ತದೆಂದು ಅಂಗೀಕರಿಸಿದರೆ ಅಪಸಿದ್ಧಾಂತವು ಬರುವುದು.) (ಬೇರೆ ವಾದಿಗಳು ಹೀಗೆ ಅಂಗೀಕರಿಸಲಿ. ನಾನಾದರೂ ವಿರಿಂಚನ ಸರ್ವೋತ್ಕರ್ಷಾದಿ ಫಲದ ಉತ್ಪತ್ತಿಯಲ್ಲಿಯೇ ವಿಶಿಷ್ಟವಾದ ಅದೃಷ್ಟದ ಅಪೇಕ್ಷೆಯು ಅದೃಷ್ಟೋತ್ಪತ್ತಿಯಲ್ಲಿ ಅದೃಷ್ಟದ ಅಪೇಕ್ಷೆಯಿಲ್ಲವೆಂದು ಹೇಳುವ ವಾದಿಯನ್ನು ಕುರಿತು ಅತಿಪ್ರಸಂಗವನ್ನು ಹೇಳುತ್ತಾರೆ) ಕ್ವಚಿತ್ = ಯಾವುದೋ ಒಂದು, (ಅಂದರೆ, ಚತುರ್ಮುಖನ ಉತ್ಕರ್ಷಕ್ಕೆ ಕಾರಣವಾದ,) ಅದೃಷ್ಟೇ=ಅದೃಷ್ಟದಲ್ಲಿ, ವಿಶೇಷಃ= ಅತಿಶಯವು, ಆಕಸ್ಮಿಕಃ=ಅದೃಷ್ಟ-ನಿರಪೇಕ್ಷವಾಗಿಯೇ, ಇಷ್ಯತೇ ಚೇತ್=ಅಂಗೀಕರಿಸಲ್ಪಡುವುದಾದರೆ, (ಅಂದರೆ, ಯಾವುದಾದರೊಂದು ವಿಶಿಷ್ಟವಾದ ಅದೃಷ್ಟವು. ಅಂತಹ ಅದೃಷ್ಟದ ಅಪೇಕ್ಷೆಯಿಲ್ಲದೇನೇ ಹುಟ್ಟುತ್ತದೆಂದು ಅಂಗೀಕರಿಸಲ್ಪಡುವುದಾದರೆ) ಹಾಗಾದರೆ, ಸರ್ವತ್ರ=ಫಲಾದಿಗಳಲ್ಲಿಯೂ ಕೂಡ, ಆಕಸ್ಮಿಕತ್ವಂ ಸ್ಯಾತ್=ಅದೃಷ್ಟಾಪೇಕ್ಷೆಯಿಲ್ಲವೆಂದೇ ಅಂಗೀಕರಿಸಬೇಕಾಗುವುದು. ಸರ್ವತ್ರ=ಎಲ್ಲಾ ಕಡೆಗಳಲ್ಲಿ. ಅದೃಷ್ಟಾಪೇಕ್ಷತಾ=ಅದೃಷ್ಟದ ಅಪೇಕ್ಷೆಯು, ನ ಭವೇತ್=ಆಗದೆ ಹೋಗಬೇಕಾಗುವುದು. (ಹಾಗಾದರೆ— ಅದೃಷ್ಟವನ್ನು ಅಪೇಕ್ಷಿಸಿಯೇ ಹುಟ್ಟುತ್ತದೆ ಎನ್ನುವ ಎರಡನೇ ಪಕ್ಷವಾಗಲಿ ಎಂದರೆ—) ಅಯಂ ವಿಶೇಷಃ = ವಿರಿಂಚನಿಗೆ ಸರ್ವೋತ್ಕರ್ಷಕ್ಕೆ ಕಾರಣೀಭೂತವಾದ ಅದೃಷ್ಟವು, ಅದೃಷ್ಟಾತ್ ಭವತಿ ಚೇತ್=ಅದೃಷ್ಟದಿಂದ ಹುಟ್ಟುವುದಾದರೆ, ತತ್=ಹಾಗಾದರೆ, (ಅಂತಹ ಅದೃಷ್ಟ ಪರಂಪರೆಗೆ) ಅನಾದಿತ್ವಂ = ಅನಾದಿತ್ವವೂ, ಕುತಃ=ಯಾವ ಕಾರಣದಿಂದ, ನ=ಆಗಲಾರದು.

ತಾ || ಹೇಗೆ ಚತುರ್ಮುಖನ ಸರ್ವೋತ್ಕರ್ಷದಲ್ಲಿ ಕಾರಣೀಭೂತವಾದುದು ವಿಶಿಷ್ಟವಾದ ಅದೃಷ್ಟಕ್ಕೆ ಅಂತಹ ಪೂರ್ವಾದೃಷ್ಟವು ಕಾರಣವೆಂದು ಹೇಳಿದರೆ ಹಾಗೆ ಆ ಅದೃಷ್ಟಕ್ಕೂ ಪೂರ್ವಾದೃಷ್ಟವು ಕಾರಣವೆಂದು ಅದಕ್ಕೂ ಹೀಗೆ ಅದಕ್ಕೂ ಹೀಗೆ-ಹೀಗೆ ಅದೃಷ್ಟಪರಂಪರೆಗೆ ಅನಾದಿತ್ವವನ್ನು ಒಪ್ಪಬೇಕಾಗುವುದು ಸ್ವೀಕರಿಸಬೇಕಾಗುವುದು.

ತಾ || ಸ. ರ. ವಿ. ಪ್ರಶಸ್ತವಾದ ಪೂರ್ವವಾಸನಾದಿಗಳನ್ನು ಹೊರತೇ ನಿಷ್ಕಾರಣವಾಗಿಯೇ ಕೆಲವು ವೇಳೆ ಯಾರೋ ಒಬ್ಬನಿಗೆ ದೇವಪ್ರಕೃತಿಯು, ಒಬ್ಬನಿಗೆ ಆಸುರಪ್ರಕೃತಿಯು, ಎಂದು ಹೇಳಕೂಡದು. ಸ್ವರ್ಗ-ನರಕಾದಿಗಳೂ ನಿಷ್ಕಾರಣವಾಗಿ ಅದೃಷ್ಟ ಸಾಧ್ಯವಾಗದೆ ಹೋಗಬೇಕಾಗುವುದು. ದೇವಸ್ವಭಾವವುಳ್ಳ ಜಯಾದಿಗಳಿಗಾದರೂ ಹಿರಣ್ಯಕಶಿಪು ಮೊದಲಾದ ಜನ್ಮಗಳಲ್ಲಿ ಆಸುರಸ್ವಭಾವವು ಸ್ಫಟಿಕದಲ್ಲಿ ಕೆಂಪು ದಾಸಾಳ ಹೂ ನಿಮಿತ್ತವಾಗಿ ರಕ್ತಿಮದಂತೆಯೇ ಅಸುರಾವೇಶ ಪ್ರಯುಕ್ತವೇ. ಹೇಗೆಂದರೆ— ಜಯ-ವಿಜಯರಿಗೆ '**ಲೋಕಾದಿತೋ ವ್ರಜತಮಂತರಭಾವದೃಷ್ಟ್ಯಾ ಪಾಪೀಯಸಸ್ತ್ರಯ ಇಮೇ ರಿಪವೋಽಸ್ಯ ಯತ್ರ**'

ಎಂದು ಭಾಗವತದಲ್ಲಿ ಹೇಳಿದ ಪ್ರಕಾರ ಸನಕಾದಿಗಳು ಶಾಪವನ್ನು ಕೊಟ್ಟಿರುತ್ತಾರೆ. ಆದ ಕಾರಣ ಯಾರಿಗೆ ಅನಾದಿ ದೇವಸ್ವಭಾವವು ತರತಮದಿಂದ ಅನುವೃತ್ತವಾಗಿದೆಯೋ, ಅವರಲ್ಲಿಯೇ ಆ ಸ್ವಭಾವ ತಾರತಮ್ಯದಿಂದಲೇ ಕೇವಲ ಆಧಿಕ್ಯವು ಕೂಡುತ್ತದೆ. ಸರ್ವಥಾ ಇಲ್ಲದಿದ್ದಕ್ಕೆ ಉತ್ಪತ್ತಿಯು ಕೂಡಲಾರದು. ಹಾಗೆಯೇ ಯಾರಿಗೆ ಅನಾದಿಯಿಂದ ತಾರತಮ್ಯದಿಂದಲೇ ಅಸುರಸ್ವಭಾವವು ಅನುವೃತ್ತವಾಗಿದೆಯೋ ಅವರಲ್ಲಿಯೇ ಅಸುರಸ್ವಭಾವಕ್ಕೆ ತಾರತಮ್ಯದಿಂದಲೇ ಆಧಿಕ್ಯವು. ಸರ್ವಥಾ ಅವಿದ್ಯಮಾನವಾದುದಕ್ಕೆ ಉತ್ಪತ್ತಿಯಿಲ್ಲ. (2) ೧. **'ತಂ ವಿದ್ಯಾಕರ್ಮಣೀ ಸಮನ್ವಾರಭೇತೇ, ಪೂರ್ವಪ್ರಜ್ಞಾ ಚ ॥** ೨. **ಜನ್ಮ ಜನ್ಮ ಯದಭ್ಯಸ್ತಂ ಜ್ಞಾನಮಧ್ಯಯನಂ ತಪಃ । ತೇನೈವಾಭ್ಯಾಸಯೋಗೇನ ತಚ್ಚೈವಾಭ್ಯಾಸತೇ ಪುನಃ ॥ ಹಿಂಸಾಹಿಂಸೇ ಮೃದು ಕ್ರೂರೇ ಧರ್ಮಾಧರ್ಮಾನೃತಾನೃತೇ । ತದ್ಭಾವಿತಾಃ ಪ್ರಪದ್ಯಂತೇ ತಸ್ಮಾತ್ತತ್ತಸ್ಯ ರೋಚತೇ ॥ ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ । ಪ್ರಕೃತಿಂ ಯಾಂತಿ ಜಾತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ಜನ್ಮಾಂತರಸಹಸ್ರೇಷು ಯಾ ಬುದ್ಧಿರ್ಭಾವಿತಾ ಪುರಾ । ತಾಮೇವ ಭಜತೇ ಜಂತುಃ'** ಇದು ಮೊದಲಾದ ವಚನಗಳ ಸಾಮರ್ಥ್ಯದಿಂದ ಸರ್ವಥಾ ಇಲ್ಲದಿರುವುದಕ್ಕೆ ಉತ್ಪತ್ತಿಯುಲ್ಲ ॥ ॥೧೩೯॥೧೪೦॥

**ಸ. ರ ವಿ —** ಹಾಗಾದರೆ ಬಹುರೂಪಗಳುಳ್ಳ ಶ್ರೀಹರಿಗೆ ಭೇದವಿಲ್ಲದಿರುವುದರಿಂದ, ನಿರ್ದೋಷತ್ವವೇ ಕಂಡದರಿಂದ ಇಷ್ಟವಾದ ಫಲದ ಪ್ರಾಪ್ತಿಯು ಆಗುತ್ತದೆಂದು ಯಾವುದು ಈ ಪಾದದಲ್ಲಿ ಪ್ರತಿಪಾದಿಸಲಿಕ್ಕೆ ಆರಬ್ಧವಾಗಿದೆಯೋ ಅದು ಕೂಡಲಾರದು. ಶ್ರೀಹರಿಯ ರಾಮಾದಿ ರೂಪಗಳಲ್ಲಿ ಜೀವರಲ್ಲಿ ತೋರಿದಂತೆಯೇ ಭೇದಾದಿಗಳು ದೃಷ್ಟಗಳಾಗಿವೆ ಎಂದಾಶಂಕೆಯನ್ನು ಬೃಹತ್ಸಂಹಿತಾವಚನದಿಂದ ಪರಿಹರಿಸುತ್ತಾರೆ—

**ಮೂ ॥ ನ ಚಾನ್ಯಭೇದವದ್ವಿಷ್ಣೌ ಭೇದಸ್ತದ್ದರ್ಶಿನಾಮಪಿ ॥ ೧೪೧ ॥**
**ದೃಶ್ಯತೇ ಪ್ರತ್ಯಭಿಜ್ಞೈವ ಬಹುರೂಪೇಷು ದೃಶ್ಯತೇ ।**
**ಬಹುತ್ವಂ ಚ ವಿಶೇಷೇಣ ನ ಭೇದೇನ ಕಥಂಚನ ॥ ೧೪೨ ॥**

**ಅ ॥** ತದ್ದರ್ಶಿನಾಮಪಿ = ಅವತಾರವನ್ನು ನೋಡುವವರಿಂದಲೂ, ಅಥವಾ ಅವತಾರ ದರ್ಶಿಗಳ ಪ್ರತ್ಯಕ್ಷದಿಂದಲೂ, ಅನ್ಯಭೇದವತ್ = ಇತರಗಳಾದ ಘಟಾದಿಗಳಿಗೆ ಹೇಗೆ ಅನೇಕತ್ವದಿಂದ ಅತಿರಿಕ್ತವಾದ ಅನ್ಯೋನ್ಯಾಭಾವರೂಪವಾದ ಭೇದವು ಕಾಣಲ್ಪಡುತ್ತದೋ ಹಾಗೆ,ವಿಷ್ಣೌ = ರಾಮಕೃಷ್ಣಾದಿರೂಪಗಳಲ್ಲಿ, ಭೇದಃ-ಭೇದವು, ನ ಚ ದೃಶ್ಯತೇ=ಕಾಣಲ್ಪಡುವುದೇ ಇಲ್ಲ. (ದೇವತೆಗಳು, ಮನುಷ್ಯರು, ದಾನವರು ಎನ್ನುವ ಭೇದದಿಂದ ಸ್ವಾಭಾವಿಕವಾಗಿಯೇ ಜೀವರು ಮೂರು ವಿಧರು. ಅದರಲ್ಲಿ ದೇವತೆಗಳ ಪ್ರತ್ಯಕ್ಷವು ಅವತಾರಗಳಲ್ಲಿ ಪರಸ್ಪರ ಭೇದವನ್ನು ವಿಷಯೀಕರಿಸುವುದಿಲ್ಲ. ಇಷ್ಟುಮಾತ್ರವಲ್ಲ ಮತ್ತೇನೆಂದರೆ, ಬಹುರೂಪೇಷು=ಉತ್ತಮ ಪುರುಷರಿಗೆ ಶ್ರೀಹರಿಯ ಬಹುರೂಪಗಳಲ್ಲಿ, ಪ್ರತ್ಯಭಿಜ್ಞೈವ = ಅದೇ ಇದು ಎಂದು ಅಭೇದ ವಿಷಯಕವಾದ ಪ್ರತ್ಯಭಿಜ್ಞೆಯೇ, ದೃಶ್ಯತೇ=ಪುರಾಣಾದಿಗಳಲ್ಲಿ ಕಾಣಲ್ಪಡುತ್ತದೆ. (ಉದಾ = ಜಾಂಬವಂತನಿಗೆ ಆ ಶ್ರೀ ರಾಮನೇ ಶ್ರೀ ಕೃಷ್ಣನು ಎನ್ನುವ ಪ್ರತ್ಯಭಿಜ್ಞೆಯು. ಅಂತೂ ಭಗವದ್ರೂಪಗಳಲ್ಲಿ ಪರಸ್ಪರ ಭೇದಜ್ಞಾನಕ್ಕೆ ಅವಕಾಶವಿಲ್ಲ.) (ಹಾಗಾದರೆ, ಭೇದವು ಇಲ್ಲದೆ ಬಹುತ್ವವು ಕೂಡದಿರುವುದರಿಂದ ಆ ಬಹುತ್ವವು ಭೇದವನ್ನು ತಿಳಿಸುತ್ತದೆ ಅಂತೂ ಆ ಬಹು ರೂಪಗಳಲ್ಲಿ ಅಭೇದ ವಿಷಯಕ ಪ್ರತ್ಯಭಿಜ್ಞೆಯು ಕೂಡುವುದೇ ಇಲ್ಲ. ಕೂಡಿದರೂ ಅದು ಭ್ರಾಂತಿಯಾಗಬೇಕಾಗುವುದು.

ಎಂದರೆ—) ಬಹುತ್ವಂ ಚ = (ಭಗವದ್ರೂಪಗಳಿಗೆ) ಬಹುತ್ವವಾದರೂ, ವಿಶೇಷೇಣ = ಅಭೇದ ವಿದ್ದರೂ ಭೇದಕಾರ್ಯವನ್ನು ನಿರ್ವಾಹ ಮಾಡತಕ್ಕ ವಿಶೇಷದಿಂದಲೇ, (ಉಪಪದ್ಯತೇ=ಕೂಡು ತ್ತದೆ.) ಕಥಂಚನ=ಯಾವಪ್ರಕಾರದಿಂದಲೂ (ಅಂದರೆ, ಭಗವದ್ರೂಪಗಳಿಗೆ ಭೇದದಲ್ಲಿ ನಿರವ ಕಾಶ ಪ್ರಮಾಣವಿಲ್ಲದಿರುವುದರಿಂದಲೂ ಅಭೇದವನ್ನು ತಿಳಿಸಿಕೊಡತಕ್ಕ ಪ್ರಮಾಣದಿಂದ ವಿರೋಧ ವಿದ್ದುದರಿಂದಲೂ), ಭೇದೇನ=ಭೇದದಿಂದ (ಬಹುತ್ವವು,) ನೋಪಪದ್ಯತೇ=ಕೂಡುವುದಿಲ್ಲ.

ತಾ || ಸ. ರ. ವಿ— (1) ಶ್ರೀ ಹರಿಯನ್ನು ನೋಡುವವರೂ ಕೂಡ ವಿಷ್ಣುವಿನ ಸ್ವರೂಪಗಳಲ್ಲಿ ಯಾವಾಗ ಭೇದವನ್ನು ನೋಡಲಾರರೋ, ಆಗ ವಿಷ್ಣುವು ನೋಡುವುದಿಲ್ಲವೆಂದು ಏನು ಹೇಳಬೇಕು. ಭಗವದ್ರೂಪಗಳಿಗೆ ಭೇದವಿಲ್ಲದಿರುವುದರಿಂದ ಹೇಗೆ 'ಸ ಏವಾಯಂ ಗಕಾರಃ' ಎನ್ನುವ ಪ್ರತ್ಯಭಿಜ್ಞೆಯಿಂದ ಒಂದೇ ಆಗಿ ತೋರುವ ಗಕಾರವು ಬಹು ಜನರಿಂದ ಉಚ್ಚರಿತವಾಗಿ ಬಹುಪ್ರಕಾರವಾಗಿ ತೋರುತ್ತದೋ ಹಾಗೆಯೇ ಶ್ರೀ ಹರಿಯ ಅವತಾರ ರೂಪಗಳಾದ ಮತ್ಸ್ಯ-ಕೂರ್ಮಾದಿಗಳಲ್ಲಿ ಪ್ರತ್ಯಭಿಜ್ಞೆಯಿಂದ ಅಭೇದವೇ ಸಿದ್ಧವಾಗಿರುವುದರಿಂದ ಬಹುತ್ವವು ವಿಶೇಷ ದಿಂದಲೇ ಎಂದು ಹೇಳಬೇಕು || ೪೧ || ೪೨ ||

ಹೀಗೆ ಉತ್ತಮರಾದ ಪುರುಷರಿಗೆ ಶ್ರೀ ಹರಿಯ ಒಂದು ರೂಪವನ್ನು ನೋಡಿದ ಸಮಯ ದಲ್ಲಿ ರೂಪಾಂತರ ಪ್ರತೀತಿಯು ಇಲ್ಲದಿರಲು ಅದರಿಂದ ಭೇದಜ್ಞಾನವು ಅಸಂಭಾವಿತವಾಗಿದೆ. ಪ್ರತಿಯೋಗಿಜ್ಞಾನವಿಲ್ಲದಿದ್ದರೆ ಭೇದಜ್ಞಾನವಿಲ್ಲವೆನ್ನುವುದು ನಿಯತವಾಗಿದೆ ಭೇದಜ್ಞಾನ ವಿರೋಧಿ ಯಾದ ಅಭೇದಾವಗಾಹಿಯಾದ ಪ್ರತ್ಯಭಿಜ್ಞೆಯು ಇದ್ದಪ್ರಯುಕ್ತ ರೂಪಾಂತರ ಪ್ರತೀತಿಯಿದ್ದರೂ ಭೇದದರ್ಶನವು ಅಸಂಭಾವಿತವೇ ಎಂದು ಉಕ್ತವಾಗಿದೆ. ಆದಾಗ್ಯೂ ಮಧ್ಯಮಾದಿ ಜನರ ಪ್ರತ್ಯಕ್ಷವು ಭಗವದ್ರೂಪಗಳ ಭೇದದಲ್ಲಿ ಪ್ರಮಾಣವು ಆಗುವುದು ಒಂದು ರೂಪವನ್ನು ನೋಡುವ ಸಮಯದಲ್ಲಿ ರೂಪಾಂತರ ಪ್ರತೀತಿಯಿಲ್ಲದಿರಲು ಭೇದದರ್ಶನವು ಕೂಡದಿದ್ದರೂ ರೂಪಾಂತರ ದರ್ಶನವಿರುವಾಗ ಭೇದದರ್ಶನವು ಕೂಡುತ್ತದೆ ಮಧ್ಯಮ ಜೀವರಿಗೂ ಅಭೇದಾವಗಾಹಿಯಾದ ಪ್ರತ್ಯಭಿಜ್ಞೆಯು ಇದೆ ಎಂದು ಹೇಳಲಿಕ್ಕೆ ಬರುವುದಿಲ್ಲ ಹಾಗಾದರೆ ಅವರಿಗೂ ಉತ್ತಮತ್ವವೇ ಬರಬೇಕಾಗುವುದು ಎಂದರೆ— ಮಧ್ಯಮರನ್ನು ಅಪೇಕ್ಷಿಸಿಕೊಂಡು ಹೇಳುತ್ತಾರೆ—

**ಮೂ || ಪ್ರತ್ಯಭಿಜ್ಞಾ ಚ ಯೇಷಾಂ ನ ತೇಽಪಿ ತನ್ಮುಷ್ಟದೃಷ್ಟಯಃ |**
**ಭೇದಂ ನೈವ ಪ್ರಪಶ್ಯಂತಿ ಭೇದಮನ್ಯೇಭ್ಯ ಏವ ಚ || ೧೪೩ ||**
**ಪಶ್ಯಂತ್ಯೇವಂ ಹರಿಸ್ತೇಷಾಂ ಸಂದರ್ಶಯತಿ ನಾನ್ಯಥಾ |**
**ಏವಂ ಬೃಹತ್ಸಂಹಿತಾಯಾಂ ವಚನಂ ನ ಪುರಾಣಗಂ ||**
**ಲೋಕದರ್ಶನವಾದ್ಯೇವ ವೇದರೋಧಾಯ ಶಕ್ನುಯಾತ್ || ೧೪೪ ||**

ಅ || ಯೇಷಾಂ ಚ=ಯಾವ ಮಧ್ಯಮ ಜನರಿಗಾದರೂ, ಪ್ರತ್ಯಭಿಜ್ಞಾ=(ಭಗವದ್ರೂಪ ಗಳಲ್ಲಿ) ಪ್ರತ್ಯಭಿಜ್ಞೆಯು, ನ=ಇಲ್ಲವೋ, ತೇಽಪಿ=ಅವರೂ ಕೂಡ, ತನ್ಮುಷ್ಟದೃಷ್ಟಯಃ= ಆ ಶ್ರೀ ಹರಿಯಿಂದ ಅಥವಾ ಬಹುತ್ವದಿಂದ ಅಪಹರಿಸಲ್ಪಟ್ಟ ಪ್ರತ್ಯಭಿಜ್ಞಾ ರೂಪಜ್ಞಾನವುಳ್ಳವರಾಗಿ, ಭೇದಂ=ಭೇದವನ್ನು, ನೈವ ಪ್ರಪಶ್ಯಂತಿ=ನೋಡುವುದೇ ಇಲ್ಲ. (ಭಗವದ್ರೂಪದಲ್ಲಿ ಭೇದವನ್ನು ನೋಡುವುದೇ ಇಲ್ಲವು ಎಂದು ಹೇಳಿದರೆ ಘಟಾದಿಗಳಿಂದಲೂ ಭೇದವನ್ನು ನೋಡುವುದಿಲ್ಲವೆಂದು ಮುಂದರಿಗೆ ಪ್ರತೀತಿಯಾಗಬೇಕಾಗುವುದು, ಆ ಪ್ರತೀತಿಯನ್ನು ನಿವಾರಿಸುತ್ತಾರೆ.) ಅನ್ಯೇಭ್ಯಃ=

ಇತರರಿಂದ, ಭೇದಂ=ಭೇದವನ್ನು, ಪಶ್ಯಂತ್ಯೇವ ಚ=ನೋಡಿಯೋ ನೋಡುತ್ತಾರೆ. (ಹಾಗಾದರೆ ಪ್ರತೀತಿಯು ಮಾನಗಳಾದ ವಸ್ತುವು ಭೇದದಿಂದಲಾಗಲೀ ತೋರಬೇಕು. ಅಭೇದದಿಂದಲಾಗಲೀ ತೋರಬೇಕು. ಭೇದಾಭೇದಗಳ ಔದಾಸೀನ್ಯದಿಂದ ಪ್ರತೀತಿಯು ಹೇಗೆ ಎಂದರೆ—) ಏವಂ= ಭೇದಾಭೇದಗಳ ಔದಾಸೀನ್ಯದಿಂದಲೇ, ತೇಷಾಂ = ಆ ಮಧ್ಯಮ ಜನರಿಗೆ (ಅವರ ಯೋಗ್ಯತೆ ಯಿಂದ), ಹರಿಃ=(ಶ್ರೀ ಹರಿಯು (ತನ್ನ ರೂಪವನ್ನು), ನ ದರ್ಶಯತಿ = ತೋರಿಸುವುದಿಲ್ಲ, ಏವಂ=ಹೀಗೆ, ಬೃಹತ್ಸಂಹಿತಾಯಾಂ=ಬೃಹತ್ಸಂಹಿತೆಯಲ್ಲಿ, ವಚನಂ=ವಚನವು, ಅಸ್ತಿ=ಇದೆ. ಪುರಾಣಗಂ = ಪುರಾಣದಲ್ಲಿರತಕ್ಕ, (ಭೇದಪ್ರತಿಪಾದಕವಾದ ವಚನವು,) ಲೋಕದರ್ಶನ ವಾದ್ಯೇವ=ಜನರಿಗೆ ಭಗವದ್ರೂಪಗಳಲ್ಲಿ ಯಾವುದು ಭೇದದರ್ಶನವ್ರೋ ಅದರ ಅನುವಾದಪರವೇ (ವಾಸ್ತವವಾಗಿ ಭೇದವನ್ನು ಹೇಳುವುದರಲ್ಲಿ ತಾತ್ಪರ್ಯವುಳ್ಳದ್ದಲ್ಲ. ಉಪಕ್ರಮಾದಿಗಳಿಂದ ಹಾಗೆ ಅವಗತವಾಗುತ್ತದೆ.) (ಆದುದರಿಂದ) ಅದು ವೇದರೋಧಾಯ = ಭಗವದ್ರೂಪಗಳಲ್ಲಿ ವಾಸ್ತವವಾಗಿ ಅಭೇದವನ್ನು ಪ್ರತಿಪಾದಿಸತಕ್ಕ 'ನೇಹನಾ ನಾಸ್ತಿ' ಇತ್ಯಾದಿ ವೇದಗಳನ್ನು ತಡೆಯುವುದಕ್ಕಾಗಿ (ಅಂದರೆ, ವೇದವಿರುದ್ಧಾರ್ಥವನ್ನು ಸಾಧಿಸುವುದಕ್ಕಾಗಿ), ನ ಶಕ್ನುಯಾತ್= ಸಮರ್ಥವಾಗುವುದಿಲ್ಲ. (ಅಂದರೆ, ವೇದವಾದರೂ ವಾಸ್ತವವಾದ ಭಗವದ್ರೂಪಾಭೇದದಲ್ಲಿಯೋ ತಾತ್ಪರ್ಯವುಳ್ಳದ್ದು. ಉಪಕ್ರಮಾದಿ ಲಿಂಗಗಳಿಂದ ಹಾಗೆ ನಿಶ್ಚಿತವಾಗುತ್ತದೆ. ಆದಕಾರಣ ಪುರಾಣವು ವೇದವನ್ನು ಬಾಧಿಸಲಿಕ್ಕೆ ಶಕ್ತವಾಗುವುದಿಲ್ಲ) ॥ ೧೪೩ ॥ ೧೪೪ ॥

(1) ಮೊದಲು ಭಗವದ್ರೂಪಗಳಿಗೆ ಭೇದವಿಷಯಕವಾದ ಪ್ರತ್ಯಕ್ಷವಿಲ್ಲವೆಂದು ಹೇಳಲ್ಪಟ್ಟದೆ. ಈಗಲಾದರೂ ಪ್ರತ್ಯಕ್ಷವಿದೆ ಎಂದು ಹೇಳಲ್ಪಟ್ಟತು ಇದು ವ್ಯಾಹತವು, ಭೇದ ಪ್ರತ್ಯಕ್ಷವಿಲ್ಲ ವಾದರೆ ಪುರಾಣವಚನವು ಲೋಕಪ್ರತ್ಯಕ್ಷ ಸಿದ್ಧವಾದ ಭೇದವನ್ನು ಅನುವಾದಮಾಡುತ್ತದೆ ನ್ನುವುದು ಹಿಂದೆ ಹೇಳಿದ್ದು ಕೂಡುವುದಿಲ್ಲವೆಂದು ಹೇಳಕೂಡದು. ಏಕೆಂದರೆ— ಬಹುತ್ವ ಮೊದ ಲಾದ ಅನುಮಾನಾಭಾಸಗಳಿಂದುಂಟಾದ ಭೇದದರ್ಶನಾನುವಾದಿತ್ವವು ಪುರಾಣವಾಕ್ಯಕ್ಕೆ ಕೂಡು ತ್ತದೆ. (2) ಮತ್ತು ಉತ್ತಮ-ಮಧ್ಯಮರಿಗೆ ಭೇದವಿಷಯಕವಾದ ಪ್ರತ್ಯಕ್ಷವು ಇಲ್ಲವೆಂದು ಹೇಳಲ್ಪಟ್ಟದೆ. ಅಧಮರಿಗಾದರೂ ಪ್ರತ್ಯಕ್ಷವಿದೆ ಎಂದು ಈಗ ಅಂಗೀಕರಿಸಲ್ಪಡುತ್ತದೆ. (3) ಹಾಗಾದರೆ— ಅದೇ ಭಗವದ್ರೂಪಗಳಿಗೆ ಭೇದವಿದೆ ಎನ್ನುವಲ್ಲಿ ಪ್ರಮಾಣವು ಆಗಲಿ ಎಂದೂ ಹೇಳಕೂಡದು. ಉತ್ತಮರ ಅಭೇದ ವಿಷಯಕವಾದ ಪ್ರತ್ಯಕ್ಷದಿಂದ ಅದು ಬಾಧಿತ ವಾಗಿದೆ. ಅಭೇದ ಪ್ರತ್ಯಕ್ಷವೇ ಇಲ್ಲವೆಂದು ಹೇಳಕೂಡದು. ಪ್ರತ್ಯಭಿಜ್ಞೆಯೋ ಬಹುರೂಪ ಗಳಲ್ಲಿ ಕಾಣಲ್ಪಡುತ್ತದೆಂದು ಆಗಮಗಳಲ್ಲಿ ಹೇಳಲ್ಪಟ್ಟದೆ. (4) ಹಾಗಾದರೆ— ಅಧಮರ ಭೇದ ಪ್ರತ್ಯಕ್ಷವೇ ಅಭೇದದರ್ಶನಕ್ಕೆ ಬಾಧಕವು ಏಕೆ ಆಗಲಾರದು, ಎಂದರೆ—

**ಮೂ ॥ ಅಪರೀಕ್ಷಿತದೃಷ್ಟಿಶ್ಚ ಪರೀಕ್ಷಾಪೂರ್ವದರ್ಶನಂ ॥ ೧೪೫ ॥**
**ನಿಷೇದ್ಧುಂ ಶಕ್ನುಯಾತ್ಕ್ವಾಪಿ ದೇವದತ್ತಾದಿದೃಷ್ಟಿವತ್ ।**
**ನ ಚ ನಿಶ್ಚಿತಭೇದಸ್ಯ ದರ್ಶನೇಽಸ್ತಿ ಪುರಾಣಗಂ ॥ ೧೪೬ ॥**
**ವಾಕ್ಯಂ ಕ್ವಚಿದ್ಧಿ ಸಂಮುಗ್ಧಂ(ಗ್ಧ) ದರ್ಶನಂ ತತ್ರ ಗಮ್ಯತೇ ।**
**ಅಪರೀಕ್ಷಿತಮೇವಾತ್ರ ವೇಧಾದಿಕಮಧೀಶಿತುಃ ॥ ೧೪೭ ॥**
**ಪರೀಕ್ಷಾದರ್ಶನೇನ್ಯೈವ ದೃಶ್ಯತೇ ಕೇನಚಿತ್ಕ್ವಚಿತ್ ।**
**ನಿರ್ದೋಷಮೇವ ತಂ ಬ್ರಹ್ಮಾ ದದರ್ಶಾಶೇಷರೂಪಿಣಂ ॥ ೧೪೮ ॥**

ನಿರ್ದೋಷಮೇವ ರುದ್ರೋಽದ್ರಾಕ್ಷೀದ್ದೋಷಂ ತಂ ಪುರಂದರಃ ।
ನಿರ್ದೋಷಾಣ್ಯಸ್ಯ ರೂಪಾಣಿ ದೃಷ್ಟಾನ್ಯೇವಂ ಸುರೋತ್ತಮೈಃ ॥೧೪೯॥
ಅನ್ಯೇ ಸ ದೋಷಾಃ ಸರ್ವೇಽಪಿ ನಿರ್ದೋಷೋ ಹರಿರೇಕಲಃ ।
ಇತಿ ಬರ್ಕಶ್ರುತೇಶ್ಚೈವ ಸದೋಷಂ ನಾಸ್ಯ ದರ್ಶನಂ ॥ ೧೫೦ ॥

ಅ ॥ ಅಪರೋಕ್ಷಿತದೃಷ್ಟಿಶ್ಚ=ಪರೀಕ್ಷೆಯಿಂದ ಪ್ರಮಾಣವೆಂದು ನಿಶ್ಚಯಿಸಲ್ಪಡದಿರುವ ಜ್ಞಾನವು, ಪರೀಕ್ಷಾಪೂರ್ವದರ್ಶನಂ = ಪರೀಕ್ಷಾಪೂರ್ವಕವಾದ ಪ್ರಾಮಾಣ್ಯನಿಶ್ಚಯವುಳ್ಳ ದರ್ಶನವನ್ನು ಅಥವಾ ಪರೀಕ್ಷಾಪೂರ್ವಕವಾದ ಪ್ರಾಮಾಣ್ಯನಿಶ್ಚಯವುಳ್ಳ ಪ್ರತ್ಯಕ್ಷವನ್ನು, ಕ್ವಾಪಿ=ಎಲ್ಲಿಯೂ, ದೇವದತ್ತಾದಿದೃಷ್ಟಿವತ್=ದೇವದತ್ತಾದಿಗಳ ದೃಷ್ಟಿಯಂತೆ, ನಿಷೇದ್ಧುಂ=ನಿಷೇಧಿಸಲಿಕ್ಕೆ, ನ ಚ ಶಕ್ನುಯಾತ್=ಸಮರ್ಥವಾಗಲಾರದು. ( (1) 'ಕ್ವಾಪಿ' ಎನ್ನುವುದರಿಂದ ಯಾವುದು ಪರೀಕ್ಷೆಯಿಂದ ನಿಶ್ಚಿತಪ್ರಾಮಾಣ್ಯವುಳ್ಳ ಜ್ಞಾನವಲ್ಲವೋ ಅದು ನಿಶ್ಚಿತ ಪ್ರಾಮಾಣ್ಯವುಳ್ಳ ಜ್ಞಾನಾಂತರವನ್ನು ಬಾಧಿಸುವುದಿಲ್ಲವೆನ್ನುವ ವ್ಯಾಪ್ತಿಯನ್ನು ಹೇಳಿದರು. (2) ಹೇಗೆ ಯಜ್ಞದತ್ತಾದಿಗಳಲ್ಲಿ ಅನಿಶ್ಚಿತ ಪ್ರಾಮಾಣ್ಯವುಳ್ಳ ದೇವದತ್ತಾದಿಗಳ ದೃಷ್ಟಿಯು ನಿಶ್ಚಿತ ಪ್ರಾಮಾಣ್ಯವುಳ್ಳ ಯಜ್ಞದತ್ತಾದಿ ದೃಷ್ಟಿಯನ್ನು ಬಾಧಿಸುವುದಿಲ್ಲವೋ, ಹಾಗೆಯೇ. ಹೀಗೆ ವ್ಯಾಪ್ತಿಯಾದರೆ ಅದರಿಂದ ಏನಾಯಿತೆಂದರೆ— ಭೇದದರ್ಶನವು ಅನಿಶ್ಚಿತ ಪ್ರಾಮಾಣ್ಯವುಳ್ಳದ್ದು; ಅಭೇದದರ್ಶನವಾದರೂ ನಿಶ್ಚಿತ ಪ್ರಾಮಾಣ್ಯವುಳ್ಳದ್ದು. ಆದಕಾರಣ ಅದಕ್ಕೆ ಬಾಧಕವಲ್ಲ ಮತ್ತೆ ಭಗವದ್ರೂಪಗಳಲ್ಲಿ ನಿಶ್ಚಿತ ಪ್ರಾಮಾಣ್ಯವುಳ್ಳ ಅಭೇದದರ್ಶನವೇ ಭೇದದರ್ಶನಕ್ಕೆ ಬಾಧಕವೆಂದು ವೈಪರೀತ್ಯವೇ ಯುಕ್ತವು ಎನ್ನುತ್ತೇವೆ.) (ಭೇದದರ್ಶನವು ಅನಿಶ್ಚಿತಪ್ರಾಮಾಣ್ಯವುಳ್ಳದ್ದು ಹೇಗೆ ಎಂದರೆ—) ನಿಶ್ಚಿತಭೇದಸ್ಯ ದರ್ಶನೇ=ಪ್ರಮಾಣವೆಂದು ನಿಶ್ಚಿತವಾದ ಭೇದವನ್ನು ವಿಷಯೀಕರಿಸತಕ್ಕ ಪ್ರತ್ಯಕ್ಷದಲ್ಲಿ, ಹಿ = ಯಾವ ಕಾರಣದಿಂದ, ಕ್ವಚಿತ್ = ಯಾವ ಪ್ರದೇಶದಲ್ಲಿಯೂ, ಪುರಾಣಗಂ ವಾಕ್ಯಂ=ಪುರಾಣದಲ್ಲಿರುವ ವಾಕ್ಯವು, ನ ಚ=ಇಲ್ಲವೇ ಇಲ್ಲವೋ, (ಅಂದರೆ— ಪರಮೇಶ್ವರನ ರೂಪಗಳಿಗೆ ಭೇದವಿಷಯಕವಾದ ಪ್ರತ್ಯಕ್ಷವು ನಮಗೆ ಪುರಾಣವಾಕ್ಯದಿಂದಲೇ ಸಿದ್ಧವಾಗಿದೆ. ಪುರಾಣವಾಕ್ಯವಾದರೂ ಕೆಲವರು ಭೇದವನ್ನು ನೋಡುತ್ತಾರೆಂದು ಪ್ರತಿಪಾದಿಸಲಿ. ಆ ಪುರಾಣಾದಿಗಳ ಪ್ರಾಮಾಣ್ಯ ನಿಶ್ಚಯವು ಪುರಾಣಾದಿಗಳಿಂದಲೇ ಹುಡುಕಬೇಕು. ಭೇದ ಜ್ಞಾನಕ್ಕೆ ಪ್ರಾಮಾಣ್ಯವನ್ನು ನಿಶ್ಚಯಿಸಿಕೊಡತಕ್ಕ ಪುರಾಣವಾಕ್ಯವು ಇಲ್ಲ. ಆದಕಾರಣ ಪ್ರಾಮಾಣ್ಯವಿಲ್ಲದಿರುವುದರಿಂದ ಭೇದದರ್ಶನಕ್ಕೆ ಪ್ರಾಮಾಣ್ಯ ನಿಶ್ಚಯವಿಲ್ಲ.) (ಪುರಾಣವಾಕ್ಯದೆಶೆಯಿಂದ ನಿಶ್ಚಿತಪ್ರಾಮಾಣ್ಯವುಳ್ಳ ಭೇದದರ್ಶನವು ಪ್ರತೀತವಾಗದಿದ್ದರೆ ಎಂತಹ ಭೇದದರ್ಶನವು ಪ್ರತೀತವಾಗುತ್ತದೆ. ಎಂದರೆ—) ಸಂಮುಗ್ಧಂ=ಪ್ರಾಮಾಣ್ಯ-ಅಪ್ರಾಮಾಣ್ಯಗಳಿಂದ ಸಂಶಯಗ್ರಸ್ತವಾದ, ದರ್ಶನಂ=ಭೇದದರ್ಶನವು, ತತ್ರ = ಪುರಾಣವಾಕ್ಯದಲ್ಲಿ, ಗಮ್ಯತೇ = ತಿಳಿಯಲ್ಪಡುತ್ತದೆ. (ಅಂದರೆ— ಪುರಾಣವಾಕ್ಯವು ಕೇವಲ ಭೇದದರ್ಶನವನ್ನು ತಿಳಿಸಿಕೊಡುತ್ತದೆ. ಅದಕ್ಕೆ ಪ್ರಾಮಾಣ್ಯವನ್ನಾಗಲೀ, ಅಪ್ರಾಮಾಣ್ಯವನ್ನಾಗಲೀ ತಿಳಿಸಿಕೊಡುವುದಿಲ್ಲ. ಆದಕಾರಣ ಅಭೇದದರ್ಶನವು ಆಗುವ ಮೊದಲು ಅದರಲ್ಲಿ ಪ್ರಮಾಣವೋ, ಅಪ್ರಮಾಣವೋ ಎನ್ನುವ ಸಂಶಯವೇ ಯುಕ್ತವು. ಅಭೇದದರ್ಶನವು ಅವಗತವಾದಮೇಲೆ ಅದಕ್ಕೆ ಅಪ್ರಾಮಾಣ್ಯವೇ ನಿಶ್ಚಿತವಾಗುತ್ತದೆ. **'ವಿಧೂತಭೇದಮೋಹಃ'** ಎಂದು ಭಾಗವತದಲ್ಲಿ ಭಗವದ್ರೂಪಗಳಲ್ಲಿ ಭೇದಜ್ಞಾನಕ್ಕೆ ಮೋಹತ್ವವನ್ನು ಹೇಳಿದುದರಿಂದ ಪುರಾಣದಿಂದಲೂ ಭಗವದ್ರೂಪಗಳ ಭೇದವನ್ನು ವಿಷಯೀಕರಿಸತಕ್ಕ ಜ್ಞಾನಕ್ಕೆ ಅಪ್ರಾಮಾಣವೆ ನಿಶ್ಚಿತವಾಗುತ್ತದೆ.) (ಹೀಗೆ ಪ್ರಮಾಣವಿಲ್ಲ

ದಿರುವುದರಿಂದ ಭಗವದ್ರೂಪಗಳಲ್ಲಿ ಭೇದಾಭಾವವೂ, ವೇಧವೊದಲಾದ ದೋಷಾಭಾವವೂ ಸಿದ್ಧವಾಗಿದೆ.) (ಹಾಗಾದರೆ ಆ ಭಗವದ್ರೂಪದಲ್ಲಿ ವೇಧಾದಿಗಳನ್ನು ನೋಡಿದವರ ಪ್ರತ್ಯಕ್ಷವೇ ಇಲ್ಲಿ ಪ್ರಮಾಣವು ಎಂದರೆ— ಹೀಗೆ ಹೇಳಕೂಡದು. ವೇಧಾದಿಗಳ ಅಭಾವವನ್ನು ಗ್ರಹಿಸತಕ್ಕ ಮಹಾನುಭಾವರ ಪ್ರತ್ಯಕ್ಷದಿಂದ ಅದು ಬಾಧಿತವಾಗಿದೆ ವೇಧಾದಿ ಗ್ರಾಹಕ ಪ್ರತ್ಯಕ್ಷವೇ ವೇಧಾದ್ಯಭಾವಗ್ರಾಹಕವಾದ ಪ್ರತ್ಯಕ್ಷಕ್ಕೆ ಬಾಧಕವು ಏಕೆ ಆಗಲಾರದು? ಎಂದರೆ—) ಅತ್ರ= ವೇಧಾದ ದೋಷ ದೋಷಾಭಾವಗಳ ಮಧ್ಯದಲ್ಲಿ, ಅಧೀಶಿತುಃ=ಶರ್ವೇಶ್ವರನಾದ ಶ್ರೀಹರಿಯ, ಅತ್ರ=ಅವತಾರಗಳಲ್ಲಿ, ಅಪರೀಕ್ಷಿತಮೇವ = ಪರೀಕ್ಷಿತವಾಗದೇನೇ ಇರುವ, ವೇಧಾದಿಕಂ = ವೇಧವೊದಲಾದುದು, ದೃಶ್ಯತೇ=ಕಾಣಲ್ಪಡುತ್ತದೆ. ಪರೀಕ್ಷಾದರ್ಶನೇ=ಪರೀಕ್ಷಾಯುಕ್ತವಾದ ದರ್ಶನದಲ್ಲಿ, ಕೇನಚಿತ್=ಯಾರಿಂದಲೂ, ಕ್ವಚಿತ್=ಎಲ್ಲಿಯೂ, ನೈವ ದೃಶ್ಯತೇ=(ವೇಧಾದಿಗಳು) ಕಾಣಲ್ಪಡುವುದೇ ಇಲ್ಲ. (ಅಂತೂ ವೇಧಾದಿ ದೋಷದರ್ಶನವು ಅಪರೀಕ್ಷಿತವಲ್ಲ ನಿರ್ದೋಷತ್ವದರ್ಶನವಾದರೂ ಪರೀಕ್ಷಿತವು. ಆದುದರಿಂದ ಪರೀಕ್ಷಿತವಾದ ನಿರ್ದೋಷತ್ವ ದರ್ಶನವೇ ಅಪರೀಕ್ಷಿತವಾದ ವೇಧಾದಿದರ್ಶನಕ್ಕೆ ಬಾಧಕವೆಂದೇ ಯುಕ್ತವು.) (ಹಾಗಾದರೆ ದೋಷಾಭಾವವಿಷಯಕವಾದ ಮಹಾನುಭಾವರ ಪ್ರತ್ಯಕ್ಷವು ಯಾವುದರಿಂದ ಸಿದ್ಧವಾಗುತ್ತದೆ ಎಂದರೆ—) ಬ್ರಹ್ಮಾ = ಚತುರ್ಮುಖಬ್ರಹ್ಮನು, ಅಶೇಷರೂಪಿಣಂ = ಅನಂತಾನಂತ ರೂಪಗಳುಳ್ಳ, ನಿರ್ದೋಷಮೇವ = ದೋಷಲೇಶರಹಿತನೇ ಆದ, ತಂ = ಆ ಶ್ರೀಹರಿಯನ್ನು, ದದರ್ಶ = ಕಂಡನು. ರುದ್ರಃ=ರುದ್ರನು, ನಿರ್ದೋಷಮೇವ=ದೋಷಲೇಶರಹಿತನೇ ಆದ ಶ್ರೀಹರಿಯನ್ನು, ಅದ್ರಾಕ್ = ಕಂಡನು. ಪುರಂದರಃ = ದೇವೇಂದ್ರನು, ನಿರ್ದೋಷಂ = ದೋಷಲೇಶರಹಿತನೇ ಆದ, ತಂ=ಆ ಶ್ರೀಹರಿಯನ್ನು, ಅದ್ರಾಕ್=ಕಂಡನು. ಏವಂ=ಹೀಗೆಯೇ, ಸುರೋತ್ತಮೈಃ= ದೇವಶ್ರೇಷ್ಠರಿಂದ, ಅಸ್ಯ=ಶ್ರೀಹರಿಯ, ನಿರ್ದೋಷಾಣಿ ರೂಪಾಣಿ=ದೋಷಲೇಶ ರಹಿತಗಳಾದ ರೂಪಗಳು, ದೃಷ್ಟಾನಿ=ಕಾಣಲ್ಪಟ್ಟವೆ ಅನ್ಯೇ ಸರ್ವೇಽಪಿ = ಶ್ರೀ ಹರಿಯಿಂದ ಇತರರಾದವರೆಲ್ಲರೂ, ಸದೋಷಾಃ=ದೋಷ ಸಹಿತರಾದವರೆಲ್ಲರೂ (ಎಲ್ಲರಿಂದ ಕಾಣಲ್ಪಟ್ಟರುತ್ತಾರೆ), ಹರಿಃ ಏಕಲಃ=ಆದಕಾರಣ ಶ್ರೀ ಹರಿಯೊಬ್ಬನೇ, ನಿರ್ದೋಷಃ=ದೋಷಲೇಷರಹಿತನು. ಇತಿ ಬರ್ಕಶ್ರುತೇಶ್ಚ=ಈ ಪ್ರಕಾರವಾಗಿ ಬರ್ಕಶ್ರುತಿ ಇದ್ದಪ್ರಯುಕ್ತ, ಅಸ್ಯ=ಪರಮೇಶ್ವರನ ವಿಷಯದಲ್ಲಿ, ದರ್ಶನಂ = ಮಹಾನುಭಾವರ ದರ್ಶನವು, ಸದೋಷಂ = ದೋಷಗ್ರಾಹಿಯಾದುದು, ನೈವ=ಅಲ್ಲವೇಅಲ್ಲ. (ಮತ್ತೆ ಶ್ರೀ ಹರಿಯನ್ನು ನಿರ್ದೋಷನನ್ನಾಗಿಯೇ ಗ್ರಹಿಸುತ್ತದೆ.)

**ತಾ ॥ ಸ. ರ. ವಿ—** (1) ಅಪಹೃತಜ್ಞಾನವುಳ್ಳವರಿಗೆ ಭಗವದ್ರೂಪಗಳು ಪ್ರತೀಯಮಾನಗಳಾದಾಗ್ಯೂ ಹರೀಚ್ಛೆಯಿಂದಲೇ ಪರಸ್ಪರ ಭೇದ-ಅಭೇದಗಳ ಗ್ರಹಣಾಭಾವವು. ಪರಶುರಾಮನಿಗೆ ದಶರಥಪುತ್ರನಾದ ಶ್ರೀ ರಾಮನಿಂದ ಸ್ಪರ್ಧಾದಿಗಳನ್ನು ಪ್ರತಿಪಾದಿಸತಕ್ಕ ಪುರಾಣ ವಾಕ್ಯವು ಪರಶುರಾಮ-ರಾಮರಿಗೆ ಭೇದವಿದೆ ಎನ್ನುವಲ್ಲಿ ಪ್ರಮಾಣವೆಂದು ಹೇಳಕೂಡದು. ಹಾಗಾದರೆ 'ಅಯಂ ವೈ ಹರಯಃ' ಇತ್ಯಾದಿ ಅಭೇದಪ್ರತಿಪಾದಕವಾದ ವಾಕ್ಯವಿರೋಧವು ಬರಬೇಕಾಗುವುದು. ಆದಪ್ರಯುಕ್ತ ಲೋಕದಲ್ಲಿ ಒಬ್ಬನು ಯಾರಿಂದಲಾದರೂ ಹೇಗೆ ಸ್ಪರ್ಧಾದಿಗಳನ್ನು ಮಾಡುತ್ತಾನೋ ಅದನ್ನು ಅನುಕರಿಸತಕ್ಕ ಪುರಾಣವಾಕ್ಯವು ಭಗವದ್ರೂಪಗಳಲ್ಲಿ ಭೇದಾಭಾವವನ್ನು ಪ್ರತಿಪಾದಿಸತಕ್ಕ ವೇದವಾಕ್ಯವನ್ನು ವಿರೋಧಿಸಲಿಕ್ಕೆ ಶಕ್ತವಾಗಲಾರದು. ಹಾಗೆಯೇ ಆ ಭಗವದ್ರೂಪಗಳಲ್ಲಿ ಮನುಷ್ಯಾದಿಗಳ ಪ್ರತ್ಯಕ್ಷವು ಭೇದಗ್ರಾಹಕವೆಂದು ಪುರಾಣ ವಾಕ್ಯದಿಂದ ಆಶಂಕಿತವಾಗುತ್ತದೋ ಅದೂ ಕೂಡ ಅವರಲ್ಲಿ ಭೇದವನ್ನು ಗ್ರಹಿಸತಕ್ಕದ್ದು.

ಅಪರೀಕ್ಷಿತವಾಗಿಯೇ ಪರೀಕ್ಷಿತವಾದ ಅಭೇದದರ್ಶನವನ್ನು ನಿಷೇಧಿಸಲಿಕ್ಕೆ ಶಕ್ತವಾಗುವುದಿಲ್ಲ. ಅಭೇದವನ್ನು ಗ್ರಹಿಸತಕ್ಕ ಜ್ಞಾನಿಪ್ರತ್ಯಕ್ಷವು ಪರೀಕ್ಷಿತವೇ. ಅಪರೀಕ್ಷಾಪೂರ್ವಕದರ್ಶನಕ್ಕಿಂತ ಪರೀಕ್ಷಾಪೂರ್ವಕದರ್ಶನಕ್ಕೆ ಪ್ರಾಬಲ್ಯವು ಅಂತೂ ಶ್ರೀ ಹರಿಯ ಅವತಾರಗಳಲ್ಲಿ ಪರೀಕ್ಷಾ ಪೂರ್ವಕವಾದ ದರ್ಶನವು ಭೇದವನ್ನು ಗ್ರಹಿಸುವುದಿಲ್ಲ. ಪ್ರತ್ಯಕ್ಷದಲ್ಲಿ ಕೆಲವು ಪುರಾಣವಾಕ್ಯಗಳು ತೋರಿದ್ದು ಸಮುಗ್ಧವೇ. ಹಾಗೆಯೇ ಸಚ್ಚಿದಾನಂದಾತ್ಮಕವಾದ ಆ ರೂಪಗಳಲ್ಲಿ ಅಪರೀಕ್ಷಿತ ವಾದ ವೇಧಾದಿಗಳನ್ನು ಗ್ರಹಿಸತಕ್ಕ ಪ್ರತ್ಯಕ್ಷವೂ ಕೂಡ ಪರೀಕ್ಷಿತವಾದ ನಿರ್ದೋಷತ್ವವನ್ನು ಗ್ರಹಿಸತಕ್ಕ ಜ್ಞಾನಿಪ್ರತ್ಯಕ್ಷದಿಂದ ಬಾಧಿಸಲ್ಪಡುತ್ತದೆ. ಜ್ಞಾನಿಗಳಾದರೂ ಎಲ್ಲಾ ಅವತಾರ ಗಳಲ್ಲಿಯೂ ವಿಷ್ಣುವನ್ನು ನಿರ್ದೋಷನನ್ನಾಗಿಯೇ ತಿಳಿಯುತ್ತಾರೆ. ವೇಧಾದಿ ದೋಷರಹಿತನೇ ಆದ ಶ್ರೀ ಹರಿಯು ಕೆಲವು ಅವತಾರಗಳಲ್ಲಿ ಅಪರೀಕ್ಷಿತದೃಷ್ಟಿಯಿಂದಲೇ ಸದೋಷನೆಂದು ಕಾಣಲ್ಪಡುತ್ತಾನೆ ಎನ್ನುವ ವಿಷಯದಲ್ಲಿ 'ನಿರ್ದೋಷಮೇವ' ಇತ್ಯಾದಿಶ್ರುತಿಗಳು ಪ್ರಮಾಣಗಳು. ॥ ೧೪೫ ॥ ೧೪೬ ॥ ೧೪೭ ॥ ೧೪೮ ॥ ೧೪೯ ॥ ೧೫೦ ॥

ದೋಷದರ್ಶನವು ಅಪರೀಕ್ಷಿತವು. ದೋಷಾಭಾವದರ್ಶನವಾದರೂ ಪರೀಕ್ಷಿತವು ಎನ್ನು ವುದು ಯಾವುದರಿಂದ ಎಂದರೆ—

**ಮೂ ॥ ಅವಿದ್ಧೋ ವಿದ್ಧವದ್ವಿಷ್ಣುರಜಾತೋ ಜಾತವನ್ಮೃಷಾ ।**
**ಅಬದ್ಧೋ ಬದ್ಧವಚ್ಚೈವ ದರ್ಶಯತ್ಯಮಿತದ್ಯುತಿಃ ॥ ೧೫೧ ॥**
**ಇತಿ ಪೈಂಗಿಶ್ರುತೇಶ್ಚೈವ ಪ್ರಾಹ ನಿರ್ದೋಷತಾಂ ಹರೇಃ ।**
**ಅಪರೀಕ್ಷಿತದೃಷ್ಟ್ಯೈವ ಸದೋಷೋ ದೃಶ್ಯತೇ ಹರಿಃ ॥ ೧೫೨ ॥**
**ಪರೀಕ್ಷಾದರ್ಶನೇ ನೈವ ದೋಷೋ ದೃಶ್ಯೋ (ದೃಶ್ಯೋ ದೋಷೋ) ಹರೇಃ ಕ್ವಚಿತ್ ।**
**ಇತಿ ಪೈಂಗಿಶ್ರುತಿಶ್ಚಾಹ ಪ್ರಮಾಣಂ ಹಿ ಪರೀಕ್ಷಿತಂ ॥ ೧೫೩ ॥**

ಅ ॥ ಅಮಿತದ್ಯುತಿಃ=ಅಪರಿಮಿತ ಕಾಂತಿಯುಳ್ಳ, ವಿಷ್ಣುಃ=ಶ್ರೀ ಹರಿಯು, ಅವಿದ್ಧಃ= ಶಸ್ತ್ರಗಳಿಂದ ವಿದ್ಧನಾಗದಿದ್ದವನು, ವಿದ್ಧವತ್ = ಶಸ್ತ್ರಾದಿಗಳಿಂದ ಹಿಂಸಿಸಿಕೊಳ್ಳಲ್ಪಟ್ಟವ ನೆಂತೆಯೂ, ಅಜಾತಃ = ಹುಟ್ಟದಿದ್ದವನು, ಜಾತವತ್=ಹುಟ್ಟಿದವನ್ನೆಂಬಂತೆಯೂ, ಅಬದ್ಧಃ= ಕಟ್ಟಲ್ಪಡದಿದ್ದವನು, ಬದ್ಧವಚ್ಚ=ಕಟ್ಟಲ್ಪಟ್ಟವನೆಂಬಂತೆಯೂ, ಮೃಷೈವ = ಮಿಥ್ಯೆಯಾಗಿಯೇ, ದರ್ಶಯತಿ=(ತನ್ನನ್ನು) ತೋರಿಸುತ್ತಾನೆ. ಇತಿ=ಹೀಗೆ, ಪೈಂಗಿಶ್ರುತಿಶ್ಚ = ಪೈಂಗಿಶ್ರುತಿಯೂ ಕೂಡ, ಹರೇಃ=ಶ್ರೀ ಹರಿಗೆ, ನಿರ್ದೋಷತಾಂ ಏವ=ದೋಷಲೇಶಾತ್ಯಂತಾಭಾವವನ್ನೇ, ಪ್ರಾಹ= ಹೇಳುತ್ತದೆ. (ಈ ವಿಷಯದಲ್ಲಿಯೇ ಸ್ಪಷ್ಟವಾದ ಶ್ರುತಿಯನ್ನುದಾಹರಿಸುತ್ತಾರೆ.) ಹರಿಃ=ಶ್ರೀ ಹರಿಯು, ಅಪರೀಕ್ಷಿತದೃಷ್ಟ್ಯೈವ = ಪರೀಕ್ಷಿತವಾಗದಿರುವ ದೃಷ್ಟಿಯಿಂದಲೇ, ಸದೋಷಃ= ವೇಧಾದಿದೋಷಸಹಿತನಾಗಿ, ದೃಶ್ಯತೇ=ಕಾಣಲ್ಪಡುತ್ತಾನೆ. ಪರೀಕ್ಷಾದರ್ಶನೇ ಸತಿ=ಪರೀಕ್ಷಾ ಪೂರ್ವಕದರ್ಶನದಲ್ಲಿ, ಹರೇಃ=ಶ್ರೀ ಹರಿಗೆ, ಕ್ವಚಿತ್=ಎಲ್ಲಿಯೂ, ದೋಷಃ=ದೋಷವು, ನೈವ ದೃಶ್ಯಃ=ಸರ್ವಥಾ ಕಾಣಲ್ಪಡಲಾರದು. ಇತಿ=ಹೀಗೆ, ಪೈಂಗಿಶ್ರುತಿಶ್ಚ = ಪೈಂಗಿಶ್ರುತಿಯೂ ಕೂಡ, ಆಹ=ದೋಷದರ್ಶನಕ್ಕೆ ಅಪರೀಕ್ಷಿತತ್ವವನ್ನೂ ನಿರ್ದೋಷತ್ವದರ್ಶನಕ್ಕೆ ಪರೀಕ್ಷಿತತ್ವ ವನ್ನೂ ಕೂಡ, ಆಹ=ಹೇಳುತ್ತದೆ. (ಅದರಿಂದ ಏನಾಯಿತೆಂದರೆ) ಪರೀಕ್ಷಿತಂ=ಯಾವುದು

ಪರೀಕ್ಷೆಯಿಂದ ಪ್ರಮಾಣವೆಂದು ನಿಶ್ಚಿತವಾಗಿದೆಯೋ, (ಅದೇನೇ) ಪ್ರಮಾಣಂ=ಪ್ರಮಾಣವು. (ಅಪರೀಕ್ಷಿತವಾದುದು 'ಆಪಾತತಃ' ಸಂದಿಗ್ಧವಾಗಿದೆ. ನಿಶ್ಚಿತವಾಗಿ ವಿರೋಧಿಯಾದುದು ಬಂದರೆ ಅಪ್ರಮಾಣವೇ. ಆದಕಾರಣ ಪರೀಕ್ಷಿತವಾದ ನಿರ್ದೋಷತ್ವದರ್ಶನದಿಂದ ಅಪರೀಕ್ಷಿತವಾದ ದೋಷದರ್ಶನವೇ ಬಾಧಿಸಲ್ಪಡುತ್ತದೆ) ॥ ೧೫೧ ॥ ೧೫೨ ॥ ೧೫೩ ॥

ಸ. ರ. ವಿ— ಹಾಗಾದರೆ— ಐಂದ್ರಜಾಲಿಕ ಪುರುಷನಂತೆ ಶ್ರೀ ಹರಿಯು ಕೆಲವು ಅವತಾರಗಳಲ್ಲಿ ಅವಿದ್ಯಮಾನವೇ ಆದ ಭೇದಾದಿಗಳನ್ನು ತೋರಿಸುತ್ತಾನೆ. ಅದನ್ನು ಗೃಹಿಸತಕ್ಕ ಪ್ರತ್ಯಕ್ಷವು ಅಪರೀಕ್ಷಿತವಾಗಿರುವುದರಿಂದ ಅಪ್ರಮಾಣವು. ಅಭೇದ್ಯತ್ವಾದಿಗಳನ್ನು ತೋರಿಸಿದ್ದು ಪರೀಕ್ಷಿತವಾಗಿರುವುದರಿಂದ ಪ್ರಮಾಣವಾಗುವುದಾದರೆ ಪ್ರಾಮಾಣ್ಯವು ಪರೀಕ್ಷಾಧೀನವೆಂದಾಯಿತು. ಅಂತೂ ಎಲ್ಲಾ ಜ್ಞಾನಗಳಿಗೂ ಪರೀಕ್ಷೆಯಿಂದಲೇ ಪ್ರಾಮಾಣ್ಯನಿಶ್ಚಯುವಾಗಬೇಕಾಗುವುದು. ಪರೀಕ್ಷೆಗೂ ಕೂಡ ಪರೀಕ್ಷಾಂತರದಿಂದಲೇ ಯಾಥಾರ್ಥ್ಯ ನಿಶ್ಚಯುವಾಗಬೇಕಾಗುವುದು. ಅದಕ್ಕೂ ಹೀಗೆ ಅನವಸ್ಥೆಯು ಬಂಬೇಕಾಗುವುದು, ಎಂದರೆ—

ಮೂ ॥ ನ ಪರೀಕ್ಷಾನವಸ್ಥಾ ಸ್ಯಾತ್ಸಾಕ್ಷಿಸಿದ್ಧೇ ತ್ವಸಂಶಯಾತ್ ।
ಮಾನಸೇ ದರ್ಶನೇ ದೋಷಾಃ ಸ್ಯುರ್ನ ವೈ ಸಾಕ್ಷಿದರ್ಶನೇ ॥ ೧೫೪ ॥
ಸುದೃಢೋ ನಿರ್ಣಯೋ ಯತ್ರ ಜ್ಞೇ(ಯಂ ತತ್ಸಾಕ್ಷಿದರ್ಶನಂ ।
ಇಚ್ಛಾ ಜ್ಞಾನಂ ಸುಖಂ ದುಃಖಂ (ಖ) ಭಯಾಭಯಕೃಪಾದಯಃ ॥ ೧೫೫ ॥
ಸಾಕ್ಷಿಸಿದ್ಧಾ ನ ಕಶ್ಚಿದ್ಧಿ ತತ್ರ ಸಂಶಯವಾನ್ ಕ್ವಚಿತ್ ।
ಯತ್ಕ್ವಚಿದ್ವ್ಯಭಿಚಾರಿ ಸ್ಯಾದ್ದರ್ಶನಂ ಮಾನಸಂ ಹಿ ತತ್ ॥ ೧೫೬ ॥

ಅ ॥ (ಪ್ರಾಮಾಣ್ಯಗ್ರಹಣಕ್ಕೆ ಪರೀಕ್ಷಾಧೀನತ್ವವನ್ನು ಅಂಗೀಕರಿಸಿದರೂ) ಪರೀಕ್ಷಾನವಸ್ಥಾ=ಪರೀಕ್ಷೆಯಿಂದ ಪರಂಪರೆಯಿಂದ ಅನವಸ್ಥೆಯು, ನ ಸ್ಯಾತ್=ಆಗಲಾರದು. (ಅದರಲ್ಲಿ ಕಾರಣವನ್ನು ಹೇಳುತ್ತಾರೆ). ಸಾಕ್ಷಿಸಿದ್ಧೇತು=ಸಾಕ್ಷಿಸಿದ್ಧವಾದ ಸುಖ-ದುಃಖಾದಿ ರೂಪದಲ್ಲಿಯಾದರೂ, ಅಸಂಶಯಾತ್=ಸಂದೇಹವಿಲ್ಲದಿರುವುದರಿಂದ, ( (1) ಅಂದರೆ— ೧ ಅಂತಃಕರಣ ಪರಿಣಾಮರೂಪವು, ೨ ಸಾಕ್ಷಿರೂಪವು; ಹೀಗೆ ಜ್ಞಾನವು ಎರಡುವಿಧವು. ಅವುಗಳಲ್ಲಿ ೧ನೇದ್ದು ಅಲ್ಲವೆಂದು ತೋರಿಸುವುದಕ್ಕಾಗಿ ತು ಶಬ್ದವು. (2) ಸರ್ವತ್ರ ಪರೀಕ್ಷಾಪೇಕ್ಷೆಯು ಇರುತ್ತಿದ್ದರೆ ಈ ಅನವಸ್ಥೆಯು ಬರುತ್ತಿತ್ತು. ಹೀಗೆ ಇಲ್ಲ; ಸಂಶಯಗ್ರಸ್ತವಾದ ಅರ್ಥದಲ್ಲಿಯೇ ಪರೀಕ್ಷಾಪೇಕ್ಷೆಯು ಅಸಂದಿಗ್ಧವಾದ ಅರ್ಥದಲ್ಲಿ ಇಲ್ಲ ಮನೋವೃತ್ತಿವಿಷಯಗಳಾದ ಪಾನೀಯಾದಿಗಳಲ್ಲಿ ಸಂದೇಹವು ಬರುತ್ತದೆ. ಪುನಃ ಸಾಕ್ಷಿಸಿದ್ಧವಾದ ಸುಖಾದಿಗಳಲ್ಲಿ ಸಂದೇಹವು ಬರುವುದಿಲ್ಲ. ಆದಕಾರಣ ಸಾಕ್ಷಿಗೃಹೀತಗಳಾದ ಸುಖಾದಿಗಳಲ್ಲಿ ಇಳಿಯುವ ತನಕವೇ ಪರೀಕ್ಷೆಯು. ಆದುದರಿಂದ ಅನವಸ್ಥೆಯು ಇಲ್ಲ.) (ಮನೋವೃತ್ತಿ ವಿಷಯದಲ್ಲಿಯೇ ಸಂಶಯವು. ಸಾಕ್ಷಿಸಿದ್ಧವಾದ ಅರ್ಥದಲ್ಲಿ ಸಂದೇಹವಿಲ್ಲ. ಎನ್ನುವಲ್ಲಿ ಏನುಕಾರಣವು ಎಂದರೆ—) ಮಾನಸೇ ದರ್ಶನೇ = ಮನಃ ಪರಿಣತಿ ರೂಪವಾದ ದರ್ಶನದಲ್ಲಿಯಾದರೂ, ದೋಷಾಃ = ದೋಷಗಳು, ಸ್ಯುಃ = ಕಾರಣಗಳೆಂದು ಸಂಭಾವಿತಗಳಾಗಿವೆ. ಸಾಕ್ಷಿದರ್ಶನೇ=ಸಾಕ್ಷಿರೂಪಜ್ಞಾನದಲ್ಲಿ, ನ ವೈಃ=ದೋಷಗಳೇ ಇಲ್ಲ. (ಮಾನಸದರ್ಶನದಲ್ಲಿ ದೋಷಗಳು ಕೂಡುತ್ತವೆ ಎಂದು ಸ್ಪಷ್ಟವೇ. ಸಾಕ್ಷಿದರ್ಶನದಲ್ಲಿಯೂ

ದೋಷಗಳು ಕೂಡುತ್ತವೆ ಎಂದು ಸ್ಪಷ್ಟವೇ. ಸಾಕ್ಷಿದರ್ಶನದಲ್ಲಿ ದೋಷಗಳು ಕೂಡುವುದಿಲ್ಲ ಎನ್ನುವುದು ಯಾವುದರಿಂದ? ಎಂದರೆ—) ಯತ್ರ=ಯಾವುದು, ಸುದೃಢಃ = ಯಾವಾಗಲೂ ಬಾಧರಹಿತವಾದುದು, ನಿರ್ಣಯಃ = ನಿಶ್ಚಯಾತ್ಮಕವಾದ ಜ್ಞಾನವೋ, ತತ್ = ಅದು, ಸಾಕ್ಷಿದರ್ಶನಂ=ಸಾಕ್ಷಿದರ್ಶನವೆಂದು, ಜ್ಞೇಯಂ=ತಿಳಿಯತಕ್ಕದು. (ಅಂದರೆ— ಜ್ಞಾನಕ್ಕೆ ದೋಲಾಯಮಾನತ್ವ ದರ್ಶನದಿಂದ ಅಥವಾ ಪ್ರಬಲವಾದ ಬಾಧಕವು ಬಂದುದರಿಂದಲಾಗಲೀ ದೋಷಗಳನ್ನು ಕಲ್ಪಿಸಬೇಕು. **'ಬಲವತ್ಪ್ರಮಾಣತಶ್ಚೈವ ಜ್ಞೇಯಾ ದೋಷಾ ನ ಚಾನ್ಯಥಾ'** ಎಂದು ಹೇಳಿರುವರು. ಸಾಕ್ಷಿದರ್ಶನವು ನಿರ್ಣಯಾತ್ಮಕವೇ ಆಗುತ್ತದೆ. ಬಾಧಿಸಲ್ಪಡುವುದಿಲ್ಲ ಎಂದು ಹೇಳಿರುವರು. ಆದುದರಿಂದ ಹಿಂದೆ ಹೇಳಿದ ದೋಷಕಲ್ಪಕವೇ ಇಲ್ಲದಿರುವುದರಿಂದ ಸಾಕ್ಷಿಜ್ಞಾನದಲ್ಲಿ ದೋಷವು ಕೂಡಲಾರದು.) (ಸಾಕ್ಷಿಸಿದ್ಧವಾದ ಅರ್ಥದಲ್ಲಿ ಸಂಶಯವು ಕೂಡುವುದಿಲ್ಲವೆಂದು ಮೊದಲು ಉಕ್ತವಾಯಿತು. ಅದನ್ನು ಅನುಭವಕ್ಕೆ ತರುವುದಕ್ಕಾಗಿ ಸಾಕ್ಷಿಸಿದ್ಧವಾದ ಅರ್ಥವನ್ನು ಹೇಳುತ್ತಾರೆ) ಇಚ್ಛಾ=ಇಚ್ಛೆಯು, ಜ್ಞಾನಂ=ಜ್ಞಾನವು, ಸುಖಂ=ಸುಖವು, ದುಃಖಂ=ದುಃಖವು, ಭಯಾಭಯಕೃಪಾದಯಃ=ಭೀತಿಯು, ಭಯಾಭಾವವು, ಕೃಪೆಯು ಇವುಗಳೇ ಮೊದಲಾದವುಗಳು (ಅಂದರೆ ಪ್ರಯತ್ನದ್ವೇಷಗಳು, ಈ ಇಚ್ಛಾದಿಗಳ ಅಭಾವಗಳೂ ಕೂಡ) ಸಾಕ್ಷಿಸಿದ್ಧಾಃ=ಸಾಕ್ಷಿಸಿದ್ಧಗಳು, ತತ್ರ=ಸಾಕ್ಷಿಸಿದ್ಧಗಳಾದ ಅರ್ಥಗಳಲ್ಲಿ, ಕ್ವಚಿತ್=ಎಲ್ಲಿಯೂ, ಕಶ್ಚಿತ್=ಯಾರೊಬ್ಬನೂ, ಸಂಶಯವಾನ್=ಸಂದೇಹವುಳ್ಳವನು, ನ=ಆಗಲಾರನು. ಹಿ=ಯಾವಾಗಲೂ ನನಗೆ ಸುಖವು ಇದೆಯೋ ಇಲ್ಲವೋ ಎಂದು ಸಂಶಯವಾಗಲೀ, ತೋರತಕ್ಕ ಈ ಸುಖವು ಸತ್ತೋ, ಅಸತ್ತೋ ಎಂದು ಸಂಶಯವಾಗಲೀ ಇಲ್ಲವೆನ್ನುವುದು ಪ್ರಸಿದ್ಧವು. (ಶುಕ್ತಿರಜತಾದಿಗಳಲ್ಲಿ ಬಾಧಕವು ಕಂಡದರಿಂದ ಶುಕ್ತಿರಜತಾದಿ ವಿಷಯಕವಾದ ಸಾಕ್ಷಿದರ್ಶನವು ಅಬಾಧಿತವೇ ಎನ್ನುವುದು ಕೂಡಲಾರದು. ಪ್ರತೀತಿ ಸಮಯದಲ್ಲಿ ಮಾತ್ರ ಇರತಕ್ಕ ಶುಕ್ತಿರಜತ ವಿಷಯಕವಾದ ಜ್ಞಾನವು ಸಾಕ್ಷಿಯಿಂದ ವ್ಯತಿರಿಕ್ತವೆಂದು ಹೇಳಲಿಕ್ಕೆ ಬರುವುದಿಲ್ಲ. ಎಂದರೆ—) ಯತ್‌ದರ್ಶನಂ=ಯಾವ ದರ್ಶನವು, ಕ್ವಚಿತ್=ಶುಕ್ತಿರಜತಾದಿ ವಿಷಯದಲ್ಲಿ, ವ್ಯಭಿಚಾರಿ=ಬಾಧಿತವು, ಸ್ಯಾತ್=ಆಗುವುದೋ, ತತ್=ಅದು, ಮಾನಸಂ=ಚಕ್ಷುರಾದಿಯೇ ಕರಣವಾಗಿವುಳ್ಳ, ಮನಃ = ಮನಸ್ಸಿನಪರಿಣಾಮರೂಪವಾದ ವೃತ್ತಿಜ್ಞಾನವೇ, (ಸಾಕ್ಷಿರೂಪವಾದುದಲ್ಲ.) ಹಿ=ಮಾನಸದರ್ಶನಕ್ಕೆ ಬಾಧ್ಯತ್ವವನ್ನು ಅಂಗೀಕರಿಸಿದರೆ ಅನಿಷ್ಟವಿಲ್ಲ. ಸಾಕ್ಷಿಗಾದರೂ ಬಾಧ್ಯತ್ವವನ್ನು ಅಂಗೀಕರಿಸಿದರೆ ಎಲ್ಲಾ ವ್ಯವಹಾರಗಳಿಗೂ ಲೋಪವು ಬರಬೇಕಾಗುವುದು ಎನ್ನುವ ಅನಿಷ್ಟವು ಪ್ರಸಿದ್ಧವು ॥ ೧೫೪ ॥ ೧೫೫ ॥ ೧೫೬ ॥

ಮಾನಸದರ್ಶನಕ್ಕೆ ದೋಷಬಾಧಗಳು ಸಂಭವಿಸುತ್ತವೆ ಎಂದು ಹೇಳಲ್ಪಟ್ಟದೆ. ಹಾಗಾದರೆ ಎಂತಹದಕ್ಕೆ ಪ್ರಾಮಾಣ್ಯವೆಂದರೆ—

**ಮೂ ॥ ಮನಶ್ಚಕ್ಷುರ್ದರ್ಶನಾದೇರಪಿ ಯತ್ರೈವ ಸಾಕ್ಷಿಣಾ ।**
**ಪ್ರಾಮಾಣ್ಯಂ ಸುಗೃಹೀತಂ ಸ್ಯಾತ್ತತ್ಪರೀಕ್ಷಿತದರ್ಶನಂ ॥ ೧೫೭ ॥**
**ನ ಜ್ಞಾನದೃಷ್ಟಿಮಾತ್ರೇಣ ಪ್ರಾಮಾಣ್ಯಂ ತಸ್ಯ ದೃಶ್ಯತೇ ।**
**ನಿಯಮೇನ ಸುಖಾದ್ಯೇಷು ಪ್ರಾಮಾಣ್ಯಂ ಸಾಕ್ಷಿಗೋಚರಂ ॥ ೧೫೮ ॥**

**ಅ ॥** ಮನಶ್ಚಕ್ಷುರ್ದರ್ಶನಾದೇರಪಿ = ಮನಸ್ಸು, ಚಕ್ಷುಸ್ಸು ಶ್ರೋತ್ರಾದಿಗಳು ಇವುಗಳಿಂದುಂಟಾಗತಕ್ಕ ಸಾಕ್ಷಾತ್ಕಾರ ಮೊದಲಾದ ಲೈಂಗಿಕ ಅನುಮಿತಿ ಶಬ್ದಜ್ಞಾನಗಳ ಮಧ್ಯದಲ್ಲಿ,

(ಅಂದರೆ ಇಂದ್ರಿಯ, ಲಿಂಗ, ಶಬ್ದಗಳೇ ಕರಣವಾಗಿವುಳ್ಳ ಮನೋವೃತ್ತಿಜ್ಞಾನಮಧ್ಯದಲ್ಲಿ) ಅಪಿ= ಸಂಭಾವಿತವಾದ ದೋಷಬಾಧಕಕ್ಕೂ ಕೂಡ, ಯತ್ರ = ಯಾವ ಜ್ಞಾನದಲ್ಲಿ, ಸಾಕ್ಷಿಣಾ= ಸಾಕ್ಷೀಂದ್ರಿಯದಿಂದ, ಪ್ರಾಮಾಣ್ಯಂ=ಪ್ರಾಮಾಣ್ಯವು, ಸುಗೃಹೀತಂ ಸ್ಯಾತ್=ಪರೀಕ್ಷೆಯಿಂದ ನಿಶ್ಚಿತವಾಗಿದೆಯೋ, ತತ್=ಅದು, ಪರೀಕ್ಷಿತದರ್ಶನಂ = ಪರೀಕ್ಷಿತವಾದ ಸಾಕ್ಷಾತ್ಕಾರವು, ಪ್ರಮಾಣಂ=ಪ್ರಮಾಣವು. (ಈ ಪ್ರಕಾರ ಪ್ರತ್ಯಕ್ಷಾದಿ ಜ್ಞಾನಪ್ರಾಮಾಣ್ಯಗ್ರಹಣಕ್ಕೆ ಪರೀಕ್ಷಾಧೀನತ್ವವಿದ್ದರೂ ಸಾಕ್ಷಿಪ್ರಾಮಾಣ್ಯ (ಜ್ಞಾನ) ಗ್ರಹಣಕ್ಕೆ ಪರೀಕ್ಷಾಪೇಕ್ಷೆಯು ಇಲ್ಲದಿರುವುದರಿಂದ ಪರೀಕ್ಷಾನವಸ್ಥೆಯು ಇಲ್ಲವೆಂದು ಹೇಳಲ್ಪಟ್ಟಿತು. ಅದರಲ್ಲಿ ಈ ಎರಡು ಪ್ರಕಾರವಾದ ಕಲ್ಪನೆಯಿಂದ ಏನು ಪ್ರಯೋಜನವು? ಸಾಕ್ಷಿಯಂತೆಯೇ ಪ್ರತ್ಯಕ್ಷಾದಿ ಜ್ಞಾನಕ್ಕೂ ಕೂಡ ಪ್ರಾಮಾಣ್ಯಗ್ರಹಣವು ಪರೀಕ್ಷಾನಪೇಕ್ಷವಾಗಿಯೇ, ಸ್ವತಃ ಏತಕ್ಕೆ ಆಗಲಾರದು ಎನ್ನುವ ಆಶಂಕೆಯನ್ನು ಪರಿಹರಿಸುತ್ತಾರೆ.) ಜ್ಞಾನದೃಷ್ಟಿಮಾತ್ರೇಣ = ಜ್ಞಾನದ ಸಾಕ್ಷಾತ್ಕಾರಮಾತ್ರದಿಂದ, ತಸ್ಯ=ಆ ಜ್ಞಾನಕ್ಕೆ, ಪ್ರಾಮಾಣ್ಯಂ = ಪ್ರಾಮಾಣ್ಯವು, ನ ದೃಶ್ಯತೇ = ಕಾಣಲ್ಪಡುವುದಿಲ್ಲ. (ಹೀಗಾದರೆ ಪ್ರತ್ಯಕ್ಷಾದಿ ಜ್ಞಾನದಂತೆಯೇ ಸಾಕ್ಷೀಂದ್ರಿಯಕ್ಕೂ ಕೂಡ ಪ್ರಾಮಾಣ್ಯವು ಪರೀಕ್ಷೆಯನ್ನು ಅಪೇಕ್ಷಿಸಿಯೇ ಗೃಹೀತವಾಗುತ್ತದೆಂದು ಅಂಗೀಕರಿಸಲ್ಪಡಲಿ, ಎರಡುಪ್ರಕಾರ ಕಲ್ಪಿಸುವುದು ಅನ್ಯಾಯವಾಗಿದೆ ಎಂದರೆ—) ಸುಖಾದ್ಯೇಷು = ಸುಖಾದಿಗಳ ವಿಷಯದಲ್ಲಿ, ಸಾಕ್ಷಿಗೋಚರಂ = ಸಾಕ್ಷಿಯೇ ಆಶ್ರಯವಾಗಿವುಳ್ಳ, (ಅಂದರೆ— ಸಾಕ್ಷಿಯಲ್ಲಿರತಕ್ಕ) ಪ್ರಾಮಾಣ್ಯಂ= ಪ್ರಾಮಾಣ್ಯವೂ, ನಿಯಮೇನ=ನಿಯಮದಿಂದ, ದೃಶ್ಯತೇ=ಕಾಣಲ್ಪಡುತ್ತದೆ.

ತಾ ॥ ನ್ಯಾಯಸುಧಾ— (1) ವೃತ್ತಿಜ್ಞಾನಗಳಂತೆ ಸಾಕ್ಷಿಜ್ಞಾನಕ್ಕೂ ಪ್ರಾಮಾಣ್ಯವು ಸಾಕ್ಷಿದರ್ಶನ ಮಾತ್ರದಿಂದ ಕಾಣಲ್ಪಡದೆ ಇದ್ದರೆ ಆಗ ಅಧಿಕ ಕಾರಣವನ್ನು ಕಲ್ಪಿಸಬೇಕಾಗುವುದು. ಹೀಗೆ ಅಲ್ಲ. ಸುಖಜ್ಞಾನವು ಅನುಭೂತವಾದ ಮೇಲೆ ಸುಖಜ್ಞಾನಪ್ರಾಮಾಣ್ಯದಲ್ಲಿ ಅಜ್ಞಾನ ಸಂಶಯ ವಿಪರ್ಯಯಗಳು ಯಾವಾಗಲೂ ತೋರಿಬರಲಿಲ್ಲ. ಕಲ್ಪಕವಿರುವಾಗ ಎರಡು ಪ್ರಕಾರ ಕಲ್ಪಿಸುವುದು ದೂಷಣವಲ್ಲ ॥ ೧೫೭ ॥ ೧೫೮ ॥

ಹಾಗಾದರೆ ಪ್ರಾಮಾಣ್ಯಜ್ಞಾನವನ್ನು ಇಚ್ಛಿಸುವವನು ಅನವಸ್ಥೆಯಿಂದ ಹೆದರುವುದು ಯುಕ್ತವಲ್ಲ. ಹಿಂದೆ ಹೇಳಿದ ರೀತಿಯಿಂದ ಪರೀಕ್ಷಾನವಸ್ಥೆಯು ಇಲ್ಲದಿದ್ದರೂ ಗ್ರಾಹಕಾನವಸ್ಥೆಯು ಪರಿಹರಿಸಲು ಅಶಕ್ಯವು ಎಂದರೆ—

ಮೂ ॥ ಸ್ವಪ್ರಾಮಾಣ್ಯಂ ಸದಾ ಸಾಕ್ಷೀ ಪಶ್ಯತೇವ ಸುನಿಶ್ಚಯಾತ್ ।<br>
ಜ್ಞಾನಸ್ಯ ಗ್ರಾಹಕೇಽಸ್ಯೈವ ಸಾಕ್ಷಿಣಾ ಮಾನತಾಮಿತೇಃ ॥ ೧೫೯ ॥<br>
ದೋಷಾಭಾವೇ ಪ್ರಮಾಣತ್ವಂ ದೋಷಾಭಾವಸ್ಯ ಸಾಕ್ಷಿಣಾ ।<br>
ನಿಶ್ಚಿತತ್ವಂ ಕ್ವಚಿಚ್ಚೈವ ಸ್ವತಃ ಪ್ರಾಮಾಣ್ಯಮಿಷ್ಯತೇ ॥ ೧೬೦ ॥<br>
ಅತೋ ನ ಸರ್ವಮಾನಾನಾಂ ಪ್ರಾಮಾಣ್ಯಂ ನಿಶ್ಚಿತಂ ಭವೇತ್ ।<br>
ಸಾಕ್ಷಿಣಾ ನಿಶ್ಚಿತಂ ಯತ್ರ ತತ್ಪ್ರಾಮಾಣ್ಯಂ (ಣ್ಯ) ಸ್ವಲಕ್ಷಣಂ ॥ ೧೬೧ ॥

ಅ ॥ ಸ್ವಪ್ರಾಮಾಣ್ಯಂ=ತನ್ನ ಪ್ರಾಮಾಣ್ಯವನ್ನು, ಸಾಕ್ಷ್ಯೇವ=ಸಾಕ್ಷಿಯೇ, ಸದಾ= ಯಾವಾಗಲೂ, ಸುನಿಶ್ಚಯಾತ್=ಪರೀಕ್ಷಾನಪೇಕ್ಷವಾಗಿಯೇ, ಪಶ್ಯತಿ=ವಿಷಯೀಕರಿಸುತ್ತದೆ.

(ಇದು ಅನುಭವ ಅನ್ಯಥಾನುಪಪತ್ತಿಗಳಿಂದ ಕಲ್ಪಿಸಲ್ಪಡುತ್ತದೆ.) (ಹೀಗಾದರೆ ವೃತ್ತಿಜ್ಞಾನಗಳಿಗೆ ಪರತಃ ಪ್ರಾಮಾಣ್ಯವನ್ನು ಹೇಳಿದಂತೆ ಆಯಿತು. ಜ್ಞಾನಸ್ವರೂಪವು ಸಾಕ್ಷಿವೇದ್ಯವು. ಪ್ರಾಮಾಣ್ಯವು ಪರೀಕ್ಷೆಯಿಂದ ತಿಳಿಯಲರ್ಹವು. ಅಂತೂ 'ನ ವಿಲಕ್ಷಣತ್ವಾತ್' ಎನ್ನುವುದರಿಂದ ಯಾವುದು ಸ್ವತಃ ಪ್ರಾಮಾಣ್ಯವು ಇಷ್ಟವಾಗಿದೆಯೋ ಅದನ್ನು ಬಿಟ್ಟಂತೆಯೇ ಆಯಿತು. ಎಂದರೆ—) ಜ್ಞಾನಸ್ಯ=ಜ್ಞಾನವನ್ನು, ಗ್ರಾಹಕೇಣ=ಗ್ರಹಿಸತಕ್ಕ, ಸಾಕ್ಷಿಣೈವ = ಸಾಕ್ಷೀಂದ್ರಿಯದಿಂದಲೇ, ಜ್ಞಾನಸ್ಯ=ಜ್ಞಾನಕ್ಕೆ, ಮಾನಮಿತೇಃ=ಪ್ರಾಮಾಣ್ಯಜ್ಞಾನ ಬರುತ್ತದೆ ಎನ್ನುವ ಕಾರಣದಿಂದ, ಸ್ವತಃ ಪ್ರಾಮಾಣ್ಯವು, ಇಷ್ಟವೇ ಆಗಿದೆ. (ಜ್ಞಾನವೇ ಸಾಕ್ಷಿವೇದ್ಯವು. ಪ್ರಾಮಾಣ್ಯವಲ್ಲ. ಎಂದು ಹೇಳಿದ್ದರೆ ಆಗ ಸ್ವತಃ ಪ್ರಾಮಾಣ್ಯತ್ಯಾಗವು ಆಗುತ್ತಿತ್ತು. ಹೀಗೆ ಇಲ್ಲ. ಜ್ಞಾನದಂತೆಯೇ ಜ್ಞಾನಪ್ರಾಮಾಣ್ಯಕ್ಕೂ ಕೂಡ ಸಾಕ್ಷಿವೇದ್ಯತ್ವವನ್ನು ಅಂಗೀಕರಿಸುವೆವು. ಹಾಗಾದರೆ, ಪ್ರಾಮಾಣ್ಯಗ್ರಹಣಕ್ಕಾಗಿ ಪರೀಕ್ಷೆಯನ್ನು ಏಕೆ ಅಂಗೀಕರಿಸಿದ್ದು ಎಂದರೆ—) (ಜ್ಞಾನವನ್ನು ಗ್ರಹಿಸತಕ್ಕ ಸಾಕ್ಷಿಯು) ದೋಷಾಭಾವೇ=ಕರಣ ದೋಷವಿಲ್ಲದಿದ್ದರೆ, ಪ್ರಮಾಣತ್ವಂ=(ಜ್ಞಾನಕ್ಕೆ ಪ್ರಾಮಾಣ್ಯವೆಂದೇ, ಜ್ಞಾನದ ಪ್ರಾಮಾಣ್ಯಕ್ಕೆ) ಸಾಕ್ಷಿಣಾ=ಸಾಕ್ಷಿಯಿಂದ, ನಿಶ್ಚಿತತ್ವಂ=ನಿಶ್ಚಿತತ್ವವು, (ಅಂದರೆ- ಜ್ಞಾನವನ್ನುಗ್ರಹಿಸತಕ್ಕ ಸಾಕ್ಷಿಯು, ಕರಣ ದೋಷವಿಲ್ಲದಿದ್ದರೆ ಪ್ರಮಾಣವೆಂದೇ ನಿಶ್ಚೈಸುತ್ತದೆ. ಜ್ಞಾನವು ಪ್ರಮಾಣವೇ ಎಂದು ನಿಶ್ಚೈಸುವುದಿಲ್ಲ.) (ಅದರಿಂದ ಏನಾಯಿತೆಂದರೆ—) ದೋಷಾಭಾವಸ್ಯ=ದೋಷಾಭಾವಕ್ಕೆ, (ಚ=ಪರೀಕ್ಷೆಯಿಂದಲೇವೇ) ಕ್ವಚಿದೇವ=ಕೆಲವುಕಡೆ (ಅಂದರೆ— ಪ್ರಯೋಜನ ವಶದಿಂದ ಜಿಜ್ಞಾಸೆಯಿಂದುಂಟಾಗುವಾಗ, ಪರೀಕ್ಷೆಯು ಲಾಭವಾಗುವಾಗಲೇ), ನಿಶ್ಚಿತತ್ವಂ = ನಿಶ್ಚಿತತ್ವವು, ಸಾಕ್ಷಿಣಾ = ಸಾಕ್ಷಿಯಿಂದ, ಸ್ವತಃ ಪ್ರಾಮಾಣ್ಯಂ=ಸ್ವತಃ ಪ್ರಾಮಾಣ್ಯವು, ಇಷ್ಯತೇ=ಅಂಗೀಕರಿಸಲ್ಪಡುತ್ತದೆ. ಅತಃ=ಆದುದರಿಂದ, ಸರ್ವಮಾನಾನಾಂ = ಎಲ್ಲಾ ಜ್ಞಾನಗಳಿಗೆ, ಪ್ರಾಮಾಣ್ಯಂ = ಪ್ರಾಮಾಣ್ಯವು, (ಪ್ರಥಮದಲ್ಲಿ) ನಿಶ್ಚಿತಂ = ನಿಶ್ಚಿತವಾದುದು, ನ ಭವೇತ್ = ಆಗಲಾರದು. (ಮತ್ತೆ) ಯತ್ರ = ಯಾವಾಗ, ಸಾಕ್ಷಿಣಾ=ಪರೀಕ್ಷಾಸಹಕೃತವಾದ ಸಾಕ್ಷಿಯಿಂದ, ಪ್ರಾಮಾಣ್ಯಂ=ಪ್ರಾಮಾಣ್ಯವು, ನಿಶ್ಚಿತಂ=ನಿಶ್ಚಿತವಾಗುತ್ತದೋ, ತತ್=ಆವಾಗಲೇ, ಪ್ರಾಮಾಣ್ಯಸ್ವಲಕ್ಷಣಂ=ಪ್ರಾಮಾಣ್ಯಸ್ವರೂಪವು, (ಅಪ್ರಾಮಾಣ್ಯವಿವಿಕ್ತವಾಗಿ ಸಿದ್ಧಿಸುತ್ತದೆ.)

ತಾ ॥ (1) ಸಾಕ್ಷಿಯು ದೋಷವಿಲ್ಲದಿದ್ದರೆ ಇದು ಪ್ರಮಾಣವೆಂದು ಪ್ರಥಮದಲ್ಲಿ ಸಮ್ಮುಗ್ಧವಾಗಿ ಪ್ರಾಮಾಣ್ಯವನ್ನು ಗ್ರಹಿಸಿ, ಆ ಮೇಲೆ ಜಿಜ್ಞಾಸಾ ಬರುತ್ತಿರಲು ಪರೀಕ್ಷೆಯಿಂದ ಪ್ರಮಾಣವೆಂದು ನಿಶ್ಚಯಿಸುತ್ತದೆ, ಎನ್ನುವ ಪ್ರಕ್ರಿಯೆಯನ್ನು ಅಂಗೀಕರಿಸದೆ ಇದ್ದರೆ ಆಗ ಅನಭ್ಯಸ್ತವಿಷಯಕಗಳಾದ ಶಬ್ದಗಳಿಂದುಂಟಾದ ಎಲ್ಲಾ ಜ್ಞಾನಗಳಿಗೂ ಪ್ರಥಮದಲ್ಲಿಯೇ ಪ್ರಾಮಾಣ್ಯವು ನಿಶ್ಚಯಿಸಲ್ಪಡುವುದು. ಇದಾದರೂ ಇಲ್ಲ. ಅದರಿಂದ ಈ ಪ್ರಕ್ರಿಯೆಯು ಇದೆ ಎಂದು ತಿಳಿಯುತ್ತದೆ ॥ ೧೫೯ ॥ ೧೬೦ ॥ ೧೬೧ ॥

ಹಿಂದೆ ಹೇಳಿದ ಅರ್ಥವು ಬುದ್ಧಿಯಲ್ಲಿ ಆರೂಢವಾಗುವುದಕ್ಕಾಗಿ ಸಂಕ್ಷೇಪದಿಂದ ಹೇಳುತ್ತಾರೆ—

**ಮೂ ॥ ನ ಹಿ ಕಶ್ಚಿತ್ಸುಖಾದ್ಯೇಷು ಸಂಶಯಂ ಕುರುತೇ ಜನಃ ।**
**ನ ಚೈವಾಖಿಲಮಾನಾನಿ ನಿಶ್ಚಿನೋತ್ಯಖಿಲೋ ಜನಃ ॥ ೧೬೨ ॥**
**ತಸ್ಮಾದನುಭವಾರೂಢಂ ಕಿಮರ್ಥಮಪಲಪ್ಯತೇ ।**
**ದೋಷಾಭಾವಾದಿಕಂ ಚೈವ ಸಾಕ್ಷೀ ಸಮ್ಯಕ್ಪ್ರಪಶ್ಯತಿ ॥ ೧೬೩ ॥**

**ತತ್ಪರೀಕ್ಷಿತಮಾನೇನ ನ ದೋಷೋ ವಿಷ್ಣವಿ ಕ್ವಚಿತ್ ।**
**ಅಪರೀಕ್ಷಿತದೃಷ್ಟಿಸ್ತು ಕಸ್ಮಿನ್ನರ್ಥೇ ನ ವಿದ್ಯತೇ ॥ ೧೬೪ ॥**

ಅ ॥ ಹಿ = ಯಾವ ಕಾರಣದಿಂದ, ಸುಖಾದ್ಯೇಷು = ಸುಖ ಮೊದಲಾದವುಗಳಲ್ಲಿ, ಕಶ್ಚಿತ್ ಜನಃ = ಯಾವ ಜನರು, ಸಂಶಯಂ = ಸಂದೇಹವನ್ನು, ನ ಕುರುತೇ = ಮಾಡುವುದಿಲ್ಲವೋ, ಹಿ = ಯಾವ ಕಾರಣದಿಂದ, ಅಖಿಲಮಾನಾನಿ = ಎಲ್ಲಾ ನಿವೃತ್ತಿಜ್ಞಾನಗಳನ್ನು, (ನೋಡಿಯೇ ಪ್ರಮಾಣವಾಗಿ) ಅಖಿಲೋ ಜನಃ = ಎಲ್ಲಾ ಜನರೂ, ನಿಶ್ಚಿನೋತಿ = ನಿಶ್ಚಯಿಸುವರೋ, ತಸ್ಮಾತ್=ಆದ ಕಾರಣ, ಅನುಭವಾರೂಢಂ=ಸಾಕ್ಷಿಪ್ರಾಮಾಣ್ಯವು ಪರೀಕ್ಷಾನಪೇಕ್ಷಿತವಾದ ಸಾಕ್ಷಿಯಿಂದಲೇ ಗೃಹೀತವಾಗುತ್ತದೆ. ವೃತ್ತಿಜ್ಞಾನಗಳ ಪ್ರಾಮಾಣ್ಯವಾದರೂ ಪರೀಕ್ಷಾಪೇಕ್ಷಿತವಾದ ಸಾಕ್ಷಿಯಿಂದ ಎಂದು ಅನುಭವದಲ್ಲಿ ಆರೂಢವಾದ ಪ್ರಮೇಯವು, ಕಿಮರ್ಥಂ=ಯಾವುದಕ್ಕಾಗಿ, ಅಪಲಪ್ಯತೇ=ಅಪಲಾಪಮಾಡಲ್ಪಡುತ್ತದೆ. (ನಿರ್ನಿಮಿತ್ತವಾಗಿ ಅಪಲಾಪಮಾಡಲಿಕ್ಕೆ ಅಶಕ್ಯವು.) ('ನ ಪರೀಕ್ಷಾನವಸ್ಥಾ ಸ್ಯಾತ್' ಎಂದು ಹೇಳಿದ್ದನ್ನುಪಸಂಹಾರಮಾಡುತ್ತಾರೆ.) ಸಾಕ್ಷ್ಯೇವ=ಸಾಕ್ಷಿಯೇ, ದೋಷಾಭಾವಾದಿಕಂ ಚ=ದೋಷಾಭಾವ ಮೊದಲಾದುದನ್ನು, (ಅಂದರೆ— ತನಗೂ ಪರೀಕ್ಷೆಗೂ ಕೂಡ ದೋಷಾಭಾವವನ್ನೂ, ಪ್ರಾಮಾಣ್ಯವನ್ನೂ ಕೂಡ ಪರೀಕ್ಷಾಪೇಕ್ಷೆಯಿಲ್ಲದಿರುವ ಸಾಕ್ಷಿಯೇ) ಸಮ್ಯಕ್=ಚೆನ್ನಾಗಿ, ಪ್ರಪಶ್ಯತಿ= ನೋಡುತ್ತದೆ. (ಆದ ಕಾರಣ ಯಾವ ಅನವಸ್ಥೆಯೂ ಇಲ್ಲ.) (ಅಪರೀಕ್ಷಿತಮೇವ ಇತ್ಯಾದಿಗಳಿಂದ ಹೇಳಲ್ಪಟ್ಟದ್ದನ್ನು ಉಪಸಂಹಾರಮಾಡುತ್ತಾರೆ.) ತತ್ = ಆದ ಕಾರಣ, ಪರೀಕ್ಷಿತಮಾನೇನ=ಪರೀಕ್ಷಿತವೇ ಆದ ಪ್ರಮಾಣದಿಂದ, ವಿಷ್ಣವಿ = ಹರಿಯಲ್ಲಿ, ಕ್ವಚಿತ್ = ಎಲ್ಲಿಯೂ, ದೋಷಃ = ದೋಷವು, ನ=ತಿಳಿದುಬರುವುದಿಲ್ಲ. (ಅದರ ವಿರೋಧದಿಂದ ಅಪರೀಕ್ಷಿತವಾದ ದೋಷದರ್ಶನವು ಅಪ್ರಮಾಣವೇ) (ಈ ಪ್ರಕಾರ ಅಪರೀಕ್ಷಿತವಾದ ದೋಷದರ್ಶನವು ಪರೀಕ್ಷಿತವಾದ ನಿರ್ದೋಷತ್ವವನ್ನು ಕಂಡುದರಿಂದ ಬಾಧಿತವಾಗಿ ಶ್ರೀಹರಿಗೆ ದೋಷಿತ್ವವನ್ನು ಸಾಧಿಸಲಿಕ್ಕೆ ಶಕ್ತವಲ್ಲವೆಂದು ಹೇಳಲ್ಪಟ್ಟಿತು. ಈಗ ಅಂತಹದಕ್ಕೂ ಬಾಧಕತ್ವವಿದ್ದರೆ ಅತಿಪ್ರಸಂಗವನ್ನು ಸೂಚಿಸುತ್ತಾರೆ.) ಅಪರೀಕ್ಷಿತದೃಷ್ಟಿಸ್ತು=ಅಪರೀಕ್ಷಿತವಾದ ದೃಷ್ಟಿಯಾದರೂ, ಕಸ್ಮಿನ್ನರ್ಥೇ = ಯಾವ ಅರ್ಥದಲ್ಲಿಯೂ, ನ ವಿದ್ಯತೇ = ಇರುವುದಿಲ್ಲ. (ಶುಕ್ತ್ಯಾದಿಗಳಿಗೆ ರಜತತ್ವಾದಿಗಳಲ್ಲಿ ಉಂಟೇ ಉಂಟು. ಅಂತೂ ಆ ದೃಷ್ಟಿಯಿಂದ ಅದೂ ಸಿದ್ಧಿಸುವುದು.) ॥ ॥ ೧೬೨ ॥ ೧೬೩ ॥ ೧೬೪ ॥

ಮೊದಲು 'ತತ್ತ್ವಮಸಿ' ಇತ್ಯಾದ್ಯಾಗಮುಗಳಿಗೆ ಪ್ರತ್ಯಕ್ಷ ವಿರೋಧವಿದ್ದುದರಿಂದ ಆಪಾತ ಪ್ರತೀತವಾದ ಐಕ್ಯರೂಪ ಅರ್ಥದಲ್ಲಿ ಪ್ರಾಮಾಣ್ಯವಿಲ್ಲವೆಂದು ಹೇಳಲ್ಪಟ್ಟದೆ. ಈ ಹಿಂದೆ ಹೇಳಿದುದಕ್ಕೆ ವಿಪರೀತವಾಗಿ (ಅಂದರೆ ಪ್ರತ್ಯಕ್ಷಕ್ಕೆ ಆಗಮವಿರೋಧದಿಂದ ಅಪ್ರಾಮಾಣ್ಯವು ಹೇಗೆ ಹೇಳಲ್ಪಡುತ್ತದೆ ಎನ್ನುವ ಆಶಂಕೆಯನ್ನು ಪರಿಹರಿಸುತ್ತಾರೆ—)

**ಮೂ ॥ ತತ್ಪ್ರತ್ಯಕ್ಷವಿರುದ್ಧಾರ್ಥೇ ನಾಗಮಸ್ಯಾಪಿ ಮಾನತಾ ।**
**ಉಪಜೀವ್ಯಮಕ್ಷಜಂ ಯತ್ತದನ್ಯತ್ರ ವಿಪರ್ಯಯಃ ॥ ೧೬೫ ॥**
**ಲೌಕಿಕೇ ವ್ಯವಹಾರೇಽತ್ರ ಪ್ರತ್ಯಕ್ಷಸ್ಯೋಪಜೀವ್ಯತಾ ।**
**ಅವತಾರಾದಿದೃಷ್ಟೌ ಸ್ಯಾದಾಗಮಸ್ಯೋಪಜೀವ್ಯತಾ ॥ ೧೬೬ ॥**
**ಆಗಮೇನ ಹಿ ವಿಷ್ಣುತ್ವಂ ಜ್ಞಾತ್ವಾ ದೋಷೋಽತ್ರ ಕಲ್ಪ್ಯತೇ ।**
**ನ ಚೇತ್ಸ್ಯಾದ್ದೋಷವಾನನ್ಯಃ ಶಾಸ್ತ್ರಸಿದ್ಧಂ ಹಿ ಲಕ್ಷಣಂ ॥ ೧೬೭ ॥**

ಅ || ಯತ್ = ಯಾವಾಗ, ಅಕ್ಷಜಂ = ಪ್ರತ್ಯಕ್ಷವು, ಉಪಜೀವ್ಯಂ = ಆಗಮಕ್ಕೆ ಉಪಜೀವ್ಯವೋ, ತತ್=ಆಗ, ಪ್ರತ್ಯಕ್ಷವಿರುದ್ಧಾರ್ಥೇ=ಪ್ರತ್ಯಕ್ಷದಿಂದ ವಿರುದ್ಧವಾದ ಅರ್ಥದಲ್ಲಿ, ಆಗಮಸ್ಯಾಪಿ=ಜಾತಿಯಿಂದ ಪ್ರಬಲವಾದ ಆಗಮಕ್ಕೂ, ಮಾನತಾ=ಪ್ರಾಮಾಣ್ಯವು, ನ=ಇಲ್ಲ. ತತ್ = ಇಂತಹ ಉಪಜೀವ್ಯ-ಉಪಜೀವಕಭಾವದಿಂದ, ಅನ್ಯತ್ರ = ವಿಪರೀತವಾದ ಉಪಜೀವ್ಯ-ಉಪಜೀವಕ ಭಾವವಿದ್ದಲ್ಲಿ, ವಿಪರ್ಯಯಃ = ಬಾಧ್ಯ-ಬಾಧಕಭಾವಕ್ಕೂ ಕೂಡ ವ್ಯತ್ಯಾಸವು. (ಅಂದರೆ— ಯಾವಾಗ ಆಗಮವು ಪ್ರತ್ಯಕ್ಷಕ್ಕೆ ಉಪಜೀವ್ಯವೋ, ಆಗ ಆಗಮ ವಿರುದ್ಧಾರ್ಥದಲ್ಲಿ ಪ್ರತ್ಯಕ್ಷಕ್ಕೆ ಪ್ರಾಮಾಣ್ಯವು ಇಲ್ಲ.) (ಆದರಿಂದ ಪ್ರಕೃತವೇನಾಯಿತೆಂದರೆ—) ಲೌಕಿಕೇ = ಪ್ರತ್ಯಕ್ಷಸಿದ್ಧ ಜೀವರಿಗೆ ಬ್ರಹ್ಮಾತ್ಮಕತ್ವಾದಿ ಜ್ಞಾನರೂಪವಾದ, ವ್ಯವಹಾರೇ = ವ್ಯವಹಾರವು, (ತತ್ತ್ವಮಸ್ಯಾದ್ಯಾಗಮದಿಂದ ಮಾಡಲ್ಪಡುತ್ತಿರಲು) ಅತ್ರ = ಆಗಮದಲ್ಲಿ, (ಆಗಮವನ್ನು ಕುರಿತು) ಪ್ರತ್ಯಕ್ಷಸ್ಯ = ಪ್ರತ್ಯಕ್ಷಕ್ಕೆ, ಉಪಜೀವ್ಯತಾ = ಉಪಜೀವ್ಯತ್ವವಿದೆ. ಅವತಾರಾದಿದೃಷ್ಟೌ=ರಾಮಕೃಷ್ಣಾದ್ಯವತಾರಗಳಿಗೆ ದೋಷಪ್ರತ್ಯಕ್ಷದಲ್ಲಿ, (ಪ್ರತ್ಯಕ್ಷಾದಿಗಳನ್ನು ಕುರಿತು) ಆಗಮಸ್ಯ=ಆಗಮಕ್ಕೆ, ಉಪಜೀವ್ಯತಾ=ಉಪಜೀವ್ಯತ್ವವು, ಸ್ಯಾತ್=ಆಗುವುದು. (ಅಂದರೆ— ಮೊದಲು ಪ್ರತ್ಯಕ್ಷವಿರೋಧದಿಂದ ಆಗಮಕ್ಕೆ ಅಪ್ರಾಮಾಣ್ಯವನ್ನು ಹೇಳಿ, ಈಗ ಆಗಮವಿರೋಧದಿಂದ ಪ್ರತ್ಯಕ್ಷಕ್ಕೆ ಅಪ್ರಾಮಾಣ್ಯವನ್ನು ಹೇಳಿದ್ದು ವಿರುದ್ಧವೆಂದು ಹೇಳಕೂಡದು. ಕೇವಲ ಪ್ರತ್ಯಕ್ಷ ಆಗಮಗಳಿಗೆ ಪರಸ್ಪರವಾಗಿ ಬಾಧ್ಯ-ಬಾಧಕಭಾವವನ್ನು ಹೇಳಲಿಲ್ಲ. ಮತ್ತೆ ಉಪಜೀವಕತ್ವದಿಂದ ಬಾಧ್ಯತ್ವವೂ, ಉಪಜೀವ್ಯತ್ವದಿಂದ ಬಾಧಕತ್ವವೂ ಹಿಂದೆ ಹೇಳಿದ್ದು, ಅವತಾರಾದಿಗಳಲ್ಲಿ ದೋಷಗ್ರಾಹಕ ಪ್ರತ್ಯಕ್ಷದಲ್ಲಿ ಆಗಮವೇ ಪ್ರತ್ಯಕ್ಷವನ್ನು ಕುರಿತು ಉಪಜೀವ್ಯವಾದುದರಿಂದ ಆಗಮದಿಂದ ಪ್ರತ್ಯಕ್ಷಕ್ಕೆ ಬಾಧ ಹೇಳಿದರೂ ಪೂರ್ವೋತ್ತರ ವಿರೋಧವಿಲ್ಲ ) (ಪ್ರತ್ಯಕ್ಷವನ್ನು ಕುರಿತು ಆಗಮಕ್ಕೆ ಉಪಜೀವ್ಯತ್ವವು ಹೇಗೆಂದರೆ—) ಆಗಮೇನ=ಆಗಮದಿಂದ, (ರಾಮಕೃಷ್ಣಾದ್ಯವತಾರಗಳಿಗೆ) ವಿಷ್ಣುತ್ವಂ = ವಿಷ್ಣುತ್ವವನ್ನು, ಜ್ಞಾತ್ವಾ = ತಿಳಿದು, ಅತ್ರ= ರಾಮಕೃಷ್ಣಾದಿ ರೂಪಿಯಾದ ವಿಷ್ಣುವಿನಲ್ಲಿ, ದೋಷಃ = ದೋಷವು, ಕಲ್ಪ್ಯತೇ=ಕಲ್ಪಿಸಲ್ಪಡುತ್ತದೆ. (ರಾಮಕೃಷ್ಣಾದಿಗಳಲ್ಲಿ ವಿಷ್ಣುತ್ವವು ತಿಳಿಯಬೇಕೆಂದಾದರೆ ಅದನ್ನು ತಿಳಿಸತಕ್ಕ ಆಗಮಕ್ಕೆ ಉಪಜೀವ್ಯತ್ವವು ಆಗುವುದು. ಅದನ್ನು ತಿಳಿಯಬೇಕಾದ್ದೇ ಇಲ್ಲವೆಂದರೆ—) ನ ಚೇತ್ = ರಾಮಕೃಷ್ಣಾದಿಗಳಲ್ಲಿ ವಿಷ್ಣುತ್ವವು ತಿಳಿಯಲ್ಪಡದಿದ್ದರೆ, (ಆಗ ರಾಮಕೃಷ್ಣಾದಿಗಳಲ್ಲಿ ದೋಷಗ್ರಾಹಿಯಾದ ಪ್ರತ್ಯಕ್ಷದಿಂದ) ಅನ್ಯಃ=ವಿಷ್ಣುವಿನಿಂದ ಇತರನು, ದೋಷವಾನ್=ದೋಷವುಳ್ಳವನೆಂದು, ಸ್ಯಾತ್=ಗೃಹೀತನಾಗುವನು. (ವಿಷ್ಣುವು ದೋಷವುಳ್ಳವನೆಂದು ಗ್ರಹಿಸಿದಂತೆ ಆಗುವುದಿಲ್ಲ. ಆದುದರಿಂದ ವಿಷ್ಣುವಿನಲ್ಲಿ ದೋಷಗ್ರಾಹಕ ಪ್ರತ್ಯಕ್ಷವಿದೆ ಎಂದು ಹೇಳುವವನು ರಾಮಕೃಷ್ಣಾದಿಗಳಲ್ಲಿ ವಿಷ್ಣ್ವಭೇದವನ್ನು ಶಾಸ್ತ್ರದಿಂದ ತಿಳಿಯಲೇ ಬೇಕು ) (ವಿಷ್ಣುತ್ವವನ್ನು ತಿಳಿಯಬೇಕಾಗಿದ್ದರೂ ಆಗಮಕ್ಕೆ ಉಪಜೀವ್ಯತ್ವವಿಲ್ಲ. ಏಕೆಂದರೆ— ಶ್ರೀವತ್ಸ-ಕೌಸ್ತುಭಾದಿ ಲಕ್ಷಣದಿಂದ ರಾಮಕೃಷ್ಣಾದಿಗಳಲ್ಲಿ ವಿಷ್ಣುತ್ವವನ್ನು ಅನುಮೇಯಿಸಿಕೊಂಡು, ವಿಷ್ಣುವು ದೋಷವುಳ್ಳವನೆಂದು ಪ್ರತ್ಯಕ್ಷದಿಂದ ತಿಳಿಯಲ್ಪಡುತ್ತದೆ ಎಂದರೆ—) ಲಕ್ಷಣಂ=ಶ್ರೀವತ್ಸ ಮೊದಲಾದ ಲಕ್ಷಣವು ವಿಷ್ಣುತ್ವದಿಂದ ವ್ಯಾಪ್ತವಾಗಿದೆ ಎನ್ನುವುದು, ಶಾಸ್ತ್ರಸಿದ್ಧಂ ಹಿ=ಶಾಸ್ತ್ರದಿಂದಲೇ ಸಿದ್ಧವಾಗಿದೆ. (ಹೀಗೆ ಹೇಳಿದರೂ ಹಿಂದೆ ಹೇಳಿದ ವ್ಯಾಪ್ತಿಯನ್ನು ತಿಳಿಸಿಕೊಡತಕ್ಕ ಆಗಮಕ್ಕೆ ಉಪಜೀವ್ಯತ್ವವು ತಪ್ಪಿದ್ದಲ್ಲ.) || ೧೬೫ || ೧೬೬ ||

ಹಾಗಾದರೆ— ರಾಮಕೃಷ್ಣಾದಿಗಳಲ್ಲಿ ವಿಷ್ಣುತ್ವಜ್ಞಾನವಿಲ್ಲವಾದರೆ ವಿಷ್ಣುವಿನಿಂದ ಭಿನ್ನನು ದೋಷವುಳ್ಳವನೆಂದು ಹೇಗೆ ಪ್ರತ್ಯಕ್ಷದಿಂದ ಸಿದ್ಧಿಸುತ್ತದೆ? ವಿಷ್ಣುತ್ವದಂತೆಯೇ ವಿಷ್ಣುವಿನಿಂದ

ಅನ್ಯತ್ವವೂ ರಾಮಕೃಷ್ಣಾದಿಗಳಲ್ಲಿ ಅಜ್ಞಾತವಾಗಿರುವುದರಿಂದ ಎಂದರೆ— ಹೀಗಾದರೆ ಆ ಪ್ರತ್ಯಕ್ಷವು ವಿಷ್ಣುವಿನಲ್ಲಿ ದೋಷಗ್ರಾಹಕವಲ್ಲವೆಂದಾಗುತ್ತದೆ ಎನ್ನುತ್ತಾರೆ—

**ಮೂ ॥ ಕಸ್ಯಚಿದ್ದೋಷವತ್ತ್ವಂ ಸ್ಯಾದಿತಿ ಮಾತ್ರೇಽಕ್ಷಜಂ ವದೇತ್ ।**
**ನ ವಿಷ್ಣೋರ್ದೋಷವತ್ತ್ವೇ ಹಿ ಪ್ರತ್ಯಕ್ಷಂ ವರ್ತತೇ ಸ್ವತಃ ॥ ೧೬೮ ॥**
**ಕೇಚಿತ್ಪಶ್ಯಂತಿ ದೋಷಾನಿತ್ಯತ್ರಾಪಿ ಸ್ಯಾನ್ನಚಾಕ್ಷಜಂ ।**
**ಪೌರಾಣಂ ವಾಕ್ಯಮೇವಾತ್ರ ತಚ್ಛ್ರುತ್ಯೈವ ವಿರುಧ್ಯತೇ ॥ ೧೬೯ ॥**

ಅ ॥ ಕಸ್ಯಚಿತ್=ಯಾರಿಗೊಬ್ಬನಿಗೆ, ದೋಷವತ್ತ್ವಂ=ದೋಷವುಳ್ಳತನವು, ಸ್ಯಾತ್=ಆಗುವುದು, ಇತಿ ಮಾತ್ರೇ=ಇಷ್ಟೇ ವಿಷಯದಲ್ಲಿ, ಅಕ್ಷಜಂ=ಪ್ರತ್ಯಕ್ಷವು, ಭವೇತ್=ಆಗುವುದು. (ಅಂದರೆ— ಶ್ರೀ ವಿಷ್ಣುವು ದೋಷವುಳ್ಳವನು ಎನ್ನುವ ಜ್ಞಾನವು ಹುಟ್ಟದೆ ಹೋಗಬೇಕಾಗುವುದು ಎನ್ನುವಲ್ಲಿಯೇ ತಾತ್ಪರ್ಯವು.) (ಹಾಗಾದರೆ ಹೇಗೆ ಈ ಪಟವು ಹರದದ್ದು, ಸುಟ್ಟದ್ದು, ಮಲಿನವಾದದ್ದು ಎಂದು ಪರಾನುಪಜೀವಿಯಾದ ಪ್ರತ್ಯಕ್ಷದಿಂದಲೇ ಗೃಹೀತವಾಗುತ್ತದೋ, ಹಾಗೆಯೇ ಆಗಮಾದಿಗಳನ್ನು ಉಪಜೀವಿಸದೆ ಪ್ರತ್ಯಕ್ಷದಿಂದಲೇ ಶ್ರೀ ಹರಿಯು ದೋಷವುಳ್ಳವನು ಎಂದು ತಿಳಿಯಲ್ಪಡುತ್ತದೆ ಎಂದರೆ— ) ವಿಷ್ಣೋಃ=ಶ್ರೀ ಹರಿಗೆ, ದೋಷವತ್ತ್ವೇ=ದೋಷವುಳ್ಳತನದಲ್ಲಿ, ಪ್ರತ್ಯಕ್ಷಂ=ಪ್ರತ್ಯಕ್ಷವು, ಸ್ವತಃ=ಇನ್ನೊಂದನ್ನುಪಜೀವಿಸದೆ, ನ ವರ್ತತೇ=ಇರುವುದಿಲ್ಲ. (ಕಾರಣಾಂತರದಿಂದಲೂ ದೋಷಗ್ರಾಹಕ ಪ್ರತ್ಯಕ್ಷವು ಅಪ್ರಮಾಣವೆಂದು ತೋರಿಸುತ್ತಾರೆ.) ಕೇಚಿತ್=ಕೆಲವರು, ದೋಷಾನ್=ದೋಷಗಳನ್ನು, ಪಶ್ಯಂತಿ=ನೋಡುತ್ತಾರೆ. ಇತ್ಯತ್ರಾಪಿ = ಎನ್ನುವಲ್ಲಿಯೂ, ಅಕ್ಷಜಂ=ಪ್ರತ್ಯಕ್ಷವು, ನ ಸ್ಯಾತ್=ಆಗಲಾರದು. (ಭಗವದ್ರೂಪಗಳಿಗೆ ದೋಷವದೆ ಎನ್ನುವಲ್ಲಿ ಪ್ರತ್ಯಕ್ಷವು ಪ್ರಮಾಣವೆಂದು ಹೇಳುವವನನ್ನು ಕುರಿತು ಪ್ರಶ್ನಿಸಬೇಕು. ಆ ಕಾಲದಲ್ಲಿರತಕ್ಕ ಕೆಲವು ಪುರುಷರು ಭಗವದ್ರೂಪಗಳಲ್ಲಿ ದೋಷಗಳನ್ನು ನೋಡುತ್ತಾರೆ ಎನ್ನುವ ಅರ್ಥದಲ್ಲಿ ನಮಗೆ ಯಾವುದು ಪ್ರಮಾಣವು, ೧ ಪ್ರತ್ಯಕ್ಷವೋ, ೨ ಅನುಮಾನವೋ, ೩ ಆಗಮವೋ? ೧ ಪರಮಪುರುಷರಲ್ಲಿರತಕ್ಕ ಪ್ರತ್ಯಕ್ಷದಲ್ಲಿ ಪರರಿಗೆ ಪ್ರತ್ಯಕ್ಷ ಕೂಡದಿರುವುದರಿಂದ ಪ್ರತ್ಯಕ್ಷವಲ್ಲ. ೨ ಲಿಂಗವಿಲ್ಲದಿರುವುದರಿಂದ ಅನುಮಾನವೂ ಕೂಡಲಾರದು. ೩ ಆಗಮವೂ ಕೂಡ ಅಂತಹ ಅಪೌರುಷೇಯಾಗಮವು ಕಾಣದಿರುವುದರಿಂದ ಅಪೌರುಷೇಯುವಾದ ಪುರಾಣಾದಿಗಳನ್ನೇ ಅಂಗೀಕರಿಸಬೇಕು ಎನ್ನುತ್ತಾರೆ.) ಅತ್ರ=ಭಗವದ್ರೂಪಗಳಲ್ಲಿ ದೋಷಗ್ರಾಹಿಯಾದ ಪ್ರತ್ಯಕ್ಷವದೆ ಎನ್ನುವಲ್ಲಿ, ಪೌರಾಣಂ=ಪುರಾಣಸಂಬಂಧಿಯಾದ, ವಾಕ್ಯಮೇವ=ವಾಕ್ಯವನ್ನೇ, ವಕ್ತವ್ಯಂ = ಹೇಳತಕ್ಕುದು. ತತ್ = ಅದು, ಶ್ರುತ್ಯೈವ = ಶ್ರುತಿಯಿಂದಲೇ, ವಿರುಧ್ಯತೇ=ವಿರುದ್ಧವಾಗುತ್ತದೆ.

ತಾ ॥ **ನ್ಯಾಯಸುಧಾ**— (1) ರಾಮಕೃಷ್ಣಾದಿಗಳಲ್ಲಿ ದೋಷಗ್ರಾಹಿಯಾದ ಪ್ರತ್ಯಕ್ಷವು ಮೂರುಪ್ರಕಾರ ಹುಟ್ಟಬೇಕು. ೧ 'ವಿಷ್ಣುರಯಂ ದೋಷವಾನ್'=ಈ ವಿಷ್ಣುವು ದೋಷವುಳ್ಳವನು ಎಂದಾಗಲೀ, ೨ 'ವಿಷ್ಣೋರನ್ಯೋಽಯಂ ದೋಷವಾನ್'=ವಿಷ್ಣುವಿನಿಂದ ಇತರನಾದ ಇವನು ದೋಷವುಳ್ಳವನು ಎಂದಾಗಲೀ, ೩ 'ಕಶ್ಚಿದಯಂ ದೋಷವಾನ್'=ಯಾರೋ ಒಬ್ಬ ಇವನು ದೋಷವುಳ್ಳವನು ಎಂದಾಗಲೀ ಹೇಳಬೇಕು. ಬೇರೆಪ್ರಕಾರಗಳು ಕೂಡಲಾರವು. ಅವುಗಳಲ್ಲಿ ಎರಡನೇದರದಲ್ಲಿಯೂ, ಮೂರನೇದರದಲ್ಲಿಯೂ ವಿಷ್ಣುವಿಗೆ ದೋಷವದೆ ಎನ್ನುವಲ್ಲಿ ಅದನ್ನು ಹ್ಯಾಪಿಸಲಿಕ್ಕೆ ಸಾಧ್ಯವಿಲ್ಲ. 'ವಿಷ್ಣುರ್ದೋಷವಾನ್' ಎಂದು ಅದರಿಂದ ತಿಳಿಯುವುದಿಲ್ಲ. ೧ನೇ

ಕಲ್ಪದಲ್ಲಿ ವಿಷ್ಣುತ್ವವನ್ನು ಸರ್ವಥಾ ತಿಳಿಯಬೇಕು. ಆದಾದರೂ **'ದೇವಕ್ಯಾಂ ದೇವರೂಪಿಣ್ಯಾಂ ವಿಷ್ಣುಃ ಸರ್ವ ಗುಹಾಶಯಃ । ಆವಿರಾಸೀತ್'** ಇತ್ಯಾದ್ಯಾಗಮದಿಂದಲಾಗಲೀ, ಆಗಮ ದಿಂದ ತಿಳಿಯಲ್ಪಟ್ಟ ವ್ಯಾಪ್ತಿಯುಳ್ಳ ಅನುಮಾನದಿಂದಲಾಗಲೀ ತಿಳಿಯಬೇಕು. ಅಂತೂ ಸರ್ವಥಾ ಪ್ರತ್ಯಕ್ಷಕ್ಕೆ ಆಗಮವು ಉಪಜೀವ್ಯವೆಂದು ಅಂಗೀಕರಿಸಬೇಕು. ಆ ಆಗಮವು ಸರ್ವ ರೂಪಗಳಿಂದ ಯುಕ್ತನಾದ ವಿಷ್ಣುವಿಗೆ ನಿರ್ದೋಷತ್ವವನ್ನು ಪ್ರತಿಪಾದಿಸುವುದರಿಂದ ಅದರ ವಿರೋಧದಿಂದ ದೋಷವಿಷಯಕವಾದ ಪ್ರತ್ಯಕ್ಷವು ಅಪ್ರಮಾಣವೇ ॥ ೧೬೮ ॥ ೧೬೯ ॥

ಪುರಾಣವಾಕ್ಯಕ್ಕೆ ಶ್ರುತಿವಿರೋಧವಿದ್ದರೆ ಏನು ದೋಷವೆಂದರೆ—

**ಮೂ ॥ ಪುರಾಣಸ್ಯೋಪಜೀವ್ಯಶ್ಚ ವೇದ ಏವ ನ ಚಾಪರಃ ।**
**ತದ್ವಿರೋಧೇ ಕಥಂ ಮಾನಂ ತತ್ತತ್ರ ಚ ಭವಿಷ್ಯತಿ ॥ ೧೭೦ ॥**
**ಅಪರೀಕ್ಷಿತದೃಷ್ಟಿಶ್ಚ ಕಥಮೇವಾಕ್ಷಜಂ ಭವೇತ್ ।**
**ಯದ್ಯೇವಂ ದೇವದತ್ತಾದಿಭ್ರಮಃ ಕಿಂ ನಾಕ್ಷಜಂ ಭವೇತ್ ॥ ೧೭೧ ॥**

ಅ ॥ ಪುರಾಣಸ್ಯ=ಪುರಾಣಕ್ಕೆ, ಉಪಜೀವ್ಯಃ=ಉಪಜೀವ್ಯವಾದುದು, ವೇದಃ=ವೇದವೇ. (ಪುರಾಣವಾಕ್ಯಕ್ಕೆ ವೇದವೇ ಮೂಲವು ಹೇಗೆಂದರೆ–)ಅಪರಃ=ಪೌರುಷೇಯ ಗ್ರಂಥವು, ನ ಚ= (ಪ್ರತ್ಯಕ್ಷಾದಿಗಳೂ ಕೂಡ) ಅಲ್ಲ. (ಪೌರುಷೇಯಾಗಮವು ಪುರಾಣಕ್ಕೆ ಮೂಲವೆಂದು ಹೇಳ ಕೂಡದು. ಅದಕ್ಕೂ ಕೂಡ ಪೌರುಷೇಯರೂಪವಾದ ಮೂಲ ಪ್ರಮಾಣವನ್ನು ಅಪೇಕ್ಷಿಸಿದರೆ ಅಂಥ ಪರಂಪರೆಯಾಗಿರಬೇಕಾಗುವುದು. ಪ್ರತ್ಯಕ್ಷ ಅನುಮಾನಗಳು ಪುರಾಣದ ಅರ್ಥಭೂತ ಗಳಾದ ಧರ್ಮಾದ್ಯತೀಂದ್ರಿಯ ವಸ್ತುಗಳನ್ನು ವಿಷಯೀಕರಿಸದೆ ಇರುವುದರಿಂದ ಅವುಗಳೂ ಮೂಲವಾಗಲಾರವು. ಆದಕಾರಣ ಪರಿಶೇಷತಃ ವೇದವೇ ಪುರಾಣಕ್ಕೆ ಉಪಜೀವ್ಯವೆಂದು ಸಿದ್ಧ ವಾಯಿತು) (ಅದರಿಂದ ಏನಾಯಿತೆಂದರೆ—) ತದ್ವಿರೋಧೇ=ಉಪಜೀವ್ಯವಾದ ವೇದವಿರೋಧ ವಿದ್ದರೆ, ತತ್=ಪುರಾಣವಾಕ್ಯವು, ತತ್ರ=ಶ್ರೀ ಹರಿಗೆ ಸದೋಷತ್ವ ವಿಷಯದಲ್ಲಿ, ಮಾನಂ= ಪ್ರಮಾಣವು, ಕಥಂ = ಹೇಗೆ, ಭವಿಷ್ಯತಿ = ಆಗುವುದು. (ಉಪಜೀವ್ಯದಿಂದ ವಿರುದ್ಧವಾದ ಉಪಜೀವಕಕ್ಕೆ ಅಪ್ರಾಮಾಣ್ಯವನ್ನು ಅವಶ್ಯವಾಗಿ ಹೇಳಬೇಕು.) ಪ್ರಮಾಣವೆಂದಾಗಲೀ, ಅಪ್ರ ಮಾಣವೆಂದಾಗಲೀ (ಅಪರೀಕ್ಷಿತವಾದ ಪ್ರತೀತಿಮಾತ್ರವೆಂದು ಪ್ರತ್ಯಕ್ಷತ್ವವನ್ನು ಪುರಾಣವಾಕ್ಯವು ತಿಳಿಸುತ್ತದೆ ಎನ್ನುವ ಪಕ್ಷವನ್ನು ದೂಷಿಸುತ್ತಾರೆ.) ಅಪರೀಕ್ಷಿತದೃಷ್ಟಿಶ್ಚ = ಅಪರೀಕ್ಷಿತ ದೃಷ್ಟಿ ಯಾದರೂ, ಅಕ್ಷಜಂ=ಪ್ರತ್ಯಕ್ಷವು, ಕಥಮೇವ=ಹೇಗೆತಾನೆ, ಭವೇತ್=ಆಗುವುದು? (ಅಂದರೆ, ಅಂತಹ ಪ್ರತೀತಿಯು, ಪ್ರತ್ಯಕ್ಷ ಪ್ರಮಾಣವಾಗಿ ಅಭಿಲಷಿತವಾದ ಅರ್ಥದಲ್ಲಿ ಉದ್ಭಾವಿಸಲಿಕ್ಕೆ ಶಕ್ಯವಾಗುವುದಿಲ್ಲ. ಪ್ರಮಾಣವೆಂದು ಅವಧಾರಿತವಾಗಿರುವುದನ್ನು ಪ್ರಮಾಣವೆಂದು ಉದ್ಭಾವಿಸು ವವನು ಪರೀಕ್ಷಕನು ಆಗಲಾರನು.)(ಹೀಗೆ ಅಂಗೀಕರಿಸದೆ ಇದ್ದರೆ ಬಾಧಕವನ್ನು ಹೇಳುತ್ತಾರೆ) ಯದಿ = ಯಾವಪಕ್ಷದಲ್ಲಿ, ಏವಂ = ಹೀಗೆ, (ಪ್ರಮಾಣವೆಂದು ಅಪರೀಕ್ಷಿತವಾದುದಾಗ್ಯೂ ಪ್ರತ್ಯಕ್ಷವೆಂದು ಉದ್ಭಾವಿಸಲ್ಪಡುತ್ತದೋ, ಹಾಗಾದರೆ) ದೇವದತ್ತಾದಿ ಭ್ರಮಃ = ಯಜ್ಞದತ್ತ ಶುಕ್ತ್ಯಾದಿಗಳಲ್ಲಿ ದೇವದತ್ತ ರಜತಾದಿ ಭ್ರಮವು, ಅಕ್ಷಜಂ = ಪ್ರತ್ಯಕ್ಷಪ್ರಮಾಣವು ಕಿಂ ನ ಭವೇತ್ = ಏಕೆ ಆಗಲಾರದು? (ಆದುದರಿಂದ, ಅಪ್ರಮಾಣವಾಗಿ ತೋರುತ್ತದೆ ಎನ್ನುವ ಮೂರನೇ ಪಕ್ಷವನ್ನೇ ಅಂಗೀಕರಿಸಬೇಕು.) ॥ ೧೭೦ ॥ ೧೭೧ ॥

ಸ. ರ. ವಿ— ಹಾಗಾದರೆ ಭಗವಂತನ ಅವತಾರಗಳಲ್ಲಿ 'ಅಯಂ ದೋಷವಾನ್' ಎಂದು ಹುಟ್ಟತಕ್ಕ ದರ್ಶನವನ್ನು ಉಪಜೀವಿಸಿಕೊಂಡು ಪ್ರವೃತ್ತವಾಗತಕ್ಕ ಇವನು ದೋಷವುಳ್ಳವನಲ್ಲ ಎನ್ನುವ ಬಾಧಕ ಪ್ರಮಾಣಕ್ಕೆ ಉಪಜೀವ್ಯವಿರೋಧವು ಬರಬೇಕಾಗುವುದು ಎಂದರೆ—

ಮೂ ॥ ಯಾವಚ್ಛಕ್ತಿಪರೀಕ್ಷಾಯಾಮುಪಜೀವ್ಯಸ್ಯ ಬಾಧನೇ ।
ದೋಷೋ ನಾಶೋಧಿತೇ ದೋಷ ಉಪಜೀವ್ಯತ್ವಮಸ್ತ್ವಲಂ ॥೧೭೨॥
ಭ್ರಮೇಽಪ್ಯಭ್ರಮಭಾಗೋಽಸ್ತಿ ತನ್ಮಾತ್ರಮುಪಜೀವ್ಯ ಹಿ ।
ಬಾಧಕಜ್ಞಾನವೃತ್ತಿ ಸ್ಯಾನ್ನ ಚೈವಂ ಸುಪರೀಕ್ಷಿತೇ ॥ ೧೭೩ ॥
ಸರ್ವಂ ತದುಪಜೀವ್ಯೈವ ಪ್ರಮಾಣಂ ವರ್ತತೇ ಯತಃ ।
ಕಥಂ ಬ್ರಹ್ಮೇತಿ ತಜ್ಜ್ಞೇಯಂ ಸರ್ವಜ್ಞತ್ವಾದಿಲಕ್ಷಣಂ ॥ ೧೭೪ ॥
ವಿಹಾಯ ಯಸ್ಮಾತ್ಕಸ್ಮಾಚ್ಚಿತ್ಸ್ವರೂಪಸ್ಯೈವ ಚೇದ್ಯದಿ ।
ಉಪಜೀವ್ಯತ್ವಮೇತಸ್ಮಾದ್ವ್ಯಾವೃತ್ತಂ ಯಾವತಾ ಭವೇತ್ ।
ತಾವತೈವೋಪಜೀವ್ಯತ್ವಂ ಸ್ವರೂಪಸ್ಯೈವ ನ ಕ್ವಚಿತ್ ॥ ೧೭೫ ॥

ಅ ॥ ಯಾವಚ್ಛಕ್ತಿ=ಶಕ್ತ್ಯನುಸಾರವಾಗಿ, ಪರೀಕ್ಷಾಯಾಂ=ಪರೀಕ್ಷೆಯಾಗುತ್ತಿರಲು, (ಪ್ರಮಾಣವೆಂದು ಪ್ರತೀತವಾದ) ಉಪಜೀವ್ಯಸ್ಯ = ಉಪಜೀವ್ಯಕ್ಕೆ, ಬಾಧನೇ = ಬಾಧವು, (ಉಪಜೀವಕದಿಂದ ಮಾಡಲ್ಪಡುತ್ತಿರಲು) ದೋಷಃ=ನಮಗೆ ಅಭಿಮತವಾದ ನಿಯಮಭಂಗರೂಪ ದೋಷವು, ಸ್ಯಾತ್=ಬರುವುದು. ಅಶೋಧಿತೇ=ಉಪಜೀವ್ಯವು ಶೋಧಿತವಾಗದೆ ಇರುತ್ತಿರಲು, (ಅಂದರೆ— ಪರೀಕ್ಷೆಯಿಂದ ಅಪ್ರಮಾಣವೆಂದು ನಿಶ್ಚಿತವಾದುದು ಉಪಜೀವಕದಿಂದ ಬಾಧಿಸಲ್ಪಡುತ್ತಿರಲು) ದೋಷಃ=ದೋಷವು, ನ=ಇಲ್ಲ. (ಪೂರ್ವೋತ್ತರಜ್ಞಾನಗಳಿಗೆ) ಉಪಜೀವ್ಯತ್ವಂ= ಉಪಜೀವ್ಯತ್ವವೂ, ಉಪಜೀವಕತ್ವವೂ ಕೂಡ, ಅಲಂ ಅಸ್ತು = ಯಥೇಷ್ಟವಾಗಿ ಇರಲಿ. (ಅಂದರೆ— 'ಇದಂ ರಜತಂ ನೇದಂ ರಜತಂ' ಎನ್ನುವ ಜ್ಞಾನಗಳಿಗೆ ಉಪಜೀವ್ಯ-ಉಪಜೀವಕ ಭಾವವೂ, ಉಪಜೀವ್ಯಕ್ಕೆ ಉಪಜೀವಕದಿಂದ ಬಾಧಕವೂ ಕೂಡ ಇದ್ದೇ ಇದೆ. ಆದಾಗ್ಯೂ, ಪ್ರಮಾಣವೆಂದು ಪರೀಕ್ಷಿತವಾದ ಉಪಜೀವ್ಯದ ವಿರೋಧದಿಂದ ಉಪಜೀವಕವು ಬಾಧಿಸಲ್ಪಡುತ್ತದೆ ಎನ್ನುವ ನಿಯಮಕ್ಕೆ ಭಂಗವಿಲ್ಲ.) ಭ್ರಮೇಽಪಿ=ಭ್ರಮದಲ್ಲಿಯೂ ಕೂಡ, ಅಭ್ರಮಭಾಗಃ= ಅಭ್ರಮಭಾಗವು, ಅಸ್ತಿ=ಇದೆ. (ಅಂದರೆ— ಯದ್ಯಪಿ 'ಇದಂ ರಜತಂ' ಎನ್ನುವುದು ಒಂದೇ ಜ್ಞಾನವು. ಆದಾಗ್ಯೂ ವಿಷಯರೂಪವಾದ ಉಪಾಧಿವಶದಿಂದ ಎರಡು ಭಾಗವುಳ್ಳದ್ದು. ಅದರಲ್ಲಿ ಪ್ರಕಾರಾಂಶದಲ್ಲಿ ಭ್ರಮತ್ವವಿದ್ದಾಗ್ಯೂ ಧರ್ಮ್ಯಂಶದಲ್ಲಿ ಅಭ್ರಮತ್ವವೇ. ಅದಕ್ಕೆ ಯಾವಾಗಲೂ ಬಾಧವಿಲ್ಲ. ಹಾಗೆಯೇ ಇತರರೂ ಹೇಳುತ್ತಾರೆ. ಎಲ್ಲಾ ಜ್ಞಾನವೂ ಧರ್ಮಿಯಲ್ಲಿ ಪ್ರಮಾಣವು; ಪ್ರಕಾರದಲ್ಲಿ ವ್ಯತ್ಯಾಸವು ಎನ್ನುತ್ತಾರೆ. ಭಾಗವನ್ನು ಅಂಗೀಕರಿಸಿದ್ದುದರಿಂದಲೇ ವಿರೋಧಕ್ಕೆ ಅವಕಾಶವಿಲ್ಲ.) (ಆದರಿಂದ ಪ್ರಕೃತವೇನಾಯಿತೆಂದರೆ—) ತನ್ಮಾತ್ರಂ = ಕೇವಲ ಅಭ್ರಮ ಭಾಗವನ್ನು, ಉಪಜೀವ್ಯ = ಉಪಜೀವಿಸಿಕೊಂಡು, ಬಾಧಕಜ್ಞಾನವೃತ್ತಿ = ಬಾಧಕಜ್ಞಾನದ ಪ್ರವೃತ್ತಿಯು, ಸ್ಯಾತ್=ಆಗುವುದು. ಹಿ=ರಜತಾಕಾರಕ್ಕೆ ನಿಷೇಧತ್ವವಿದ್ದುದರಿಂದ ಧರ್ಮಿತ್ವವಿಲ್ಲವೆನ್ನುವುದು ಪ್ರಸಿದ್ಧವು. (ಅಂದರೆ— ಯಾವುದು ಉಪಜೀವ್ಯವಾದ ಧರ್ಮ್ಯಂಶವೋ ಅದು ಉಪಜೀವಕದಿಂದ ಬಾಧಿಸಲ್ಪಡುವುದಿಲ್ಲ. ಯಾವುದು ಬಾಧಿಸಲ್ಪಡುತ್ತದೋ ಆ ಪ್ರಕಾರಾಂಶವು

ಉಪಜೀವ್ಯವಲ್ಲ. ಆದ ಕಾರಣ ಇದು ನಮ್ಮ ನಿಯಮಭಂಗಕ್ಕೆ ಉದಾಹರಣವಲ್ಲ.) (ಅಂತೂ ಶಕ್ತ್ಯನುಸಾರವಾಗಿ ಪರೀಕ್ಷಿತವೇ ಆದ ಉಪಜೀವ್ಯವು ಉಪಜೀವಕದಿಂದ ಬಾಧಿಸಲಿಕ್ಕೆ ಶಕ್ಯವಾಗುವುದಿಲ್ಲ. ಅಪರೀಕ್ಷಿತವಾದ ಉಪಜೀವ್ಯವಾದರೂ ಉಪಜೀವಕದಿಂದ ಬಾಧಿತವೇ ಆಗುತ್ತದೆ. ಶುಕ್ತಿಕಾಶಕಲದಲ್ಲಿ 'ಇದಂ ರಜತಂ' ಎಂದು ಅಪರೀಕ್ಷಿತವಾದ ಜ್ಞಾನದಿಂದ ಗೃಹೀತವಾದ ಇದಮಂಶವನ್ನು ಉಪಜೀವಿಸಿಕೊಂಡು, ಅಪರೀಕ್ಷಿತವಾದ ರಜತಾಂಶಕ್ಕೆ 'ನೇದಂ ರಜತಂ' ಎನ್ನುವುದರಿಂದ ಬಾಧವು ದೃಷ್ಟವಾಗಿದೆ.) (ಹೀಗೆ ಸುಪರೀಕ್ಷಿತವಾದ ಉಪಜೀವ್ಯಕ್ಕೆ ಉಪಜೀವಕದಿಂದ ಬಾಧವು ಬರಲಾರದು ಎನ್ನುತ್ತಾರೆ) ಸುಪರೀಕ್ಷಿತೇ=ಪ್ರಥಮಪ್ರಮಾಣವು ಚೆನ್ನಾಗಿ ಪರೀಕ್ಷಿತವಾಗುತ್ತಿರಲು, ಏವಂ = ಹೀಗೆ, ನ ಚ=ಇಲ್ಲ. (ಅಂದರೆ— 'ಇದಂ ರಜತಂ' ಎನ್ನುವ ಜ್ಞಾನವು ಉಪಜೀವ್ಯವಾದುದಾಗ್ಯೂ ಅಪರೀಕ್ಷಿತವಾಗಿರುವುದರಿಂದ ಉಪಜೀವಕವಾದ 'ನೇದಂ ರಜತಂ' ಎನ್ನುವ ಜ್ಞಾನದಿಂದ ಬಾಧಿಸಲ್ಪಡುತ್ತದೆ. ಉಪಜೀವ್ಯ-ಉಪಜೀವಕ ನ್ಯಾಯವು ಯಾವಚ್ಛಕ್ತಿಪರೀಕ್ಷಾವಿಷಯವಾಗಿದೆ ಎಂದು ನಾವು ಹೇಳಿರುವೆವು. 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳೂ 'ಅಹಂ ದುಃಖೀ' ಇತ್ಯಾದಿಗಳೂ ಚೆನ್ನಾಗಿ ಪರೀಕ್ಷಿತಗಳಾಗಿರುವುದರಿಂದ ಅದು ಬಾಧಿತಗಳಾಗಲಾರವು. ಮತ್ತು 'ಯಃ ಸರ್ವಜ್ಞಃ' ಇತ್ಯಾದಿ ಶ್ರುತಿಗಳು ತತ್ತ್ವಾವೇದಕಗಳೆಂದೂ ಸಾಕ್ಷಿಯು ನಿಯತ ಯಾಥಾರ್ಥ್ಯವುಳ್ಳದ್ದೆಂದೂ ಉಪಪಾದಿಸಿರುವರು.) ಯತಃ=ಯಾವ ಕಾರಣದಿಂದ, ತತ್ಸರ್ವಂ=ಆ ಸರ್ವಜ್ಞಾದಿಗಳೆಲ್ಲವನ್ನು, ಉಪಜೀವ್ಯೈವ = ಉಪಜೀವಿಸಿಕೊಂಡೇ, ಪ್ರಮಾಣಂ='ತತ್ತ್ವಮಸಿ' ಇತ್ಯಾದಿ ಪ್ರಮಾಣವು, ವರ್ತತೇ=ಪ್ರವೃತ್ತವಾಗುತ್ತದೋ, (ಆದುದರಿಂದ) 'ತತ್ತ್ವಮಸಿ' ಇತ್ಯಾದಿ ಆಗಮಕ್ಕೆ ಉಪಜೀವ್ಯ ವಿರುದ್ಧಾರ್ಥದಲ್ಲಿ ಪ್ರಾಮಾಣ್ಯವಿಲ್ಲ) ಹಾಗಾದರೆ— ತತ್ತ್ವಮಸಿ ಇತ್ಯಾದಿ ವಾಕ್ಯವೂ ಕೂಡ ಸ್ವರೂಪಮಾತ್ರವನ್ನು ಉಪಜೀವಿಸಿಕೊಂಡು ಪ್ರವೃತ್ತವಾಗುವುದಾದರೆ ಆಗ ಎಂತಹ ದೋಷವೆಂದರೆ—) ಸ್ವರೂಪಸ್ಯೈವ ಉಪಜೀವ್ಯತ್ವಂ ಚೇತ್=(ಧರ್ಮಗಳನ್ನು ಬಿಟ್ಟು) ಸ್ವರೂಪಕ್ಕೇನೇ ಉಪಜೀವ್ಯತ್ವವಿರುವುದಾದರೆ, ತತ್ ಕಥಂ ಜ್ಞೇಯಂ=(ಯಾವುದು 'ತತ್ತ್ವಮಸಿ' ಎನ್ನುವುದರಿಂದ ಬೋಧಿಸಲ್ಪಡುತ್ತದೋ) ಅದು ಹೇಗೆ ತಿಳಿಯಲರ್ಹವಾಗುತ್ತದೆ? (ಅಂದರೆ— ಶಬ್ದದಿಂದ ಸ್ವರೂಪವನ್ನು ಅನುವಾದ ಮಾಡಿ 'ತತ್ತ್ವಮಸಿ' ಎಂದು ಹೇಳಬೇಕು. ನಿರ್ಧರ್ಮಕವನ್ನು ಪ್ರತಿಪಾದಿಸತಕ್ಕ ಶಬ್ದವಿಲ್ಲ. ಆದುದರಿಂದ ಸ್ವರೂಪಮಾತ್ರವು ಬುದ್ಧಿಯಲ್ಲಿ ಆರೂಢವಾಗದಿರುವುದರಿಂದ ಸ್ವರೂಪಮಾತ್ರದ ಬೋಧನವೇ ಅಯುಕ್ತವು.) (ಹಾಗಾದರೆ— ಸ್ವರೂಪಮಾತ್ರವು ಉಪಜೀವ್ಯವೆಂದು ಹೇಳುವುದಿಲ್ಲ. ಮತ್ತೆ ಭೇದಕಗಳಾದ ಸರ್ವಜ್ಞತ್ವಾದಿ ಧರ್ಮಗಳನ್ನು ಬಿಟ್ಟು ತತ್ತ್ವಾದಿ ಧರ್ಮಗಳಿಂದ ವಿಶಿಷ್ಟನಿಗೆ ಉಪಜೀವ್ಯತ್ವವು ಅಂತೂ, ಯಾವ ದೋಷವೂ ಇಲ್ಲ ಎಂದರೆ—) ಯದಿ= ಯಾವ ಪಕ್ಷದಲ್ಲಿ, (ತತ್ತ್ವಾದಿ ಧರ್ಮಗಳಿಂದ ಯುಕ್ತನಿಗೆ) ಉಪಜೀವ್ಯತ್ವಂ = ಉಪಜೀವ್ಯತ್ವವಿರುವುದಾದರೆ, ಸರ್ವಜ್ಞತ್ವಾದಿ ಲಕ್ಷಣಂ=ಸರ್ವಜ್ಞತ್ವ ಮೊದಲಾದುದನ್ನು, ವಿಹಾಯ=ಬಿಟ್ಟು, ಯಸ್ಮಾತ್ ಕಸ್ಮಾಚ್ಚಿತ್ = ಯಾವುದಾದರೊಂದು ತತ್ತ್ವಾದಿ ಧರ್ಮಗಳದ್ದೆಶೆಯಿಂದ, ತತಃ ಬ್ರಹ್ಮೇತಿ=ಅವನು ಬ್ರಹ್ಮನೆಂದು, ಕಥಂ=ಹೇಗೆ, ಜ್ಞೇಯಂ=ತಿಳಿಯತಕ್ಕದು? (ಸರ್ವಜ್ಞತ್ವಾದಿಗಳನ್ನು ಬಿಟ್ಟು ಕೇವಲ ಸ್ವರೂಪಕ್ಕೇನೇ ಉಪಜೀವ್ಯತ್ವವನ್ನು ಹೇಳಿದರೆ ಬಾಧಕವನ್ನು ಹೇಳಿ ವಿಶಿಷ್ಟಕ್ಕೇನೇ ಉಪಜೀವ್ಯತ್ವವನ್ನು ಒಪ್ಪಬೇಕೆಂದು ಹೇಳುತ್ತಾರೆ.) ಏತಸ್ಮಾತ್=ಈ ಕಾರಣದಿಂದ, ಯಾವತಾ=ಯಾವ ಧರ್ಮದಿಂದ, ವ್ಯಾವೃತ್ತಂ=ವ್ಯಾವೃತ್ತವಾದುದು, ಭವೇತ್=ಆಗುವುದೋ, ತಾವತೈವ=ಆ ಧರ್ಮದಿಂದ ಯುಕ್ತನಿಗೇನೇ, ಉಪಜೀವ್ಯತ್ವಂ=ಉಪಜೀವ್ಯತ್ವವು, (ಆಗುವುದು) (ಹಾಗಾದರೆ 'ನೇದಂ ರಜತಂ' ಎನ್ನುವ ಜ್ಞಾನವು ಹೇಗೆ ಸ್ವರೂಪಮಾತ್ರವನ್ನುಪಜೀವಿಸಿಕೊಂಡು

ಪ್ರವೃತ್ತವಾಗಿದೆಯೋ ಹಾಗೆಯೇ ಇದೂ ಕೂಡ ಪ್ರವೃತ್ತವಾಗುತ್ತದೆ. ಯಾವ ದೋಷವು ಎಂದರೆ—) ಸ್ವರೂಪಸ್ಯೈವ=ಸ್ವರೂಪಕ್ಕೇನೇ, ಕ್ವಚಿತ್=ಎಲ್ಲಿಯೂ, ನ ಉಪಜೀವ್ಯತ್ವಂ=ಉಪಜೀವ್ಯತ್ವವಲ್ಲ (ಅಂತೂ ಸ್ವರೂಪಮಾತ್ರಕ್ಕೆ ಉಪಜೀವ್ಯತ್ವವು ಕೂಡಲಾರದು.)

ತಾ ॥ ಸ. ರ. ವಿ— (೧) ಸಾರ್ವಜ್ಞಾದಿ ಲಕ್ಷಣಗಳಿಂದ ವಿಶಿಷ್ಟನಾಗಿಯೇ ಬ್ರಹ್ಮನು ಪರೀಕ್ಷಿತನಾದುದರಿಂದ 'ತತ್ತ್ವಮಸಿ' ಎನ್ನುವ ವಾಕ್ಯದಿಂದ ಅಲ್ಲಿ ಯಾವುದನ್ನೂ ಬಾಧಿಸಲಿಕ್ಕೆ ಶಕ್ಯವಾಗುವುದಿಲ್ಲ ಏಕೆಂದರೆ- ಈ ವಾಕ್ಯವು ಸರ್ವಜ್ಞತ್ವಾದಿ ಲಕ್ಷಣಗಳಿಂದ ವಿಶಿಷ್ಟವೇ ಆದ ಬ್ರಹ್ಮ ಸ್ವರೂಪವನ್ನು ಉಪಜೀವಿಸಿಕೊಂಡು ಆ ಬ್ರಹ್ಮನಿಂದ ಜೀವನಿಗೆ ಅಭೇದವನ್ನು ಬೋಧಿಸುತ್ತದೆ. ಆದುದರಿಂದ ಧರ್ಮಿಗ್ರಾಹಕಪ್ರಮಾಣದಿಂದ ವಿರುದ್ಧವೇ ಆಗಿದೆ. ಬ್ರಹ್ಮ ಸ್ವರೂಪವನ್ನು ಮಾತ್ರ ಉಪಜೀವಿಸಿಕೊಂಡು ಬ್ರಹ್ಮನಿಂದ ಜೀವನಿಗೆ ಅಭೇದವು ಬೋಧಿಸಲ್ಪಡುತ್ತದೆ ಎಂದು ಹೇಳ ಕೂಡದು. ಸರ್ವಜ್ಞತ್ವಾದಿ ಲಕ್ಷಣಗಳನ್ನು ಬಿಟ್ಟು ಘಟಾದಿ ಸಾಧಾರಣವಾದ ಯಾವುದಾದ ರೊಂದು ಪದಾರ್ಥತ್ವಾದಿಗಳಿಂದ ಬ್ರಹ್ಮ ಸ್ವರೂಪವನ್ನು ನಿರ್ಧಾರಣಮಾಡಲಿಕ್ಕೆ ಶಕ್ಯವಲ್ಲ. ಆದುದರಿಂದ ಬ್ರಹ್ಮಸ್ವರೂಪವು ಉಪಜೀವ್ಯವಾದರೆ ಯಾವ ಸರ್ವಜ್ಞತ್ವಾದಿ ಲಕ್ಷಣದಿಂದ ಆ ಬ್ರಹ್ಮನು ಸರ್ವ ಪದಾರ್ಥಗಳಿಂದ ವ್ಯಾವೃತ್ತನಾಗುವನೋ ಅಂತಹ ಲಕ್ಷಣಗಳಿಂದ ಯುಕ್ತ ವಾದುದೇ ಉಪಜೀವ್ಯವೆಂದಂಗೀಕರಿಸಬೇಕು ಲಕ್ಷಣವನ್ನು ಬಿಟ್ಟು ಸ್ವರೂಪಮಾತ್ರವು ಉಪ ಜೀವ್ಯವೆಂದು ನಿರ್ಧಾರಿಸಲಿಕ್ಕೆ ಅಶಕ್ಯವು ॥ ೧೭೨ । ೧೭೩ ॥ ೧೭೪ ॥ ೧೭೫ ॥

ಈಶ್ವರನ ಸ್ವರೂಪಸಿದ್ಧಿಗಾಗಿ ಸರ್ವಜ್ಞತ್ವಾದಿಗಳನ್ನು ಬೋಧಿಸಿಕೊಡತಕ್ಕ 'ಯಃ ಸರ್ವಜ್ಞಃ' ಇತ್ಯಾದಿ ವಾಕ್ಯವು ಉಪಜೀವ್ಯವೆಂದು ಹೇಳಬೇಕಾಗಿಲ್ಲ 'ತತ್ತ್ವಮಸಿ' ಎನ್ನುವಲ್ಲಿ ಇರುವ ತತ್ ಶಬ್ದವೇ ಸರ್ವಜ್ಞತ್ವ ವಿಶಿಷ್ಟ ವಸ್ತುವನ್ನು ತಿಳಿಸಿಕೊಡುತ್ತದೆ ಎಂದರೆ—

ಮೂ ॥ ಸರ್ವಲಕ್ಷಣಯುಕ್ತಂ ಚ (ತು) ಸ್ವರೂಪಂ ಯದಿ ಭಣ್ಯತೇ ॥ ೧೭೬ ॥
ಅಸ್ತು ನೋ ನೈವ ಹಾನಿಃ ಸ್ಯಾತ್ಸ್ವಪಕ್ಷಶ್ಚಾಯಮಂಜಸಾ ।
ಯಸ್ಮಾದನ್ವಿತ ಏವಾರ್ಥಃ ಶಬ್ದಾನಾಮಪಿ ಸರ್ವಶಃ ॥ ೧೭೭ ॥
ವಿಶೇಷಸಾಮಾನ್ಯತಯಾ ಸ್ವರೂಪಮಖಿಲಂ ಭವೇತ್ ।
ಪುರೋವರ್ತಿತ್ವಪೂರ್ವಾಣಿ ದೇವದತ್ತಾದಿಕಭ್ರಮೇ ॥ ೧೭೮ ॥
ವ್ಯಾವರ್ತಯಂತಿ ತದ್ರೂಪಂ ಚೈತ್ರಮಾತ್ರಾದ್ವಿನೈವ ತು (ಹಿ) ।
ಬ್ರಹ್ಮಣೋ ನಿರ್ವಿಶೇಷತ್ವಾದ್ವ್ಯಾವರ್ತಯತಿ ಕಿಂ ಪುನಃ ॥ ೧೭೯ ॥

ಅ ॥ ಸರ್ವಲಕ್ಷಣಯುಕ್ತಂ = ಎಲ್ಲಾ ಲಕ್ಷಣಗಳಿಂದ ಕೂಡಿದ, ಸ್ವರೂಪಂ ಚ = ಸ್ವರೂಪವೇ, (ತತ್ ಶಬ್ದದಿಂದ) ಭಣ್ಯತೇ=ಹೇಳಲ್ಪಡುತ್ತದೆ. (ಈ ಪ್ರಕಾರ) ಯದಿ = ಯಾವ ಪಕ್ಷದಲ್ಲಿ, ಭಣ್ಯತೇ = ಹೇಳಲ್ಪಡುತ್ತದೋ, (ಹಾಗಾದರೆ) ಅಸ್ತು = (ಯಾವುದು ಪರರಿಂದ ಹೇಳಲ್ಪಡುತ್ತದೋ ಅದು) ಆಗಲಿ, (ಪ್ರತಿವಾದಿಯು ಹೇಳಿದ ಅರ್ಥವನ್ನು ಅಂಗೀಕರಿಸಿದರೆ ಹಾನಿಯು ಏಕೆ ಬರಬಾರದು ಎಂದರೆ—) (ಅನಭಿಮತವಾದ ಪ್ರಮೇಯವನ್ನು ಅಂಗೀಕರಿಸಿದರೆ ಹಾನಿಯು ಬರಬೇಕಾಗುವುದು. ಹೀಗೆ ಅಂಗೀಕರಿಸಿದರಿಂದ) ನಃ=ನಮಗೆ, ಹಾನಿಃ=ಹಾನಿಯು, ನೈವ ಸ್ಯಾತ್=ಆಗಲಾರದು, (ಹಾಗಾದರೆ— ಪ್ರಕೃತವಾದ ಪ್ರಮೇಯಕ್ಕೆ ವಿರೋಧವಿಲ್ಲವೆನ್ನುವ ಮಾತ್ರದಿಂದ ಪ್ರತಿವಾದಿಯು ಹೇಳಿದ್ದನ್ನು ಅಂಗೀಕರಿಸುತ್ತೀರೋ, ಅಥವಾ ಅಭಿಮತವಾಗಿ

ಇದ್ದುದರಿಂದಲೋ, ಎಂದರೆ—) ಅಂಜಸಾ=ಚೆನ್ನಾಗಿ, ಅಯಂ=ಇದು, ಸ್ವಪಕ್ಷಶ್ಚ=ನಮ್ಮ ಪಕ್ಷವೇ, ಯಸ್ಮಾತ್=ಯಾವ ಕಾರಣದಿಂದ, ಸರ್ವಶೋಽಪಿ ಶಬ್ದಾನಾಂ=ಎಲ್ಲಾ ಶಬ್ದಗಳಿಗೂ, ಅನ್ವಿತ ಏವಾರ್ಥಃ = ಯೋಗ್ಯವಾದ ಇತರದಿಂದ ಯುಕ್ತವೇ ಆದ ಅರ್ಥವು. (ಎನ್ನುವುದಿದು ಸೂತ್ರಸಾಮರ್ಥ್ಯದಿಂದ ಮೊದಲೇ ಉಪಪಾದಿತವಾಗಿದೆ.) ಅಖಿಲಂ ಸ್ವರೂಪಂ=ಯೋಗ್ಯವಾದ ಇತರರಿಂದ ಅನ್ವಿತವಾದ ಸ್ವರೂಪವು, ವಿಶೇಷಸಾಮಾನ್ಯತಯಾ=ವಿಶೇಷಸಾಮಾನ್ಯರೂಪದಿಂದ, ಭವೇತ್ = ಶಬ್ದದಿಂದ ಬೋಧ್ಯವಾಗುವುದು. (ಅನ್ವಿತಾಭಿಧಾನವನ್ನು ಅಂಗೀಕರಿಸುತ್ತೇವೆ.) ದೇವದತ್ತಾದಿಕಭ್ರಮೇ=ದೇವದತ್ತಾದಿಗಳಲ್ಲಿ ಯಾವುದು ಚೈತ್ರಾದಿಭ್ರಮವೋ ಅದರಲ್ಲಿ, ಪುರೋವರ್ತಿತ್ವ ಪೂರ್ವಾಣಿ=ಪುರೋವರ್ತಿತ್ವ ವಿಶೇಷಣಗಳು, ತದ್ರೂಪಂ=ದೇವದತ್ತಾದಿ ಸ್ವರೂಪವನ್ನು, (ದೇವದತ್ತತ್ವಾದಿಗಳು ತಿಳಿಯಲ್ಪಡದಿರುವುದರಿಂದ) ಚೈತ್ರಮಾತ್ರಾತ್ = ಕೇವಲ ಚೈತ್ರನದೆಶೆಯಿಂದ, ವಿನೈವ=ಹೊರತೇ, ಹಿ=ಯಾವ ಕಾರಣದಿಂದ, ವ್ಯಾವರ್ತಯಂತಿ = (ಅಪುರೋವರ್ತ್ಯಾದಿಗಳಿಂದ) ವ್ಯಾವರ್ತಿಸುತ್ತಾವೋ, (ಆವಕಾರಣ ಬಾಧಕಜ್ಞಾನವು ವ್ಯಾವೃತ್ತವನ್ನೇ ಉಪಜೀವಿಸುತ್ತದೆ ಎನ್ನುವ ನಿಯಮವು ಅಯುಕ್ತವಲ್ಲ. ಆರೋಪ್ಯದಿಂದ ವ್ಯಾವೃತ್ತಿಯು ಗೊತ್ತಾಗದೆ ಇರುವುದರಿಂದ (ಭ್ರಮಾನುಪಪತ್ತಿಯೂ ಇಲ್ಲ.) (ದೋಷಾಂತರವನ್ನು ಹೇಳುತ್ತಾರೆ.) ಬ್ರಹ್ಮಣಃ ಪುನಃ = ಬ್ರಹ್ಮನಿಗಾದರೂ, ನಿರ್ವಿಶೇಷತ್ವಾತ್=ವಿಶೇಷವಿಲ್ಲದಿರುವುದರಿಂದ, ಕಿಂ=ಯಾವುದು, (ಬ್ರಹ್ಮನನ್ನು) ವ್ಯಾವರ್ತಯತಿ=ವ್ಯಾವರ್ತಿಸುತ್ತದೆ (ಯಾವುದೂವ್ಯಾವರ್ತಿಸುವುದಿಲ್ಲ.) ॥ ೧೭೬ ॥ ೧೭೭ ॥ ೧೭೮ ॥ ೧೭೯ ॥

ತತ್ತ್ವಾದಿ ಧರ್ಮಗಳನ್ನು ಅಂಗೀಕರಿಸಿದರೂ ದೋಷವನ್ನು ಹೇಳುತ್ತಾರೆ—

**ಮೂ ॥ ಯಸ್ಮಾತ್ಕಸ್ಮಾಚ್ಚಿದಪ್ಯರ್ಥಾತ್ತಾವಚ್ಚೇತ್ಸಿದ್ಧಸಾಧನಂ ।**
**ಚಿನ್ಮಾತ್ರತ್ವಂ ಚ ನೈವೇಷ್ಟಮವಿಶೇಷತ್ವವಾದಿನಃ ॥ ೧೮೦ ॥**
**ತಾವನ್ಮಾತ್ರಂ ಯದೀಷ್ಟಂ ಸ್ಯಾತ್ಸರ್ವಜ್ಞತ್ವಂ ಕುತೋ ನ ತತ್ ।**
**ಚಿನ್ಮಾತ್ರಾಭೇದಸಾಧ್ಯೇಽಪಿ ಸಿದ್ಧಂ ತಚ್ಛ್ರುತಿವಾದಿನಃ ॥ ೧೮೧ ॥**
**ಸ್ವಾಭೇದಾಂಗೀಕೃತೇರೇವ ಚಿತ್ತ್ವಂ ಸ್ವಸ್ಯಾಪಿ ಯನ್ಮತಂ ।**
**ಸರ್ವಾಪೇಕ್ಷತಯಾ ಸರ್ವಜ್ಞತ್ವಮಿತ್ಯೇವ ತನ್ನಹಿ ॥ ೧೮೨ ॥**
**ಇತಿ ಚೇಚ್ಚೇತನತ್ವಂ ಚ ಜ್ಞತ್ವಂ ನ ಜ್ಞೇಯವರ್ಜಿತಂ ।**
**ಸ್ವಜ್ಞೇಯತ್ವಂ ಚ ನೈವಾಸೌ ಮನ್ಯತೇ ಸವಿಶೇಷತಃ ॥ ೧೮೩ ॥**
**ಸ್ವಶಬ್ದೋಽಪಿ ಪರಾಪೇಕ್ಷಸ್ತಸ್ಮಾದ್ವ್ಯಾವೃತ್ತಿರೇವ ಹಿ ।**
**ಸ್ವಶಬ್ದಾರ್ಥ ಇತಿ ಪ್ರೋಕ್ತಃ ಸ್ವರೂಪಂ ನಾಮ ಕಿಂ ನ ಚೇತ್ ॥ ೧೮೪ ॥**
**ರೂಪಶಬ್ದೇನ ಪೂರ್ಣತ್ವಾತ್ತಚ್ಚ ಸಾಮಾನ್ಯತಾವಚಃ ।**
**ನ ಸ್ವರೂಪಾಭಿಧಾಯೀ ಸ್ಯಾದ್ವೈಯರ್ಥ್ಯಂ ಸ್ವಪದಸ್ಯ ಯತ್॥ ೧೮೫ ॥**

ಅ ॥ ಯಸ್ಮಾತ್ ಕಸ್ಮಾಚ್ಚಿತ್ ಅಪಿ ಅರ್ಥಾತ್=(ತತ್ತ್ವಾದಿ ವಿಶೇಷಣದಿಂದ) ತತ್ವಾದಿ ರಹಿತವಾದ ಯಾವುದಾದರೊಂದು ಅರ್ಥದಿಂದ, ತಾವತ್ ಚೇತ್ = ವ್ಯಾವೃತ್ತವಾದುದನ್ನು (ಉಪಜೀವಿಸಿಕೊಂಡು 'ಅಸಿ ತ್ವಂ' ಎನ್ನುವುದರಿಂದ ಜೀವಾಭೇದವನ್ನು ಬೋಧಿಸುವುದಾದರೆ— ಆಗ ಈ ವಾಕ್ಯವು ಜ್ಞಾತವಾದ ಅರ್ಥವನ್ನೇ ತಿಳಿಸಿಕೊಡುವುದು. ಈ ಅರ್ಥವು

ಮೊದಲೇ ವಿದಿತವಾಗಿದೆ.) (ತತ್ತ್ವಾದಿಗಳಿಂದ ವ್ಯಾವೃತ್ತವಾದ ಬ್ರಹ್ಮನು ಉಪಜೀವ್ಯನು ಆಗುವುದು ಬೇಡ. 'ವಿಜ್ಞಾನಮಾನಂದಂ ಬ್ರಹ್ಮ' ಇತ್ಯಾದಿ ಶ್ರುತಿಯಿಂದ ಬ್ರಹ್ಮನಿಗೆ ಲಕ್ಷಣವಾಗಿ ಹೇಳಿದ ಚಿನ್ಮಾತ್ರತ್ವಾದಿಧರ್ಮಗಳಿಂದ ವ್ಯಾವೃತ್ತನಾದ ಬ್ರಹ್ಮನು ಉಪಜೀವ್ಯನು ಆಗುವನು ಎಂದರೆ—) ಅವಿಶೇಷತ್ವವಾದಿನಃ=ಬ್ರಹ್ಮನಿಂದ ವಿಶೇಷವಿಲ್ಲವೆಂದು ಹೇಳುವವನಿಗೆ, ಚಿನ್ಮಾತ್ರತ್ವಂ ಚ=ಕೇವಲ ಚಿತ್ಸ್ವರೂಪತ್ವವು, ನೈವೇಷ್ಟಂ=ಇಷ್ಟವೇ ಅಲ್ಲ. (ಚಿನ್ಮಾತ್ರತ್ವಾದಿಗಳು ಬ್ರಹ್ಮನಿಂದ ಭಿನ್ನವಲ್ಲ. ಆದುದರಿಂದ ನಿರ್ವಿಶೇಷತ್ವದಿಂದ ವಿರೋಧವಿಲ್ಲದಿರುವುದರಿಂದ ಚಿನ್ಮಾತ್ರತ್ವಾದಿಗಳನ್ನು ಅಂಗೀಕರಿಸುತ್ತೇವೆ ಎಂದರೆ—) ತಾವನ್ಮಾತ್ರಂ=ಅಷ್ಟುಮಾತ್ರವು, ಯದಿ = ಯಾವ ಪಕ್ಷದಲ್ಲಿ, ಇಷ್ಟಂ=ಇಷ್ಟವು, ಸ್ಯಾತ್ = ಆಗುವುದೋ, ತತ್=ಹಾಗಾದರೆ, ಸರ್ವಜ್ಞತ್ವಂ= ಸಾರ್ವಜ್ಞವು, (ಶ್ರುತವೂ, ಅಭಿನ್ನವೂ ಆಗಿರುವುದರಿಂದ) ಕುತಃ = ಯಾವುದರಿಂದ, ನ = (ಅಂಗೀಕಾರಾರ್ಹವು) ಆಗಲಾರದು. ಚಿನ್ಮಾತ್ರಾಭೇದಸಾಧ್ಯೇಽಪಿ=(ತತ್ತ್ವಮಸ್ಯಾದಿವಾಕ್ಯವು) ಚಿನ್ಮಾತ್ರದಿಂದ ಅಭೇದವೇ ಸಾಧ್ಯ (ಪ್ರತಿಪಾದ್ಯ) ವಾಗಿ ಉಳ್ಳದ್ದು ಎಂದಂಗೀಕರಿಸಿದರೂ (ಅಂದರೆ— ತತ್ತ್ವಮಸ್ಯಾದಿ ವಾಕ್ಯವು ಚಿನ್ಮಾತ್ರಕ್ಕೆ ಅಭೇದವನ್ನು ಬೋಧಿಸುತ್ತದೆ ಎಂದಂಗೀಕರಿಸಿದರೂ) ತತ್=ಆ ವಾಕ್ಯವು, ಸಿದ್ಧಸಾಧನಂ=ಸಿದ್ಧಸಾಧನವು, ಭವೇತ್=ಆಗುವುದು. (ಅದು ಹೇಗೆಂದರೆ—) (ಯತಃ=ಯಾವ ಕಾರಣದಿಂದ) ಪ್ರತಿವಾದಿನಃ=ಬೋಧ್ಯನಾದವನಿಗೆ, ತತ್=ಆ ಚಿದೈಕ್ಯವು, ಸಿದ್ಧಂ=ಸಿದ್ಧವಾಗಿದೆಯೋ, (ಹೇಗೆ ಸಿದ್ಧವಾಯಿತೆಂದರೆ—) ಸ್ವಾಭೇದಾಂಗೀಕೃತೇಃ = ತನಗೆ ತನ್ನಿಂದ ಅಭೇದವನ್ನು ಅಂಗೀಕಾರಮಾಡಿದುದರಿಂದ, ಸಿದ್ಧಮೇವ = ಸಿದ್ಧವೇ ಆಗಿದೆ. (ತನ್ನಿಂದ ತನಗೆ ಅಭೇದವನ್ನು ಅಂಗೀಕಾರಮಾಡಿದರೆ ಚಿದಭೇದವು ಹೇಗೆ ಸಿದ್ಧವಾಯಿತೆಂದರೆ—) ಚಿತ್ತ್ವಂ=ಚಿತ್ತ್ವವು, ಸ್ವಸ್ಯಾಪಿ = ಬೋಧ್ಯನಾದ ತನಗೂ ಕೂಡ, ಯತ್=ಯಾವ ಕಾರಣದಿಂದ, ಮತಂ=ಸಮ್ಮತವು (ಬ್ರಹ್ಮನಿಗೆ ಚಿತ್ತ್ವವನ್ನು ಅಂಗೀಕರಿಸಿದರೆ ಸರ್ವಜ್ಞತ್ವವನ್ನು ಏಕೆ ಅಂಗೀಕರಿಸುವುದಿಲ್ಲ ಎಂದರೆ—) ಸರ್ವಜ್ಞತ್ವಂ=ಸಾರ್ವಜ್ಞತ್ವವು, ಸರ್ವಾಪೇಕ್ಷತಯಾ=ಮಿಥ್ಯಾಭೂತಗಳಾದ ಆಕಾಶಾದಿ ಎಲ್ಲಾ ವಸ್ತುಗಳನ್ನು ಅಪೇಕ್ಷಿಸಿಕೊಂಡು (ಇದೆ.) ಇತಿ=ಮಿಥ್ಯಾಭೂತ ಪದಾರ್ಥಗಳನ್ನು ಅಪೇಕ್ಷಿಸಿಕೊಂಡು ಇದ್ದುದರಿಂದಲೇ, ತದೇವ= ಆ ಸರ್ವಜ್ಞತ್ವವೇ, ನ ಹಿ = ಮಿಥ್ಯಾಭೂತವಾದುದು. ಇತಿ ಚೇತ್ = ಹೀಗೆ ಹೇಳಿದರೆ, ಚೇತನತ್ವಂ ಚ ನ = (ಯಾವುದು ಪರಸಾಪೇಕ್ಷಿತವೋ ಅದು ಸತ್ತಲ್ಲ ಎಂದಂಗೀಕರಿಸಿದರೆ— ಬ್ರಹ್ಮನಿಗೆ) ಚೇತನತ್ವವೂ ಕೂಡ ಇಲ್ಲದೆ ಹೋಗಬೇಕಾಗುವುದು. (ಏಕೆಂದರೆ—) ಚೇತನತ್ವವಾದರೂ, ಜ್ಞತ್ವಂ=ಜ್ಞಾನಿತ್ವರೂಪವು. (ಅದರಿಂದ ಏನಾಯಿತೆಂದರೆ—) ಜ್ಞತ್ವಂ=ಜ್ಞಾನಿತ್ವವು, ಜ್ಞೇಯವರ್ಜಿತಂ = ಜ್ಞೇಯದಿಂದ ವಿರಹಿತವಾದುದು, ನ = ಇಲ್ಲ. (ಅಂದರೆ— ಜ್ಞತ್ವವು ಜ್ಞಾನಸಾಪೇಕ್ಷಿತವೇ. ಜ್ಞಾನಕ್ರಿಯೆಯನ್ನು ಕುರಿತು ಕರ್ತೃತ್ವವೇ ಜ್ಞತ್ವವು. ಆದ ಕಾರಣ ಕರ್ಮಾಪೇಕ್ಷಿತವಾದ ಕ್ರಿಯಾಕರ್ತೃತ್ವವೂ ಕೂಡ ಪರಸಾಪೇಕ್ಷಿತವೇ.) (ಆದಾಗ್ಯೂ ಚೇತನತ್ವವು ಏಕೆ ಕೂಡಲಾರದು ಎಂದರೆ— ಜ್ಞಾನಿಯಾದ ಬ್ರಹ್ಮನಿಗೆ ಜ್ಞೇಯವಾದುದು ತಾನೇ ಆಗುವುದೋ, ಮತ್ತೊಂದು ಆಗುವುದೋ, ತಾನೇ ಎಂದು ಹೇಳಲಿಕ್ಕೆ ಬರುವುದಿಲ್ಲವೆನ್ನುತ್ತಾರೆ.) ಅಸೌ = ಈ ಮಾಯಾವಾದಿಯು, ಸವಿಶೇಷತಃ = ಸವಿಶೇಷತ್ವವು ಬರಬೇಕಾಗುವುದರಿಂದ, ಸ್ವಜ್ಞೇಯತ್ವಂ=ತನಗೆ ತನ್ನಿಂದ ಜ್ಞೇಯತ್ವವನ್ನು, ನೈವ ಮನ್ಯತೇ=ತಿಳಿಯುವುದೇ ಇಲ್ಲ. (ಅಂದರೆ ಪ್ರತ್ಯಕ್-ಪರಾಗ್ಭಾವರೂಪವಾದ ಕರ್ತೃಕರ್ಮಭಾವವು ಒಂದು ಕ್ರಿಯೆಯಲ್ಲಿ ಒಬ್ಬನಿಗೆ ಕೂಡಲಾರದು. ಕೂಡಿದರೆ ಆಗ ಭೇದಪ್ರತಿನಿಧಿಯಾದ ವಿಶೇಷವನ್ನು ಅಂಗೀಕರಿಸಲೇ ಬೇಕು. ಆದ ಕಾರಣ ಬ್ರಹ್ಮನಿಗೆ ಜ್ಞತ್ವ-ಜ್ಞೇಯತ್ವಗಳನ್ನು ಅಂಗೀಕರಿಸಿದರೆ- ವಿಶೇಷವನ್ನು ಅಂಗೀಕರಿಸ

ಬೇಕಾಗುವುದು. ಬ್ರಹ್ಮನು ನಿರ್ವಿಶೇಷನೆಂದು ಅಂಗೀಕರಿಸಿದರಿಂದ ಸ್ವಜ್ಞೇಯತ್ವವನ್ನು ತಿಳಿಯುವುದಿಲ್ಲ. ಆದ ಕಾರಣ ಪರವೇ ಜ್ಞೇಯವೆಂದು ಹೇಳಬೇಕು. ಅದು ಮಿಥ್ಯಾಭೂತವು. ಆದುದರಿಂದ ಅದನ್ನು ಅಪೇಕ್ಷಿಸತಕ್ಕ ಚೇತನತ್ವವು ಹೇಗೆ ಸತ್ಯಾಗುವುದು?) (ಮತ್ತು ಹೀಗೆ ಹೇಳುವವರಿಗೆ ಸ್ವರೂಪಮಾತ್ರವು ಉಪಜೀವ್ಯವು ಎಂದೂ ಹೇಳಲಿಕ್ಕೆ ಬರುವುದಿಲ್ಲ ಅದಕ್ಕೂ ಸ್ವಶಬ್ದದಿಂದ ಪರಾಪೇಕ್ಷತ್ವವು ಪ್ರತೀತವಾಗುತ್ತದೆ ಎನ್ನುತ್ತಾರೆ ) ಸ್ವಶಬ್ದೋಽಪಿ = ಸ್ವಶಬ್ದವೂ ಕೂಡ, ಪರಾಪೇಕ್ಷಃ=ಪರಾಪೇಕ್ಷಿತವಾದ ಅರ್ಥವನ್ನು ಪ್ರತಿಪಾದಿಸತಕ್ಕುದು. ತಸ್ಮಾತ್=ಆದುದರಿಂದ, ವ್ಯಾವೃತ್ತಿರೇವ=ಪರರಿಂದ ವ್ಯಾವೃತ್ತಿಯೇ, ಸ್ವಶಬ್ದಾರ್ಥಃ = ಸ್ವಶಬ್ದದ ಪ್ರವೃತ್ತಿನಿಮಿತ್ತವು, ಇತಿ= ಈ ಪ್ರಕಾರ, ಪ್ರೋಕ್ತಃ=ಶಬ್ದವ್ಯಕ್ತಿಯನ್ನು ತಿಳಿದವರಿಂದ ಹೇಳಲ್ಪಟ್ಟದೆ. ನ ಚೇತ್=ನಮಗೆಅಭಿಮತವಾದ ವ್ಯಾಖ್ಯಾನವು ಅಂಗೀಕರಿಸಲ್ಪಡದೆ ಇದ್ದರೆ ಆಗ, ಸ್ವರೂಪಂ ನಾಮ ಕಿಂ= ಸ್ವರೂಪವೆಂದರೆ ಯಾವುದು? (ಯಾವುದೂ ಇಲ್ಲ. ಸ್ವರೂಪಶಬ್ದವು ನಿರರ್ಥಕವಾಗಬೇಕಾಗುವುದು.) (ಸ್ವರೂಪಶಬ್ದವು ರೂಪಶಬ್ದಸಮಾನಾರ್ಥಕವು. ಇದು ಹೇಗೆ ಎಂದರೆ— 'ಸ್ವಂ ಚ ತತ್ ರೂಪಂ ಚ' ಎನ್ನುವ ವ್ಯುತ್ಪತ್ತಿಯನ್ನು ಅಂಗೀಕರಿಸಿಕೊಂಡು ಹೀಗೆ ಹೇಳುವುದೋ ಅಥವಾ ಅಖಂಡವೇ ಈ ಶಬ್ದವೆಂದು ಅಂಗೀಕರಿಸಿಕೊಂಡು ಹೇಳುತ್ತೀರೋ, ೧ನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ ) ಯತ್ = ಯಾವ ಕಾರಣದಿಂದ, (ಈ ಪಕ್ಷದಲ್ಲಿ) ಸ್ವಪದಸ್ಯ = ಸ್ವಶಬ್ದಕ್ಕೆ, ವೈಯರ್ಥ್ಯಂ = ವೈಯರ್ಥ್ಯವೋ, (ಆದುದರಿಂದ ಸ್ವರೂಪವೆಂದರೆ ಯಾವುದೂ ಇಲ್ಲ ) (ಹೇಗೆ ವೈಯರ್ಥ್ಯವೆಂದರೆ —) ರೂಪಶಬ್ದೇನ ಪೂರ್ಣತ್ವಾತ್=ಸ್ವರೂಪಶಬ್ದದಲ್ಲಿ ಯಾವುದು ರೂಪಶಬ್ದವೋ ಅದರಿಂದಲೇ ರೂಪಶಬ್ದಾರ್ಥಾಭಿಧಾನಕ್ಕೆ ಪೂರ್ಣತ್ವವಿದ್ದುದರಿಂದ, (ರೂಪಶಬ್ದವು ರೂಪಶಬ್ದಾರ್ಥವನ್ನು ಹೇಳುವುದಿಲ್ಲವೆನ್ನುವುದು ಕೂಡಲಾರದು ) (ಎರಡನೇದ್ದನ್ನು ನಿರಾಕರಿಸುತ್ತಾರೆ.) ಚ = ಯಾವ ಕಾರಣದಿಂದ, ತತ್ = ರೂಪಪದವು, ಸಾಮಾನ್ಯತಾವಚಃ = ಸಾಮಾನ್ಯಾಕಾರವನ್ನು ಹೇಳುತ್ತದೋ, (ಆದುದರಿಂದ) ಸ್ವರೂಪಾಭಿಧಾಯಿ= ಸ್ವರೂಪವನ್ನು ಹೇಳತಕ್ಕುದು, ನ ಸ್ಯಾತ್=ಆಗಲಾರದು

ತಾ ॥ ಸ. ರ. ವಿ— (1) ಅನ್ಯವಸ್ತುಗಳ ಅಪೇಕ್ಷೆಯಿದ್ದುದರಿಂದ ಸರ್ವಜ್ಞತ್ವವು ಅವಸ್ತುಭೂತವಾದರೆ ಚೇತನತ್ವವೆನ್ನುವ ಜ್ಞತ್ವವು ಜ್ಞೇಯಸಾಪೇಕ್ಷಿತವಾದುದರಿಂದ ಇತರಾಪೇಕ್ಷೆಯಿದ್ದುದರಿಂದ ಅವಸ್ತುಭೂತವಾಗಬೇಕಾಗುವುದು. ತನಗೇನೇ ಜ್ಞಾತೃ-ಜ್ಞೇಯಭಾವವಿರುವುದರಿಂದ ಪರಾಪೇಕ್ಷತ್ವವು ಇಲ್ಲವೆಂದು ಹೇಳಕೂಡದು. ಸವಿಶೇಷತ್ವವು ಬರಬೇಕಾಗುವುದು. (2) ಹಾಗೆಯೇ ಅಣು-ಮಹತ್ತುಗಳಂತೆಯೇ ಸ್ವ (ತಾನು) ಪರ (ಇನ್ನೊಬ್ಬ) ಗಳಿಗೂ ಪರಸ್ಪರ ಪ್ರತಿಯೋಗಿಯಾಗಿ ವ್ಯವಹಾರವಿದ್ದುದರಿಂದ ಸ್ವಶಬ್ದಾರ್ಥಕ್ಕೆ ಪರಾಪೇಕ್ಷೆ ಇದ್ದುದರಿಂದ ಅವಸ್ತುಭೂತತ್ವವು ಬರಬೇಕಾಗುವುದು. ಪರವ್ಯಾವೃತ್ತವಾದುದೇ ಸ್ವಶಬ್ದದಿಂದ ಹೇಳಲ್ಪಡುತ್ತದೆ. ಇಲ್ಲದಿದ್ದರೆ ಸ್ವರೂಪಶಬ್ದವು ಸಾರ್ಥಕವು ಆಗದೆ ಹೋಗಬೇಕಾಗುವುದು. ರೂಪಶಬ್ದವು ಸ್ವರೂಪಶಬ್ದದಲ್ಲಿಯೂ, ಪರರೂಪಶಬ್ದದಲ್ಲಿಯೂ ಸಾಧಾರಣವಾಗಿದೆ. ಪರರೂಪವನ್ನು ವ್ಯಾವೃತ್ತೀಕರಿಸುವುದಕ್ಕಾಗಿ ಸ್ವಶಬ್ದವು ಪ್ರಯುಕ್ತವಾದುದು. ರೂಪಶಬ್ದದಿಂದಲೇ ಸ್ವಶಬ್ದಾರ್ಥವನ್ನು ಹೇಳಿದರೆ ಸ್ವಶಬ್ದವು ವ್ಯರ್ಥವಾಗಬೇಕಾಗುವುದು. (3) ಹಾಗೆಯೇ 'ಚೇತನಸ್ಯ ಭಾವಃ ಚೈತನ್ಯಂ' ಎಂದು ಜ್ಞಾನವು ಹೇಳಲ್ಪಡುತ್ತದೆ. ಅದು ಜ್ಞಾತೃ-ಜ್ಞೇಯಗಳ ಸಾಪೇಕ್ಷಿತವಾದುದರಿಂದ ಪರಾಪೇಕ್ಷವೆಂದು ಅವಸ್ತುಭೂತವಾಗಬೇಕಾಗುವುದು. ಜ್ಞೇಯ-ಜ್ಞಾತೃನಿರಪೇಕ್ಷವಾದ ಜ್ಞಾನವಾದರೂ ಜ್ಞೇಯದ ಜ್ಞಾನವಿಲ್ಲದಿರುವ ಜ್ಞಾನಿಯಂತೆ ನಿಷ್ಪ್ರಮಾಣಕವೇ ॥ ೧೪೦ ॥ ೧೪೧ ॥ ೧೪೨ ॥ ೧೪೩ ॥ ೧೪೪ ॥ ೧೪೫ ॥

ಚೇತನತ್ವವು ಬ್ರಹ್ಮನಿಗೆ ಬರಲಾರದು ಎಂದು ಯಾವುದು ಹೇಳಲ್ಪಟ್ಟದೋ ಅದು ಇಷ್ಟಾಪಾದನವು. ನಾವು ಬ್ರಹ್ಮನಿಗೆ ಚೇತನತ್ವವನ್ನು ಅಂಗೀಕರಿಸುವುದಿಲ್ಲ. ಕ್ರಿಯಾವೇಶರೂಪವಾದ ಕರ್ತೃತ್ವವು ನಿರ್ವಿಕಲ್ಪಕದಲ್ಲಿ ಇಲ್ಲ ಮತ್ತೆ ಚೈತನ್ಯವೇ ಬ್ರಹ್ಮನು ಎಂದು ಹೇಳುತ್ತೇವೆ. ಎಂದರೆ— ಚೈತನ್ಯವೂ ಕೂಡ ಪರರಿಗೆ ಅಂಗೀಕರಿಸಲಿಕ್ಕೆ ಅಶಕ್ಯವು ಎನ್ನುವ ತಾತ್ಪರ್ಯದಿಂದ ಅದನ್ನು ವ್ಯಾಖ್ಯಾನಮಾಡುತ್ತಾರೆ—

**ಮೂ ॥ ಚೇತನಸ್ಯ ಸ್ವಭಾವೋ ಹಿ ಚೈತನ್ಯಮಿತಿ ಗೀಯತೇ ।**
**ತಸ್ಮಾದ್ವಿಶೇಷಬಾಹುಲ್ಯಂ ಚೈತನ್ಯಸ್ಯ ವಿಶೇಷತಃ ॥ ೧೮೬ ॥**
**ನ ಜ್ಞೇಯಜ್ಞಾತೃಹೀನಂ ಹಿ ಜ್ಞಾನಂ ನಾಮ ಕ್ವಚಿದ್ಭವೇತ್ ।**
**ಜ್ಞೇಯಜ್ಞಾನವಿಹೀನಶ್ಚ ಜ್ಞ ಇತ್ಯತ್ರ ನ ಚ ಪ್ರಮಾ ॥ ೧೮೭ ॥**

ಅ ॥ ಚೇತನಸ್ಯ=ಚೇತನದ, ಸ್ವಭಾವಃ=ಧರ್ಮವು, ಚೈತನ್ಯಮಿತಿ = ಚೈತನ್ಯವೆಂದು, ಗೀಯತೇ=ಹೇಳಲ್ಪಡುತ್ತದೆ. ('ಚಿತೀ ಸಂಜ್ಞಾನೇ' ಎನ್ನುವ ಧಾತುಪಾಠದೆಶೆಯಿಂದ ಚೇತನಶಬ್ದ ಪ್ರವೃತ್ತಿನಿಮಿತ್ತವಾದುದು ಜ್ಞಾನವು. ಅಂತೂ ಜ್ಞಾನವು ಬ್ರಹ್ಮವೆಂದು ಹೇಳಿದಂತೆ ಆಯಿತು.) (ಅದರಿಂದ ಪ್ರಕೃತವೇನಾಯಿತೆಂದರೆ) ತಸ್ಮಾತ್ = (ಯಾವಕಾರಣದಿಂದ ಚೈತನ್ಯವೆಂದರೆ ಜ್ಞಾನವೋ) ಆದುದರಿಂದ, ಚೈತನ್ಯಸ್ಯ=ಬ್ರಹ್ಮನಿಗೆ, ವಿಶೇಷತಃ = ಅತಿಶಯದಿಂದ, ವಿಶೇಷ ಬಾಹುಲ್ಯಂ=ಧರ್ಮಬಾಹುಲ್ಯವು, (ಪ್ರಸಕ್ತವಾಗುತ್ತದೆ ) (ಹೇಗೆಂದರೆ- ಜ್ಞಾನವು ಜ್ಞೇಯ ಜ್ಞಾತೃ ಕರಣಸಾಪೇಕ್ಷಿತವಾಗಿದೆ. ಜ್ಞಾನರೂಪನಾದ ಬ್ರಹ್ಮನಲ್ಲಿ ಜ್ಞಾನತ್ವಾದಿ ಧರ್ಮಗಳನ್ನು ಅಂಗೀಕರಿಸಬೇಕು. ಅಂತೂ ಬ್ರಹ್ಮನು ಜ್ಞಾನರೂಪನೆಂದು ಒಪ್ಪಿದರೆ ಜ್ಞಾನತ್ವ, ಜ್ಞಾತೃಸಾಪೇಕ್ಷತ್ವ, ಜ್ಞೇಯಸಾಪೇಕ್ಷತ್ವ, ಕರಣಸಾಪೇಕ್ಷತ್ವಾದಿ ಧರ್ಮವಿಶಿಷ್ಟನೆಂದು ಒಪ್ಪಬೇಕು. ಬ್ರಹ್ಮನು ಸವಿಶೇಷನೆಂದು ಪರರು ಒಪ್ಪುವುದಿಲ್ಲ. ಆದುದರಿಂದ ಜ್ಞಾನರೂಪತ್ವವನ್ನು ಒಪ್ಪಿದರೆ ಸವಿಶೇಷತ್ವವು ಬರಬೇಕಾಗುವುದರಿಂದ ಜ್ಞಾನರೂಪತ್ವವನ್ನು ಅಂಗೀಕರಿಸಲಿಕ್ಕೆ ಪರರಿಗೆ ಆಗುವುದಿಲ್ಲ. ಬ್ರಹ್ಮನಿಗೆ ಜ್ಞಾನತ್ವವನ್ನು ಒಪ್ಪಿದರೆ ಜ್ಞೇಯಾದ್ಯುಪೇತತ್ವವು ಏಕೆಂದರೆ— ಜ್ಞಾನತ್ವವಿದ್ದುದರಿಂದ ಪ್ರಸಿದ್ಧ ಘಟಾದಿ ಜ್ಞಾನದಂತೆ. ಅಂತೂ 'ಬ್ರಹ್ಮ, ಜ್ಞಾತೃಜ್ಞೇಯಾದ್ಯುಪೇತಂ, ಜ್ಞಾನತ್ವಾತ್, ಘಟಾದಿ ಜ್ಞಾನವತ್' ಎಂದುಕ್ತವಾಯಿತು. ಬ್ರಹ್ಮನಲ್ಲಿ ಜ್ಞಾನತ್ವವು ಅಸಿದ್ಧವೆಂದು ಹೇಳುವುದು ಯುಕ್ತವಲ್ಲ. ಜ್ಞಾನತ್ವಾಂಗೀಕಾರದಿಂದ ವಿರೋಧವು ಬರುತ್ತದೆ. ಹಿಂದೆ ಹೇಳಿದ ಅನುಮಾನಕ್ಕೆ ವ್ಯಾಪ್ತಿಯನ್ನುಪಪಾದಿಸುತ್ತಾರೆ ) ಜ್ಞೇಯಜ್ಞಾತೃಹೀನಂ = ಜ್ಞೇಯ ಜ್ಞಾತೃಗಳಿಂದ ವಿರಹಿತವಾದ, ಜ್ಞಾನಂ ನಾಮ = ಜ್ಞಾನವೆನ್ನುವುದು, ಕ್ವಚಿತ್ = ಎಲ್ಲಿಯೂ, ನ ಭವೇತ್=ಇರಲಾರದು. (ಮೊದಲು ಬ್ರಹ್ಮನಿಗೆ ಚೇತನತ್ವವಿದ್ದರೆ ಜ್ಞೇಯ ಜ್ಞಾನಯುಕ್ತತ್ವ ವಿರಬೇಕೆಂದು ಯಾವುದು ಹೇಳಿಯದೋ ಅದರಲ್ಲಿಯೂ 'ಬ್ರಹ್ಮ ಜ್ಞೇಯಜ್ಞಾನೋಪೇತಂ ಜ್ಞತ್ವಾತ್ ಸಮ್ಮತವತ್' ಎಂದು ಅನುಮಾನವು ಅಭಿಪ್ರೇತವಾಗಿದೆ. ಪ್ರಸಂಗ ಸಂಗತಿಯಿಂದ ಅದಕ್ಕೂ ವ್ಯಾಪ್ತಿಯನ್ನುಪಪಾದಿಸುತ್ತಾರೆ.) ಜ್ಞೇಯ ಜ್ಞಾನವಿಹೀನಶ್ಚ = ಜ್ಞೇಯಜ್ಞಾನಗಳಿಂದ ವಿರಹಿತನಾದ, ಜ್ಞಃ=ಜ್ಞಾನಾಶ್ರಯನು (ಇದ್ದಾನೆ) ಇತ್ಯತ್ರ=ಈ ವಿಷಯದಲ್ಲಿ, ನ ಚ ಪ್ರಮಾ=ಪ್ರಮಾಣವಿಲ್ಲ ॥ ೧೮೬ ॥ ೧೮೭ ॥

ಹಾಗಾದರೆ— ಪ್ರಸಿದ್ಧವಾದ ಘಟಾದಿ ಜ್ಞಾನವು ಜ್ಞೇಯಾದಿಗಳಿಂದ ಯುಕ್ತವಾಗಿದ್ದಾಗ್ಯೂ ಈ ಬ್ರಹ್ಮಸ್ವರೂಪವಾದ ಜ್ಞಾನವು ಜ್ಞೇಯಾದಿ ವಿರಹಿತವಾಗಲಿ ಬಾಧಕವೇನೆಂದರೆ—

ಮೂ || ಜ್ಞಾತೃಜ್ಞೇಯವಿಹೀನಂ ಚ ಜ್ಞಾನಂ ಚೇದ್ಭೋಕ್ತೃಭೋಗ್ಯ(ಜ್ಯ)ತಃ |
ಹೀನಂ ಭೋಜನಮೇವ ಸ್ಯಾತ್ತಾಡನಂ ಕರ್ತೃತಾಡ್ಯತಃ || ೧೮೮ ||
ನಿತ್ಯತ್ವಾತ್ತಾದೃಶಂ ಚ ಸ್ಯಾದಿತಿ ಚೇನ್ನಿತ್ಯವಾಗಪಿ |
ವಾಚ್ಯವಕ್ತೃವಿಹೀನಾ ಸ್ಯಾನ್ನ ಹಿ ಸಾ ಚೈವ ತಾದೃಶೀ || ೧೮೯ ||
ದ್ರಷ್ಟಾರೋ ವೇದವಾಚೋ ಹಿ ಸಂತಿ ವಾಚ್ಯಾನಿ ಚಾಂಜಸಾ |
ನಿತ್ಯೋ ದ್ರಷ್ಟಾ ಚ ವಾಚ್ಯಶ್ಚ ಭಗವಾನೇವ ಚ ಸ್ವಯಂ || ೧೯೦ ||
ನ ಹಿ ವಕ್ತೃವಿಹೀನಾ ಚ ವಾಚ್ಯಹೀನಾಪಿ ವಾಕ್ ಕ್ವಚಿತ್ |
ಜ್ಞಾತೃಜ್ಞೇಯ ವಿಹೀನಂ ಚ ಜ್ಞಾನಮೇವ(ವಂ) ನ ತದ್ಭವೇತ್ ||೧೯೧||
ನ ಹಿ ನಿತ್ಯೋಽಪಿ ವಕ್ತಾಸ್ತಿ ವಾಕ್ಯವಾಚ್ಯವಿವರ್ಜಿತಃ |
ಜ್ಞಾನಜ್ಞೇಯ ವಿಹೀನಶ್ಚ ಜ್ಞೋಽಪ್ಯೇವಂ ನೈವ ವಿದ್ಯತೇ || ೧೯೨ ||

ಅ || ಜ್ಞಾನಂ=ಜ್ಞಾನವು, ಜ್ಞಾತೃಜ್ಞೇಯವಿಹೀನಂ ಚೇತ್ =ತಿಳಿಯುವವನು ತಿಳಿಯಲರ್ಹವಾದ ವಸ್ತುವೂ ಇವುಗಳಿಂದ ವಿರಹಿತವಾಗುವುದಾದರೆ, ಭೋಕ್ತೃಭೋಜ್ಯತಃ = ಊಟಮಾಡುವವನು ಭೋಜ್ಯವಾದ ವಸ್ತುವೂ ಇವುಗಳಿಂದ, ಹೀನವೇವ=ರಹಿತವೇ ಆದ, ಭೋಜನಮಪಿ=ಭೋಜನವೂ ಕೂಡ, ಸ್ಯಾತ್=ಆಗಬೇಕಾಗುವುದು. ತಾಡನಮಪಿ=ತಾಡನವೂ ಕೂಡ, ಕರ್ತೃತಾಡ್ಯತಃ=ತಾಡಯಿತೃ (ಹೊಡಿಯುವವನು) ತಾಡ್ಯ (ಹೊಡೆಸಿಕೊಳ್ಳುವವನು)ಗಳಿಂದ ಹೀನಮೇವ=ರಹಿತವಾದುದೇ, ಸ್ಯಾತ್=ಆಗಬೇಕಾಗುವುದು. (ಹೀಗೆ ಜ್ಞಾನಜ್ಞೇಯಗಳಿಲ್ಲದೇನೇ ಜ್ಞಾತೃವಿರುವುದಾದರೆ ಭೋಜನ-ಭೋಜ್ಯಗಳಿಲ್ಲದಿರುವ ಭೋಕ್ತನೂ ಇರಬೇಕಾಗುವನು. ಎನ್ನುವ ಅತಿಪ್ರಸಂಗವನ್ನು ಇಟ್ಟುಕೊಳ್ಳಬೇಕು ) (ಹಾಗಾದರೆ, ಭೋಜನಾದಿಗಳು ಜನ್ಯಕ್ರಿಯೆಗಳಾಗಿರುವುದರಿಂದ ಅವುಗಳಿಗೆ ಭೋಕ್ತೃಭೋಜ್ಯಾದಿಗಳ ಅಪೇಕ್ಷೆಯಿದೆ. ನಿತ್ಯವಾದ ಜ್ಞಾನಕ್ಕಾದರೂ ಕರ್ತೃಕರ್ಮಾಪೇಕ್ಷೆಯು ಏಕೆ ಎಂದಾಶಂಕಿಸಿಕೊಂಡು ಪರಿಹರಿಸುತ್ತಾರೆ) ನಿತ್ಯತ್ವಾತ್=(ಜನ್ಯಗಳಾದ ಭೋಜನಾದಿಗಳಿಗೆ ಭೋಕ್ತ್ರಾದ್ಯಪೇಕ್ಷೆಯಿದ್ದರೂ ಈಶ್ವರಜ್ಞಾನವು) ನಿತ್ಯವಾದುದರಿಂದಲೂ ಅಕಾರ್ಯವಾಗಿರುವುದರಿಂದಲೂ, ತಾದೃಶಂ ಚ = ಜ್ಞಾತ್ರಾದಿ ರಹಿತವಾದುದು, ಸ್ಯಾತ್=ಆಗುವುದು. ಇತಿ ಚೇತ್=ಹೀಗೆ ಹೇಳಿದರೆ, (ಅಂದರೆ— ನಿತ್ಯವಾದ ಜ್ಞಾನವು ಜ್ಞೇಯ ಜ್ಞಾತೃಗಳಿಂದ ರಹಿತವಾಗಿದ್ದರೆ) ನಿತ್ಯವಾಗಪಿ=(ಅಕಾರ್ಯವಾದುದು ಕಾರಕದಿಂದ ಅನನ್ವಿತವೆಂದು ಹೇಳುವುದಾದರೆ) ಅಕಾರ್ಯವಾದ ನಿತ್ಯವಾದ ವೇದವಚನವೂ ಕೂಡ, ವಾಚ್ಯವಕ್ತೃವಿಹೀನಾ=ವಾಚ್ಯವಾದ ಅರ್ಥವೂ ಹೇಳುವವನೂ ಇವರಿಂದ ವಿರಹಿತವಾದುದು, ಸ್ಯಾತ್=ಆಗಬೇಕಾಗುವುದು (ಆ ವೇದವಚನವು ಯಾವಾಗಲೂ ವಾಚ್ಯಾದಿಗಳಿಂದ ವಿರಹಿತವಾದುದು ಆಗುವುದಿಲ್ಲವೆನ್ನುತ್ತಾರೆ.) ಸಾ=ಆ ವೇದವಚನವು, ತಾದೃಶೀ = ಅಂತಹುದು ವಾಚ್ಯವಕ್ತೃವಿಹೀನವಾದುದು, ನೈವ ಹಿ=ಆಗುವುದೇ ಇಲ್ಲ. (ಅಂದರೆ— ವೇದವಚನವು ನಿತ್ಯವಾದಾಗ್ಯೂ ಆಗಲಾರದು.) (ಏಕೆ ಅಂತಹುದು ಆಗುವುದಿಲ್ಲವೆಂದರೆ) ವೇದವಾಚಃ = ವೇದವಚನಗಳನ್ನು, ದ್ರಷ್ಟಾರಃ=ನೋಡಿದವರೂ, ಅಂಜಸಾ=ಚೆನ್ನಾಗಿ, ವಾಚ್ಯಾನಿ ಚ=ವಾಚ್ಯಗಳಾದ ಅರ್ಥಗಳೂ ಕೂಡ, ಸಂತಿ=ಇರುತ್ತವೆ. (ಹಾಗಾದರೆ— ಸ್ಥಿತಿಸಮಯದಲ್ಲಿ ವೇದವಚನಗಳನ್ನು ಕಂಡಿರತಕ್ಕ ವಸಿಷ್ಠಾದಿ ಋಷಿಗಳೂ, ವಾಚ್ಯರಾದ ಇಂದ್ರಾದಿಗಳೂ ಇರುತ್ತಾರೆ. ಮಹಾಪ್ರಲಯದಲ್ಲಿ ವಾಚ್ಯವಕ್ತೃಗಳು ಇಲ್ಲ ಎಂದರೆ) ಚ=ಯಾವಕಾರಣದಿಂದ, ನಿತ್ಯಃ=ನಿತ್ಯಭೂತನಾದ, ದ್ರಷ್ಟಾ

ಚ=ನೋಡತಕ್ಕವನು, ವಾಚ್ಯಶ್ಚ = ವಾಚ್ಯನೂ ಕೂಡ, ಸ್ವಯಂ ಭಗವಾನೇವ=ಸಾಕ್ಷಾತ್ ಭಗವಂತನೇ ಆಗಿರುತ್ತಾನೋ, ಹಿ=ಆದಕಾರಣದಿಂದ, ವಾಕ್=ವೇದವಚನವು, ಕ್ವಚಿದಪಿ= ಪ್ರಲಯಕಾಲದಲ್ಲಿಯೂ, ವಕ್ತೃವಿಹೀನಾ ಚ = ವಕ್ತೃವಿನಿಂದ ವಿರಹಿತವಾದುದೂ, ವಾಚ್ಯ ಹೀನಾಪಿ=ವಾಚ್ಯಾರ್ಥದಿಂದ ವಿರಹಿತವಾದುದೂ, ನ ಹಿ=ಇರುವುದಿಲ್ಲವಷ್ಟೆ. (ನಿತ್ಯವಾದ ವೇದ ವಚನದಂತೆ ನಿತ್ಯವಾದ ಜ್ಞಾನವೂ ಕೂಡ ಜ್ಞೇಯಾದಿಗಳಿಂದ ಯುಕ್ತವೇ ಆಗಿದೆ ಎಂದು ಅಂಗೀ ಕರಿಸಬೇಕೆಂದುಪಸಂಹಾರಮಾಡುತ್ತಾರೆ.) ಜ್ಞಾತೃ-ಜ್ಞೇಯವಿಹೀನಂ ಚ = ಜ್ಞಾತೃ-ಜ್ಞೇಯ ಗಳಿಂದ ವಿರಹಿತವಾದ, ತತ್ ಜ್ಞಾನಂ=ಆ ಜ್ಞಾನವೂ, ಏವಂ = ಹೀಗೆಯೇ, ನ ಭವೇತ್= ಇರಲಾರದು. (ಹೇಗೆ ವಚನ-ವಾಚ್ಯ ಇವುಗಳಿಂದ ರಹಿತನಾದ, ಒಬ್ಬಾನೊಬ್ಬ ನಿತ್ಯನಾದ ವಕ್ತೃಪುರುಷನು ಇಲ್ಲವೋ, ಹೀಗೆಯೇ ನಿತ್ಯಭೂತನಾದ ಜ್ಞಾತೃಪುರುಷನು ಜ್ಞೇಯಜ್ಞಾನ ಗಳಿಂದ ರಹಿತನು ಇರಲಾರನು ಎನ್ನುತ್ತಾರೆ) ನಿತ್ಯೋಽಪಿ=ನಿತ್ಯಭೂತನಾದಾಗ್ಯೂ, ವಕ್ತಾ= ಹೇಳುವವನು, ವಾಕ್ಯವಾಚ್ಯವಿವರ್ಜಿತಃ = ವಾಕ್ಯ-ವಾಚ್ಯ-ಇವುಗಳಿಂದ ವಿರಹಿತನಾದವನು, ನಿತ್ಯೋಽಪಿ = ನಿತ್ಯಭೂತನಾದಾಗ್ಯೂ, ಜ್ಞೋಽಪಿ=ಜ್ಞಾನಾಶ್ರಯನೂ ಕೂಡ, ಜ್ಞಾನಜ್ಞೇಯ ವಿಹೀನಶ್ಚ=ಜ್ಞಾನ-ಜ್ಞೇಯ-ಇವುಗಳಿಂದ ವಿರಹಿತನಾದವನು, ನೈವ ವಿದ್ಯತೇ =ಇಲ್ಲವೇ ಇಲ್ಲ ॥ ॥ ೧೮೮ ॥ ೧೮೯ ॥ ೧೯೦ ॥ ೧೯೧ ॥ ೧೯೨॥

ಮಿಥ್ಯಾಭೂತವಾದ ಪರವಸ್ತುವನ್ನು ಅಪೇಕ್ಷಿಸಿಕೊಂಡು ಇರತಕ್ಕ ಸರ್ವಜ್ಞತ್ವಕ್ಕೂ ಮಿಥ್ಯಾತ್ವವನ್ನು ಅಂಗೀಕರಿಸುವವನಿಗೆ ಚೇತನತ್ವಾದಿಗಳೇ ಇಲ್ಲವೆಂದಾಗಬೇಕಾಗುವವು ಎಂದು ಹೇಳಲ್ಪಟ್ಟಿದೆ. ಈಗ ಪ್ರಪಂಚಮಿಥ್ಯಾತ್ವವು ಅಪ್ರಾಮಾಣಿಕವೂ ಆಗಿದೆ ಎನ್ನುತ್ತಾರೆ —

**ಮೂ ॥ ಕಿಂ ಚ ಸರ್ವವಿಲೋಪಶ್ಚ ಕೇನ ಮಾನೇನ ಗಮ್ಯತೇ ।**
**ಸರ್ವೇಣ ಸಹ ತದ್ವಾಕ್ಯಮರ್ಥಶ್ಚ ಯದಿ ಗಮ್ಯತೇ ॥ ೧೯೩ ॥**
**ತದಭಾವೇನ ಸರ್ವಸ್ಯ ನಾಪಲಾಪೋ ಭವೇತ್ತದಾ ।**
**ನ ಗೃಹ್ಯತೇ ಚೇತ್ತನ್ನ್ಯಾಯಾದಪಲಾಪೋ ನ ಹಿ ಕ್ವಚಿತ್ ॥ ೧೯೪ ॥**

ಅ ॥ ಕಿಂ ಚ=ಮತ್ತೂ ಕೂಡ, ಸರ್ವವಿಲೋಪಃ=ಸರ್ವಕ್ಕೂ ಮಿಥ್ಯಾತ್ವವೂ ಕೂಡ ಕೇನ ಮಾನೇನ = ಯಾವ ಪ್ರಮಾಣದಿಂದ, ಗಮ್ಯತೇ = ತಿಳಿಯಲ್ಪಡುತ್ತದೆ. (ಅಂದರೆ— ಪ್ರತ್ಯಕ್ಷವು ಪ್ರಪಂಚ ಸತ್ಯತ್ವಗ್ರಾಹಿಯಾದುದರಿಂದಲೂ, ಮಿಥ್ಯಾತ್ವಸಾಧಕವಾದ ದೃಶ್ಯತ್ವಾ ದ್ಯನುಮಾನಕ್ಕೆ ಪ್ರತ್ಯಕ್ಷಬಾಧಿತತ್ವವಿರುವುದರಿಂದಲೂ, ಪ್ರಾಮಾಣ್ಯವು ಕೂಡದಿರುವುದರಿಂದಲೂ, ಪ್ರಪಂಚಕ್ಕೆ ಮಿಥ್ಯಾತ್ವವನ್ನು ಪ್ರತಿಪಾದಿಸತಕ್ಕ ಸ್ಪಷ್ಟ ಆಗಮವು ಇಲ್ಲದಿರುವುದರಿಂದಲೂ, ಯಾವ ಪ್ರಮಾಣದಿಂದಲೂ, ಅಂದರೆ— ಪ್ರತ್ಯಕ್ಷದಿಂದಲೂ, ಅನುಮಾನದಿಂದಲೂ, ಆಗಮದಿಂದಲೂ ಪ್ರಪಂಚಕ್ಕೆ ಮಿಥ್ಯಾತ್ವವು ತಿಳಿಯಲ್ಪಡುವುದಿಲ್ಲ.) (ಹಾಗಾದರೆ— '**ನೇಹ ನಾನಾಸ್ತಿ ಕಿಂಚನ**' ಇತ್ಯಾದಿ ಸರ್ವಮಿಥ್ಯಾತ್ವ ಪ್ರತಿಪಾದಕ ಆಗಮವು ಇದ್ದುದರಿಂದ ವಿಶ್ವಮಿಥ್ಯಾತ್ವವಿಷಯದಲ್ಲಿ ಪ್ರಮಾಣವಿಲ್ಲದಿರುವುದು ಹೇಗೆ ಎಂದರೆ— ಸರ್ವಕ್ಕೂ ಮಿಥ್ಯಾತ್ವವನ್ನು ಪ್ರತಿಪಾದಿಸತಕ್ಕ ಈ ವಾಕ್ಯದಲ್ಲಿ ಸರ್ವಾಂತರ್ಗತವಾಗಿ ಈ ವಾಕ್ಯವೂ, ಈ ವಾಕ್ಯಾರ್ಥವೂ ೧ ಗೃಹೀತ ವಾಗುತ್ತದೋ, ೨ ಇಲ್ಲವೋ, ೧ನೇದ್ದನ್ನು ಅನುವಾದಮಾಡಿಕೊಂಡು ದೂಷಿಸುತ್ತಾರೆ.) ಸರ್ವೇಣ ಸಹ=ಸರ್ವದಿಂದ ಕೂಡಿಕೊಂಡು, ತದ್ವಾಕ್ಯಂ=ಆ ವಾಕ್ಯವೂ, ಅರ್ಥಶ್ಚ=ಅರ್ಥವೂ ಕೂಡ, ಯದಿ ಗೃಹ್ಯತೇ = ಸ್ವೀಕರಿಸಲ್ಪಡುತ್ತದೋ, ತದಾ=ಆಗ, ತದಭಾವೇನ = ವಾಕ್ಯ

ವಾಕ್ಯಾರ್ಥಗಳಿಗೆ ಮಿಥ್ಯಾತ್ವರೂಪ ಕಾರಣದಿಂದ, ಸರ್ವಸ್ಯ = ಎಲ್ಲಾದಕ್ಕೂ, ಅಪಲಾಪಃ = ಅಪಲಾಪವು, (ಮಿಥ್ಯಾತ್ವವು) ನ ಭವೇತ್ = ಆಗಲಾರದು. (ಹೇಗೆಂದರೆ— ಸರ್ವಮಿಥ್ಯಾತ್ವರೂಪ ವಾಕ್ಯವು ಇಲ್ಲದಿದ್ದರೆ ಮಿಥ್ಯಾತ್ವಪ್ರತಿಪಾದಿಕವೇ ಇಲ್ಲ. ವಾಕ್ಯಾರ್ಥವೂ ಇಲ್ಲದಿದ್ದರೆ ಸರ್ವ ಮಿಥ್ಯಾತ್ವವೇ ಇಲ್ಲ.) (ಅನೇದ್ದನ್ನು ಅನುವಾದಮಾಡಿ ದೂಷಿಸುತ್ತಾರೆ.) ನ ಗೃಹ್ಯತೇ ಚೇತ್ = ಸ್ವೀಕರಿಸಲ್ಪಡದೆ ಇದ್ದರೆ, ತನ್ನ್ಯಾಯಾತ್ = ಆವಾಕ್ಯಾದಿ ನ್ಯಾಯದಿಂದ, ಕ್ವಚಿತ್ = ವಿಯದಾದಿ ವಿಷಯದಲ್ಲಿಯೂ ಕೂಡ, ಅಪಲಾಪಃ = ನಿಷೇಧವು, ನ ಹಿ = ಕೂಡುವುದೇ ಇಲ್ಲ.

ತಾ ॥ ಸ. ರ. ವಿ— (1) ಸರ್ವಕ್ಕೂ ಮಿಥ್ಯಾತ್ವವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. ಸರ್ವವೂ ಇಲ್ಲವೆನ್ನುವ ವಚನವು ವ್ಯಾಹತವೂ ಆಗಿದೆ. ಹೇಗೆಂದರೆ— ಸರ್ವಾಭಾವ ಶಬ್ದದಿಂದ ಸರ್ವಾಭಾವ ವಚನ ಅವುಗಳ ಅರ್ಥಗಳನ್ನು ಇಟ್ಟುಕೊಂಡು ಇವುಗಳಿಗೆ ಮಿಥ್ಯಾತ್ವವು ಅಂಗೀಕರಿಸಲ್ಪಡುತ್ತದೋ ಇಲ್ಲವೋ, ಅಂಗೀಕರಿಸುವುದಾದರೆ ಸರ್ವಾಭಾವವೂ ಇಲ್ಲವೆಂದಾಗ ಬೇಕಾಗುವುದು. ಸರ್ವಾಭಾವವಚನ, ಅದರ ಅರ್ಥ, ಇವುಗಳಿಗೆ ಮಿಥ್ಯಾತ್ವವನ್ನು ಅಂಗೀಕರಿಸದೆ ಇದ್ದರೆ ಅದೇ ನ್ಯಾಯದಿಂದ ಅಂದರೆ, ಹೇಗೆ ವಾಕ್ಯ ವಾಕ್ಯಾರ್ಥಗಳಿಗೆ ಮಿಥ್ಯಾತ್ವವು ಅನುಪಪನ್ನ ವಾಗಿರುವುದರಿಂದ ಆ ವಾಕ್ಯವು ಅದನ್ನು ಹೇಗೆ ಪ್ರತಿಪಾದಿಸುವುದಿಲ್ಲವೋ, ಹಾಗೆ ವಿಯದಾದಿ ಮಿಥ್ಯಾತ್ವವೂ ಅನುಪಪನ್ನವಾಗಿರುವುದರಿಂದ ಅದನ್ನು ಪ್ರತಿಪಾದಿಸುತ್ತದೆ ಎಂದು ಹೇಳಕೂಡದು. ಅಂತೂ ಆ ವಾಕ್ಯದಿಂದ ಆಕಾಶಾದಿಗಳಿಗೆ ಮಿಥ್ಯಾತ್ವವು ಸಿದ್ಧಿಸುವುದಿಲ್ಲ. ಅಂತೂ '**ನೇಹ ನಾನಾಸ್ತಿ ಕಿಂಚನ**' ಎನ್ನುವ ವಾಕ್ಯಕ್ಕೂ ಸರ್ವ ನಿಷೇಧಪರತ್ವವಿದ್ದರೆ ವ್ಯಾಹತಿಯು ಬರಬೇಕಾಗುವುದು ॥ ೧೯೩ ॥ ೧೯೪ ॥

ಹಾಗಾದರೆ, ಅಭಿಮತಾರ್ಥ ಸಿದ್ಧಿಯಲ್ಲಿ ವಾಕ್ಯವನ್ನು ಪ್ರಮಾಣವೆಂದುದಾಹರಿಸಿದರೆ— ಇಂತಹ ವಾಕ್ಯವು ಇಲ್ಲವೆಂದಾಗಲೀ, ಈ ಪದಗಳಿಗೆ ಆ ಅರ್ಥವಿಶೇಷದ ಶಕ್ತಿ ಇಲ್ಲವೆಂದಾಗಲೀ, ಈ ವಾಕ್ಯಕ್ಕೆ ಅಲ್ಲಿ ತಾತ್ಪರ್ಯವಿಲ್ಲವೆಂದಾಗಲೀ ಹೀಗೆ ದೋಷವನ್ನು ಹೇಳಬೇಕು. ಹಿಂದೆ ಹೇಳಿದ ವಿಕಲ್ಪನಿರಾಕರಣದಿಂದ ಈ ರೀತಿಯಾಗಿ ದೋಷವು ಹೇಳಿದಂತೆ ಆಗಲಿಲ್ಲವೆಂದರೆ—

**ಮೂ ॥ ಉಪಪತ್ತಿವಿಹೀನಸ್ಯ ವಾಕ್ಯಸ್ಯಾರ್ಥೋ ನ ಗಮ್ಯತೇ ।**
**ಉಪಕ್ರಮಾದಿಲಿಂಗಾನಾಂ ಬಲೀಯೋ ಹ್ಯುತ್ತರೋತ್ತರಂ ॥ ೧೯೫ ॥**
**ಶ್ರುತ್ಯಾದೌ ಪೂರ್ವಪೂರ್ವಂ ಚ ಬ್ರಹ್ಮತರ್ಕ ವಿನಿರ್ಣಯಾತ್ ।**
**ಪ್ರತ್ಯಕ್ಷಮುಪಪತ್ತಿಶ್ಚ ಬಹವಶ್ಚಾಗಮಾ ಯದಾ ॥ ೧೯೬ ॥**
**ವಿರುಧ್ಯಂತೇ ನ ಚಾರ್ಥೋಽಸ್ತಿ ಯತ್ರ ಲಿಂಗವಿರೋಧಿತಾ ।**
**ಸ ಏವಾರ್ಥಃ ಕಥಂ ಗ್ರಾಹ್ಯ ಉಪಪನ್ನೇಽವಿರೋಧಿನಿ ।**
**ಮುಖ್ಯಾರ್ಥೇ ವಿದ್ಯಮಾನೇ ತು ತ್ವ ಸಾರ್ವಜ್ಞ್ಯಂ ನಿಷಿಧ್ಯತೇ ॥ ೧೯೭ ॥**

ಅ ॥ ಉಪಪತ್ತಿವಿಹೀನಸ್ಯ = ಯುಕ್ತಿಯಿಂದ ವಿರುದ್ಧವಾದ, ವಾಕ್ಯಸ್ಯ = ವಾಕ್ಯದ, ಅರ್ಥಃ = ತಾತ್ಪರ್ಯವು, ನ ಗಮ್ಯತೇ = ತಿಳಿಯಲ್ಪಡುವುದಿಲ್ಲ. (ಯುಕ್ತಿವಿರುದ್ಧಾರ್ಥದಲ್ಲಿ ವಾಕ್ಯಕ್ಕೆ ತಾತ್ಪರ್ಯವು ಕೂಡದಿರುವುದರಿಂದ ಹಿಂದೆ ಹೇಳಿದ ಸರ್ವ ಮಿಥ್ಯಾತ್ವರೂಪವಾದ ಅರ್ಥವು ಯುಕ್ತಿವಿರುದ್ಧವಾಗಿರುವುದರಿಂದ ಅಲ್ಲಿ ತಾತ್ಪರ್ಯವು ಕೂಡುವುದಿಲ್ಲವೆಂದು ತಿಳಿಸುವುದಕ್ಕಾಗಿ ಹಿಂದೆ ಹೇಳಿದ ವಿಕಲ್ಪದೂಷಣಗಳು ) (೧ ಉಪಕ್ರಮ, ೨ ಉಪಸಂಹಾರ, ೩ ಅಭ್ಯಾಸ,

೪ ಅಪೂರ್ವತಾ, ೫ ಫಲ, ೬ ಅರ್ಥವಾದ, ೭ ಉಪಪತ್ತಿಗಳು. ೧ ಶ್ರುತಿ, ೨ ಲಿಂಗ, ೩ ವಾಕ್ಯ, ೪ ಪ್ರಕರಣ, ೫ ಸ್ಥಾನ, ೬ ಸಮಾಖ್ಯೆಗಳು ತಾತ್ಪರ್ಯ ಲಿಂಗಗಳು. ಅವುಗಳಲ್ಲಿ ಉಪಪತ್ತಿಯಿಂದ ವಿರೋಧವಿದ್ದರೂ ಬೇರೆ ಲಿಂಗಗಳಿಂದ ಈ ವಾಕ್ಯಕ್ಕೆ ಪ್ರಪಂಚ ಮಿಥ್ಯಾತ್ವದಲ್ಲಿ ತಾತ್ಪರ್ಯವು ತಿಳಿಯಲ್ಪಡಲಿ ಎಂದರೆ— ಉಪಕ್ರಮಾದಿ ಲಿಂಗಾನಾಂ = ಉಪಕ್ರಮಾದಿ ಲಿಂಗಗಳ ಮಧ್ಯದಲ್ಲಿ, ಉತ್ತರೋತ್ತರಂ=ಯಾವುದು ಮೇಲೆ ಮೇಲಿನದ್ದೋ ಅದು, ಬಲೀಯಃ ಹಿ = ಬಲಿಷ್ಠವಷ್ಟೆ? (ಆದುದರಿಂದ ಉಪಪತ್ತಿಯೇ ಬಲಿಷ್ಠವಾದದ್ದು) ಶ್ರುತ್ಯಾದೌ= ಶ್ರುತಿ ಮೊದಲಾದ ಲಿಂಗಸಮೂಹದಲ್ಲಿ, ಪೂರ್ವಪೂರ್ವಂ ಚ=ಯಾವುದು ಯಾವುದು ಮೊದಲಿನದ್ದೋ ಅದು ಅದು, ಬಲೀಯಃ = ಬಲಿಷ್ಠವಾದುದು. (ಅದರಲ್ಲಿಯೂ ಲಿಂಗಶಬ್ದದಿಂದ ಹೇಳಲ್ಪಟ್ಟ ಉಪಪತ್ತಿಯೇ ಬಲಿಷ್ಠವಾದುದು. ಆದುದರಿಂದ ಬಲಿಷ್ಠವಾದ ಯುಕ್ತಿಯಿಂದ ವಿರೋಧವಿರುವಾಗ ಬೇರೆ ಲಿಂಗಗಳಿಗೆ ತಾತ್ಪರ್ಯನಿಶ್ಚಾಯಕತ್ವವು ಯುಕ್ತವಲ್ಲ.) (ಯಾವುದರಿಂದ ಎಂದರೆ-) ಬ್ರಹ್ಮತರ್ಕವಿನಿರ್ಣಯಾತ್=ಬ್ರಹ್ಮತರ್ಕಾಖ್ಯ ತರ್ಕಶಾಸ್ತ್ರದಲ್ಲಿ ಹಾಗೆ ನಿರ್ಣೀತವಾಗಿರುವುದರಿಂದ, (ಕಾರಣಾಂತರದಿಂದಲೂ ಈ ವಾಕ್ಯಕ್ಕೆ ಪ್ರಪಂಚ ಮಿಥ್ಯಾತ್ವದಲ್ಲಿ ತಾತ್ಪರ್ಯವಿಲ್ಲವೆನ್ನುತ್ತಾರೆ.) ಪ್ರತ್ಯಕ್ಷಂ = 'ಸತ್ ಗಗನಂ' ಇತ್ಯಾದಿ ಪ್ರತ್ಯಕ್ಷವು, (ಅದು ಸಾಕ್ಷಿರೂಪವಾದುದರಿಂದ ಪ್ರಬಲವಾದುದು) ಉಪಪತ್ತಿಶ್ಚ = ಅರ್ಥ-ಕ್ರಿಯಾಕಾರಿತ್ವಾದಿ ರೂಪವಾದ ಯುಕ್ತಿಯೂ, (ಅದು ವ್ಯಾಪ್ತ್ಯಾದಿಗಳಿಂದ ವಿಶಿಷ್ಟವಾದುದರಿಂದ ಪ್ರಬಲವಾದುದು.) ಬಹವಃ= ಬಹುಸಂಖ್ಯೆಗಳಾದ, ನಿರವಕಾಶಗಳಾದ, ಆಗಮಾಶ್ಚ='ವಿಶ್ವಂ ಸತ್ಯಂ' ಇತ್ಯಾದ್ಯಾಗಮಗಳೂ ಕೂಡ, ಯದಾ = ಯಾವ ಪ್ರಪಂಚಮಿಥ್ಯಾತ್ವರೂಪ ಅರ್ಥವನ್ನು ಅಂಗೀಕರಿಸಿದಾಗ, ವಿರುಧ್ಯಂತೇ=ವಿರುದ್ಧಗಳಾಗುತ್ತವೋ, ಯತ್ರ=ಯಾವ ಅರ್ಥವನ್ನು ಪ್ರತಿಪಾದಿಸುವುದರಲ್ಲಿ, ಅರ್ಥಶ್ಚ=ಪ್ರಯೋಜನವೂ, ಉಪಕ್ರಮಾದಿಗಳಿಗೆ ಅನುಕೂಲವೂ ಕೂಡ, ನಾಸ್ತಿ=ಇಲ್ಲವೋ, (ಕೇವಲ ಲಿಂಗಾನುಕೂಲ್ಯಭಾವಮಾತ್ರವಲ್ಲ ಮತ್ತೆ) ಯತ್ರ=ಯಾವ ಅರ್ಥವನ್ನು ಅಂಗೀಕರಿಸಿದರೆ, ಲಿಂಗವಿರೋಧಿತಾ=ಲಿಂಗವಿರೋಧಿತ್ವವೂ ಕೂಡ, ಅಸ್ತಿ = ಇದೆಯೋ, (ಈ ಎಲ್ಲಾ ಗ್ರಂಥಾಂತರಗಳಲ್ಲಿ ಅಲ್ಲಲ್ಲಿ ಹೇಳಿಯದೆ.) (ಹಾಗಾದರೆ ನಿರವಕಾಶವಾದ ವಾಕ್ಯವು ಅಪ್ರಮಾಣವಾಗಿ ಪ್ರಸಕ್ತವಾಗುತ್ತದೆ ಎಂದರೆ—) ಅವಿರೋಧಿನಿ=ಪ್ರತ್ಯಕ್ಷಾದಿಪ್ರಮಾಣ ಉಪಕ್ರಮಾದಿ ಲಿಂಗ ಇವುಗಳಿಗೆ ವಿರೋಧಿಯಾಗದೆ ಇದ್ದ, ಉಪಪನ್ನೇ ಚ=ಪ್ರತ್ಯಕ್ಷಾದಿ ಪ್ರಮಾಣಗಳ ಅನುಕೂಲ್ಯದಿಂದ ಯುಕ್ತವಾದ ಶ್ರೀ ಹರಿಯಲ್ಲಿ, (ಸ್ವಗತಭೇದಾಭಾವರೂಪವಾದ ಅರ್ಥವು 'ನೇಹ ನಾನಾಸ್ತಿ ಕಿಂಚನ' ಎನ್ನುವ ವಾಕ್ಯಕ್ಕೆ ಪ್ರತಿಪಾದ್ಯವಾದ ಅರ್ಥವು ಕೂಡುತ್ತಿರಲು) ಸ ಏವಾರ್ಥಃ=ಅದೇ ಅರ್ಥವು, ಪ್ರಪಂಚಮಿಥ್ಯಾತ್ವರೂಪವಾದ ಸರ್ವಪ್ರಮಾಣಗಳಿಂದ ಬಾಧಿತವಾದ ಅರ್ಥವು, ಕಥಂ=ಹೇಗೆ, ಗ್ರಾಹ್ಯಃ = ಅಂಗೀಕಾರಮಾಡಲಿಕ್ಕೆ ಅರ್ಹವಾಗುವುದು? 'ನೇಹ ನಾನಾ' ಎನ್ನುವ ವಾಕ್ಯಕ್ಕೆ ಅಪವ್ಯಾಖ್ಯಾನವನ್ನು ನಿರಾಕರಿಸಿದ ಮೇಲೆ ಲಬ್ಧವಾದ ಅರ್ಥವನ್ನು ಹೇಳುತ್ತಾರೆ ) ಮುಖ್ಯಾರ್ಥೇ=ಪ್ರತಿಷೇಧಕ್ಕೆ ಸಂಕೋಚದಲ್ಲಿ ಕಾರಣವಿಲ್ಲದಿರುವುದರಿಂದ ಪ್ರಪಂಚಮಿಥ್ಯಾತ್ವರೂಪವಾದ ಮುಖ್ಯಾರ್ಥವು, ಅವಿದ್ಯಮಾನೇ ತು=ಕೂಡದಿರಲು, ಸಾರ್ವಜ್ಞಂ = ಸರ್ವಜ್ಞತ್ವವು, ಕ್ವ=ಎಲ್ಲಿ, ನಿಷಿಧ್ಯತೇ = ನಿಷೇಧಿಸಲ್ಪಡುತ್ತದೆ. (ಅಂದರೆ— ಮಿಥ್ಯಾಭೂತ ವಸ್ತುಗಳ ಅಪೇಕ್ಷೆ ಇದ್ದುದರಿಂದ ಸರ್ವಜ್ಞತ್ವವು ಬ್ರಹ್ಮನಲ್ಲಿ ನಿಷೇಧಿಸಲ್ಪಟ್ಟದೆ. ಸರ್ವಮಿಥ್ಯಾತ್ವವೇ ಅನುಪಪನ್ನವಾದ ಮೇಲೆ ಬ್ರಹ್ಮನಲ್ಲಿ ಸಾರ್ವಜ್ಞವನ್ನು ನಿಷೇಧಿಸಲಿಕ್ಕೆ ಬರುವುದಿಲ್ಲ.) ಅಥವಾ, ಉಪಪನ್ನೇ = ಯುಕ್ತವಾದ, ಅವಿರೋಧಿನಿ = ವಿರೋಧಿಯಾಗದೆ ಇದ್ದ, ಮುಖ್ಯಾರ್ಥೇ = ಪರಮಾತ್ಮನಲ್ಲಿ ಸ್ವಗತ ಗುಣಕ್ರಿಯಾದಿಗಳಿಂದ ಭೇದಾಭಾವರೂಪವಾದ

ವಾದ ಅರ್ಥವು, ವಿದ್ಯಮಾನೇ ತು=ವಾಕ್ಯಕ್ಕೆ ಇರುತ್ತಿರಲು, (ಆ ವಾಕ್ಯದಿಂದ ಪ್ರಪಂಚ ಮಿಥ್ಯಾತ್ವವು ಸಿದ್ಧಿಸದೆ ಇರುವುದರಿಂದ) ಸಾರ್ವಜ್ಞಂ= ಸರ್ವಜ್ಞತ್ವವು, ಕ್ವ=ಎಲ್ಲಿ, ನಿಷಿಧ್ಯತೇ= ನಿಷೇಧಿಸಲ್ಪಡುತ್ತದೆ?

ತಾ ॥ ಸ. ರ. ವಿ — (1) ಅನುಪಪನ್ನವಾದ ಅರ್ಥದಲ್ಲಿ ಶ್ರುತಿಯೂ ಪ್ರಮಾಣವಲ್ಲ. ಶ್ರುತ್ಯುಪಪತ್ತಿಗಳ ಮಧ್ಯದಲ್ಲಿ ಶ್ರುತಿಯು ಸ್ವಭಾವತಃ ಬಲಿಷ್ಠವಾದುದು. ಸಾವಕಾಶ ಶ್ರುತಿಯು ಬೆಳೆಯಿಂದಲೂ ಅನನ್ಯಗತಿಕವಾದ ಉಪಪತ್ತಿಯೂ ಕೂಡ ಬಲಿಷ್ಠವಾದುದು. ಸ್ವಾಭಾವಿಕವಾಗಿಯೇ ಉಪಕ್ರಮ-ಉಪಸಂಹಾರಾದಿಗಳ ಮಧ್ಯದಲ್ಲಿ ಉತ್ತರೋತ್ತರ ಪ್ರಾಬಲ್ಯವು. ಶ್ರುತಿ-ಲಿಂಗ-ವಾಕ್ಯಾದಿಗಳ ಮಧ್ಯದಲ್ಲಿ ಪೂರ್ವ ಪೂರ್ವಕ್ಕೆ ಪ್ರಾಬಲ್ಯವು. ಹೀಗೆ ಬ್ರಹ್ಮತರ್ಕದಲ್ಲಿ ನಿರ್ಣೀತವಾಗಿದೆ. ಆದುದರಿಂದ ಪ್ರಮಾಣಾಂತರಗಳಿಂದ ಅವಿರುದ್ಧವಾದ ಶ್ರೀ ಹರಿಗೆ ಸ್ವಗತ-ನಾನಾತ್ವಾಭಾವರೂಪವಾದ ಅರ್ಥವು ಕೂಡುತ್ತಾ ಇರಲು ನೇಹ ನಾನಾ ಯೆನ್ನುವ ವಾಕ್ಯಕ್ಕೆ ಸರ್ವಾಭಾವ ರೂಪವಾದ ಅರ್ಥವು ಕೂಡುವುದಿಲ್ಲ (2) ಸರ್ವಕ್ಕೂ ಸತ್ಯತ್ವವನ್ನು ಗ್ರಹಿಸತಕ್ಕ ಪ್ರತ್ಯಕ್ಷದಿಂದಲೂ, ಉಪಪತ್ತಿಯಿಂದಲೂ, ಅನೇಕ ಆಗಮಗಳಿಂದಲೂ ವಿರೋಧವಿದ್ದಪ್ರಯುಕ್ತ ಅಸತ್ಯತ್ವವನ್ನು ಪ್ರತಿಪಾದಿಸುವುದಕ್ಕೆ ಪ್ರಯೋಜನವಿಲ್ಲದಿರುವುದರಿಂದಲೂ **'ಯಸ್ಮಿನ್ ಪಂಚ ಪಂಚ ಜನಾಃ ಆಕಾಶಶ್ಚ ಪ್ರತಿಷ್ಠಿತಃ'** ಎನ್ನುವ ಉಪಕ್ರಮಾದಿ ತಾತ್ಪರ್ಯ ಲಿಂಗಗಳಿಂದಲೂ ವಿರೋಧವಿದ್ದುದರಿಂದಲೂ ಎಲ್ಲಾ ವಾಕ್ಯಗಳಲ್ಲಿಯೂ ಆಪಾತತಃ ಪ್ರತೀತವೇ ಆದ ಅರ್ಥವನ್ನು ಸ್ವೀಕರಿಸಲಿಕ್ಕೆ ಅಶಕ್ಯವು ॥ ೧೯೫ ॥ ೧೯೬ ॥ ೧೯೭ ॥

ಯಾವನು ಹೀಗೆ ವ್ಯವಸ್ಥಾಪಿತವಾಗುತ್ತಿರಲು, 'ನೇಹ ನಾನಾ' ಇತ್ಯಾದಿ ವಾಕ್ಯಗಳಲ್ಲಿ ತಮಗೆ ಅಪೇಕ್ಷಿತವಾದ ಅರ್ಥವು ಸಿಗದಿರುವುದರಿಂದ ಅಮುಖ್ಯಾರ್ಥತ್ವವನ್ನು ಶಂಕಿಸುತ್ತಾನೋ, ಅವನಾದರೂ ಬ್ರಹ್ಮನಿಗೆ ಸರ್ವಜ್ಞತ್ವಾದಿ ಗುಣಗಳನ್ನು ಪ್ರತಿಪಾದಿಸತಕ್ಕ ವಾಕ್ಯಗಳಿಗೆ ನಿಷ್ಕಾರಣವಾಗಿಯೇ ಮುಖ್ಯಾರ್ಥತ್ವವನ್ನು ನಿವಾರಿಸತಕ್ಕವನು ನಿರ್ಲಜ್ಜನು, ಉಪೇಕ್ಷಣೀಯನೇ ಆಗಿರುತ್ತಾನೆ. ಆದುದರಿಂದ ಸರ್ವಜ್ಞತ್ವಾದಿ ಗುಣಗಳಿಂದ ಪೂರ್ಣನೂ, ನಿರ್ದೋಷನು ಎಂದೇ ಬ್ರಹ್ಮನನ್ನು ಅಂಗೀಕರಿಸಬೇಕೆನ್ನುತ್ತಾರೆ—

**ಮೂ ॥ ಅತಃ ಸರ್ವಗುಣೈರ್ಯುಕ್ತಂ ಬ್ರಹ್ಮಾಂಗೀಕಾರ್ಯಮೇವ ಹಿ ॥೧೯೮॥**
**ಅಪಲಾಪೋಽಪಿ ಸರ್ವಸ್ಯ ನ ಕಥಂಚನ ಯುಜ್ಯತೇ ।**
**ಅನಾದಿಯೋಗ್ಯತಾ ಚೋಕ್ತಾ ತೇನ ಗ್ರಾಹ್ಯೈವ ಸರ್ವಥಾ ॥ ೧೯೯ ॥**

ಅ ॥ ಅತಃ = ಆದುದರಿಂದ, ಸರ್ವಗುಣೈಃ = ಎಲ್ಲಾ ಗುಣಗಳಿಂದ, ಯುಕ್ತಂ = ಕೂಡಿದ, ಬ್ರಹ್ಮ=ಪರಬ್ರಹ್ಮನು, ಅಂಗೀಕಾರ್ಯಮೇವ=ಧರ್ಮಿಯಾಗಿ ಅಂಗೀಕಾರಾರ್ಹನೇ, ಹಿ=ತತ್ತ್ವಮಸ್ಯಾದಿ ವಾಕ್ಯಕ್ಕೆ ಉಪಜೀವ್ಯ ವಿರೋಧವನ್ನು ತಡೆಯಲು ಸಾಧ್ಯವಿಲ್ಲವೆನ್ನುವುದು ಪ್ರಸಿದ್ಧವು. (ಸಾರ್ವಜ್ಞಾದಿ ಗುಣಗಳಿಂದ ಯುಕ್ತನೇ ಆದ ಬ್ರಹ್ಮನನ್ನು ಧರ್ಮಿಕರಿಸುತ್ತೇವೆ. ಆದರೆ— ಆ ಗುಣಗಳಿಗೆ ಮಿಥ್ಯಾತ್ವವಿದ್ದಪ್ರಯುಕ್ತ ಅದ್ವೈತಾಗಮಕ್ಕೆ ಉಪಜೀವ್ಯ ವಿರೋಧವಿಲ್ಲ. ಹೇಗೆ ಯಾರು ಪುರುಷನೋ ಅವನು ಸ್ಥಾಣುವು ಎನ್ನುವಲ್ಲಿ ಆರೋಪಿತವಾದ ಪುರುಷತ್ವದಿಂದ ವ್ಯಾವೃತ್ತವಾದ ವಸ್ತುವನ್ನು ಧರ್ಮಿಕರಿಸಿಕೊಂಡು ಪ್ರವೃತ್ತವಾದಾಗ್ಯೂ ಉಪಜೀವ್ಯ ವಿರೋಧವಿಲ್ಲವೋ ಹಾಗೆಯೇ ಎಂದರೆ—) ಸರ್ವಸ್ಯ=ಎಲ್ಲಾ ಗುಣಗಳ ಸಮುದಾಯಕ್ಕೆ, ಅಪಲಾಪೋಽಪಿ=ಮಿಥ್ಯಾತ್ವಾಭಿಧಾನವೂ ಕೂಡ, ಕಥಂಚನ = ಯಾವಪ್ರಕಾರದಿಂದಲೂ, ಪ್ರಮಾಣವಿಲ್ಲದಿರುವುದರಿಂದಲೂ, ಶ್ರುತ್ಯಾದಿ ಪ್ರಮಾಣಗಳಿಂದ ವಿರುದ್ಧವಾದುದರಿಂದಲೂ, ಅಪ್ರಾಪ್ತವಾಗಿ

ರುವುದರಿಂದ ಅನುವಾದತ್ವಾಭಾವವು ಉಕ್ತವಾಗಿರುವುದರಿಂದಲೂ, ನ ಯುಜ್ಯತೇ=ಕೂಡುವು ದಿಲ್ಲ. (ಆದುದರಿಂದ ಸರ್ವಜ್ಞತ್ವಾದಿ ಧರ್ಮಗಳು ಹರಿಯಲ್ಲಿ ಸತ್ಯವಾಗಿರುವುದರಿಂದ ವಿರುದ್ಧ ಧರ್ಮಾಧಿಕರಣರಾದ ಜೀವಬ್ರಹ್ಮರಿಗೆ ತತ್ತ್ವಮಸ್ಯಾದಿವಾಕ್ಯದಿಂದ ಐಕ್ಯಪ್ರತಿಪಾದನವು ಎನ್ನು ವುದು ಸರ್ವಥಾ ಯುಕ್ತವಲ್ಲ.)(ಈ ವಿಷಯದಲ್ಲಿ ದೋಷಾಂತರವನ್ನು ಹೇಳುತ್ತಾರೆ.)(ಯಾವಕಾ ರಣದಿಂದ ಜೀವರಿಗೆ) ಅನಾದಿಯೋಗ್ಯತಾ=ಅನಾದಿಯೋಗ್ಯತೆಯು, ಉಕ್ತಾ ಚ=ಪ್ರಮಾಣಗಳಿಂದ ಉಪಪಾದಿಸಿಕೊಳ್ಳಲ್ಪಟ್ಟದೋ, ತೇನ=ಆ ಕಾರಣದಿಂದ, ಸರ್ವಥಾ = ಸರ್ವಪ್ರಕಾರದಿಂದಲೂ, ಗ್ರಾಹ್ಯೈವ=ಅನಾದಿಯೋಗ್ಯತೆಯು ಸ್ವೀಕಾರ್ಯವೇ ಆಗಿದೆ. ॥ ೧೯೮ ॥ ೧೯೯ ॥

ಇದೇ ವಿಷಯದಲ್ಲಿ ಹೇತ್ವಂತರವನ್ನು ಹೇಳುತ್ತಾರೆ.—

ಮೂ ॥ ಮುಕ್ತಾನಾಂ ತಾರತಮ್ಯಂ ಚ ಮಾನೈರುಕ್ತೈರ್ನಚಾಲ್ಯತೇ।
ಜ್ಞಾನಿನೋಽಪಿ ಯತೋ ನಿತ್ಯಂ ಕುರ್ವಂತಿ ಶುಭಮೇವ ಹಿ ॥ ೨೦೦ ॥
ತಾರತಮ್ಯಂ ತು ಮುಕ್ತೌ ಚ ತೇನೈವಾಧ್ಯವಸೀಯತೇ ।
ತಾರತಮ್ಯಂ ನ ಚೇನ್ಮುಕ್ತೌ ಕುತಃ ಕುರ್ಯುಃ ಶುಭಂ ಪುನಃ ॥ ೨೦೧ ॥
ಕೃಚ್ಛ್ರೇಣಾಪಿ ತಪೋ ಜ್ಞಾನಂ ಕರ್ಮಾಣ್ಯೇತೇ ಚರಂತಿ ಹಿ ।
ಬಿಭ್ಯತಿ ಸ್ಮಾಶುಭಾನ್ನಿತ್ಯಂ ಸಕಾಮಾಶ್ಚ ಶುಭೇ ಸದಾ ॥ ೨೦೨ ॥
ನ ಚ ಸ್ವಭಾವ ಏವಾಯಂ ಭಯಪೂರ್ವಪ್ರವೃತ್ತಿತಃ ।
ಕೃಚ್ಛ್ರೇಣಾಚರಣಾಚ್ಚೈವ ಶುಭಸ್ಯೈವ ಪುನಃ ಪುನಃ ॥ ೨೦೩ ॥

ಅ ॥ ಮುಕ್ತಾನಾಂ=ಮುಕ್ತರ, ತಾರತಮ್ಯಂ ಚ = ನೀಚೋಚ್ಚಭಾವವು, ಉಕ್ತೈಃ ಮಾನೈಃ=ಹೇಳಿದ ಪ್ರಮಾಣಗಳಿಂದ (ಅಂದರೆ—ಪ್ರಮಾಣಗಳನ್ನು ಹೇಳಿದರಿಂದ) ನ ಚಾಲ್ಯತೇ= ಅನ್ಯಥಾ ಮಾಡಲಿಕ್ಕೆ ಶಕ್ಯವಾಗುವುದಿಲ್ಲ. (ಯಾವಾಗ ಮುಕ್ತಿಯಲ್ಲಿಯೂ ತಾರತಮ್ಯವು ಪ್ರಮಿತವಾಗಿದೆಯೋ ಆಗ ಜೀವ-ಬ್ರಹ್ಮೈಕ್ಯವು ಸುತರಾಂ ಕೂಡಲಾರದು. ಆಗ ತತ್ತ್ವಮ ಸ್ಯಾದಿ ವಾಕ್ಯಗಳಿಗೆ ಜೀವ-ಬ್ರಹ್ಮೈಕ್ಯ ಪರತ್ವವೂ ಕೂಡಲಾರದು. ಗುಣಗಳಿಗೆ ಮಿಥ್ಯಾತ್ವ ಕಲ್ಪನೆಯು ಸುತರಾಂ ಯುಕ್ತವಾಗಲಾರದು.) (ಮುಕ್ತರಿಗೆ ತಾರತಮ್ಯದಲ್ಲಿ ಪ್ರಮಾಣಾಂತರ ವನ್ನು ಹೇಳುತ್ತಾರೆ.) ಜ್ಞಾನಿನೋಽಪಿ=ಜ್ಞಾನಿಗಳೂ ಕೂಡ, ಯತಃ=ಯಾವ ಕಾರಣದಿಂದ, ನಿತ್ಯಂ=ನಿತ್ಯದಲ್ಲಿಯೂ, ಶುಭಮೇವ = ಶುಭಕರ್ಮವನ್ನೇ, ಕುರ್ವಂತಿ = ಮಾಡುತ್ತಾರೋ, ಪಾಪವನ್ನು ಪರಿಹರಿಸಿಕೊಳ್ಳುತ್ತಾರೋ, ತು = ಶುಭಕರ್ಮಕರಣ, ಅಶುಭಪರಿತ್ಯಾಗಗಳಲ್ಲಿ ತಾರತಮ್ಯವು ಇದೆ. ಹಿ=' ದಶಕಲ್ಪಂ ತಪಶ್ಚೀರ್ಣಂ 'ಇತ್ಯಾದಿ ಪ್ರಮಾಣಪ್ರಸಿದ್ಧವು. ತೇನೈವ= ಆ ನಿರವಕಾಶ ಪ್ರಮಾಣದಿಂದಲೇ, ಮುಕ್ತೌ = ಮುಕ್ತಿಯಲ್ಲಿ, ತಾರತಮ್ಯಂ = ತಾರತಮ್ಯವು, ಅಧ್ಯವಸೀಯತೇ = ನಿಶ್ಚಯಿಸಲ್ಪಡುತ್ತದೆ. (ಮೊದಲು ಮೋಕ್ಷಸಾಧನಗಳಲ್ಲಿ ತಾರತಮ್ಯ ವಿದ್ದುದರಿಂದ ಮೋಕ್ಷ ತಾರತಮ್ಯವು ಹೇಳಲ್ಪಟ್ಟದೆ. ಈಗಲಾದರೂ ಜ್ಞಾನದಿಂದ ನಿಶ್ಚಿತ ಮುಕ್ತಿ ಯುಳ್ಳವರಿಗೂ ಶುಭಕರಣ, ಅಶುಭ ಪರಿತ್ಯಾಗ ತಾರತಮ್ಯದಿಂದ ಮೋಕ್ಷತಾರತಮ್ಯವು ಹೇಳ ಲ್ಪಡುತ್ತದೆ. ಎಂದು ಭೇದವು.) (ಹೀಗೆ ಅಂಗೀಕರಿಸದೆ ಇದ್ದರೆ ಬಾಧಕವನ್ನು ಹೇಳುತ್ತಾರೆ.) ಮುಕ್ತೌ=ಮುಕ್ತಿಯಲ್ಲಿ, ತಾರತಮ್ಯಂ = ತಾರತಮ್ಯವು, ನ ಚೇತ್ = ಇಲ್ಲವಾದರೆ, ಪುನಃ= ಜ್ಞಾನವು, ಹುಟ್ಟಿದಮೇಲೆ, ಕುತಃ = ಯಾವ ಕಾರಣದಿಂದ, ಶುಭಂ = ಶುಭಕರ್ಮವನ್ನು,

ಕುರ್ಯುಃ=ಮಾಡಿಯಾರು. (ಅಂದರೆ— ಬ್ರಹ್ಮಾದಿಗಳು ಮುಕ್ತಿಯಲ್ಲಿ ತಾರತಮ್ಯವುಳ್ಳವರು ಆಗದೆ ಇದ್ದರೆ ಆಗ ಜ್ಞಾನಮಾತ್ರದಿಂದ ಮೋಕ್ಷವು ಪ್ರಾಪ್ತಪ್ರಾಯವಾಗಿರುವುದರಿಂದ ಜ್ಞಾನವು ಹುಟ್ಟಿದ ಮೇಲೆ ಶುಭಕರ್ಮವನ್ನು ಮಾಡಲಾರರು. ಅಶುಭವನ್ನು ಪರಿತ್ಯಾಗಮಾಡಲಾರರು.) ಜ್ಞಾನೋತ್ತರ ಕಾಲದಲ್ಲಿಯೂ ಶುಭಕರ್ಮವನ್ನು ಮಾಡುವುದರಿಂದಲೂ, ಅಶುಭ ಕರ್ಮವನ್ನು ಬಿಡುವುದರಿಂದಲೂ ಮುಕ್ತಿಯಲ್ಲಿ ತಾರತಮ್ಯವಿದೆ ಎಂದು ಸಿದ್ಧಿಸುತ್ತದೆ.) (ವಿಪರ್ಯಯ ಪರ್ಯವಸಾನವನ್ನು ಹೇಳುತ್ತಾರೆ.) ಏತೇ=ಈ ಜ್ಞಾನಿಗಳು, ಕೃಚ್ಛ್ರೇಣಾಪಿ=ಕಷ್ಟದಿಂದಲೂ, ತಪಃ=ತಪಸ್ಸನ್ನು, ಜ್ಞಾನಂ=ಜ್ಞಾನವನ್ನು, ಶ್ರವಣಾದಿಗಳನ್ನು, ಕರ್ಮಾಪಿ=ಯಜ್ಞಾದಿ ಕರ್ಮವನ್ನು ಕೂಡ, ಚರಂತಿ=ಮಾಡುತ್ತಾರೆ. ಸಕಾಮಾಶ್ಚ ಶುಭೇ ಸದಾ=ಯಾವಾಗಲೂ ಶುಭ ಕರ್ಮದಲ್ಲಿ ಇಚ್ಛಿಸಿಕೊಂಡು ಇರುವವರು, (ಅಂದರೆ, ಒಂದು ತಪಸ್ಸು ಮೊದಲಾದುದನ್ನು ಮಾಡುವ ಕಾಲದಲ್ಲಿ ಬೇರೆ ತಪಸ್ಸು ಮೊದಲಾದುದನ್ನು ಮಾಡಬೇಕೆಂದು ಇಚ್ಛಿಸುವವರು) ನಿತ್ಯಂ = ನಿರಂತರದಲ್ಲಿಯೂ, ಅಶುಭಾತ್ = ಅಶುಭಕರ್ಮದೆಶೆಯಿಂದ, ಬಿಭ್ಯತಿ ಸ್ಮ = ಭಯ ಪಡುತ್ತಾ ಇರುತ್ತಾರೆ. (ಆದುದರಿಂದ ಜ್ಞಾನವು ಹುಟ್ಟಿದ ಮೇಲೆ ಮಾಡಿದ ವಿಚಿತ್ರವಾದ ಶುಭ ಕರ್ಮದಿಂದ ವಿಚಿತ್ರವಾದ ಆನಂದ ವೃದ್ಧಿಯನ್ನು ಹೊಂದುತ್ತಾರೆ.) (ಹಾಗಾದರೆ— ಜ್ಞಾನವು ಹುಟ್ಟಿದ ಮೇಲೆ ಮಾಡಿದ ಶುಭಕರ್ಮಗಳಿಗೆ ಫಲವು ಇರುತ್ತಿದ್ದರೆ ಇದಾಗುತ್ತಿತ್ತು, ಹೀಗೆ ಇಲ್ಲ. ಅವರಿಗೆ ಕರ್ಮಗಳಲ್ಲಿ ಅಧಿಕಾರವಿಲ್ಲ; ಅನಧಿಕಾರಿಮಾಡಿದ ಕರ್ಮವು ನಿಷ್ಫಲವೆಂದು ಪ್ರಸಿದ್ಧವೇ. ಕರ್ಮಾನುಷ್ಠಾನವಾದರೂ ಬೇರೆ ಪ್ರಕಾರವಾಗಿ ಕೂಡಬಹುದು. ಆ ಜ್ಞಾನಿಗಳಾದ ಬ್ರಹ್ಮಾದಿಗಳು ಜ್ಞಾನವು ಹುಟ್ಟುವುದಕ್ಕಿಂತ ಮೊದಲು ಆದರ ನೈರಂತರ್ಯಗಳಿಂದ ಶುಭಕರ್ಮಗಳನ್ನು ಅನುಷ್ಠಾನಮಾಡಿದವರಾಗಿ ಜ್ಞಾನವು ಹುಟ್ಟಿದ ಮೇಲೆಯೂ ಅಭ್ಯಾಸಾತಿಶಯದಿಂದಲೆ ಕರ್ಮವನ್ನು ಮಾಡುತ್ತಾ ಇರುತ್ತಾರೆ ಎಂದಾಶಂಕಿಸಿಕೊಂಡು ಪರಿಹರಿಸುತ್ತಾರೆ.) ಅಯಂ= ಜ್ಞಾನಿಗಳ ಶುಭಾಚರಣರೂಪವಾದುದು, ಭಯಪೂರ್ವಪ್ರವೃತ್ತಿತಃ = ಮಾಡದೆ ಇದ್ದರೆ ಪ್ರತ್ಯವಾಯವು ಬರುವುದು ಎಂದು ಭಯಪೂರ್ವಕವಾದ ಪ್ರವೃತ್ತಿಯಿಂದಲೂ, ಕೃಚ್ಛ್ರೇಣೈವ=ಕಷ್ಟದಿಂದಲೇ, ಪುನಃ ಪುನಃ = ಮತ್ತೂ ಮತ್ತೂ, ಶುಭಸ್ಯ ಆಚರಣಾಚ್ಚ=ಪ್ರೇಕ್ಷಾ ಪೂರ್ವಕವಾಗಿ ಅಶುಭವನ್ನು ಪರಿತ್ಯಾಗಮಾಡಿಕೊಂಡು ಶುಭಕರ್ಮವನ್ನೇ ಮಾಡುವುದರಿಂದಲೂ, ಸ್ವಭಾವ ಏವ=ಸ್ವಭಾವವೇ, ನ ಚ=ಅಲ್ಲ.

ತಾ || ಸ. ರ. ವಿ.— (1) ಚತುರ್ಮುಖನನ್ನು ಆರಂಭಿಸಿ ಕಲಿಪರ್ಯಂತರಾದ ಜೀವರಿಗೆ ಅನಾದಿಲಾಗಾಯಿತು ವಿಚಿತ್ರ ಸ್ವಭಾವವಿದೆ ಎಂದು ಯಾವುದು ಮೊದಲು ಸಾಧಿಸಲ್ಪಟ್ಟದೋ ಅದನ್ನು ಅಂಗೀಕರಿಸಲೇಬೇಕು. (2) ಮುಕ್ತರಿಗೆ ತಾರತಮ್ಯವಿದೆ ಎಂದು ಮೊದಲು ಪ್ರಮಾಣಗಳಿಂದ ಸಾಧಿಸಿರುವರು. ಅದನ್ನೇ ಪುನಃ 'ಜ್ಞಾನಿನಃ' ಇತ್ಯಾದಿಗಳಿಂದ ಅತಿಶಯವಾಗಿ ದೃಢೀಕರಿಸಿದರು. 'ತರತಿ ಶೋಕಮಾತ್ಮವಿತ್' ಎನ್ನುವ ಶ್ರುತಿಯಿಂದ ಬ್ರಹ್ಮಜ್ಞಾನವು ಹುಟ್ಟಿದವರೆಲ್ಲರಿಗೂ ಮೋಕ್ಷವು ಇದ್ದೇ ಇದೆ. ಜ್ಞಾನಿಗಳಿಗೂ ಶುಭಕರ್ಮಗಳಲ್ಲಿ ಅಧಿಕಾಧಿಕ ಪ್ರವೃತ್ತ್ಯನ್ಯಥಾನುಪಪತ್ತಿಯಿಂದ ಮೋಕ್ಷದಲ್ಲಿ ತಾರತಮ್ಯವು ನಿಶ್ಚಿತವಾಗುತ್ತದೆ. ನಿಷ್ಫಲಗಳಲ್ಲಿ ಬುದ್ಧಿಮಂತನಿಗೆ ಪ್ರವೃತ್ತಿಯು ಕೂಡಲಾರದು. ಆದುದರಿಂದ ಜ್ಞಾನೋತ್ತರಾನುಷ್ಠಿತ ಕರ್ಮಗಳಿಗೂ ಫಲವು ಪ್ರಮಾಣ ಪ್ರಮಿತವಾಗಿರುವುದರಿಂದ ಜ್ಞಾನಿಗಳ ಜ್ಞಾನೋತ್ತರದಲ್ಲಿ ಮಾಡುವ ಕರ್ಮಾನುಷ್ಠಾನವು ಸ್ವಭಾವಭೂತವಾದುದ. ಅಂದರೆ— ನಿಷ್ಫಲವಾದುದು ಎಂದು ಹೇಳ ಕೂಡದು ॥ ೨೦೦ ॥ ೨೦೧ ॥ ೨೦೨ ॥ ೨೦೩ ॥

ಹಾಗಾದರೆ— ಜ್ಞಾನಿಗಳಿಗೆ ಕ್ಲೇಶದಿಂದೆಲೂ ಶುಭಾನುಷ್ಠಾನಾದಿಗಳು ಪ್ರಯೋಜನೋದ್ದೇಶವಿಲ್ಲದೇನೇ ಪೂರ್ವಸಂಸ್ಕಾರವಶದಿಂದ ಕೂಡಲಿ, ಎಂದರೆ—

ಮೂ ॥ ತಾದೃಶೋಽಪಿ ಸ್ವಭಾವಶ್ಚೇದಜ್ಞಸ್ಯಾಪಿ ಭವೇತ್ತಥಾ ।
ಫಲವತ್ತ್ವೇ ಪ್ರಮಾಣಂ ಚೇತ್ತತ್ರ ಜ್ಞಸ್ಯ ಸಮಂ ಹಿ ತತ್ ॥ ೨೦೪ ॥
ನಿಷ್ಕಾಮಂ ಜ್ಞಾನಪೂರ್ವಂ ಚ ನಿವೃತ್ತಮಿಹ ಚೋಚ್ಯತೇ ।
ನಿವೃತ್ತಂ ಸೇವಮಾನಸ್ತು ಬ್ರಹ್ಮಾಭ್ಯೇತಿ ಸನಾತನಂ ॥ ೨೦೫ ॥
ಶುಭೇನಾನಂದವೃದ್ಧಿಃಸ್ಯಾದ್ಧ್ರಾಸಶ್ಚೈವಾಶುಭೇನ ಹಿ (ಹ) ।
ಜ್ಞಾನಿನೋಽಪಿ ಯತಸ್ತೇನ ಕರ್ತವ್ಯಂ ಶುಭಮೇವ ತೈಃ ॥ ೨೦೬ ॥
ಉಪಾಸ್ತೇ ಸ ಯ ಆತ್ಮಾನಂ ಕ್ಷೀಯತೇ ನಾಸ್ಯ ಕರ್ಮ ಹಿ ।
ಅಸ್ಮಾದ್ಧ್ಯೇವಾತ್ಮನೋ ಯದ್ಯತ್ಕಾಮಯೇತ್ಸೃಜತೇ ಚ ತತ್ ॥ ೨೦೭ ॥
ಅವಿದ್ವಾನ್ ಬಹುಕರ್ಮಾಪಿ ಹ್ಯಂತವತ್ಫಲಮಾಪ್ನುಯಾತ್ ।
ಯದೇವ ವಿದ್ಯಯಾ ಕುರ್ಯಾತ್ತದೇವ ಹ್ಯತಿವೀರ್ಯವತ್ ।
ಇತ್ಯಾದಿ ವಾಕ್ಯಸಾಮರ್ಥ್ಯಾತ್ತಾರತಮ್ಯಂ ವಿಮುಕ್ತಿಗಂ ॥ ೨೦೮ ॥

ಅ ॥ ತಾದೃಶೋಽಪಿ=ಭಯಪೂರ್ವಪ್ರವೃತ್ತ್ಯಾದಿರೂಪವಾದುದೂ, ಸ್ವಭಾವಶ್ಚೇತ್=ಜ್ಞಾನಿಯ ಸ್ವಭಾವವೆಂದಾಗಿದ್ದರೆ, ಅಜ್ಞಸ್ಯಾಪಿ=ಅಜ್ಞನಿಗೂ, ತಥಾ=ಹಾಗೆ, ಭವೇತ್=ಆಗುವುದು. (ಜ್ಞಾನಿಗಳಿಗೆ ಕರ್ಮಾನುಷ್ಠಾನದಲ್ಲಿ ಅಜ್ಞರಕ್ಕಿಂತ ವಿಶೇಷವಿಲ್ಲ. ಅದರಲ್ಲಿ ಜ್ಞಾನಿಗಳ ಶುಭಪ್ರವೃತ್ತಿಯು ಪೂರ್ವತರ-ಪೂರ್ವತಮ ಸ್ವಭಾವಬಲದಿಂದಲೇ ಪ್ರವೃತ್ತವಾದುದು, ಫಲವುಳ್ಳದ್ದಲ್ಲ ಎಂದಂಗೀಕರಿಸುವವನನ್ನು ಕುರಿತು ಅಜ್ಞಾನಿಗಳ ಶುಭಪ್ರವೃತ್ತಿಯೂ ಕೂಡ ಪೂರ್ವತರ-ಪೂರ್ವತಮ ಸ್ವಭಾವದಿಂದಲೇ ಬಂದದ್ದು ಫಲವುಳ್ಳದ್ದಲ್ಲ. ವಿಶೇಷವಿಲ್ಲದಿರುವುದರಿಂದ ಎಂದು ಯಾರಾದರೊಬ್ಬನು ಹೇಳಿದರೆ ಆಗ ಏನು ಹೇಳಬೇಕು?) (ಪ್ರತಿಬಂದಿಯನ್ನು ಬಿಡಿಸುವುದಕ್ಕಾಗಿ ಆಶಂಕಿಸುತ್ತಾನೆ.) (ಸಾಮ್ಯವಿದ್ದರೆ ಪ್ರತಿಬಂದಿಯನ್ನು ತೆಗೆದುಕೊಳ್ಳಬೇಕು. ಇಲ್ಲಿ ಸಾಮ್ಯವೇ ಇಲ್ಲ. ಏಕೆಂದರೆ—) ಫಲವತ್ತ್ವೇ=(ಅಜ್ಞಾನಿಗಳು ಮಾಡಿದ ಕರ್ಮಗಳಿಗೆ) ಫಲವಿದೆ ಎನ್ನುವಲ್ಲಿ, ಪ್ರಮಾಣಂ ಚೇತ್ = **'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ'** ಇದುಮೊದಲಾದ ಪ್ರಮಾಣವಿದೆ, ಈ ಅಧಿಕಾರಿಗಳು ವಿಧಿವಿಷಯರಾಗಿರುತ್ತಾರೆ, ಎಂದಾದರೆ) (ಹೀಗೆ ಇರುವಾಗ ಸ್ವಭಾವಕಲ್ಪನೆಗೆ ಅವಕಾಶವಿಲ್ಲ.) (ಹೀಗಾದರೆ ಜ್ಞಾನಿಗಳಲ್ಲಿಯೂ ಸ್ವಭಾವಕಲ್ಪನೆಯು ಯುಕ್ತವಲ್ಲ ಎನ್ನುತ್ತಾರೆ.) ಜ್ಞಸ್ಯ=ಜ್ಞಾನಿಗೆ, ತತ್ರ=ಕರ್ಮಕ್ಕೆ ಫಲವಿದೆ ಎನ್ನುವ ವಿಷಯದಲ್ಲಿ, ತತ್=ಪ್ರಮಾಣವು, ಅಧಿಕಾರವೇ ಮೊದಲಾದುದು, ಸಮಂ ಹಿ=ಸಮವಷ್ಟೆ. (ಆ ಪ್ರಮಾಣವು ಯಾವುದೆಂದರೆ—) ನಿಷ್ಕಾಮಂ = ಕಾಮನಾವಿಲ್ಲದಿರುವ, ಜ್ಞಾನಪೂರ್ವಂ ಚ=ಜ್ಞಾನಪೂರ್ವಕವಾದುದು, ನಿವೃತ್ತಂ = ನಿವೃತ್ತವೆಂದು, ಇಹ=ಪ್ರವೃತ್ತ-ನಿವೃತ್ತಗಳ ಮಧ್ಯದಲ್ಲಿ, ಉಚ್ಯತೇ=ಹೇಳಲ್ಪಡುತ್ತದೆ. ನಿವೃತ್ತಂ=ನಿವೃತ್ತಕರ್ಮವನ್ನು, ಸೇವಮಾನಸ್ತು=ಸೇವಿಸಿಕೊಂಡು ಇರುವವನಾದರೂ, ಸನಾತನಂ=ಶಶ್ವದೇಕಪ್ರಕಾರನಾದ, ಬ್ರಹ್ಮ=ಪರಬ್ರಹ್ಮನನ್ನು, ಅಭ್ಯೇತಿ=ಅತಿಶಯವಾಗಿ ಹೊಂದುತ್ತಾನೆ. (ಅಂದರೆ, ಆನಂದೋದ್ರೇಕದ ಸಾಹಿತ್ಯದಿಂದ ಮುಕ್ತನಾಗುತ್ತಾನೆ.) (ಈ ಸ್ಮೃತಿವಾಕ್ಯಾರ್ಥವನ್ನು ವಿವರಿಸುವುದಕ್ಕಾಗಿ ವಾಕ್ಯಾಂತರವನ್ನು ಹೇಳುತ್ತಾರೆ.) ಶುಭೇನ=

ಶುಭಕರ್ಮದಿಂದ, ಆನಂದವೃದ್ಧಿಃ = ಆನಂದಕ್ಕೆ ವೃದ್ಧಿಯು, ಸ್ಯಾತ್=ಆಗುವುದು. ಯತಃ= ಯಾವ ಕಾರಣದಿಂದ, ಜ್ಞಾನಿನೋಽಪಿ=ಜ್ಞಾನಿಗೂ ಕೂಡ ಅಶುಭೇನ ಹ=ಅಶುಭಕರ್ಮದಿಂದ ಲಾದರೂ, ಹ್ರಾಸಶ್ಚೈವ=ಆನಂದಕ್ಕೆ ಹ್ರಾಸವು, ತೇನ=ಆ ಕಾರಣದಿಂದ, ತೈಃ = ಆ ಜ್ಞಾನಿ ಗಳಿಂದ, ಶುಭಮೇವ=ಶುಭಕರ್ಮವೇ, ಕರ್ತವ್ಯಂ = ಮಾಡತಕ್ಕುದು. (ಅಶುಭಕರ್ಮವನ್ನು ಬಿಡತಕ್ಕದ್ದೇ.) (ಈ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ.) ಸ ಯಃ = ಪ್ರಸಿದ್ಧನಾದ ಯಾವನು, ಆತ್ಮಾನಂ=ಶ್ರೀ ಹರಿಯನ್ನು, ಉಪಾಸ್ತೇ=ಉಪಾಸನೆಮಾಡುತ್ತಾನೋ, ಅಸ್ಯ=ಈ ಜ್ಞಾನಿಯ, ಕರ್ಮ=ಕರ್ಮವು, ನ ಕ್ಷೀಯತೇ ಹಿ = ಕ್ಷೀಣವಾಗುವುದಿಲ್ಲ. ಸಃ=ಜ್ಞಾನಿಯು, ಯದ್ಯತ್=ಯಾವುದು ಯಾವುದನ್ನು, ಕಾಮಯೇತ್=ಇಚ್ಛಿಸುವನೋ, ತತ್ = ಅದದನ್ನು, ಅಸ್ಮಾದ್ಧ್ಯೇವ ಆತ್ಮನಃ=ಈ ಆತ್ಮನ ಪ್ರಸಾದದಿಂದಲೇ, ಸೃಜತೇ ಚ = ಸೃಷ್ಟಿಮಾಡುತ್ತಾನೆ. (ಇದರಿಂದ **'ಸ ಯ ಆತ್ಮಾನಮೇವ ಲೋಕಮುಪಾಸ್ತೇ ನ ಹಾಸ್ಯ ಕರ್ಮ ಕ್ಷೀಯತೇ ಅಸ್ಮಾದ್ಧ್ಯೇವಾತ್ಮನೋ ಯದ್ಯತ್ಕಾಮಯತೇ ತತ್ತತ್ಸೃಜತೇ'** ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು.) ಅವಿದ್ವಾನ್ = ಜ್ಞಾನಿಯಾಗದಿದ್ದವನು, ಬಹುಕರ್ಮಾಪಿ= ಬಹುಕರ್ಮ ಗಳುಳ್ಳವನಾದಾಗ್ಯೂ, ಅಂತವತ್=ನಾಶವುಳ್ಳ, ಫಲಂ = ಫಲವನ್ನು, ಆಪ್ನುಯಾತ್=ಹೊಂದಿ ಯಾನು. (ಇದರಿಂದ **'ಯದ್ಯಪ್ಯನೇವಂವಿತ್ ಮಹತ್ಪುಣ್ಯಂ ಕರ್ಮ ಕರೋತಿ ತದ್ಧಾ ಸ್ಯಾಂತತಃ ಕ್ಷೀಯತ ಏವ'** ಎನ್ನುವ ಶ್ರುತಿಯನ್ನು ತೆಗೆದುಕೊಳ್ಳಬೇಕು.) ಯದೇವ= ಯಾವುದನ್ನೇ, ವಿದ್ಯಯಾ=ವಿದ್ಯೆಯಿಂದ, (ಬ್ರಹ್ಮಸಾಕ್ಷಾತ್ಕಾರಪೂರ್ವಕವಾಗಿ ತನಗೆ ಯೋಗ್ಯ ವಾದ ಉಪನಿಷತ್ತಿನಿಂದ, ಕುರ್ಯಾತ್ = ಮಾಡುವನೋ, ತದೇವ=ಅದೇವೇ, ಅತಿವೀರ್ಯ ವತ್=ಅತ್ಯಂತವೀರ್ಯವುಳ್ಳದ್ದು. (ಇದರಿಂದ **'ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪ ನಿಷದಾ ತದೇವ ವೀರ್ಯವತ್ತರಂ ಭವತಿ'** ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು.) ಇತ್ಯಾದಿ ವಾಕ್ಯಸಾಮರ್ಥ್ಯಾತ್=ಇದುಮೊದಲಾದ ವಾಕ್ಯಗಳ ಸಾಮರ್ಥ್ಯದಿಂದ (ಜ್ಞಾನಿಗಳು ಮಾಡಿದ ಕರ್ಮಗಳಿಗೆ ಫಲವು ತೋರುತ್ತದೆ. ಆದುದರಿಂದ ಅವುಗಳ ವೈಚಿತ್ರ್ಯದಿಂದ) ವಿಮುಕ್ತಿಗಂ=ಮೋಕ್ಷದಲ್ಲಿರತಕ್ಕ, ತಾರತಮ್ಯಂ = ತಾರತಮ್ಯವು ಸಿದ್ಧವು ॥ ೨೦೪ ॥ ೨೦೫ ॥ ॥ ೨೦೬ ॥ ೨೦೭ ॥ ೨೦೮ ॥

ಈ ವಾಕ್ಯಗಳು ಜ್ಞಾನಿಗಳು ಮಾಡಿದ ಕರ್ಮಗಳಿಗೆ ಸಫಲತ್ವವನ್ನು ಪ್ರತಿಪಾದಿಸುವುದಿಲ್ಲ. 'ಸ ಯ ಆತ್ಮಾನಂ' ಎನ್ನುವಲ್ಲಿ ಉಪಾಸಕನ ಕರ್ಮಗಳಿಗೆ ಅಕ್ಷಯಫಲತ್ವವು ಶ್ರುತವಾಗಿದೆ. ಇತರಕಡೆ ಜ್ಞಾನ, ವಿದ್ಯೆ, ಶಬ್ದಗಳಿಗೆ ಪರೋಕ್ಷಜ್ಞಾನಾರ್ಥತ್ವವೂ ಕೂಡುತ್ತದೆ ಎನ್ನುವ ಆಶಂಕೆಯನ್ನು ಪರಿಹರಿಸುತ್ತಾರೆ.—

**ಮೂ ॥ ನ ಚಾತ್ರೋಽಪಾಸಕಸ್ಯೈವ ಫಲಮಕ್ಷಯಮುಚ್ಯತೇ ॥ ೨೦೯ ॥**
**ನ ಹಿ ಜ್ಞಾನಂ ವಿನಾ ಕ್ವಾಪಿ ಫಲಸ್ಯಾಕ್ಷಯತಾ ಭವೇತ್ ।**
**ಜ್ಞಾನದ್ವಾರೇಣ ಚೇತ್ತಸ್ಯ ನಾಸ್ಮತ್ಪಕ್ಷಪ್ರತೀಪತಾ ॥ ೨೧೦ ॥**

ಅ ॥ ಅತ್ರ = ವಾಕ್ಯಗಳಲ್ಲಿ, ಉಪಾಸಕಸ್ಯೈವ = ಉಪಾಸಕನಿಗೇನೇ, ಅಕ್ಷಯಂ ಫಲಂ=ಕರ್ಮಗಳಿಗೆ ಅಕ್ಷಯವಾದ ಫಲವು, ನೋಚ್ಯತೇ ಹೇಳಲ್ಪಡುವುದಿಲ್ಲ. (ಜ್ಞಾನಾದಿ ಪದವನ್ನು ಪರೋಕ್ಷಜ್ಞಾನರೂಪವೆಂದು ವ್ಯಾಖ್ಯಾನಮಾಡಕೂಡದು.) (ಏಕೆಂದರೆ—) ಜ್ಞಾನಂ= ಬ್ರಹ್ಮಸಾಕ್ಷಾತ್ಕಾರವನ್ನು, ವಿನಾ=ಹೊರತು, ಕ್ವಾಪಿ=ಎಲ್ಲಿಯೂ ಮೋಕ್ಷದಲ್ಲಿಯೂ ಬೇರೆ

ಕಡೆಯಲ್ಲಿಯೂ, ಫಲಸ್ಯ = ಕರ್ಮಗಳ ಫಲಕ್ಕೆ, ಅಕ್ಷಯತಾ = ನಾಶರಾಹಿತ್ಯವು, ನ ಹಿ ಭವೇತ್ = ಆಗಲಾರದು. (ಹಾಗಾದರೆ— ಅಜ್ಞಾನಿಪಕ್ಷದಲ್ಲಿಯೂ ಅನುಪಪತ್ತಿಯು ಇಲ್ಲ. 'ಕರ್ಮಣಾ ಜ್ಞಾನಮಾಪ್ನೋತಿ' ಎನ್ನುವ ಶ್ರುತಿಯಿಂದ ಉಪಾಸಕನಿಂದ ಮಾಡಲ್ಪಟ್ಟ ಅಸಂಕಲ್ಪಿತ ಫಲಗಳುಳ್ಳ ಕರ್ಮಗಳು ಜ್ಞಾನವನ್ನು ಹುಟ್ಟಿಸುತ್ತವೆ. ಜ್ಞಾನದಿಂದ ಮೋಕ್ಷವು ಆಗುತ್ತದೆ ಎಂದು ಅಜ್ಞಾನಿಗಳು ಮಾಡಿದ ಕರ್ಮಗಳಿಗೂ ಜ್ಞಾನದ್ವಾರಾ ಅಕ್ಷಯಫಲತ್ವವು ಕೂಡುತ್ತದೆ ಎಂದರೆ) ಫಲಸ್ಯ = ಕರ್ಮಫಲಕ್ಕೆ, ಅಕ್ಷಯತಾ = ಅಕ್ಷಯತ್ವವು, ಜ್ಞಾನ ದ್ವಾರೇಣ ಚೇತ್ = ಜ್ಞಾನದ್ವಾರದಿಂದ ಎಂದಾದರೆ, ತಸ್ಯ = ಪರರುಮಾಡಿದ ವ್ಯಾಖ್ಯಾನಕ್ಕೆ, ಅಸ್ಮತ್ಪಕ್ಷಪ್ರತೀಪತಾ = ಮುಕ್ತ ತಾರತಮ್ಯವಿರೋಧಿತ್ವವು, ನ = ಇಲ್ಲ. (ಮುಕ್ತ ತಾರತಮ್ಯಕ್ಕೆ ಅನುಕೂಲವೇ.) ॥ ೨೦೯ ॥ ೨೧೦ ॥

ಜ್ಞಾನೋತ್ತರ ಕರ್ಮವು ಮೋಕ್ಷಾಂತರ್ಗತವಾದ ಫಲಕ್ಕೆ ಹೇತುವೆಂದು ಪ್ರಮಾಣಾಂತರ ದಿಂದಲೇ ಸಿದ್ಧವಾಗುವುದರಿಂದ ಮುಕ್ತರ ತಾರತಮ್ಯವನ್ನು ಬಿಡಲು ಸಾಧ್ಯವಿಲ್ಲವೆಂದಂಗೀಕರಿಸಿ ಕೊಂಡು ಹೇಳುತ್ತಾರೆ—

**ಮೂ ॥ ಜ್ಞಾನೋತ್ತರಸ್ಯೈವಮಪಿ ಹ್ಯಕ್ಷಯತ್ವಂ ನ ಚಾನ್ಯಥಾ ।**
**ಪೂರ್ವಭಾವಿಶುಭಾನಾಂ ಹಿ ಜ್ಞಾನೇನೈವ ಕೃತಾರ್ಥತಾ ॥ ೨೧೧ ॥**
**ಪ್ರಾರಬ್ಧಾನಾಂ ತು ಭೋಗೇನ ತಜ್ಞಾನೋತ್ತರಕರ್ಮಣಾಂ ।**
**ಮುಕ್ತಾವನುಪ್ರವೇಶಃ ಸ್ಯಾದನ್ಯಥಾ ತತ್ಕೃತಿರ್ನ ಹಿ ॥ ೨೧೨ ॥**

ಅ ॥ ಜ್ಞಾನೋತ್ತರಸ್ಯೈವ = ಜ್ಞಾನವು ಉಂಟಾದಮೇಲೆ ಇರತಕ್ಕ ಕರ್ಮಕ್ಕೇನೇ, ಅಕ್ಷಯತ್ವಂ = ಅಕ್ಷಯವಾದ ಮೋಕ್ಷದಲ್ಲಿ ಪ್ರವೇಶಿಸತಕ್ಕ ಫಲವತ್ವವು, ನ ಚಾನ್ಯಥಾ = ಬೇರೆ ಪ್ರಕಾರವಲ್ಲ ಪ್ರಕಾರಾಂತರವಿಲ್ಲ. ಅಂದರೆ— ಪರಿಶೇಷಪ್ರಮಾಣದಿಂದ. (ಪರಿಶೇಷಪ್ರಮಾಣ ವನ್ನೇ ತೋರಿಸುತ್ತಾರೆ.) (ಜ್ಞಾನಿಗಳು ಮಾಡಿದ ಕರ್ಮಗಳಲ್ಲಿ ಇಷ್ಟು ವಿಧಗಳು ಕೂಡುತ್ತವೆ. ೧ ಜ್ಞಾನಾರ್ಥತ್ವವು, ೨ ಭೋಗಾರ್ಥತ್ವವು, ೩ ವ್ಯರ್ಥತ್ವವು- ಇವುಗಳಲ್ಲಿ, ಜ್ಞಾನಿಕೃತಕರ್ಮ ಗಳಲ್ಲಿ ಜ್ಞಾನಾರ್ಥತ್ವವು ಕೂಡುವುದಿಲ್ಲ. ಏಕೆಂದರೆ—) ಪೂರ್ವಭಾವಿ ಶುಭಾನಾಂ = ಜ್ಞಾನ ದೆಶೆಯಿಂದ ಮೊದಲು ಇರತಕ್ಕ ಶುಭಕರ್ಮಗಳಿಗೆ, ಹಿ = ಯಾವಕಾರಣದಿಂದ, ಜ್ಞಾನೇನೈವ = ಜ್ಞಾನರೂಪ ಕಾರ್ಯದಿಂದಲೇ, ಕೃತಾರ್ಥತಾ = ಕೃತಕಾರ್ಯತ್ವವು. (ಬೇರೆ ಯಾವುದರಿಂದಲೂ ಅಲ್ಲ. ಆ ಕರ್ಮಗಳಿಗೆ ಬೇರೆಕಾರ್ಯವಿಲ್ಲ. ಜ್ಞಾನಾರ್ಥತ್ವವಿಲ್ಲದಿದ್ದರೆ ವೈಯರ್ಥ್ಯವು ಬರ ಬೇಕಾಗುವುದು. ಮತ್ತೂ ಮತ್ತು ಮೊದಲು ಹುಟ್ಟಿದ್ದ ಜ್ಞಾನವನ್ನು ಕುರಿತು ಮೇಲೆಮಾಡಿದ ಕರ್ಮಕಾರಣತ್ವವು ಕೂಡುವುದಿಲ್ಲ.) (ಹೀಗೆಯೇ ಭೋಗಾರ್ಥತ್ವವೂ ಕೂಡಲಾರದು. ಪ್ರಾಚೀನ ಪ್ರಾರಬ್ಧ ಕರ್ಮಗಳಿಂದಲೇ ಭೋಗವು ಹುಟ್ಟುತ್ತದೆ. ಹೇಗೆಂದರೆ—) ಪ್ರಾರಬ್ಧಾನಾಂ ತು = ಪ್ರಾರಬ್ಧಕರ್ಮಗಳಿಗಾದರೂ, ಭೋಗೇನ ತು = ಭೋಗದಿಂದಲೆ, ಕೃತಾರ್ಥತಾ = ಕೃತಕಾರ್ಯ ತ್ವವು. ಅನ್ಯಥಾ = ಜ್ಞಾನಿಗಳ ಕರ್ಮಗಳಿಗೆ ವೈಯರ್ಥ್ಯವಿದ್ದರೆ, ತತ್ಕೃತಿಃ = ಆ ಕರ್ಮಗಳ ಅನುಷ್ಠಾನವು, ನ ಹಿ = ಕೂಡಲಾರದಷ್ಟೆ. ತತ್ = ಅದುದರಿಂದ, ಜ್ಞಾನೋತ್ತರಕರ್ಮಣಾಂ = ಜ್ಞಾನವು ಉಂಟಾದಮೇಲೆ ಮಾಡಿದ ಕರ್ಮಗಳಿಗೆ, ಮುಕ್ತೌ = ಮುಕ್ತಿಯಲ್ಲಿ, ಅನುಪ್ರವೇಶಃ = ಪ್ರವೇಶವು, ಸ್ಯಾತ್ = ಆಗುವುದು. (ಅಂದರೆ—ಜ್ಞಾನೋತ್ತರ ಕರ್ಮಾನುಷ್ಠಾನವು ಮುಕ್ತಿಯಲ್ಲಿ ರತಕ್ಕ ಆನಂದದ ವೃದ್ಧಿಗೋಸ್ಕರವೇ ಆಗುವುದು.) ॥ ೨೧೧ ॥ ೨೧೨ ॥

ಜ್ಞಾನದಿಂದ ಮೊದಲು ಮಾಡಿದ ಶುಭಕರ್ಮಗಳು ಜ್ಞಾನಕ್ಕೆ ಉಪಯುಕ್ತಗಳು ಎಂದು ಹೇಳಲ್ಪಟ್ಟಿತು. ಆದರಲ್ಲಿ ಎಲ್ಲವೂ ಜ್ಞಾನೋಪಯುಕ್ತವು ಎಂದು ಪ್ರಸಕ್ತವಾಗುವಾಗ ವಿಶೇಷ ವನ್ನು ಹೇಳುತ್ತಾರೆ—

**ಮೂ ||** ಜ್ಞಾನಾತ್ಪೂರ್ವಾಣಿ ಕರ್ಮಾಣಿ ಶುಭಾನಿ ಜ್ಞಾನಸಿದ್ಧಯೇ |
ಅಕಾಮ್ಯಾನಿ ನಿಷಿದ್ಧಾನಿ ಜ್ಞಾನರೋಧಾಯ ಭುಕ್ತಯೇ || ೨೧೩ ||
ಯೋಗ್ಯತಾಯಾ ಬಲಾದ್ಯಚ್ಚ ಶುಭಬಾಹುಲ್ಯಮಾದಿತಃ |
ಜ್ಞಾನಬಾಹುಲ್ಯಮೇವೈತತ್ಕುರ್ಯಾನ್ನಾನ್ಯಸ್ಯ ಕಾರಣಂ || ೨೧೪ ||
ಜ್ಞಾನಸ್ಯ ಭಕ್ತಿಭಾಗತ್ವಾದ್ಭಕ್ತಿರ್ಜ್ಞಾನಮಿತೀರ್ಯತೇ |
ಜ್ಞಾನಸ್ಯೈವ ವಿಶೇಷೋ ಯದ್ಭಕ್ತಿರಿತ್ಯಭಿಧೀಯತೇ || ೨೧೫ ||
ಪರೋಕ್ಷತ್ವಾಪರೋಕ್ಷತ್ವೇ ವಿಶೇಷೌ ಜ್ಞಾನಗೌ ಯಥಾ |
ಸ್ನೇಹಯೋಗೋಽಪಿ ತದ್ವತ್ಸ್ಯಾದ್ವಿಶೇಷೋ ಜ್ಞಾನಗೋಽಪರಃ || ೨೧೬ ||
ಇತ್ಯಭಿಪ್ರಾಯತಃ ಪ್ರಾಯೋ ಜ್ಞಾನಮೇವ ವಿಮುಕ್ತಯೇ |
ವದಂತಿ ಶ್ರುತಯಃ ಸೋಽಯಂ ವಿಶೇಷೋಽಪಿ ಹ್ಯುದೀರ್ಯತೇ || ೨೧೭ ||
ಭಕ್ತಿರ್ಜ್ಞಾನಮಿತಿ ಕ್ವಾಪಿ ನ ಹಿ ದ್ವೇಷಯುತಾ ದೃಶಿಃ |
ಪುರುಷಾರ್ಥಾಯ ಭವತಿ ಸರ್ವಶ್ರುತಿವಿರೋಧತಃ || ೨೧೮ ||

**ಅ ||** ಜ್ಞಾನಾತ್=ಜ್ಞಾನದೆಶೆಯಿಂದ, ಪೂರ್ವಾಣಿ=ಮೊದಲಿನದ್ದಾದ, ಅಕಾಮ್ಯಾನಿ ಶುಭಾನಿ ಕರ್ಮಾಣಿ=ಅಕಾಮ್ಯಗಳೇ ಆದ ಪುಣ್ಯಕರ್ಮಗಳು, ಜ್ಞಾನಸಿದ್ಧಯೇ=ಜ್ಞಾನದ ಸಿದ್ಧಿಗೋಸ್ಕರ, (ಆಗುತ್ತವೆ.) (ಕಾಮ್ಯಗಳಲ್ಲ.) (ಶುಭಾನಿ ಎನ್ನುವ ವಿಶೇಷಣಕ್ಕೆ ಕೃತ್ಯವನ್ನು ಹೇಳುತ್ತಾರೆ.) ನಿಷಿದ್ಧಾನಿ=ನಿಷಿದ್ಧಕರ್ಮಗಳು, ಜ್ಞಾನರೋಧಾಯ=ಜ್ಞಾನವು ಹುಟ್ಟದಿರುವುದಕ್ಕೂ, ಹುಟ್ಟಿದಜ್ಞಾನದ ತಿರಸ್ಕಾರಕ್ಕೂ ಕೂಡ, ಭುಕ್ತಯೇ=ದುಃಖದ ಅನುಭವಕ್ಕಾಗಿಯೂ (ಆಗುತ್ತವೆ.) (ಹೀಗೆ ಕಾಮ್ಯ ಕರ್ಮಗಳೂ ಕೂಡ ಸ್ವರ್ಗಾದಿ ಸುಖಕ್ಕೇನೇ ಕಾರಣವಾಗುತ್ತವೆ. ಜ್ಞಾನಕ್ಕೆ ಕಾರಣಗಳಾಗುವುದಿಲ್ಲ.) (ಹಾಗಾದರೆ ಹೇಗೆ ಕಾಮ್ಯಾನಿ ಶುಭಾನಿಚ ಎನ್ನುವ ವಿಶೇಷಣ ವನ್ನು ತೆಗೆದು ಕೊಳ್ಳುತ್ತೀರೋ, ಹಾಗೆಯೇ 'ನಿತ್ಯನೈಮಿತ್ತಿಕ ವ್ಯತಿರಿಕ್ತಾನಿ' ಎಂದೂ ವಿಶೇಷಣ ವನ್ನು ತೆಗೆದುಕೊಳ್ಳಬೇಕು. ನಿತ್ಯಾದಿಗಳಿಗೂ ಕೂಡ ಪ್ರತ್ಯವಾಯ ಪರಿಹಾರಕಗಳು. ಜ್ಞಾನಕ್ಕೆ ಕಾರಣಗಳಲ್ಲ. ಎಂದರೆ—) ಯೋಗ್ಯತಾಯಾಃ=ಬ್ರಾಹ್ಮಣತ್ವಾದಿ ರೂಪವಾದ ಯೋಗ್ಯತೆಯು ಪಿತೃ ಮರಣಾದಿರೂಪವಾದ ಯೋಗ್ಯತೆಯು, ಬಲಾತ್=ಬಲದಿಂದ, ಯಚ್ಚ=ಯಾವುದು, ಶುಭ ಬಾಹುಲ್ಯಂ=ಶುಭಕರ್ಮಗಳ ಬಾಹುಲ್ಯವು, ಆದಿತಃ=ಆದಿಯಲ್ಲಿ, (ಅಂದರೆ— ಜ್ಞಾನದಿಂದ ಮೊದಲು) ಮಾಡಲ್ಪಟ್ಟದ್ದೋ, ಏತತ್=ಇದು, ಜ್ಞಾನಬಾಹುಲ್ಯಮೇವ=ಜ್ಞಾನಕ್ಕೆ ಬಹುಲತ್ವ ವನ್ನೇ, ಕುರ್ಯಾತ್=ಮಾಡುವುದು. ಅನ್ಯಸ್ಯ=ಪ್ರತ್ಯವಾಯಮಾತ್ರ ಪರಿಹಾರಕ್ಕೆ, ಕಾರಣಂ= ಕಾರಣವು, ನ = ಅಲ್ಲ. (ಜ್ಞಾನಪದವು ಅವಬೋಧಮಾತ್ರಕ್ಕೆ ಪ್ರತಿಪಾದಕವು ಎನ್ನುವ ಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ) ಜ್ಞಾನಸ್ಯ=ಜ್ಞಾನಕ್ಕೆ, ಭಕ್ತಿಭಾಗ ತ್ವಾತ್ = ಭಕ್ತಿಯ ಏಕದೇಶತ್ವವಿದ್ದಪ್ರಯುಕ್ತ, ಜ್ಞಾನಮಿತಿ=ಜ್ಞಾನವೆನ್ನುವ ಪದದಿಂದ, ಭಕ್ತಿಃ=ಭಕ್ತಿಯು, ಈರ್ಯತೇ=ಲಕ್ಷಿಸಲ್ಪಡುತ್ತದೆ. (ಅಂದರೆ— ಈ ಶಾಸ್ತ್ರದಲ್ಲಿ ಎಲ್ಲಿ ಜ್ಞಾನಕ್ಕೆ ಮೋಕ್ಷಸಾಧನತ್ವವು ಹೇಳಲ್ಪಡುತ್ತದೋ ಅಲ್ಲಲ್ಲಿ ಜ್ಞಾನಂ ಎನ್ನುವ ಪದದಿಂದ

ಭಕ್ತಿಯು ಲಕ್ಷಿಸಲ್ಪಡುತ್ತದೆ. ಹೇಗೆಂದರೆ— ಮಾಹಾತ್ಮ್ಯಜ್ಞಾನ ಸ್ನೇಹ ಸಮುದಾಯವೇ ಭಕ್ತಿಯು ಎಂದು ಹೇಳಲ್ಪಟ್ಟಲ್ಲಿ ಜ್ಞಾನವು ಭಕ್ತಿಯ ಏಕದೇಶವು. ತಥಾಚ ಏಕದೇಶ ಏಕದೇಶಿತ್ವರೂಪವಾದ ಸಂಬಂಧದಿಶೆಯಿಂದ ಜ್ಞಾನಶಬ್ದಕ್ಕೆ ಭಕ್ತಿಲಕ್ಷಕತ್ವವು ಕೂಡುತ್ತದೆ. (ಪ್ರಕಾರಾಂತರವನ್ನು ಹೇಳುತ್ತಾರೆ) ಯತ್ = ಯಾವಾಗ, ಜ್ಞಾನಸ್ಯೈವ = ಜ್ಞಾನದ್ದೇ, ವಿಶೇಷಃ=ಸ್ನೇಹಾದಿ ಸಾಹಿತ್ಯರೂಪವಾದ ಧರ್ಮವು ಆಗುತ್ತದೋ, (ಆಗ ಅದು) ಭಕ್ತಿರಿತಿ= ಭಕ್ತಿಯೆಂದು, ಅಭಿಧೀಯತೇ=ಹೇಳಲ್ಪಡುತ್ತದೆ (ಜ್ಞಾನವೂ ಸ್ನೇಹವೂ ಕೂಡ ಭಕ್ತಿಯ ಅಂಗಗಳು; ಅದರಲ್ಲಿ ಒಂದಂಗದಿಂದ ಅಂಶಾಂತರಕ್ಕೆ ಉಪಲಕ್ಷಣವು ಅಂತೂ ಭಕ್ತಿಯೇ ಸಿದ್ಧಿಸುತ್ತದೆ.) (ಏಕದೇಶಾಂತರದಿಂದ ಏಕದೇಶಾಂತರಕ್ಕೆ ಉಪಲಕ್ಷಣದಲ್ಲಿ ದೃಷ್ಟಾಂತವನ್ನು ಹೇಳುತ್ತಾರೆ.) ಯಥಾ=ಹೇಗೆ, ಪರೋಕ್ಷತ್ವಾಪರೋಕ್ಷತ್ವೇ=ಪರೋಕ್ಷತ್ವ ಅಪರೋಕ್ಷತ್ವ ರೂಪಗಳಾದ, ವಿಶೇಷೌ=ವಿಶೇಷಗಳು, ಜ್ಞಾನಗೌ=ಜ್ಞಾನಗತ ಧರ್ಮಗಳೋ, (ಅದರಲ್ಲಿ 'ತಮೇವಂ ವಿದ್ವಾನ್' ಎನ್ನುವ ಪರೋಕ್ಷಜ್ಞಾನವು ಮೋಕ್ಷಸಾಧನವೆಂದು ಹೇಳೋಣ ಪರೋಕ್ಷತ್ವದಿಂದ ಅಪರೋಕ್ಷತ್ವವು ಲಕ್ಷಿತವಾಗುತ್ತದೆ.) (ದಾರ್ಷ್ಟಾಂತಿಕವನ್ನು ತೋರಿಸುತ್ತಾರೆ.) ತದ್ವತ್= ಅದರಂತೆ, ಜ್ಞಾನಗಃ=ಜ್ಞಾನಗತವಾದ, ಅಪರಃ=ಇತರವಾದ, ಸ್ನೇಹಯೋಗಃ = ಸ್ನೇಹಾಖ್ಯ ಉಪಾಯರೂಪವಾದ, ವಿಶೇಷಃ=ವಿಶೇಷವು, ಸ್ಯಾತ್=ಆಗುವುದು. (ಏಕದೇಶದಿಂದ ಏಕದೇಶಾಂತರದ ಲಕ್ಷಣೆಯೂ ಆಗುವುದು.) (ಲಾಕ್ಷಣಿಕ ಪ್ರಯೋಗದಲ್ಲಿ ಸೂತ್ರಕಾರರಿಗೆ ಏನು ಪ್ರಯೋಜನವೆಂದರೆ) ಇತ್ಯಭಿಪ್ರಾಯತಃ=ಈ ಅಭಿಪ್ರಾಯದಿಂದ, ಶ್ರುತಯಃ = **'ತರತಿ ಶೋಕಮಾತ್ಮವಿತ್'** ಇತ್ಯಾದಿಶ್ರುತಿಗಳು, ಪ್ರಾಯಃ=ಪ್ರಾಯಶಃ, ವಿಮುಕ್ತಯೇ=ಮೋಕ್ಷಕ್ಕಾಗಿ, ಜ್ಞಾನಮೇವ=ಜ್ಞಾನವನ್ನೇ, ವದಂತಿ=ಹೇಳುತ್ತವೆ (ಜ್ಞಾನಪದಕ್ಕೆ ಎರಡು ಅರ್ಥವಿದ್ದರೆ ಭಕ್ತಿಗ್ರಹಣಕ್ಕೆ ವೈಯರ್ಥ್ಯವು ಎಂದರೆ—) ಕ್ವಾಪಿ=ಎಲ್ಲಿಯಾದರೂ, ಭಕ್ತಿಃ ಜ್ಞಾನಮಿತಿ=ಭಕ್ತಿಯು ಜ್ಞಾನವು ಎನ್ನುವ ಪದಗಳಿಂದ, ಸೋಯಂ=ಆ ಈ ಸ್ನೇಹರೂಪವಾದ, ಮತ್ತು ಬೋಧರೂಪವಾದ, ವಿಶೇಷೋಽಪಿ=ವಿಶೇಷವೂ ಕೂಡ, ಉದೀರ್ಯತೇ=ಹೇಳಲ್ಪಡುತ್ತದೆ (ಹಿಂದೆ ಹೇಳಿದ್ದೇ ಅರ್ಥವು ಎನ್ನುವ ನಿಯಮವಿಲ್ಲ ಆದುದರಿಂದ ಅನುಪಪತ್ತಿಯಿಲ್ಲ.) ಅಂದರೆ ಎಲ್ಲಿ ಭಕ್ತಿಜ್ಞಾನಗಳನ್ನು ಒಟ್ಟಿಗೆ ಹೇಳುತ್ತೇವೋ ಆಗ ಪುನರುಕ್ತಿ ಬರುವುದರಿಂದ ಭಕ್ತಿಪದವು ಸ್ವಾರ್ಥೈಕದೇಶವನ್ನು ಬಿಟ್ಟು ಸ್ನೇಹರೂಪವಾದ ಅಂಶಕ್ಕೆ ಲಕ್ಷಕವು. ಮುಖ್ಯಾರ್ಥದಲ್ಲಿರತಕ್ಕದಲ್ಲ ಅನುಪಪತ್ತಿಯಿಲ್ಲದಿರುವುದರಿಂದ ಜ್ಞಾನಪದವು ಮುಖ್ಯಾರ್ಥಕವೇ. ಲಕ್ಷಕವಲ್ಲ.) (ಹಾಗಾದರೆ ಸ್ನೇಹವಿಲ್ಲದೆ ಜ್ಞಾನಮಾತ್ರದಿಂದ ಮುಕ್ತಿಯು ಅನುಪಪನ್ನವಾಗಿದ್ದರೆ ಆಗ ಜ್ಞಾನಪದಕ್ಕೆ ಲಕ್ಷಕತ್ವವನ್ನು ಆಶ್ರಯಿಸಬೇಕು. ಹೀಗೆ ಇಲ್ಲ. ಪುರುಷಾರ್ಥವು ಕೇವಲ ಭಕ್ತಿಯಿಂದಲೇ ಸಾಧ್ಯವು ಎನ್ನುವಲ್ಲಿ ಪ್ರಮಾಣವಿಲ್ಲ. ದ್ವೇಷಿಗಳಾದ ಶಿಶುಪಾಲಾದಿಗಳಿಗೂ ಮೋಕ್ಷವು ಕಂಡದೆ. 'ದ್ವೇಷಿಣಃ ಸ್ನಿಗ್ಧಾಃ' ಎನ್ನುವುದು ವಿರುದ್ಧವು. ಆದುದರಿಂದ ಲಕ್ಷಣಾವನ್ನು ಅಂಗೀಕರಿಸಿದ್ದು ಅನುಪಪನ್ನವು, ಎಂದರೆ— ದ್ವೇಷಕ್ಕೆ ಮೋಕ್ಷಸಾಧನತ್ವವನ್ನು ನಿರಾಕರಿಸುತ್ತಾರೆ.) ದ್ವೇಷಯುತಾ=ದ್ವೇಷದಿಂದ ಕೂಡಿರುವ, ದೃಶಿಃ=ಜ್ಞಾನವು. ಪುರುಷಾರ್ಥಾಯ=ಮೋಕ್ಷಕ್ಕಾಗಿ, ಸರ್ವಶ್ರುತಿವಿರೋಧತಃ= ಎಲ್ಲಾ ಶ್ರುತಿಗಳ ವಿರೋಧದಿಂದ, ನ ಹಿ ಭವತಿ=ಆಗುವುದಿಲ್ಲ.

**ತಾ ||** ಮಾಹಾತ್ಮ್ಯಜ್ಞಾನವೂ ಕೂಡ ದ್ವೇಷದಿಂದ ಯುಕ್ತವಾದರೆ ಮುಕ್ತಿಗೆ ಕಾರಣವಾಗುವುದಿಲ್ಲ. ಕೇವಲ ದ್ವೇಷವು ಮುಕ್ತಿಗೆ ಕಾರಣವಲ್ಲವೆನ್ನುವುದು ಸುತರಾಂ ಸಿದ್ಧವು. **'ನೈಷ್ಕರ್ಮ್ಯಮಪ್ಯಚ್ಯುತಭಾವವರ್ಜಿತಂ ನ ಶೋಭತೇ ಜ್ಞಾನಮಲಂ ನಿರಂಜನಂ'** ಕಾಮಾದಿದೋಷರಹಿತವಾದ ಜ್ಞಾನವೂ ಹರಿದ್ವೇಷದಿಂದ ಯುಕ್ತವಾದರೆ ಮುಕ್ತಿಗೆ ಕಾರಣವಾಗುವುದಿಲ್ಲ ॥ ೨೧೩ ॥ ೨೧೪ ॥ ೨೧೫ ॥ ೨೧೬ ॥ ೨೧೭ ॥ ೨೧೮ ॥

ದ್ವೇಷವು ಮುಕ್ತಿಗೆ ಸಾಧನವು ಎಂದಂಗೀಕರಿಸಿದರೆ ಸರ್ವಶ್ರುತಿಗಳ ವಿರೋಧವು ಹೇಗೆ ಎಂದರೆ— ಅವುಗಳಲ್ಲಿ ಒಂದು ಶ್ರುತಿಯನ್ನು ವರನಮಾಡುತ್ತಾರೆ—

ಮೂ ॥ ಚೇತನಸ್ಯ ದ್ವಯಂ ಭೋಗ್ಯಂ ಸಂಸಾರೋ ಮುಕ್ತಿರೇವ ಚ ।
ಸಂಸಾರಸ್ತ್ರಿವಿಧಸ್ತತ್ರ ಸ್ವರ್ಗೋ ಮಧ್ಯಮಧಸ್ತಥಾ ॥ ೨೧೯ ॥
ಮುಕ್ತಿಶ್ಚ ದ್ವಿವಿಧಾ ತತ್ರ ಸುಖಂ ನಿತ್ಯಂ ತಥಾಪರಂ ।
ನಿತ್ಯದುಃಖಮಿತಿ ಜ್ಞೇಯಂ ಸಾಧನಂ ಸಂಸೃತಾವಪಿ ॥ ೨೨೦ ॥
ಕಾಮ್ಯಂ ಕರ್ಮ ನಿಷಿದ್ಧಂ ಚ ಸಾಜ್ಞಾನಮಿತಿ ನಿಶ್ಚಯಃ ।
ದ್ವೇಷೋ ಭಕ್ತಿಶ್ಚ ಮುಕ್ತೌ ತು ಮುಕ್ತಿದ್ವಯವಿಧಾಯಕಂ ॥೨೨೧॥
ಇತಿ ಪೈಂಗಿಶ್ರುತೇರ್ದ್ವೇಷೋ ನೈವ ಸನ್ಮುಕ್ತಿಕಾರಣಂ ।
ಅಸನ್ಮುಕ್ತೇಃ ಕಾರಣಂ ಚ ಮುಕ್ತಾವಿತ್ಯತ್ರ ಕೇಶವಃ ॥ ೨೨೨ ॥
ಮುಕ್ತಿಶಬ್ದೋದಿತೋ ಮೋಕ್ಷಂ ಸ್ವಭಕ್ತಾನಾಂ ಕರೋತಿ ಯತ್ ।
ದ್ವೇಷತೋಽಪಿ ವಿಮುಕ್ತಿಶ್ಚೇನ್ಮಹಾತಾತ್ಪರ್ಯರೋಧನಂ ॥ ೨೨೩ ॥
ಭಕ್ತ್ಯಾ ಪ್ರಸನ್ನತೋ ದೇವಾನ್ ಮುಕ್ತಿರಿತ್ಯೇವ ತದ್ಗುಣಾನ್ ।
ವದಂತಿ ಶ್ರುತಯಸ್ಸರ್ವಾಃ ಪುರಾಣಾನ್ಯಾಗಮಾ ಅಪಿ ।
ಯದಿ ದ್ವೇಷೇಣ ಮುಕ್ತಿಃ ಸ್ಯಾದ್ವಕ್ತವ್ಯೋ ದೋಷಸಂಚಯಃ ॥೨೨೪॥

ಅ ॥ ಚೇತನಸ್ಯ=ಜೀವರ ಸಮುದಾಯಕ್ಕೆ ಸಂಸಾರಃ=ಸಂಸಾರವು, ಮುಕ್ತಿಶ್ಚ= ಮುಕ್ತಿಯು ಹೀಗೆ, ದ್ವಯಮೇವ=ಎರಡೇ, ಭೋಗ್ಯಂ=ಅನುಭವಿಸಲಿಕ್ಕೆ ಯೋಗ್ಯವಾದುದು. ತತ್ರ = ಮುಕ್ತಿಸಂಸಾರಗಳ ಮಧ್ಯದಲ್ಲಿ, ಸಂಸಾರಃ = ಸಂಸಾರವು, ಸ್ವರ್ಗಃ = ಸ್ವರ್ಗವು, ಮಧ್ಯಂ = ಮಾನುಷತ್ವವು, ಅಧಃ = ನರಕಾದಿಯು, ಹೀಗೆ ಮೂರು ವಿಧವು. ತಥಾ= ಹಾಗೆಯೇ, ನಿತ್ಯದುಃಖಂ = ನಿತ್ಯದುಃಖರೂಪವಾದುದು, ಅಪರಂ = ಇನ್ನೊಂದುವಿಧವಾದ ಮುಕ್ತಿಯೆಂದು, ಜ್ಞೇಯಂ=ತಿಳಿಯತಕ್ಕದು. ಸಂಸೃತೌ=ಸಂಸಾರವಿಷಯದಲ್ಲಿ, ಸಾಧನಂ= ಸಾಧನವಾದುದು, ಸಾಜ್ಞಾನಂ=ಅಜ್ಞಾನದಿಂದ ಸಹಿತವಾದುದು, ಕಾಮ್ಯಂ ಕರ್ಮ=ಕಾಮ್ಯ ಕರ್ಮವು, ನಿಷಿದ್ಧಂ ಚ=ನಿಷಿದ್ಧಕರ್ಮವು, ಇತಿ=ಹೀಗೆ, ನಿಶ್ಚಯಃ=ನಿಶ್ಚಯವು, ಮುಕ್ತೌ ತು = ಎರಡು ವಿಧವಾದ ಮುಕ್ತಿಯಲ್ಲಿಯಾದರೂ, ಸಾಧನಮಪಿ = ಯಥಾಯೋಗ್ಯವಾಗಿ ಸಾಧನವಾದ, ದ್ವೇಷಃ=ದ್ವೇಷವು, ಭಕ್ತಿಶ್ಚ=ಭಕ್ತಿಯೂ ಕೂಡ, ಮುಕ್ತಿದ್ವಯವಿಧಾಯಕಂ= ಹಿಂದೆ ಹೇಳಿದ ಎರಡುವಿಧಗಳಾದ ಮುಕ್ತಿಗಳನ್ನು ಮಾಡತಕ್ಕದು ಇತಿ=ಹೀಗೆ, ಪೈಂಗಿ ಶ್ರುತೇಃ=ಹೀಗೆ ಪೈಂಗಿಶ್ರುತಿಯಿಂದ, ದ್ವೇಷಃ=ದ್ವೇಷವು, ಸನ್ಮುಕ್ತಿಕಾರಣಂ=ನಿತ್ಯ ಸುಖರೂಪವಾದ ಸನ್ಮುಕ್ತಿಗೆ ಕಾರಣವು, ನೈವ ಜ್ಞಾಯತೇ=ತಿಳಿಯಲ್ಪಡುವುದೇ ಇಲ್ಲ. (ಸನ್ಮುಕ್ತಿ ಕಾರಣತ್ವವನ್ನು ನಿಷೇಧಿಸದೆ ಇರುವುದರಿಂದ ಹೀಗೆ ಹೇಗೆ ಹೇಳಿದ್ದು ಎಂದರೆ—) ಅಸನ್ಮುಕ್ತೇಃ ಕಾರಣಂ ಚ=ಅಸನ್ಮುಕ್ತಿಗೆ ಕಾರಣವೆಂದು, (ಹೇಳಲ್ಪಟ್ಟದೆ.) (ನಿತ್ಯದುಃಖಸ್ವರೂಪವಾದ ಮುಕ್ತಿಗೆ ದ್ವೇಷವನ್ನು ಕಾರಣವೆಂದು ಹೇಳಿರುವರು. ಆದುದರಿಂದ ಆ ದ್ವೇಷವು ಸನ್ಮುಕ್ತಿಗೆ ಕಾರಣವಾಗುವುದಿಲ್ಲವೆಂದು ತಿಳಿಯುತ್ತದೆ) (ಹಾಗಾದರೆ ಈ ಶ್ರುತಿಯಲ್ಲಿ ಮುಕ್ತಿವಿಷಯಕಗಳಾದ ಭಕ್ತಿದ್ವೇಷಗಳು ಸದಸನ್ಮುಕ್ತಿಕಾರಣಗಳೆಂದು ಹೇಳಲ್ಪಡುತ್ತವೆ. ವಿಷ್ಣುವಿಷಯಕಗಳಾದ

ಭಕ್ತಿದ್ವೇಷಗಳು ಪ್ರಕೃತಗಳಾಗಿವೆ. ಆದುದರಿಂದ ಹೇಗೆ ಸಂಬಂಧವು ಎಂದರೆ)ಮುಕ್ತೌ ಇತ್ಯತ್ರ= ಮುಕ್ತೌ ಎನ್ನುವ ಸಪ್ತಮ್ಯಂತಪದದಲ್ಲಿ, ಮುಕ್ತಿಶಬ್ದೋದಿತಃ=ಮುಕ್ತಿ ಎನ್ನುವ ಪ್ರಾತಿಪದಿಕ ದಿಂದ ಹೇಳಿಸಿಕೊಳ್ಳಲ್ಪಟ್ಟವನು, ಕೇಶವಃ = ಶ್ರೀ ಹರಿಯು, ಯತ್ = ಯಾವಕಾರಣದಿಂದ, ಸ್ವಭಕ್ತಾನಾಂ=ತನ್ನ ಭಕ್ತರಿಗೆ, ಮೋಕ್ಷಂ=ಮುಕ್ತಿಯನ್ನು, ಕರೋತಿ = ಮಾಡುತ್ತಾನೆ. (ದ್ವೇಷವು ಮುಕ್ತಿಗೆ ಸಾಧನವೆಂದಂಗೀಕರಿಸಿದರೆ ಯುಕ್ತಿವಿರೋಧವೂ ಇದೆ ಎಂದು ಹೇಳುತ್ತಾರೆ) ದ್ವೇಷತೋಽಪಿ=ದ್ವೇಷದಿಂದಲೂ ಕೂಡ, ವಿಮುಕ್ತಿಶ್ಚೇತ್=ಮೋಕ್ಷವಾಗುವುದಾದರೆ, ಮಹಾ ತಾತ್ಪರ್ಯರೋಧನಂ=ಮಹಾತಾತ್ಪರ್ಯಕ್ಕೆ ವಿರೋಧವು. (ಅಂದರೆ ಕೇವಲ ಭಕ್ತಿಯಿಂದ ಅಲ್ಲ. ಮತ್ತೆ ದ್ವೇಷದಿಂದಲೂ ವಿಶಿಷ್ಟಮುಕ್ತಿಯೆಂದಂಗೀಕರಿಸಲ್ಪಡುವುದಾದರೆ ಆಗ ಎಲ್ಲಾ ಶ್ರುತಿ ಮೊದಲಾದವುಗಳಿಗೆ ಭಗವಂತನ ಗುಣೋತ್ಕರ್ಷದಲ್ಲಿಯೇ ಯಾವುದು ಮಹಾತಾತ್ಪರ್ಯವೋ ಅದು ವಿರುದ್ಧವಾಗಬೇಕಾಗುವುದು. ಹೇಗೆಂದರೆ—) ಭಕ್ತ್ಯಾ=ಭಕ್ತಿಯಿಂದ, ಪ್ರಸನ್ನತಃ= ಸಂತುಷ್ಟನಾದ, ದೇವಾದೇವ=ಶ್ರೀ ಹರಿಯಿಂದಲೇ, ಮುಕ್ತಿಃ=ಮೋಕ್ಷವು, ಇತ್ಯೇವ=ಹೀಗೆಯೇ, ಸರ್ವಾಃ ಶ್ರುತಯಃ=ಎಲ್ಲಾ ಶ್ರುತಿಗಳೂ, ಪುರಾಣಾನಿ=ಪುರಾಣಗಳೂ ಆಗಮಾ ಅಪಿ=ಬೇರೆ ಆಗಮಗಳೂ ಕೂಡ, ತದ್ಗುಣಾನ್ = ಆ ಶ್ರೀ ಹರಿಯ ಗುಣಗಳನ್ನು, ವದಂತಿ=ಹೇಳುತ್ತವೆ. (ಶ್ರುತ್ಯಾದಿಗಳು ಮುಕ್ತಿಯೇ ಪ್ರಯೋಜನವಾಗಿವುಳ್ಳವುಗಳು; ಮುಕ್ತಿಗೆ ಕಾರಣೀಭೂತಗಳಾದ ಶ್ರೀಹರಿಯ ಗುಣಗಳನ್ನೇವೇ ಪ್ರತಿಪಾದಿಸುತ್ತವೆ. ಎಂದೂ ಪ್ರಸಿದ್ಧವೇ. ಅದರಲ್ಲಿ ಶ್ರೀ ಹರಿ ಯಿಂದಲೇ ಜೀವರಿಗೆ ಮುಕ್ತಿಯು. ಅದು ಪ್ರಸನ್ನನಾದ ಶ್ರೀ ಹರಿಯಿಂದಲೇ; ಪ್ರಸಾದವು ಭಕ್ತಿ ಯಿಂದಲೇ; ಭಕ್ತಿಯು ಗುಣೋತ್ಕರ್ಷಜ್ಞಾನದಿಂದಲೇ ಹೀಗೆ ಶ್ರುತ್ಯಾದಿಗಳು ಆ ಶ್ರೀ ಹರಿಯ ಗುಣಗಳನ್ನು ಹೇಳುತ್ತವೆ. ತಥಾಚ ದ್ವೇಷದಿಂದ ಮುಕ್ತಿಯನ್ನಂಗೀಕರಿಸಿದರೆ ಮಹಾತಾತ್ಪರ್ಯ ವಿರೋಧವು ತಪ್ಪಿದ್ದಲ್ಲ. ಇದರಿಂದ ಭಕ್ತಿಗೆ ಮೋಕ್ಷಸಾಧನತ್ವವು ತಿಳಿಯಲ್ಪಡುತ್ತದೆ. ಅದನ್ನು ನಾವು ತಿರಸ್ಕರಿಸುವುದಿಲ್ಲ. ಆದರೆ ಭಕ್ತಿಯಂತೆ ದ್ವೇಷವೂ ಕೂಡ ಕಾರಣವು ಎಂದರೆ-) ಯದಿ= ಯಾವ ಪಕ್ಷದಲ್ಲಿ, ದ್ವೇಷೇಣ=ದ್ವೇಷದಿಂದ, ಮುಕ್ತಿಃ=ಮೋಕ್ಷವೂ, ಸ್ಯಾತ್ = ಆಗುವುದೋ, (ಆಗ ದ್ವೇಷೋತ್ಪತ್ತಿಗಾಗಿ) ದೋಷಸಂಚಯಃ = ದೋಷಗಳ ಸಮುದಾಯವು, ವಕ್ತವ್ಯಃ= ಹೇಳಲ್ಪಡತಕ್ಕದು (ಹೀಗೆ ಇಲ್ಲ. ಗುಣಗಳನ್ನು ಮಾತ್ರ ಪ್ರತಿಪಾದಿಸಿಯದೆ. ಆದುದರಿಂದ ಮೋಕ್ಷಕ್ಕಾಗಿ ಪ್ರವೃತ್ತವಾದ ವೇದಮೊದಲಾದುದು ಗುಣಗಳನ್ನೇ ಪ್ರತಿಪಾದಿಸುತ್ತಾ ಮೋಕ್ಷಕ್ಕೆ ಭಕ್ತಿಮಾತ್ರಸಾಧ್ಯತ್ವದಲ್ಲಿ ತಾತ್ಪರ್ಯವುಳ್ಳದ್ದೆಂದು ತಿಳಿಯುತ್ತದೆ.) ॥ ೨೧೯ ॥ ೨೨೦ ॥ ೨೨೧ ॥ ॥ ೨೨೨ ॥ ೨೨೩ ॥ ೨೨೪ ॥

ಹಾಗಾದರೆ ದ್ವೇಷಕ್ಕೂ ಮೋಕ್ಷಸಾಧನತ್ವವನ್ನು ಪ್ರತಿಪಾದಿಸತಕ್ಕ **'ದ್ವೇಷಾಚ್ಚೈದ್ಯಾದಯೋ ನೃಪಾಃ'** ಇತ್ಯಾದಿ ವಾಕ್ಯಗಳಿವೆ. ಆದ ಕಾರಣ ದ್ವೇಷಕ್ಕೆ ಮುಕ್ತಿಸಾಧನತ್ವಾಭಾವವು ಹೇಗೆ ಎಂದರೆ—

**ಮೂ ॥ ಸ್ಮರ್ತವ್ಯೋ ಭಗವಾನ್ನಿತ್ಯಮಿತ್ಯರ್ಥೇ ನೈವ ಹಿ ಕ್ವಚಿತ್ ॥ ೨೨೫ ॥**
**ದ್ವೇಷಾದಿವ ಗುಣಾನಾಹ ಪುರಾಣೇ ಕ್ರುದ್ಧವಾಕ್ಯವತ್ ।**
**ಯಥಾ ಕ್ರುದ್ಧಃ ಪಿತಾ ಪುತ್ರಂ ಮರೇತ್ಯಾಪೇಕ್ಷಪೂರ್ವಕಂ ॥ ೨೨೬ ॥**
**ಪ್ರೋಕ್ತಸ್ಯಾನ್ಯಸ್ಯ ಕೃತ್ಯರ್ಥಂ ವದತ್ಯೇವಂ ಪುರಾಣಗಂ ।**
**ವಾಕ್ಯಂ ಶ್ರುತಿವಿರೋಧೇನ ಸ್ವವಿರೋಧೇನ ಚಾಂಜಸಾ ।**
**ಬಹ್ವಾಗಮವಿರೋಧಾಚ್ಚ ನ ದ್ವೇಷಾನ್ಮುಕ್ತಿವಾಚಕಂ ॥ ೨೨೭ ॥**

ಅ || ಪುರಾಣೇ=ಪುರಾಣದಲ್ಲಿ, ಕ್ವಚಿತ್ = ಕೆಲವು ಪ್ರದೇಶದಲ್ಲಿ, ಭಗವಾನ್=ಶ್ರೀ ಹರಿಯು, ನಿತ್ಯಂ=ನಿತ್ಯದಲ್ಲಿಯೂ, ಸ್ಮರ್ತವ್ಯಃ = ಸ್ಮರಿಸಲ್ಪಡಬೇಕು. ಇತ್ಯರ್ಥೇನೈವ=ಈ ಅಭಿಪ್ರಾಯದಿಂದಲೇ, ದ್ವೇಷಾತ್=ದ್ವೇಷದಿಂದ, (ಮೋಕ್ಷವನ್ನು) ಆಹೇವ=(ಪುರಾಣಕಾರರು) ಹೇಳಿದವರಂತೆ ಆಗುತ್ತಾರೆ. ಹಿ=ಆದುದರಿಂದ ಹಿಂದೆ ಹೇಳಿದ್ದಕ್ಕೆ ವಿರೋಧವಿಲ್ಲ. ಗುಣಾನ್= (ಚೈದ್ಯಾದಿಗಳಿಗೆ ದ್ವೇಷದಿಂದ ಮುಕ್ತಿಯನ್ನು ಪ್ರತಿಪಾದಿಸತಕ್ಕ ವಾಕ್ಯವು ಶ್ರೀ ಹರಿಗೆ) ಕೃಪಾಲುತ್ವ ಮೊದಲಾದ ಗುಣಗಳನ್ನು, ಆಹ=ಹೇಳುತ್ತದೆ. (ವಾಕ್ಯಗಳು ಎರಡು ವಿಧಗಳು ಇವೆ. **'ವೈರೇಣ ಯನ್ನೃಪತಯಃ'** ಇತ್ಯಾದಿಗಳು ಸ್ಮರಣಪ್ರಧಾನಗಳು ಅವುಗಳಿಗೆ ಪ್ರಾಥಮಿಕ ಗತಿಯು. **'ದ್ವೇಷಾಚ್ಚೈದ್ಯಾದಯಃ'** ಇತ್ಯಾದಿಗಳು ದ್ವೇಷವೇ ಪ್ರಧಾನವಾಗಿ ಉಳ್ಳವುಗಳು. ಅವುಗಳಿಗೆ ಎರಡನೇದ್ದು.) (ಪ್ರಥಮವ್ಯಾಖ್ಯಾನದಲ್ಲಿ ಲೌಕಿಕ ದೃಷ್ಟಾಂತವನ್ನು ಹೇಳುತ್ತಾರೆ.) ಕ್ರುದ್ಧವಾಕ್ಯವತ್=ಕ್ರುದ್ಧನ ಮಾತಿನಂತೆ. (ಅಂದರೆ ಕ್ರುದ್ಧನ ವಾಕ್ಯಕ್ಕೆ ಹೇಗೆ ಪ್ರತೀತವೇ ಆದ ಅರ್ಥದಲ್ಲಿ ಪ್ರಾಮಾಣ್ಯವಿಲ್ಲವೋ ಆದರೆ ಬೇರೆ ಕಡೆ ತಾತ್ಪರ್ಯವು ಹೇಗೋ ಹಾಗೆಯೇ) (ಇದನ್ನು ವಿವರಿಸುತ್ತಾರೆ.) ಯಥಾ=ಹೇಗೆ, ಕ್ರುದ್ಧಃ=ಕೋಪಗೊಂಡ, ಪಿತಾ=ತಂದೆಯು, ಪುತ್ರಂ=ಮಗನನ್ನು, ಮರ = ಮೃತನಾಗು; ಇತಿ = ಹೀಗೆ, ಆಕ್ಷೇಪಪೂರ್ವಕಂ=ನಿಂದಾ ಪೂರ್ವಕವಾಗಿ, ಪ್ರೋಕ್ತಸ್ಯ = ತನ್ನಿಂದ ಹೇಳಲ್ಪಟ್ಟ, ಅನ್ಯಸ್ಯ = ಬೇರೆ ಕಾರ್ಯವನ್ನು, ಕೃತ್ಯರ್ಥಂ=ಮಾಡುವುದಕ್ಕಾಗಿ, ವದತಿ= ಹೇಳುತ್ತಾನೋ, ಏವಂ = ಹೀಗೆ, ಪುರಾಣಗಂ= ಪುರಾಣದಲ್ಲಿರತಕ್ಕ, ವಾಕ್ಯಂ = ವಾಕ್ಯವು, ಶ್ರುತಿವಿರೋಧೇನ = ಶ್ರುತಿವಿರೋಧದಿಂದಲೂ, ಸ್ವವಿರೋಧೇನ ಚ=ಎಲ್ಲಿ ದ್ವೇಷಕ್ಕೆ ಮುಕ್ತಿಸಾಧನತ್ವವು ಹೇಳಲ್ಪಡುತ್ತದೋ, ಅಲ್ಲಿಯೇ ಅದಕ್ಕೆ ವಿರುದ್ಧವಾದುದು ಹೇಳಲ್ಪಡುತ್ತದೆ. ಹೀಗೆ ತನ್ನ ವಿರೋಧದಿಂದಲೂ, ಅಂಜಸಾ=ಚೆನ್ನಾಗಿ, ಬಹ್ವಾಗಮರೋಧಾಚ್ಚ = ಅನೇಕ ಆಗಮಗಳ ವಿರೋಧದಿಂದಲೂ, ಅಂಜಸಾ=ಮುಖ್ಯವೃತ್ತಿಯಿಂದ, ದ್ವೇಷಾತ್=ದ್ವೇಷದ್ದೆಶೆಯಿಂದ, ಮುಕ್ತಿವಾಚಕಂ=ಮುಕ್ತಿಯನ್ನು ಹೇಳತಕ್ಕದು, (ಪ್ರತಿಪಾದಿಸತಕ್ಕದು) ನ=ಆಗುವುದಿಲ್ಲ.

ತಾ || ನ್ಯಾಯಸುಧಾ— (1) ಪುರಾಣವಾಕ್ಯವು ದ್ವೇಷವು ಮುಕ್ತಿಗೆ ಸಾಧನವೆಂದು ಪ್ರದಿಪಾದಿಸುವುದರಂತೆಯೇ ಆಪಾತತಃ ಯದ್ಯಪಿ ಪ್ರತೀತವಾಗುತ್ತದೆ ಆದಾಗ್ಯೂ ಆ ಅಭಿಪ್ರಾಯವುಳ್ಳದ್ದಲ್ಲ ಮತ್ತೆ ಮೋಕ್ಷೇಚ್ಛುವು ಶ್ರೀ ಹರಿಯನ್ನು ಸರ್ವದಾ ಸ್ಮರಿಸಬೇಕೆಂದು ಅದಕ್ಕೆ ಅಭಿಪ್ರಾಯವು **'ವೃದ್ಧೌ ಚ ಮಾತಾಪಿತರೌ ಸಾಧ್ವೀ ಭಾರ್ಯಾ-ಸುತಃ-ಶಿಶುಃ | ಅಪ್ಯಕಾರ್ಯ ಶತಂ ಕೃತ್ವಾ ಭರ್ತವ್ಯಾ ಮನುರಬ್ರವೀತ್'** ಎನ್ನುವುದಕ್ಕೆ ಅಕಾರ್ಯವನ್ನು ಮಾಡುವುದರಲ್ಲಿ ತಾತ್ಪರ್ಯವಿಲ್ಲ. ಮತ್ತೆ ಸರ್ವಥಾ ಪೋಷಿಸಬೇಕು ಎನ್ನುವಲ್ಲಿ ತಾತ್ಪರ್ಯವೋ ಹಾಗೆಯೇ ಇಲ್ಲಿಯೂ ತಾತ್ಪರ್ಯವು. (2) ಶಾಪಾದಿಗಳಿಂದ ಚೈದ್ಯ ಮೊದಲಾದವರು ದ್ವೇಷಿಗಳಾದಾಗ್ಯೂ ತಾತ್ಕಾಲಿಕ ದ್ವೇಷವನ್ನು ನಿರೂಪಿಸದೆ ಮೊದಲಿನದ್ದಾದ ಭಕ್ತಿಯನ್ನೇ ಅಪೇಕ್ಷಿಸಿ ಶ್ರೀ ಹರಿಯು ಅವರನ್ನು ಬಿಡಿಸಿರುವನು. ಆ ಶ್ರೀಹರಿಗೆ ಕೃಪಾಲುತ್ವವೂ ವಿಕಾರಾಭಾವವೂ ಸತ್ಯಸಂಕಲ್ಪತ್ವವೂ ಆಶ್ಚರ್ಯವು, ಎನ್ನುವಲ್ಲಿಯೇ ದ್ವೇಷದಿಂದಲೂ ಮುಕ್ತಿಯನ್ನು ಪ್ರತಿಪಾದಿಸತಕ್ಕ ವಾಕ್ಯಗಳಿಗೆ ತಾತ್ಪರ್ಯವು (3) ತಂದೆಯು ಮಗನ ಹತ್ತಿರ ಇದನ್ನು ಮಾಡು ಎಂದು ಹೇಳುತ್ತಾನೆ ಶ್ರಮಾದಿಗಳಿಗೆ ಹೆದರಿದ ಮಗನು ಆ ಕೆಲಸವನ್ನು ಮಾಡದೇನೇ ಸುಮ್ಮನೆ ಇರುತ್ತಾನೆ. ಆಗ ಕ್ರುದ್ಧನಾದ ತಂದೆಯು ಹೇಳುತ್ತಾನೆ. ಅರೇ! ಜಾಲ್ಮ ರಂಡಾಪುತ್ರ ಮೃತನಾಗು ಎಂದು. ಆ ವಾಕ್ಯಕ್ಕೆ ಹೇಗೆ ಪುತ್ರನು ಸಾಯಬೇಕು ಎನ್ನುವಲ್ಲಿ ತಾತ್ಪರ್ಯ

ವಿಲ್ಲವೋ, ಮತ್ತೆ ಸ್ವವಿಹಿತವಾದುದನ್ನು ಮಾಡುವುದರಲ್ಲಿಯೇ ತಾತ್ಪರ್ಯವೋ, ಹಾಗೆಯೇ ದ್ವೇಷದಿಂದ ಸ್ಮರಿಸಿದರೆ ಮುಕ್ತಿಯು ಆಗುತ್ತದೆ ಎನ್ನುವ ಪುರಾಣವಾಕ್ಯಕ್ಕೂ ದ್ವೇಷಕ್ಕೆ ಮುಕ್ತಿ ಸಾಧನತ್ವದಲ್ಲಿ ತಾತ್ಪರ್ಯವಿಲ್ಲ. ಮತ್ತೆ ಸ್ಮರಿಸಬೇಕು ಎನ್ನುವಲ್ಲಿಯೇ ತಾತ್ಪರ್ಯವು. ಇದು ವ್ಯಂಜನಾವೃತ್ತಿಯಿಂದು ಕೆಲವರು ಹೇಳುತ್ತಾರೆ. ತಾತ್ಪರ್ಯವೃತ್ತಿಯಿಂದು ಬೇರೆಯವರು ಹೇಳುತ್ತಾರೆ. ಶ್ರೀಮದಾಚಾರ್ಯರು ವಾಕ್ಯವೇ ತನ್ನಲ್ಲಿ ಅಂತರ್ಗತಗಳಾದ ಪದಗಳಿಂದ ಲಕ್ಷಣಾವೃತ್ತಿಯಿಂದ ಹಿಂದೆ ಹೇಳಿದ ಅರ್ಥವನ್ನು ತಿಳಿಸಿಕೊಡುತ್ತದೆ ತಾನು ಲಿಂಗರೀತಿಯಿಂದ ಅನುಮಾಪಕವೂ ಆಗುತ್ತದೆ ಎಂದು ಹೇಳುತ್ತಾರೆ ॥ ೨೨೫ ॥ ೨೨೬ ॥ ೨೨೭ ॥

ಮೂ ॥ ತನೋ ದ್ವೇಷೇಣ ಸಂಯಾಂತಿ ಭಕ್ತ್ಯಾ ಮುಕ್ತಿಂ ತಥೈವ ಚ॥೨೨೮॥
ವಿಷ್ಣೌ ವಿಷ್ಣುಪ್ರಸಾದೇನ ವಿಲೋಮತ್ವೇನ ಚಾಂಜಸಾ ।
ಇತಿ ಷಾಡ್ಗುಣ್ಯವಚನಮಪ್ಯುಕ್ತಾರ್ಥನಿಯಾಮಕಂ ॥ ೨೨೯ ॥
ಮಹಾತಾತ್ಪರ್ಯರೋಧೇನ(ಚ)ಕಥಂ ವಾಕ್ಯಂ ಪ್ರಮಾಣತಾಂ ।
ಯಾತಿ ಸರ್ವಾರ್ಥರೂಪಂ ಹಿ ಮಹಾತಾತ್ಪರ್ಯಮಿಷ್ಯತೇ ॥೨೩೦॥
ವಾಚಕತ್ವಂ ಹಿ ತಾತ್ಪರ್ಯಂ ಯದರ್ಥಾ ಅಖಿಲಾ ರವಾಃ ।
ಸೋಽರ್ಥಃ ಕಥಂ ಪರಿತ್ಯಾಜ್ಯಃ ಏಕಶಬ್ದಸ್ಯ ಸಂಶಯೇ ।
ಅತೋ ವಿಜ್ಞಾನಭಕ್ತಿಭ್ಯಾಂ ಪುರುಷಾರ್ಥಃ ಪರೋ ಭವೇತ್॥೨೩೧॥

ಅ ॥ ವಿಷ್ಣೌ=ವಿಷ್ಣುವಿನಲ್ಲಿರತಕ್ಕ, ಭಕ್ತ್ಯಾ=ಭಕ್ತಿಯಿಂದುಂಟಾಗತಕ್ಕ. ವಿಷ್ಣುಪ್ರಸಾದೇನೈವ=ವಿಷ್ಣುವಿನ ಅನುಗ್ರಹವಿಶೇಷದಿಂದಲೇ, ಮುಕ್ತಿಂ = ಮೋಕ್ಷವನ್ನು, ಸಂಯಾಂತಿ = ಹೊಂದುತ್ತಾರೆ ತಥಾ=ಹಾಗೆಯೇ, ವಿಷ್ಣೌ=ವಿಷ್ಣುವಿನಲ್ಲಿರತಕ್ಕ, ದ್ವೇಷೇಣ=ದ್ವೇಷದಿಂದುಂಟಾಗತಕ್ಕ, ವಿಲೋಮತ್ವೇನ ಚ=ವಿಷ್ಣು ಕೋಪದಿಂದ, ಅಂಜಸಾ ತಮಃ=ಮುಖ್ಯತಮಸ್ಸನ್ನೇ, ಸಂಯಾಂತಿ=ಹೊಂದುತ್ತಾರೆ. ಇತಿ=ಹೀಗೆ, ಷಾಡ್ಗುಣ್ಯವಚನಮಪಿ = ಷಾಡ್ಗುಣ್ಯವಚನವೂ ಕೂಡ, ಉಕ್ತಾರ್ಥ ನಿಯಾಮಕಂ = ವಿಷ್ಣುಭಕ್ತಿಯೇ ಮೋಕ್ಷಸಾಧನವು ದ್ವೇಷವಲ್ಲವೆನ್ನುವ ಅರ್ಥಕ್ಕೆ ನಿಯಾಮಕವಾದುದು. (ಈ ವಾಕ್ಯ ಸಮಾಖ್ಯೆಯಿಂದಲೂ 'ಚೇತನಸ್ಯ' ಎನ್ನುವ ಶ್ರುತಿಯಲ್ಲಿ 'ಮುಕ್ತೌ' ಎನ್ನುವ ಶಬ್ದವು ವಿಷ್ಣುವಿಗೆ ವಾಚಕವೆಂದು ಸಿದ್ಧಿಸುತ್ತದೆ) (ಕಾರಣಾಂತರದಿಂದಲೂ ಈ ವಾಕ್ಯವು ಪ್ರತೀತಾರ್ಥಪರವಲ್ಲವೆನ್ನುತ್ತಾರೆ.) ಮಹಾತಾತ್ಪರ್ಯರೋಧೇನ ಚ= (ಮೋಕ್ಷವೇ ಪ್ರಯೋಜನವಾಗಿವುಳ್ಳ ಎಲ್ಲಾ ಆಗಮಗಳಿಗೆ ಶ್ರೀ ಭಗವಂತನ ಗುಣಗಳಲ್ಲಿಯೇ ಯಾವುದು ಮಹಾತಾತ್ಪರ್ಯವೋ ಅದರಿಂದ ಭಕ್ತಿಯೇ ಮುಕ್ತಿಗೆ ಸಾಧನವು ದ್ವೇಷವಲ್ಲವೆಂದು ತಿಳಿಯುತ್ತದೆ. ಆದುದರಿಂದ) ಮಹಾತಾತ್ಪರ್ಯ ವಿರೋಧದಿಂದ ಅಥವಾ ಮಹಾತಾತ್ಪರ್ಯ ವಿರೋಧವು ಇರುತ್ತಿರಲು, ವಾಕ್ಯಂ = ದ್ವೇಷವಾಕ್ಯವು, (ಪ್ರತೀತಾರ್ಥದಲ್ಲಿ) ಕಥಂ=ಹೇಗೆ, ಪ್ರಮಾಣತಾಂ=ಪ್ರಾಮಾಣ್ಯವನ್ನು, ಯಾತಿ=ಹೊಂದುತ್ತದೆ. (ಮಹಾತಾತ್ಪರ್ಯ ಯುಕ್ತಿಗೆ ವಾಕ್ಯದಿಂದ ಪ್ರಾಬಲ್ಯವನ್ನುಪಪಾದಿಸುತ್ತಾರೆ ) ಸರ್ವಾರ್ಥರೂಪತ್ವಂ ಹಿ=ಎಲ್ಲಾ ಶಾಸ್ತ್ರಗಳಿಗೆ ಮುಖ್ಯವಾಗಿ ಏಕಾರ್ಥಪ್ರತಿಪಾದಕತ್ವ ರೂಪವಾದುದು, ಮಹಾತಾತ್ಪರ್ಯಂ=ಮಹಾತಾತ್ಪರ್ಯವೆಂದು, ಇಷ್ಯತೇ=ಅಂಗೀಕರಿಸಲ್ಪಡುತ್ತದೆ. (ಇದು ಮಹಾತಾತ್ಪರ್ಯ ಶಬ್ದಾರ್ಥವು ಹೇಗೆಂದರೆ- ತಾತ್ಪರ್ಯಂ= (ತತ್ ಪರಂ ಪ್ರತಿಪಾದ್ಯಂ ಯಸ್ಯ ತತ್ ತತ್ಪರಂ ತಸ್ಯ ಭಾವಃ ತಾತ್ಪರ್ಯಂ ಎನ್ನುವ ವ್ಯುತ್ಪತ್ತಿಯಿಂದ) ಅದೇ ಪ್ರತಿಪಾದ್ಯವಾಗಿಉಳ್ಳದರ ಭಾವರೂಪವಾದ, ವಾಚಕತ್ವಂ=

ಹಿ=ಪ್ರತಿಪಾದಕತ್ವವೇ, ತಾತ್ಪರ್ಯಂ=ತಾತ್ಪರ್ಯವೆಂದು, (ಹೇಳಲ್ಪಡುತ್ತದೆ.) ಅದಕ್ಕೆ ಮಹ ಚ್ಛಬ್ದದಿಂದ ವಿಶೇಷಣಮಾಡಿದರೆ ಯೋಗ್ಯತೆಯಿಂದ ಇದೇ ಅರ್ಥವು ಮಹಾತಾತ್ಪರ್ಯ ಶಬ್ದಕ್ಕೆ ಆಗುತ್ತದೆ. (ಅದು ಹೇಗೆಂದರೆ —) ಅಖಿಲಾಃ ರವಾಃ=ಎಲ್ಲಾ ಆಗಮಗಳೂ, ಯದರ್ಥಾಃ= ಯಾವ ಅರ್ಥವಾಗಿಉಳ್ಳವುಗಳೋ, ಸಃ ಅರ್ಥಃ=ಆ ಅರ್ಥವು, ಏಕ ಶಬ್ದಸ್ಯ=ಒಂದು ವಾಕ್ಯ ಸಂಬಂಧಿಯಾದ, ಸಂಶಯೇ ಸತಿ=ಸಂಶಯವು ಇರುತ್ತಿರಲು, (ಒಂದು ಸಂದಿಗ್ಧವಾದ ವಿರುದ್ಧಾ ರ್ಥವುಳ್ಳ ವಾಕ್ಯವನ್ನು ತೆಗೆದುಕೊಂಡು) ಕಥಂ=ಹೇಗೆ, ಪರಿತ್ಯಾಜ್ಯಃ = ಪರಿತ್ಯಾಗಾರ್ಹವೂ (ದ್ವೇಷಕ್ಕೆ ಮುಕ್ತಿಸಾಧನತ್ವ ನಿರಾಕರಣವನ್ನುಪಸಂಹಾರಮಾಡುತ್ತಾರೆ.) ಅತಃ = ಆದಕಾರಣ, ವಿಜ್ಞಾನಭಕ್ತಿಭ್ಯಾಂ=ಮಾಹಾತ್ಮ್ಯಜ್ಞಾನ ಸ್ನೇಹಗಳಿಂದಲೇ (ದ್ವೇಷದಿಂದ ಅಲ್ಲ) ಪರಃಪುರು ಷಾರ್ಥಃ= ಉತ್ತಮವಾದ ಮೋಕ್ಷರೂಪವಾದ ಪುರುಷಾರ್ಥವು, ಭವೇತ್ = ಆಗುವುದು. ॥ ॥ ೨೨೮ ॥ ೨೨೯ ॥ ೨೩೦ ॥ ೨೩೧ ॥

ಹೀಗೆ ದ್ವೇಷಕ್ಕೆ ಮುಕ್ತಿಸಾಧನತ್ವವನ್ನು ನಿರಾಕರಿಸಿ ಈಗ ಭಕ್ತಿಯು ಪರಮಪುರುಷಾರ್ಥ ವಾದ ಮುಕ್ತಿಯನ್ನು ಸಾಧಿಸುತ್ತದೆ ಎನ್ನುವಲ್ಲಿ ಪ್ರಮಾಣವಿಲ್ಲವೆಂದು ಯಾವುದು ಹೇಳಲ್ಪಟ್ಟದೋ ಅದನ್ನು ನಿರಾಕರಿಸುವುದಕ್ಕಾಗಿ ಪ್ರಮಾಣಗಳನ್ನು ಹೇಳುತ್ತಾರೆ—

**ಮೂ ॥ ಯಸ್ಯ ದೇವೇ ಪರಾ ಭಕ್ತಿರ್ಯಥಾ ದೇವೇ ತಥಾ ಗುರೌ ।**
**ತಸ್ಯೈತೇ ಕಥಿತಾ ಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ॥ ೨೩೨ ॥**
**ಭಕ್ತ್ಯಾ ಜ್ಞಾನಂ ತತೋ ಭಕ್ತಿಸ್ತತೋ ದೃಷ್ಟಿಸ್ತತಶ್ಚ ಸಾ ।**
**ತತೋ ಮುಕ್ತಿಸ್ತತೋ ಭಕ್ತಿಃ ಸೈವ ಸ್ಯಾತ್ಸುಖರೂಪಿಣೀ ॥ ೨೩೩ ॥**
**ಭಕ್ತ್ಯಾ ಪ್ರಸನ್ನೋ ಭಗವಾನ್ ದದ್ಯಾಜ್ಜ್ಞಾನಮನಾಕುಲಂ ।**
**ತಯೈವ ದರ್ಶನಂ ಯಾತಃ ಪ್ರದದ್ಯಾನ್ಮುಕ್ತಿಮೇತಯಾ ॥ ೨೩೪ ॥**
**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥೨೩೫॥**
**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ ೨೩೬ ॥**
**ಇತ್ಯಾದಿವಾಕ್ಯತಶ್ಚೈವ ಸೋಽಯಮುಕ್ತಾರ್ಥ ಈಯತೇ ॥ ೨೩೭ ॥**

**ಅ ॥** ಯಸ್ಯ=ಯಾರಿಗೆ, ದೇವೇ=ಶ್ರೀ ಹರಿಯಲ್ಲಿ, ಪರಾ=ಉತ್ಕೃಷ್ಟವಾದ, ಭಕ್ತಿಃ= ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹವೋ, ಯಥಾ ದೇವೇ=ದೇವತೆಗಳಲ್ಲಿ ದೇವಯೋಗ್ಯ ವಾದ ಭಕ್ತಿಯೋ, ತಥಾ = ಹಾಗೆಯೇ, ಗುರೌ = ಗುರುಗಳಿಗೆ ಯೋಗ್ಯವಾದ ಭಕ್ತಿಯೋ, ತಸ್ಯ=ಆ ದಾವ, ಮಹಾತ್ಮನಃ=ಮಹಾನುಭಾವನಿಗೆ, ಏತೇ=ಈ ದಾವ, ಕಥಿತಾಃ=ಹೇಳಲ್ಪಟ್ಟ, ಅರ್ಥಾಃ=ಅರ್ಥಗಳು, ಪ್ರಕಾಶಂತೇ=ಪ್ರಕಾಶಿಸುತ್ತವೆ. (ಇದರಿಂದ ಜ್ಞಾನಕ್ಕೆ ಭಕ್ತಿಸಾಧ್ಯತ್ವವು ಉಕ್ತವಾಯಿತು.) ಭಕ್ತ್ಯಾ=ಭಕ್ತಿಯಿಂದ, ಜ್ಞಾನಂ=ಪರೋಕ್ಷ ನಿಶ್ಚಯವು ಹುಟ್ಟುತ್ತದೆ. ತತಃ=ಆ ಜ್ಞಾನದೆಶೆಯಿಂದ, ಭಕ್ತಿಃ=ಪಕ್ವವಾದ ಭಕ್ತಿಯು ಉಂಟಾಗುತ್ತದೆ. ತತಃ=ಅದರಿಂದ, ದೃಷ್ಟಿಃ=ಪ್ರತ್ಯಕ್ಷವು ತತಶ್ಚ=ಅದರಿಂದಲಾದರೂ, ಸಾ=ಪರಿಪಕ್ವವಾದ ಭಕ್ತಿಯು, ತತಃ= ಆ ಮೇಲೆ, ಮುಕ್ತಿಃ=ಮೋಕ್ಷವು. ತತಃ=ಮೋಕ್ಷವಾದಮೇಲೆ, ಭಕ್ತಿಃ = ಸ್ನೇಹವಿಶೇಷವು.

ಸಾ=ಅದು, ಸುಖರೂಪಿಣ್ಯೇವ=ಸುಖಸ್ವರೂಪಿಯಾಗಿಯೇ, ಸ್ಯಾತ್=ಆಗುವುದು. (ಫಲವುಳ್ಳದ್ದಾಗುವುದಿಲ್ಲ.) ಭಕ್ತ್ಯಾ=ಭಕ್ತಿಯಿಂದ, ಪ್ರಸನ್ನಃ=ಸಂತುಷ್ಟನಾದ, ಭಗವಾನ್=ಶ್ರೀಹರಿಯು, ಅನಾಕುಲಂ=ವ್ಯತ್ಯಾಸವಿಲ್ಲದ, ಜ್ಞಾನಂ=ಜ್ಞಾನವನ್ನು, ದದ್ಯಾತ್=ಕೊಡುವನು. ತಯೈವ=ಪಕ್ವವಾದ ಬುದ್ಧಿಯಿಂದಲೇ, ದರ್ಶನಂ = ಅಪರೋಕ್ಷ ದರ್ಶನವನ್ನು, ಯಾತಃ = ಹೊಂದುತ್ತಾನೆ. ಏತಯಾ=ಪರಿಪಕ್ವವಾದ ಬುದ್ಧಿಯಿಂದ, ಮುಕ್ತಿಂ=ಮೋಕ್ಷವನ್ನು, ಪ್ರದದ್ಯಾತ್=ಕೊಡುವನು. ಯಥಾ=ಹೇಗೆ, ಮಾಂ = ನನ್ನನ್ನು, ದೃಷ್ಟವಾನಸಿ, = ನೋಡಿದವನಾಗಿರುತ್ತಿಯೋ, ಏವಂವಿಧಃ = ಇಂತಹ, ಅಹಂ=ನಾನು, ವೇದೈಃ=ವೇದಗಳಿಂದ, ಭಕ್ತಿರಹಿತಶ್ರವಣಾದಿಗಳಿಂದ, ದ್ರಷ್ಟುಂ=ನೋಡಲಿಕ್ಕೆ, ನ ಶಕ್ಯಃ=ಶಕ್ಯನಲ್ಲ. ತಪಸಾ = ತಪಸ್ಸಿನಿಂದಲೂ, ನ=ಶಕ್ಯನಲ್ಲ. ದಾನೇನ=ದಾನದಿಂದಲೂ, ನ ಶಕ್ಯಃ = ಶಕ್ಯನಲ್ಲ. ಇಜ್ಯಯಾ = ಯಾಗದಿಂದಲೂ, ನ ಚ ಶಕ್ಯಃ=ಶಕ್ಯನಲ್ಲ. ಅನನ್ಯಯಾ=ಇತರ ವಿಷಯವಿಲ್ಲದಿರುವ, (ಅಂದರೆ— **'ಯಾದೃಶೀ ತತ್ರ ಭಕ್ತಿಃಸ್ಯಾತ್ತಾದೃಶ್ಯನ್ಯತ್ರ ನೈವ ಚೇತ್ | ಅನನ್ಯ ಭಕ್ತಿಃ ಸಾ ಜ್ಞೇಯಾ ವಿಷ್ಣಾವೇವ ಚ ಸಾ ಭವೇತ್'** ಎಂದು ಸ್ಮೃತಿಯು.) ಭಕ್ತ್ಯಾತು=ಭಕ್ತಿಯಿಂದಲಾದರೂ, ಅರ್ಜುನ=ಅರ್ಜುನನೇ, ಪರಂತಪ=ಶತ್ರುಗಳಿಗೆ ತಾಪಕರನೇ, ಏವಂ ವಿಧಃ=ಇಂತಹ, ಅಹಂ=ನಾನು, ತತ್ವೇನ=ಯಥಾರ್ಥದಿಂದ, ಜ್ಞಾತುಂ=ತಿಳಿಯುವುದಕ್ಕಾಗಿಯೂ, ದ್ರಷ್ಟುಂ = ನೋಡುವುದಕ್ಕಾಗಿಯೂ, ಪ್ರವೇಷ್ಟುಂ ಚ = ಪ್ರವೇಶಮಾಡುವುದಕ್ಕಾಗಿಯೂ ಯೋಗ್ಯನು. ಇತ್ಯಾದಿ ವಾಕ್ಯತಶ್ಚೈವ=ಇದುಮೊದಲಾದ ವಾಕ್ಯಗಳಿಂದಲೇ, ಸೋಽಯಂ = ಆ ಈ, ಉಕ್ತಾರ್ಥಃ = ಹೇಳಿದ ಅರ್ಥವು, ಈಯತೇ=ತಿಳಿಯಲ್ಪಡುತ್ತದೆ. ॥ ೨೩೨ ॥ ೨೩೩ ॥ ೨೩೪ ॥ ೨೩೫ ॥ ೨೩೬ ॥ ೨೩೭ ॥

ಅನುಮಾನದಿಂದಲೂ ಹೇಳಿದ ಅರ್ಥವನ್ನು ಸಾಧಿಸುತ್ತಾರೆ—

**ಮೂ ॥ ನ ಚ ಪ್ರಸಾದಮಾಪ್ನೋತಿ ದ್ವೇಷಾದ್ಭಕ್ತ್ಯಾ ತಮಾಪ್ನುಯಾತ್ |**
**ಇತಿ ದೃಷ್ಟಾನುಸಾರಿತ್ವಮಪ್ಯಸ್ಮಿನರ್ಥ ಈಯತೇ ॥ ೨೩೮ ॥**
**ಯೋ ಪೃಥಗ್ವಹಿತಾ ವಿಷ್ಣೋರ್ಗುಣಾ ವೇದೇನ ಸಾದರಂ |**
**ತ ಏವ ದೃಷ್ಟವೈಲೋಮ್ಯಾದಂಗೀಕಾರ್ಯಾ ನ ಚಾಪರಂ ॥ ೨೩೯ ॥**
**ಅನ್ಯದ್ದೃಷ್ಟಾನುಸಾರೇಣ ವಾಸುದೇವೇಽಪಿ ಗೃಹ್ಯತೇ |**
**ದೋಷಾಭಾವಾಶ್ಚ ಯೇ ವೇದೈರುದಿತಾಃ ಅಪಿಹಾಯ ತಾನ್ ॥ ೨೪೦ ॥**
**ಅನುಕ್ತಾ ಅಪಿ ಚ ಗ್ರಾಹ್ಯಾ ಮಹಾತಾತ್ಪರ್ಯಶಕ್ತಿತಃ |**
**ಏವಂ ಬೃಹತ್ಸಂಹಿತಾವಾಕ್ ಸಿದ್ಧಾಂತೋ ಹಿ ತದೀರಿತಃ ॥ ೨೪೧ ॥**

ಅ ॥ ದ್ವೇಷಾತ್ = ಭಗವದ್ದ್ವೇಷದಿಂದ, ಪ್ರಸಾದಂ = ಭಗವತ್ಪ್ರಸಾದವನ್ನು, ನ ಚಾಪ್ನುಯಾತ್=ಹೊಂದುವುದೇ ಇಲ್ಲ. ಭಕ್ತ್ಯಾ=ಭಗವಂತನ ಭಕ್ತಿಯಿಂದ, ತಂ=ಭಗವತ್ಪ್ರಸಾದವನ್ನು, ಪ್ರಾಪ್ನುಯಾತ್=ಹೊಂದತಕ್ಕುದು. ಇತಿ=ಈ ಪ್ರಕಾರವಾದ, ಅಸ್ಮಿನ್=ಈ, ಅರ್ಥೇ=ಅರ್ಥದಲ್ಲಿ, ದೃಷ್ಟಾನುಸಾರಿತ್ವಂ ಅಪಿ=ಪ್ರತ್ಯಕ್ಷದೃಷ್ಟವ್ಯಾಪ್ತಿಯುಳ್ಳ ಅನುಮಾನದ ಅನುಸಾರಿತ್ವವೂ ಕೂಡ, ಈಯತೇ = ತಿಳಿಯಲ್ಪಡುತ್ತದೆ. (ಹಾಗಾದರೆ ಅಲೌಕಿಕನೇ ಆದ ಶ್ರೀ ಹರಿಯಲ್ಲಿ ಲೋಕ ದೃಷ್ಟಾಂತದಿಂದ ಹೀಗೆ ಅನುಮಾನವು ಕೂಡುವುದಿಲ್ಲ. ಆದುದರಿಂದ ಲೋಕ ವಿಲಕ್ಷಣನಾದ ಶ್ರೀ ಹರಿಯು ದ್ವೇಷಿಸಿಕೊಳ್ಳಲ್ಪಟ್ಟವನಾದಾಗ್ಯೂ ಪ್ರಸನ್ನನಾಗಿರುತ್ತಾನೆಂದಂಗೀಕರಿಸಿದರೆ ಬಾಧಕವಲ್ಲವೆನ್ನುವ ಆಶಂಕೆಯನ್ನು ಆಗಮವಾಕ್ಯದಿಂದ ಪರಿಹರಿಸುತ್ತಾರೆ.) ವಿಷ್ಣೋಃ =

ಶ್ರೀ ಹರಿಯ, ಯೇ=ಯಾವ, ಗುಣಾಃ=ಗುಣಗಳು, ವೇದೇನ=ವೇದದಿಂದ, ಪೃಥಕ್=ಲೋಕ ವೈಲಕ್ಷಣ್ಯದಿಂದ, ಸಾದರಂ = ತಾತ್ಪರ್ಯಪೂರ್ವಕವಾಗಿ, ವಿಹಿತಾಃ = ಹೇಳಲ್ಪಟ್ಟವೆಯೋ, ತ ಏವ = ಅವುಗಳೇ, ದೃಷ್ಟವೈಲೋಮ್ಯಾತ್ = ದೃಷ್ಟವೈಷಮ್ಯವನ್ನು ಆದರಿಸದೆ, ಅಂಗೀ ಕಾರ್ಯಾಃ=ಅಂಗೀಕಾರಾರ್ಹಗಳು. ಅಪರಃ=ವೇದಗಳಲ್ಲಿ ಹೇಳಲ್ಪಡದೆ ಇದ್ದ, ಲೋಕವಿಲಕ್ಷಣ ವಾದ ಗುಣಸಮುದಾಯವು, ನ ಚ=ಅಂಗೀಕರಿಸಲಿಕ್ಕೇನೇ ಕೂಡದು. (ಆದರೆ) ಅನ್ಯತ್= (ವೇದದಲ್ಲಿ ಹೇಳಲ್ಪಟ್ಟ ಅಣುತ್ವ-ಮಹತ್ವ-ಯೌಗಪದ್ಯಾದಿಗಳಿಗಿಂತ) ಇತರವಾದ ಗುಣಸಮುದಾ ಯವು, ದೃಷ್ಟಾನುಸಾರೇಣ = ಪ್ರತ್ಯಕ್ಷಾನುಸಾರವಾಗಿ, ವಾಸುದೇವೇऽಪಿ = ವಾಸುದೇವ ನಲ್ಲಿಯೂ, ಗೃಹ್ಯತೇ=ಸ್ವೀಕರಿಸಲ್ಪಡುತ್ತದೆ. ಯೇ=ಯಾವ, ದೋಷಾಭಾವಾಶ್ಚ = ಲೋಕ ವಿಲಕ್ಷಣಗಳೂ ಆದ ದೋಷಾಭಾವಗಳಾದರೂ, ವೇದೈಃ = ವೇದಗಳಿಂದ, ಉದಿತಾಃ=ಹೇಳ ಲ್ಪಟ್ಟವೆಯೋ, ತಾನ್=ಅವುಗಳನ್ನು ಅವಿಹಾಯ=ಬಿಡದೆ, ಮಹಾತಾತ್ಪರ್ಯಶಕ್ತಿತಃ = ಸರ್ವ ಪ್ರಕಾರದಿಂದಲೂ ಶ್ರೀ ಹರಿಯಲ್ಲಿ ದೋಷವಿಲ್ಲ ಎನ್ನುವಲ್ಲಿ ಸಾಮಾನ್ಯವಾಗಿ ಸರ್ವಶಾಸ್ತ್ರಗಳ ತಾತ್ಪರ್ಯವನ್ನು ನಿರ್ಣಯಿಸಿದರಿಂದ, ಅನುಕ್ತಾ ಅಪಿ = ಹೇಳಲ್ಪಡದೆ ಇದ್ದವುಗಳೂ ಕೂಡ, ಗ್ರಾಹ್ಯಾಃ=ಸ್ವೀಕರಿಸಲ್ಪಡಬೇಕು. ತತ್=ಆದುದರಿಂದ, ಏವಂ=ಈಪ್ರಕಾರ, ಬೃಹತ್ಸಂಹಿತಾ ವಾಕ್=ಬೃಹತ್ಸಂಹಿತೆಯ ವಚನವು, ತತ್ = ಆದುದರಿಂದ, ಈರಿತಃ = ಹೇಳಲ್ಪಟ್ಟ ಅರ್ಥವೇ, ಸಿದ್ಧಾಂತಃ=ಪ್ರಾಮಾಣಿಕವು. ಹಿ=ಪ್ರಸಿದ್ಧವು.

ತಾ ॥ **ನ್ಯಾಯಸುಧಾ—** (1) ಭಗವತ್ಪ್ರಸಾದದಿಂದಲೇ ಮೋಕ್ಷವೆನ್ನುವುದು ನಿಶ್ಚಿತವು ೧ ಭಗವತ್ಪ್ರಸಾದಃ ಭಗವದ್ದ್ವೇಷಸಾಧ್ಯೋ ನ ಭವತಿ, ಭಗವತ್ಪ್ರಸಾದತ್ವಾತ್ ಯೋ ಯತ್ಪ್ರಸಾದಃ ನಾಸೌ ತದ್ದ್ವೇಷಸಾಧ್ಯಃ ಯಥಾ ಗುರುಪ್ರಸಾದಃ=ಶ್ರೀ ಹರಿಯ ಪ್ರಸಾದವು ಶ್ರೀ ಹರಿದ್ವೇಷದಿಂದ ಸಾಧ್ಯವಲ್ಲ ಶ್ರೀ ಹರಿಯ ಪ್ರಸಾದವಾದುದರಿಂದ ಯಾವುದು ಯಾರ ಪ್ರಸಾದವೋ ಇದು ಅವರ ದ್ವೇಷದಿಂದ ಸಾಧ್ಯವಲ್ಲ; ಗುರುಪ್ರಸಾದದಂತೆ ೨ ಅಥವಾ 'ಭಗವದ್ದ್ವೇಷಃ ಭಗವತ್ಪ್ರಸಾದಸಾಧನಂ ನ ಭವತಿ, ಭಗವದ್ದ್ವೇಷತ್ವಾತ್ ಯೋ ಯದ್ದ್ವೇಷಃ ಸಃ ತತ್ಪ್ರಸಾದಸಾಧನಂ ನಭವತಿ ಯಥಾ ಗುರುದ್ವೇಷಃ' ೩ ಅಥವಾ 'ಭಗವಾನ್ ಸ್ವದ್ವೇಷಿಣಿ ನ ಪ್ರಸೀದತಿ ಪ್ರೇಕ್ಷಾವತ್ಪುರುಷತ್ವಾತ್ ದೇವದತ್ತವತ್' ೪ ಅಥವಾ 'ಭಗವದ್ದ್ವೇಷೀ ಭಗವತ್ಪ್ರೀತಿವಿಷಯೋ ನ ಭವತಿ ಭಗವದ್ದ್ವೇಷಿತ್ವಾತ್ಕ ಯೋ ಯದ್ದ್ವೇಷೀ ನಾಸೌ ತತ್ಪ್ರೀತಿವಿಷಯಃ ಯಥಾ ಸಂಪ್ರತಿಪನ್ನಃ' ಎಂದು ದ್ವೇಷವು ಪ್ರಸಾದಕ್ಕೆ ಸಾಧನವಲ್ಲವೆಂದು ಹೇಳೋಣ, ಅದಕ್ಕೆ ಮುಕ್ತಿಸಾಧನತ್ವವೇ ತಿರಸ್ಕರಿಸಲ್ಪಟ್ಟಿತು. (2) ಹಾಗೆಯೇ ೧ 'ಭಗವತ್ಪ್ರಸಾದಃ ಭಗವದ್ಭಕ್ತಿಸಾಧ್ಯಃ ಭಗವತ್ಪ್ರಸಾದತ್ವಾತ್ ಯೋ ಯತ್ಪ್ರಸಾದಃ ಸಃ ತದ್ಭಕ್ತಿ ಸಾಧ್ಯಃ ಯಥಾ ಗುರುಪ್ರಸಾದಃ' ೨ ಅಥವಾ 'ಭಗವದ್ಭಕ್ತಿಃ ಭಗವತ್ಪ್ರಸಾದಸಾಧನಂ ಭಗವ ದ್ಭಕ್ತಿತ್ವಾತ್ ಯಾ ಯದ್ಭಕ್ತಿಃ ಸಾ ತತ್ಪ್ರಸಾದಸಾಧನಂ ಯಥಾ ಗುರುಭಕ್ತಿಃ' ೩ ಅಥವಾ 'ಭಗವಾನ್ ಸ್ವಭಕ್ತೇ ಪ್ರಸೀದತಿ ಪ್ರೇಕ್ಷಾವತ್ಪುರುಷತ್ವಾತ್ ಸಮ್ಮತವತ್' ೪ ಅಥವಾ 'ಭಗವ ದ್ಭಕ್ತಃ ಭಗವತ್ಪ್ರೀತಿವಿಷಯಃ ಭಗವದ್ಭಕ್ತತ್ವಾತ್ ಯೋ ಯದ್ಭಕ್ತಃ ಅಸೌ ತತ್ಪ್ರೀತಿವಿಷಯಃ ಯಥಾ ಗುರುಭಕ್ತಃ' ಅಂತೂ ಭಕ್ತಿಯು ಪ್ರಸಾದಕ್ಕೆ ಸಾಧನವೆಂದು ಸಿದ್ಧವಾದಾಗ ಮುಕ್ತಿಗೆ ಸಾಧನವೆಂದೇ ಸಿದ್ಧಿಸುತ್ತದೆ ॥ ೨೩೮ ॥ ೨೩೯ ॥ ೨೪೦ ॥ ೨೪೧ ॥

ಹೀಗೆ ಭಕ್ತಿಗೇನೇ ಮೋಕ್ಷಸಾಧನತ್ವವು ಉಪಪಾದಿಸಲ್ಪಟ್ಟಿತು. ಭಕ್ತಿಯು ಕೇವಲ ಭಗವದ್ವಿಷಯಕವೇ ಎನ್ನುವ ಪ್ರತೀತಿಯನ್ನು ತಿರಸ್ಕರಿಸುತ್ತಾರೆ—

ಮೂ ॥ ತಾರತಮ್ಯೇನ ತದ್ಭಕ್ತೇಷ್ವಪಿ ಭಕ್ತಿರ್ವಿನಿಶ್ಚಯಾತ್ ।
ಕರ್ತವ್ಯೈಷಾಪಿ ತದ್ಭಕ್ತಿರ್ಲೋಕವೇದಾನುಸಾರತಃ ॥ ೨೪೨ ॥
ಯೋ ಹಿ ಭಕ್ತಃ ಪ್ರಧಾನೇ ಸ್ಯಾತ್ತದೀಯೇಷ್ವಪಿ ಭಕ್ತಿಮಾನ್ ।
ದೃಶ್ಯತೇಽಸೌ ನಿಯಮತೋ ವಿಪರೀತೋ ವಿಪರ್ಯಯೇ ॥ ೨೪೩ ॥
ವ್ಯಭಿಚಾರೋ ಯದಿ ಕ್ವಾಪಿ ಭಕ್ತಿಹ್ರಾಸೋಽತ್ರ ಕಲ್ಪ್ಯತೇ ।
ಭಕ್ತಿದೋಷೋ ಹ್ಯಸೌ ಯನ್ನ ತದ್ಭಕ್ತೇಷ್ವಪಿ ಭಕ್ತಿಮಾನ್ ॥ ೨೪೪ ॥

ಅ ॥ ತದ್ಭಕ್ತೇಷ್ವಪಿ=ವಿಷ್ಣುವಿನಲ್ಲಿ ಮಾತ್ರವಲ್ಲ ಮತ್ತೆ ವಿಷ್ಣುವಿನ ಭಕ್ತರಾದ ರಮಾದಿಗಳಲ್ಲಿಯೂ, ವಿನಿಶ್ಚಯಾತ್=ಸರ್ವಥಾ, ಭಕ್ತಿಃ = ಭಕ್ತಿಯು, ಕರ್ತವ್ಯಾ=ಮಾಡತಕ್ಕದ್ದೇ. (ಆ ಮಾಡಲ್ಪಡತಕ್ಕ ಭಕ್ತಿಯು) ತಾರತಮ್ಯೇನೈವ=ತರತಮಭಾವದಿಂದಲೇ ಮಾಡಬೇಕು (ಏಕೆಂದರೆ—) ಏಷಾಪಿ=ವಿಷ್ಣುಭಕ್ತರಲ್ಲಿ ಮಾಡಲ್ಪಡತಕ್ಕಭಕ್ತಿಯು, ತದ್ಭಕ್ತಿರೇವ=ವಿಷ್ಣುವಿನ ಭಕ್ತಿಯೇ. (ಆದುದರಿಂದ ಭಕ್ತರ ವಿಷಯದಲ್ಲಿಯೂ ಭಕ್ತಿಯನ್ನು ಮಾಡಬೇಕು ) (ವಿಷ್ಣುಭಕ್ತಿಯನ್ನು ಮಾಡಬೇಕೆಂದು ಉಪಪಾದಿಸಲ್ಪಟ್ಟಿತು. ಅದು ಆ ವಿಷ್ಣುಭಕ್ತರ ಭಕ್ತಿಯಿಂದಲೇ ಸಾಂಗವಾದುದು; ಬೇರೆಪ್ರಕಾರವಲ್ಲ. ಇದೂ ಕೂಡ ಯಾವುದರಿಂದ ಎಂದರೆ—) ಲೋಕವೇದಾನುಸಾರತಃ=ಲೋಕಸಿದ್ಧವ್ಯಾಪ್ತಿಯುಳ್ಳ ಅನುಮಾನವೂ, ಆಗಮವೂ ಇವುಗಳ ಅನುಸರಣದೆಶೆಯಿಂದ, (ಲೋಕಾನುಸಾರಿತ್ವವನ್ನೇ ತೋರಿಸುತ್ತಾರೆ ) ಯೋ ಹಿ=ಯಾರು, ಪ್ರಧಾನೇ=ರಾಜಾದಿಗಳಲ್ಲಿ, ಭಕ್ತಃ=ಭಕ್ತನು, ಸ್ಯಾತ್=ಆಗುವನೋ, ಅಸೌ=ಈತನು, ತದೀಯೇಷ್ವಪಿ=ತತ್ಸಂಬಂಧಿಕರಲ್ಲಿಯೂ, ಭಕ್ತಿಮಾನ್ = ಭಕ್ತಿಯುಳ್ಳವನಾಗಿ, ನಿಯಮತಃ=ನಿಯಮದಿಂದ, ದೃಶ್ಯತೇ = ಕಾಣಲ್ಪಡುತ್ತಾನೆ. ವಿಪರ್ಯಯೇ = ತತ್ಸಂಬಂಧಿಕರ ಭಕ್ತಿಯು ಇಲ್ಲವಾದರೆ, ವಿಪರೀತಃ=ಪ್ರಧಾನನಲ್ಲಿಯೂ ಭಕ್ತಿರಹಿತನಾಗಿ, ನಿಯಮತಃ=ನಿಯಮದಿಂದ, ದೃಶ್ಯತೇ=ಕಾಣಲ್ಪಡುತ್ತಾನೆ. (ತಥಾಚ 'ನಿಯಮತಃ ಭಗವದ್ಭಕ್ತಭಕ್ತಿಮಾನ್ ಭವೇತ್ ಭಗವದ್ಭಕ್ತ್ಯಾ ಪುರುಷಾರ್ಥಭಾಕ್ತ್ವಾತ್ ಯೋ ಯದ್ಭಕ್ತ್ಯಾ ಪುರುಷಾರ್ಥಭಾಕ್ ಅಸೌ ತದ್ಭಕ್ತಭಕ್ತೋ ದೃಷ್ಟಃ ಯಥಾ ಸಮ್ಮತಃ' ವಿವಾದವಿಷಯಾಭೂತನಾದವನು ಶ್ರೀ ಹರಿಯ ಭಕ್ತಿಯಲ್ಲಿ ಭಕ್ತಿಯುಳ್ಳವನಾಗಬೇಕು; ಶ್ರೀಹರಿಯ ಭಕ್ತಿಯಿಂದ ಪುರುಷಾರ್ಥವನ್ನು ಹೊಂದಿರುವುದರಿಂದ, ಯಾರು ಯಾರ ಭಕ್ತಿಯಿಂದ ಪುರುಷಾರ್ಥವನ್ನು ಹೊಂದಿಕೊಂಡು ಇರುವನೋ ಇವನು ಅವರ ಭಕ್ತರ ಭಕ್ತನಾಗಿ ಕಾಣಲ್ಪಟ್ಟಿದ್ದಾನೆ, ಸಮ್ಮತನಂತೆ. ೨ 'ಯಸ್ತು ಯದ್ಭಕ್ತಭಕ್ತೋ ನ ಭವತಿ ನಾಸೌ ತದ್ಭಕ್ತ್ಯಾ ಪುರುಷಾರ್ಥಭಾಕ್ ಯಥಾ ಸಮ್ಮತಃ' ಯಾವನು ಯಾವನ ಭಕ್ತರ ಭಕ್ತನು ಆಗುವುದಿಲ್ಲವೋ, ಇವನು ಅವನ ಭಕ್ತಿಯಿಂದ ಪುರುಷಾರ್ಥವನ್ನು ಹೊಂದಿದವನು ಅಲ್ಲ. ನಿಶ್ಚಿತನಾದವನಂತೆ ಎನ್ನುವ ಅನ್ವಯವ್ಯತಿರೇಕಗಳು ಸೂಚಿತಗಳಾದವು.) (ಹಾಗಾದರೆ ದೈತ್ಯಾದಿಗಳು ಬ್ರಹ್ಮಾದಿಗಳಲ್ಲಿ ಭಕ್ತಿಯುಳ್ಳವರಾದಾಗ್ಯೂ ಬ್ರಹ್ಮಾದಿಗಳ ಭಕ್ತರಾದ ಇಂದ್ರಾದಿಗಳಲ್ಲಿ ಭಕ್ತಿರಹಿತರಾಗಿ ಕಾಣಲ್ಪಡುತ್ತಾರೆ. ಆದುದರಿಂದ ವ್ಯಭಿಚಾರವು ಎಂದರೆ—) ಯದಿ = ಯಾವಪಕ್ಷದಲ್ಲಿ, ಕ್ವಾಪಿ=ಎಲ್ಲಿಯಾದರೂ, (ಪರರಿಂದ) ವ್ಯಭಿಚಾರಃ=ವ್ಯಭಿಚಾರವು, (ಹೇಳಲ್ಪಡುತ್ತದೆ.) (ಆಗ ನಮ್ಮಿಂದ) ಅತ್ರ=ಪುರುಷನಲ್ಲಿ, ಭಕ್ತಿಹ್ರಾಸಃ = ಭಕ್ತಿಹ್ರಾಸವು, ಕಲ್ಪ್ಯತೇ = ಕಲ್ಪಿಸಲ್ಪಡುತ್ತದೆ. (ವಿಕಲಭಕ್ತಿತ್ವವು ಹೇಳಲ್ಪಡುತ್ತದೆ.) ಏಕೆ ಹೀಗೆ ಕಲ್ಪಿಸುತ್ತೀರಿ ಎಂದರೆ— ತದ್ಭಕ್ತೇಷ್ವಪಿ = ವಿಷ್ಣುಭಕ್ತರಲ್ಲಿಯೂ, ಭಕ್ತಿಮಾನ್ನ=ಭಕ್ತಿಯುಳ್ಳವನಲ್ಲ, ಇತಿ ಯತ್=ಎನ್ನುವುದು ಯಾವುದೋ, ಅಸೌ=ಇದು, ಭಕ್ತಿದೋಷಃ ಹಿ=ಪ್ರಧಾನ ಭಕ್ತಿದ್ವೇ ದೋಷವಷ್ಟೇ ॥ ೨೪೨ ॥ ೨೪೩ ॥ ೨೪೪ ॥

'ತದ್ಭಕ್ತ ಭಕ್ತಿಃ ಕರ್ತವ್ಯಾ' ಎನ್ನುವುದನ್ನು ಅನುಮಾನದಿಂದ ಉಪಪಾದಿಸಿ ಆ ಭಕ್ತಿಯು ತಾರತಮ್ಯದಿಂದಲೇ ಮಾಡತಕ್ಕದು ಎನ್ನುವುದನ್ನು ಅನುಮಾನದಿಂದ ಸಾಧಿಸುತ್ತಾರೆ.

ಮೂ ॥ ತಾರತಮ್ಯೇನ ತೇಷ್ವದ್ಧಾ ಭಕ್ತಿರ್ದೃಷ್ಟಾನುಸಾರತಃ ।
ವಿಷ್ಣುಪ್ರಸಾದಾನುಸಾರಾತ್ಕಾರ್ಯಾ ದೋಷಸ್ತದನ್ಯಥಾ ॥ ೨೪೫ ॥
ಸ್ವಪ್ರೀತ್ಯನುಸೃತೌ ಪ್ರೀತಿರ್ಲೋಕೇऽಪ್ಯದ್ಧೈವ ದೃಶ್ಯತೇ ।
ತಾರತಮ್ಯಪರಿಜ್ಞಾನಮಪ್ಯೇತೇನೈವ ಸಾಧನಂ ॥ ೨೪೬ ॥
ಲಕ್ಷ್ಮೀ ವಿರಿಂಚವಾಣೀಶಗಿರಿಜೇಂದ್ರಾ ಗಿರಾಂಪ(ದ್ರಾಂಗಿರಸ್ಸು)ತಿಃ ।
ಸೂರ್ಯಾದಯಶ್ಚ ಕ್ರಮಶೋ ಭಗವತ್ಪ್ರೀತಿ ಗೋಚರಾಃ ॥ ೨೪೭ ॥
ತೇಷು ಭಕ್ತಿಃ ಕ್ರಮೇಣೈವ ಕಾರ್ಯಾ ನಿತ್ಯಂ ಮುಮುಕ್ಷುಭಿಃ ।
ಸರ್ವೇऽಪಿ ಗುರವಶ್ಚೈತೇ ಪುರುಷಸ್ಯ ಸದೈವ ಹಿ ॥ ೨೪೮ ॥
ತಸ್ಮಾತ್ಪೂಜ್ಯಾಶ್ಚ ನಮ್ಯಾಶ್ಚ ಧ್ಯೇಯಾಶ್ಚ ಪರಿತೋ ಹರಿಂ ।
ಇತಿ ಷಾಡ್ಗುಣ್ಯವಚನಾದಪ್ಯೇಷೋऽರ್ಥೋऽವಸೀಯತೇ ॥ ೨೪೯ ॥
ಹರಿಭಕ್ತಿಃ ಕ್ರಮೇಣೈವ ತದೀಯೇಷು ಹರಿಸ್ಮೃತಿಃ ।
ಹರಿಸ್ತುತಿಸ್ತತ್ಸ್ಮೃತಿಶ್ಚ ತತ್ಸ್ತುತಿರ್ಹರಿಪೂಜನಂ ॥ ೨೫೦ ॥
ತತ್ಪೂಜಾ ವಿಹಿತಾ (ತ) ತ್ಯಾಗ ಇತಿ ಮುಕ್ತೇಃ ಕ್ರಮೇಣ ಹಿ ।
ನಿಯಮಾತ್ಸಾಧನಾನ್ಯೇವ ನಿತ್ಯಸಾಧ್ಯಾನಿ ಚಾಖಿಲೈಃ ।
ಇತಿ ಪ್ರವೃತ್ತವಚನಂ ಸಾಧನಸ್ಯ ವಿನಿರ್ಣಯೇ ॥ ೨೫೧ ॥

ಅ ॥ ತೇಷು=ವಿಷ್ಣುಭಕ್ತರಲ್ಲಿ ಮಾತಲ್ಪಡತಕ್ಕ, ಭಕ್ತಿಃ=ಭಕ್ತಿಯು, ಅದ್ಧಾ=ಸರ್ವಪ್ರಕಾರದಿಂದಲೂ, ತಾರತಮ್ಯೇನ = ತರತಮಭಾವದಿಂದಲೇ, ವಿಷ್ಣುಪ್ರಸಾದಾನುಸಾರಾತ್ = ವಿಷ್ಣುವಿನ ಅನುಗ್ರಹಾನುಸಾರವಾಗಿ, ದೃಷ್ಟಾನುಸಾರತಃ = ಲೋಕದೃಷ್ಟಾನುಸಾರವಾಗಿಯೂ, ಕಾರ್ಯಾ=ಮಾಡತಕ್ಕದು. (ಅಂದರೆ— ಯಾರಲ್ಲಿ ಅಧಿಕವಾದ ವಿಷ್ಣುಪ್ರಸಾದವು ಇದೆಯೋ ಅವನಲ್ಲಿ ಅಧಿಕವಾದ ಭಕ್ತಿಯು.) ತದನ್ಯಥಾ=ಅದಕ್ಕಿಂತ ಬೇರೆಪ್ರಕಾರ ಸಾಮ್ಯದಿಂದಲೂ, ವೈಪರೀತ್ಯದಿಂದಲೂ ಮಾಡಿದರೆ, ದೋಷಃ = ಅನರ್ಥವಾಗುತ್ತದೆ. ('ದೃಷ್ಟಾನುಸಾರತಃ' ಎಂದು ಹೇಳಿದ್ದನ್ನು ತೋರಿಸುತ್ತಾರೆ.) ಸ್ವಪ್ರೀತ್ಯನುಸೃತೌ = ರಾಜಾದಿಗಳ ಪ್ರೀತಿಯನ್ನು ಅನುಸರಿಸಿದರೆ, (ಅಂದರೆ- ಆತನಿಗೆ ಯಾರಲ್ಲಿ ಹೇಗೆ ಪ್ರೀತಿಯೋ ಅದನ್ನು ಅನುಸರಿಸಿ ಭಕ್ತಿಯನ್ನು ಮಾಡಿದರೆ ಆ ತನ್ನ ಭಕ್ತಭಕ್ತನಲ್ಲಿ ಆ ರಾಜಾದಿಗಳಿಗೆ) ಪ್ರೀತಿಃ=ಪ್ರೀತಿಯು, ಲೋಕೇऽಪಿ= ಲೋಕದಲ್ಲಿಯೂ ಕೂಡ, ಅದ್ಧೈವ-ನಿಯಮದಿಂದಲೇ, ದೃಶ್ಯತೇ=ಕಾಣಲ್ಪಡುತ್ತದೆ. ('ಈಶ್ವರಃ ಸ್ವಪ್ರೀತ್ಯನುಸಾರೇಣ ಸ್ವಭಕ್ತೇಷು ಭಕ್ತೇ ಪ್ರಸೀದತಿ ಪ್ರೇಕ್ಷಾವತ್ಪುರುಷತ್ವಾತ್ ರಾಜವತ್' ಎಂದು ಪ್ರಯೋಗವು.) (ಇದರಿಂದ ಪ್ರಮೇಯಾಂತರವೂ ಸಿದ್ಧವಾಯಿತೆನ್ನುತ್ತಾರೆ.) ಏತೇನೈವ= ಭಗವದ್ಭಕ್ತರಾದ ರಮಾಬ್ರಹ್ಮಾದಿಗಳಲ್ಲಿ ತಾರತಮ್ಯದಿಂದಲೇ ಭಕ್ತಿಯನ್ನು ಮಾಡಬೇಕೆಂದು ಸಮರ್ಥಿಸಿದರಿಂದಲೇ, ತಾರತಮ್ಯಪರಿಜ್ಞಾನಮಪಿ=ದೇವತಾಪರಿಜ್ಞಾನತಾರತಮ್ಯವು ಯಾವುದು ಮೊದಲು ಹೇಳಲ್ಪಟ್ಟಿದೆಯೋ ಅದೂ ಕೂಡ, ಸಾಧನಂ = ಮೋಕ್ಷಕ್ಕೆ ಸಾಧನವೆಂದು ಸಿದ್ಧವಾಯಿತು. (ತಾರತಮ್ಯವು ತಿಳಿಯಲ್ಪಡದೆ ಇರಲು ತಾರತಮ್ಯವನ್ನು ಅನುಸರಿಸಿ ಭಕ್ತಿ

ಕರಣವು ಕೂಡಲಾರದು.) (ಭಗವಂತನ ಪ್ರಸಾದತಾರತಮ್ಯವನ್ನು ಅನುಸರಿಸಿ ಭಗವದ್ಭಕ್ತರಲ್ಲಿ ಭಕ್ತಿಯನ್ನು ಮಾಡಬೇಕು ಎನ್ನುವಲ್ಲಿ ಆಗಮವನ್ನು ಹೇಳುತ್ತಾರೆ—) ಲಕ್ಷ್ಮೀ ವಿರಿಂಚ ವಾಣೀಶ ಗಿರಿಜೇಂದ್ರಾಃ = ಲಕ್ಷ್ಮೀದೇವಿಯು, ಬ್ರಹ್ಮನು, ಸರಸ್ವತಿಯು, ರುದ್ರನು, ಪಾರ್ವತಿಯು, ದೇವೇಂದ್ರನು— ಇವರು, ಗಿರಾಂಪತಿಃ = ಬೃಹಸ್ಪತ್ಯಾಚಾರ್ಯರು, ಸೂರ್ಯಾದಯಶ್ಚ = ಸೂರ್ಯನೇ ಮೊದಲಾದವರೂ, ಕ್ರಮಶಃ = ಕ್ರಮದಿಂದ, ಭಗವತ್ಪ್ರೀತಿಗೋಚರಾಃ = ಶ್ರೀ ಹರಿಯ ಪ್ರೀತಿಗೆ ವಿಷಯರಾದವರು, ತೇಷು=ಅವರಲ್ಲಿ, ನಿತ್ಯಂ=ನಿತ್ಯದಲ್ಲಿಯೂ, ಮುಮುಕ್ಷುಭಿಃ=ಮೋಕ್ಷೇಚ್ಛುಗಳಿಂದ, ಕ್ರಮೇಣೈವ=ಭಗವತ್ಪ್ರೀತಿತಾರತಮ್ಯಕ್ರಮದಿಂದಲೇ, ಭಕ್ತಿಃ= ಭಕ್ತಿಯು, ಕಾರ್ಯಾ=ಮಾಡತಕ್ಕದು. ಪುರುಷಸ್ಯ=ಪುರುಷನಿಗೆ, ಸದೈವ=ಯಾವಾಗಲೂ, ಏತೇ ಸರ್ವೇಽಪಿ = ಇವರೆಲ್ಲರೂ, ಗುರವಶ್ಚ = ಗುರುಗಳು, ಹಿ=ಪ್ರಸಿದ್ಧವು. ತಸ್ಮಾತ್ = ಆದುದರಿಂದ, ಹರಿಂಪರಿತಃ=ಶ್ರೀ ಹರಿಯ ಸುತ್ತಲೂ, (ಅಂದರೆ - ಶ್ರೀ ಹರಿಯ ಪರಿವಾರರಾಗಿ) ಪೂಜ್ಯಾಶ್ಚ = ಪೂಜಿಸಿಕೊಳ್ಳಲ್ಪಡತಕ್ಕವರೂ, ನಮ್ಯಾಶ್ಚ=ನಮುಸ್ಕರಿಸಿ ಕೊಳ್ಳಲ್ಪಡತಕ್ಕವರೂ, ಮತ್ತು ಧ್ಯೇಯಾಶ್ಚ=ಧ್ಯಾನಮಾಡಿಸಿಕೊಳ್ಳಲ್ಪಡತಕ್ಕವರೂ, ಇತಿ=ಈಪ್ರಕಾರ, ಷಾಡ್ಗುಣ್ಯವಚನಾದಪಿ=ಷಾಡ್ಗುಣ್ಯವಚನದಿಂದಲೂ, ಏಷಃ ಅರ್ಥಃ=ಈ ಅರ್ಥವು, ಅವಸೀಯತೇ=ನಿಶ್ಚಯಿಸಲ್ಪಡುತ್ತದೆ. (ಶ್ರೀಹರಿಯಲ್ಲಿ ನಿರತಿಶಯ ಭಕ್ತಿಯು. ಹರಿಭಕ್ತರಲ್ಲಿ ತಾರತಮ್ಯಕ್ರಮದಿಂದ ಭಕ್ತಿಯು. ಹರಿಭಕ್ತರಲ್ಲಿ ತಾರತಮ್ಯದಿಂದಲೇ ಹರಿಸ್ಮೃತ್ಯಾದಿಗಳು ಮುಕ್ತಿಸಾಧನವು ಎನ್ನುವುದನ್ನು ಪಂಚರಾತ್ರಾವಾಂತರವಾದ ಪ್ರವೃತ್ತ ವಚನದಿಂದಲೂ ಸಮರ್ಥಿಸುತ್ತಾರೆ—) ಹರಿಭಕ್ತಿಃ = ಶ್ರೀ ಹರಿಯಲ್ಲಿ ನಿರತಿಶಯವಾದ ಭಕ್ತಿಯು, ತದೀಯೇಷು=ಹರಿಭಕ್ತರಲ್ಲಿ, ಕ್ರಮೇಣೈವ=ತಾರತಮ್ಯಕ್ರಮದಿಂದಲೇ, ಭಕ್ತಿಃ=ಭಕ್ತಿಯು, ಹರಿಸ್ಮೃತಿಃ=ಶ್ರೀ ಹರಿಯ ಸ್ಮರಣೆಯು, ಹರಿಸ್ತುತಿಃ= ಶ್ರೀ ಹರಿಯ ಸ್ತೋತ್ರವು, ತತ್ಸ್ಮೃತಿಶ್ಚ=ಭಕ್ತರ ಸ್ಮೃತಿಯು, ತತ್ಸ್ತುತಿಶ್ಚ=ಹರಿಭಕ್ತರ ಸ್ತೋತ್ರವು, ಹರಿಪೂಜನಂ=ಶ್ರೀ ಹರಿಯ ಪೂಜೆಯು, ತತ್ಪೂಜಾ=ಶ್ರೀ ಹರಿಯ ಭಕ್ತರ ಪೂಜೆಯು, ವಿಹಿತಾತ್ಯಾಗಃ=ವಿಹಿತವಾದುದನ್ನು ಬಿಡದಿರುವುದು, ಅಥವಾ ಅವಿಹಿತತ್ಯಾಗಃ= ನಿಷಿದ್ಧ ಪರಿತ್ಯಾಗವು, ಇತಿ = ಹೀಗೆ, ಇವುಗಳೆಲ್ಲವೂ ಕ್ರಮೇಣ ಹಿ = ಕ್ರಮದಿಂದಲೇ, ನಿಯಮಾತ್=ನಿಯಮದಿಂದ, ಮುಕ್ತೇಃ=ಮುಕ್ತಿಗೆ, ಸಾಧನಾನ್ಯೇವ=ಸಾಧನಗಳೇ. (ಅಂತೂ ಹರಿವಿಷಯಕಗಳಾದ ಭಕ್ತ್ಯಾದಿಗಳು ಮುಖ್ಯ ಸಾಧನಗಳು. ಹರಿಭಕ್ತರ ವಿಷಯಕಗಳಾದ ಭಕ್ತ್ಯಾದಿಗಳು ಅಮುಖ್ಯ ಸಾಧನಗಳು.) ಅಖಿಲೈಃ = ಎಲ್ಲಾ ಮುಮುಕ್ಷುಗಳಿಂದಲೂ ಮುಕ್ತಿಗೆ ಸಾಧನವಾಗಿರುವುದರಿಂದ, ನಿತ್ಯಸಾಧ್ಯಾನಿ=ನಿರಂತರದಲ್ಲಿಯೂ ಸಾಧ್ಯಗಳು. ಇತಿ= ಹೀಗೆ, ಪ್ರವೃತ್ತವಚನಂ=ಪ್ರವೃತ್ತದ ವಚನವು, ಸಾಧನಸ್ಯ ವಿನಿರ್ಣಯೇ=ಸಾಧನವಿನಿರ್ಣಯಾಖ್ಯವಾದ ಅವಾಂತರಪ್ರಕರಣದಲ್ಲಿ ಇದೆ ॥ ೨೪೫ ॥ ೨೪೬ ॥ ೨೪೭ ॥ ೨೪೮ ॥ ೨೪೯ ॥ ೨೫೦ ॥ ೨೫೧ ॥

ಇದನ್ನೇ ವಿವರಿಸುತ್ತಾರೆ—

ಮೂ ॥ ಪ್ರವೃತ್ತೇ ಪಂಚರಾತ್ರೇ ಹಿ ಸಾಧನಸ್ಯಾತಿನಿರ್ಣ(ಶ್ಚ)ಯಃ ॥ ೨೫೨ ॥
ಹರಿದ್ವೇಷೋ ನ ಶುಭದಃ ಸದ್ವೇಷತ್ವಾದ್ಯಥಾ ಗುರೋಃ ।
ಕ್ರಮಾದ್ಭಕ್ತಿರ್ಹರಿಪ್ರೀತಿಕಾರಣಂ ತತ್ಪ್ರಿಯೇಷ್ವಗಾ ॥ ೨೫೩ ॥
ಭಕ್ತಿರ್ಯತೋ ಯಥಾ ಸ್ವಸ್ಮಿನ್ನಿತ್ಯಾದ್ಯಾ ಯುಕ್ತಿರತ್ರ ಚ ।
ಪ್ರಾಧಾನ್ಯತಾರತಮ್ಯಾನುಸಾರಿಣೀ ಭಕ್ತಿರುತ್ತಮಾ ॥ ೨೫೪ ॥

**ಪ್ರೀತಿದೈವ ಹರೇರ್ಯಸ್ಮಾದ್ಭಕ್ತಿಃ ಸಾಸ್ಟೋಪಗಾ ಯಥಾ ।**
**ಇತಿವಾ [ಜ್ಞಾನಕರ್ಮಾದಿ ಫಲಂ ಚೈಷು ಕ್ರಮೋಪಗಂ] ॥ ೨೫೫ ॥**

ಅ ॥ ಪಂಚರಾತ್ರೇ=ಪಂಚರಾತ್ರದಲ್ಲಿ, ಪ್ರವೃತ್ತೇ=ಪ್ರವೃತ್ತನಾಮಕವಾದ ಅವಾಂತರ ಗ್ರಂಥದಲ್ಲಿ, (ಅದರಲ್ಲಿಯೂ) ಸಾಧನಖ್ಯಾತಿನಿರ್ಣಯಃ=ಸಾಧನ ವಿನಿರ್ಣಯವೆನ್ನುವ ಪ್ರಕರಣವು ಇದೆ. (ಹೇಳಿದ ಅರ್ಥಗಳಲ್ಲಿ ಅನುಮಾನಾಂತರಗಳನ್ನು ಹೇಳುತ್ತಾರೆ.) ಸದ್ದ್ವೇಷತ್ವಾತ್= ಉತ್ತಮಪುರುಷರ ದ್ವೇಷವಾದುದರಿಂದ, ಹರಿದ್ವೇಷಃ=ಶ್ರೀ ಹರಿಯದ್ವೇಷವು, ಶುಭದಃ = ಶುಭ ವನ್ನು ಕೊಡತಕ್ಕದು, ನ=ಅಲ್ಲ. ಯಥಾ ಗುರೋಃ=ಗುರುಗಳದ್ವೇಷವು ಹೇಗೋ, ಹಾಗೆಯೇ. ಕ್ರಮಾತ್=ಕ್ರಮವನ್ನು ಅನುಸರಿಸಿ, (ರಮಾದಿಗಳಲ್ಲಿ) ಭಕ್ತಿಃ=ಭಕ್ತಿಯು, ಹರಿಪ್ರೀತಿಕಾರಣಂ= ಶ್ರೀ ಹರಿಯಪ್ರೀತಿಗೆ ಕಾರಣವಾದುದು. ಯತಃ=ಯಾವಕಾರಣದಿಂದ, ಭಕ್ತಿಃ = ಭಕ್ತಿಯು, ತತ್ಪ್ರಿಯೋಪಗಾ=ಆ ಶ್ರೀಹರಿಯ ಭಕ್ತರನ್ನ ವಿಷಯೀಕರಿಸಿಕೊಂಡು ಇದೆಯೋ, (ಹರಿಪ್ರಿಯ ವಿಷಯ ಭಕ್ತಿತ್ವಾತ್ ಎಂದುಕ್ತವಾಯಿತು.) (ಯಾ ಯತ್ಪ್ರೀತಿವಿಷಯಾ ಭಕ್ತಿಃ ಸಾ ತತ್ಪ್ರೀತಿ ಕಾರಣಂ=ಯಾವ ಭಕ್ತಿಯು ಯಾವ ಶ್ರೀ ಹರಿಯ ಭಕ್ತರ ವಿಷಯಕವೋ ಅದು ಆ ಶ್ರೀಹರಿಯ ಪ್ರೀತಿಗೆ ಕಾರಣವಾದುದು.) ಯಥಾ=ಹೇಗೆಂದರೆ, ಸ್ವಸ್ಮಿನ್ = ತನ್ನಲ್ಲಿ, ಭಕ್ತಿಃ = ಭಕ್ತಿಯು, (ರಾಜಪ್ರಿಯನಾದ ದೇವದತ್ತನಲ್ಲಿ ಭಕ್ತಿಯು ರಾಜಪ್ರೀತಿಗೆ ಕಾರಣವು ) ಅತ್ರ = ಹಿಂದೆ ಹೇಳಿದ ಅರ್ಥದಲ್ಲಿ, ಇತ್ಯಾದ್ಯಾ=ಇದೇ ಮೊದಲಾಗಿವುಳ್ಳ, ಯುಕ್ತಿಶ್ಚ=ಯುಕ್ತಿಯೂ ಕೂಡ, ಪ್ರಾಧಾನ್ಯ ತಾರತಮ್ಯಾನುಸಾರಿಣೀ=ಉತ್ತಮತ್ವತಾರತಮ್ಯವನ್ನು ಅನುಸರಿಸಿಕೊಂಡು ಇರುವ, ಭಕ್ತಿಃ = ರಮಾದಿಗಳಲ್ಲಿರತಕ್ಕ ಭಕ್ತಿಯು, ಹರೇಃ = ಶ್ರೀ ಹರಿಗೆ, ಪ್ರೀತಿದೈವ = ಪ್ರೀತಿಯನ್ನು ಕೊಡ ತಕ್ಕದು. ಯಸ್ಮಾತ್=ಯಾವಕಾರಣದಿಂದ, ಸಾ=ಅದು ಉತ್ತಮಾ ಭಕ್ತಿಃ=ಉತ್ತಮವಾದ ಭಕ್ತಿಯೋ, (ಶಾಸ್ತ್ರವಿಹಿತಭಕ್ತಿಯಾದುದರಿಂದ.) ಸ್ಟೋಪಗಾ ಸಾ ಯಥಾ=ವಿಷ್ಣುವಿಷಯಕವಾದ ಭಕ್ತಿಯು ಹೇಗೋ, ಇತಿ ವಾ=ಹೀಗೆ ಆಗಲೀ, (ಅನುಮೇಯುನತಕ್ಕದು).

ತಾ ॥ (1) **‘ಭಾಗವತಭಕ್ತಿಃ ಭಗವತ್ಪ್ರೀತಿಕಾರಣಂ ಭಗವತ್ಪ್ರಿಯ ಭಕ್ತಿತ್ವಾತ್’** ಭಗವದ್ಭಕ್ತರ ಭಕ್ತಿಯು ಶ್ರೀ ಹರಿಯ ಪ್ರೀತಿಗೆ ಕಾರಣವು. ಭಗವದ್ಭಕ್ತರ ಭಕ್ತಿಯಾದುದ ರಿಂದ, (2) **‘ಭಗವಾನ್ ರಮಾದಿಷು ತಾರತಮ್ಯೋಪೇತ ಭಕ್ತ್ಯೈವ ಪ್ರಸೀದತಿ ತಾರ ತಮ್ಯೋಪೈವ ತದ್ವಿಷಯಪ್ರೀತಿಮತ್ವಾತ’** ಶ್ರೀ ಹರಿಯು ರಮಾದಿಗಳಲ್ಲಿ ತಾರತಮ್ಯದಿಂದ ಕೂಡಿದ ಭಕ್ತಿಯಿಂದಲೇ ಪ್ರಸನ್ನನಾಗುತ್ತಾನೆ. ತಾರತಮ್ಯದಿಂದಲೇ ರಮಾದಿಗಳ ಪ್ರೀತಿ ಯುಳ್ಳುವದರಿಂದ ಎನ್ನುವ ಯುಕ್ತಿಯೂ ಸೂಚಿತವಾಯಿತು. ॥ ೨೫೨ ॥ ೨೫೩ ॥ ೨೫೪ ॥ ೨೫೫ ॥ ॥ ಸೂ. । ೩೪ ॥ ೩೫ ॥ ೩೬ ॥ ೩೭ ॥ ೩೮ ॥ ೩೯ ॥ ೪೦ ॥ ೪೧ ॥ ೪೨ ॥ ೪೩ ॥ ಅ. ॥ ೫ ॥ ೬ ॥

**ಉಭಯ ಲಿಂಗಾಧಿಕರಣ, ಅಧಿಕಾರಿಕಾಧಿಕರಣಗಳು ಸಮಾಪ್ತಗಳಾದುವು.**

---

## ಫಲಶ್ರುತ್ಯಧಿಕರಣವು.

**‘ ಓಂ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ಓಂ ’ ॥ ೪೪ ॥**

ಸ್ವಾಮಿಗಳಾದ ದೇವತೆಗಳಿಗೇನೇ ಜ್ಞಾನಫಲವು. 'ಸ್ವಾಮೀ ಹಿ ಫಲಮಶ್ನುತೇ ನಾಸ್ವಾಮೀ' ಎಂದು ಸ್ವಾಮಿಗೇನೇ ಫಲವು ಶ್ರುತವಾಗಿರುವುದರಿಂದ, ಎಂದು ಆತ್ರೇಯ ಋಷಿಯು ತಿಳಿಯುತ್ತಾನೆ. ಜ್ಞಾನವು ಮಹಾಫಲಕ್ಕೆ ಕಾರಣವು ಎಂದು ಪುರುಷಾರ್ಥಾಧಿಕರಣದಲ್ಲಿ ಪ್ರತಿಪಾದಿತವಾಗಿದೆ. ಜ್ಞಾನವು ಹುಟ್ಟಿದಮೇಲೆ ಮಾಡಿದ ವರ್ಣಾಶ್ರಮಗಳ ಧರ್ಮವು ಶಮದಮಾದಿಗಳೂ ಕೂಡ ಆನಂದಾತಿಶಯಕ್ಕೆ ಕಾರಣವು ಎಂದು ಸುತ್ಯಧಿಕರಣದಲ್ಲಿ ಹೇಳಿಯದೆ. ಆ ಈ ಜ್ಞಾನಕರ್ಮಾದಿಗಳ ಫಲವು ದೇವತೆಗಳು ಪ್ರೇರಕರಾದುದರಿಂದ ದೇವತೆಗಳಿಗೆ ಆಗುತ್ತದೋ ಅಥವಾ ಕರ್ತೃ ಪುರುಷನಿಗೆ ಆಗುತ್ತದೋ ಎಂದು ಸಂಶಯವು ಬಂದರೆ— ಪ್ರಥಮಸೂತ್ರದಿಂದ ದೇವತೆಗಳಿಗೇನೇ ಎಂದು ಆತ್ರೇಯಮತವನ್ನು ಹೇಳಿಕೊಂಡು 'ಆರ್ತ್ವಿಜ್ಯಮಿತ್ಯೌಡುಲೋಮಿಃ' ಎಂದು ಏಕದೇಶಿಗಳ ಮತದಿಂದ ಸಿದ್ಧಾಂತವನ್ನು ಹೇಳಿ, 'ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಂ' ಎಂದು ಪರಮ ಸಿದ್ಧಾಂತವನ್ನು ಹೇಳಿರುವರು. ಅದರಲ್ಲಿ ದೇವತೆಗಳಿಗೆ ಜ್ಞಾನಾದಿ ಫಲವು ಎನ್ನುವ ಆತ್ರೇಯಮತಾಂಶವನ್ನು ತೆಗೆದುಕೊಳ್ಳಲೇಬೇಕು. ಅವಧಾರಣವನ್ನೇ ಬಿಡಬೇಕು. ಆದುದರಿಂದ ಪೂರ್ವಪಕ್ಷ ಸೂತ್ರಾರ್ಥವನ್ನು ವಿವರಿಸುತ್ತಾರೆ—

ಮೂ || [ಇತಿನಾ] ಜ್ಞಾನಕರ್ಮಾದಿ ಫಲಂ ಚೈಷು ಕ್ರಮೋಪಗಂ || ೨೫೫ ||
ಸ್ವಾತಂತ್ರ್ಯತಾರತಮ್ಯೇನ ಫಲಂ ಹಿ ಫಲಿನಾಂ ಭವೇತ್ |
ಅಶುಭಂ ತ್ವಶುಭೇಽಪ್ಯೇಷಾಂ ಸ್ವಾತಂತ್ರ್ಯಾತ್ಪ್ರೀತಿತೋ ಹರೇಃ ||೨೫೬||
ಆಜ್ಞಯಾ ಚಾನ್ಯಗಂ ನೈವ ಭೋಗಾಯ ಭವತಿ ಕ್ವಚಿತ್ |
ಪುಣ್ಯಮೇವಾಮುಮಾಪ್ನೋತಿ ನ ದೇವಾನ್ ಪಾಪಮಾಪ್ನುಯಾತ್ |
ಇತ್ಯಾದಿಶ್ರುತಯೋ ಮಾನಮುಕ್ತೇಽರ್ಥೇ ಯುಕ್ತಯೋಽಪರಾಃ
|| ೨೫೭ ||

ಅ || ಜ್ಞಾನಕರ್ಮಾದಿ ಫಲಂಚ=ಜ್ಞಾನಕರ್ಮಾದಿಗಳ ಫಲವೂ (ದೇವತೆಗಳಿಗೆ ಆಗುತ್ತದೆ.) ಏಷು=ಈ ದೇವತೆಗಳಲ್ಲಿ, (ಉಂಟಾಗತಕ್ಕ ಫಲವು) ಕ್ರಮೋಪಗಂ = ಕ್ರಮದಿಂದಲೇ ಬರತಕ್ಕದು. (ಅಂತೂ ೧ ದೇವದತ್ತನಿಂದ ಮಾಡಲ್ಪಟ್ಟ ಜ್ಞಾನಾದಿಗಳ ಫಲವು ದೇವತೆಗಳಿಗೆ ಆಗುತ್ತದೆಂದು ಒಂದು ಪ್ರತಿಜ್ಞೆಯು. ೨ ಉಂಟಾಗತಕ್ಕ ಆ ಫಲವು ಕ್ರಮದಿಂದಲೇ, ಸಾಮ್ಯದಿಂದಲೂ ಅಲ್ಲ, ವೈಪರೀತ್ಯದಿಂದಲೂ ಅಲ್ಲ; ಅದರಲ್ಲಿ ಒಂದನೇ ಕಲ್ಪದಲ್ಲಿ ಹೇತುವನ್ನು ಸೂಚಿಸುತ್ತಾ ಎರಡನೇದನ್ನುಪಪಾದಿಸುತ್ತಾರೆ.) ಫಲಿನಾಂ=ಫಲವನ್ನು ಹೊಂದತಕ್ಕ ದೇವತೆಗಳಿಗೆ, ಸ್ವಾತಂತ್ರ್ಯತಾರತಮ್ಯೇನ ಹಿ=ಸ್ವಾಮ್ಯ ತಾರತಮ್ಯಾನುಸಾರದಿಂದಲೇ, ಫಲಂ=ಫಲವು, ಭವೇತ್=ಆಗತಕ್ಕದು. (ಸ್ವಾಮ್ಯದಿಂದಲಾಗಲೀ ವೈಪರೀತ್ಯದಿಂದಲಾಗಲೀ ಆಗಲಾರದು. 'ತಥಾಚ ಬ್ರಹ್ಮಾದಯಃ ತಾರತಮ್ಯೇನೈವ ಫಲವಂತಃ ತತ್ರ ತಾರತಮ್ಯೇನೈವ ಸ್ವಾತಂತ್ರ್ಯಾತ್'' ಎಂದು ಹೇಳಿದಂತೆ ಆಗುವುದು)ಇದರಿಂದ ಪ್ರಥಮಪ್ರತಿಜ್ಞೆಯಲ್ಲಿ ಹೇಳಲ್ಪಟ್ಟ ಸೂತ್ರದಲ್ಲಿ ಸ್ವಾಮಿಪದದಿಂದ ಸ್ವಾತಂತ್ರ್ಯ ಹೇತುವು ಸೂಚಿತವಾಯಿತು.) (ಸ್ವಾತಂತ್ರ್ಯವಿದ್ದುದರಿಂದ ದೇವದತ್ತನು ಮಾಡಿದ ಜ್ಞಾನಾದಿ ಫಲವು ದೇವತೆಗಳಿಗೆ ಆಗುವುದಾದರೆ ದೇವದತ್ತನು ಮಾಡಿದ ಮಿಥ್ಯಾಜ್ಞಾನಾದಿಗಳ ಅನರ್ಥ ಫಲವೂ ಅವರಿಗೆ ಪ್ರಸಕ್ತವಾಗಬೇಕಾಗುವುದು. ಎಂದರೆ—) ಹರೇಃ=ಶ್ರೀ ಹರಿಯ, ಪ್ರೀತಿತಃ=ಪ್ರೀತಿಯುದೆಸೆಯಿಂದ, ಅಶುಭೇಽಪಿ=ಅಶುಭದಲ್ಲಿಯೂ, ಏಷಾಂ = ಇವರಿಗೆ, ಸ್ವಾತಂತ್ರ್ಯಾತ್=ಶ್ರೀ ಹರಿಯ ಪ್ರಸಾದದಿಂದ ಈ ಅಶುಭವು ನಮ್ಮನ್ನು ಹೊಂದಬಾರದು ಎಂದು ನಿವಾರಣ ಮಾಡಿ

ಕೊಳ್ಳುವುದರಲ್ಲಿ ಅವರಿಗೆ ಸಾಮರ್ಥ್ಯ ವಿದ್ದಪ್ರಯುಕ್ತ, ಆಜ್ಞಯಾ ಚ=ಈ ಅಶುಭವು ಇವರನ್ನು ಹೊಂದಬಾರದು ಎಂದು ಶ್ರೀ ಹರಿಯ ಆಜ್ಞೆಯಿಂದಲೂ ಕೂಡ, ಅನ್ಯಗಂ = ಇತರರಲ್ಲಿರತಕ್ಕ, ಅಶುಭಂ ತು = ಅಶುಭವಾದರೂ, ಏಷಾಂ = ಈ ದೇವತೆಗಳಿಗೆ, ಕ್ವಚಿತ್ = ಎಲ್ಲಿಯೂ, ಭೋಗಾಯ = ಭೋಗಕ್ಕೋಸ್ಕರ, ನ ಭವತಿ = ಆಗುವುದಿಲ್ಲ. (ಮತ್ತು ವ್ಯವಸ್ಥಾಪಕವಾದ ಶ್ರುತಿಯು ಈ ವಿಷಯದಲ್ಲಿ ಇದೆ ಎನ್ನುತ್ತಾರೆ) ಅಮುಂ=ಸಪ್ತಾನ್ನ ವಿದ್ಯೋಪಾಸನದಿಂದ ಪ್ರೇರಕರಾಗಿ ಪರರಶರೀರವನ್ನು ಪ್ರವೇಶಮಾಡಿದವರನ್ನು, ಪುಣ್ಯಮೇವ=ಪರಕೃತವಾದ ಪುಣ್ಯವೇ, ಆಪ್ನೋತಿ = ಹೊಂದುತ್ತದೆ. (ಪಾಪವು ಹೊಂದುವುದಿಲ್ಲ.) ದೇವಾನ್ = ದೇವತೆಗಳನ್ನು, ಪಾಪಂ = ಪಾಪವು, ನಾಪ್ನುಯಾತ್ = ಹೊಂದಲಾರದು. (ಇದರಿಂದ 'ಪುಣ್ಯಮೇವಾಮುಂ ಗಚ್ಛತಿ= ನ ಹ ವೈ ದೇವಾನ್ ಪಾಪಂ ಗಚ್ಛತಿ' ಎನ್ನುವ ಶ್ರುತಿಯು ) ಉಕ್ತೇಽರ್ಥೇ= ಶುಭವೇ ಆಗುತ್ತದೆ, ಅಶುಭವಾಗುವುದಿಲ್ಲವೆನ್ನುವ ಅರ್ಥದಲ್ಲಿ, ಇತ್ಯಾದಿಶ್ರುತಯಃ = ಇದು ಮೊದಲಾದ ಶ್ರುತಿಗಳು, ಮಾನಂ=ಪ್ರಮಾಣವು. (ಬೇರೆ ವ್ಯವಸ್ಥಾಪಕವನ್ನು ಹೇಳುತ್ತಾರೆ.) ಅಪರಾಃ = ಸ್ವಾಮಿತ್ವ ಹರ್ಯಾಜ್ಞಾರೂಪಗಳಾದ ಹಿಂದೆ ಹೇಳಿದವುಗಳಿಂದ ಇತರಗಳಾದ, ಯುಕ್ತಯಃ = ಯುಕ್ತಿಗಳೂ, ಉಕ್ತೇಽರ್ಥೇ = ಹೇಳಿದ ಅರ್ಥದಲ್ಲಿ, ಮಾನಂ=ಪ್ರಮಾಣವು. ॥ ೨೫೫ ॥ ೨೫೬ ॥ ೨೫೭ ॥

ಆ ಯುಕ್ತಿಗಳು ಯಾವುವೆಂದರೆ— ಅವುಗಳನ್ನು ತೋರಿಸುವುದಕ್ಕಾಗಿ ಆಗಮವಾಕ್ಯವನ್ನು ಹೇಳುತ್ತಾರೆ—

ಮೂ ॥ ಉಪಾಸನಾಧರ್ಮಫಲಂ ಯತೋ ದೇಹಾಂತರೇ ಸ್ಥಿತಿಃ ॥ ೨೫೮ ॥
ವಾಸುದೇವಾಜ್ಞಯಾ ಚೈವ ಪೂರ್ವಕರ್ಮಾನುಸಾರತಃ ।
ಪ್ರೇರಯಂತಿ ಹಿ ತೇ ಜೀವಾನ್ ಪುಣ್ಯಪಾಪೇಷು ನಿತ್ಯಶಃ ॥ ೨೫೯ ॥
ಅರಾಗದ್ವೇಷತಶ್ಚೈವ ಕಥಂ ದೋಷಾನವಾಪ್ನುಯುಃ ।
ಹರ್ಯಾಜ್ಞಾಕರಣಾದೇವ ಪುಣ್ಯಮೇಭಿರವಾಪ್ಯತೇ ॥ ೨೬೦ ॥
ಹರಿಪೂಜೇತಿ ಚೋದ್ದೇಶಾತ್ಕಥಂ ನ ಶುಭಮಾಪ್ನುಯುಃ ।
ಅತೋ ಯಥಾಕ್ರಮಂ ಧರ್ಮಜ್ಞಾನಯೋಃ ಫಲಮಂಜಸಾ ॥ ೨೬೧ ॥
ಸರ್ವಪ್ರಾಣಿಗತಂ ದೇವಾಃ ಪ್ರಾಪ್ನುವಂತ್ಯಾವಿರಿಂಚತಃ ।
ದೇವಾ ಏವ ಹಿ ದೇವಾನಾಂ ವಿಶಿಷ್ಟಾ ವಿನಿಯಾಮಕಾಃ ॥ ೨೬೨ ॥
ಬ್ರಹ್ಮಾ ತ್ವಖಿಲದೇವಾನಾಂ ನರಾಣಾಂ ಚ ನಿಯಾಮಕಃ ।
ಅತಃ ಸರ್ವಗುಣಾನೇಷಃ ಪ್ರಾಪ್ನೋತ್ಯಧಿಕ(ಖಿಲ) ಮನ್ಯತಃ ॥ ೨೬೩ ॥

ಅ ॥ ಯತಃ=ಯಾವಕಾರಣದೆಶೆಯಿಂದ, ದೇಹಾಂತರೇ=ಬೇರೇ ದೇಹದಲ್ಲಿ, ಸ್ಥಿತಿಃ= ಇತರರ ಶರೀರವನ್ನು ಪ್ರವೇಶಮಾಡಿ ಅಲ್ಲಿ ಪುಣ್ಯಪಾಪಗಳ ಪ್ರೇರಣೆಯು, ಉಪಾಸನಾಧರ್ಮಫಲಂ=ದೇವತೆಗಳಿಗೆ ಶ್ರೀ ಹರಿಯ ಉಪಾಸನೆಯಿಂದುಂಟಾದ ಧರ್ಮದ ಫಲವೋ, (ಅತಃ= ಆದಕಾರಣ, ಪಾಪಾದಿಗಳನ್ನು ಪ್ರೇರಿಸುವವರಾದಾಗ್ಯೂ ಕೂಡ) ಕಥಂ=ಹೇಗೆ, ದೋಷಾನ್= ದೋಷಗಳನ್ನು, ಅವಾಪ್ನುಯುಃ=ಹೊಂದಿಯಾರು? (ಸಾತ್ವಿಕಧರ್ಮವು ದುಃಖದಲ್ಲಿ ಪರ್ಯವಸಾಯಿಯಾಗಲಾರದು. 'ತಥಾಚ ಪರಪುರೇ ದೇವಾನಾಂ ಪಾಪಾದಿಪ್ರೇರಣಂ ನ ದುಃಖಹೇತುಃ

ಸಾತ್ವಿಕಧರ್ಮಫಲವತ್ವಾತ್ ತತ್ವಜ್ಞಾನವತ್' ಎಂದು ಹೇಳಿದಂತೆ ಆಯಿತು ) ಮತ್ತೂ ತೇ= ಆ ದೇವತೆಗಳು, ವಾಸುದೇವಾಜ್ಞಯೈವ = ಶ್ರೀಹರಿಯ ಆಜ್ಞೆಯಿಂದಲೇ, (ತಮ್ಮ ಇಚ್ಛೆಯಿಂದ ಅಲ್ಲ.) ಪೂರ್ವಕರ್ಮಾನುಸಾರತ ಏವ = ಅವರವರಿಂದ ಮಾಡಲ್ಪಟ್ಟ ಪೂರ್ವಕರ್ಮಗಳ ಅನುಸಾರದಿಂದಲೇ, ಅರಾಗದ್ವೇಷತಶ್ಚ = ರಾಗದ್ವೇಷಗಳನ್ನು ಹೊರತೇ, ನಿತ್ಯಶಃ = ನಿತ್ಯದಲ್ಲಿಯೂ, ಜೀವಾನ್ = ಜೀವರನ್ನು, ಪುಣ್ಯಪಾಪೇಷು = ಪುಣ್ಯಪಾಪಗಳಲ್ಲಿ, ಹಿ = ಯಾವ ಕಾರಣದಿಂದ, ಪ್ರೇರಯಂತಿ=ಪ್ರೇರಿಸುತ್ತಾರೋ, ತಸ್ಮಾತ್=ಆ ಕಾರಣದಿಂದ, ದೋಷಾನ್= ದೋಷಗಳನ್ನು, ಕಥಂ = ಹೇಗೆ, ಆಪ್ನುಯುಃ = ಹೊಂದಿಯಾರು? (ಪ್ರಭುವಿನ ಆಜ್ಞೆಯಿಂದ ಅಪರಾಧವನ್ನು ಅನುಸರಿಸಿ ಚೋರರನ್ನು ಶಾಸನಮಾಡತಕ್ಕ ರಾಜಪುರುಷನಂತೆ ) ಹರ್ಯಾಜ್ಞಾಕರಣಾದೇವ=(ಪಾಪಾದಿಗಳ ಪ್ರೇರಣೆಯಿಂದ ದೇವತೆಗಳಿಗೆ ಅಶುಭವಾಗುವುದಿಲ್ಲವೆಂದಿಷ್ಟೇ ಅಲ್ಲ. ಮತ್ತೆ) ಶ್ರೀ ಹರಿಯ ಆಜ್ಞೆಯನ್ನು ಮಾಡಿದರಿಂದಲೇ, (ಜ್ಯೋತಿಷ್ಟೋಮಾದಿಗಳನ್ನು ಮಾಡುವವರಿಂದಲೆಂಬಂತೆ) ಏಭಿಃ = ಈ ದೇವತೆಗಳಿಂದ, ಪುಣ್ಯಂ=ಪುಣ್ಯವೇ, ಅವಾಪ್ಯತೇ=ಹೊಂದಲ್ಪಡುತ್ತದೆ. ಮತ್ತು ಅವರವರಿಗೆ ವಿಹಿತವಾದ ಕರ್ಮದಲ್ಲಿ ಪರರನ್ನು ಪ್ರೇರಿಸುವುದು, ಹರಿಪೂಜಾ= ಇದು ಹರಿಪೂಜೆಯು, ಇತಿ ಚ ಉದ್ದೇಶಾತ್=ಎನ್ನುವ ಉದ್ದೇಶವಿರೋಣದರಿಂದ, ತೇ=ಆ ದೇವತೆಗಳು, ಕಥಂ=ಹೇಗೆ, ಶುಭಂ=ಶುಭವನ್ನು, ನಾಪ್ನುಯುಃ=ಹೊಂದಲಾರರು. ಅತಃ= ಆದುದರಿಂದ, ದೇವಾಃ=ದೇವತೆಗಳು, ಧರ್ಮಜ್ಞಾನಯೋರೇವ=ಧರ್ಮಜ್ಞಾನಗಳದ್ದೇ, ಸರ್ವಪ್ರಾಣಿಗತಂ=ಎಲ್ಲಾ ಪ್ರಾಣಿಗಳಲ್ಲಿಯೂ ಇರತಕ್ಕ, ಫಲಂ=ಫಲವನ್ನು, ಅಂಜಸಾ=ಚೆನ್ನಾಗಿ, (ಹೊಂದುವವರಾದಾಗ್ಯೂ) ಆವಿರಿಂಚತಃ=ವಿರಿಂಚಪರ್ಯಂತವಾಗಿ, ಯಥಾಕ್ರಮಂ=ಕ್ರಮಾನುಸಾರವಾಗಿ, ಪ್ರಾಪ್ನುವಂತಿ=ಹೊಂದುತ್ತಾರೆ. (ಅನ್ಯರಲ್ಲಿರತಕ್ಕ ಜ್ಞಾನಾದಿ ಫಲವನ್ನು ದೇವತೆಗಳು ಹೊಂದುತ್ತಾರೆ. ದೇವತೆಗಳಲ್ಲಿರತಕ್ಕುದು ಹೇಗೆ ಎಂದರೆ—) ದೇವಾನಾಂ=ಅಪಕೃಷ್ಟದೇವತೆಗಳಿಗೆ, ವಿಶಿಷ್ಟಾಃ=ಉತ್ತಮ ದೇವತೆಗಳು, ಪನಿಯಾಮಕಾಃ=ನಿಯಾಮಕರು. (ಆದುದರಿಂದ ಅಪಕೃಷ್ಟದೇವಾದಿಗಳ ಜ್ಞಾನಾದಿಫಲವು ಉತ್ತಮರಿಗೆ ಆಗುತ್ತದೆ.) ಬ್ರಹ್ಮಾ ತು = ಬ್ರಹ್ಮನಾದರೂ, ಅಖಿಲದೇವಾನಾಂ=ಎಲ್ಲಾ ದೇವತೆಗಳಿಗೂ, ನರಾಣಾಂ ಚ=ಮನುಷ್ಯರಿಗೂ ಕೂಡ, ನಿಯಾಮಕಃ=ನಿಯಾಮಕನು. ಅತಃ=ಆದುದರಿಂದ, ಏಷಃ=ಈ ಚತುರ್ಮುಖನು, ಅನ್ಯತಃ= ಇತರರಿಂದ, ಅಧಿಕಂ=ಹೆಚ್ಚು ಹೇಗೆ ಆದೀತೋ ಹಾಗೆ, ಸರ್ವಗುಣಾನ್=ಎಲ್ಲಾ ಗುಣಗಳನ್ನು, ಪ್ರಾಪ್ನೋತಿ=ಹೊಂದುತ್ತಾನೆ ॥ ೨೫೮ ॥ ೨೫೯ ॥ ೨೬೦ ॥ ೨೬೧ ॥ ೨೬೨ ॥ ೨೬೩ ॥

ಅನ್ಯರಲ್ಲಿರತಕ್ಕ ಜ್ಞಾನಾದಿಫಲಪ್ರಾಪ್ತಿಯು ದೇವತೆಗಳಿಗೆ ಇರಲಿ ಅಲ್ಲಿಯೂ ತಾರತಮ್ಯದಲ್ಲಿ ಹೇತುವು ಯಾವುದೆಂದರೆ—

**ಮೂ ॥ ದ್ರವ್ಯಸ್ವಾತಂತ್ರ್ಯವಿಜ್ಞಾನ ಪ್ರಯತ್ನೈರಧಿಕಂ (ಖಿಲಂ) ಫಲಂ ।**
**ದೇವಾನಾಮನ್ಯಗಂ ಚಾಪಿ ತೇಷು ಹಿ (ಯತ್) ಬ್ರಹ್ಮಣೋಽಧಿಕಂ**
**(ಹಿ ತತ್) ॥ ೨೬೪ ॥**

**ಬೃಹತ್ತಂತ್ರೋದಿತಂ ವಾಕ್ಯಂ ಹರಿಣಾ ಫಲನಿರ್ಣಯೇ ।**
**ಲೋಕೇಽಪ್ಯೇತಾದೃಶಗುಣೈಃ ಫಲಾಧಿಕ್ಯಂ ಹಿ ದೃಶ್ಯತೇ ॥ ೨೬೫ ॥**
**ಏವಂ ಚ ಕಲಿಪೂರ್ವಾಣಾಮಸುರಾಣಾಂ ಮಹತ್ಫಲಂ ।**
**ಅಶುಭೇಷು ಸದೈವ ಸ್ಯಾನ್ಮಿಥ್ಯಾಜ್ಞಾನಾದಿಕೇಷು ಹಿ ॥ ೨೬೬ ॥**

**ಶುಭಾಶುಭಫಲಂ ದೇವಾ ಅಸುರಾಶ್ಚ ಸಮಾಪ್ನುಯುಃ ।**
**ಕ್ರಮೇಣೈವ ಯಥಾಶಕ್ತಿ ಯಥಾ ಯೇ ಯೇ ಪ್ರಯೋಜಕಾಃ ॥೨೬೭॥**
**ಪ್ರೇರಕಾ ಅಪಿ ಪಾಪಾನಾಂ ನ ದೇವಾಃ ಪಾಪಮಾಪ್ನುಯುಃ ।**
**ಇತಿ ಪ್ರಕಾಶಿಕಾಯಾಂ ಹಿ ಪ್ರೋವಾಚ ಹರಿರಂಜಸಾ ॥ ೨೬೮ ॥**

ಅ ॥ (ಅಧಿಕಗಳಾದ) ದ್ರವ್ಯಸ್ವಾತಂತ್ರ್ಯವಿಜ್ಞಾನ ಪ್ರಯತ್ನೈಃ, ದ್ರವ್ಯ=ಇಂದ್ರಿಯಾದಿ ದ್ರವ್ಯಗಳಲ್ಲಿ, ಸ್ವಾತಂತ್ರ್ಯ = ಸ್ವಾತಂತ್ರ್ಯವೂ, ವಿಜ್ಞಾನ=ವಿಜ್ಞಾನವೂ, ಪ್ರಯತ್ನೈಃ = ಪ್ರಯತ್ನವೂ ಇವುಗಳಿಂದ, ದೇವಾನಾಂ=ದೇವತೆಗಳಿಗೆ, ಅನ್ಯಗಂ ಚಾಪಿ=ಇತರಲ್ಲಿಯೂ ಇರತಕ್ಕ, ಅಧಿಕಂ=ಹೆಚ್ಚಾದ, ಫಲಂ=ಫಲವು, (ಆಗುತ್ತದೆ.) ತೇಷು=ಅವರಲ್ಲಿ, ಬ್ರಹ್ಮಣಃ=ಬ್ರಹ್ಮನಿಗೆ, ಅಧಿಕಂ=ಹೆಚ್ಚಾದ, ಫಲಂ=ಫಲವು ಆಗುತ್ತದೆ. (ಮಧ್ಯಮಗಳಾದ ದ್ರವ್ಯಸ್ವಾತಂತ್ರ್ಯಾದಿಗಳಿಂದ ಮಧ್ಯಮಫಲವು; ಅಲ್ಪಗಳಿಂದ ಅಲ್ಪ ಫಲವು.) ಹಿ=ಆ ದೇವತೆಗಳಲ್ಲಿಯೂ ನಿರವಧಿಕ ದ್ರವ್ಯಸ್ವಾತಂತ್ರ್ಯಾದಿಗಳು ಇದ್ದುದರಿಂದ, ಹರಿಣಾ = ಶ್ರೀ ಹರಿಯಿಂದ, ಫಲನಿರ್ಣಯೇ=ಫಲನಿರ್ಣಯದಲ್ಲಿ (ಅಲ್ಲಿಯ ಪ್ರಕರಣ ವಿಶೇಷದಲ್ಲಿ) ಬೃಹತ್ತಂತ್ರೋದಿತಂ=ಬೃಹತ್ತಂತ್ರದಲ್ಲಿ ಹೇಳಲ್ಪಟ್ಟ, ವಾಕ್ಯಂ=ವಾಕ್ಯವು, (ಇದೆ) (ದ್ರವ್ಯಸ್ವಾತಂತ್ರ್ಯಾದ್ಯತಿಶಯದಿಂದ ಫಲಾತಿಶಯವು ಎಂದು ಹೇಳಿದ್ದಕ್ಕೆ ವ್ಯಾಪ್ತಿಯನ್ನು ತೋರಿಸುತ್ತಾರೆ. ಲೋಕೇಪಿ=ಲೋಕದಲ್ಲಿಯೂ ಕೂಡ, ಏತಾದೃಶಗುಣೈಃ=ಇಂತಹ ಅಧಿಕಗುಣಗಳಿಂದ. ಫಲಾಧಿಕ್ಯಂ=ಫಲಾಧಿಕ್ಯವು, ದೃಶ್ಯತೇ ಹಿ=ಕಾಣಲ್ಪಡುತ್ತದಷ್ಟೆ. (ಅಂದರೆ— ದ್ರವ್ಯ ಸ್ವಾತಂತ್ರ್ಯಾದಿಗಳಿಂದ ಕೂಡಿದ ಕೃಷಿಯಲ್ಲಿ ಯಾರಿಗೆ ಕ್ಷೇತ್ರಾದಿ ದ್ರವ್ಯಸ್ವಾತಂತ್ರ್ಯವು ಅಧಿಕವೋ, ಯಾರಿಗೆ ಬೀಜಪ್ರಕ್ಷೇಪಾದಿಗಳಲ್ಲಿ ಜ್ಞಾನ ಪ್ರಯತ್ನಾಧಿಕ್ಯವು ಇದೆಯೋ, ಆತನಿಗೆ ಫಲಾಧಿಕ್ಯವೂ ತೋರುತ್ತದೆ. ಇದೇ ಪ್ರಕಾರ ಮಧ್ಯಮರಿಗೂ, ಅಲ್ಪರಿಗೂ ಇಟ್ಟುಕೊಳ್ಳಬೇಕು.) (ಪ್ರಸಂಗಸಂಗತಿಯಿಂದ ಪಾಪಾದಿಗಳ ಫಲವು ಪ್ರೇರಕರಾದ ಅಸುರರಿಗೆ ತಾರತಮ್ಯದಿಂದ ಆಗುತ್ತದೆ ಎನ್ನುತ್ತಾರೆ.) ಏವಂ ಚ=ಹೀಗೆ, (ಮಹಾಪ್ರೇರಕರಾದ) ಕಲಿಪೂರ್ವಾಣಾಂ=ಕಲಿಯೇ ಮೊದಲಾಗಿವುಳ್ಳ, ಅಸುರಾಣಾಂ=ಅಸುರರಿಗೆ, ಮಿಥ್ಯಾಜ್ಞಾನಾದಿಕೇಷು = ಮಿಥ್ಯಾಜ್ಞಾನವೇ ಮೊದಲಾಗಿವುಳ್ಳ, ಅಶುಭೇಷು = ಅಶುಭನಿಮಿತ್ತಕವಾಗಿ, ಮಹತ್=ಮಹತ್ತಾದ, ಫಲಂ=ಫಲವು, ಸದೈವ=ಯಾವಾಗಲೂ, ಸ್ಯಾತ್=ಆಗುವುದು. (ಹಿಂದೆ ಹೇಳಿದ ಅರ್ಥದಲ್ಲಿಯೂ, ಇಲ್ಲಿಯೂ ಪ್ರಮಾಣಾಂತರವನ್ನು ಹೇಳುತ್ತಾರೆ.) ಯೇ ಯೇ=ಯಾರು ಯಾರು, ಯಥಾಶಕ್ತಿ=ಶಕ್ತ್ಯನುಸಾರವಾಗಿ, ಯಥಾ = ಹೇಗೆ ಹೇಗೆ, ಪ್ರಯೋಜಕಾಃ=ಪುಣ್ಯಪಾಪಗಳಿಗೆ ಪ್ರೇರಕರೋ, ಹಾಗೆಯೇ, ದೇವಾಃ=ದೇವತೆಗಳು, ಅಸುರಾಶ್ಚ=ಅಸುರರೂ ಕೂಡ, ಕ್ರಮೇಣೈವ=ಕ್ರಮದಿಂದಲೇ, ಶುಭಾಶುಭಫಲಂ=ಶುಭ ಅಶುಭಫಲಗಳನ್ನು, ಸಮಾಪ್ನುಯುಃ=ಹೊಂದುತ್ತಾರೆ. ಅಂದರೆ— ದೇವತೆಗಳು ಶುಭಫಲವನ್ನೇ ಹೊಂದುತ್ತಾರೆ. ಅಸುರರು ಅಶುಭಫಲವನ್ನೇ ಹೊಂದುತ್ತಾರೆ. ದೇವಾಃ = ದೇವತೆಗಳು, ಪಾಪಾನಾಂ = ಪಾಪಗಳಿಗೆ, ಪ್ರೇರಕಾ ಅಪಿ = ಪ್ರೇರಕರಾದಾಗ್ಯೂ, ಪಾಪಂ = ಪಾಪವನ್ನು, ನಾಪ್ನುಯುಃ=ಹೊಂದುವುದಿಲ್ಲ. ಇತಿ=ಹೀಗೆ, ಪ್ರಕಾಶಿಕಾಯಾಂ=ಪ್ರಕಾಶಿಕೆಯಲ್ಲಿ, ಹರಿಃ=ಶ್ರೀ ವೇದವ್ಯಾಸರು, ಅಂಜಸಾ=ಚೆನ್ನಾಗಿ, ಪ್ರೋವಾಚ=ಹೇಳಿದರು ॥ ೨೬೪ ॥ ೨೬೫ ॥ ೨೬೬ ॥ ॥ ೨೬೭ ॥ ೨೬೮ ॥ ಸೂ. ೪೪ ॥

**'ಓಂ ಆರ್ತ್ವಿಜ್ಯಮಿತ್ಯೌಡುಲೋಮಿಃ ತಸ್ಮೈ ಹಿ ಪರಿಕ್ರೀಯತೇ ಓಂ'**

**॥ ಸೂ. ॥ ೪೫ ॥**

ಸತ್ರಯಾಗದಲ್ಲಿ ಋತ್ವಿಕ್‌ಗಳ ಫಲದಂತೆ ಪ್ರಜೆಗಳಿಗೂ ಕೂಡ ಜ್ಞಾನಾದಿ ಫಲವು ಇದೆ. ಪ್ರಜೆಗಳಿಗೋಸ್ಕರವೇ ದೇವತೆಗಳಿಂದ ಜ್ಞಾನಾದಿಗಳು ಸಂಪಾದಿಸಲ್ಪಡುತ್ತವೆಯಷ್ಟೆ, ಎಂದು ಟೀಕಾಚಾರ್ಯರು ತಿಳಿಯುತ್ತಾರೆ—

**‘ ಓಂ ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿಧ್ಯಾದಿವತ್ ಓಂ ’ ॥ ಸೂ. ॥ ೪೭ ॥**

ಪ್ರಜೆಗಳಿಗೆ ದೇವತೆಗಳನ್ನುಕುರಿತು ಸಹಕಾರಿತ್ವದಿಂದ ವಿಧಾನವು ಮೂರನೇಪಕ್ಷವು. ಪ್ರಜೆಗಳುಳ್ಳ ರಾಜನ, ಮತ್ತು ಶಿಷ್ಯರುಳ್ಳ ಶಿಷ್ಯಗುರುವಿನ ವಿಧ್ಯಾದಿಗಳಂತೆ ಅಂದರೆ— ಹೇಗೆ ರಾಜನು ಪಾಲಿಸುವ ವಿಷಯದಲ್ಲಿ ಪ್ರಜೆಗಳಿಗೂ, ಗುರುಗಳು ವ್ಯಾಖ್ಯಾನಮಾಡುವ ವಿಷಯದಲ್ಲಿ ಶಿಷ್ಯರಿಗೂ ಸಹಕಾರಿತ್ವವಿದ್ದರೂ ಅವರಿಗೇನೇ ಮುಖ್ಯವಾಗಿ ಪಾಲನಾದಿ ಫಲವೋ, ಪ್ರಜೆಗಳಿಗೂ ಶಿಷ್ಯರಿಗೂ ಅಲ್ಪಫಲವೋ, ಹಾಗೆಯೇ ದೇವತೆಗಳಿಗೆ ವಿಹಿತಜ್ಞಾನದಾನಾದಿಗಳಲ್ಲಿ ಪ್ರಜೆಗಳಿಗೆ ಸಹಕಾರಿತ್ವವಿದ್ದಪ್ರಯುಕ್ತ ದೇವತೆಗಳಿಗೆ ಮುಖ್ಯಫಲವು; ಪ್ರಜೆಗಳಿಗೆ ಅಲ್ಪಫಲವು.

**‘ ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ ’ ॥ ಸೂ ॥ ೪೮ ॥**

‘ ಕುಟುಂಬೀ ಶುಚೌ ದೇಶೇ ’ ಇತ್ಯಾದಿಗಳಿಂದ ಗೃಹಿಗಳಿಗೆ ಮೋಕ್ಷವನ್ನು ಹೇಳಿ ‘ನ ಚ ಪುನರಾವರ್ತತೇ ’ ಎಂದು ಗೃಹಸ್ಥಾಶ್ರಮಿಯಿಂದ ಉಪಸಂಹಾರವು. ದೇವತೆಗಳಿಗೆ ಎಲ್ಲಾ ಗೃಹಸ್ಥ ಧರ್ಮಗಳು ಇದ್ದುದರಿಂದ ತತ್ಪರವಾದುದು, ಮನುಷ್ಯಗೃಹಸ್ಥಪರವಲ್ಲ.

**“ ಓಂ ಮೌನವದಿತರೇಷಾಮಪ್ಯುಪದೇಶಾತ್ ಓಂ ” ॥ ಸೂ. ॥ ೪೯ ॥**

ಯತಿತ್ವದಂತೆ ಇತರಾಶ್ರಮ ಧರ್ಮಗಳಿಗೂ ‘ ದೇವಾ ಏವ ಬ್ರಹ್ಮಚಾರಿಣಃ ದೇವಾ ಏವ ಗೃಹಸ್ಥಾಃ ’ ಎಂದು ಶ್ರುತಿಯಲ್ಲಿ ಉಪದೇಶ ಮಾಡಿದರಿಂದ—

ಈ ಪ್ರಕಾರವಾಗಿ ವಿಸ್ತಾರವಾಗಿ ಪೂರ್ವಪಕ್ಷವನ್ನು ಹೇಳಿ ಸಿದ್ಧಾಂತಸೂತ್ರದ ತಾತ್ಪರ್ಯ ವನ್ನು ಆಗಮವಾಕ್ಯದಿಂದ ಹೇಳುತ್ತಾರೆ—

**ಮೂ ॥ ಯದ್ಯಪ್ಯೇವಂ ಸುರಾಣಾಂ ಚ ದೈತ್ಯಾನಾಂ ಚ ಮಹತ್ಫಲಂ ।**
**ಶುಭಾಶುಭೇಭ್ಯ ಏವಂ ಚ ಕರ್ತುಶ್ಚ ಸ್ಯಾದ್ಯಥೋದಿತಂ ॥ ೨೬೯ ॥**
**ತಸ್ಮಾನ್ನಿರಯಮಾನುಷ್ಯ ಸ್ವರ್ಗಮುಕ್ತ್ಯುಪಭೋಗಿನಃ ।**
**ಮಾನುಷೋತ್ತಮಮಾರಭ್ಯ ದೇವಾಸ್ತು ನಿರಯಂ ವಿನಾ ॥ ೨೭೦ ॥**
**ಅಸುರಾಸ್ತು ವಿನಾ ಮುಕ್ತಿಂ ತಮೋಽಂಧಮಪಿ ಚಾಪ್ನುಯುಃ ।**
**ಇತಿ ತತ್ವವಿವೇಕೋ(ತ್ಸಾವಲೋ)ಕ್ತಂ ಸ್ವಯಂ ಭಗವತೋ(ತಾ)ವಚಃ ॥ ೨೭೧ ॥**

ಅ ॥ ಏವಂ=ಹಿಂದೆ ಹೇಳಿದ ಪ್ರಕಾರ, ಯದ್ಯಪಿ=ಯದ್ಯಪಿ, ಶುಭಾಶುಭೇಭ್ಯಃ=ಶುಭ ಅಶುಭಗಳಾದ ಜ್ಞಾನಾದಿಗಳಿಂದ ಉಂಟಾಗತಕ್ಕ, ಮಹತ್=ಮಹತ್ತಾದ, ಫಲಂ = ಫಲವು,

ಸುರಾಣಾಂ ಚ=ದೇವತೆಗಳಿಗೂ ದೈತ್ಯಾನಾಂ ಚ=ದೈತ್ಯರಿಗೂ, ಕೂಡ, (ಆಗುತ್ತದೆ). ಏವಂ ಚ=ಆದಾಗ್ಯೂ, ಕರ್ತುರ್ಶ್ಚ=ಕರ್ತರಾದ ದೇವದತ್ತಾದಿಗಳಿಗೂ, ಯಥೋದಿತಂ=ಶಾಸ್ತ್ರದಲ್ಲಿ ಹೇಳಿದ ಪ್ರಕಾರ (ಅಂದರೆ ಶ್ರುತಿ ಸ್ಮೃತಿಗಳು ಇದ್ದ ಪ್ರಯುಕ್ತ) ಫಲಂ=ಫಲವು, ಸ್ಯಾದೇವ= ಆಗಿಯೇ ಆಗುವುದು. (ಯುಕ್ತಿಯನ್ನೂ ಹೇಳುತ್ತಾರೆ.) ತಸ್ಮಾತ್=ಕರ್ತೃವಿಗೆ ಶುಭ ಅಶುಭ ಫಲಗಳು ಇದ್ದ ಪ್ರಯುಕ್ತವೇ, ಮಾನುಷೋತ್ತಮಂ=ಮನುಷ್ಯೋತ್ತಮರನ್ನು, ಆರಭ್ಯ= ಆರಂಭಿಸಿ, (ದೇವಪರ್ಯಂತರಾದವರೂ, ದೈತ್ಯಪರ್ಯಂತರಾದವರೂ ಕೂಡ) ನಿರಯಮಾನುಷ್ಯಸ್ವರ್ಗಮುಕ್ತ್ಯುಪಭೋಗಿನಃ=ನರಕವೂ, ಮನುಷ್ಯಲೋಕವೂ, ಸ್ವರ್ಗವೂ, ಮುಕ್ತಿಯೂ ಇವುಗಳನ್ನು ಭೋಗಿಸುವವರು, (ಹಿಂದೆ ಹೇಳಿದ್ದಕ್ಕೆ ಅಪವಾದವನ್ನು ಹೇಳುತ್ತಾರೆ.) ದೇವಾಸ್ತು= ದೇವತೆಗಳಾದರೂ, ನಿರಯಂ=ನರಕವನ್ನು, ವಿನಾ=ಹೊರತು, (ಬೇರೆ ಫಲವನ್ನು ಭೋಗಿಸುವವರು) ಅಸುರಾಸ್ತು=ಅಸುರರಾದರೂ, ಮುಕ್ತಿಂ=ಮುಕ್ತಿಯನ್ನು, ವಿನಾ=ಹೊರತು, ಅಂಧಂತಮೋಽಪಿ=ಅಂಧಂತಮಸ್ಸನ್ನೂ ಕೂಡ, ಆಪ್ನುಯುಃ=ಹೊಂದುವರು ಇತಿ=ಹೀಗೆ, ಭಗವತಾ= ಶ್ರೀ ಹರಿಯಿಂದ ತತ್ವವಿವೇಕೋಕ್ತಂ=ತತ್ವವಿವೇಕದಲ್ಲಿ ಹೇಳಲ್ಪಟ್ಟದ್ದು, ಸ್ವಯಂ=ಸಾಕ್ಷಾತ್ತಾಗಿ, ಭಗವತಃ=ಶ್ರೀಹರಿಯ, ವಚಃ=ಮಾತು, (ಅಸ್ತಿ=ಇದೆ)

**ತಾ ॥ ನ್ಯಾಯಸುಧಾ**— (1) ಮನುಷ್ಯೋತ್ತಮರಾದರೂ, ನರಕ ಭೂಲೋಕ ಸ್ವರ್ಗಮುಕ್ತಿಗಳನ್ನು ಹೊಂದುತ್ತಾರೆ. ದೇವತೆಗಳಾದರೂ ನರಕವನ್ನು ಬಿಟ್ಟು ಮನುಷ್ಯಲೋಕ-ಸ್ವರ್ಗ-ಮುಕ್ತಿಗಳನ್ನು ಹೊಂದುತ್ತಾರೆ ಅಸುರರೂ ಸನ್ಮುಕ್ತಿಯನ್ನು ಬಿಟ್ಟು ಸ್ವರ್ಗ-ಭೂಲೋಕ-ನರಕ-ಅಂಧಂತಮಸ್ಸುಗಳನ್ನು ಹೊಂದುತ್ತಾರೆ ನರಕಾದಿಗಳಿಗೆ ತಾವು ತಾವು ಮಾಡಿದ ಪಾಪಾದಿಗಳೇ ನಿಮಿತ್ತವು, ಆದಕಾರಣ ಕರ್ತೃವಿಗೂ ಕೂಡ ಶುಭ ಅಶುಭಫಲ ಪ್ರಾಪ್ತಿಯಿದೆ ಎಂದು ತಿಳಿಯುತ್ತದೆ ॥ ೨೬೯ ॥ ೨೭೦ ॥ ೨೭೧ ॥ ಸೂ. ೪೪ ॥ ೪೫ ॥ ೪೬ ॥ ೪೭ ॥ ೪೮ ॥ ಅಧಿ ॥ ೭ ॥ ೮ ॥

**ಫಲಶ್ರುತ್ಯಧಿಕರಣ ಕೃತ್ಸ್ನಭಾವಾಧಿಕರಣಗಳು ಸಮಾಪ್ತಗಳಾದುವು.**

---

# ಅನಾವಿಷ್ಕಾರಾಧಿಕರಣವು.

**"ಓಂ ಅನಾವಿಷ್ಕುರ್ವನ್ನನ್ವಯಾತ್"** ॥ ಸೂ. ೪೯ ॥

ಗುರುಗಳು ಸಭಾ ಚತ್ವರಾದಿ ಸ್ಥಾನಗಳಲ್ಲಿ ಆವಿಷ್ಕರಿಸದೇನೇ ಉಪದೇಶವನ್ನು ಮಾಡಬೇಕು. ಪ್ರಕಟೀಕರಿಸಿಕೊಂಡು ಉಪದೇಶಕೊಟ್ಟರೆ ಅಯೋಗ್ಯರಿಗೂ ಜ್ಞಾನವು ಪ್ರಾಪ್ತವಾಗಿ ಅನರ್ಥವು ಪ್ರಾಪ್ತವಾಗಬೇಕಾಗುವುದು. ೧ ಆವಿಷ್ಕಾರಮಾಡಿಕೊಂಡು ಜ್ಞಾನವನ್ನು ಕೊಡಬೇಕೋ, ೨ ಅಥವಾ ಆವಿಷ್ಕರಿಸದೆ ಜ್ಞಾನವನ್ನು ಕೊಡಬೇಕೋ, ಎಂದು ಸಂಶಯವು ಬಂದರೆ— ಅತಿ ಹೇಯವಾಗದಿರುವುದರಿಂದ ಪೂರ್ವಪಕ್ಷವನ್ನು ವಿಸ್ತರಿಸಿ ಹೇಳುತ್ತಾರೆ—

**ಮೂ ॥ ಜ್ಞಾನದಾ ಅಪಿ ಚಾಚಾರ್ಯಾ ವಿಶೇಷಾತ್ಫಲಮಾಪ್ನುಯುಃ ।**
**ಮುಕ್ತಾವಷ್ಟಗುಣಂ ಶಿಷ್ಯಾದ್ಗುರುರಾಪ್ನೋತಿ ಶೋಭನಂ ॥ ೨೭೨ ॥**
**ತದ್ಗುರುರ್ದ್ವಿಗುಣಂ ತಸ್ಮಾತ್ತಸ್ಮಾರ್ಧಂ ತಾವತ್ತತೋಽಪರೇ ।**
**ದೇವಾಃ ಸಹಸ್ರಗುಣಿತಂ ಕ್ರಮಾತ್ತಸ್ಮಾದ್ಯಥೋತ್ತರಂ ॥ ೨೭೩ ॥**

**ಬ್ರಹ್ಮಾ ಮಹೌಘಗುಣಿತಮೇವಂ ಫಲವಿನಿರ್ಣಯಃ ।**
**ಇತ್ಯಾಹ ಭಗವಾನ್ ಶಾಸ್ತ್ರೇ ಗುರುವೃತ್ತಾಭಿಧೇ ಸ್ವಯಂ ॥ ೨೭೪ ॥**

**ಅ** ॥ (ಕೇವಲ ಶಿಷ್ಯರಲ್ಲ, ಮತ್ತೆ) ಜ್ಞಾನದಾ ಅಪಿ = ಜ್ಞಾನವನ್ನು ಕೊಡತಕ್ಕ, ಆಚಾರ್ಯಾ ಅಪಿ = ಆಚಾರ್ಯರೂ ಕೂಡ, ವಿಶೇಷಾತ್ = ಶಿಷ್ಯರಿಂದಲೂ ಅತಿಶಯವಾಗಿ, ಫಲಂ = ಫಲವನ್ನು, ಅಪ್ನುಯುಃ = ಹೊಂದುವರು. ಶಿಷ್ಯಾತ್ = ಶಿಷ್ಯನಿಗೆ ಯಾವುದು ಶ್ರವಣ ಫಲವೋ ಅದಕ್ಕಿಂತ, ಅಷ್ಟಗುಣಂ = ಎಂಟುಪಾಲು ಹೆಚ್ಚು, ಶೋಭನಂ = ಮಂಗಲವನ್ನು, ಮುಕ್ತೌ = ಮುಕ್ತಿಯಲ್ಲಿ, ಗುರುಃ = ಗುರುವು, (ಜ್ಞಾನವನ್ನು ಕೊಡೋಣದರಿಂದ) ಆಪ್ನೋತಿ = ಹೊಂದುತ್ತಾನೆ. ತದ್ಗುರುಃ = ಗುರುಗಳ ಗುರುಗಳು, ತಸ್ಮಾತ್ = ಗುರುಗಳ ಫಲದಿಂದ, ದ್ವಿಗುಣಂ = ಇಮ್ಮಡಿ ಫಲವನ್ನು, ಆಪ್ನೋತಿ = ಹೊಂದುತ್ತಾನೆ. ತತಃ = ಪರಮಗುರುಗಳದೆಶೆಯಿಂದ, ಅಪರೇ = ಇತರರು, ಸಾರ್ಧಂ ತಾವತ್ = ತನ್ನ ಶಿಷ್ಯನ ಫಲಕ್ಕಿಂತ, ಅರ್ಧದಿಂದ ಅಧಿಕವಾದ ಫಲವನ್ನು, ಅಪ್ನುವಂತಿ = ಹೊಂದುತ್ತಾರೆ. ಯಥೋತ್ತರಂ = ಉತ್ತರೋತ್ತರ, ತಸ್ಮಾತ್ ಕ್ರಮಾತ್ = ಅಧ್ಯರ್ಧ ಫಲಪ್ರಾಪ್ತಿಕ್ರಮದಿಂದ, ದೇವಾಃ = ದೇವತೆಗಳು, (ಜ್ಞಾನಪ್ರವರ್ತಕರಾದುದರಿಂದ) ಸಹಸ್ರಗುಣಿತಂ = ಸಹಸ್ರಪಾಲು ಅಧಿಕ ಫಲವನ್ನು, ಅಪ್ನುವಂತಿ = ಹೊಂದುತ್ತಾರೆ. ಯಥೋಕ್ತಂ = ಉತ್ತರೋತ್ತರ, ತಸ್ಮಾತ್ ಕ್ರಮಾತ್ = ಆ ಕ್ರಮದಿಂದಲೇ, ಬ್ರಹ್ಮಾ = ಚತುರ್ಮುಖನು, ಮಹೌಘಗುಣಿತಂ = ಮಹೌಘದಿಂದ ಗುಣಿತವಾದ ಫಲವನ್ನು, ಆಪ್ನೋತಿ = ಹೊಂದುತ್ತಾನೆ. ಏವಂ = ಹೀಗೆ, ಫಲವಿನಿರ್ಣಯಃ = ಫಲದ ನಿಶ್ಚಯವು, ಇತಿ = ಈ ಪ್ರಕಾರ, ಭಗವಾನ್ = ವೇದವ್ಯಾಸರು, ಗುರುವೃತ್ತಾಭಿಧೇ = ಗುರುವೃತ್ತವೆಂದು ಹೆಸರುಳ್ಳ, ಶಾಸ್ತ್ರೇ = ಶಾಸ್ತ್ರದಲ್ಲಿ, ಸ್ವಯಂ = ತಾನಾಗಿಯೇ, ಆಹ = ಹೇಳಿರುವರು ॥ ೨೭೨ ॥ ೨೭೩ ॥ ೨೭೪ ॥

ಆಗಮಸಿದ್ಧಾರ್ಥದಲ್ಲಿ ಯುಕ್ತಿಯೂ ಕೂಡ ಇದೆ ಎನ್ನುತ್ತಾರೆ—

**ಮೂ ॥ ಯುಕ್ತಂ ಚ ತನ್ನ ಗೋದಾತಾ ಗೋಮಾತ್ರಫಲಮಾಪ್ನುಯಾತ್ ।**
**ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ॥ ೨೭೫ ॥**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ।**
**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ॥ ೨೭೬ ॥**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತಮೋ (ರೋ) ಭುವಿ ।**
(ಗೀತಾ ಅಧ್ಯಾಯ ॥ ೧೮ ॥ ಶ್ಲೋ. ॥ ೬೮ ॥ ೬೯ ॥)
**ಇತ್ಯಾಹ ಭಗವಾನೇವಮಪಿ ಪಾತ್ರಮವೇಕ್ಷತೇ ॥ ೨೭೭ ॥**

**ಅ** ॥ ತತ್ = ಜ್ಞಾನವನ್ನು ಸ್ವೀಕರಿಸತಕ್ಕ ಶಿಷ್ಯನ ಜ್ಞಾನಫಲದಿಂದಲೂ ಆಚಾರ್ಯರ ಜ್ಞಾನದಾನಫಲವು ಅಧಿಕವು ಎನ್ನುವುದು, ಯುಕ್ತಂ ಚ = ಯುಕ್ತಿಸಿದ್ಧವೂ ಆಗಿದೆ. (ಆ ಯುಕ್ತಿಯನ್ನು ಸೂಚಿಸುತ್ತಾರೆ—) ಗೋದಾತಾ = ಗೋವನ್ನು ದಾನಮಾಡಿದವನು, ಗೋಮಾತ್ರಫಲಂ = ಕೇವಲ ಗೋವಿನ ಪ್ರಾಪ್ತಿರೂಪ ಫಲವನ್ನು, ನಾಪ್ನುಯಾತ್ = ಹೊಂದಲಾರನು. (ಅಂದರೆ— ಸ್ವೀಕರಿಸಿದವನಿಗೆ ಕೇವಲ ಗೋವು ಫಲವು. ಗೋವನ್ನು ದಾನಮಾಡಿದವನು ಗೋಮಾತ್ರಫಲವುಳ್ಳವನು ಆಗುವುದಿಲ್ಲ. ಮತ್ತೆ ಮಹಾಫಲವಾದ ಸ್ವರ್ಗಾದಿಗಳನ್ನು ಹೊಂದುತ್ತಾನೆ. ಹಾಗೆಯೇ ಪ್ರಕೃತದಲ್ಲಿಯೂ,) (ಅಂತೂ ಜ್ಞಾನದಾತಾ ದತ್ತವಸ್ತುಫಲಾದಪಿ ಅಧಿಕ **ದಾನಫಲವಾನ್ ಪುರುಷಾರ್ಥಹೇತು ವಸ್ತುದಾತೃತ್ವಾತ್ ಗೋದಾತೃವತ್** = ಜ್ಞಾನೋಪದೇಶಕನು

ಕೊಟ್ಟ ವಸ್ತುಫಲದಿಂದಲೂ ಹೆಚ್ಚು ದಾನದಫಲವುಳ್ಳವನು, ಪುರುಷಾರ್ಥಕ್ಕೆ ಹೇತುವಾದ ವಸ್ತುವನ್ನು ಕೊಟ್ಟಪ್ರಯುಕ್ತ ಗೋವನ್ನು ಕೊಟ್ಟವನಂತೆ.) (ಜ್ಞಾನಫಲಕ್ಕಿಂತಲೂ ಆಚಾರ್ಯರಿಗೆ ಜ್ಞಾನದಾನಫಲವು ಅಧಿಕವು ಎನ್ನುವಲ್ಲಿ ಭಗವದ್ಗೀತಾಸಂವಾದವನ್ನು ಹೇಳುತ್ತಾರೆ—) ಯಃ= ಯಾವ ಅಧಿಕಾರಿಯು, ಪರಮಂ ಗೋಪ್ಯಂ=ಅತಿಗೋಪ್ಯವಾದ, ಇಮಂ (ದಂ)=ಈ ಗೀತಾ ಶಾಸ್ತ್ರವನ್ನು, ಮದ್ಭಕ್ತೇಷು = ನನ್ನ ಭಕ್ತರಲ್ಲಿ, ಅಭಿಧಾಸ್ಯತಿ=ಉಪದೇಶಿಸುವನೋ, ಸಃ = ಆತನು, ಮಯಿ=ನನ್ನಲ್ಲಿ, ಪರಾಂ ಭಕ್ತಿಂ=ಉತ್ಕೃಷ್ಟವಾದ ಭಕ್ತಿಯನ್ನು, ಕೃತ್ವಾ=ಮಾಡಿ, ಮಾಮೇವ=ನನ್ನನ್ನೇ, ಏಷ್ಯತಿ=ಹೊಂದುವನು. ಅಸಂಶಯಃ=ಸಂಶಯವಿಲ್ಲ. ತಸ್ಮಾತ್= ಗೀತಾವ್ಯಾಖ್ಯಾತೃವಿನದೆಶೆಯಿಂದ, ಮನುಷ್ಯೇಷು=ಮನುಷ್ಯರಲ್ಲಿ, ಕಶ್ಚಿತ್=ಯಾರೊಬ್ಬನೂ, ಮೇ=ನನಗೆ, ಪ್ರಿಯಕೃತ್ತಮಃ=ಅತಿಶಯವಾಗಿ ಪ್ರಿಯವನ್ನು ಮಾಡುವವನು, ನ ಚಾಸ್ತಿ= ಇಲ್ಲವೇ ಇಲ್ಲ. ತಸ್ಮಾತ್ = ಅವನದೆಶೆಯಿಂದ, ಅನ್ಯಃ = ಮತ್ತೊಬ್ಬನು, ಮೇ = ನನಗೆ, ಪ್ರಿಯತಮಃ=ಅತಿಶಯವಾಗಿ ಪ್ರಿಯನಾದವನು, ಭುವಿ=ಭೂಲೋಕದಲ್ಲಿ, ನ ಚ ಭವಿತಾ= ಆಗಲಾರನು. **'ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ। ಜ್ಞಾನಯಜ್ಞೇನ ತೇನಾಹಮಿಷ್ಟಃಸ್ಯಾಮಿತಿ ಮೇ ಮತಿಃ'** = ಭಗವತ್ಸಂಬಂಧಿಯಾದ ಅಥವಾ ಧರ್ಮಸಂಬಂಧಿಯಾದ ನಮ್ಮಿಬ್ಬರ ಸಂವಾದರೂಪವಾದ ಗೀತಾಪ್ರಬಂಧವನ್ನು ಯಾರು ಅಧ್ಯಯನ ಮಾಡುತ್ತಾನೋ ಆತನಿಂದ ಜ್ಞಾನಾಖ್ಯ ಯಜ್ಞದಿಂದ ನಾನು ಪೂಜಿತನಾಗುವೆನು. (ಹೀಗೆ ನನ್ನ ಮತಿಯು.) ಇತಿ=ಹೀಗೆ, ಭಗವಾನ್=ಶ್ರೀ ಕೃಷ್ಣನು, ಆಹ=ಹೇಳಿದನು. (ಯಾವಕಾರಣದಿಂದ ಹೀಗೆ ಜ್ಞಾನದಾನವೂ ಆ ಜ್ಞಾನದಾನದ ಸಂಪ್ರದಾಯಪ್ರವರ್ತನವೂ ಕೂಡ ಮಹಾಫಲವುಳ್ಳದ್ದೋ, ಆದಕಾರಣ ಬಹುಜನರನ್ನು ಗ್ರಹಣಮಾಡುವುದಕ್ಕಾಗಿ ಆವಿಷ್ಕರಿಸಿಕೊಂಡು ಜ್ಞಾನದಾನಮಾಡಬೇಕು ಎಂದು ಪ್ರಾಪ್ತವಾದರೆ ಸಿದ್ಧಾಂತವನ್ನು ಹೇಳುತ್ತಾರೆ—) ಏವಮಪಿ=ಹೀಗಾದಾಗ್ಯೂ, ಪಾತ್ರಂ=ಸತ್ಪಾತ್ರವು, (ದಾನಫಲದಿಂದ) ಅಪೇಕ್ಷ್ಯತೇ=ಅಪೇಕ್ಷಿಸಲ್ಪಡುತ್ತದೆ. (ಅಂದರೆ ಜ್ಞಾನದಾನವು ಹಿಂದೆ ಹೇಳಿದಪ್ರಕಾರ ಮಹಾಫಲವುಳ್ಳದ್ದು ಎನ್ನುವುದು ಸತ್ಯವೇ. ಆದಾಗ್ಯೂ ಪ್ರಕಟೀಕರಿಸಿಕೊಂಡು ಜ್ಞಾನದಾನಮಾಡಬಾರದು. ಏಕೆಂದರೆ—) ಪಾತ್ರದಲ್ಲಿಮಾಡಲ್ಪಡತಕ್ಕ ದಾನವು ಫಲಕ್ಕಾಗಿ ಸಮರ್ಥವಾಗುತ್ತದೆ. ಅಪಾತ್ರದಲ್ಲಿ ದಾನ ಮಾಡಿದ್ದು ಫಲಕ್ಕಾಗಿ ಸಮರ್ಥವಾಗಲಾರದು. ಮತ್ತೆ ಪ್ರತ್ಯವಾಯಕ್ಕೇನೇ ಕಾರಣವು. ಆವಿಷ್ಕರಿಸಿಕೊಂಡು ಜ್ಞಾನವನ್ನು ಕೊಟ್ಟರೆ ಅಯೋಗ್ಯರಿಗೂ ಜ್ಞಾನಪ್ರಾಪ್ತಿಯಾಗಬೇಕಾಗುವುದು. ಅದಾದರೂ ನಿಷಿದ್ಧವು ॥ ೨೭೫ ॥ ೨೭೬ ॥ ೨೭೭ ॥ ಸೂ. ೪೯ ॥ ಅ. ೮ ॥

**ಅನಾವಿಷ್ಕಾರಾಧಿಕರಣವು ಸಮಾಪ್ತವಾಯಿತು.**

---

## ಐಹಿಕಾಧಿಕರಣವು.

### 'ಓಂ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ಓಂ'॥ಸೂ.೫೦॥

ಪ್ರಾರಬ್ಧಪ್ರತಿಬಂಧಕವಿಲ್ಲದಿದ್ದರೆ ಜ್ಞಾನವು ಈ ಜನ್ಮದಲ್ಲಿಯೇ ಹುಟ್ಟುತ್ತದೆ. ಇಲ್ಲದಿದ್ದರೆ ಜನ್ಮಾಂತರದಲ್ಲಿ, **'ಶ್ರುತ್ವಾತ್ಮಾನಂ ಮತಿಪೂರ್ವಂ ಹ್ಯುಪಾಸ್ಯೇಹೈವ ದೃಷ್ಟಿಂ'** ಎನ್ನುವ ಶ್ರುತಿಯಲ್ಲಿ ಹಾಗೆ ಕಂಡದರಿಂದ. ॥ ಸೂ. ೫೦ ॥ ಅಧಿ. ೯ ॥

# ಮುಕ್ತಿಫಲಾಧಿಕರಣವು.

**'ಓಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ ಓಂ' ॥ ಸೂ. ೫೧ ॥**

ಜ್ಞಾನಕ್ಕೆ ಸಾಧನಸಂಪತ್ತಿ ಜನ್ಮದಲ್ಲಿಯೇ ಉತ್ಪತ್ತ್ಯನಿಯಮದಂತೆಯೇ ಮುಕ್ತಿರೂಪವಾದ ಫಲದಲ್ಲಿ ಅನಿಯಮವು. ಅಂದರೆ, ಪ್ರತಿಬಂಧಕವಿಲ್ಲದಿದ್ದರೆ ಆ ದೇಹದ ಅನಂತರದಲ್ಲಿಯೇ; ಇಲ್ಲದಿದ್ದರೆ ದೇಹಾಂತರದ ಅವಸಾನದಲ್ಲಿಯೇ. ಜ್ಞಾನಹುಟ್ಟಿದ ಜನ್ಮದಲ್ಲಿಯೇ ಎನ್ನುವ ನಿಯಮವಿಲ್ಲ. ಜ್ಞಾನೋತ್ಪತ್ತಿ ಜನ್ಮದಲ್ಲಿ ಮುಕ್ತಿಯು ಆಗದಿದ್ದರೆ ಯಾವಾಗಲೂ ಮುಕ್ತಿಯಾಗುವುದಿಲ್ಲವೆಂದು ಏಕೆ ಕಲ್ಪಿಸುವುದಿಲ್ಲ; ಪ್ರತಿಬಂಧಕವಿದೆ ಎಂದು ಏಕೆ ಕಲ್ಪಿಸುವುದು? ಎಂದರೆ— **'ಬ್ರಹ್ಮಸಂಸ್ಥೋಽಮೃತತ್ವಮೇತ್ಯೇವ'** ಎನ್ನುವ ಶ್ರುತಿಯಲ್ಲಿ ಬ್ರಹ್ಮಜ್ಞಾನಿಗೆ ಮುಕ್ತಿಫಲವು ನಿಶ್ಚಿತವಾದುದರಿಂದ.

ಈ ಎರಡು (೧೦-೧೧) ಅಧಿಕರಣಗಳ ತಾತ್ಪರ್ಯವನ್ನು ಸಂಕ್ಷೇಪದಿಂದ ಹೇಳುತ್ತಾರೆ—

**ಮೂ ॥ ಏವಮೇವಾವಿರೋಧೇನ ಪ್ರಾರಬ್ಧಸ್ಯೈವ ಕರ್ಮಣಃ ।**
**ಜ್ಞಾನಂ ದೃಷ್ಟಫಲಂ ಪ್ರೋಕ್ತಂ ಮುಕ್ತಿಶ್ಚೈವೇಹ(ಶ್ಚೈಹೈವ)ಲಭ್ಯತೇ॥**
**॥ ೨೭೪ ॥**

ಅ ॥ ಪ್ರಾರಬ್ಧಸ್ಯಕರ್ಮಣಃ=ಪ್ರಾರಬ್ಧಕರ್ಮಕ್ಕೆ, ಅವಿರೋಧೇನೈವ=ವಿರೋಧಾಭಾವದಿಂದಲೇ, ಜ್ಞಾನಂ=ಜ್ಞಾನವು, ದೃಷ್ಟಫಲಂ=ದೃಷ್ಟವಾದ ಫಲವುಳ್ಳದ್ದೆಂದು, ಪ್ರೋಕ್ತಮಿತಿ=ಹೇಳಲ್ಪಟ್ಟದೆ. (ಎಂದು ೧೦ನೇ ಅಧಿಕರಣದ ತಾತ್ಪರ್ಯವು) (ಅಂದರೆ ಪ್ರಾರಬ್ಧಕರ್ಮಪ್ರತಿಬಂಧಕವಿಲ್ಲದಿದ್ದರೆ ಶ್ರವಣಾದಿಗಳು ಪೂರ್ತಿಯಾದ ಮೇಲೆಯೇ ಜ್ಞಾನವು ಹುಟ್ಟುತ್ತದೆ.)ಪ್ರಾರಬ್ಧಕರ್ಮಪ್ರತಿಬಂಧಕವಿದ್ದರೆ ಪ್ರಾರಬ್ಧಕರ್ಮದ ಅವಸಾನವಾದಮೇಲೆ ಜ್ಞಾನವು ಹುಟ್ಟುತ್ತದೆ. ಏವಮೇವ=ಹೀಗೆಯೇ, ಮುಕ್ತಿಶ್ಚ=ಮುಕ್ತಿಯೂ ಕೂಡ, ಇಹೈವ=ಇಲ್ಲಿಯೇ, ಲಭ್ಯತೇ=ಹೊಂದಲ್ಪಡುತ್ತದೆ. (ಎಂದು ೧೧ನೇ ಅಧಿಕರಣದ ತಾತ್ಪರ್ಯವು) (ಅಂದರೆ ಯಾವ ದೇಹದಲ್ಲಿ ಜ್ಞಾನವು ಹುಟ್ಟಿತೋ, ಆ ದೇಹಪಾತವಾದೊಡನೆಯೇ ಮುಕ್ತಿಯು ಪ್ರಾರಬ್ಧಕರ್ಮಪ್ರತಿಬಂಧಕವಿಲ್ಲದಿದ್ದರೆ ಸಿಗುತ್ತದೆ. ಪ್ರಾರಬ್ಧಕರ್ಮಪ್ರತಿಬಂಧಕವಿದ್ದರೆ ಪ್ರಾರಬ್ಧಕರ್ಮದ ಅವಸಾನದಲ್ಲಿ ಮುಕ್ತಿಯು ಸಿಗುತ್ತದೆ. ॥ ೨೭೪ ॥ ಸೂ. ೫೦ ॥ ೫೧ ॥ ಅಧಿ. ೧೦ ॥ ೧೧ ॥

**ಐಹಿಕಾಧಿಕರಣ ಮುಕ್ತಿಫಲಾಧಿಕರಣಗಳು ಸಮಾಪ್ತಗಳಾದುವು.**

---

**ಇತಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯ (ದ) ವಿರಚಿತೇ**
**ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ ತೃತೀಯಾಧ್ಯಾಯಸ್ಯ ಚತುರ್ಥಃಪಾದಃ**
**ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಿಕೊಳ್ಳಲ್ಪಟ್ಟ**
**ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ**
**ಮೂರನೇ ಅಧ್ಯಾಯದಲ್ಲಿ ನಾಲ್ಕನೇ ಪಾದವು ಸಮಾಪ್ತವಾಯಿತು.**

ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇ
ರನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯ ಯತಿನಾ ।
ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ
ತೃತೀಯೇಽಧ್ಯಾಯೇಽಸ್ಮಿನ್ ಚರಮಚರಣಃ ಪರ್ಯವಸಿತಃ ॥

ಅಶೇಷಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀ ಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥
ಭಾರತೀಶ ನಮಸ್ತುಭ್ಯಂ ರಾಮಪ್ರಿಯ ನಮೋಽಸ್ತುತೇ ।
ನಮಸ್ತೇ ದ್ರೌಪದೀಕಾಂತ ವ್ಯಾಸಶಿಷ್ಯ ನಮೋಽಸ್ತುತೇ ॥
ವ್ಯಾಖ್ಯಯಾ ಚಾನುಭಾಷಸ್ಯ ಪ್ರೀತೋ ಮಧ್ವಮುನಿರ್ಮಮ ।
ನಿವಾರಯನ್ನಪ್ರಕಾಶಂ ಸುಪ್ರಕಾಶಂ ದದಾತು ನಃ ॥

**॥ ಮೂರನೇ ಅಧ್ಯಾಯವು ಸಮಾಪ್ತವಾಯಿತು. ಹರಿಃ ಓಂ ॥**

॥ ಶ್ರೀಕೃಷ್ಣಾರ್ಪಣಮಸ್ತು ॥



|| ಶ್ರೀಃ ||

# ನಾಲ್ಕನೇ ಅಧ್ಯಾಯವು

ಆರಾಧಿತಃ ಸಾಧನೈರ್ಯೋ ಮುಕ್ತಿಂ ದದ್ಯಾಚ್ಚತುರ್ವಿಧಾಂ ।
ತಂ ವಂದೇ ಕಮಲಾನಾಥಮಭೀಷ್ಟಾವಾಪ್ತಯೇ ಹರಿಂ ॥
ಯದೀಯಚರಣಾಂಭೋಜಚ್ಛಾಯಾಮಾಶ್ರಿತ್ಯ ನಿರ್ವೃತಾಃ ।
ನಂದಂತಿ ಸತತಂ ಮುಕ್ತಾಃ ಸಂಶ್ರಯೇ ತಂ ಶ್ರಿಯಃ ಪತಿಂ ॥
ಯದೀಯಾಸ್ಯಾಂಬುಜಾದ್ಭಾಷ್ಯಂ ಮೋಕ್ಷಾದಿಪುರುಷಾರ್ಥದಂ ।
ಆವಿರ್ಭೂತಂ ತನ್ನಮಾಮಿ ಶ್ರೀಮದಾಚಾರ್ಯಮಾದರಾತ್ ॥
ಭಜಕಾಭೀಷ್ಟದಾತಾರಂ ದ್ವಿಜವ್ರಜನಿಷೇವಿತಂ ।
ಸುಜನೇಡ್ಯಂ ವಾದಿರಾಜಂ ಋಜಯೋಗಿನಮಾಶ್ರಯೇ ॥

ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ
ಲಕ್ಷ್ಮೀಹಯಗ್ರೀವಾಯ ನಮಃ ॥ ಹರಿಃ ಓಂ ॥

ಮೂ ॥ ಸಮನ್ವಯಾವಿರೋಧಾಭ್ಯಾಂ ಸಿದ್ಧೇ ವಸ್ತುನಿ ಸಾಧನೇ ।
ವಿಚಾರಿತೇಷ್ವಶೇಷೇಷು ಸಾಧನೇಷು ವಿಶೇಷತಃ ॥ ೧ ॥
ನಿತ್ಯಶಃ ಕಾರ್ಯಮತ್ಯಂತಮವಶ್ಯಂ ಭಾವಿಸಾಧನಂ ।
ಚಿಂತ್ಯತೇ ಪ್ರಥಮಂ ತತ್ರ [ಶ್ರವಣಾದಿಸಕೃತ್ಕ್ರಿಯಾ] ॥ ೨ ॥

ಅ ॥ ಸಮನ್ವಯಾವಿರೋಧಾಭ್ಯಾಂ=ಒಂದನೇ ಎರಡನೇ ಅಧ್ಯಾಯಗಳಲ್ಲಿ ಪ್ರತಿಪಾದಿಸಿಕೊಳ್ಳಲ್ಪಟ್ಟ ಸಮನ್ವಯ ಅವಿರೋಧಗಳಿಂದ, ವಸ್ತುನಿ = ಬ್ರಹ್ಮಾದಿರೂಪವಾದ ವಸ್ತುವು, ಸಿದ್ಧೇ=ಸಿದ್ಧವಾಗುತ್ತಿರಲು, ಸಾಧನೇ=ಸಾಧನವನ್ನು ಪ್ರತಿಪಾದಿಸತಕ್ಕ ಮೂರನೇ ಅಧ್ಯಾಯದಲ್ಲಿ, ಅಶೇಷೇಷು ಸಾಧನೇಷು=ಎಲ್ಲಾ ಮೋಕ್ಷಸಾಧನಗಳು, ವಿಚಾರಿತೇಷು=ವಿಚಾರಿತವಾಗುತ್ತಿರಲು, (ಫಲಪ್ರತಿಪಾದನಕ್ಕೆ) ಜಿಜ್ಞಾಸಿತಗಳಾದ ಅರ್ಥಗಳ ಮಧ್ಯದಲ್ಲಿ ಬೇರೆ ಎಲ್ಲವನ್ನೂ ವಿಚಾರಮಾಡಿದರಿಂದ ಫಲವೇ ಅವಶಿಷ್ಟವಾಗಿರುವುದರಿಂದ ೧ ಕರ್ಮಕ್ಷಯ, ೨ ಉತ್ಕ್ರಾಂತಿ, ೩ ಮಾರ್ಗ, ೪ ಭೋಗವೆನ್ನುವ, ಅವಸರ ಪ್ರಾಪ್ತವಾದ, ಮೋಕ್ಷರೂಪವಾದ ಫಲವು ಈ ಅಧ್ಯಾಯದಲ್ಲಿ ಹೇಳಲ್ಪಡುತ್ತದೆ.) (ಅಂತೂ ಫಲಪ್ರತಿಪಾದಕವಾದ ಈ ಅಧ್ಯಾಯದಲ್ಲಿ ಕರ್ಮ ನಾಶಾಖ್ಯವಾದ ಫಲವು ಪ್ರಥಮ ಪಾದದಲ್ಲಿ ಹೇಳಲ್ಪಡುತ್ತದೆ, ಎಂದು ಹೇಳಿದಹಾಗಾಯಿತು.) (ಅದಕ್ಕೆ ಅಪವಾದವನ್ನು ಹೇಳುತ್ತಾರೆ.—) ತತ್ರ = ನಾಲ್ಕನೇ ಅಧ್ಯಾಯದ ಪ್ರಥಮಪಾದದಲ್ಲಿ, ಪ್ರಥಮಂ=ಬುಡದಲ್ಲಿ ಕೆಲವು ಸೂತ್ರಗಳಿಂದ, ಅತ್ಯಂತಂ ಅವಶ್ಯಂಭಾವಿ=ಮೋಕ್ಷಸಿದ್ಧಿಯಲ್ಲಿ ಅತ್ಯಂತವಾಗಿ ಅವಶ್ಯವಾಗಿ ಇರತಕ್ಕ, ಸಾಧನಮೇವ=ಸಾಧನವೇ, ವಿಶೇಷತಃ = ಪರಮಾದರದಿಂದಲೇ, ನಿತ್ಯಶಃ=ನಿರಂತರವಾಗಿಯೂ, ಕಾರ್ಯಮಿತಿ=ಮಾಡತಕ್ಕದ್ದು ಎಂದು, ಚಿಂತ್ಯತೇ=ವಿಚಾರಮಾಡಲ್ಪಡುತ್ತದೆ.

**ತಾ ||** **ನ್ಯಾಯಸುಧಾ—** ಮೂರನೇ ಅಧ್ಯಾಯದಲ್ಲಿ ಯಾವ ಸಾಧನಗಳು ವಿಚಾರಿಸಲ್ಪಟ್ಟವೋ, ಅವುಗಳಲ್ಲಿಯೇ ಕೆಲವು ಸಾಧನಗಳನ್ನು ಪರವಾದರ ನೈರಂತರ್ಯಗಳಿಂದ ಅನುಷ್ಠಾನಮಾಡಬೇಕೆಂದು ಈ ಪಾದದಲ್ಲಿ ಆರಂಭದ ಕೆಲವು ಅಧಿಕರಣಗಳಲ್ಲಿ ಪ್ರತಿಪಾದಿಸುತ್ತೇವೆ. ಸಾಧನಗಳನ್ನು ಮಾಡಿದರೇನೇ ಮೋಕ್ಷವು ಸಿಗುವುದು. ಇಲ್ಲವಾದರೆ ಸಿಗಲಾರದು. ಆದುದರಿಂದ ಮೋಕ್ಷಕ್ಕೆ ಅಂತರಂಗ ಸಾಧನವೆಂದು ತಿಳಿಸುವುದಕ್ಕಾಗಿಯೇ ಮೂರನೇ ಅಧ್ಯಾಯದಲ್ಲಿ ಹೇಳದೆ ಇಲ್ಲಿ ಹೇಳಿದ್ದು. ಅಲ್ಲಿ ಹೇಳದೆ ಇದ್ದುದರಿಂದ ಅದಕ್ಕಿಂತ ವೈಲಕ್ಷಣ್ಯವು ತಿಳಿಯಲ್ಪಡುತ್ತದೆ. ಫಲಲಕ್ಷಣಗಳನ್ನು ಹೇಳಿದರಿಂದ ಫಲಾಂತರಂಗತ್ವವು. ಅಧ್ಯಾಯಾದಿ ವ್ಯವಸ್ಥೆಯು ಪ್ರಾಯಿಕವಾದುದರಿಂದ ಕೂಡುತ್ತದೆ. || ೧ || ೨ ||

## 'ಓಂ ಆವೃತ್ತಿರಸಕೃದುಪದೇಶಾತ್ ಓಂ' || ಸೂ. || ೧ ||

ಜ್ಞಾನಕ್ಕಾಗಿ ಶ್ರವಣಾದಿಗಳ ಆವೃತ್ತಿಯನ್ನು ಮಾಡಬೇಕು. **'ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ'** ಎಂದು ಉದ್ದಾಲಕರು ಶ್ವೇತಕೇತುವಿಗೆ ಅನೇಕಾವರ್ತಿ ತತ್ತ್ವವನ್ನುಪದೇಶ ಮಾಡಿದರಿಂದ—

## 'ಓಂ ಲಿಂಗಾಚ್ಚ ಓಂ' || ಸೂ. || ೨ ||

**'ಸ ತಪೋಽತಪ್ಯತ ಪುನರೇವ ವರುಣಂ ಪಿತರಮುಪಸಸಾರ'** ಇತ್ಯಾದಿಗಳಿಂದ ಶ್ರುತವಾದ, ಭೃಗುಋಷಿಯ ಶ್ರವಣಾದಿಗಳ ಆವರ್ತನರೂಪ ಲಿಂಗದಿಂದಲೂ ಶ್ರವಣಾದಿಗಳನ್ನು ಆವೃತ್ತಿಮಾಡಬೇಕು—

ಅಧಿಕರಣವು ಹೊರಡಲಿಕ್ಕೆ ಕಾರಣವನ್ನು ತೋರಿಸುತ್ತಾರೆ—

**ಮೂ || [ಚಿಂತ್ಯತೇ ಪ್ರಥಮಂ ತತ್ರ] ಶ್ರವಣಾದಿ ಸಕೃತ್ಕ್ರಿಯಾ || ೨ ||**
**ಆವೃತ್ತಿರ್ವೇತಿ ಸಂದೇಹೇ ಕರ್ತವ್ಯಾವೃತ್ತಿರೇವ ಹಿ |**
**ಉಪದೇಶೋಽತತ್ತ್ವಮಸೀತ್ಯಾದಿರ್ಹ್ಯಸಕೃದೇವ ಯತ್ || ೩ ||**

**ಅ ||** ತತ್ರ=ಅದರಲ್ಲಿ, ಪ್ರಥಮಂ=ಪ್ರಥಮಾಧಿಕರಣದಲ್ಲಿ, (**'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ'** ಎಂದು ದರ್ಶನಕ್ಕಾಗಿ) ಶ್ರವಣಾದಿ=ಶ್ರವಣಮೊದಲಾದುದು, (ವಿಧಿಸಲ್ಪಡುತ್ತದೆ. ಶ್ರವಣಾದಿಗಳಿಗೆ) ಸಕೃತ್ಕ್ರಿಯಾ=ಜ್ಯೋತಿಷ್ಟೋಮಾದಿಗಳಂತೆಯೇ ಒಂದಾವರ್ತಿ ಅನುಷ್ಠಾನವೋ, ಆವೃತ್ತಿರ್ವಾ=ವ್ರೀಹ್ಯವಘಾತಾದಿಗಳಂತೆಯೇ ಅನೇಕಾವರ್ತಿ ಆವೃತ್ತಿಯೋ, ಇತಿ ಸಂದೇಹೇ=ಹೀಗೆ ಸಂಶಯವು ಬರುತ್ತಿರಲು, ಸಕೃತ್ಕ್ರಿಯಾ ಇತಿ=ಒಂದಾವರ್ತಿಯೇ ಅನುಷ್ಠಾನವೆಂದು, (ಪೂರ್ವಪಕ್ಷವು ಬರುತ್ತಿರಲು ಈ ಅಧಿಕರಣವು ಆರಂಭಿಸಲ್ಪಡುತ್ತದೆ.) (ಸೂತ್ರವನ್ನು ವ್ಯಾಖ್ಯಾನಮಾಡುತ್ತಾರೆ—) ಆವೃತ್ತಿಃ = (ಶ್ರವಣಾದಿಗಳಿಗೆ) ಆವೃತ್ತಿಯು, ಕರ್ತವ್ಯೈವ=ಮಾಡತಕ್ಕದ್ದೇ. ಅತತ್ತ್ವಮಸಿ=ನೀನು ಪರಬ್ರಹ್ಮನಿಂದ ಭಿನ್ನನು ಆಗಿರುತ್ತಿ, ಇತ್ಯಾದಿಃ=ಇದು ಮೊದಲಾದುದು, ಉಪದೇಶಃ=ಉಪದೇಶವು, ಹಿ=ಅತತ್ತ್ವಮಸಿ ಎನ್ನುವ ಉಪದೇಶವು ಪ್ರಸಿದ್ಧವು. (ಅಂದರೆ ಶಿಷ್ಯನು ಆವೃತ್ತಿಯನ್ನು ಮಾಡಬೇಕಾಗಿಲ್ಲವೆಂದಾದರೆ ಆಗ ಗುರುಗಳ ಅನೇಕಾವರ್ತಿ ಉಪದೇಶವು ಅನರ್ಥಕವಾಗಬೇಕಾಗುವುದು. ಅದರಿಂದ ಶ್ರವಣಕ್ಕೆ ಆವೃತ್ತಿಯನ್ನು ಮಾಡಬೇಕೆಂದು ತಿಳಿಯುತ್ತದೆ. ಅಂತೂ ಶ್ರವಣಾವೃತ್ತಿಗೆ ಕರ್ತವ್ಯತ್ವವು ಸಿದ್ಧವು || ೨ || ೩ ||

ಶ್ರವಣ ಮನನ ನಿದಿಧ್ಯಾಸನ ಈ ಮೂರಕ್ಕೂ ಆವೃತ್ತಿಯನ್ನು ಸಾಧಿಸತಕ್ಕ 'ಲಿಂಗಾಚ್ಚ' ಎನ್ನುವ ಸೂತ್ರವನ್ನು ಪಠನಮಾಡಿ ಅಲ್ಲಿ ಅಭಿಪ್ರೇತಗಳಾದ ಲಿಂಗಗಳನ್ನು ಆಗಮವಾಕ್ಯದಿಂದಲೇ ತೋರಿಸುತ್ತಾರೆ —

ಮೂ ॥ ಲಿಂಗಾಲ್ಲಾತವ್ಯತಃ ಪೂರ್ವಮೃಜೋಃ ಬ್ರಹ್ಮತ್ವತಃ ಶತಾತ್ ।
ಶುಶ್ರಾವೋಗ್ರತಪಾ ನಾಮ ಯೋಗ್ಯೋ ರುದ್ರಪದಸ್ಯ ಯಃ ॥ ೪ ॥
ಸಾರ್ಧಂ ಪರಾರ್ಧಂ ವಿಷ್ಣೋಸ್ತು ಗುಣಾನ್ ಭಕ್ತ್ಯಾ ಸದೋದ್ಯತಃ ।
ತತ್ತ್ರಿಭಾಗಮುಪಾಸಾಂ ಚ ಚಕ್ರೇ ಸಂಭೃತಮಾನಸಃ ॥ ೫ ॥
ದಶಮನ್ವಂತರಂ ಶಕ್ರಪದಯೋಗ್ಯೋ ಗರುತ್ಮತಃ ।
ಪದಯೋಗ್ಯಾಸ್ಸುಮನಸಃ ಸುನಂದೋ ನಾಮ ಚಾಶೃಣೋತ್ ॥ ೬ ॥
ಉಪಾಸಾಂಚಕ್ರ ಉದ್ಯುಕ್ತೋ ಮನ್ವಂತರಚತುಷ್ಟಯಂ ।
ಸೂರ್ಯಾಚಂದ್ರಮಸೋಶ್ಚೈವ ಪದಯೋಗ್ಯೌ ಸುತೇಜಸೌ ॥ ೭ ॥
ಸುರೂಪಃ ಶಾಂತರೂಪಶ್ಚ ಮನ್ವಂತರಚತುಷ್ಟಯಂ ।
ಅಶೃಣ್ವತಾಂ ಸುಮನಸೋ ಮನ್ವಂತರಮುಪಾಸತಾಂ ॥ ೮ ॥
ತತಃ ಪ್ರೋಕ್ತಾಸ್ತು ತೇ ಸರ್ವೇ ಭಕ್ತ್ಯೋಗ್ರತಪ ಆದಯಃ ।
ಅಪಶ್ಯನ್ಪರಮಂ ವಿಷ್ಣುಂ ತತ್ಪ್ರಸಾದ್ಸ್ಥಿತಾಃ ಸದಾ ।
ಇತ್ಯುಕ್ತಂ ವಿಷ್ಣುನಾ ಸಾಕ್ಷಾದ್ಗ್ರಂಥೇ ಸತ್ತತ್ತ್ವಸಂಜ್ಞಿತೇ ॥ ೯ ॥

ಅ ॥ ಲಿಂಗಾತ್ = ಆವರ್ತನರೂಪವಾದ ಲಿಂಗದಿಂದಯಿಂದ, (ಶ್ರವಣಾದ್ಯಾವೃತ್ತಿಯು ಅವಶ್ಯಕರ್ತವ್ಯವು) ('ಲಿಂಗಾತ್' ಎನ್ನುವ ಸೂತ್ರಾರ್ಥವನ್ನೇ ವಿವರಿಸುತ್ತಾರೆ ) ಬ್ರಹ್ಮತ್ವತಃ= ಬ್ರಹ್ಮತ್ವಗಳ, ಶತಾತ್=ನೂರರ ದೆಶೆಯಿಂದ, ಪೂರ್ವಂ=ಮೊದಲು ಇರತಕ್ಕ, ಬ್ರಹ್ಮಪದವಿಗೆ ಯೋಗ್ಯನಾದ, ಲಾತವ್ಯತಃ=ಶಿಷ್ಯರಿಂದ ಉಪಾಸನೆಮಾಡಿಸಿಕೊಳ್ಳಲ್ಪಡಲಿಕ್ಕೆ ಯೋಗ್ಯನಾದ, ಲಾತವ್ಯತಃ ಋಜೋಃ=ಲಾತವ್ಯನಾಮಕ ಋಜುವಿನದೆಶೆಯಿಂದ, ಅಂದರೆ ಲಾತವ್ಯನಾಮಕ ಋಜುವು (೯೯) ತೊಂಭತ್ತ ಒಂಭತ್ತು ಬ್ರಹ್ಮರು ಅತೀತರಾಗುತ್ತಿರಲು ಬ್ರಹ್ಮನು ಆಗುವನು. ಅಥವಾ ಯಾವ ಋಜುವಿಗೆ ಈ ಬ್ರಹ್ಮಕಲ್ಪವನ್ನು ಆರಂಭಿಸಿ (೧೦೦) ನೂರು (ಬ್ರಹ್ಮಕಲ್ಪಗಳು ದಾಟುತ್ತಿರಲು ಬ್ರಹ್ಮತ್ವವು ಆಗುವುದೋ ಅವನದೆಶೆಯಿಂದ) ರುದ್ರಪದಸ್ಯ=ರುದ್ರಪದವಿಗೆ, ಯಃ=ಯಾವನು, ಯೋಗ್ಯಃ = ಯೋಗ್ಯನೋ ಅಂತಹ, ಉಗ್ರತಪಾಃ ನಾಮ=ಉಗ್ರತಪನೆಂದು ಪ್ರಸಿದ್ಧನಾದವನು, ಸಾರ್ಧಂ ಪರಾರ್ಧಂ=ಅರ್ಧದಿಂದ ಸಹಿತವಾದ ಪರಾರ್ಧದಲ್ಲಿ (ಅಂದರೆ ಬ್ರಹ್ಮ ಸಂಬಂಧಿಯಾದ ಮಾನದಿಂದ ಪರಿಗಣಿತಗಳಾದ ಎಪ್ಪತ್ತೈದು (೭೫) ಸಂವತ್ಸರ ಕಾಲಗಳಲ್ಲಿ) ವಿಷ್ಣೋಃ = ಶ್ರೀ ಹರಿಯ, ಗುಣಾಂಸ್ತು = ಗುಣಗಳನ್ನಾದರೂ, ಸದಾ = ಯಾವಾಗಲೂ, ಉದ್ಯತಃ = ಸನ್ನದ್ಧನಾಗಿ, ಭಕ್ತ್ಯಾ = ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹದಿಂದ, ಶುಶ್ರಾವ=ಕೇಳಿದನು. ಸಂಭೃತಮಾನಸಃಸನ್=ಉಪಾಸಿತವ್ಯವಾದ ಅರ್ಥದಲ್ಲಿಯೇ ಧರಿಸಲ್ಪಟ್ಟ ಮನಸ್ಸುಳ್ಳವನಾಗಿ, ತತ್ತ್ರಿಭಾಗಂ=ಅದರ ಮೂರನೇ ಅಂಶವಾದ ಇಪ್ಪತ್ತೈದು ಬ್ರಹ್ಮಸಂವತ್ಸರಗಳಲ್ಲಿ, ಅಂದರೆ ಶ್ರವಣಕಾಲದ ಮೂರನೇ ಭಾಗಕಾಲದಲ್ಲಿ, ಉಪಾಸಾಂಚ=ಮನನ ನಿದಿಧ್ಯಾಸನ ರೂಪವಾದುದನ್ನು, ಚಕ್ರೇ = ಮಾಡಿದನು. ಶಕ್ರಪದಯೋಗ್ಯಃ = ದೇವೇಂದ್ರನ ಪದವಿಗೆ ಯೋಗ್ಯನಾದ, ಸುನಂದೋ ನಾಮ=ಸುನಂದನೆಂದು ಪ್ರಸಿದ್ಧನಾದವನು, ಗರುತ್ಮತಃ=ಗರುಡನ,

ಪದಯೋಗ್ಯಾತ್ = ಪದವಿಗೆ ಯೋಗ್ಯನಾದ, ಸುಮನಸಃ = ಸುಮನಃ ಎನ್ನುವ ದೇವತೆಯು ದೆಶೆಯಿಂದ, ಅಶೃಣೋತ್=ಕೇಳಿದನು. ಉದ್ಯುಕ್ತಃ=ಸನ್ನದ್ಧನಾದವನಾಗಿ, ಮನ್ವಂತರ ಚತುಷ್ಟಯಂ = ನಾಲ್ಕು ಮನ್ವಂತರಗಳಲ್ಲಿ, ಉಪಾಸಾಂಚಕ್ರೇ=ಉಪಾಸನಾಮಾಡಿದನು. ಸೂರ್ಯಾಚಂದ್ರಮಸೋಃ = ಸೂರ್ಯಚಂದ್ರರ, ಪದಯೋಗ್ಯೌ = ಪದವಿಗೆ ಯೋಗ್ಯರಾದ, ಸುತೇಜಸೌ=ಶೋಭನಪ್ರಜ್ಞೆಯುಳ್ಳವರೇ ಆದ, ಸುರೂಪಃ=ಸುರೂಪನು, ಶಾಂತರೂಪಶ್ಚ= ಶಾಂತರೂಪನೂ ಕೂಡ, ಮನ್ವಂತರಚತುಷ್ಟಯಂ=ನಾಲ್ಕುಮನ್ವಂತರಗಳಲ್ಲಿ, ಸುಮನಸ ಏವ= ಪ್ರಶಸ್ತವಾದ ಮನಸ್ಸುಳ್ಳ ಸುಮನೋನಾಮಕ ದೇವತೆಯಿಂದಲೇ, ಅಶೃಣ್ವತಾಂ=ಕೇಳಿದರು. ಮನ್ವಂತರಂ = ಮನ್ವಂತರಾವಚ್ಛಿನ್ನಕಾಲದಲ್ಲಿಯೇ, ಉಪಾಸತಾಂ = ಉಪಾಸನಾಮಾಡಿದರು. ತತಃ=ಆ ಮೇಲೆ, ಪ್ರೋಕ್ತಾಸ್ತು = ಹೇಳಲ್ಪಟ್ಟ, ಉಗ್ರತಪ ಆದಯಃ=ಉಗ್ರತಪಯೆನ್ನುವವನೇ ಮೊದಲಾಗಿವುಳ್ಳ, ತೇ ಸರ್ವೇ=ಅವರೆಲ್ಲರೂ, ಭಕ್ತ್ಯಾ=ಭಕ್ತಿಯಿಂದ, ಸದಾ=ಯಾವಾಗಲೂ, ತತ್ಪ್ರಸಾದೈಧಿತಾಃ=ಶ್ರೀ ಹರಿಯ ಪ್ರಸಾದದಿಂದ ಅಭಿವೃದ್ಧರಾದವರಾಗಿ, ಪರಮಂ=ಸರ್ವೋತ್ತಮನಾದ, ವಿಷ್ಣುಂ=ಶ್ರೀ ಹರಿಯನ್ನು, ಅಪಶ್ಯನ್ = ನೋಡಿದರು. ಇತಿ = ಈ ಪ್ರಕಾರ, ಸತ್ತತ್ವಸಂಜ್ಞಿತೇ=ಸತ್ತತ್ವವೆಂದು ಸಂಜ್ಞೆಯುಳ್ಳ, ಗ್ರಂಥೇ=ಗ್ರಂಥದಲ್ಲಿ, ಸಾಕ್ಷಾತ್=ಮುಖ್ಯವಾಗಿ, ವಿಷ್ಣುನಾ = ಶ್ರೀ ಹರಿಯಿಂದ, ಉಕ್ತಂ = ಹೇಳಲ್ಪಟ್ಟದೆ.

ತಾ || ಸ. ರ. ವಿ— ಸಮನ್ವಯಾಧ್ಯಾಯ ಅವಿರೋಧಾಧ್ಯಾಯಗಳಿಂದ ಸಿದ್ಧನಾದ ಯಾವ ವಿಷ್ಣುವಿನ ಪ್ರಾಪ್ತಿಯು ಸಾಧನ ವಿಚಾರವು ಸಾಧನಾಧ್ಯಾಯದಿಂದ ಮಾಡಲ್ಪಟ್ಟದೋ ಆ ಶ್ರೀಹರಿಯ ಪ್ರಾಪ್ತಿರೂಪವಾದ ಫಲವು ಈ ಅಧ್ಯಾಯದಲ್ಲಿ ನಿರೂಪಿಸಲ್ಪಡುತ್ತದೆ ಅದರಲ್ಲಿ ಪ್ರಥಮತಃ ಕೆಲವು ಅಧಿಕರಣಗಳಿಂದ ಸಾಧನದ ವಿಚಾರ ಶೇಷವು ಅನುವೃತ್ತವಾಗಿದೆ. ಎಲ್ಲಾ ಸಾಧನಗಳನ್ನು ೩ನೇ ಅಧ್ಯಾಯದಲ್ಲಿ ವಿಚಾರಮಾಡಿದರೂ ವಿಶೇಷಾಕಾರವಾಗಿ ಯಾವುದು ಅತ್ಯಾವಶ್ಯಕವಾದ ಅಪರೋಕ್ಷಜ್ಞಾನ ಸಾಧನವೋ, ಯಾವುದು ಇಲ್ಲದೆ ಮೋಕ್ಷಮಾತ್ರವೂ ಸಿದ್ಧಿಸುವುದಿಲ್ಲವೋ, ಅದು ವಿಚಾರಿತವಾಗುತ್ತದೆ. ಹೆಚ್ಚಾಗಿ ಈ ಅಧ್ಯಾಯದಲ್ಲಿ ಫಲವನ್ನು ವಿಚಾರಮಾಡುವುದರಿಂದ ಇದು ಫಲಾಧ್ಯಾಯದಲ್ಲಿಯೇ ಸೇರಿತು. (2) ಶ್ರೀ ಹರಿಯ ಅಪರೋಕ್ಷ ಜ್ಞಾನಕ್ಕಾಗಿ ಮೊದಲು ಹೇಳಿದ ಶ್ರವಣಾದಿಗಳನ್ನು ಒಂದಾವರ್ತಿ ಮಾಡಬೇಕೋ, ಅಥವಾ ಅನೇಕಾವರ್ತಿ ಮಾಡಬೇಕೋ, ಎಂದು ಸಂಶಯವು ಬಂದರೆ –'ಶ್ರೋತವ್ಯೋ ಮಂತವ್ಯಃ' ಇತ್ಯಾದಿ ವಿಧಿಯು ಒಂದಾವರ್ತಿ ಮಾಡಿದರೂ ಚರಿತಾರ್ಥವಾಗುವುದರಿಂದ ಒಂದಾವರ್ತಿ ಎನ್ನುತ್ತೇವೆ, ಎಂದಾಶಂಕಿಸಿದರೆ— 'ಸ ವಿಷೋಽಣಿಮೈತದಾತ್ಮ್ಯಮಿದಂಸರ್ವಂ' 'ತತ್ಸತ್ಯಂ ಸ ಆತ್ಮಾ' ಇತ್ಯಾದಿ ಪ್ರಕಾರ ಅನೇಕಾವರ್ತಿ ಉಪದೇಶ ವಿದ್ವಪ್ರಯುಕ್ತ ಶ್ರವಣಾದಿಗಳಿಗೆ ಆವೃತ್ತಿಯು ಆವಶ್ಯಕವು. ಒಂದಾವರ್ತಿಯ ಶ್ರವಣಾದಿಗಳಿಂದಲೇ ಶ್ರೀ ಹರಿಯ ದರ್ಶನವಾಗುವುದಾದರೆ ಅನೇಕಾವರ್ತಿ ಉಪದೇಶವು ವ್ಯರ್ಥವಾಗಬೇಕಾಗುವುದು. ಶ್ರವಣಾದಿಗಳನ್ನು ಒಂದಾವರ್ತಿ ಮಾಡಿದರಿಂದಲೇ ಆ ವಿಧಿಯು ಸಾರ್ಥಕವಾಗುತ್ತದೆಂದು ಹೇಳಕೂಡದು. ಒಂದಾವರ್ತಿಯ ಶ್ರವಣಾದಿಗಳಿಂದ ಅಪರೋಕ್ಷಜ್ಞಾನವು ಹುಟ್ಟಲಾರದು. ಆದಕಾರಣ ಶ್ರೀ ಹರಿಯ ಅಪರೋಕ್ಷ ಜ್ಞಾನವಾಗುವತನಕ ಶ್ರವಣಾದಿಗಳನ್ನು ಮಾಡಿ ಆ ವಿಧಿಯು ಸಾಧಕವಾಗುವುದು. ಇಲ್ಲವಾದರೆ ಆಗಲಾರದು. ಉದಾ 'ವ್ರೀಹೀನವಹಂತಿ'' ಎನ್ನುವ ವಿಧಿಯು ವ್ರೀಹಿಗಳನ್ನು ಒಂದಾವರ್ತಿ ಅವಹನನಮಾಡಿದರೆ ಸಾಧಕವಾಗಲಾರದು. ಮತ್ತೆ ವ್ರೀಹಿಗಳ ತುಷ (ಉಮಿ) ಹೋಗುವತನಕ ಅವಹನನಮಾಡಿದರಿಂದಲೇ ಸಾರ್ಥಕವಾಗುವುದು. ಅವಹನನವು ದೃಷ್ಟ

ಫಲಕ್ಕಾಗಿದೆ. (3) ಮತ್ತೂ ಧ್ಯಾನಾದಿಗಳು ಅಪರೋಕ್ಷಜ್ಞಾನಕ್ಕೆ ಸಾಧನವು. ಧ್ಯಾನಶಬ್ದವು ಒಂದಾವರ್ತಿ ಸ್ಮರಿಸುವುದರಲ್ಲಿ ಪ್ರಸಿದ್ಧವಾಗಲಿಲ್ಲ. ಮತ್ತೆ ಸಜಾತೀಯ ಪ್ರತ್ಯಯಗಳ ಪ್ರವಾಹ ವಾಚಕವು. ಮತ್ತೂ ವಿಷ್ಣುಧ್ಯಾನಾದಿಗಳಿಗೆ ಆವೃತ್ತಿಯಾಗಬೇಕೆಂದು ಬೃಹತ್ತಂತ್ರದಲ್ಲಿ ಹೇಳಿಯದೆ. **'ನಿತ್ಯಶಃ ಶ್ರವಣಂ ಚೈವ ಮನನಂ ಧ್ಯಾನಮೇವ ಚ । ಕರ್ತವ್ಯಮೇವ ಪುರುಷೈರ್ಬ್ರಹ್ಮದರ್ಶನಮಿಚ್ಛುಭಿಃ'** ಎಂದು (4) ಮತ್ತೂ ಉಗ್ರತಪಃ ಎನ್ನುವವರೇ ಮೊದಲಾದ ಮಹಾನುಭಾವರು ಶ್ರವಣಾದಿಗಳಿಗೆ ಆವೃತ್ತಿಮಾಡಿದರಿಂದ ಶ್ರೀ ಹರಿಯ ಶ್ರವಣಾದಿ ಗಳಿಗೆ ಆವೃತ್ತಿಮಾಡಬೇಕು. ಹೇಗೆಂದರೆ— ಲಾತವ್ಯನಾಮಕ ಋಜುವು ತೊಂಭತ್ತೊಂಭತ್ತು ಮಂದಿ ಬ್ರಹ್ಮರು ಅತೀತರಾಗುತ್ತಿರಲು ಬ್ರಹ್ಮನು ಆಗುವನು. ಆ ಲಾತವ್ಯರಿಂದ ಉಗ್ರತಪಾ ಎನ್ನುವ ರುದ್ರಪದವಿಗೆ ಯೋಗ್ಯನಾದ ಜೀವನು ಬ್ರಹ್ಮನ ಮಾನದಲ್ಲಿ ಎಪ್ಪತ್ತೈದು ಸಂವತ್ಸರ ಕಾಲತನಕ ಶ್ರೀಹರಿಯ ಗುಣಗಳನ್ನು ಶ್ರವಣಮಾಡಿದನು. ಬ್ರಹ್ಮಮಾನದಲ್ಲಿ (೨೫) ಇಪ್ಪತ್ತ ಐದು ಸಂವತ್ಸರಕಾಲದಲ್ಲಿ ಅವುಗಳನ್ನೇ ಧ್ಯಾನಮಾಡಿದನು. ಪ್ರತ್ಯಕ್ಷೀಕರಿಸಿದನು. (5) ಹಾಗೆಯೇ ಸುನಂದಮೊದಲಾದ ಇಂದ್ರಾದಿಪದವಿಗೆ ಯೋಗ್ಯರಾದ ಜೀವರು ತಮ್ಮ ತಮ್ಮ ಶಕ್ತ್ಯನುಸಾರದಿಂದ ಅನುಷ್ಠಿತವಾದ ಶ್ರವಣಾದಿಗಳ ಆವೃತ್ತಿಯಿಂದಲೇ ಶ್ರೀ ಹರಿಯನ್ನು ಕಂಡರು ॥ ೪ ॥ ೫ ॥ ೬ ॥ ೭ ॥ ೮ ॥ ೯ ॥ ಸೂ. ॥ ೧ ॥ ೨ ॥ ಅಧಿ. ॥ ೧ ॥

**ಆವೃತ್ತ್ಯಧಿಕರಣವು ಸಮಾಪ್ತವಾಯಿತು.**

---

## ಆತ್ಮಾಧಿಕರಣವು.

### 'ಓಂ ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ ಓಂ' ಸೂ. ॥ ೨ ॥

ಶ್ರೀ ಹರಿಯು ನಮಗೆ ಸ್ವಾಮಿಯು ಎಂದೇ ಸಜ್ಜನರು ಉಪಾಸನಾಮಾಡುತ್ತಾರೆ. ಮತ್ತು ತಿಳಿಯುತ್ತಾರೆ. ಹೀಗೆಯೇ ಶಿಷ್ಯರಿಗೆ ಉಪದೇಶವನ್ನು ಕೊಡುತ್ತಾರೆ. ಆದುದರಿಂದ ಶ್ರೀ ಹರಿಯು ನಮಗೆ ಸ್ವಾಮಿಯೆಂದು ಸರ್ವಥಾ ಉಪಾಸನಾಮಾಡತಕ್ಕದು.

ಈ ಸೂತ್ರವನ್ನು ವ್ಯಾಖ್ಯಾನ ಮಾಡುವುದಕ್ಕಾಗಿ ಆತ್ಮಶಬ್ದಾರ್ಥವನ್ನು ಹೇಳುತ್ತಾರೆ—

(1) ಯಾವುದು ಅತ್ಯಾವಶ್ಯಕವಾದ ಸಾಧನವನ್ನು ಆವರ್ತನೆಮಾಡಬೇಕೋ ಅದನ್ನು ತೋರಿಸುತ್ತಾ 'ಆತ್ಮೇತಿತೂಪಗಚ್ಛಂತಿ ಗ್ರಾಹಯಂತಿ ಚ' ಎನ್ನುವುದನ್ನು ವ್ಯಾಖ್ಯಾನ ಮಾಡುತ್ತಾರೆ. (2) ಅದರಲ್ಲಿ ಆತ್ಮಶಬ್ದಾರ್ಥವು ವಿಷ್ಣುವಿನಿಂದ ಇತರನೆಂದು ಆಶಂಕಿಸಕೂಡದು. ಆತ್ಮಶಬ್ದವು ವಿಷ್ಣುವಿನಲ್ಲಿಯೇ ಪ್ರಸಿದ್ಧವೆಂದು 'ಗೌಣಶ್ಚೇನ್ನಾತ್ಮಶಬ್ದಾತ್' ಇತ್ಯಾದಿ ಸೂತ್ರ ಗಳಿಂದ ಮೊದಲೇ ಪ್ರತಿಪಾದಿತವಾಗಿದೆ. ಇದನ್ನೇ ಪೈಂಗಿಶ್ರುತ್ಯಾದಿಗಳಿಂದಲೂ ದೃಢೀಕರಿಸು ತ್ತಾರೆ. (3) ಯಾವನು ಸರ್ವಜಗತ್ತುಗಳಿಂದ ಉಪಾಸ್ಯನೋ ಅಂತಹ ಆತ್ಮನು ವಿಷ್ಣುವೆಂದು ತಿಳಿಯಲ್ಪಡಬೇಕು. ಹೀಗೆ ಸಜ್ಜನರು ಉಪಾಸನಮಾಡುತ್ತಾರೆ. ಮತ್ತು ಉಪದೇಶಕೊಡು ತ್ತಾರೆ. ಆದುದರಿಂದ ಆತ್ಮಶಬ್ದವು **'ಸರ್ವಮಾದತ್ತೇ'** ಎನ್ನುವ ವ್ಯುತ್ಪತ್ತಿಯಿಂದ ಸ್ವಾಮಿತ್ವ ವಿಶಿಷ್ಟನಾದ ವಿಷ್ಣುವನ್ನು ಪ್ರತಿಪಾದಿಸುತ್ತದೆ. ಸ್ವಾಮಿಯು ಸರ್ವವನ್ನು ತನ್ನದ್ದನ್ನಾಗಿ ತೆಗೆದು ಕೊಳ್ಳುತ್ತಾನೆ. ಆದುದರಿಂದ ಸ್ವಾಮಿಯೆಂದು ವಿಷ್ಣುವು ಉಪಾಸನಾರ್ಹನು. ಎಂದು ಹೇಳುತ್ತಾರೆ—

ತಾ ॥ ಸ. ರ. ವಿ.— (1) ಕರ್ಮಕ್ಷಯವು ಪ್ರಥಮಪಾದದಲ್ಲಿ ಹೇಳಲ್ಪಟ್ಟಿದೆ. ಈಗ ಉತ್ಕ್ರಾಂತಿಯನ್ನು ಹೇಳಬೇಕು. ಉತ್ಕ್ರಾಂತಿಮಾರ್ಗಗಳಾದರೂ ಕರ್ಮಕ್ಷಯದಂತೆ ದೇವಮನುಷ್ಯಸಾಧಾರಣಗಳಲ್ಲ. ದೇವತೆಗಳಿಗೆ ಉತ್ಕ್ರಾಂತಿ ಮಾರ್ಗಗಳು ಪ್ರಾಯಶಃ ಕೂಡಲಾರವು. ಕರ್ಮಕ್ಷಯವೂ ಸುಷುಮ್ನಾನಾಡಿಯಿಂದ ಉತ್ಕ್ರಮಣವೂ ಅರ್ಚಿರಾದಿ ಮಾರ್ಗಗಮನವೂ, ಕೂಡ ಜ್ಞಾನಸಾಧ್ಯವಾಗಿರುವುದರಿಂದ ಮುಕ್ತಿಯಲ್ಲಿ ಅಂತರ್ಭೂತವಾಗಿರುವುದರಿಂದ ಅದನ್ನು ಹೇಳುವುದು ಈ ಅಧ್ಯಾಯದಲ್ಲಿ ಅಸಂಗತವಲ್ಲ. ಬ್ರಹ್ಮಪ್ರಲಯದಲ್ಲಿ ತೋರತಕ್ಕ ಪೃಥ್ವ್ಯಾದಿ ದೇವತೆಗಳಿಗೆ ತಮ್ಮ ತಮ್ಮ ಕಾರಣಪ್ರವೇಶವೇ ಶ್ರೀ ಹರಿಯ ಪ್ರಾಪ್ತಿಗೆ ಮಾರ್ಗವು. ಅರ್ಚಿರಾದಿ ರೂಪವಲ್ಲ. ತಮಗೆ ತಮಗೆ ಕಾರಣೀಭೂತವಾದ ದೇವತೆಯಿಂದ ನುಂಗಲ್ಪಟ್ಟ ದೇಹವುಳ್ಳ ದೇವತೆಗಳಿಗೆ ಉತ್ಕ್ರಾಂತಿಯು ಕೂಡುವುದಿಲ್ಲ. ತಮ್ಮಕ್ಕಿಂತ ಉತ್ತಮರನ್ನು ಪ್ರವೇಶಮಾಡಿ ದೇಹಲಯವಾದರೂ ಇದೆ. ಅದು ಬ್ರಹ್ಮಲಯ ಸಮಯದಲ್ಲಿಯೇ ಆಗುತ್ತದೆ.

ನ್ಯಾಯಸುಧಾ— (1) ಫಲವನ್ನು ಈ ಅಧ್ಯಾಯದಲ್ಲಿ ನಿರೂಪಿಸಬೇಕು. ಫಲವು ಮೋಕ್ಷವು. ಅದು ಕರ್ಮಕ್ಷಯಾದಿ ನಾಲ್ಕರ ಸ್ವರೂಪವಾದುದು ಆತ್ಯಂತಿಕ ಅನಿಷ್ಟನಿವೃತ್ತಿ ಇಷ್ಟಪ್ರಾಪ್ತಿಗಳು ಇದರಲ್ಲಿಯೇ ಅಂತರ್ಭೂತಗಳಾಗುತ್ತವೆ ಕರ್ಮಕ್ಷಯಾದಿಗಳು ಕ್ರಮದಿಂದ ಆಗುತ್ತವೆ. ಜ್ಞಾನವು ಹುಟ್ಟಿದ ಮೇಲೆಯೇ ಕರ್ಮಕ್ಷಯವು. ಕ್ಷೀಣಕರ್ಮವುಳ್ಳವನಿಗೆ ಉತ್ಕ್ರಾಂತಿಯು. ಉತ್ಕ್ರಾಂತನಿಗೆ ತನಗೆ ಯೋಗ್ಯವಾದ ಮಾರ್ಗದಿಂದ ಹೊಂದಿದವನಿಗೆ ಬ್ರಹ್ಮಪ್ರಾಪ್ತಿಯು. ಅದರಿಂದ ಭೋಗವು. ಆದುದರಿಂದ ಈ ಪಾದಗಳಲ್ಲಿ ಕ್ರಮದಿಂದಲೇ ಹೇಳಲ್ಪಟ್ಟಿದೆ ಎಂದು ಅಂತರ್ಭಾವರೂಪವಾದುದು, ಆನಂತರ್ಯರೂಪವಾದುದು ಸಂಗತಿಯು. ॥ ೧ ॥ ೨ ॥

ದೇವತೆಗಳಿಗೆ ಮಾರ್ಗವಿಲ್ಲವೆಂದು ಹೇಳಲ್ಪಟ್ಟಿದೆ. ಹಾಗಾದರೆ ಎಲ್ಲಿರುತ್ತಾರೆ ಅಲ್ಲಿಯೇ ಮುಕ್ತರಾಗುತ್ತಾರೋ ಏನು ಎಂದರೆ—?

**ಮೂ ॥ ಸ್ರಷ್ಟೃಷ್ಟೇವ ಚ ಸೃಜ್ಯಾನಾಂ ಪ್ರವೇಶೋ ಬ್ರಹ್ಮಣೋಃ ಲಯೇ ।**
**ದೇವಾನಾಂ ಮಾರ್ಗಉದ್ದಿಷ್ಟೋ ನಾರ್ಚಿರಾದಿರ್ನ ಚೋತ್ಕ್ರಮಃ॥೩॥**
**ಸ್ರಷ್ಟುಸ್ತು ಗ್ರಾಸಭೂತಸ್ಯ ದೇಹಸ್ತತ್ರ ಲಯಂ ವ್ರಜೇತ್ ।**
**ಯತಃ ಸೃಜ್ಯಸ್ಯ ದೇವಸ್ಯ ನೈವೋತ್ಕ್ರಾಂತಿಸ್ತತೋ ಭವೇತ್ ॥ ೪ ॥**

ಅ ॥ ಬ್ರಹ್ಮಣಃ=ಚತುರ್ಮುಖನಿಗೆ, ಲಯೇ=ನಾಶವು ಸಮಿಾಪಿಸುತ್ತಿರಲು, ಸ್ರಷ್ಟೃಷ್ವೇವ=ಸೃಷ್ಟಿಮಾಡಿದವರಲ್ಲಿಯೇ, ಚ=ಕೆಲವು ಕಡೆ ಸ್ರಷ್ಟೃಗಳಾಗದೆ ಇದ್ದವರಲ್ಲಿಯೂ, ಸೃಜ್ಯಾನಾಂ=ಸೃಜ್ಯರಿಗೆ, ಪ್ರವೇಶಃ=ಪ್ರವೇಶವು, ದೇವಾನಾಂ = ದೇವತೆಗಳಿಗೆ, ಮಾರ್ಗಃ=ಮಾರ್ಗವೆಂದು, ಉದ್ದಿಷ್ಟಃ = ಹೇಳಲ್ಪಟ್ಟದೆ. (ತಥಾಚ ಬ್ರಹ್ಮನಿಗೆ ಲಯವು ಸಮಿಾಪಿಸುತ್ತಿರಲು ಪ್ರವೇಶಕ್ಕಾಗಿ ಅವರ ಅನುಸರಣವೇ ಮಾರ್ಗಗಮನವು.) (ಹಾಗಾದರೆ, ದೇವತೆಗಳಿಗೆ ಮಾರ್ಗವಿಲ್ಲವೆಂದು ಹೇಳಿದ್ದಕ್ಕೆ ವಿಷಯವು ಯಾವುದೆಂದರೆ—)ಅರ್ಚಿರಾದಿಃ=ಅರ್ಚಿರಾದಿಮಾರ್ಗವು ನ=ಇಲ್ಲ. (ದೇವತೆಗಳಿಗೆ ದೇಹದಿಂದ ಉತ್ಕ್ರಮಣವು ಇಲ್ಲವೆಂದು ಹೇಳಲ್ಪಟ್ಟಿತು. ಅದು ಏಕೆ? ಮತ್ತು ದೇಹ ಸಹಿತರಿಗೇನೇ ಅವಸ್ಥಿತಿಯು ಪ್ರಸಕ್ತವಾಗುತ್ತದೆ. ಎಂದರೆ—)

ಉತ್ಕ್ರಮಃ=ಉತ್ಕ್ರಮಣವು, ನ ಚ=ಇಲ್ಲ. (ದೇಹಸಹಿತರಾಗಿಯೇ ಇರುತ್ತಾರೆ.) (ಇದನ್ನೇ ವಿವರಿಸುತ್ತಾರೆ.) ಯತಃ=ಯಾವಕಾರಣದಿಂದ, ಸ್ರಷ್ಟುಃ = ಸೃಷ್ಟಿಮಾಡಿದವನಿಗೇನೇ, ಗ್ರಾಸ ಭೂತಸ್ಯ=ಗ್ರಾಸಭೂತನಾದವನ, ದೇಹಸ್ತು=ಚೇತನದಿಂದ ಅಧಿಷ್ಠಿತವೇ ಆದ ಶರೀರವಾದರೂ, ತತ್ರ=ಸೃಷ್ಟಿಮಾಡಿದವನಲ್ಲಿಯೇ, ಲಯಂ=ನಾಶವನ್ನು, ವ್ರಜೇತ್=ಹೊಂದುವುದೋ, ತತಃ= ಆ ಕಾರಣದಿಂದ, ಸೃಜ್ಯಸ್ಯ = ಸೃಷ್ಟಿಮಾಡಲಿಕ್ಕೆ ಯೋಗ್ಯನಾದ, ದೇವಸ್ಯ = ದೇವತೆಗೆ, ಉತ್ಕ್ರಾಂತಿಃ=ಶರೀರದಿಂದ ಉತ್ಕ್ರಮಣವು, ನೈವ ಭವೇತ್=ಸರ್ವಥಾ ಆಗಲಾರದು ॥ ೩ ॥ ೪ ॥

ದೇವತೆಗಳಿಗೆ ಅರ್ಚಿರಾದಿ ಮಾರ್ಗವಿಲ್ಲವೆಂದು ಹೇಳಲ್ಪಟ್ಟಿತು. ಅದು ಯಾವ ಕಾರಣ ದಿಂದ ಎಂದರೆ— ಯಾವುದು ಮೊದಲು ಬೇರೆ ಮಾರ್ಗವು ಹೇಳಲ್ಪಟ್ಟದೋ ಅದರಿಂದಲೇ ಇದೂ ಸಿದ್ಧವಾಯಿತೆನ್ನುವ ಅಭಿಪ್ರಾಯದಿಂದ ಅದನ್ನು ಅನುವಾದಮಾಡಿಕೊಂಡು ಯುಕ್ತ್ಯಂತರ ವನ್ನು ಹೇಳುತ್ತಾರೆ—

**ಮೂ ॥ ಲಯಾಚ್ಚೈವಾರ್ಚಿರಾದೀನಾಂ ಲೋಕಾನಾಮಪಿ ಸರ್ವಶಃ ।**
**ಕಥಂ ಮಾರ್ಗೋ ಭವೇತ್ತೇಷಾಂ ವಿಶತಾಮುತ್ತಮಂ (ರಂ) ಸ್ವತಃ ॥ ॥ ೫ ॥**

**ಜಾತಾನಾಂ ಮಾನುಷೇ ಲೋಕೇ ದೇವಾನಾಂ ತು (ಚ) ಕದಾಚನ ।**
**ಉತ್ಕ್ರಾಂತಿಮಾರ್ಗೌ ಭವತೋ ನ ತದಾ ಮುಕ್ತಿರಿಷ್ಯತೇ ॥ ೬ ॥**
**ಅನ್ಯೇಷಾಮಪಿ ಸಾಕ್ಷಾತ್ತು ಮುಕ್ತಿಃ ಪ್ರಾಪ್ಯಾಪಿ ತಂ ಹರಿಂ ।**
**ಸಹೈವ ಬ್ರಹ್ಮಣಾ ಭೂಯಾದಿತಿ ಶಾಸ್ತ್ರಸ್ಯ ನಿರ್ಣಯಃ ॥ ೭ ॥**

ಅ ॥ ಅರ್ಚಿರಾದೀನಾಂ = ಅರ್ಚಿರ ಮೊದಲಾದ ಲೋಕಗಗಳಿಗೂ, ಸರ್ವಶಃ = ಎಲ್ಲಾ, ಲೋಕಾನಾಮಪಿ = ಲೋಕಗಳಿಗೂ, (ದೇವತೆಗಳಿಗೆ ಮುಕ್ತಿಯಾಗುವುದಕ್ಕಿಂತ ಮೊದಲೇ) ಲಯಾಚ್ಚ = ನಾಶವಾಗಿರುವುದರಿಂದಲೂ, ಸ್ವತಃ = ತಮ್ಮಿಂದ, ಉತ್ತಮಂ = ಉತ್ತಮವನ್ನು, ವಿಶತಾಂ = ಹೊಂದುವ, ತೇಷಾಂ = ಆ ದೇವತೆಗಳಿಗೆ, (ಅರ್ಚಿರಾದಿಃ = ಅರ್ಚಿರ ಮೊದಲಾದ ಲೋಕವು) ಮಾರ್ಗಃ = ಮಾರ್ಗವು, ಕಥಂ=ಹೇಗೆ, ಭವೇತ್ = ಆಗುವುದು? (ಹಾಗಾದರೆ 'ಪ್ರಾಯೇಣ' ಎಂದು ಹೇಳಿದುದರಿಂದ ಕೆಲವು ವೇಳೆ ದೇವತೆಗಳಿಗೆ ಉತ್ಕ್ರಾಂತಿಮಾರ್ಗಗಳನ್ನು ಅಂಗೀಕರಿಸಬೇಕು. ಅಲ್ಲಿ ಹೇಳಿದ ಈ ಯುಕ್ತಿವಿರೋಧವು ಎಂದರೆ—) ಮಾನುಷೇ ಲೋಕೇ = ಮನುಷ್ಯಲೋಕದಲ್ಲಿ, ಜಾತಾನಾಂ = ಹುಟ್ಟಿರತಕ್ಕ, ದೇವಾನಾಂ ತು=ದೇವತೆಗಳಿಗಾದರೂ, ಕದಾಚನ=ಯಾವಾಗಲೂ, ಯದ್ಯಪಿ ಉತ್ಕ್ರಾಂತಿ ಮಾರ್ಗೌ=ಉತ್ಕ್ರಮಣಮಾರ್ಗಗಳು, ಭವತಃ=ಆಗುತ್ತವೆ. ಆದಾಗ್ಯೂ ಕೂಡ, ತದಾ= ಆಗ, ಮುಕ್ತಿಃ = ಮೋಕ್ಷವು, ನೇಷ್ಯತೇ = ಅಂಗೀಕರಿಸಲ್ಪಡುವುದಿಲ್ಲ. (ಮತ್ತೆ ಬ್ರಹ್ಮನಿಂದ ಕೂಡಿಕೊಂಡೇ. ಆದುದರಿಂದ ಹಿಂದೆ ಹೇಳಿದ ಯುಕ್ತಿಯಿಂದ ವಿರೋಧವಿಲ್ಲ.) ದೇವತೆಗಳಿಗೆ ಮಾತ್ರ ಬ್ರಹ್ಮನಿಂದ ಕೂಡಿಕೊಂಡು ಮುಕ್ತಿಯೋ ಎಂದರೆ— ಇತರರಿಗೂ ಬ್ರಹ್ಮನಿಂದ ಕೂಡಿ ಕೊಂಡೇ ಮುಕ್ತಿಯು ಎನ್ನುತ್ತೇವೆ. ಹಾಗಾದರೆ '**ಭೇಜೇ ಖಗೇಂದ್ರಧ್ವಜಪಾದಮೂಲಂ**' ಇತ್ಯಾದಿಗಳಿಂದ ವಿರೋಧವು ಎಂದರೆ—) ಅನ್ಯೇಷಾಮಪಿ = ಇತರರಿಗೂ ಕೂಡ, ಸಾಕ್ಷಾತ್ ಮುಕ್ತಿಸ್ತು=ಲಿಂಗಶರೀರಭಂಗರೂಪವಾದ ಮುಕ್ತಿಯಾದರೂ, ತಂ ಹರಿಂ = ವೈಕುಂಠಾದಿಗಳ ಲ್ಲಿರತಕ್ಕ ಆ ಶ್ರೀ ಹರಿಯನ್ನು, ಪ್ರಾಪ್ಯ=ಹೊಂದಿ, (ಅವಸ್ಥಿತಾನಾಂ) ಅಪಿ=ಇರತಕ್ಕವರಿಗೂ

ಕೂಡ, ಬ್ರಹ್ಮಣಾ = ಚತುರ್ಮುಖನಿಂದ, ಸಹೈವ = ಕೂಡಿಕೊಂಡೇ, ಭೂಯಾತ್=ಆಗ ತಕ್ಕದ್ದು. ಇತಿ = ಹೀಗೆ, ಶಾಸ್ತ್ರಸ್ಯ = ಶಾಸ್ತ್ರದ, ನಿರ್ಣಯಃ = ನಿಶ್ಚಯವು, (ಅಂದರೆ ಶಾಸ್ತ್ರದಿಂದ ಮಾಡಲ್ಪಡತಕ್ಕದು ನಿರ್ಣಯವು.) (ಅಂತೂ ಜ್ಞಾನಿಶ್ರೇಷ್ಠರು ಪ್ರಥಮದಲ್ಲಿ ವೈಕುಂಠಾದಿಗಳಲ್ಲಿ ಅಮುಕ್ತಪ್ರದೇಶದಲ್ಲಿ ಇದ್ದವರೂ ಲಿಂಗಭಂಗರೂಪವಾದ ಮುಖ್ಯಮುಕ್ತಿ ಯನ್ನು ಬ್ರಹ್ಮನಿಂದ ಕೂಡಿಕೊಂಡು ಹೊಂದುತ್ತಾರೆ.) ॥ ೫ ॥ ೬ ॥ ೭ ॥

'ಇತಿ ಸಾಸ್ತ್ರಸ್ಯ ನಿರ್ಣಯಃ' ಎಂದು ಹೇಳಿದ್ದನ್ನೇ ವಿವರಿಸುತ್ತಾರೆ—

ಮೂ ॥ ಕ್ಷ್ಮಾಂಭೋಽನಲಾನಿಲವಿಯನ್ಮನಇಂದಿಯಾರ್ಥ-
ಭೂತಾದಿಭಿಃ ಪರಿವೃತಃ ಪ್ರತಿಸಂಜಿಘೃಕ್ಷುಃ ।
ಅವ್ಯಾಕೃತಂ ವಿಶತಿ ಯರ್ಹಿ ಗುಣತ್ರಯಾತ್ಮಾ
ಕಾಲಂ ಪರಂ ಸ್ವಮನುಭೂಯ ಪರಃ ಸ್ವಯಂಭೂಃ ॥ ೮ ॥
ಏವಂ ಪರೇತ್ಯ ಭಗವಂತಮನುಪ್ರವಿಷ್ಟಾ
ಯೇ ಯೋಗಿನೋ ಜಿತಮರುನ್ಮನಸೋ ವಿರಾಗಾಃ ।
ತೇನೈವ ಸಾಕಮಮೃತಂ ಪುರುಷಂ ಪುರಾಣಂ
ಬ್ರಹ್ಮ ಪ್ರಧಾನಮುಪಯಾಂತ್ಯಗತಾಭಿಮಾನಾಃ ॥ ೯ ॥
ಭಗವಂತಮನುಪ್ರಾಪ್ತಾ ಅಪಿ ತು ಬ್ರಹ್ಮಣಾ ಸಹ ।
ಪರಮಂ ಮೋಕ್ಷಮಾಯಾಂತಿ ಲಿಂಗಭಂಗೇನ ಯೋಗಿನಃ ॥ ೧೦ ॥
ಪ್ರಾಪ್ತಾ ಅಪಿ ಪರಂ ದೇವಂ ಸಹೈವ ಬ್ರಹ್ಮಣಾ ಪುನಃ ।
ಆನಂದವ್ಯಕ್ತಿಮಾಯಾಂತಿ ಪೂರ್ಣಾಂ ಲಿಂಗಸ್ಯ ಭಂಗತಃ ।
ಇತಿ ಶ್ರುತಿಪುರಾಣೋಕ್ತಿ ಬಲಾದ್ವಿಜ್ಞಾಯತೇ ಚ ತತ್ ॥ ೧೧ ॥

ಅ ॥ ಯರ್ಹಿ = ಯಾವಾಗ, ಗುಣತ್ರಯಾತ್ಮಾ = ಸತ್ವ-ರಜ-ಸ್ತಮೋಗುಣಗಳಿಗೆ ಅಭಿಮಾನಿಯಾದ, ಪರಃ=ಪೃಥ್ವ್ಯಾದ್ಯಭಿಮಾನಿದೇವತೆಗಳಿಂದ ಉತ್ತಮನಾದ, ಸ್ವಯಂಭೂಃ= ಚತುರ್ಮುಖಬ್ರಹ್ಮನು, ಸ್ವಂ=ಸ್ವಕೀಯವಾದ, ಪರಂ=ಪರಸಂಖ್ಯೋಪೇತವಾದ, ಕಾಲಂ= ಕಾಲವನ್ನು, ಅನುಭೂಯ=ಅನುಭವಿಸಿ, ಪ್ರತಿಸಂಜಿಘೃಕ್ಷುಃ = ಸರ್ವಸಂಹಾರವನ್ನು ಮಾಡ ಲಿಕ್ಕೆ ಇಚ್ಛಿಸಿದವನಾಗಿ, ಕ್ಷ್ಮಾಂಭೋಽನಲಾನಿಲವಿಯನ್ಮನಇಂದ್ರಿಯಾರ್ಥಭೂತಾದಿಭಿಃ, ಕ್ಷ್ಮಾ= ಭೂಮಿಯು ಅಭಿಮಾನಿದೇವತೆಯೂ, ಅಂಭಃ=ಜಲವು-ಜಲಾಭಿಮಾನಿದೇವತೆಯೂ, ಅನಲ= ಬೆಂಕಿಯು-ಅಗ್ನ್ಯಭಿಮಾನಿದೇವತೆಯೂ, ವಿಯತ್=ಆಕಾಶವು-ಆಕಾಶಾಭಿಮಾನಿದೇವತೆಯೂ, ಮನಃ=ಮನಸ್ಸು-ಮನಸ್ಸಿಗೆ ಅಭಿಮಾನಿಗಳಾದ ಇಂದ್ರ-ಕಾಮರೂ, ಇಂದ್ರಿಯ=ಇಂದ್ರಿಯಾಭಿಮಾನಿ ಗಳಾದ ಚಂದ್ರಾದಿದೇವತೆಗಳೂ, ಅರ್ಥ=ಇಂದ್ರಿಯ, ವಿಷಯಾಭಿಮಾನಿಗಳಾದ ಬೃಹಸ್ಪತ್ಯಾದಿ ದೇವತೆಗಳೂ, ಭೂತಾದಿಭಿಃ = ಭೂತಗಳಿಗೆ ಕಾರಣಭೂತವಾದ ತೈಜಸ-ತಾಮಸ-ವೈಕಾರಿಕ ಭೇದದಿಂದ ಮೂರು ವಿಧವಾದ ಅಹಂಕಾರಕ್ಕೂ ಅಭಿಮಾನಿಗಳಾದ ದೇವತೆಗಳಿಂದ, ಗರುಡ ಶೇಷಾದಿದೇವತೆಗಳಿಂದ, ಪರಿವೃತಃ = ಯುಕ್ತನಾಗಿ, (ಅಂದರೆ ಪರಿವಾರಭೂತರಾದ ದೇವತೆ ಗಳಿಂದ ಪ್ರವೇಶಕ್ಕಾಗಿ ಬಿಂಬರೂಪದಿಂದ ಅಂಗೀಕರಿಸಿಕೊಳ್ಳಲ್ಪಟ್ಟವನಾಗಿ) ಅವ್ಯಾಕೃತಂ= ನಿರ್ವಿಕಾರನಾದ ವಿಷ್ಣ್ವಾಖ್ಯಬ್ರಹ್ಮನನ್ನು, ವಿಶತಿ=ಪ್ರವೇಶಮಾಡುತ್ತಾನೋ, ಏವಂ=ಆಗ,

ಭಗವಂತಂ=ಭಗವತ್ಸಂಬಂಧಿಯಾದ ಲೋಕವನ್ನು, ಪರೇತ್ಯ=ಹೊಂದಿ, ಯೇ ಯೋಗಿನಃ= ಯಾವ ಯೋಗಿಗಳು, ಅನುಪ್ರವಿಷ್ಟಾಃ=ಪ್ರವೇಶಮಾಡಿರುವರೋ, ಜಿತಮರುನ್ಮನಸಃ = ಗೆಲ್ಲಲ್ಪಟ್ಟ ವಾಯು ಮನಸ್ಸುಳ್ಳವರೋ, ವಿರಾಗಾಃ=ಹೋಗಲ್ಪಟ್ಟ ರಾಗವುಳ್ಳವರೋ, ತೇ=ಅವರು, ಅಗತಾಭಿಮಾನಾಃ=ಹೋಗಲ್ಪಡದೆ ಇದ್ದ ಜೀವಭಾವವುಳ್ಳವರಾಗಿ, ತೇನೈವ=ಆ ಚತುರ್ಮುಖನಿಂದಲೇ, ಸಾಕಂ=ಕೂಡಿಕೊಂಡು, ಅಮೃತಂ = ಮರಣರಹಿತನಾದ, ಪುರುಷಂ = ಪೂರ್ಣಷಡ್ಗುಣಗಳುಳ್ಳ, ಪ್ರಧಾನಂ = ಸರ್ವಾಪೇಕ್ಷಯಾ ಉತ್ತಮನಾದ, ಬ್ರಹ್ಮ = ಪರಬ್ರಹ್ಮನನ್ನು, ಉಪಯಾಂತಿ=ಹೊಂದುತ್ತಾರೆ. ಯೋಗಿನಃ=ಯೋಗಿಗಳು, ಭಗವಂತಂ=ಶ್ರೀ ಹರಿಯನ್ನು, ಅನುಪ್ರಾಪ್ತಾ ಅಪಿ=ಹೊಂದಿದವರಾದಾಗ್ಯೂ, ಬ್ರಹ್ಮಣಾ = ಚತುರ್ಮುಖನಿಂದ, ಸಹ ತು= ಕೂಡಿಕೊಂಡೇ, ಲಿಂಗಭಂಗೇನ = ಲಿಂಗಭಂಗದಿಂದ, ಅಥವಾ ಲಿಂಗಭಂಗನಿಮಿತ್ತದಿಂದ, ಪರಮಂ=ಉತ್ತಮವಾದ, ಮೋಕ್ಷಂ=ಮುಕ್ತಿಯನ್ನು, ಆನಂದಾವಿರ್ಭಾವವನ್ನು, ಆಯಾಂತಿ= ಹೊಂದುತ್ತಾರೆ. ಪರಂ=ಸರ್ವೋತ್ತಮನಾದ, ದೇವಂ=ಶ್ರೀ ಹರಿಯನ್ನು, ಪ್ರಾಪ್ತಾ ಅಪಿ= ಹೊಂದಿದವರಾದಾಗ್ಯೂ, ಬ್ರಹ್ಮಣಾ = ಚತುರ್ಮುಖನಿಂದ, ಸಹೈವ = ಕೂಡಿಕೊಂಡೇ, ಲಿಂಗಸ್ಯ ಭಂಗತಃ=ಲಿಂಗಶರೀರದ ಭಂಗದೆಶೆಯಿಂದ, ಪೂರ್ಣಾಂ=ಪರಿಪೂರ್ಣವಾದ, ಆನಂದ ವ್ಯಕ್ತಿಂ = ಆನಂದಾಭಿವ್ಯಕ್ತಿಯನ್ನು, ಆಯಾಂತಿ = ಹೊಂದುತ್ತಾರೆ. ಇತಿ=ಹೀಗೆ, ಶ್ರುತಿ ಪುರಾಣೋಕ್ತಿಬಲಾತ್=ಶ್ರುತಿ-ಪುರಾಣಗಳ ಉಕ್ತಿಯ ಬಲದಿಂದ, ತತ್=ಅದು ಹಿಂದೆ ಹೇಳಿದ ಪ್ರಮೇಯವು, ವಿಜ್ಞಾಯತೇ=ತಿಳಿಯಲ್ಪಡುತ್ತದೆ ॥ ೮ ॥ ೯ ॥ ೧೦ ॥ ೧೧ ॥

ಹಾಗಾದರೆ ಹೇಗೆ ೨ನೇ-೩ನೇ ಪಾದಗಳಲ್ಲಿ ಪ್ರತಿಪಾದ್ಯಮಾನವಾದ ಉತ್ಕ್ರಮಾದಿಗಳು ಅಸಾಧಾರಣವೋ ಹಾಗೆಯೇ ನಾಲ್ಕನೇ ಪಾದದಲ್ಲಿ ಹೇಳಲ್ಪಟ್ಟ ಭೋಗವು ಅಸಾಧಾರಣವೋ, ಅಥವಾ ಪ್ರಥಮಪಾದದಲ್ಲಿ ಹೇಳಲ್ಪಟ್ಟ ಕರ್ಮಕ್ಷಯದಂತೆ ಸಾಧಾರಣವೋ ಎಂದು ಅಪೇಕ್ಷಿಸಿದರೆ—

ಮೂ ॥ ಭೋಗಸ್ತು ಸರ್ವದೇವಾನಾಂ ನರಾದೀನಾಂ ಚ ವಿದ್ಯತೇ ॥ ೧೨ ॥
ತತ್ರ ಪ್ರವೇಶೋ ದೇವಾನಾಮುತ್ತರೋತ್ತರತಃ ಕ್ರಮಾತ್ ।
ಉಚ್ಯತೇ ದೇಹಗಾನಾಂ ಚ ವೃತ್ತೀನಾಮೇವಮೇವ ತು ॥ ೧೩ ॥
ತತ್ರ ಮೋಕ್ಷಸ್ವರೂಪಂ ತು ವಾದಿನಃ ಪ್ರತಿಭಾಶ್ರಯಾತ್ ।
ನಾನಾ ವದಂತಿ ಪುಂಸಾಂ ಹಿ ಮತಯೋ ಗುಣಭೇದತಃ ॥ ೧೪ ॥
ಪೃಥಕ್ ಪೃಥಕ್ ಪ್ರಜಾಯಂತೇ ತಮಸ್ಯೈವಾನ್ಯಥಾ ಮತಿಃ ।
ರಜಸಾ ಮಿಶ್ರಬುದ್ಧಿತ್ವಂ ಸತ್ವೇನೈವ ಯಥಾ ಮತಿಃ ॥ ೧೫ ॥

ಅ ॥ ಭೋಗಸ್ತು=ಭೋಗ(ಸ್ವರೂಪಾನಂದಾನುಭವ)ವಾದರೂ, ಸರ್ವದೇವಾನಾಂ= ಎಲ್ಲಾ ದೇವತೆಗಳಿಗೂ, ನರಾದೀನಾಂ ಚ = ಮನುಷ್ಯರೇ ಮೊದಲಾದವರಿಗೂ, ವಿದ್ಯತೇ = ಇರುತ್ತದೆ. (ದೇವತೆಗಳಿಗೆ ಮೋಕ್ಷವೆಂದು ಪ್ರಥಮ ಭಾಷ್ಯದ ತಾತ್ಪರ್ಯವನ್ನು ಹೇಳುತ್ತಾರೆ.) ತತ್ರ=ಎರಡನೇ ಪಾದದಲ್ಲಿ ಪ್ರಥಮದಲ್ಲಿ, ದೇವಾನಾಂ = ದೇವತೆಗಳಿಗೆ, ಉತ್ತರೋತ್ತರತಃ = ಉತ್ತರೋತ್ತರದಲ್ಲಿ, ಕ್ರಮಾತ್=ಕ್ರಮದಿಂದ, ಪ್ರವೇಶಃ=ಪ್ರವೇಶವು, ಉಚ್ಯತೇ = ಹೇಳಲ್ಪಡುತ್ತದೆ. ಆದುದರಿಂದ, ಇದು ಪ್ರಥಮದಲ್ಲಿ ನಿರ್ದಿಷ್ಟವಾಗಿದೆ.) (ಹಾಗಾದರೆ ದೇವತೆಗಳಿಗೆ ಉತ್ತರೋತ್ತರದಲ್ಲಿ ಪ್ರವೇಶವು ಹೇಳಲ್ಪಡುತ್ತದೆ ಎನ್ನುವುದು ಯುಕ್ತವಲ್ಲ. 'ವಾಙ್ಮನಸಿ' ಇತ್ಯಾದಿಸೂತ್ರಗಳಲ್ಲಿ ದೇವತಾ ವಾಚಕಪದಗಳು ಶ್ರುತಗಳಾಗಲಿಲ್ಲ. ವಾಗಾದಿ ಶಬ್ದಗಳು

ವಾಗಾದ್ಯಭಿಮಾನಿ ಉಮಾದಿ ದೇವತೆಗಳಿಗೆ ಉಪಲಕ್ಷಣಗಳು ಎಂದು ಹೇಳುವುದಾದರೆ— ಆಗ ವಾಚಕವಾದ ಉಮಾ ಇತ್ಯಾದಿ ಪದವಿರಲು ಲಾಕ್ಷಣಿಕವಾದ ವಾಕ್ ಇತ್ಯಾದಿ ಪದಪ್ರಯೋಗಕ್ಕೆ ಪ್ರಯೋಜನವನ್ನು ಹೇಳಬೇಕು. ಅಥವಾ ವಾಗಾದಿ ಶಬ್ದಗಳು ಪಾರ್ವತ್ಯಾದಿ ದೇವತೆಗಳಿಗೆ ವಾಚಕಗಳೇ ಎನ್ನುವಪಕ್ಷವಾದರೆ ಆದಾಗ್ಯೂ ಪ್ರಸಿದ್ಧವಾದ ಉಮಾದಿಶಬ್ದವನ್ನು ಬಿಟ್ಟು ಅಪ್ರಸಿದ್ಧವಾದ ವಾಗಾದಿ ಪದವನ್ನು ಪ್ರಯೋಗಮಾಡುವ ವಿಷಯದಲ್ಲಿ ಪ್ರಯೋಜನವನ್ನು ಹೇಳಲೇಬೇಕು. ಎಂದರೆ –) ದೇಹಗಾನಾಂ ಚ=ಶರೀರದಲ್ಲಿರತಕ್ಕ, ವೃತ್ತೀನಾಂ = ಜಡಗಳಾದ ವಾಗಾದಿಗಳಿಗೆ, ಏವಮೇವತು=ಇದೇರೀತಿಯಾಗಿ. (ಅಂದರೆ— ಹೇಗೆ ಮುಕ್ತಿಯನ್ನು ಹೊಂದತಕ್ಕ ದೇವತೆಗಳಿಗೇನೇ ಉತ್ತರೋತ್ತರ ಪ್ರವೇಶವೋ, ಅದರಂತೆಯೇ ಶರೀರದಲ್ಲಿರತಕ್ಕ ಆಯಾವ ದೇವತೆಗಳಿಂದ ಅಭಿಮನ್ಯಮಾನಗಳಾದ ಜಡಭೂತಗಳಾದ ವಾಗಾದಿಗಳಿಗೆ ಉತ್ತರೋತ್ತರದಲ್ಲಿ ಮರಣಕಾಲದಲ್ಲಿ ಲಯವಾಗುತ್ತದೆ ಎನ್ನುವುದನ್ನೂ ಕೂಡ ಪ್ರಸಂಗಸಂಗತಿಯಿಂದ ತಿಳಿಸಿ ಕೊಡುವುದಕ್ಕಾಗಿ ವಾಗಾದಿ ಪದಪ್ರಯೋಗವು ) ತು=ವಾಗಾದಿಶಬ್ದಗಳು ದೇವತೆಗಳಿಗೆ ವಾಚಕಗಳೇ ಆಗಿವೆ ಎನ್ನುವುದು ಪ್ರಸಿದ್ಧವು ) (ಭಗವಜ್ಞಾನ ಪ್ರಾರಬ್ಧಕರ್ಮಭೋಗ ಇವುಗಳಿಂದ ನಿವೃತ್ತಗಳಾದ ಎಲ್ಲಾ ಅನಿಷ್ಟಕರ್ಮಗಳುಳ್ಳವರಾಗಿ ತಮ್ಮಕ್ಕಿಂತ ಉತ್ತಮರಲ್ಲಿ ಪ್ರವೇಶದಿಂದಲಾಗಲೀ, ಬ್ರಹ್ಮನಾಡಿಯಿಂದ ಉತ್ಕ್ರಮಣದಿಂದಲಾಗಲೀ, ಸ್ಥೂಲದೇಹವನ್ನು ಬಿಟ್ಟವರಾಗಿ ತಮಗೆ ಉಚಿತವಾದ ಮಾರ್ಗದಿಂದಲಾಗಲೀ, ಅರ್ಚಿರಾದಿ ಮಾರ್ಗದಿಂದಲಾಗಲೀ, ವೈಕುಂಠಲೋಕದಲ್ಲಿ ಆವಾಸ ಮಾಡಿಕೊಂಡು ಇರತಕ್ಕ ಶ್ರೀ ಹರಿಯನ್ನು ಚತುರ್ಮುಖನಿಂದ ಕೂಡಿಕೊಂಡು ಹೊಂದಿದವರು ಚತುರ್ಮುಖನಿಂದ ಕೂಡಿಕೊಂಡೇ ಲಿಂಗಶರೀರವನ್ನು ಭೇದಿಸಿಕೊಂಡು, ಪ್ರಕೃತಿಸಂಪರ್ಕಲೇಶವೂ ಇಲ್ಲದಿದ್ದವರಾಗಿ ಸಂಪೂರ್ಣವಾಗಿ ಅನಿಷ್ಟವನ್ನು ಕಳಕೊಂಡವರಾಗಿ ಚೆನ್ನಾಗಿ ಆವಿರ್ಭೂತವಾದ ಸ್ವರೂಪಾನಂದಾದಿ ಗುಣಗಳುಳ್ಳವರಾಗಿ, ಮುಕ್ತಸ್ಥಾನದಲ್ಲಿರತಕ್ಕ ಶ್ರೀ ಹರಿಯ ಸಮೀಪದಲ್ಲಿಯೇ ಶ್ರೀ ಹರಿಯನ್ನು ಉಪಾಸನಾಮಾಡಿದವರಾಗಿ, ಸ್ವರೂಪಭೂತವಾದ ದೇಹದಿಂದಲಾಗಲೀ ಕ್ರೀಡೆಯಿಂದ ಸ್ವೀಕರಿಸಲ್ಪಟ್ಟ ಶುದ್ಧಸತ್ವಾತ್ಮಕ ಶರೀರಗಳಿಂದಲಾಗಲೀ, ಸಂಕಲ್ಪಮಾತ್ರದಿಂದ ಸಾಧ್ಯಗಳಾದ ದಿವ್ಯಭೋಗಗಳನ್ನು ತಾರತಮ್ಯದಿಂದಲೇ ಭೋಗಿಸುವವರಾಗಿ ಯಾವಾಗಲೂ ಪುನಃ ಹಿಂದೆ ತಿರುಗಿ ಬರುವುದಿಲ್ಲ ಎನ್ನುವ ಸಿದ್ಧಾಂತಿಗಳಿಗೆ ಅಭಿಮತವಾದ ಮೋಕ್ಷಸ್ವರೂಪವು '**ಕರ್ಮಕ್ಷಯಸ್ತಥೋತ್ಕ್ರಾಂತಿಃ**' ಇತ್ಯಾದಿಗಳಿಂದ ಹೇಳಲ್ಪಟ್ಟದ್ದು ನಿಶ್ಚಿತವಾಗಿದ್ದರೆ ಈ ಪಾದಾರ್ಥವೂ ಸಂಗತಿಯೂ ಕೂಡ ಹೀಗೆ ಕೂಡುತ್ತಿತ್ತು. ಹೀಗೆ ಅಲ್ಲವೇ ಅಲ್ಲ. ಆಯಾಯ ವಾದಿಗಳು ಮೋಕ್ಷಸ್ವರೂಪವನ್ನು ಬೇರೆಪ್ರಕಾರವೇ ಹೇಳಿರುವರು. ವಾದಿಗಳ ವಿವಾದವು ಇದ್ದರೆ ಸಂಶಯವು ಬಂದೇಬರುವುದು ಎಂದರೆ - ವಾದ್ಯಂತರರು ಹೇಳಿರುವ ಮೋಕ್ಷಸ್ವರೂಪವನ್ನು ನಿರಾಕರಿಸುವುದಕ್ಕಾಗಿ ಅನುವಾದಮಾಡುತ್ತಾರೆ. ತತ್ರ=ಸೂತ್ರಕಾರರಿಂದ ಹಿಂದೆ ಹೇಳಿದ ಲಕ್ಷಣಗಳುಳ್ಳ ಮೋಕ್ಷವು ಶ್ರುತ್ಯಾದಿಪ್ರಮಾಣಗಳಿಂದ ಉಪಪಾದಿಸಿಕೊಳ್ಳಲ್ಪಡುತ್ತಿರಲು, ವಾದಿನಸ್ತು=ಆಯಾವ ವಾದಿಗಳಾದರೂ, ಮೋಕ್ಷಸ್ವರೂಪಂ=ಮುಕ್ತಿಸ್ವರೂಪವನ್ನು, ಪ್ರತಿಭಾಶ್ರಯಾತ್=ಪ್ರಜ್ಞಾವಿಶೇಷದ ಆಶ್ರಯದಿಂದ ಅಂದರೆ— ತಮ್ಮ ತಮ್ಮ ಉತ್ಪ್ರೇಕ್ಷಾಮಾತ್ರದಿಂದ, ನಾನಾ=ಅನೇಕಪ್ರಕಾರವಾಗಿ, ವದಂತಿ=ಹೇಳುತ್ತಾರೆ. (ಆದುದರಿಂದ ನಾವು ಹಿಂದೆ ಹೇಳಿದ ಮುಕ್ತಿಸ್ವರೂಪವು ಶ್ರುತ್ಯಾದಿ ಪ್ರಮಾಣ ಪ್ರಮಿತವಾಗಿರುವುದರಿಂದ ಅಪ್ರಮಾಣ ಮೂಲಭೂತಗಳಾದ ಕೇವಲ ಉತ್ಪ್ರೇಕ್ಷೆಯೇ ಕಾರಣವಾಗಿವುಳ್ಳ ಪರರು ಹೇಳುವ ಮೋಕ್ಷವಾದಗಳಿಗೆ ನಾವು ಹೇಳುವ ಮೋಕ್ಷಸ್ವರೂಪದಿಂದ ಸಾಮ್ಯವಿಲ್ಲದಿರುವುದರಿಂದ ಸಂಶಯಕ್ಕೆ ಅವಕಾಶವಿಲ್ಲ.) (ಹಾಗಾದರೆ— ನೀವು ಹೇಳುವ ಮೋಕ್ಷಸ್ವರೂಪದಲ್ಲಿ ಪ್ರಮಾಣಗಳು ಇದ್ದರೆ ಆಯಾವ

ವಾದಿಗಳಿಗೆ ಆ ಪ್ರಮಾಣದಿಂದ ಅಂತಹ ಜ್ಞಾನಗಳು ಏಕೆ ಹುಟ್ಟುವುದಿಲ್ಲ? ಪ್ರಮಾಣಾಭಾಸಗಳಿಂದ ಆ ವಾದಿಗಳು ವಿಮೋಹಿತರಾಗಿರುತ್ತಾರೆ. ಎಂದರೆ—) ತತ್ವಜ್ಞರೆಂದು ಅಭಿಮತರಾದವರೂ ಕೂಡ ಆ ಪ್ರಮಾಣಾಭಾಸಗಳಿಂದ ದೋಷವು ಕಂಡದರಿಂದ ಏಕೆ ವಿಮೂಢರಾಗಲಿಲ್ಲ. ತತ್ವಜ್ಞರು ಪ್ರಮಾಣಾಭಾಸದಲ್ಲಿ ದೋಷಗಳನ್ನು ಕಂಡಿದ್ದಾರೆಂದರೆ ಇತರರೂಕೂಡ ಏಕೆ ದೋಷಗಳನ್ನು ನೋಡುವುದಿಲ್ಲ. ಪ್ರಮಾಣಗಳಿಂದ ತತ್ವಜ್ಞಾನೋದಯವೂ ಕೂಡ ಇಬ್ಬರಿಗೂ ಸಮಾನವೇ ಎಂದರೆ — (ವಾದ್ಯಂತರರಿಗೆ ವಿಪರೀತಜ್ಞಾನದಲ್ಲಿ ಮೂಲಕಾರಣವನ್ನು ಹೇಳುತ್ತಾರೆ.) ಪುಂಸಾಂ=ಪುರುಷರಿಗೆ, ಗುಣಭೇದತಃ = ಗುಣವಿಶೇಷದೆಶೆಯಿಂದ, ಮತಯಃ = ಬುದ್ಧಿಗಳು, ಪೃಥಕ್ ಪೃಥಕ್=ಪ್ರತ್ಯೇಕ ಪ್ರತ್ಯೇಕವಾಗಿ, ಪ್ರಜಾಯಂತೆ=ಹುಟ್ಟುತ್ತವೆ. ಹಿ=' **ಜ್ಞಾನಂ ಕರ್ಮಚ ಕರ್ತಾ** ' ಇದು ಮೊದಲಾದ ಪ್ರಮಾಣ ಪ್ರಸಿದ್ಧವು. (ಇದನ್ನು ವಿಶದೀಕರಿಸುತ್ತಾರೆ) ತಮಸೈವ=ತಮೋಗುಣದಿಂದಲೇ, ಅನ್ಯಥಾ ಏವ ಮತಿಃ=ಮಿಥ್ಯಾಮತಿಯು, ರಜಸಾ=ರಜೋಗುಣಗಳಿಂದ, ಮಿಶ್ರಬುದ್ಧಿತ್ವಂ=ಮಿಶ್ರವಾದ (ಸಂಶಯಾತ್ಮಕವಾದ) ಬುದ್ಧಿಯುಳ್ಳತನವು ಆಗುತ್ತದೆ. (ತಮೋಗುಣವು ಪ್ರಮಾಣಗಳಲ್ಲಿ ಮನಸ್ಸಿನ ಪ್ರವೃತ್ತಿಯನ್ನು ಪ್ರತಿಬಂಧಿಸಿ ಪ್ರಮಾಣಾಭಾಸಗಳಲ್ಲಿರತಕ್ಕ ದೋಷಗಳನ್ನು ಆಚ್ಛಾದನಮಾಡಿ ವಿಪರೀತ ಜ್ಞಾನವನ್ನು ಹುಟ್ಟಿಸುತ್ತದೆ.) ಯಥಾ=ಯಥಾರ್ಥವಾದ, ಮತಿಃ=ಬುದ್ಧಿಯು ಸತ್ವೇನೈವ = ಸತ್ವಗುಣದಿಂದಲೇ ಆಗುತ್ತದೆ. ॥ ೧೨ ॥ ೧೩ ॥ ೧೪ ॥ ೧೫ ॥

ಯಥಾರ್ಥಜ್ಞಾನವು ಸತ್ವಗುಣದಿಂದ ಆಗುತ್ತದೆಂದು ಹೇಳಲ್ಪಟ್ಟಿತು. ಅದಕ್ಕೆ ಮುಕ್ತರಲ್ಲಿ ಆದರೂ ಅಪವಾದವನ್ನು ಹೇಳುತ್ತಾರೆ—

**ಮೂ ॥ ಗುಣಾತೀತಾ ವಿಮುಕ್ತಾನಾಂ ಮತಿಃ ಶುದ್ಧಚಿತಿರ್ಯತಃ ।**
**ಸಮ್ಯಗೇವಾಥ ನಿತ್ಯಾ ಚ ತತ್ತನ್ಮಾಹಾತ್ಮ್ಯಯೋಗತಃ ॥ ೧೬ ॥**
**ಬಹುಲಾ ಚಾತಿವಿಶದಾ ಸ್ಪಷ್ಟಾ ಚೈವ ಶ್ರಿಯೋ ಮತಿಃ ।**
**ಮಹಾಶುದ್ಧಚಿತಿತ್ವೇನ ತತೋಽಪ್ಯತಿಮಹಾಚಿತಿಃ ॥ ೧೭ ॥**
**ಅಶೇಷೋರುವಿಶೇಷಾಣಾಮತಿಸ್ಪಷ್ಟತಯಾ ದೃಶಿಃ ।**
**ನಿತ್ಯಮೇಕಪ್ರಕಾರಾ ಚ ನಾರಾಯಣಮತಿಃ ಪರಾ ॥ ೧೮ ॥**

ಅ ॥ ಯದ್ಯಪಿ, ವಿಮುಕ್ತಾನಾಂ=ಮುಕ್ತಿಯನ್ನು ಹೊಂದಿದವರ, ಮತಿಃ=ಸ್ವರೂಪಭೂತವಾದ ಬುದ್ಧಿಯು, ಸಮ್ಯಗೇವ = ಯಥಾರ್ಥವೇ ಆಗಿದೆ. ಅಥ = ಆದಾಗ್ಯೂ, ಗುಣಾತೀತಾ = ಸತ್ವಗುಣದಿಂದ ಹುಟ್ಟಿದ್ದು ಆಗುವುದಿಲ್ಲ. (ಮುಕ್ತರ ಜ್ಞಾನವು) ಯತಃ = ಯಾವಕಾರಣದಿಂದ, ಶುದ್ಧಚಿತಿಃ = ಸ್ವಾಭಾವಿಕ ದೋಷರಹಿತವಾದ ಚೇತನರೂಪವೋ, ನಿತ್ಯಾ ಚ=ನಿತ್ಯವೂ ಆಗಿದೆಯೋ, (ಅಂದರೆ— ಜಡರೂಪವಾದ ಜ್ಞಾನವು ಯಾವುದರಿಂದಲಾದರೂ ಹುಟ್ಟುತ್ತದೆ; ಚೇತನವು ಹುಟ್ಟುವುದಿಲ್ಲ. ಹಾಗೆಯೇ ಅನಿತ್ಯವಾದುದೇ ಹುಟ್ಟುತ್ತದೆ; ನಿತ್ಯವು ಹುಟ್ಟುವುದಿಲ್ಲ.) (ದೈತ್ಯರ ಸ್ವರೂಪಜ್ಞಾನವು ಅಯಥಾರ್ಥವಾದರೂ ಮುಕ್ತರಾದ ದೇವಾದಿಗಳ ಸ್ವರೂಪಜ್ಞಾನವು ಯಥಾರ್ಥವು. ಹೇಗೆಂದರೆ- ಶುದ್ಧಾ=ಸ್ವಾಭಾವಿಕ ದೋಷರಹಿವಾದುದು ಎಂದು ಹೇಳಲ್ಪಟ್ಟದೆ. ಸ್ವರೂಪೋಪಾಧಿಗಳಲ್ಲಿರತಕ್ಕ ದೋಷಗಳೇ ಕಾರಣವಾಗಿ ಉಳ್ಳದ್ದು ದೈತ್ಯರ ಜ್ಞಾನಗಳಿಗೆ ಅಯಾಥಾರ್ಥ್ಯವು). (ಜ್ಞಾನಗಳಿಗೆ ವಿಷಯನಿಯಮವೂ ವೈಶದ್ಯವಿಶೇಷವೂಕೂಡ ಕರಣನಿಮಿತ್ತಕವಾದುದು. ಅದರಲ್ಲಿ ಮುಕ್ತರ ಜ್ಞಾನವೂ ನಿತ್ಯವಾದರೆ

ನಿರ್ವಿಷಯಕವಾದುದಾಗಲೀ ಸರ್ವವಿಷಯಕವಾದುದಾಗಲೀ ಆಗಬೇಕು. ಇದೇ ಪ್ರಕಾರ ವೈಶದ್ಯದಲ್ಲಿಯೂ ಇಟ್ಟುಕೊಳ್ಳಬೇಕು. ಆ ವಿಷಯದಲ್ಲಿ ಹೇಳುತ್ತಾರೆ.) ತತ್ತನ್ಮಾಹಾತ್ಮ್ಯ ಯೋಗತಃ = ಬ್ರಹ್ಮಾದಿ ಮುಕ್ತರಿಗೆ ತಮ್ಮ ತಮ್ಮ ಮಹತ್ವ ತಾರತಮ್ಯಾನುಕೂಲ್ಯದಿಂದ (ಜ್ಞಾನಕ್ಕೆ ಮಹತ್ವವು.) ಅಥವಾ ಅವರವರ ಯೋಗ್ಯತಾರೂಪವಾದ ಮಾಹಾತ್ಮ್ಯವೇ ನಿಮಿತ್ತವು. ಅದನ್ನು ಅನುಸರಿಸಿ, ಬಹುಲಾ = ಸರ್ವದೇಶಗಳಲ್ಲಿಯೂ ವ್ಯಾಪಿಸಿಕೊಂಡು ಇರತಕ್ಕದು. ಅಥವಾ ಬಹುಲಾ = ಬಹ್ವರ್ಥ ವಿಷಯಕವು, ಅತಿವಿಶದಾ = ಅನ್ಯಥಾಜ್ಞಾನಲೇಶದಿಂದಲೂ ಮಿಶ್ರಿತವಾಗದಿರುವುದು; ಅಥವಾ ಅತ್ಯಂತ ಸ್ಪಷ್ಟವಾದುದು. (ಶ್ರೀ ದೇವಿಯಲ್ಲಿಯೂ ಕೂಡ ಹಿಂದೆಹೇಳಿದ್ದಕ್ಕೆ ಅಪವಾದವನ್ನು ಹೇಳುತ್ತಾರೆ.) ಶ್ರಿಯಃ=ಲಕ್ಷ್ಮೀದೇವಿಯ, ಮತಿಃ=ಬುದ್ಧಿಯು, ಸ್ಪಷ್ಟಾ ಚ=ಬಹುವಿಶೇಷ ವಿಷಯಕವು ಅಥವಾ ಇತರರಕ್ಕಿಂತ ಅತಿಶಯಾರ್ಥ ವಿಷಯಕವು. ಶ್ರಿಯಃ=ಲಕ್ಷ್ಮೀದೇವಿಯ, ಮತಿಃ=ಬುದ್ಧಿಯು, ಮಹಾಶುದ್ಧಚಿತಿತ್ವೇನ=ಯಾವಾಗಲೂ ದೋಷ ಸಂಬಂಧವಿಲ್ಲದಿರುವ ಸ್ವಾಭಾವಿಕದೋಷರಹಿತವಾದ ಚೈತನ್ಯರೂಪವಾಗಿದ್ದುದರಿಂದ, ಸಮ್ಯಕ್ತ್ವೇ ವಿದ್ವಾಗ್ನ್ಯೋ, ಗುಣಾತೀತಾ = ಸತ್ವಗುಣಜನ್ಯವಾಗುವುದಿಲ್ಲ. ಸ್ಪಷ್ಟೈವ = ಮುಕ್ತರ ಜ್ಞಾನ ಕ್ಕಿಂತಲೂ ಅತಿಶಯವಾಗಿ ಸ್ಪಷ್ಟವಾದುದು. (ಭಗವಂತನ ಜ್ಞಾನದಲ್ಲಿಯೂ ಅಪವಾದವನ್ನು ಹೇಳುತ್ತಾರೆ.) ನಾರಾಯಣಮತಿಶ್ಚ = ಶ್ರೀ ನಾರಾಯಣನ ಜ್ಞಾನವಾದರೂ, (ಸಮ್ಯಕ್ತ್ವೇ ವಿದ್ವಾಗ್ನ್ಯೋ) ಪರಾ = ಗುಣಗಳಿಂದ ಹುಟ್ಟಿದ್ದಲ್ಲ. ತತೋಽಪಿ = ಲಕ್ಷ್ಮೀಜ್ಞಾನಕ್ಕಿಂತಲೂ, ಅತಿಮಹಾಚಿತಿಃ=ಅತಿಶಯವಾಗಿ ಮಹತ್ತಾದ (ಯಾವಾಗಲೂ ದೋಷಸಂಬಂಧವಿಲ್ಲದಿರುವ) ಸ್ವಾಭಾವಿಕ ದೋಷರಹಿತವಾದ ಚೇತನಸ್ವರೂಪವು.) ಅಶೇಷೋರುವಿಶೇಷಾಣಾಂ = ಎಲ್ಲಾ ಅನಂತಗಳಾದ ವಿಶೇಷ (ಪದಾರ್ಥ)ಗಳನ್ನ, ದೃಶಿಃ=ವಿಷಯೀಕರಿಸತಕ್ಕದು. ಅತಿಸ್ಪಷ್ಟತಯಾ= ಅತ್ಯಂತ ಸ್ಪಷ್ಟವಾಗಿ, ಅಶೇಷಪದಾರ್ಥ ವಿಷಯಕವಾದುದು. ಅತಿಬಹುಲಾ=ಅತ್ಯಂತ ಬಹ್ವರ್ಥ ವಿಷಯಕವು. ಅತಿವಿಶದಾ = ನಿರತಿಶಯ ಸ್ಪಷ್ಟವಾದುದು, ನಿತ್ಯಂ = ನಿರಂತರದಲ್ಲಿಯೂ, ಏಕಪ್ರಕಾರಾ = ಒಂದೇಪ್ರಕಾರವುಳ್ಳದ್ದು. ಅಂದರೆ— ಉತ್ಪತ್ತಿವಿನಾಶರಹಿತವಾದುದು. ॥ ೧೬ ॥ ೧೭ ॥ ೧೮ ॥

ಮೂ ॥ ಸೂರ್ಯಪ್ರಭಾವದಖಿಲಂ ಭಾಸಯಂತೀ ನಿರಂತರಾ ।
ನಿರ್ಲೇಪಾ ವೀತದೋಷಾ ಚ ನಿತ್ಯಮೇವಾವಿಕಾರಿಣೀ ॥ ೧೯ ॥
ವಿಶೇಷಾಂಸ್ತದ್ಗತಾಂಸ್ತ್ಯಕ್ತ್ವಾ ಪ್ರಾಯಸ್ತಲ್ಲಕ್ಷಣಾ ಶ್ರಿಯಃ ।
ತಥೈವ ಸ್ಪಷ್ಟತಾಭಾವಾತ್ತತ್ತಂತ್ರತ್ವಾತ್ತು (ಚ್ಚ) ಕೇವಲಂ ॥ ೨೦ ॥
ನ ತಾದೃಶೀ ಬ್ರಹ್ಮಣಸ್ತು ಪ್ರಾಯೇಣೈ(ಯ ಏ)ವಂ ಶ್ರಿಯೋ ಯಥಾ ।
ಮುಕ್ತಾನಾಂ ತು ತದನ್ಯೇಷಾಂ ಸಮುದ್ರತರಲೋಪಮಾ ॥ ೨೧ ॥

ಅ ॥ (ಕೆಲವರು ಈಶ್ವರಜ್ಞಾನವು ಒಂದೇ ಎಂದು ಹೇಳುತ್ತಾರೆ. ಇತರರು ಅನೇಕ ಗಳು ಎನ್ನುತ್ತಾರೆ. ಅದರ ವಿಚಾರಕ್ಕಾಗಿ) ನಿರಂತರಾ = ಭೇದರಹಿತವಾದುದು, ಅಥವಾ ವಿಶ್ವವಿಚ್ಛೇದರಹಿತವಾದುದು. ಅಂದರೆ— ಸರ್ವಕಾಲದಲ್ಲಿಯೂ ವ್ಯಾಪಿಸಿಕೊಂಡು ಇರತ ಕ್ಕದು. ನಿರ್ಲೇಪಾ=ಕರ್ಮಸಂಬಂಧ ರಹಿತವಾದುದು. ವೀತದೋಷಾ=ಅನ್ಯಥಾ ಜ್ಞಾನ ಮಿಶ್ರತ್ವಾದಿ ದೋಷರಹಿತವಾದುದು. (ಹಾಗಾದರೆ ಆವಾವ ಪದಾರ್ಥಗಳು ಜ್ಞಾತಗಳಾಗು ತ್ತಿರಲು ಜ್ಞಾನವೂ ವಿಕಾರವನ್ನು ಹೊಂದುತ್ತದೋ ಏನು ಎಂದರೆ— ಇಲ್ಲವೆನ್ನುತ್ತಾರೆ.)

ನಿತ್ಯಂ=ನಿರಂತರದಲ್ಲಿಯೂ, ಅವಿಕಾರಿಣ್ಯೇವ=ವಿಕಾರವಿಲ್ಲದಿರುವುದೇ. (ಹಾಗಾದರೆ ಆಯಾವ ವಸ್ತುಗಳನ್ನು ವಿಷಯೀಕರಿಸುವುದು. ಹೇಗೆಂದರೆ—) ಸೂರ್ಯಪ್ರಭಾವತ್ = ಸೂರ್ಯನ ಪ್ರಭೆಯಂತೆ, ಅಖಿಲಂ=ಎಲ್ಲವನ್ನು, ಭಾಸಯಂತೀ=ಪ್ರಕಾಶಿಸತಕ್ಕದು. (ಅಂದರೆ— ಹೇಗೆ ಸೂರ್ಯನ ಪ್ರಭೆಯು ತಾನು ನಿರ್ವಿಕಾರವಾದಾಗ್ಯೂ ಪ್ರಾಪ್ತಗಳಾದ ಆಯಾವ ವಿಷಯಗಳನ್ನು ಪ್ರಕಾಶಪಡಿಸುತ್ತದೋ ಹಾಗೆಯೇ ಇದೂಕೂಡ.) (ಇಲ್ಲಿ ವಿಶೇಷವೇ ನಿರ್ವಾಹಕವು.) (ಈ ವಿಶೇಷಗಳನ್ನು ಲಕ್ಷ್ಮೀಜ್ಞಾನದಲ್ಲಿಯೂ ಅತಿದೇಶಮಾಡುತ್ತಾರೆ.) ತದ್ಗತಾನ್=ಶ್ರೀ ಹರಿಯಲ್ಲಿರತಕ್ಕ, ವಿಶೇಷಾನ್=ಅಶೇಷ ವಿಶೇಷಗಳನ್ನು, ತ್ಯಕ್ತ್ವಾ=ಬಿಟ್ಟು ಬಿಟ್ಟು, (ಅಂದರೆ ಭಗವದ್ಗತ ಅಶೇಷ-ವಿಶೇಷ ವಿಷಯೀಕಾರಿತ್ವವನ್ನು ಬಿಟ್ಟು) ಶ್ರಿಯಃ=ಲಕ್ಷ್ಮೀದೇವಿಯ, ಮತಿಃ=ಜ್ಞಾನವು, ಪ್ರಾಯಃ=ಪ್ರಾಯಶಃ, ತಲ್ಲಕ್ಷಣಾ = ಆ ಭಗವಜ್ಞಾನ ಲಕ್ಷಣಗಳುಳ್ಳದ್ದೆಂದು, (ತಿಳಿಯತಕ್ಕದು) (ಶ್ರೀ ಹರಿಯಲ್ಲಿರತಕ್ಕ ಅಶೇಷ ವಿಶೇಷ ವಿಷಯೀಕಾರಿತ್ವವನ್ನು ಬಿಟ್ಟು ಇತರ ಧರ್ಮಗಳುಳ್ಳದ್ದೆಂದು ತಿಳಿಯಬೇಕು.) (ಪ್ರಾಯಃ ಎನ್ನುವುದರ ತಾತ್ಪರ್ಯವನ್ನು ಹೇಳುತ್ತಾರೆ.) ತಥೈವ=ಹೇಗೆ ಭಗವಂತನ ಜ್ಞಾನಕ್ಕೆ ನಿರತಿಶಯ ಸ್ಪಷ್ಟತ್ವವೋ ಹಾಗೆಯೇ, ಸ್ಪಷ್ಟತಾಭಾವಾತ್=ಸ್ಪಷ್ಟತ್ವವಿಲ್ಲದಿರುವುದರಿಂದ, ಕೇವಲಂ=ಮುಖ್ಯವಾಗಿ, ತತ್ತಂತ್ರತ್ವಾಚ್ಚ=ಭಗವನ್ಮಾತ್ರಾಧೀನತ್ವವಿದ್ದುದರಿಂದಲೂ, (ಅಂದರೆ— ಪರಾಧೀನತ್ವವಿದ್ದುದರಿಂದಲೂ) ತಾದೃಶೀ = ಭಗವಂತನಜ್ಞಾನಕ್ಕೆ ಸದೃಶವಾದುದು, ನ=ಅಲ್ಲ. (ಲಕ್ಷ್ಮೀಜ್ಞಾನ ವಿಶೇಷಣಗಳನ್ನು ಮುಕ್ತ ಬ್ರಹ್ಮಜ್ಞಾನದಲ್ಲಿಯೂ ಅತಿದೇಶಮಾಡುತ್ತಾರೆ.) ಬ್ರಹ್ಮಣಸ್ತು=ಚತುರ್ಮುಖ ಬ್ರಹ್ಮನ, ಮತಿಃ=ಜ್ಞಾನವು, ಶ್ರಿಯಃ=ಲಕ್ಷ್ಮೀದೇವಿಗೆ, ಯಥಾ=ಹೇಗೋ, ಅಂದರೆ – ಲಕ್ಷ್ಮೀದೇವಿಯ ಜ್ಞಾನವು ಹೇಗೋ, ಪ್ರಾಯಃ=ಬಹಳವಾಗಿ, ಏವಂ=ಹೀಗೆ, (ಅಂದರೆ— ಲಕ್ಷ್ಮೀದೇವಿಯ ಜ್ಞಾನದಷ್ಟು ವೈಶದ್ಯಾದಿಗಳು ಇಲ್ಲ.) (ಬ್ರಹ್ಮನ ಜ್ಞಾನಕ್ಕೆ ಲಕ್ಷ್ಮೀಜ್ಞಾನಕ್ಕೆ ಎಂತಹ ಸ್ಪಷ್ಟತ್ವವಿದೆಯೋ ಅಂತಹ ಸ್ಪಷ್ಟತ್ವವು ಇಲ್ಲ. ಮತ್ತು ಲಕ್ಷ್ಮ್ಯಧೀನತ್ವಾದಿರೂಪವಾದ ವೈಲಕ್ಷಣ್ಯವನ್ನು ಇಟ್ಟುಕೊಂಡು 'ಪ್ರಾಯಃ' ಎಂದು ಹೇಳಿರುವರು.) ('ಬ್ರಹ್ಮಣಃ' ಎಂದು ವಿಶೇಷವಾಗಿ ಹೇಳಲು ಕಾರಣವೇನೆಂದರೆ) ತದನ್ಯೇಷಾಂ=ಬ್ರಹ್ಮನಿಂದ ವ್ಯತಿರಿಕ್ತರಾದ, ಮುಕ್ತಾನಾಂ=ಮುಕ್ತರ, ಮತಿಸ್ತು=ಜ್ಞಾನವಾದರೂ, ಸಮುದ್ರತರಲೋಪಮಾ=ಸಮುದ್ರದ ತರಂಗಗಳಂತೆ ಸಂಕೋಚವಿಕಾಸವುಳ್ಳದ್ದು. ಅಥವಾ ವಿಶೇಷಬಲದಿಂದ ವೃದ್ಧಿಹ್ರಾಸವುಳ್ಳದ್ದು.

**ತಾ ॥ ಸ. ರ. ವಿ—** (1) ಸತ್ವ-ರಜ-ಸ್ತಮೋಗುಣಗಳ ಭೇದದೆಶೆಯಿಂದ ಸಂಸಾರಿಗಳಿಗೆ 'ಸಮ್ಯಕ್‌ಮತಿ, ಈಷತ್ ಸಮ್ಯಕ್‌ಮತಿ' 'ಅಸಮ್ಯಕ್ ಮತಿ' ಗಳು ಹುಟ್ಟುತ್ತವೆ. ಮುಕ್ತರ ಮತಿಯಾದರೂ ಗುಣಗಳನ್ನು ಅತಿಕ್ರಮಿಸಿದುದರಿಂದ ಪ್ರಾಕೃತವಾದ ಮನೋವೃತ್ತಿಯಿಂದ ಮಿಶ್ರಿತವಾಗದಿರುವುದರಿಂದ ಯಥಾರ್ಥವೇ; ಆ ಮುಕ್ತರ ಮತಿಯು ಅವರವರ ಮಾಹಾತ್ಮ್ಯ ತಾರತಮ್ಯಾನುಸಾರ ತಾರತಮ್ಯದಿಂದ ಬಹುಲತ್ವಾದಿ ಧರ್ಮಗಳಿಂದ ಕೂಡಿದ್ದು. ಅದಕ್ಕಿಂತಲೂ ಲಕ್ಷ್ಮೀಜ್ಞಾನವು ಅತಿವಿಶದತ್ವ ಮೊದಲಾದ ಧರ್ಮಗಳಿಂದ ಕೂಡಿದ್ದು. ಬ್ರಹ್ಮಲಕ್ಷ್ಮಿಯರ ಜ್ಞಾನಕ್ಕಿಂತಲೂ ನಾರಾಯಣನ ಜ್ಞಾನವು ಅತಿಸ್ಫುಟತ್ವ ಮೊದಲಾದ ಧರ್ಮಗಳಿಂದ ಕೂಡಿದ್ದು. ಸರ್ವವಸ್ತುಗಳ ವಿಶೇಷ ಸ್ಫುರಣರೂಪವಾದುದು. ॥ ೧೯ ॥ ೨೦ ॥ ೨೧ ॥

ಮುಕ್ತಗ್ರಹಣದ ತಾತ್ಪರ್ಯವನ್ನು ಹೇಳುತ್ತಾರೆ—

**ಮೂ ॥ ಅಗ್ನಿಜ್ವಾಲಾವದೇವ ಸ್ಯಾತ್ ಸೃತಿಗಾನಾಂ ದೃಶೋ ಭವಃ ।**
**ಏವಂವಿಧೇಷು ಜ್ಞಾನೇಷು ತಮಸಾ ಮುಷ್ಟದೃಷ್ಟಯಃ ॥ ೨೨ ॥**

**ಖದ್ಯೋತಸದೃಶಾತ್ಯಲ್ಪಜ್ಞಾನತ್ವಾದನ್ಯಥಾ ದೃಶಃ ।**
**ವದಂತಿ ವಾದಿನೋ ಮೋಕ್ಷಂ ನಾನಾಮತಸಮಾಶ್ರಯಾತ್ ॥ ೨೩ ॥**

**ಅ ॥** ಅಗ್ನಿಜ್ವಾಲಾವತ್ = ಅಗ್ನಿಜ್ವಾಲೆಯು ಅಗ್ನಿಯಿಂದಲೇಬಂತೆ, ಸೃತಿಗಾನಾಂ= ಸಂಸಾರಿಗಳ, ದೃಶಃ=ಜ್ಞಾನಕ್ಕೆ ಅಂತಃಕರಣದೆಶೆಯಿಂದ, ಭವ ಏವ=ಉತ್ಪತ್ತಿಯೇ, ಸ್ಯಾತ್= ಆಗುವುದು. (ವ್ಯಕ್ತಿಮಾತ್ರವಲ್ಲ.) (ಹೀಗೆ ಹಿಂದೆ ಹೇಳಿದ ರೀತಿಯಿಂದ ಜ್ಞಾನಗಳಿಗೆ ಗುಣ ನಿಮಿತ್ತವಾದ ನಾನಾವಿಧತ್ವವಿರಲಿ. ಪ್ರಕೃತದಲ್ಲಿ ಆದರೂ ಏನೆಂದರೆ—) ಜ್ಞಾನೇಷು = ಜ್ಞಾನ ಗಳು, ಏವಂವಿಧೇಷು=ಹೀಗೆ ಇರುತ್ತಿರಲು, ತಮಸಾ=ತಮೋಗುಣದಿಂದ, ಮುಷ್ಟದೃಷ್ಟಯಃ= ಅಪಹರಿಸಲ್ಪಟ್ಟ ಯಥಾರ್ಥಜ್ಞಾನವುಳ್ಳವರಾಗಿ, ಖದ್ಯೋತಸದೃಶಾತ್ಯಲ್ಪಜ್ಞಾನತ್ವಾತ್=ಖದ್ಯೋ ತಕ್ಕೆ ಸದೃಶವಾದ ಅತ್ಯಲ್ಪಜ್ಞಾನವಿದ್ದುದರಿಂದ, (ಅಂದರೆ— ಹೇಗೆ ಕಗ್ಗತ್ತಲೆಯಲ್ಲಿ ಖದ್ಯೋತ ಗಳೂ ಕೂಡ ಭಯಕ್ಕೆ ಕಾರಣಗಳೋ, ಹಾಗೆಯೇ ವಿಪರ್ಯಯವು ಜಾಸ್ತಿಯಾಗಿರತಕ್ಕ ಅಲ್ಪ ವಾದ ಯಥಾರ್ಥಜ್ಞಾನವೂ ಕೂಡ ಮಿಥ್ಯಾಜ್ಞಾನರೂಪವಾದ ಭಯಕ್ಕೆ ಕಾರಣವಾಗಿರುವುದ ರಿಂದ ತಾಮಸವೇ.) ಅನ್ಯಥಾದೃಶಃ = ಅನ್ಯಥಾಜ್ಞಾನಿಗಳಾದ, ವಾದಿನಃ = ವಾದಿಗಳು, ನಾನಾಮತಸಮಾಶ್ರಯಾತ್=ಅನೇಕ ವಿಧಗಳಾದ ಮತಗಳ ಆಶ್ರಯದೆಶೆಯಿಂದ, ಮೋಕ್ಷಂ= ಮುಕ್ತಿಯನ್ನು, ನಾನಾ=ಅನೇಕ ವಿಧವಾದುದನ್ನಾಗಿ, ವದಂತಿ=ಹೇಳುತ್ತಾರೆ.

**ತಾ ॥ ಸ. ರ. ವಿ.—** (1) ಸಮುದ್ಧೃತರಲೋಪಮಾ ಎನ್ನುವುದರಿಂದ ಮುಕ್ತರಾದ ರುದ್ರಾದಿಗಳ ಮತಿಗೆ ಸಂಕೋಚವಿಕಾಸಪ್ರಕಾರವು ತೋರಿಸಲ್ಪಟ್ಟಿತು. (2) **'ಸರ್ವಾರ್ಥಾನ್ ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ'** ಎನ್ನುವ ವಚನದೆಶೆಯಿಂದ ಅನ್ಯಥಾಜ್ಞಾನವು ತಮೋಜನ್ಯವು. ಇಂತಹ ತಾಮಸವಾದಿಗಳು ದುರ್ಮತಗಳನ್ನು ಆಶ್ರಯಿಸಿಕೊಂಡು ಯಥಾರ್ಥ ವಾಗಿ ಮೋಕ್ಷಸ್ವರೂಪವನ್ನು ತಿಳಿಯದೆ ಮೋಕ್ಷಸ್ವರೂಪವನ್ನು ಬೇರೆಪ್ರಕಾರ ಹೇಳುತ್ತಾರೆ—

**ನ್ಯಾಯಸುಧಾ—** (1) ಜ್ಞಾನಗಳಿಗೆ ಗುಣವಶದೆಶೆಯಿಂದ ಅನೇಕ ಪ್ರಕಾರತ್ವವು ಕೂಡುವುದರಿಂದ ತಮೋಗುಣದಿಂದ ಯುಕ್ತರಾದ ವಾದಿಗಳು ಪ್ರಮಾಣಗಳನ್ನು ತಿರಸ್ಕಾರ ಮಾಡಿ, ಯಥಾರ್ಥ ಜ್ಞಾನದಿಂದ ವಿಕಲರಾಗಿ ಪ್ರಮಾಣಾಭಾಸವನ್ನು ಆದರಿಸಿಕೊಂಡು, ಅಧಿಷ್ಠಾನ ಸಾಮಾನ್ಯ ಜ್ಞಾನವಿದ್ದ ಪ್ರಯುಕ್ತ ವಿಪರೀತಜ್ಞಾನಿಗಳಾಗಿ ಮೋಕ್ಷವನ್ನು ನಾನಾ ಪ್ರಕಾರವನ್ನಾಗಿ ಹೇಳುತ್ತಾರೆ ॥ ೨೨ ॥ ೨೩ ॥

ಮತಗಳೆಲ್ಲವೂ ಪ್ರವಾಹತಃ ಅನಾದಿಭೂತಗಳು ಎಂದು ಹೇಳಲ್ಪಟ್ಟವೆ. ನಾನಾವಿಧಗಳಾದ ಮೋಕ್ಷವಾದಗಳಲ್ಲಿ ಒಂದು ಪ್ರಮಾಣಮೂಲಕವು; ಇತರಗಳು ಮಿಥ್ಯಾಜ್ಞಾನಮೂಲಕಗಳು ಎಂದೇ ತಿಳಿದು ಬರುತ್ತದೆ. ಸಿದ್ಧಾಂತಿಗಳು ಹೇಳಿದ ಮೋಕ್ಷವಾದವೇ ಪ್ರಮಾಣಮೂಲಕವು ಎನ್ನುವ ವಿಶೇಷವು ತಿಳಿದು ಬರುವುದಿಲ್ಲ. ಆದುದರಿಂದ ಪುನಃಸಂಶಯವೇ ಹುಟ್ಟುತ್ತದೆ ಎಂದರೆ— ಪರಮತಗಳೆಲ್ಲವೂ ಹೇಯಗಳೆಂದು ತೋರಿಸಲಿಕ್ಕೆ ಇಚ್ಛಿಸಿದವರಾಗಿ ಆದಿಯಲ್ಲಿ ಆದರೂ ಜಿನನು ಹೇಳಿದ ಮೋಕ್ಷಸ್ವರೂಪವನ್ನು ಅನುವಾದ ಮಾಡುತ್ತಾರೆ—

**ಮೂ ॥ ಆಶ್ರಿತ್ಯ ಪ್ರತಿಭಾಮಾಹ ಜಿನಸ್ತತ್ರಾತಿತಾಮಸೀಂ ।**
**ಜ್ಞಾನಾತ್ಕರ್ಮಕ್ಷಯಾನ್ಮೋಕ್ಷೋ ಭವೇದ್ದೇಹಾಖ್ಯಪಂಜರಾತ್ ॥೨೪॥**

**ಪಂಜರೋನ್ಮುಕ್ತಖಗವದಲೋಕಾಕಾಶಗೋಚರಃ ।**
**ನಿತ್ಯಮೂರ್ಧ್ವಂ ವ್ರಜತ್ಯೇವ ಪುದ್ಗಲೋ ಹಸ್ತಪಾದವಾನ್ ॥ ೨೫ ॥**
**ಇತಿ ತತ್ಕೇನ ಮಾನೇನ ಮೋಕ್ಷರೂಪಂ ಪ್ರದೃಶ್ಯತೇ ।**
**ಗತಿರೂರ್ಧ್ವಾ ಚ ದುಃಖೇತಾ ಗತಿತ್ವಾಲ್ಲೌಕಿಕೀ ಯಥಾ ।**
**ಇತ್ಯುಕ್ತೇ ಚಾನುಮಾನೈಕಶರಣಸ್ಯ ಕಿಮುತ್ತರಂ ॥ ೨೬ ॥**

ಅ ॥ ತತ್ರ=ಆ ವಾದಿಗಳ ಮಧ್ಯದಲ್ಲಿ, ಜಿನಃ=ಜಿನನು, ಅತಿತಾಮಸೀಂ=(ವೇದಗಳಿಗೆ ಪ್ರಾಮಾಣ್ಯವನ್ನೇ ಅಂಗೀಕರಿಸದೆ ಇದ್ದುದರಿಂದ) ಅತ್ಯಂತ ತಮೋಗುಣಪ್ರಚುರವಾದ, ಪ್ರತಿಭಾಂ=ಪ್ರಜ್ಞಾವಿಶೇಷವನ್ನು, ಆಶ್ರಿತ್ಯ=ಆಶ್ರಯಿಸಿಕೊಂಡು, ಆಹ=ಹೇಳಿದನು. ಏನೆಂದರೆ— ಜ್ಞಾನಾತ್=ಜ್ಞಾನದೆಶೆಯಿಂದ, ಕರ್ಮಕ್ಷಯಾತ್ = ಕರ್ಮಕ್ಷಯದೆಶೆಯಿಂದ, ದೇಹಾಖ್ಯ ಪಂಜರಾತ್ = ಶರೀರವೆನ್ನುವ ಪಂಜರದೆಶೆಯಿಂದ, ಮೋಕ್ಷಃ = ಮುಕ್ತಿಯು, ಭವೇತ್ = ಆಗುವುದು. (ಅಂದರೆ— ಜ್ಞಾನದೆಶೆಯಿಂದ ಕೆಲವು ಕರ್ಮಗಳಿಗೆ ಕ್ಷಯವಾಗುತ್ತದೆ; ಕೆಲವು ಕರ್ಮಗಳಿಗೆ ಭೋಗದೆಶೆಯಿಂದ ಕ್ಷಯವಾಗುತ್ತದೆ. ಆದುದರಿಂದ ಕರ್ಮಕ್ಷಯ ದೆಶೆಯಿಂದ ಪಕ್ಷಿಗಳಿಗೆ ಪಂಜರಾದಿಗಳದೆಶೆಯಿಂದ ಬಿಡುಗಡೆಯಾಗುವಂತೆ ಆತ್ಮನಿಗೆ ದೇಹ ದೆಶೆಯಿಂದ ಮೋಕ್ಷವು ಆಗುತ್ತದೆ. ದೇಹಾವಸ್ಥಿತಿಗೆ ಕರ್ಮವು ನಿಮಿತ್ತವು) (ದೇಹಮೋಕ್ಷಾ ನಂತರದಲ್ಲಿ ಜೀವನು ಹೇಗೆ ಇರುತ್ತಾನೆಂದರೆ—) ಪಂಜರೋನ್ಮುಕ್ತ ಖಗವತ್=ಪಂಜರದಿಂದ ಬಿಡುಗಡೆಯನ್ನು ಹೊಂದಿದ ಹಕ್ಕಿಯಂತೆಯೇ (ಅಂದರೆ— ಪಂಜರದಿಂದ ಬಿಡುಗಡೆಯನ್ನು ಹೊಂದಿದ ಹಕ್ಕಿಯು ಹೇಗೆ ಮೇಲಕ್ಕೆ ಹಾರಿಹೋಗುತ್ತದೋ ಹಾಗೆಯೇ) ಪುದ್ಗಲಃ=ಜೀವನು, ಹಸ್ತಪಾದವಾನ್=ಕೈಕಾಲುಗಳುಳ್ಳವನಾಗಿ, (ಅಂದರೆ- ಚರಮದೇಹಕ್ಕೆ ಎಂತಹ ಹಸ್ತಪಾದಾದಿ ಗಳ ಸನ್ನಿವೇಶವೋ ಅಂತಹ ಹಸ್ತಪಾದಾದಿಗಳ ಸನ್ನಿವೇಶವುಳ್ಳವನಾಗಿ)ಅಲೋಕಾಕಾಶಗೋಚರಃ= ಲೋಕವಿಲ್ಲದಿರುವಆಕಾಶವೇ ಗೋಚರನಾಗಿವುಳ್ಳವನಾಗಿ, ನಿತ್ಯಮೇವ = ನಿರಂತರದಲ್ಲಿಯೂ, ಊರ್ಧ್ವಂ=ಮೇಲಕ್ಕೆ, ವ್ರಜತಿ ಏವ=ಹೋಗಿಯೇಹೋಗುತ್ತಾನೆ. ಇತಿ=ಹೀಗೆ, ಆಹ=ಹೇಳುತ್ತಾನೆ. (ಅನೂದಿತವಾದ ಪಕ್ಷವನ್ನು ದೂಷಿಸುತ್ತಾರೆ). ಕೇನ ಮಾನೇನ=ಯಾವ ಪ್ರಮಾಣದಿಂದ, ತತ್ ಮೋಕ್ಷರೂಪಂ=ಆ ಮುಕ್ತಿಸ್ವರೂಪವು, ಪ್ರದರ್ಶ್ಯ (ದೃಶ್ಯ) ತೇ=(ಪರರನ್ನು ಕುರಿತು ಜಿನನಿಂದ) ತೋರಿಸಲ್ಪಡುತ್ತದೆ. (ಯದ್ಯಪಿ ಮುಕ್ತನಿಗೆ '**ಜೀವೋ ಜ್ಞಾನ ದರ್ಶದ ಸುಖ ವೀರ್ಯಗುಣಃ**' ಎಂದು ಹೇಳಿದಪ್ರಕಾರ ಜ್ಞಾನವೊದಲಾದ ಪೂರ್ಣಗಳಾದ ನಾಲ್ಕರ ಆವಿರ್ಭಾವವು ಜಿನನಿಂದ ಹೇಳಲ್ಪಡುತ್ತದೆ. ಆದಾಗ್ಯೂ ಆ ಚತುಷ್ಟಯದ ಆವಿರ್ಭಾವವು ಸಮ್ಮತವಾದುದರಿಂದ ಅದನ್ನು ಅನುವಾದಮಾಡಲೂ ಇಲ್ಲ; ಅದನ್ನು ದೂಷಿಸಲೂ ಇಲ್ಲ. ಹಿಂದೆ ಹೇಳಿದ ಮೋಕ್ಷಸ್ವರೂಪವು ಅಪ್ರಾಮಾಣಿಕವು; ಹೇಗೆಂದರೆ— ಈ ವಿಷಯದಲ್ಲಿ ಪ್ರತ್ಯಕ್ಷವಿಲ್ಲ. ಆಗಮವೂ ಇಲ್ಲ. ಅವರ ಆಗಮವನ್ನು ನಾವು ಪ್ರಮಾಣವೆಂದು ಅಂಗೀಕರಿಸಲಿಲ್ಲ. ವೇದಾದಿ ಗಳನ್ನು ಪ್ರಮಾಣವಾಗಿ ಪರರು ಅಂಗೀಕರಿಸಲೂ ಇಲ್ಲ. ಆದುದರಿಂದ ಕೇವಲವಾಗಿ ಯಾವುದಾದ ರೊಂದು ಅನುಮಾನವನ್ನು ಹೇಳಬೇಕು. ಆ ವಿಷಯದಲ್ಲಿ ಹೇಳುತ್ತಾರೆ—) ಊರ್ಧ್ವಾ ಚ= ಮೇಲಿನದ್ದಾದ, ಗತಿಃ=ಗತಿಯು, (ಅಂದರೆ- ವಿಪ್ರತಿಪನ್ನವಾದ ಊರ್ಧ್ವಗತಿಯು)ದುಃಖೇತಾ= ದುಃಖದಿಂದ ಪ್ರಾಪ್ತವಾದುದು, ಕೂಡಿದ್ದು, ಗತಿತ್ವಾತ್=ಚೇತನಾಶ್ರಿತ ಗತಿತ್ವವಿದ್ದುದರಿಂದ, ಲೌಕಿಕೀ ಯಥಾ=ಲೌಕಿಕವಾದ ದೇವದತ್ತಾದಿ ಗತಿಯಂತೆ. ಇತಿ ಚ=ಹೀಗೆ, ಉಕ್ತೇ=(ಪ್ರತ್ಯ ನುಮಾನವು ಯಾರಿಂದಲಾದರೂ) ಹೇಳಲ್ಪಡುತ್ತಿರಲು, ಅನುಮಾನೈಕ ಶರಣಸ್ಯ=ಅನುಮಾ ನವೇ ಮುಖ್ಯವಾಗಿ ಶರಣವಾಗಿವುಳ್ಳ ನಿನಗೆ, (ಜಿನನಿಗೆ) ಕಿಮುತ್ತರಂ=ಏನು ಉತ್ತರವು?

ತಾ || ಸ. ರ. ವಿ— 'ಯಃ ಸಂತತೋರ್ಧ್ವಗತಿಮಾನ್ ಮುಕ್ತಃ ಜಿನಾಭ್ಯುಪಗತಃ ಸ ದುಃಖೋಪೇತಃ ಚೇತನತ್ವೇಸತಿ ಅಧಿಕಗತಿಮತ್ವಾತ್ ಅಧಿಕಗತಿಮಜ್ಜೀವಾಂತರವತ್' ಎನ್ನುವ ಅನುಮಾನದಿಂದ ನಿರಾಕರಿಸಲ್ಪಟ್ಟಪ್ರಯುಕ್ತ ನಿರಂತರದಲ್ಲಿಯೂ ಊರ್ಧ್ವಗತಿಯುಳ್ಳವನು ಮುಕ್ತನೆಂದು ಅನುಮೇಯಿಸಲಿಕ್ಕೆ ಶಕ್ಯನಾಗಲಾರನು || ೨೪ || ೨೫ || ೨೬ ||

ಪ್ರತ್ಯನುಮಾನಕ್ಕೆ ಉತ್ತರವನ್ನು ಶಂಕಿಸುತ್ತಾರೆ—

**ಮೂ || ಅನೂರ್ಧ್ವಗತಿತಾ ತತ್ರ ಯದ್ಯುಪಾಧಿಃ ಖಗಸ್ಯ ಚ || ೨೭ ||**
**ದೂರೋರ್ಧ್ವಗಮನೇ ದುಃಖಮಿತಿ ಸಾಧ್ಯಾನುಗೋ ನ ಸಃ |**
**ಪ್ರತಿಸಾಧನರೂಪಸ್ಯ ನಾನುಮಾನಸ್ಯ ದೂಷಣಂ |**
**ಉಪಾಧಿಃ ಪ್ರತಿರೂಪಂ ಹಿ ಸಾಧನಂ ತನ್ನ ಚಾಪರಂ || ೨೮ ||**

ಅ || ತತ್ರ = ದೃಷ್ಟಾಂತೀಕೃತವಾದ ದೇವದತ್ತನ ಗತಿಯು ದುಃಖಯುಕ್ತವಾಗಿದೆ ಎನ್ನುವುದರಲ್ಲಿ, ಅನೂರ್ಧ್ವಗತಿತಾ = ಅನೂರ್ಧ್ವತ್ವವಿಶಿಷ್ಟವಾದ ಗತಿತ್ವವು, ಉಪಾಧಿಃ = ಪ್ರಯೋಜಕವು. (ಗತಿತ್ವಮಾತ್ರವಲ್ಲವೆಂದು ಯಾವಪಕ್ಷದಲ್ಲಿ ಹೇಳುವನೋ) (ತಥಾಚ ಹಿಂದೆ ಹೇಳಿದ ಅನುಮಾನಕ್ಕೆ ಅನೂರ್ಧ್ವಗತಿತ್ವರೂಪವಾದ ಉಪಾಧಿಯನ್ನು ಪರನು ಹೇಳಿದಂತೆ ಆಯಿತು. ಅದನ್ನು ನಿರಾಕರಿಸುತ್ತಾರೆ.) ಖಗಸ್ಯ=ಪಾರಾವತ ಮೊದಲಾದ ಹಕ್ಕಿಗೆ, ದೂರೋರ್ಧ್ವಗಮನೇ ಚ=ದೂರಕ್ಕೆ ಮೇಲೆ ಹೋಗುವುದರಲ್ಲಿ, ದುಃಖಂ=ದುಃಖವು, ಇತಿ=ಈ ಹೇತುವಿನಿಂದ, ಸಃ=ಉಪಾಧಿಯು, ಸಾಧ್ಯಾನುಗಃ=ಸಾಧ್ಯವ್ಯಾಪಕವಾದುದು, ನ=ಆಗುವುದಿಲ್ಲ. (ಆದುದರಿಂದ ಅನುಪಾಧಿಯು.) (ಇದು ಉಪಾಧಿಯಾಗುವುದುಬೇಡ. ಶರೀರಿವೃತ್ತಿತ್ವವು ಉಪಾಧಿಯಾಗುವುದು ದೇವದತ್ತನ ಗತಿಯಲ್ಲಿ ಯಾವುದು ದುಃಖಯುಕ್ತವೋ ಅಲ್ಲಿ ಗತಿತ್ವವು ಪ್ರಯೋಜಕವಲ್ಲ; ಮತ್ತೆ ಶರೀರಿವೃತ್ತಿತ್ವವು. ಇದು ಸಾಧ್ಯವ್ಯಾಪಕವಲ್ಲ. ಯಾವುದು ದುಃಖಯುಕ್ತವೋ ಅದು ಶರೀರಿವೃತ್ತಿಯು, ಎನ್ನುವುದಕ್ಕೆ ವ್ಯಭಿಚಾರವು ಕಾಣಲಾರದು. ಎಂದರೆ— ಸರ್ವೋಪಾಧಿ ಸಾಧಾರಣವಾದ ದೂಷಣವನ್ನು ಹೇಳುತ್ತಾರೆ.) ಪ್ರತಿಸಾಧನರೂಪಸ್ಯ=(ಜಿನನಿಂದ ಹೇಳಲ್ಪಟ್ಟ ಅನುಮಾನಗಳಿಗೆ ಪ್ರತಿಸಾಧನವು ನಮ್ಮಿಂದ ಉಪನ್ಯಾಸಮಾಡಲ್ಪಟ್ಟದೆ. ಆ ಪ್ರತಿಸಾಧನರೂಪವಾದ,) ಅನುಮಾನಸ್ಯ ಚ=ಅನುಮಾನಕ್ಕೆ, ಉಪಾಧಿಃ=ಉಪಾಧಿಯು, ನ ದೂಷಣಂ=ದೂಷಣವಲ್ಲ. (ಆದುದರಿಂದ ಇಲ್ಲಿ ಉಪಾಧ್ಯುದ್ಭಾವನವೇ ಅಸಂಗತವು. ದೂಷಣವನ್ನು ಹುಡುಕಿದರಿಂದ ಏನು ಪ್ರಯೋಜನವು.?) ಪೂರ್ವೋಪಾಧಿಗೂಕೂಡ ಅಂಗೀಕಾರಮಾಡಿ ದೂಷಣವು ಹೇಳಲ್ಪಟ್ಟದೆ. ಪ್ರತಿಸಾಧನಕ್ಕೆ ಉಪಾಧ್ಯುದ್ಭಾವನವು ಏಕೆ ಕೂಡಲಾರದೆಂದರೆ— ಹಿ= ಯಾವಕಾರಣದಿಂದ, ಪ್ರತಿರೂಪಂ ಸಾಧನಂ=ಯಾವುದು ಉಪಾಧಿಯೆನ್ನುವುದು ದೂಷಣವೋ ಅಂತಹುದು ಪ್ರತಿರೂಪವಾದುದು ಸಾಧನವು. ಅಪರಂ ನಚ=ಇತರವಾದ ಅನೈಕಾಂತ್ಯ ಮೊದಲಾದುದು ದೂಷಣವಲ್ಲ. (ಅಂದರೆ— ಪಕ್ಷಾದಿಗಳ ಪ್ರಯೋಗಾನಂತರದಲ್ಲಿ ಉಪಾಧ್ಯುದ್ಭಾವನವು ಪ್ರತಿಸಾಧನರೂಪವಾಗಿ ದೂಷಣವಾಗುತ್ತದೆ. ಪ್ರತಿಪಕ್ಷಾನುಮಾನಕ್ಕೆ ಉಪಾಧಿಯನ್ನು ಹೇಳುವವನು ಅದಕ್ಕೆ ಮತ್ತೊಂದು ಪ್ರತಿಪಕ್ಷಾನುಮಾನವನ್ನು ಉದ್ಭಾವನೆ ಮಾಡಿದಂತೆ ಆಗುತ್ತದೆ. ಪ್ರತಿಪಕ್ಷಾನುಮಾನವಾದರೂ ಸಾಧನಕ್ಕೆ ಪ್ರವೃತ್ತವಾದ ಹೇತುವನ್ನು ಪ್ರತಿಬಂಧಿಸುತ್ತದೆ. ಅಲ್ಲದೆ ಮತ್ತೆ ಯಾವಕಾರ್ಯವನ್ನೂ ಮಾಡುವುದಿಲ್ಲ. ನಾವು ಹೇಳಿದ ಪ್ರತಿಪಕ್ಷಾನುಮಾನಕ್ಕೆ ಪ್ರಥಮಾನುಮಾನವೇ ಪ್ರತಿಬಂಧಕವಾಗಿದ್ದುದರಿಂದ ಇದಕ್ಕಾಗಿ ಪ್ರತಿಪಕ್ಷಾಂತರವನ್ನು ಹೇಳುವುದಕ್ಕಾಗಿ ಉಪಾಧ್ಯುದ್ಭಾವನವು ಅಸಂಗತವು.)

**ತಾ ॥ ಸ. ರ. ವಿ—** (1) ಹಾಗಾದರೆ ದುಃಖುವದೆ ಎನ್ನುವಲ್ಲಿ ಚೇತನತ್ವವಿದ್ದು ಅಧಿಕ ಗತಿಮತ್ವವು ಹೇತುವಲ್ಲ. ಅನೂರ್ಧ್ವಗತಿತ್ವವೇ ಪ್ರಯೋಜಕವಾಗಿದೆ. ದೇವದತ್ತಾದಿಗಳಲ್ಲಿರತಕ್ಕ ದುಃಖಿತ್ವವು ಅನೂರ್ಧ್ವಗತಿಮತ್ವಪ್ರಯುಕ್ತವಾಗಿದೆ, ಎಂದರೆ— ಹೀಗೆ ಹೇಳಕೂಡದು. ದೂರಕ್ಕೆ ಊರ್ಧ್ವಗಮನವುಳ್ಳ ಪಾರಾವತಾದಿಗಳಲ್ಲಿ ಕ್ಲೇಶವು ಕಂಡದೆ. ಅನೂರ್ಧ್ವಗತಿಮತ್ವಕ್ಕೆ ಸಾಧ್ಯಾವ್ಯಾಪಕತ್ವವಿದ್ದುದರಿಂದ ಉಪಾಧಿಲಕ್ಷಣವಿಲ್ಲ. (2) ಮತ್ತೂ ನಿರಂತರದಲ್ಲಿಯೂ ಊರ್ಧ್ವಗತ್ಯಾದಿರೂಪವಾದ ವೇದವಿರುದ್ಧವಾದ ಮೋಕ್ಷದಲ್ಲಿ ಪರರು ಉಪನ್ಯಾಸಮಾಡಿದ ಅನುಮಾನಕ್ಕೆ ಯಾವುದು ಪ್ರತಿಪಕ್ಷಾನುಮಾನವು ನಮ್ಮಿಂದ ಉದ್ಭಾವಿತವಾಗಿದೆಯೋ ಅದಕ್ಕೆ ಉಪಾಧಿಯು ದೂಷಣವು ಆಗಲು ಯೋಗ್ಯವಾಗುವುದಿಲ್ಲ. ಉಪಾಧಿಯು ಪ್ರತಿಪಕ್ಷಾನುಮಾನವಾಗಿಯೇ ದೂಷಣವಾಗುವುದು. ಪ್ರತಿಪಕ್ಷಾನುಮಾನಕ್ಕೆ ಪ್ರತಿಪಕ್ಷಾಂತರಾನುಮಾನವು ದೂಷಣವು ಆಗಲಾರದು. ಅವುಗಳೆರಡೂ ತುಲ್ಯಬಲಗಳಾಗಿವೆ.

**ನ. ಚ. ವಿ—** (1) 'ವಿಮುತಾ ಗತಿರ್ದುಃಖೇತಾ ಪುದ್ಗಲಾವಚ್ಛಿನ್ನ ಚಿರತರಗತಿತ್ವಾತ್ ರಣಭೀತಗತಿವತ್' ಗತಿತ್ವಾದಿ ಹೇತುಗಳನ್ನುಪ್ರಯೋಗಿಸಿದವರಿಗೆ ಈ ಅಭಿಪ್ರಾಯವು ಹೇಗೆ ಆಗುವುದು ಎಂದು ಶಂಕಿಸಕೂಡದು 'ನಿತ್ಯಮೂರ್ಧ್ವಂ ವ್ರಜತ್ಯೇವ ಪುದ್ಗಲಃ' ಎಂದು ಹೇಳಿದ ಗತಿಯೇ ಇಲ್ಲಿ ವಿವಕ್ಷಿತವಾಗಿದೆ. (2) ಅನೂರ್ಧ್ವಗತಿತ್ವವೇ ದುಃಖಯುಕ್ತತ್ವಪ್ರಯೋಜಕವು; ಗತಿತ್ವಮಾತ್ರವಲ್ಲ ಆದುದರಿಂದ ಈ ಉಪಾಧಿಯಿಂದ ಈ ಹೇತುವು ಅಪ್ರಯೋಜಕವೆಂದು ಹೇಳುವುದಾದರೆ ಹೀಗೆ ಹೇಳುವೆವು. ಉಪಾಧಿಯೆಂದರೆ ಸಾಧನಾವ್ಯಾಪಕವಾದುದು, ಸಾಧ್ಯದಿಂದ ಸಮವಾದ ವ್ಯಾಪ್ತಿಯುಳ್ಳದ್ದು. ಈ ಉಪಾಧಿಯು ಸಾಧ್ಯವ್ಯಾಪ್ತಿಯುಳ್ಳದ್ದು ಆಗುವುದಿಲ್ಲ. 'ಯಾ ದುಃಖೇತಾ ಸಾ ಅನೂರ್ಧ್ವಗತಿಃ' ಎಂದು ವ್ಯಾಪ್ತಿಯಿಲ್ಲ. ಸ್ವರ್ಗದ ದೂರವಾದ ಊರ್ಧ್ವಗತಿಯು ದುಃಖಯುಕ್ತವಾಗಿಯೇ ಕಂಡದೆ. (3) ಮತ್ತು ವೇದವಿರುದ್ಧವಾದ ಅನ್ಯಮೋಕ್ಷವನ್ನು ಸಾಧಿಸುವುದಕ್ಕಾಗಿ ಜಿನನಿಂದ ಅನುಮಾನವು ಪ್ರಯುಕ್ತವಾಗುತ್ತದೆ. ಅದಕ್ಕೆ ಪ್ರತಿಸಾಧನರೂಪವಾದ ನಮ್ಮ ಅನುಮಾನಕ್ಕೆ ಉಪಾಧಿಯು ದೂಷಣವಾಗುವುದಿಲ್ಲ. ಉಪಾಧಿಯು ಪ್ರತ್ಯನುಮಾನವನ್ನು ಸೂಚಿಸುತ್ತದೆ. ಇಲ್ಲಿ ವ್ಯಾಪ್ತಿಯು ಬಲದಿಂದ ಉಪಾಧಿಯ ನಿವೃತ್ತಿಯಿಂದ ಪಕ್ಷದೇಶೆಯಿಂದ ಸಾಧ್ಯನಿವೃತ್ತಿಯೇ ಇಷ್ಟವಾಗಿದೆ. 'ವಿಮುತಾಗತಿರ್ದುಃಖೇತಾ ನ ಭವತಿ ಅನೂರ್ಧ್ವಗತಿತ್ವರಹಿತತ್ವಾತ್ ವೈಧರ್ಮ್ಯೇಣ ರಣಭೀತಗತಿವತ್' ಎಂದು ಪ್ರತ್ಯನುಮಾನವು ಇಲ್ಲಿ ವಿವಕ್ಷಿತವಾಗಿದೆ ॥ ೨೭ ॥ ೨೮ ॥

ಪ್ರತಿಪಕ್ಷಾನುಮಾನಕ್ಕೆ ಉಪಾಧಿದೂಷಣವನ್ನೂ ಉಪಾಧ್ಯಂತರವನ್ನೂ ಅಂಗೀಕರಿಸಿಕೊಂಡು ಪರಿಹರಿಸುತ್ತಾರೆ. ಅಥವಾ ಪ್ರತ್ಯನುಮಾನಕ್ಕೆ ಪ್ರತ್ಯನುಮಾನವನ್ನು ಯಾರೂ ಅಂಗೀಕರಿಸಲಿಲ್ಲ. ಅಂಗೀಕರಿಸಿಕೊಂಡು ಹೇಳುತ್ತಾರೆ. ಅಥವಾ ಹಾಗಾದರೆ ಪಕ್ಷಾದಿಗಳನ್ನು ವಿಭಾಗಮಾಡಿದಮೇಲೆ ಉಪಾಧಿಯು ಪ್ರತಿಪಕ್ಷಕ್ಕೆ ಉನ್ನಾಯಕವಾಗುತ್ತದೆ. ಅದಕ್ಕಿಂತ ಮೊದಲು ವ್ಯಭಿಚಾರಕ್ಕೆ ಉನ್ನಾಯಕವು. ಆದುದರಿಂದ ವ್ಯಭಿಚಾರೋನ್ನಾಯಕತ್ವವನ್ನು ಇಟ್ಟುಕೊಂಡು ಶರೀರವೃತ್ತಿತ್ವವು ಉಪಾಧಿಯಾಗಲಿ ಎಂದರೆ— ಅಂಗೀಕರಿಸಿಕೊಂಡು ದೂಷಿಸುತ್ತಾರೆ—

**ಮೂ ॥ ಅಥಾಪಿ ಸ ಶರೀರತ್ವಂ ಚಾತ್ರೋಪಾಧಿರ್ನ ವೈ ಭವೇತ್ ॥ ೨೯ ॥**
**ಗತಿತ್ವಂ ಯತ್ರ ದೇಹಿತ್ವಮಿತಿ ಯತ್ಸಾಧನಾನುಗಂ ।**
**ಆಗಮಾನನುಸಾರಿತ್ವೇ ಪ್ರಸಂಗೋಽಯಂ ಯತಸ್ತತಃ ॥ ೩೦ ॥**

**ನಾಪಸಿದ್ಧಾಂತತಾದೋಷಃ ಪ್ರಸಂಗೇ ಯದಿ ಸಾ ಭವೇತ್ ।**
**ತದೈವಾತಿಪ್ರಸಂಗಃ ಸ್ಯಾನ್ನ ಪ್ರಸಂಗಃ ಕ್ವಚಿದ್ಭವೇತ್ ॥ ೩೧ ॥**

**ಅ ॥** ಅಥಾಪಿ = ಯಾವುದಾದರೊಂದು ವಿವಕ್ಷೆಯಿಂದ ಪ್ರತಿಪಕ್ಷಾನುಮಾನಕ್ಕೂ ಉಪಾಧಿಯನ್ನು ಹೇಳಿದರೂ, ಸಶರೀರತ್ವಂ ಚ=(ಕೇವಲ ಅನೂರ್ಧ್ವಗತಿತ್ವವಲ್ಲ). ಮತ್ತೆ ಶರೀರದಿಂದ ಕೂಡಿಕೊಂಡು ಇರುವಿಕೆಯು, (ಶರೀರಸಮಾನಾಶ್ರಯತ್ವವು, ಶರೀರವೃತ್ತಿತ್ವವು) ಅತ್ರ=ನಾವು ಹೇಳಿದ ಅನುಮಾನದಲ್ಲಿ, ಉಪಾಧಿಃ=ಉಪಾಧಿಯು, ನ ವೈ ಭವೇತ್=ಸರ್ವಥಾ ಆಗಲಾರದು. (ಏಕೆ ಆಗಲಾರದೆಂದರೆ-) ಯತ್ರ=ಎಲ್ಲಿ, ಗತಿತ್ವಂ=ಚೇತನಾಶ್ರಯತ್ವವಿಶಿಷ್ಟವಾದ ಗತಿತ್ವವೋ (ಅಲ್ಲಿ,) ದೇಹಿತ್ವಂ=ದೇಹದಿಂದ ಸಂಬಂಧವು, (ಅಂದರೆ ದೇಹವೃತ್ತಿತ್ವವು) ಇತಿ= ಈ ಪ್ರಕಾರವಾಗಿ, (ಶರೀರವೃತ್ತಿತ್ವರೂಪ ಉಪಾಧಿಯು) ಯತ್=ಯಾವಕಾರಣದಿಂದ, ಸಾಧನಾನುಗಂ=ಚೇತನಾಶ್ರಯತ್ವವಿಶಿಷ್ಟವಾದ ಗತಿತ್ವಕ್ಕೆ ವ್ಯಾಪಕವೋ? (ಸ ರ. ವಿ.— ಜಡ ಶರೀರವತ್ತ್ವ ರೂಪವಾದ ಉಪಾಧಿಯೂ ದುಃಖಿತ್ವಕ್ಕೆ ಪ್ರಯೋಜಕವಲ್ಲ. ಸಾಧನವ್ಯಾಪಕ ವಾಗಿದ್ದುದರಿಂದ ಉಪಾಧಿಲಕ್ಷಣವಲ್ಲಿ ಇರುವುದಿಲ್ಲ. ಚೇನತ್ವವಿಶಿಷ್ಟಗತಿಮತ್ವಹೇತುವು ಜಡ ಶರೀರತ್ವದಿಂದ ವ್ಯಾಪ್ತವಾಗಿದೆ. ಅದೇ ಹೇತುವಿನಿಂದ ಆ ಉಪಾಧಿಯನ್ನು ನಿತ್ಯದಲ್ಲಿಯೂ ಊರ್ಧ್ವಗಮನವುಳ್ಳ ಮುಕ್ತನಲ್ಲಿಯೂ ಸಾಧಿಸಲಿಕ್ಕೆ ಶಕ್ಯವಾಗಿದೆ ) (ಹಾಗಾದರೆ, ಚೇತನತ್ವ ವಿಶಿಷ್ಟಗತಿಮತ್ವಹೇತುವಿನಿಂದ ಜಿನಮುಕ್ತನಿಗೆ ಜಡಶರೀರವನ್ನು ಸಾಧಿಸುವುದಾದರೆ, ವೇದೋಕ್ತ ಬ್ರಹ್ಮನಿಗೂ ಚೇತನತ್ವವಿಶಿಷ್ಟಗತಿಮತ್ವರೂಪಹೇತುವಿದ್ದುದರಿಂದ ಜಡಶರೀರವು ಬರಬೇಕಾಗು ವುದು. ಅಂತೂ ಅಪಸಿದ್ಧಾಂತವು ಬರಬೇಕಾಗುವುದು ಎಂದಾಶಂಕಿಸಿಕೊಂಡು ಪರಿಹರಿಸು ತ್ತಾರೆ.) (ನ್ಯಾಯಸುಧಾ— ಯಾವುದಾದರೊಂದು ಗತಿಯನ್ನು ಪಕ್ಷೀಕರಿಸಿಕೊಂಡರೆ ಬಾಧಾದಿ ದೋಷಗಳು ಪ್ರಸಕ್ತಗಳಾಗುವುದರಿಂದ ಮುಕ್ತರ ಗತಿಯನ್ನೇ ಪಕ್ಷೀಕರಿಸಿಕೊಳ್ಳಬೇಕು. ಮುಕ್ತರ ಗತಿಯು ದುಃಖಯುಕ್ತವೆಂದು ಸಾಧಿಸಿದರೆ ನಿಮಗೆ ಅಪಸಿದ್ಧಾಂತವು ಬರಬೇಕಾಗು ವುದು. ನೀವೂ ಕೂಡಾ ಮುಕ್ತರಿಗೆ ನಿರ್ದುಃಖತ್ವವನ್ನು ಅಂಗೀಕರಿಸಿರುತ್ತೀರಿ ಹಾಗೆ 'ಯಾ ಗತಿಃ ಸಾ ದುಃಖೇತಾ' ಎಂದು ವ್ಯಾಪ್ತಿಯನ್ನು ಹೇಳುವವನು ಈಶ್ವರನಿಗೂ ದುಃಖವನ್ನು ಅಂಗೀ ಕರಿಸಬೇಕು ಇಲ್ಲವಾದರೆ ಅಲ್ಲಿ ವ್ಯಭಿಚಾರವು ಬರಬೇಕಾಗುವುದು. ಆದುದರಿಂದಲೂ ಅಪ ಸಿದ್ಧಾಂತವೇ. ಶರೀರ ವೃತ್ತಿತ್ವಕ್ಕೆ ಸಾಧನವ್ಯಾಪಕತ್ವವನ್ನು ಅಂಗೀಕರಿಸಿದರೆ ಗತಿಯಿದ್ದ ಪ್ರಯುಕ್ತ ಈಶ್ವರನಿಗೂ ಕೂಡ ಶರೀರತ್ವವನ್ನು ಅಂಗೀಕರಿಸಬೇಕಾಗುವುದು. ಅಂತೂ ಅಪ ಸಿದ್ಧಾಂತವೇ ಎಂದರೆ-) ಯತಃ=ಯಾವ ಕಾರಣದ್ದೆಸೆಯಿಂದ, ಆಗಮಾನನುಸಾರಿತ್ವೇ=ಆಗಮ ಗಳ ಅನುಸರಣವಿಲ್ಲವಾದರೆ, (ಅಂದರೆ, ವೇದ ಮೊದಲಾದ ಆಗಮಗಳನ್ನು ಅನುಸರಿಸದೆ ಮೋಕ್ಷಸ್ವರೂಪವನ್ನು ಅನುಮೇಯಿಸುವುದಾದರೆ) ಅಯಂ ಪ್ರಸಂಗಃ=ಈ ಅತಿ ಪ್ರಸಂಗವು, (ಹೇಳಲ್ಪಟ್ಟತೋ ವೇದಾದಿಗಳನ್ನ ಅಪೇಕ್ಷಿಸದೆ ನೀನು ಹೀಗೆ ಯಾವ ಪಕ್ಷದಲ್ಲಿ ಅನುಮೇಯಿಸು ತ್ತಿಯೋ ಆಗ ಹೀಗೂ ಅನುಮೇಯಿಸುವುದಿಲ್ಲ ಎನ್ನುವ ಅತಿ ಪ್ರಸಂಗವು ನಮ್ಮಿಂದ ಹೇಳ ಲ್ಪಟ್ಟದೋ,) ತತಃ=ಆ ಕಾರಣದಿಂದ, ಅಪಸಿದ್ಧಾಂತತಾ ದೋಷಃ=ಅಪಸಿದ್ಧಾಂತ ರೂಪವಾದ ದೋಷವು, ನ=ಬರುವುದಿಲ್ಲ. (ಅತಿ ಪ್ರಸಂಗದಲ್ಲಿಯೂ ಅಪಸಿದ್ಧಾಂತವನ್ನು ಉದ್ಭಾವಿಸತಕ್ಕವ ನನ್ನು ಕುರಿತು ಹೇಳುತ್ತಾರೆ.) ಪ್ರಸಂಗೇ = ಅತಿಪ್ರಸಂಗದಲ್ಲಿ, ಯದಿ=ಯಾವ ಪಕ್ಷದಲ್ಲಿ, ಸಾ=ಅಪಸಿದ್ಧಾಂತವು, ಭವೇತ್ ದೋಷವು ಆಗುವುದೋ, ತದೈವ=ಆವಾಗಲೇ, ಅತಿಪ್ರಸಂಗಃ= ಅತಿಪ್ರಸಂಗವು, ಸ್ಯಾತ್ = ಆಗುವುದು. (ಹೇಗೆ ಅತಿಪ್ರಸಂಗವೆಂದರೆ-) ಪ್ರಸಂಗಃ = ಅತಿ

ಪ್ರಸಂಗವು, ಕ್ವಚಿತ್=ಎಲ್ಲಿಯೂ, ನ ಭವೇತ್=ಆಗಲಾರದು ಎಂದು. (ಎಲ್ಲಾ ಪ್ರಸಂಗಗಳಲ್ಲಿಯೂ ಅಪಸಿದ್ಧಾಂತವನ್ನು ಕಥಂಚಿತ್ ಉದ್ಭಾವಿಸಲಿಕ್ಕೆ ಶಕ್ಯವಾಗುವುದು.)

ತಾ || ಸ. ರ. ವಿ.— ಹಾಗಾದರೆ ವೇದಗಳನ್ನು ಅನುಸರಿಸದೆ ಇರುವ ಅನುಮಾನದಿಂದ ಮೋಕ್ಷವನ್ನು ಸಾಧಿಸಲಕ್ಕೆ ಶಕ್ಯವಾಗುವುದಿಲ್ಲ. ಅಂತಹ ಅನುಮಾನದಿಂದಲೇ ದೂಷಿಸಲಿಕ್ಕೂ ಶಕ್ಯವಾಗಬಹುದು ಎನ್ನುವ ಅತಿಪ್ರಸಂಗವನ್ನು ಹೇಳಿದರೆ ಅಪಸಿದ್ಧಾಂತವನ್ನುದ್ಭಾವಿಸಲಿಕ್ಕೆ ಯುಕ್ತವಾಗುವುದಿಲ್ಲ. ಉದ್ಭಾವಿಸಿದರೆ ಹೀಗೆಲ್ಲಾ ಅತಿಪ್ರಸಂಗಗಳನ್ನು ಅಪಲಾಪ ಮಾಡಲಿಕ್ಕೆ ಬರುವುದರಿಂದ ಅತಿಪ್ರಸಂಗವು ಎಲ್ಲಿಯೂ ಕೂಡಲಾರದೆನ್ನುವ ಅತಿಪ್ರಸಂಗವು ಬರುವುದು || ೨೯ || ೩೦ || ೩೧ ||

ಸ. ರ. ವಿ.— ಲೋಕಾಕಾಶಗತಿಮತ್ತ್ವರೂಪವಾದ ಉಪಾಧಿಯಿಂದ ಜಿನನು ಹೇಳಿದ ಅಲೋಕಾಶದಲ್ಲಿರತಕ್ಕ ಮುಕ್ತನಿಗೆ ದುಃಖವನ್ನು ನಿವಾರಿಸಲಿಕ್ಕೆ ಶಕ್ಯವಲ್ಲ. ಏಕೆಂದರೆ— ಚೇತನತ್ವವಿಶಿಷ್ಟಗತಿಮತ್ತ್ವಹೇತುವಿನಿಂದಲೇ ಆ ಉಪಾಧಿಯನ್ನು ಸಂತತೋರ್ಧ್ವಗಮನವುಳ್ಳ ಮುಕ್ತನಲ್ಲಿ ಸಾಧಿಸಲಿಕ್ಕೆ ಬರುವುದರಿಂದ ಸಾಧನವ್ಯಾಪಕತ್ವವೇ ಬರುವುದರಿಂದ ಉಪಾಧಿತ್ವವು ಕೂಡಲಾರದು. ಸಾಧ್ಯವ್ಯಾಪಕತ್ವವಿಶಿಷ್ಟ ಸಾಧನವ್ಯಾಪಕತ್ವವು ಉಪಾಧಿಗೆ ಲಕ್ಷಣವು ಎನ್ನುತ್ತಾರೆ—

**ಮೂ || ಲೋಕಾಕಾಶಗತಿತ್ವಂ ಚೇದುಪಾಧಿಃ ಸಾಧನಾನುಗಃ |**
**ಸೋಽಪೀತ್ಯುಕ್ತೇ ವದೇತ್ಕಿಂ ಸಃ ತಸ್ಮಾದ್ವೇದೋದಿತೋ ಭವೇತ್ | ೩೨ ||**
**ಮೋಕ್ಷ ಏವ (ವಂ) ಸ್ವಯಂ ವಿಷ್ಣುರ್ಯದ್ಯಪೀಶೋ ಹ್ಯಶೇಷವಿತ್ |**
**ಚಕಾರ ಸೌಗತಮತಂ ಮೋಹಾಯೈವ ಚಕಾರ ಯತ್ || ೩೩ ||**
**ಅಸುರಾಣಾಮಯೋಗ್ಯಾನಾಂ ವೇದಮಾರ್ಗೇ ಪ್ರವರ್ತಕಾಂ |**
**ಅತೋಽಸುರಾಧಿಕಾರತ್ವಾನ್ನ ಗ್ರಾಹ್ಯಂ ತನ್ಮತಂ ಕ್ವಚಿತ್ || ೩೪ ||**

ಅ || ಲೋಕಾಕಾಶಗತಿತ್ವಂ ಉಪಾಧಿಃ ಚೇತ್ = ಇಲ್ಲಿ ಲೋಕಾಕಾಶಸಂಬಂಧಿತ್ವವೇ ಉಪಾಧಿಯೆಂದಾದರೆ, (ಸಾಧ್ಯವ್ಯಾಪಕವಾಗುವುದರಿಂದ ಗತಿತ್ವವು ಸ್ವರೂಪಕಥವವು.) (ದೂಷಿಸುತ್ತಾರೆ ) ಸೋಽಪಿ ಉಪಾಧಿಃ=(ಯಾವುದು ಗತಿಯೋ ಅದು ಲೋಕಾಕಾಶಸಂಬಂಧಿಯಾದುದರಿಂದ) ಆ ಉಪಾಧಿಯೂ, ಸಾಧನಾನುಗಃ = ಸಾಧನವ್ಯಾಪಕವೂ. ಇತಿ = ಹೀಗೆ, ಉಕ್ತೇ=ಹೇಳುತ್ತಿರಲು, ಸಃ=ಅವನು, ಕಿಂ = ಏನನ್ನು, ವದೇತ್ = ಹೇಳುವನು? (ತನಗೆ ಅಭಿಮತವಾದ ಮೋಕ್ಷದಲ್ಲಿ ಪ್ರಮಾಣವನ್ನು ತೋರಿಸುತ್ತಾ ಉಪಸಂಹಾರಮಾಡುತ್ತಾರೆ.) ತಸ್ಮಾತ್=ಜಿನನು ಹೇಳಿದ ಮೋಕ್ಷಸ್ವರೂಪದಲ್ಲಿ ಪ್ರಮಾಣವಿಲ್ಲದಿರುವುದರಿಂದ, ಮೋಕ್ಷಃ = ಮೋಕ್ಷವು, ವೇದೋದಿತಃ=ವೇದದಿಂದ ಹೇಳಲ್ಪಟ್ಟದ್ದು, ಏವಂ=ನಾವು ಪ್ರತಿಪಾದಿಸಿದ ಪ್ರಕಾರದಿಂದಲೇ, ಭವೇತ್=ಆಗುವುದು. ಅಥವಾ ಏವಂ=ಜೈನಮೋಕ್ಷವು, ಹೇಗೆ ಅನುಪಪನ್ನವೋ ಹೀಗೆಯೇ ಬೌದ್ಧಾದಿಗಳ ಮತದಲ್ಲಿತಕ್ಕ ಮೋಕ್ಷವೂ ಅನುಪಪನ್ನವು. ಅಥವಾ (ಹಿಂದೆ ಹೇಳಿದ ದೋಷಗಳನ್ನು ಅತಿದೇಶಮಾಡಿ ಬೌದ್ಧರು ಹೇಳಿದ ಮೋಕ್ಷವನ್ನು ದೂಷಿಸುತ್ತಾರೆ.)

ಏವಂ=ಹೇಗೆ ಅಪ್ರಾಮಾಣಿಕವಾಗಿರುವುದರಿಂದ ಜೈನಮತವು ಅಗ್ರಾಹ್ಯವೋ ಇದೇಪ್ರಕಾರ ಸೌಗತರ ಮತವೂ ಕೂಡ ಎಲ್ಲಿಯೂ ಗ್ರಾಹ್ಯವಾಗುವುದಿಲ್ಲ. (ಹಾಗಾದರೆ ಪರಮಾಪ್ತನಾದ ಬುದ್ಧರೂಪಿಯಾದ ವಿಷ್ಣುವಿನಿಂದ ಮಾಡಲ್ಪಟ್ಟ ಬೌದ್ಧಮತವನ್ನು ಹೇಗೆ ಸ್ವೀಕರಿಸಕೂಡದು. ಎಂದರೆ—) ಯದ್ಯಪಿ, ಈಶಃ = ಕರಣಪಾಟವವುಳ್ಳ, ಅಶೇಷವಿತ್ = ತತ್ವಜ್ಞಾನಿಯಾದ, ವಿಷ್ಣುಃ = ಶ್ರೀಹರಿಯು, ಸ್ವಯಂ=ತಾನಾಗಿಯೇ, ಸೌಗತಮತಂ = ಬೌದ್ಧಮತವನ್ನು, ಚಕಾರ=ಮಾಡಿರುವನು. ತಥಾಪಿ=ಆದಾಗ್ಯೂ, ನ ಗ್ರಾಹ್ಯಂ = ಸ್ವೀಕರಿಸಕೂಡದು. ಹಿ=ಪ್ರಸಿದ್ಧವು (ಏಕೆ ಸ್ವೀಕರಿಸಕೂಡದೆಂದರೆ—) ಯತ್=ಯಾವ ಕಾರಣದಿಂದ, ಅಯೋಗ್ಯಾನಾಂ=ಅಯೋಗ್ಯರಾದ, ವೇದಮಾರ್ಗೇ=ವೇದಮಾರ್ಗದಲ್ಲಿ, ಪ್ರವರ್ತತಾಂ=ಪ್ರವರ್ತಿಸತಕ್ಕ, ಅಸುರಾಣಾಂ=ಅಸುರರಿಗೆ, ಮೋಹಾಯೈವ=ಮಿಥ್ಯಾಜ್ಞಾನಬರುವುದಕ್ಕಾಗಿಯೇ, ಚಕಾರ=ಮಾಡಿರುವನೋ, ಅತಃ = ಆದ ಕಾರಣ, ಅಸುರಾಧಿಕಾರತ್ವಾತ್ = ಅಸುರರೇ ಅಧಿಕಾರಿಗಳಾಗಿದ್ದುದರಿಂದ, ಕ್ವಚಿತ್=ಎಲ್ಲಿಯೂ, ತನ್ಮತಂ=ಬೌದ್ಧಮತವು, ನ ಗ್ರಾಹ್ಯಂ=ಸ್ವೀಕರಿಸಕೂಡದು.

ತಾ ॥ ಯದ್ಯಪಿ ಬುದ್ಧರೂಪಿಯಾದ ಶ್ರೀ ಹರಿಯು ಪಟುಕರಣವುಳ್ಳವನು, ತತ್ವಜ್ಞಾನವುಳ್ಳವನು ಎಂದು ಶ್ರುತ್ಯಾದಿಗಳಿಂದ ಸಿದ್ಧನಾಗಿರುತ್ತಾನೆ. ಗ್ರಂಥಗಳನ್ನು ಮಾಡಿದರಿಂದಲೇ ವಿವಕ್ಷೆಯುಳ್ಳವನು. ಇಷ್ಟರಿಂದಲೂ ಆಪ್ತನಲ್ಲ, ವಿಪ್ರಲಂಭಕನಾಗಿದ್ದಾನೆ. ಅಥವಾ ಬುದ್ಧಾವತಾರನಾದ, ಸರ್ವಜ್ಞನಾದ ಶ್ರೀ ಹರಿಯಿಂದ ಬೌದ್ಧಮತವು ಮಾಡಲ್ಪಟ್ಟದೆ. ಆದಾಗ್ಯೂ ಅಸುರರನ್ನು ಮೋಹಿಸುವುದಕ್ಕಾಗಿ ಮಾಡಿದ್ದೆಂದು ಪುರಾಣದಲ್ಲಿ ಹೇಳಿದುದರಿಂದ ಅಸುರರು ಅಧಿಕಾರಿಗಳಾದುದರಿಂದ ಸಜ್ಜನರು ಬಿಟ್ಟುಬಿಡಬೇಕು. **'ತತಃ ಕಲೌ ಸಂಪ್ರವೃತ್ತೇ ಸಮ್ಮೋಹಾಯ ಸುರದ್ವಿಷಾಂ । ಬುದ್ಧೋ ನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ'** ಎಂದು ಭಾಗವತದಲ್ಲಿ ಹೇಳಿರುವರು. ಆದುದರಿಂದ ಬುದ್ಧನು ಹೇಳಿದ ಮೋಕ್ಷಸ್ವರೂಪವನ್ನು ಬಿಡಲೇಬೇಕು ॥ ೩೨ ॥ ೩೩ ॥ ೩೪ ॥

ಹೀಗೆ ಸಾಮಾನ್ಯವಾಗಿ ದೂಷಿಸಲ್ಪಟ್ಟ ಬೌದ್ಧಮತವನ್ನು ವಿಶೇಷವಾಗಿ ನಿರಾಕರಿಸುವುದಕ್ಕಾಗಿ ಆ ಬೌದ್ಧಮತದ ಪ್ರಭೇದಗಳನ್ನು ಹೇಳುತ್ತಾರೆ—

**ಮೂ ॥ ಚತುಷ್ಪ್ರಕಾರಂ ತಚ್ಚೋಕ್ತಂ ಶೂನ್ಯಂ ವಿಜ್ಞಾನಮೇಕಲಂ ।**
**ಅನುಮೇಯಬಹಿಸ್ತತ್ತ್ವಂ ತಥಾ ಪ್ರತ್ಯಕ್ಷಬಾಹ್ಯಗಂ ॥ ೩೫ ॥**
**ಇತಿ ತತ್ರ ತು ಯೇ ಶೂನ್ಯಂ ವದಂತ್ಯಜ್ಞಾನಮೋಹಿತಾಃ ।**
**ತೇ ಮೋಕ್ಷಂ ತಾದೃಶಂ ಬ್ರೂಯುರ್ನಿಃಶಂಕಂ ಮಾಯಿನೋ ಯಥಾ ॥**
**॥ ೩೬ ॥**

**ನ ಕಿಂಚಿನ್ಮುಕ್ತ್ಯವಸ್ಥಾಯಾಮಾತ್ಮಾತ್ಮೀಯಮಥಾಪಿ ವಾ ।**
**ಏಕಸ್ಮಿನ್ ಸಂಸೃತೇರ್ಮುಕ್ತೇ ನ ಕಿಂಚಿದವಶಿಷ್ಯತೇ ॥ ೩೭ ॥**
**ತತ್ಸಂವೃತ್ತ್ಯೈವ ಭೇದೋಽಯಂ ಚೇತನಾಚೇತನಾತ್ಮಕಃ ।**
**ದೃಶ್ಯತೇ ಸಂಸೃ(ವೃ)ತೇರ್ಧ್ವಂಸೋ (ಸೇ) ನಿರ್ವಿಶೇಷ್ಯೈವ ಶೂನ್ಯತಾ ॥**
**॥ ೩೮ ॥**

ಅ ॥ ಏಕಲಂ=ಅದ್ವಿತೀಯವಾದ, ಶೂನ್ಯಂ=ಶೂನ್ಯವೇ ತತ್ವವೆಂದು (ಒಂದು ಮತವು) ೨ ವಿಜ್ಞಾನಂ=ಒಂದು ವಿಜ್ಞಾನವೇ (ತತ್ವವೆಂದು ಇನ್ನೊಂದು ಮತವು) ೩ ಅನುಮೇಯಬಹಿಸ್ತತ್ವಂ = ಅನುಮೇಯಿಸಲಿಕ್ಕೆ ಯೋಗ್ಯವಾದುದು ಜ್ಞಾನವ್ಯತಿರಿಕ್ತವಾದ ಬಹಿಸ್ತತ್ವವುಳ್ಳದ್ದು. (ಅಂದರೆ— ಜ್ಞಾನವ್ಯತಿರಿಕ್ತವಾದ ತತ್ವವು ಇದ್ದೇ ಇದೆ. ಆದರೆ ಅದು ಅನುಮೇಯವೆಂದು ಸೌತ್ರಾಂತಿಕಮತವು) ತಥಾ=ಹಾಗೆಯೇ, ಪ್ರತ್ಯಕ್ಷಬಾಹ್ಯಗಂ = ಪ್ರತ್ಯಕ್ಷವಾದ ಬಾಹ್ಯವಿಷಯವುಳ್ಳದ್ದು ಅಂತಹ ವೈಭಾಷಿಕಮತವು. ಇತಿ=ಈ ಪ್ರಕಾರ, ತಚ್ಚ = ಆ ಬೌದ್ಧಮತವಾದರೂ, ಚತುಷ್ಪ್ರಕಾರಂ=ನಾಲ್ಕು ಪ್ರಕಾರವುಳ್ಳದ್ದು. (ಅದರಲ್ಲಿ ಶೂನ್ಯವಾದಿಗಳು ಹೇಳಿದ ಮೋಕ್ಷವನ್ನು ಅನುವಾದಮಾಡುತ್ತಾರೆ.) ತತ್ರ=ಆ ನಾಲ್ವರಲ್ಲಿ, ಯೇ = ಯಾರು, ಅಜ್ಞಾನಮೋಹಿತಾಃ= ಅಜ್ಞಾನ (ತಮೋಗುಣ)ದಿಂದ ಮಿಥ್ಯಾಜ್ಞಾನವುಳ್ಳವರಾಗಿ, ಶೂನ್ಯಂ ತು = ಶೂನ್ಯವನ್ನೇ ತತ್ವವನ್ನಾಗಿ, ವದಂತಿ=ಹೇಳುತ್ತಾರೋ, ತೇ=ಅವರು, ಮಾಯಿನಃ = ಮಾಯಿಗಳು, ಯಥಾ= ಹೇಗೆ ಇರತಕ್ಕ; ಮೋಕ್ಷಂ = ಮೋಕ್ಷವನ್ನು, (ಹೇಳುತ್ತಾರೋ) ತಾದೃಶಂ ಮೋಕ್ಷಂ= ಅಂತಹ ಮೋಕ್ಷವನ್ನೇ, ನಿಃಶಂಕಂ=ಶಂಕಾರಹಿತ ಹೇಗೆ ಆದೀತೋ ಹಾಗೆ, ಬ್ರೂಯುಃ=ಹೇಳುತ್ತಾರೆ. (ಹೀಗೆ ಸಾಮಾನ್ಯವಾಗಿ ಹೇಳಿದ್ದನ್ನು ಸ್ಪಷ್ಟವಾಗಿ ಹೇಳುತ್ತಾರೆ.) (ಅಥವಾ ಮಾಯಾವಾದಿಮತಕ್ಕೆ ಬೌದ್ಧಮತದಿಂದ ಸಾಮ್ಯವನ್ನು ತೋರಿಸುವುದಕ್ಕಾಗಿ ಬೌದ್ಧಮತವನ್ನು ಅನುವಾದ ಮಾಡುತ್ತಾರೆ.) ಮುಕ್ತ್ಯವಸ್ಥಾಯಾಂ=ಮುಕ್ತ್ಯವಸ್ಥೆಯಲ್ಲಿ, ಕಿಂಚಿತ್=ಯಾವುದೋ ಒಂದು, ಆತ್ಮಾಪಿ=ಜ್ಞಾನವು, ಅಥವಾ ಆತ್ಮೀಯಂ=ಜ್ಞೇಯವು, ಆ ಎರಡೂ, ನ=ಮುಕ್ತಿಯಲ್ಲಿ ಇಲ್ಲ. (ಶೂನ್ಯವಾದವು, ಏಕಾತ್ಮವಾದವು ಅನೇಕಾತ್ಮವಾದ ಎರಡು ವಿಧವು. ಅದರಲ್ಲಿ ಪ್ರಥಮದ್ದೇ ಮುಖ್ಯಸಿದ್ಧಾಂತವು ಮುಂದರಿಗೆ ಬುದ್ಧಿಯಲ್ಲಿ ಆರೂಢವಾಗುವುದಕ್ಕಾಗಿ ಎರಡನೇದ್ದು ಹೇಳಿದ್ದು) (ಸಾಧಾರಣವಾದ ವಿಷಯವನ್ನು ಹೇಳಿ ವಿಶೇಷವನ್ನು ಹೇಳಲಿಚ್ಛಿಸಿದವರಾಗಿ ಆದಿಯಲ್ಲಿ ಒಂದನೇದ್ದಾದ ಏಕಾತ್ಮವಾದವನ್ನು ಹೇಳುತ್ತಾರೆ.) ಏಕಸ್ಮಿನ್=ಒಬ್ಬನು, ಸಂಸೃತೇಃ = ಸಂಸಾರದೆಶೆಯಿಂದ, ಮುಕ್ತೇ ಸತಿ=ಬಿಡುಗಡೆಯನ್ನು ಹೊಂದುತ್ತಿರಲು ಕಿಂಚಿತ್=ಯಾವುದೊಂದು, ಚೇತನವಾಗಲೀ, ಅಚೇತನವಾಗಲೀ, ನಾವಶಿಷ್ಯತೇ=ಉಳಿಯುವುದಿಲ್ಲ. (ಒಬ್ಬನಿಗೆ ಮುಕ್ತಿಯಾದರೆ ಏಕೆ ಯಾವುದೂ ಉಳಿಯುವುದಿಲ್ಲವೆಂದರೆ—) ತತ್ಸಂವೃತ್ತ್ಯೈವ= ಆ ಒಂದೇ ಆತ್ಮನ ವಿಶ್ವಾರೋಪಕ್ಕೆ ನಿಮಿತ್ತವಾದ ಅಜ್ಞಾನದಿಂದಲೇ, ಅಯಂ=ಈ ಕಾಣಲ್ಪಡತಕ್ಕ, ಚೇತನಾಚೇತನಾತ್ಮಕಃ=ಚೇತನ-ಅಚೇತನರೂಪವಾದ ಪದಾರ್ಥಸಮುದಾಯವು, ದೃಶ್ಯತೇ=ಕಾಣಲ್ಪಡುತ್ತದೆ (ಆದುದರಿಂದ ಒಬ್ಬ ಆತ್ಮನ) ಸಂವೃತೇಃ = ವಿಶ್ವಾರೋಪನಿಮಿತ್ತವಾದ ಅಜ್ಞಾನಕ್ಕೆ, ಧ್ವಂಸೇ = ಧ್ವಂಸವು, (ಉಂಟಾಗುತ್ತಿರಲು) ನಿರ್ವಿಶೇಷಾ=ವಿಶೇಷವಿಲ್ಲದಿರುವುದು, ಶೂನ್ಯತೈವ=ಶೂನ್ಯತ್ವವೇ, (ಪಾರಮಾರ್ಥಿಕವು. ಉಳಿಯುತ್ತದೆ ಎನ್ನುವುದು ಯುಕ್ತವೇ.)

ತಾ ॥ (1) ಮಾಯಿಗಳು ಎಂತಹಮೋಕ್ಷವನ್ನು ಹೇಳುತ್ತಾರೋ ಅಂತಹ ಮೋಕ್ಷವನ್ನೇ ಶೂನ್ಯವೇ ತತ್ವವೆಂದು ಹೇಳುವವರೂ ಹೇಳುತ್ತಾರೆ. ಆದರೆ— ಇಷ್ಟು ವಿಶೇಷವು. ಮಾಯಿಗಳು ವೇದಪ್ರಾಮಾಣ್ಯಾಭಿಮಾನದೆಶೆಯಿಂದ **'ಪರಮಂ ಸಾಮ್ಯಮುಪೈತಿ ಸೋಽಶ್ನುತೇ ಸರ್ವಾನ್ ಕಾಮಾನ್ ಸಹ'** ಇದು ಮೊದಲಾದ ವೇದಕ್ಕೆ ಗೌಣಮುಕ್ತಿ ಪರತ್ವಾದಿರೂಪವಾದ ಅನ್ಯಥಾ ವ್ಯಾಖ್ಯಾನಮಾಡಿ ತಮಗೆ ಅಭಿಮತವಾದ ಮೋಕ್ಷವನ್ನು ಪ್ರತಿಪಾದಿಸುತ್ತಾರೆ. ಶೂನ್ಯವಾದಿಗಳಾದರೂ ವೇದಪ್ರಾಮಾಣ್ಯವನ್ನು ಅಂಗೀಕರಿಸದೆ ಇರುವುದರಿಂದ ಸ್ವೇಚ್ಛಾನುಸಾರವಾಗಿಯೇ ಹೇಳುತ್ತಾರೆ. ॥ ೩೫ ॥ ೩೬ ॥ ೩೭ ॥ ೩೮ ॥

ನಿರ್ವಿಶೇಷತ್ವವನ್ನೇ ವಿವರಿಸುತ್ತಾರೆ—

ಮೂ ॥ ನ ಸತ್ವಂ ನೈವ ಚಾಸತ್ವಂ ಶೂನ್ಯತತ್ವಸ್ಯ ವಿದ್ಯತೇ ।
ನ ಸುಖತ್ವಂ ನ ದುಃಖತ್ವಂ ನ ವಿಶೇಷೋಽಪಿ ಕಶ್ಚನ ॥ ೩೯ ॥
ನಿರ್ವಿಶೇಷಂ ಸ್ವಯಂ ಭಾಂತಂ ನಿರ್ಲೇಪಮಜರಾಮರಂ ।
ಶೂನ್ಯಂ ತತ್ವಮಸಂಬಾಧಂ ನಾನಾಸಂವೃತಿವರ್ಜಿತಂ ॥ ೪೦ ॥
ಅಶೇಷದೋಷರಹಿತಂ ಮನೋವಾಚಾಮಗೋಚರಂ ।
ಮೋಕ್ಷ ಇತ್ಯುಚ್ಯತೇ ಸದ್ಭಿರ್ನಾನಾಸಂವೃತಿದೂಷಿತಂ ॥ ೪೧ ॥
ಸಂವೃತ್ಯವಸ್ಥಾ(ಸ್ಥಂ)ವಿಜ್ಞೇಯಾ(ಯಂ)ಸಂವೃತ್ಯೈವ ವಿಶಿ(ಶೇ)ಷ್ಯತೇ।
ಸ್ಥಿತಯಾ ಧ್ವಸ್ತಯಾ ಚೈವ ಸಂವೃತಿರ್ಮೋಕ್ಷ ಇತ್ಯಪಿ ॥ ೪೨ ॥

ಅ ॥ ಶೂನ್ಯತತ್ವಸ್ಯ=ಶೂನ್ಯತತ್ವಕ್ಕೆ, ಸತ್ವಂ = ಪರಸಾಮಾನ್ಯಾದಿ ರೂಪವಾದುದು (ಅಂದರೆ— ಜಾತ್ಯಾದಿರೂಪವಾದುದು.) ನ=ಇಲ್ಲ. ಅಸತ್ವಂ ಚ=ಅಭಾವಪ್ರತಿಯೋಗಿತ್ವವೂ ಕೂಡ, ನೈವ ವಿದ್ಯತೇ=ಇರುವುದೇ ಇಲ್ಲ. ಸುಖತ್ವಂ=ಸುಖತ್ವವೂ, ನ=ಇಲ್ಲ ದುಃಖತ್ವಂ= ದುಃಖತ್ವವೂ, ನ=ಇಲ್ಲ ಮತ್ತು ಕಶ್ಚನಾಪಿ = ಯಾವುದೊಂದೂ, ವಿಶೇಷಃ = ವಿಶೇಷವು, ನ ವಿದ್ಯತೇ=ಇರುವುದಿಲ್ಲ. (ಅಂದರೆ— ೧ ಮಾಯಿಗಳ ಪಕ್ಷದಲ್ಲಿಯೂ ಅಹಂ ಪ್ರತ್ಯಯವೇದ್ಯ ನಾದ ಆತ್ಮನು ಇಲ್ಲ. ಅಹಂ ಪ್ರತ್ಯಯವೇದ್ಯವಾದುದಕ್ಕೆ ಅಹಂಕಾರರೂಪತ್ವವನ್ನು ಅಂಗೀಕರಿ ಸಿರುತ್ತಾರೆ. ೨ ಮತ್ತು ನಿರ್ಧರ್ಮಕತ್ವವನ್ನು ಆತ್ಮನಿಗೆ ಒಪ್ಪಿದರಿಂದ ಚೇತನತ್ವ-ಭಾವತ್ವ ಸಪ್ರತಿ ಯೋಗಿಕತ್ವಾದಿರೂಪವಾದ ಇತರವಾದ ವಿಶೇಷವೂ ಕೂಡ ಇರುವುದಿಲ್ಲ.) (ಹಾಗಾದರೆ— ಮೋಕ್ಷವು ಇಲ್ಲವೆಂದು ಹೇಳಲಿಕ್ಕೆ ಬರುವುದಿಲ್ಲ. ಹಾಗಾದರೆ - ಯಾವಾಗಲೂ ಸಂಸಾರವು ಇರಬೇಕಾಗುವುದು. ಆವಕಾರಣ ಸತ್ತಾದ ಮೋಕ್ಷದಿಂದ ಶೂನ್ಯವು ಸವಿಶೇಷವೆಂದರೆ—) ನಿರ್ವಿಶೇಷಂ = ವಿಶೇಷರಹಿತವಾದ, ಸ್ವಯಂ ಭಾತಂ = ಸ್ವಯಮೇವ ಪ್ರಕಾಶರೂಪವಾದ, ನಿರ್ಲೇಪಂ=ಸಂಗರಹಿತವಾದ ಧರ್ಮಾಧರ್ಮರಹಿತವಾದ, ಅಜರಾಮರಂ=ಜರಾಮರಣರಹಿತ ವಾದ, ಅಸಂಬಾಧಂ = ವಸ್ತ್ವಂತರೋಪಮರ್ದವಿಲ್ಲದಿರುವ, ಅಂದರೆ— ಅದ್ವಿತೀಯವಾದ, ನಾನಾಸಂವೃತಿ ವರ್ಜಿತಂ=ನಾನಾವಿಧವಾದ, ವಿಶ್ವಾರೋಪನಿಮಿತ್ತವಾದ, ಅಜ್ಞಾನದಿಂದ ರಹಿತ ವಾದ, ಅಶೇಷದೋಷರಹಿತಂ=ಎಲ್ಲಾ ಕಾಮಾದಿದೋಷಗಳಿಂದ ವಿರಹಿತವಾದ, ಮನೋವಾಚಾಂ= ಮನೋವಚನಗಳಿಗೆ, ಅಗೋಚರಂ = ಗೋಚರವಾಗದಿರುವ, ಶೂನ್ಯಂ ತತ್ವಮೇವ = ಶೂನ್ಯ ತತ್ವವೇ, ಅಸದ್ಭಿಃ=ಅಸಜ್ಜನರಿಂದ, ಮೋಕ್ಷಇತಿ=ಮೋಕ್ಷವೆಂದು, ಉಚ್ಯತೇ=ಹೇಳಲ್ಪಡುತ್ತದೆ. (ಅಜ್ಞಾನನಿವೃತ್ತ್ಯಾದ್ಯುಪಲಕ್ಷಿತವಾದ ಶೂನ್ಯವೇ ಮೋಕ್ಷವು ಎನ್ನುವುದು ಯಾವುದರಿಂದ ಎಂದರೆ—) ನಾನಾಸಂವೃತಿದೂಷಿತಂ=ನಾನಾವಿಧಗಳಾದ ಅಜ್ಞಾನಗಳಿಂದ ದೂಷಿಸಲ್ಪಟ್ಟ, ಶೂನ್ಯಮೇವ=ಶೂನ್ಯವೇ, ಸಂಸೃತ್ಯವಸ್ಥಂ = ಸಂಸಾರಾವಸ್ಥಿತಿಯುಳ್ಳದ್ದೆಂದು ಯಾವಕಾರಣ ದಿಂದ, ವಿಜ್ಞೇಯಂ=ತಿಳಿಯತಕ್ಕುದೋ, (ಆದುದರಿಂದ ಅದಕ್ಕಿಂತ ವಿಪರೀತವಾದ ಶೂನ್ಯವೇ ಮೋಕ್ಷವೆನ್ನುವುದು ಯುಕ್ತವು.) (ಮೋಕ್ಷವೂ, ಸಂಸಾರವೂ ಕೂಡ ಶೂನ್ಯವೇ ಎಂದಾದರೆ— ಆಗ ಮೋಕ್ಷಸಂಸಾರ ಶಬ್ದಗಳಿಗೆ ಪರ್ಯಾಯತ್ವವು ಇತ್ಯಾದಿಗಳು ಬರುತ್ತವೆ ಎನ್ನುವ ಚೋದ್ಯವು ಇದರಿಂದಲೇ ಪರಿಹೃತವಾಯಿತು ಎನ್ನುತ್ತಾರೆ.) ಸ್ಥಿತಯಾ = ಇರತಕ್ಕ, ಧ್ವಸ್ತ ಯಾ ಚ=ನಷ್ಟವಾಗತಕ್ಕ, ಸಂವೃತ್ಯೈವ=ಅಜ್ಞಾನದಿಂದಲೇ, ಸಂಸೃತಿರಿತಿ=ಸಂಸಾರವೆಂದೂ,

ಮೋಕ್ಷ ಇತ್ಯಪಿ = ಮೋಕ್ಷವೆನ್ನುವುದೂ, ವಿಶಿಷ್ಯತೇ ಏವ = ವಿಶೇಷವು ಎಂದೇ ಆಗುತ್ತದೆ. (ಅಂದರೆ— ಯದ್ಯಪಿ ಶೂನ್ಯವೇ ಸಂಸಾರವೂ ಮೋಕ್ಷವೂ ಕೂಡ. ಆದಾಗ್ಯೂ ಅಜ್ಞಾನದಿಂದ ಸಂಸಾರವೆಂದೂ ಅಜ್ಞಾನನಿವೃತ್ತಿಯಿಂದ ಮೋಕ್ಷವೆಂದೂ ವಿಶೇಷವುಳ್ಳದ್ದು ಆಗುತ್ತದೆ.)

**ತಾ ||** **ನ್ಯಾಯಸುಧಾ—** (1) ಶೂನ್ಯತತ್ವವು ಸ್ವತಃ ನಿರ್ವಿಶೇಷವಾದುದು ಒಂದೇ. ಆ ಪರಮ ಸೂಕ್ಷ್ಮವಾದ ವಾಙ್ಮನಸ್ಸುಗಳನ್ನು ಅತಿಕ್ರಮಿಸಿರುವ ಸ್ವಪ್ರಕಾಶವಾದ ಶೂನ್ಯ ತತ್ವಕ್ಕೆ ಆವರಣವಿಕ್ಷೇಪ ಮೊದಲಾದ ಅನೇಕಶಕ್ತಿಯುಳ್ಳ ಮೂಲಭೂತವಾದ ಅಜ್ಞಾನದಿಂದ ಕರ್ತೃತ್ವ ಭೋಕ್ತೃತ್ವ ಶಕ್ತಿಯುಳ್ಳ ಅಹಂಕಾರೋಪಾಧಿವಶದೆಶೆಯಿಂದ ಕಿಂಚಿತ್ ಸ್ಥೂಲತ್ವವು ಹುಟ್ಟುತ್ತದೆ. ಆ ಮೇಲೆ ಸದ್ವಿತೀಯತ್ವದಿಂದ ಸವಿಶೇಷತ್ವವು ಬರಲು ಸ್ಥೂಲತ್ವವು ಉಂಟಾಗುತ್ತದೆ. ಆ ಮೇಲೆ ಮನಸ್ಸಿಗೂ ವಚನಕ್ಕೂ ವಿಷಯವಾಗುತ್ತಿರಲು ವಿಧಿನಿಷೇಧಗೋಚರತ್ವದಿಂದ ಸಲೇಪತ್ವವು ರಾಗಾದಿ ದೋಷಗಳ ಸಂಸರ್ಗವೂ ಬರುತ್ತದೆ. ಆ ಮೇಲೆ ದೇಹ ಇಂದ್ರಿಯ ಅಂತಃಕರಣ ವಿಷಯಗಳ ಸಂಬಂಧವಿರುತ್ತಿರಲು ಅತಿ ಸ್ಥೌಲ್ಯವು ಬರುತ್ತದೆ. ಆ ಮೇಲೆ ಮಮಕಾರವುಳ್ಳವನಿಗೆ ದುಃಖಾದಿಗಳು ಇದ್ದರೆ ಅತಿ ಸ್ಥೌಲ್ಯವು, ಈ ಪ್ರಕಾರ ಸಂವೃತಿಯಿಂದ ಸಂವೃತಿಕಾರ್ಯಗಳಾಗಿರುವುದರಿಂದ ಸಂವೃತಿಯೆಂದು ಹೆಸರುಳ್ಳ ಅಹಂಕಾರಾದಿಗಳಿಂದ ಮಿಶ್ರವಾದ ಶೂನ್ಯವೇ ಸಂಸಾರವು. ಭಾವನಾಪ್ರಕರ್ಷಾದಿಗಳಿಂದ ಮೂಲಭೂತವಾದ ಸಂವೃತಿಯು ನಷ್ಟವಾಗುತ್ತಿರಲು ಅದರ ಕಾರ್ಯ ಪ್ರವಾಹವೂ ವಿಲೀನವಾಗುತ್ತಿರಲು ಅಜ್ಞಾನನಿವೃತ್ತಿಯಿಂದ ಉಪಲಕ್ಷಿತವಾದ ಶೂನ್ಯವೇ ಮೋಕ್ಷವು ॥ ೩೯ ॥ ೪೦ ॥ ೪೧ ॥ ೪೨ ॥

ಹೀಗೆ ಏಕಾತ್ಮವಾದವನ್ನು ಉಪನ್ಯಾಸ ಮಾಡಿ ಅನೇಕಾತ್ಮವಾದವನ್ನು ತೋರಿಸುತ್ತಾರೆ—

**ಮೂ ||** **ಕೇಚಿತ್ತೇಷ್ವನ್ಯಥಾ ಪ್ರಾಹುಸ್ಸಂವೃತ್ಯೈವ ತ್ವನೇಕಧಾ ।**
**ಅವಚ್ಛಿನ್ನಂ ಮಹಾಶೂನ್ಯಂ ನಾನಾಪುದ್ಗಲಶಬ್ದಿತಂ ॥ ೪೩ ॥**
**ಯಸ್ಯ ಶೂನ್ಯೈಕರಸತಾಜ್ಞಾನಾತ್ಸಾ ತ್ವಪಗಚ್ಛತಿ ।**
**ಸ ಪುದ್ಗಲತ್ವನಿರ್ಮುಕ್ತೋ ಮಹಾಶೂನ್ಯತ್ವಮೇಷ್ಯತಿ ॥ ೪೪ ॥**
**ಸಂವೃತ್ಯಾ ಯ (ನ್ಯ) ಸ್ತ್ವವಚ್ಛಿನ್ನೋ ದುಃಖಾನ್ಯನುಭವತ್ಯಲಂ ।**
**ಇತ್ಯೇವಂ ಮಾಯಿನಶ್ಚಾಹುರೇಕಜೀವತ್ವವಾದಿನಃ ॥ ೪೫ ॥**
**ಬಹುಜೀವಮತಾಶ್ಚೇತಿ ಮಾಯಾ ತೇಷಾಂ ತು ಸಂವೃತಿಃ ।**
**ನಿರ್ವಿಶೇಷತ್ವವಾಚ್ಚೈವ ಶೂನ್ಯಂ ಬ್ರಹ್ಮೇತಿ (ಹ್ಯೈವ) ನೋ ಭಿಧಾ ॥ ೪೬ ॥**
**ಸಚ್ಚಿತ್ಸುಖಾದಿಕಂ ಚೈವ ಕಿಂ ಕುತೋಽಖಂಡವಾದಿನಃ ।**
**ವ್ಯಾವರ್ತ್ಯಮಾತ್ರಭೇದಸ್ತು ವಿದ್ಯತೇ ಶೂನ್ಯವಾದಿನಃ ॥ ೪೭ ॥**
**ಅನೃತಾದೇರಮೋಽಹಂ ತು ಸ್ವಯಮೇವ ಹಿ ಮನ್ಯತೇ ।**
**ನಿರ್ವಿಶೇಷತ್ವತೋ ನೈವ ವಿಶೇಷೋ ಬ್ರಹ್ಮಶೂನ್ಯಯೋಃ ॥ ೪೮ ॥**

**ಅ ||** ತೇಷು = ಆ ಶೂನ್ಯವಾದಿಗಳಲ್ಲಿ, ಕೇಚಿತ್ = ಕೆಲವರು, ಅನ್ಯಥಾ = ಏಕಾತ್ಮವಾದಿಗಳ ಮತದೆಸೆಯಿಂದ ಬೇರೆ ಪ್ರಕಾರ, ಪ್ರಾಹುಃ = ಹೇಳುತ್ತಾರೆ. (ಹೇಗೆಂದರೆ) ಸಂವೃತ್ಯೈವ ತು = ವಿಶ್ವಾರೋಪಕ್ಕೆ ನಿಮಿತ್ತವಾದ ಅಜ್ಞಾನದಿಂದಲೇ, ಅನೇಕಧಾ = ಅನೇಕ ಪ್ರಕಾರವಾಗಿ,

ಅವಚ್ಛಿನ್ನಂ=ಯುಕ್ತವಾದ, ಮಹಾಶೂನ್ಯಂ=ಮಹಾಶೂನ್ಯವು, ನಾನಾಪುದ್ಗಲಶಬ್ದಿತಂ=ನಾನಾವಿಧವಾದ ಪುದ್ಗಲ (ಜೀವ) ಶಬ್ದಪ್ರತಿಪಾದ್ಯವು. (ತು ಶಬ್ದದಿಂದ ಏಕಾತ್ಮವಾದ, ಸ್ವಾಭಾವಿಕ ಅನೇಕಾತ್ಮವಾದ ಉಪಾಧಿಕೃತಾನೇಕಾತ್ಮವಾದ ಇವುಗಳಿಂದ ವೈಲಕ್ಷಣವನ್ನು ತಿಳಿಸಿದರು. ಶೂನ್ಯವು ನಾನಾಭೂತವಾದ ಸಂವೃತಿಯಿಂದ ಅವಚ್ಛಿನ್ನವೇ ಆಗಿದೆ. ಸ್ವಭಾವತಃ ಅಲ್ಲ. ಸಂವೃತಿಗೂ, ಸಂವೃತಿಕೃತ ಅವಛೇದಗಳಿಗೂ ಮಿಥ್ಯಾತ್ವವಿದ್ದ ಪ್ರಯುಕ್ತ ನಾನಾಪುದ್ಗಲಶಬ್ದಪ್ರತಿಪಾದ್ಯವು.) (ಅದರಿಂದ ಏನಾಯಿತೆಂದರೆ) ತತ್ರ=ಅನೇಕಾತ್ಮರಲ್ಲಿ, ಯಸ್ಯ ತು=ಯಾವ ಆತ್ಮನಿಗಾದರೂ, ಶೂನ್ಯೈಕರಸತಾಜ್ಞಾನಾತ್=ಶೂನ್ಯೈಕ್ಯ ಜ್ಞಾನದೆಸೆಯಿಂದ, ಸಾ=ಆ ವಿಶ್ವಾರೋಪನಿಮಿತ್ತವಾದ ಅಜ್ಞಾನವು, ಅಂದರೆ— ಮೂಲಸಂವೃತಿಯು, ಅಪಗಚ್ಛತಿ=ವ್ಯಾವೃತ್ತವಾಗುತ್ತದೋ, ಅನ್ಯಃ=ದುಃಖಾನುಭವಾದಿಕಾರಣೀಭೂತವಾದ ಅಜ್ಞಾನವು ನಷ್ಟವಾಗುತ್ತದೊ ಸಃ=ಆ ಜೀವನು, ಪುದ್ಗಲತ್ವನಿರ್ಮುಕ್ತಃ=ಕರ್ತೃತ್ವಾದಿರೂಪವಾದ ಪುದ್ಗಲತ್ವದಿಂದ ಬಿಡಲ್ಪಟ್ಟವನಾಗಿ, ಮಹಾಶೂನ್ಯತ್ವಂ=ಮಹಾಶೂನ್ಯತ್ವವನ್ನು, ಏಷ್ಯತೀವ=ಹೊಂದುವವನಂತೆ ಇರುತ್ತಾನೆ. ಸಂವೃತ್ಯಾ = ಅಜ್ಞಾನದಿಂದ, ಅವಚ್ಛಿನ್ನಃ = ಯುಕ್ತನಾದ ಯಸ್ತು=ಯಾವ ಆತ್ಮನೋ, (ಆತನು ಪುದ್ಗಲಭಾವದಿಂದ) ದುಃಖಾನಿ = ದುಃಖಗಳನ್ನು, ಅಲಂ=ಅತ್ಯಂತವಾಗಿ, ಪರಮಾರ್ಥಬುದ್ಧಿಯಿಂದಲೇ, ಅನುಭವತಿ=ಅನುಭವಿಸುತ್ತಾನೆ. ಇತಿ=ಹೀಗೆ, ಕೇಚಿತ್=ಕೆಲವರು, ಪ್ರಾಹುಃ=ಹೇಳುತ್ತಾರೆ. (ಶೂನ್ಯವಾದಿಗಳಿಗೆ ಅಭಿಮತವಾದ ಮೋಕ್ಷವನ್ನು ನಿರಾಕರಿಸಿದರಿಂದಲೇ ಮಾಯಾವಾದಿಗಳಿಗೆ ಅಭಿಮತವಾದ ಮೋಕ್ಷವೂ ನಿರಸ್ತವಾಗುವುದು ಎನ್ನುವ ಅಭಿಪ್ರಾಯದಿಂದ 'ಮಾಯಿನೋ ಯಥಾ' ಎಂದು ಹೇಳಿದ ಸಿದ್ಧಾಂತಸಾಮ್ಯವನ್ನುಪಪಾದಿಸುತ್ತಾರೆ.) ಇತಿ=ಹೀಗೆ, ಏಕಜೀವತ್ವವಾದಿನಃ=('ಏಕಃ ಜೀವಃ ಯಸ್ಮಿನ್ ಲೋಕೇ, ತಸ್ಯ ಭಾವಸ್ತತ್ವಂ ತತ್ ವದಂತಿ' ಎನ್ನುವ ವ್ಯುತ್ಪತ್ತಿಯಿಂದ) ಒಬ್ಬನೇ ಜೀವನು ಎಂದು ಹೇಳುವ, ಬಹುಜೀವಮತಾಶ್ಚ=('ಬಹವಃ ಜೀವಾಃ ಯಸ್ಮಿನ್, ಬಹುಜೀವಂ ಮತಂ ಯೇಷಾಂತೇ' ಎನ್ನುವ ವ್ಯುತ್ಪತ್ತಿಯಿಂದ) ಬಹುಜೀವರು ಎಂದು ಹೇಳುವ ಮತವುಳ್ಳ, ಇತಿ = ಹೀಗೆ (ದ್ವಿವಿಧರೂ ಆದ) ಮಾಯಿನಶ್ಚ=ಮಾಯಿಗಳಾದರೂ, ಏವಂ=ದ್ವಿವಿಧಶೂನ್ಯವಾದಿಗಳಂತೆಯೇ, ಆಹುಃ=(ಮೋಕ್ಷಸ್ವರೂಪವನ್ನು) ಹೇಳುತ್ತಾರೆ. (ಹಾಗಾದರೆ ಶೂನ್ಯವಾದಿಗಳು ಸಂವೃತಿಯೇ ಕಾರಣವಾಗಿವುಳ್ಳದ್ದು ಸಂಸಾರವು. ಸಂವೃತಿನಿವೃತ್ತಿಯೇ ಮೋಕ್ಷವು ಎಂದು ಹೇಳುತ್ತಾರೆ. ಮಾಯಾವಾದಿಗಳಾದರೂ ಈ ಸಂಸಾರವು ಮಾಯಾಹೇತುಕವಾದುದು. ಮಾಯಾನಿವೃತ್ತಿಯೇ ಮೋಕ್ಷವು ಎಂದು ಹೇಳುತ್ತಾರೆ. ಆದುದರಿಂದ ವೈಷಮ್ಯವು ಎಂದರೆ—) ಸಂವೃತಿಸ್ತು=ಶೂನ್ಯವಾದಿಗಳಿಂದ ಅಂಗೀಕೃತವಾದ ಸಂವೃತಿಯೇ, ತೇಷಾಂ = ಆ ಮಾಯಿಗಳ, ಮಾಯಾ = ಮಾಯೆಯು. (ಏಕೆಂದರೆ— ಅನಾದ್ಯನಿರ್ವಾಚ್ಯತ್ವರೂಪವಾದ ಸಂವೃತಿಲಕ್ಷಣಕ್ಕೂ ಆವರಣವಿಕ್ಷೇಪಾದಿರೂಪ ಕಾರ್ಯಕ್ಕೂ ಐಕ್ಯವೇ ಇದೆ.) (ಶೂನ್ಯವಾದಿಗಳು ಶೂನ್ಯವನ್ನು ತತ್ವವನ್ನಾಗಿ ಹೇಳುತ್ತಾರೆ. ಮಾಯಾವಾದಿಗಳಾದರೂ ಬ್ರಹ್ಮನನ್ನು ತತ್ವವೆನ್ನುತ್ತಾರೆ. ಆದುದರಿಂದ ವೈಷಮ್ಯವಿದೆ ಎಂದರೆ—) ನಿರ್ವಿಶೇಷತ್ವವಾಚೈವ = ನಿರ್ವಿಶೇಷತ್ವದ ವಚನದಿಂದಲೆ, ಶೂನ್ಯಂ = ಶೂನ್ಯವು, ಬ್ರಹ್ಮೇತಿ=ಬ್ರಹ್ಮ ಎನ್ನುವುದು, ಇವುಗಳಿಗೆ, ಭಿದಾ=ಭೇದವು, ನೋ=ಇಲ್ಲ. (ಅಂದರೆ— ಶೂನ್ಯ ಎನ್ನುವುದಕ್ಕೂ ಬ್ರಹ್ಮ ಎನ್ನುವುದಕ್ಕೂ ಭೇದವು ಇಲ್ಲ. ಬೌದ್ಧನು ಶೂನ್ಯಕ್ಕೆ ನಿರ್ವಿಶೇಷತ್ವವನ್ನೂ, ಮಾಯಾವಾದಿಗಳು ಬ್ರಹ್ಮನಿಗೆ ನಿರ್ವಿಶೇಷತ್ವವನ್ನೂ ಅಂಗೀಕರಿಸಿರುತ್ತಾರೆ. ವೈಧರ್ಮ್ಯವೇ ವಸ್ತುಗಳಿಗೆ ಭೇದಕವು. ವೈಧರ್ಮ್ಯವು ಇಲ್ಲವೆನ್ನುವುದು ಇಬ್ಬರಿಗೂ ಸಮ್ಮತವು. ಆದುದರಿಂದ ಕೇವಲವಾಗಿಯೇ ಶಬ್ದಭೇದವು. ವಸ್ತುಭೇದವಿಲ್ಲ.) (ಹಾಗಾದರೆ 'ಸತ್ಯಂ

**ಜ್ಞಾನಮನಂತಂ ಬ್ರಹ್ಮ, ವಿಜ್ಞಾನಮಾನಂದಂ ಬ್ರಹ್ಮ'** ಎನ್ನುವ ಶ್ರುತಿಯಿಂದಲೇ ಸತ್ಯಾದಿಲಕ್ಷಣಗಳುಳ್ಳ ಬ್ರಹ್ಮನು ಸರ್ವ ವಸ್ತುಗಳಿಂದಲೂ ವ್ಯಾವರ್ತಿತನಾಗಿರುತ್ತಾನೆ. ಆದುದರಿಂದ ಶೂನ್ಯ-ಬ್ರಹ್ಮ ಇವುಗಳಿಗೆ ಭೇದವಿಲ್ಲವೆಂದು ಹೇಗೆ ಹೇಳಲ್ಪಡುತ್ತದೆ ಎಂದರೆ— ಸದಾದಿ ಲಕ್ಷಣಗಳಿಂದ ಬ್ರಹ್ಮನು ಶ್ರುತಿಯಿಂದ ಸರ್ವವಸ್ತುಗಳಿಂದಲೂ ಭಿನ್ನನು ಎಂದು ಹೇಳಲ್ಪಡುತ್ತಾನೆ. ಆದಾದರೂ ಮಾಯಾವಾದಿಗಳ ಮತದಲ್ಲಿ ಕೂಡುವುದಿಲ್ಲ ಎನ್ನುತ್ತಾರೆ ) ಸತ್ = ನಿರ್ದೋಷವು, ಚಿತ್=ಜ್ಞಾನರೂಪವು, ಸುಖಾದಿಕಂ ಚೈವ=ಸುಖ ಮೊದಲಾದುದೂ ಕೂಡ, ಕಿಮೇವ=ಯಾವುದು? (ಯಾವುದೂ ಇಲ್ಲ ) ಅಖಂಡವಾದಿನಃ= ನಿರ್ವಿಶೇಷವಾದಿಯಾದ ಮಾಯಾವಾದಿಗೆ ಸತ್ಯಾದಿ ಧರ್ಮಗಳು, ಕುತಃ = ಯಾವುದರಿಂದ? (ಸತ್-ಚಿತ್ ಮೊದಲಾದುದು ೧ ಬ್ರಹ್ಮಸ್ವರೂಪವೋ, ೨ ಬೇರೆಯೋ, ಒಂದನೇಕಲ್ಪದಲ್ಲಿ ಲಕ್ಷ್ಯ-ಲಕ್ಷಣಭಾವವು ಕೂಡಲಾರದು. ಅನೇಕಪದಕ್ಕೆ ವೈಯರ್ಥ್ಯವು. ಎರಡನೇದ್ದು ಕೂಡ ಲಾರದು. ಅಖಂಡವಾದಿಗಳಾಗಿರುತ್ತಾರೆ ) (ಯದ್ಯಪಿ ಸತ್ಯಾದಿ ಪದಗಳಿಂದ ಪ್ರತಿಪಾದ್ಯವಾದ ವಸ್ತುವಿನಲ್ಲಿ ಭೇದವಿಲ್ಲ. ಆದಾಗ್ಯೂ ವ್ಯಾವರ್ತ್ಯಗಳಾದ ಅಸತ್ವಾದಿಗಳಿಗೆ ಭೇದವು ಇದ್ದೇ ಇದೆ. ಆದ ಕಾರಣ ಅಸತ್ವಾದಿ ವ್ಯಾವೃತ್ತಿಯೇ ಪ್ರಯೋಜನವಾಗಿವುಳ್ಳವುಗಳು — ಸತ್ಯಾದಿ ಪದಗಳು ಎಂದು ಶ್ರುತ್ಯರ್ಥ ನಿರ್ವಾಹವು ಹೇಗೆಂದರೆ—) ವ್ಯಾವರ್ತ್ಯಮಾತ್ರಭೇದಸ್ತು = ಕೇವಲ ವ್ಯಾವರ್ತ್ಯದ ಭೇದವಾದರೂ, ಶೂನ್ಯವಾದಿನಃ=ಶೂನ್ಯವಾದಿಗೆ, ವಿದ್ಯತೇ=ಇರುತ್ತದೆ. (ಈ ಪ್ರಕ್ರಿಯೆಯು ಎಲ್ಲವೂ ಶೂನ್ಯವಾದಿಗಳ ಮತದಲ್ಲಿಯೂ ಇದ್ದೇ ಇದೆ ಆದುದರಿಂದ ಇದ ರಿಂದಲೂ ಬ್ರಹ್ಮ ಶೂನ್ಯರಿಗೆ ಭೇದವನ್ನು ಹೇಳಲಿಕ್ಕೆ ಶಕ್ಯವಾಗಲಾರದು ) (ವ್ಯಾವರ್ತ್ಯ ಭೇದವು ಶೂನ್ಯವಾದಿಗಳ ಮತದಲ್ಲಿ ಇದೆ. ಎನ್ನುತ್ತಾರೆ.) (ಶೂನ್ಯವಾದಿಯು) ಅನೃತಾದೇಃ=ಅನೃತ ಮೊದಲಾದುದಕ್ಕೆ, ಅಪೋಹಂ ತು = (ಸತ್ಯಾದಿ ಪದಾರ್ಥತ್ವದಿಂದಲೂ ಶೂನ್ಯ ವಿಶೇಷಣತ್ವ ದಿಂದಲೂ) ಅಪೋಹವ (ವ್ಯಾವರ್ತಿ) ಯನ್ನಾದರೂ, ಸ್ವಯಮೇವ=ತಾನೇ, ಮನ್ಯತೇ=ತಿಳಿ ಯುತ್ತಾನೆ. ಹಿ = ಬೌದ್ಧರು ಅಪೋಹಪದಾರ್ಥವಾದಿಗಳೆನ್ನುವುದು ಪ್ರಸಿದ್ಧವೇ. ಮತ್ತು **'ಜಾಡ್ಯಸಂವೃತಿದುಃಖಾಂತಪೂರ್ವದೋಷವಿರೋಧಿ ಯತ್'** ಎನ್ನುವುದು ಪ್ರಸಿದ್ಧವು. (ಬ್ರಹ್ಮ ಶೂನ್ಯಗಳಿಗೆ ವಿಶೇಷಪ್ರತಿಪಾದನವಿರಲಿ. ನಿರ್ವಿಶೇಷಗಳಾದ ಬ್ರಹ್ಮಶೂನ್ಯಗಳಿಗೆ ವಿಶೇಷವಿದೆ ಎನ್ನುವ ಪ್ರತಿಜ್ಞೆಯೇ ವ್ಯಾಹತವು ಎನ್ನುತ್ತಾರೆ.) ನಿರ್ವಿಶೇಷತ್ವತಃ=ವಿಶೇಷವಿಲ್ಲದಿರು ವುದರಿಂದ, ಬ್ರಹ್ಮಶೂನ್ಯಯೋಃ = ಬ್ರಹ್ಮಶೂನ್ಯಗಳಿಗೆ, ವಿಶೇಷಃ=ವಿಶೇಷವು, ನೈವ=ಪ್ರತಿಜ್ಞಾ ಮಾಡಲಿಕ್ಕೆ ಶಕ್ಯವಾಗುವುದಿಲ್ಲ.

**ಸ. ರ. ವಿ—** (1) ಏಕಪುದ್ಗಲವಾದವು, ಬಹುಪುದ್ಗಲವಾದವೆಂದು ಶೂನ್ಯವಾದವು ಎರಡು ವಿಧವು. ಹೇಗೆಂದರೆ — ವಸ್ತುತಃ ಶೂನ್ಯಸ್ವರೂಪವೇ ಅಜ್ಞಾನವಶದಿಂದ ತನ್ನಲ್ಲಿ ಪುದ್ಗಲಭಾವವನ್ನು ತಿಳಿಯತಕ್ಕದು. ಒಬ್ಬನೇ ಪುದ್ಗಲನು ಅವನ ಅಜ್ಞಾನದಿಂದಲೇ ಈ ಜಡಾಜಡಭೇದವು ಕಲ್ಪಿತವಾಗಿದೆ. ಆ ಪುದ್ಗಲನಿಗೆ ಮುಕ್ತಿಯಾದರೆ ಯಾವುದಾದರೊಂದೂ ಉಳಿಯುವುದಿಲ್ಲ. ಹಾಗೆಯೇ ಸಂವೃತಿಯಿಂದಲೇ ಶೂನ್ಯತತ್ವಕ್ಕೆ ಬಹುಪ್ರಕಾರವಾಗಿ ಸಂಬಂಧ ವಿದ್ದುದರಿಂದ ಬಹುಪುದ್ಗಲರು ಆಗುತ್ತಾರೆ. ಅದರಲ್ಲಿ ಶೂನ್ಯೈಕ್ಯಜ್ಞಾನದಿಂದ ಯಾರ ಸಂವೃ ತ್ತಿಯು ನಿವೃತ್ತವಾಯಿತೋ, ಆತನ ಪುದ್ಗಲತ್ವ ನಿವೃತ್ತಿಯಿಂದ ಶೂನ್ಯತಾಪತ್ತಿಯು ಆಗುತ್ತದೆ ಯಾವನು ನಿವೃತ್ತವಾಗದಿರುವ ಅಜ್ಞಾನವುಳ್ಳವನಾಗಿ ಸಂಸಾರವನ್ನು ಅನುಭವಿಸಿಕೊಂಡು ಇರು ತ್ತಾನೆ. ಅಜ್ಞಾನಸಂಬಂಧದ ಹೋಗುವಿಕೆಯಿಂದಲೇ ಬಂಧ ಮೋಕ್ಷಗಳು ಆಗುತ್ತವೆ. ಶೂನ್ಯ ತತ್ವಕ್ಕೆ ವಸ್ತುತಃ ಬಂಧವಿಲ್ಲ; ಮೋಕ್ಷವೂ ಇಲ್ಲ, ಎಂದುಪನ್ಯಸ್ತವಾದ ಶೂನ್ಯವಾದದಿಂದ

ಮಾಯಾವಾದಕ್ಕೆ ಸಾಮ್ಯವನ್ನು ತೋರಿಸಿದರು. (2) ಏಕಜೀವವಾದವು, ಬಹುಜೀವವಾದವು ಎಂದು ಮಾಯಾವಾದವೂ ಎರಡು ವಿಧವು. ಮೊದಲು ಹೇಳಲ್ಪಟ್ಟ ಏಕಪುದ್ಗಲವಾದವು ಏಕಜೀವವಾದವು. ಯಾವುದು ಬಹುಪುದ್ಗಲವಾದವೋ ಅದೇ ಬಹುಜೀವವಾದವು. ಯಾವುದು ಶೂನ್ಯದಲ್ಲಿ ಜಗತ್ತಿನ ಆರೋಪಕ್ಕೆ ಕಾರಣವಾಗಿ ಬೌದ್ಧರಿಗೆ ಅಭಿಮತವಾದ ಸಂವೃತಿಯೋ, ಅದೇ ಅವಿದ್ಯಾಪರನಾಮಕವಾದ ಮಾಯೆಯು ಬ್ರಹ್ಮನಲ್ಲಿ ಜಗದಾರೋಪಕ್ಕೆ ಕಾರಣವಾಗಿ ಮಾಯಾವಾದಿಗಳಿಗೆ ಅಭಿಮತವು. ಆದುದರಿಂದ ಶೂನ್ಯಬ್ರಹ್ಮರಿಗೂ ಭೇದವನ್ನು ಹೇಳಲಿಕ್ಕೆ ಮಾಯಾವಾದಿಗಳೂ, ಬೌದ್ಧರೂ ನಿರ್ವಿಶೇಷತ್ವವನ್ನಂಗೀಕರಿಸಿದರಿಂದ ಅವರಿಗೆ ಶಕ್ಯವಾಗುವುದಿಲ್ಲ. ಸಚ್ಚಿದಾನಂದರೂಪನಾದ ಬ್ರಹ್ಮನಿಗೆ ಶೂನ್ಯತ್ವವು ವಿರುದ್ಧವೆಂದು ಹೇಳಕೂಡದು. ನಿರ್ವಿಶೇಷತ್ವಾದಿಗಳಿಂದ ಬ್ರಹ್ಮನಲ್ಲಿ ಸತ್ವಾದಿಗಳನ್ನು ನಿರೂಪಿಸಲಿಕ್ಕೆ ಅಶಕ್ಯವು. ಅನೃತಾದಿವ್ಯಾವೃತ್ತಿಮಾತ್ರಕ್ಕಾದರೂ ಸದಾದಿ ಶಬ್ದಗಳಿಂದ ವಾಚ್ಯತ್ವವಿದ್ದರೂ ಶೂನ್ಯತ್ವಕ್ಕೆ ವಿರುದ್ಧವಲ್ಲ. ಬೌದ್ಧನೂ ಕೂಡ ಶೂನ್ಯಕ್ಕೆ ಸರ್ವಾಪೋಹರೂಪತ್ವವನ್ನು ಅಂಗೀಕರಿಸಿರುವನು. ಆದುದರಿಂದ ಶೂನ್ಯಬ್ರಹ್ಮರಿಗೆ ನಿರ್ವಿಶೇಷತ್ವವನ್ನು ಹೇಳುವವನಿಂದ ಯಾವ ರೀತಿಯಿಂದಲೂ ವಿಶೇಷವನ್ನು ಉತ್ಪ್ರೇಕ್ಷಿಸಲಿಕ್ಕೆ ಶಕ್ಯವಾಗುವುದಿಲ್ಲ. ॥ ೪೩ ॥ ೪೪ ॥ ೪೫ ॥ ೪೬ ॥ ೪೭ ॥ ೪೮ ॥

**ಸ. ರ. ವಿ—** ಹಾಗಾದರೆ— ವೇದಪ್ರಾಮಾಣ್ಯವನ್ನು ಹೇಳುವ ಮಾಯಾವಾದಿಗಳಿಗೂ, ವೇದಬಾಹ್ಯರಾದ ಬೌದ್ಧರಿಗೂ ಸಿದ್ಧಾಂತವು ಒಂದೇ ಆಗುವುದು ಹೇಗೆ ಎಂದರೆ –

**ನ್ಯಾಯಸುಧಾ—** ಹಾಗಾದರೆ— ಮಾಯಾವಾದಿಗಳು ವೇದಕ್ಕೆ ಪ್ರಾಮಾಣ್ಯವನ್ನೂ ನಿತ್ಯತ್ವವನ್ನೂ ಅಂಗೀಕರಿಸಿ, ಈ ವೇದವಾಕ್ಯ ನಿರ್ವಾಹವನ್ನು ಮಾಡಿರುವರು. ಶೂನ್ಯವಾದಿಗಳಾದರೂ ವೇದಪ್ರಾಮಾಣ್ಯವನ್ನೇ ಅಂಗೀಕರಿಸುವುದಿಲ್ಲ. ಆದುದರಿಂದ 'ವ್ಯಾವರ್ತ್ಯಮಾತ್ರಭೇದಸ್ತು' ಎಂದು ಹೇಗೆ ಹೇಳಿದ್ದು ಎಂದರೆ ಹೇಳುತ್ತಾರೆ—

**ಮೂ ॥ ಪ್ರಾಮಾಣ್ಯಾದಿ ಚ ವೇದಸ್ಯ ಫಲತಃ ಸಮಮೇವ ಹಿ ।**
**ಅತತ್ವಾವೇದಕಂ ಯಸ್ಮಾತ್ಪ್ರಮಾಣಂ ತೇನ ಕಥ್ಯತೇ ॥ ೪೯ ॥**
**ಅತತ್ವಾವೇದಕತ್ವಂ ಯದಪ್ರಾಮಾಣ್ಯಂ ಸತಾಂ ಮತಂ ।**
**ದೀರ್ಘಭ್ರಾಂತಿಕರೀ ಚೇತ್ಸ್ಯಾದತತ್ವಾವೇದಕಪ್ರಮಾ ॥ ೫೦ ॥**
**ರಜ್ಜುಸರ್ಪಾದಿವಿಜ್ಞಾನಾದಸ್ಯಾಧಿಕ್ಯಾದಮಾನತಾ ।**
**ಸ್ಯಾದಾಗಮಸ್ಯಾನಿವರ್ತ್ಯಮಹಾಮೋಹಪ್ರದತ್ವತಃ ॥ ೫೧ ॥**
**ತಲನೈಲ್ಯಾದಿವಿಜ್ಞಾನಮಾಕಾಶೇ ಮಾನತಾಂ ವ್ರಜೇತ್ ।**
**ಛತ್ರಾಕಾರತ್ವವಿಜ್ಞಾನಂ ಚಂದ್ರಪ್ರಾದೇಶತಾ ಮತಿಃ ॥ ೫೨ ॥**

**ಅ ॥** ವೇದಸ್ಯ=ವೇದಕ್ಕೆ, ಪ್ರಾಮಾಣ್ಯಾದಿ ಚ=ಪ್ರಾಮಾಣ್ಯ ಮೊದಲಾದುದು, ಫಲತಃ=ಫಲದಿಂದ, ಸಮಾನಮೇವ=ಸಮಾನವಷ್ಟೆ! (ಅಂದರೆ ಶಬ್ದಮಾತ್ರದಿಂದ ವಿಷಮವು. ಅರ್ಥವಾದರೂ ಇಬ್ಬರಿಗೂ ಸಮಾನವೇ. ಆದುದರಿಂದ ವಾಕ್ಯಾರ್ಥನಿರ್ವಾಹವೂ ಸಮಾನವೇ ಎಂದು ಹೇಳಿದ್ದು ಯುಕ್ತವೇ. ವೇದವಾಕ್ಯಕ್ಕೆ ಪ್ರಾಮಾಣ್ಯವನ್ನು ಇಟ್ಟುಕೊಳ್ಳುವುದು ಮಾಯಾವಾದಿಗಳಿಗೆ ಕಪಟಮಾತ್ರವು. ಪ್ರಮೇಯವಾದರೂ ಸಮಾನವೇ.) (ಫಲತಃ ಸಮಾನವುಹೇಗೆಂದರೆ—) ಯಸ್ಮಾತ್ = ಯಾವಕಾರಣದಿಂದ, (ವೇದವು) ಅತತ್ವಾವೇದಕಂ = ಅಯಥಾರ್ಥವನ್ನು

**ತಿಳಿಸಿಕೊಡತಕ್ಕ, ಪ್ರಮಾಣಂ**=ಪ್ರಮಾಣ ವೆಂದು,**ತೇನ**=ಅಮಾಯಾವಾದಿಯಿಂದ, (**'ಅವಿದ್ಯಾವದ್ವಿಷಯಾಣಿ ಪ್ರತ್ಯಕ್ಷಾದೀನಿ ಪ್ರಮಾಣಾನಿ ಶಾಸ್ತ್ರಾಣಿ ಚ'** ಇತ್ಯಾದಿಗಳಲ್ಲಿ **ಕಥ್ಯತೇ**=ಹೇಳಲ್ಪಡುತ್ತದೋ, (ಅತತ್ವಾವೇದಕತ್ವವನ್ನು ಅಂಗೀಕರಿಸಿದರೂ ಸಮಾನವು ಹೇಗೆಂದರೆ—) **ಯತ್**=ಯಾವಕಾರಣದೆಶೆಯಿಂದ, **ಸತಾಂ**=ವಿದ್ವಾಂಸರಿಗೆ, **ಅತತ್ವಾವೇದಕತ್ವಂ** = ಅತತ್ವಾವೇದಕತ್ವವು, **ಅಪ್ರಾಮಾಣ್ಯಂ** = ಅಪ್ರಾಮಾಣ್ಯವೆಂದು, **ಮತಂ**=ಸಮ್ಮತವೋ. (೧)ನಾನಾವಿಧಗಳಾದ ಲಕ್ಷಣಗಳನ್ನು ನಿರ್ಮಾಣಮಾಡಿದರೂ ಪರೀಕ್ಷಕರು ಅತತ್ವಾವೇದಕ ವ್ಯಾವೃತ್ತಿಗಾಗಿ ಪ್ರಯತ್ನವನ್ನೇ ಮಾಡುತ್ತಾರೆ. ಅತತ್ವಾವೇದಕಕ್ಕೂ ಪ್ರಾಮಾಣ್ಯವನ್ನು ಯಾವ ಪರೀಕ್ಷಕರೂ ಒಪ್ಪುವುದಿಲ್ಲ. ಆದುದರಿಂದ ಮಾಯಾವಾದಿಗಳಿಂದ ಅಂಗೀಕೃತವಾದ ವೇದಪ್ರಾಮಾಣ್ಯವೆಂದರೆ— ಅಪ್ರಾಮಾಣ್ಯವೇ. ಪ್ರಾಮಾಣ್ಯವಿಲ್ಲದಿದ್ದರೆ— ಪ್ರಾಮಾಣ್ಯಸ್ವತಸ್ತ್ವವು ದೂರತಃ ನಿರಸ್ತವಾಗಿದೆ. ನಿತ್ಯತ್ವವ್ಯುತ್ಪಾದನವೂ ವ್ಯರ್ಥವೇ,) (ಹಾಗಾದರೆ— ಅತತ್ವಾವೇದಕತ್ವವಿದ್ದಾಗ್ಯೂ ಯಾವುದರ ವಿಷಯವು ಬ್ರಹ್ಮಜ್ಞಾನದೆಸೆಯಿಂದ ಮೊದಲೇ ಬಾಧಿಸಲ್ಪಡುತ್ತದೊ ಅದು ಪ್ರಮಾಣವು. ಯಾವುದರ ವಿಷಯವು ಬ್ರಹ್ಮಜ್ಞಾನದಿಂದಲೇ ಬಾಧಿಸಲ್ಪಡುತ್ತದೋ ಅದು ಅತತ್ವಾವೇದಕ ಪ್ರಮಾಣವು ಎಂದು ವಿಭಾಗವು. ವೇದವಿಷಯ ವಾದರೂ ಬ್ರಹ್ಮಜ್ಞಾನದಿಂದಲೇ ಬಾಧಿಸಲ್ಪಡುತ್ತದೆ. ಆದುದರಿಂದ ಅದಕ್ಕೆ ಪ್ರಾಮಾಣ್ಯವು ಎನ್ನುವ ಅಭಿಪ್ರಾಯದಿಂದ ಶಂಕಿಸುತ್ತಾರೆ). **ದೀರ್ಘಭ್ರಾಂತಿಕರೀ**=ಯಾವುದು ದೀರ್ಘವಾದ ಭ್ರಾಂತಿಯನ್ನು ಮಾಡತಕ್ಕದ್ದೋ ಅದು, **ಅತತ್ವಾವೇದಕಪ್ರಮಾ**=ಅಯಥಾರ್ಥವನ್ನು ತಿಳಿಸಿಕೊಡತಕ್ಕ ಪ್ರಮಾಣವು ಇತಿ **ಸ್ಯಾಚ್ಚೇತ್** = ಹೀಗೆ ಮತವಾಗಿದ್ದರೆ, (ಇದು ೧ ಲೋಕಾನುಭವವನ್ನು ಅನುಸರಿಸಿ ಹೇಳಲ್ಪಡುತ್ತದೋ, ೨ ತಮ್ಮ ಸಂಕೇತಮಾತ್ರದಿಂದಲೋ ಒಂದನೇ ಕಲ್ಪದಲ್ಲಿ ದೋಷವನ್ನು ಹೇಳುತ್ತಾರೆ.) **ರಜ್ಜುಸರ್ಪಾದಿ ವಿಜ್ಞಾನಾತ್**=ರಜ್ಜುಸರ್ಪ ಮೊದಲಾದವುಗಳ ಭ್ರಮೆಯನ್ನು ಹುಟ್ಟಿಸಕ್ಕ ದುಷ್ಟೇಂದ್ರಿಯಾದಿಗಳ ದೆಶೆಯಿಂದಲೂ **ಆಧಿಕ್ಯಾದಪಿ**=ಆಧಿಕ್ಯ ದಿಂದಲೇ, **ಅನಿವರ್ತ್ಯಮಹಾಮೋಹಪ್ರದತ್ವತಃ**=ಅಲ್ಪಕಾಲದಿಂದ ನಿವರ್ತ್ಯವಾಗದಿರುವ ಯಾವುದು ಮಹತ್ತಾದ ಮೋಹವೋ ಅದನ್ನು ಕೊಡುವುದರಿಂದ, ಆಗಮಸ್ಯ ವೇದಕ್ಕೆ, **ಅಮಾನತಾ**=ಅಪ್ರಾಮಾಣ್ಯವು **ಸ್ಯಾತ್**=ಬರುವುದು. (ಎರಡನೇದರಲ್ಲಿ ಅತಿಪ್ರಸಂಗವನ್ನು ಹೇಳುತ್ತಾರೆ.) **ತಲನೈಲ್ಯಾದಿ ವಿಜ್ಞಾನಂ**=ಇಂದ್ರನೀಲದ ನೈಲ್ಯದಂತೆ ಇರತಕ್ಕ ನೈಲ್ಯವೇ ಮೊದಲಾಗಿ ಉಳ್ಳವಿಜ್ಞಾನವು, (ಆದಿಪದಾರ್ಥವನ್ನು ಭಾಷ್ಯಕಾರರು ತಾನಾಗಿಯೇ ವಿವರಿಸುತ್ತಾರೆ) **ಛತ್ರಾಕಾರತ್ವವಿಜ್ಞಾನಂ** = ಛತ್ರಾಕಾರತ್ವಜ್ಞಾನವೂ, **ಆಕಾಶೇ** = ಆಕಾಶದಲ್ಲಿ, **ಮಾನತಾಂ**=ಪ್ರಾಮಾಣ್ಯವನ್ನು, **ವ್ರಜೇತ್**=ಹೊಂದುವುದು. **ಚಂದ್ರಪ್ರಾದೇಶತಾಮತಿಃ**=ಚಂದ್ರನು ಪ್ರಾದೇಶ ಪರಿಮಿತನು ಎನ್ನುವ ಬುದ್ಧಿಯು, **ಮಾನತಾಂ**=ಪ್ರಾಮಾಣ್ಯವನ್ನು **ವ್ರಜೇತ್**=ಹೊಂದುವುದು.

**ತಾ ॥ ಸ. ರ. ವಿ.** (1) ಅತತ್ವಾವೇದಕಪ್ರಮಾಣವನ್ನು ಅಂಗೀಕರಿಸತಕ್ಕ ಮಾಯಾವಾದಿಗಳಿಂದ ಹೇಳಲ್ಪಡತಕ್ಕ ವೇದಪ್ರಾಮಾಣ್ಯವೂ ಬೌದ್ಧರಿಂದ ಹೇಳಲ್ಪಡತಕ್ಕ ಅಪ್ರಾಮಾಣ್ಯವೂ ಫಲತಃಒಂದೇ ಅತತ್ವಾವೇದಕತ್ವವು ಅಪ್ರಮಾಣಕ್ಕೆ ಲಕ್ಷಣವು. ತತ್ವಾವೇದಕತ್ವವೇ ಪ್ರಮಾಣಕ್ಕೆ ಲಕ್ಷಣವು. ಇಲ್ಲವಾದರೆ ಪ್ರಮಾಣ ಅಪ್ರಮಾಣಗಳಿಗೆ ಭೇದವು ಇಲ್ಲದೆ ಹೋಗಬೇಕಾಗುವುದು. ಯಾವುದು ಅತತ್ವಾವೇಗಕವಾದುದು ಕೇವಲ ಅದ್ವೈತಜ್ಞಾನದಿಂದ ಬಾಧ್ಯವೋ ಅದು ಪ್ರಮಾಣವು. ಯಾವುದು ಇತರದಿಂದಲೂ ಬಾಧ್ಯವೋ, ಅದು ಅಪ್ರಮಾಣವು ಎಂದು ಪ್ರಮಾಣ ಅಪ್ರಮಾಣಗಳಿಗೆ ಸಂಕೇತ ಭೇದದಿಂದ ವ್ಯವಸ್ಥೆಯೆಂದು ಹೇಳಕೂಡದು. ಅದಕ್ಕಿಂತ ವಿಪರೀತ ಸಮಯವೂ ಕೂಡ ವಿಶೇಷವಿಲ್ಲದಿರುವುದರಿಂದ ಪರಿಹರಿಸಲು ಅಶಕ್ಯವು ಆಗಬೇಕಾಗುವುದು.

(2) ವೇದಾದಿಗಳು ದೀರ್ಘಭ್ರಾಂತಿಯನ್ನು ಹುಟ್ಟಿಸುವುದರಿಂದ ಅಪ್ರಮಾಣಗಳು ಅಲ್ಲ ವೆಂದು ಹೇಳಕೂಡದು. ಅಲ್ಪಕಾಲೀನವಾದ ಭ್ರಾಂತಿಯನ್ನು ಹುಟ್ಟಿಸುವುದಕ್ಕೆ ಅಪ್ರಾಮಾಣ್ಯ ವಿದ್ದರೆ ಅತಿದೀರ್ಘ ಕಾಲೀನವಾದ ಭ್ರಮವನ್ನು ಹುಟ್ಟಿಸುವುದಕ್ಕೆ ಸುತರಾಂ ಅಪ್ರಾಮಾಣ್ಯವು. ಇಲ್ಲವಾದರೆ ಅತಿ ದೀರ್ಘಕಾಲದಲ್ಲಿ ಅನುಸರಿಸಿಕೊಂಡಿರತಕ್ಕ ಅಯಥಾರ್ಥವಾದ 'ಪ್ರಾದೇಶಪರಿ ಮಿತಶ್ಚಂದ್ರಮಾಃ' ಎನ್ನುವ ಜ್ಞಾನಕ್ಕೂ ಪ್ರಾಮಾಣ್ಯವು ಬರಬೇಕಾಗುವುದು ॥ ೪೯ ॥ ೫೦ ॥ ॥ ೫೧ ॥ ೫೨ ॥

ಸ. ರ. ವಿ— ಹೇಗೆ ಮಾಯಾವಾದಿಗಳಿಗೆ ವೇದಾಪ್ರಾಮಾಣ್ಯ ಪರಿಹರಿಸಲಿಕ್ಕೆ ಅಶಕ್ಯವೋ ಹಾಗೆಯೇ ಆ ಮಾಯಾವಾದಿಗಳಿಂದ ಬ್ರಹ್ಮನಿಗೆ ಶೂನ್ಯತ್ವವೂ ಪರಿಹರಿಸಲಿಕ್ಕೆ ಅಶಕ್ಯವೆಂದು ಸವಿಸ್ತರವಾಗಿ ಹೇಳುತ್ತಾರೆ—

**ನ್ಯಾಯಸುಧಾ** — (1) ಇಂತಹ ಅತತ್ವಾವೇದಕತ್ವರೂಪವಾದ ವೇದಪ್ರಾಮಾಣ್ಯವು ಶೂನ್ಯವಾದಿಯಿಂದಲೂ ಅಂಗೀಕೃತವೇ ಆಗಿರುವುದರಿಂದ ಇದು ಮಾಯಾವಾದಿಗಳಿಗೆ ಶೂನ್ಯ ವಾದಿಗಳಿಂದ ವಿಶೇಷವೆಂದು ಹೇಳಲಿಕ್ಕೆ ಬರುವುದಿಲ್ಲ. ಸರ್ವವೇದಕ್ಕೂ ಮಾಯಾವಾದಿಗಳಿಂದ ತತ್ವಾವೇದಕತ್ವವು ಹೇಳಲ್ಪಡುವುದಿಲ್ಲ. ಮತ್ತೆ ಅದ್ವಿತೀಯವಾದ ತತ್ವವನ್ನು ಪ್ರತಿಪಾದಿಸತಕ್ಕ ತತ್ತ್ವಮಸೀತ್ಯಾದಿ ಮಹಾ ವಾಕ್ಯಕ್ಕೆ ನಿರ್ವಿಶೇಷವಾದ ಸಚ್ಚಿದಾನಂದಾತ್ಮಕವಾದ ಪದಾರ್ಥ ವನ್ನು ಪ್ರತಿಪಾದಿಸತಕ್ಕ **'ಯತ್ತದದ್ರೇಶ್ಯಮಗ್ರಾಹ್ಯಂ' 'ಸತ್ಯಂ ಜ್ಞಾನಂ'** ಇದು ಮೊದಲಾದ ಅವಾಂತರ ವಾಕ್ಯಕ್ಕೂ ತತ್ವಾವೇದಕತ್ವವು ಅಂಗೀಕರಿಸಲ್ಪಡುತ್ತದೆ. ಶೂನ್ಯವಾದಿಯು ಹೀಗೆ ಹೇಳುವುದಿಲ್ಲ. ಆದುದರಿಂದ ಸಾಮ್ಯವು ಹೇಗೆ ಎಂದರೆ— ಶೂನ್ಯವಾದಿಯೂ ಕೂಡ ಹೀಗೆಯೇ ಅಂಗೀಕರಿಸುತ್ತಾನೆ— ವಿಷಯವಿಸಂವಾದಾಭಾವಾತಿರಿಕ್ತವಾದ ತತ್ವಾವೇದಕತ್ವವು ಯಾವು ದೊಂದೂ ಇರುವುದಿಲ್ಲ. ಹಿಂದೆ ಹೇಳಿದ ಎರಡು ವಾಕ್ಯಗಳ ಅರ್ಥದ ಅವಿಸಂವಾದವು ಶೂನ್ಯ ವಾದಿಗಳಿಂದಲೂ ಅಂಗೀಕೃತವೇ ಆಗಿದೆ ಎನ್ನುವ ಅಭಿಪ್ರಾಯವುಳ್ಳವರಾಗಿ ಮಹಾವಾಕ್ಯಾ ರ್ಥಾಂಗೀಕಾರವನ್ನು ತೋರಿಸುತ್ತಾರೆ.

**ಮೂ ॥ ನಿರ್ಭೇದತ್ವಂ ತು ಶೂನ್ಯಸ್ಯ ತೇನಾಪ್ಯಂಗೀಕೃತಂ ಸದಾ ।**
**ಸತ್ವಾಸತ್ವಾದಿಧರ್ಮಾಣಾಮಭಾವ ಉಭಯೋರ್ಮತಃ ॥ ೫೩ ॥**
**ನ ಹಿ ಸತ್ಪ್ರತಿಯೋಗಿತ್ವಂ ಶೂನ್ಯತ್ವಂ ತೇನ ಚೇಷ್ಯತೇ ।**
**ನ ಚ ದುಃಖವಿರೋಧಿತ್ವಾದನ್ಯಾ ಹ್ಯಾನಂದತೇಷ್ಯತೇ ॥ ೫೪ ॥**
**ಮಾಯಿನಾ ಶೂನ್ಯಪಕ್ಷೇಽಪಿ ಜ್ಞಾನಂ ಜಾಡ್ಯವಿರೋಧಿ ಚ ।**
**ಧರ್ಮಾಃ ಕೇಽಪಿ ನ ಸಂತ್ಯೇವ ಕೋ ವಿಶೇಷಸ್ತತಸ್ತಯೋಃ ॥ ೫೫ ॥**

ಅ ॥ ಶೂನ್ಯಸ್ಯ = ಶೂನ್ಯತತ್ವಕ್ಕೆ, ನಿರ್ಭೇದತ್ವಂ ತು = ಭೇದಾಭಾವವಾದರೂ, ಸದಾ= ಯಾವಾಗಲೂ, ತೇನಾಪಿ = ಶೂನ್ಯವಾದಿಯಿಂದಲೂ ಕೂಡ, ಅಂಗೀಕೃತಂ = ಅಂಗೀಕರಿಸಿ ಕೊಳ್ಳಲ್ಪಟ್ಟದೆ. (ಅವಾಂತರ ವಾಕ್ಯಾರ್ಥಾಂಗೀಕಾರವೂ ಕೂಡ ಮಾಯಾವಾದಿ-ಬೌದ್ಧ ರಿಬ್ಬರಿಗೂ ಸಮಾನವು ಎಂದು ತೋರಿಸುತ್ತಾ ನಿರ್ವಿಶೇಷತ್ವವು ಇಬ್ಬರಿಗೂ ಸಮ್ಮತವೆನ್ನುತ್ತಾರೆ) ಸತ್ವಾಸತ್ವಾದಿಧರ್ಮಾಣಾಂ=(ತತ್ವಕ್ಕೆ) ಸತ್ವ-ಅಸತ್ವ ಮೊದಲಾದ ಧರ್ಮಗಳ, ಅಭಾವಃ= ಅಭಾವವು, ಉಭಯೋಃ= ಮಾಯಾವಾದಿ-ಶೂನ್ಯವಾದಿಗಳಿಬ್ಬರಿಗೂ, ಮತಃ = ಸಮ್ಮತವು. (ಸತ್ಯತ್ವವೂ ಕೂಡ ಶೂನ್ಯವಾದಿಯಿಂದ ಅಂಗೀಕರಿಸಲ್ಪಡುತ್ತದೆ, ಎನ್ನುವ ಅಭಿಪ್ರಾಯದಿಂದ

ಶೂನ್ಯವೆಂದರೆ ಅಸತ್ ಅದಕ್ಕೆ ಸತ್ವವು ಹೇಗೆಂದರೆ) ಸತ್ಪ್ರತಿಯೋಗಿತ್ವಂ = ಸದ್ವಿರೋಧಿತ್ವ ರೂಪವಾದ ಅಸತ್ವವು, ಶೂನ್ಯತ್ವಂ = ಶೂನ್ಯತ್ವವು ಎಂದು, ತೇನ ಚ = ಶೂನ್ಯವಾದಿಯಿಂದಲೂ ಕೂಡ, ನೇಷ್ಯತೇ = ಅಂಗೀಕರಿಸಲ್ಪಡುವುದಿಲ್ಲ. (ಅಂದರೆ— ನಿರ್ವಿಶೇಷತ್ವಾಭಿಪ್ರಾಯದಿಂದ ಶೂನ್ಯವೆಂದು ಹೇಳಲ್ಪಡುತ್ತದೆ. ಅಸತ್ವಾಭಿಪ್ರಾಯದಿಂದ ಅಲ್ಲ. ಏಕೆಂದರೆ ಆ ಶೂನ್ಯವನ್ನು ತತ್ವವೆಂದಂಗೀಕರಿಸಿರುವರು ) (ಆನಂದತ್ವವೂ ಕೂಡ ಶೂನ್ಯವಾದಿಯಿಂದ ಅಂಗೀಕರಿಸಲ್ಪಡುತ್ತದೆ ಎಂದು ಹೇಳುವುದಕ್ಕಾಗಿ ಮಾಯಾವಾದಿಗಳಿಂದ ಅಂಗೀಕರಿಸಲ್ಪಟ್ಟ ಆನಂದತ್ವವನ್ನು ಅನುವಾದಮಾಡುತ್ತಾರೆ.) ದುಃಖವಿರೋಧಿತ್ವಾತ್ = ದುಃಖವಿರೋದಿತ್ವದೆಶೆಯಿಂದ, ಅನ್ಯಾ = ಇತರವಾದ, ಆನಂದತಾ = ಆನಂದತ್ವವು, ಮಾಯಿನಾ = ಮಾಯಾವಾದಿಯಿಂದ. ನ ಚ ಇಷ್ಯತೇ = ಅಂಗೀಕರಿಸಲ್ಪಡುವುದಿಲ್ಲ. ಶೂನ್ಯಪಕ್ಷೇ ಽಪಿ = ಶೂನ್ಯಪಕ್ಷದಲ್ಲಿಯೂ ಕೂಡ, (ಆ ದುಃಖವಿರೋಧಿತ್ವರೂಪವಾದ ಆನಂದತ್ವವೂ ಸಮಾನವೇ.) (ಜ್ಞಾನತ್ವಾಂಗೀಕಾರವನ್ನು ತೋರಿಸುತ್ತಾರೆ.) ಜ್ಞಾನಂ = ಜ್ಞಾನವು, ಜಾಡ್ಯವಿರೋಧಿಚ = ಜಾಡ್ಯಕ್ಕೆ ವಿರೋಧಿಯಾದುದು ಎಂದೇ ಮಾಯಿಯಿಂದ ಹೇಳಲ್ಪಡುತ್ತದೆ. ಅದು ಶೂನ್ಯದಲ್ಲಿಯೂ ಸಮಾನವೇ. ಕೇಽಪಿ = ಯಾವ, ಧರ್ಮಾಃ ಧರ್ಮಗಳು, ನ ಸಂತ್ಯೇವ = ಇರುವುದೇ ಇಲ್ಲ. ತತಃ = ಆದುದರಿಂದ ವ್ಯಾವರ್ತಕವಿಲ್ಲದಿರುವುದರಿಂದ, ತಯೋಃ = ಶೂನ್ಯ ಬ್ರಹ್ಮರಿಗೆ, ಕೋ ವಿಶೇಷಃ = ಯಾವ ವಿಶೇಷವು, ಅಂದರೆ, ಭೇದವು ಯಾವನಿಮಿತ್ತವು.

**ತಾ ||** ಸ. ರ. ವಿ— (1) ಮಾಯಾವಾದಿಯು ಬ್ರಹ್ಮನಲ್ಲಿ ಹೇಗೋ ಹಾಗಯೇ ಬೌದ್ಧನು ಶೂನ್ಯವು ಸಜಾತೀಯ, ವಿಜಾತೀಯ ಸ್ವಗತಭೇದಗಳಿಂದ ವಿರಹಿತವಾದುದೆಂದು ಅಂಗೀಕರಿಸಿದುದರಿಂದ ಆ ಮಾಯಾವಾದಿ ಬೌದ್ಧರಿಂದ ಬ್ರಹ್ಮಶೂನ್ಯರಿಗೆ ಭೇದವನ್ನು ಹೇಳಲು ಬರುವುದಿಲ್ಲ. ಹೇಗೆ ನಿರ್ವಿಶೇಷತ್ವವನ್ನು ಅಂಗೀಕರಿಸತಕ್ಕ ಮಾಯಾವಾದಿಯು ಬ್ರಹ್ಮನಲ್ಲಿ ಸತ್ವಾಸತ್ವಾದಿ ಧರ್ಮಗಳನ್ನು ಅಂಗೀಕರಿಸಲಿಲ್ಲವೋ, ಹೀಗೆಯೇ ಬೌದ್ಧನೂ ಕೂಡ ಈ ಸತ್ವಾಸತ್ವಾದಿಧರ್ಮಗಳನ್ನು ಶೂನ್ಯದಲ್ಲಿ ಅಂಗೀಕರಿಸಲಿಲ್ಲ. ಆದುದರಿಂದಲೂ ಅವರಿಬ್ಬರೂ ನಿರೂಪಿಸತಕ್ಕ ಪರತತ್ವವು ಒಂದೇ ಆಗುವುದು. ಸತ್ಪ್ರತಿಯೋಗಿತ್ವರೂಪವಾದ, ಅಸತ್ವರೂಪವಾದ ಧರ್ಮವನ್ನು ಬೌದ್ಧನು ಶೂನ್ಯಕ್ಕೆ ಅಂಗೀಕರಿಸುವುದಿಲ್ಲ. ಶೂನ್ಯಭಾವರೂಪವಾದ ಮೋಕ್ಷಕ್ಕೆ ಭಂಗವು ಬರಬೇಕಾಗುವುದು. (2) ದುಃಖ ಜಡ ನಿಷೇಧರೂಪತ್ವವನ್ನು ಹೊರತು ಭಾವರೂಪಗಳಾದ ಸುಖಜ್ಞಾನಗಳನ್ನು ಬ್ರಹ್ಮನಲ್ಲಿ ಅಂಗೀಕರಿಸದೆ ಇದ್ದುದರಿಂದ ಸುಖಜ್ಞಾನರೂಪತ್ವ ಧರ್ಮಗಳಿಂದಲೂ ಬೌದ್ಧರಿಗೆ ಅಭಿಮತವಾದ ಶೂನ್ಯದೆಶೆಯಿಂದ ವಿಶೇಷ ಹೇಳಲಿಕ್ಕೆ ಮಾಯಾವಾದಿಗೆ ಶಕ್ಯವಲ್ಲ. ಮಾಯಾವಾದಿ-ಬೌದ್ಧರ ಮತಗಳಲ್ಲಿ 'ಶೂನ್ಯಂ ಬ್ರಹ್ಮ' ಎಂದು ನಾಮಭೇದಮಾತ್ರವು. ಆದುದರಿಂದ ಶೂನ್ಯಸ್ವರೂಪವಾದ ಯಾವ ಮೋಕ್ಷವು ಬೌದ್ಧರಿಗೆ ಅಭಿಮತವೋ ಅದೇವೇ ಮಾಯಾವಾದಿಗಳಿಗೂ ಅಭಿಮತವು. ಆದುದರಿಂದಲೇ ಶೂನ್ಯವಾದಿಯ ಮೋಕ್ಷ ನಿರಾಕರಣದಿಂದ ಮಾಯಾವಾದಿಯ ಮೋಕ್ಷವಾದವೂ ನಿರಾಕೃತವಾಯಿತು. ಆದುದರಿಂದ ಯಾವರೀತಿಯಿಂದಲೂ ವಿಶೇಷವಿಲ್ಲ. (3) ಸರ್ವಕಾಮಾವಾಪ್ತಿರೂಪವಾದ ತನಗೆ ಅಭಿಮತವಾದ ಮೋಕ್ಷವನ್ನು ಸ್ಥಾಪಿಸಿದುದರಿಂದ ಈ ಮೋಕ್ಷವು ಸೂತ್ರಕಾರರಿಂದ ನಿರಾಕೃತವಾಗಿದೆ. ಪ್ರಮಾಣಗಳಿಂದ ಸಮ್ಯಕ್ ಸ್ಥಾಪಿತವಾದ ಪಕ್ಷವಿರುದ್ಧ ಪಕ್ಷಾಂತರವು ಕೂಡಲಾರದು. (4) 'ನಾಭಾವ ಉಪಲಬ್ಧೇಃ' ಎನ್ನುವ ಯಾವ ಸೂತ್ರವು ಪ್ರಮಾಣಗಳಿಂದ ಉಪಲಭ್ಯತ್ವರೂಪವಾದ ಹೇತುವಿನಿಂದ ಜಗತ್ತಿಗೆ ಶೂನ್ಯತ್ವ ನಿರಾಸಕವೋ ಅದರಿಂದಲೂ ಶೂನ್ಯಸ್ವರೂಪವಾದ ಮೋಕ್ಷವು ನಿರಾಕೃತವಾಯಿತು. ಇದೇ ನ್ಯಾಯದಿಂದಲೇ ವೈದಿಕಮೋಕ್ಷಕ್ಕೆ ವಿರುದ್ಧಗಳಾದ ಇತರ ವಾದಿಗಳು ಅಂಗೀಕರಿಸಿರುವ ಮೋಕ್ಷಗಳೂ ನಿರಾಕೃತಗಳೆಂದು ತಿಳಿಯಬೇಕು ॥ ೫೩ ॥ ೫೪ ॥ ೫೫ ॥

ಹಾಗಾದರೆ ಹಿಂದೆ ಹೇಳಿದ ಅದ್ವೈತತತ್ವವು ಸೂತ್ರಕಾರರ ಸಿದ್ಧಾಂತವೇ. ಆದುದರಿಂದ ಅದನ್ನು ದೂಷಿಸುವುದಕ್ಕಾಗಿ ಏಕೆ ಅದನ್ನು ಅನುವಾದಮಾಡಿದ್ದು ಎಂದರೆ –

**ಮೂ ॥ ಏತಾದೃಶಾನಾಂ ಪಕ್ಷಾಣಾಂ ದೂಷಣಂ ಪ್ರಭುಣಾ ಕೃತಂ ।**
**ಸ್ವಪಕ್ಷಸಾಧನೇನೈವ ನಾಭಾವ ಇತಿ ಚೋಕ್ತಿತಃ ॥ ೫೬ ॥**

**ಅ ॥** ಏತಾದೃಶಾನಾಂ ಪಕ್ಷಾಣಾಂ = ಶೂನ್ಯಪಕ್ಷಕ್ಕೆ ಸದೃಶಗಳಾದ ಪಕ್ಷಗಳ, ದೂಷಣಂ = ದೂಷಣವು, ಪ್ರಭುಣಾ = ವೇದವ್ಯಾಸರಿಂದ, ಸ್ವಪಕ್ಷಸಾಧನೇನೈವ = ಅದಕ್ಕೆ ವಿರುದ್ಧವಾದ ತನ್ನ ಪಕ್ಷವನ್ನು ಸಾಧಿಸಿದುದರಿಂದಲೇ ಕೃತಂ = (ಅರ್ಥಾತ್) ಮಾಡಲ್ಪಟ್ಟಿತು. (ಅದ್ವೈತವು ಸೂತ್ರಕಾರರ ಸಿದ್ಧಾಂತವಲ್ಲ. ಸೂತ್ರಕಾರರು ಅದ್ವೈತವನ್ನು ದೂಷಿಸಿರುವರು. 'ಪೃಥಗುಪದೇಶಾತ್' ಇತ್ಯಾದಿ ಸೂತ್ರಗಳಿಂದ ಐಕ್ಯವಿರುದ್ಧವಾದ ಭೇದವನ್ನು ಸಾಧಿಸಿರುವರು. ಐಕ್ಯಕ್ಕೆ ದುಷ್ಟತ್ವವನ್ನು ಅನುಸಂಧಾನಮಾಡದಿದ್ದವರು ಐಕ್ಯವಿರುದ್ಧವಾದ ಭೇದವನ್ನು ಸಾಧಿಸುತ್ತಾರೆ ಎನ್ನುವುದು ಕೂಡುವುದಿಲ್ಲ.) (ಕೇವಲವಾಗಿ ಅರ್ಥಾತ್ ದೂಷಣಮಾಡಿದ್ದಲ್ಲ. ಮತ್ತೆ **'ನಾಭಾವ ಉಪಲಬ್ಧೇಃ'** ಇದು ಮೊದಲಾದ ಉಕ್ತಿಯಿಂದಲೂ ಕೂಡ ದೂಷಿಸುತ್ತಾರೆನ್ನುತ್ತಾರೆ). ನಾಭಾವ ಇತಿ ಉಕ್ತಿತಶ್ಚ = **'ನಾಭಾವ ಉಪಲಬ್ಧೇಃ'** ಎನ್ನುವ ಉಕ್ತಿಯಿಂದಲೂ ಕೂಡ, ದೂಷಣಂ = ದೂಷಣವು, ಪ್ರಭುಣಾ = ವೇದವ್ಯಾಸರಿಂದ, ಕೃತಂ = ಮಾಡಲ್ಪಟ್ಟಿತು ॥ ೫೬ ॥

**ಸ. ರ. ವಿ.** — ಶೂನ್ಯಸ್ವರೂಪವಾದ ಮೋಕ್ಷವನ್ನು ವಿಸ್ತರವಾಗಿ ನಿರಾಕರಿಸುತ್ತಾರೆ —

**ನ್ಯಾಯಸುಧಾ** — ಈ ಪ್ರಕಾರ ಅವಾಂತರ ಪ್ರಭೇದಗಳಿಂದ ಸಹಿತವಾದ, ಶೂನ್ಯವಾದಿಗಳಿಗೆ ಅಭಿಮತವಾದ ಮೋಕ್ಷವನ್ನು ಅನುವಾದಮಾಡಿ, ಸಾಧಾರಣ ದೂಷಣದಿಂದ ದೂಷಿಸುತ್ತಾ **'ಪ್ರದೀಪಸ್ಯೇವ ನಿರ್ವಾಣಂ ವಿಮೋಕ್ಷಸ್ತಸ್ಯ ಭಾವಿನಃ'** ಎಂದು ಆತ್ಮವಿನಾಶರೂಪವಾದ ಯಾವ ಮೋಕ್ಷವು ಶೂನ್ಯವಾದಿಯಿಂದ ಹೇಳಲ್ಪಟ್ಟದೋ ಅದನ್ನು ದೂಷಿಸುತ್ತಾರೆ —

**ಮೂ ॥ ಆತ್ಮಾಭಾವೇ ಪುಮರ್ಥಃ ಕ ಇಷ್ಟಸ್ಯಾತ್ಮಾವಧಿರ್ಯತಃ ।**
**ಯದಿ ನಾತ್ಮಾವಧಿರ್ಮೋಕ್ಷೋ ಮೋಕ್ಷಃ ಸ್ಯಾದ್ಘಟಶೂನ್ಯತಾ ।**
**ಕಲ್ಪಿತತ್ವಾದ್ವಿಶೇಷಾಣಾಂ ಮಾಯಿನೋಽಪಿ ಸಮಂ ಹಿ ತತ್ ॥ ೫೭ ॥**

**ಅ ॥** ಆತ್ಮಾಭಾವೇ = ಆತ್ಮನಿಗೆ ವಿನಾಶವಾದರೆ, ಪುಮರ್ಥಃ = ಮೋಕ್ಷವು, ಕಃ = ಯಾರಸಂಬಂಧಿಯಾದ ಪುರುಷಾರ್ಥವು? (ಅಂದರೆ— ಆತ್ಮವಿನಾಶರೂಪವಾದ ಮೋಕ್ಷವು ಆತ್ಮನಿಗೆ ಫಲವೋ, ಅನಾತ್ಮನಿಗೆ ಫಲವೋ. ಆತ್ಮನೇ ಇಲ್ಲದಿರುವುದರಿಂದ ಗನೇದ್ದು ಕೂಡಲಾರದು ಫಲವುಳ್ಳವನೇ ಇಲ್ಲದಿರಲು ಫಲವೂ ಕೂಡಲಾರದು, ಎನೇದ್ದೂ ಕೂಡಲಾರದು. ಆತ್ಮನಿಗೆ ನಾಶವಾಗುವುದಾದರೆ ಅನಾತ್ಮವೂ ಇಲ್ಲ; ಇದ್ದಾಗ್ಯೂ ಅಪುರುಷಾರ್ಥವಾಗಬೇಕಾಗುವುದು. ಅನಾತ್ಮನಿಗೆ ಮೋಕ್ಷದಿಂದ ಉಪಕಾರವೂ ಇಲ್ಲ.) (ಹಾಗಾದರೆ ಈ ಮೋಕ್ಷವು ಆತ್ಮನಿಗೇನೇ. ಧರ್ಮಾದಿಗಳಂತೆಯೇ ಅಭ್ಯುದಯತ್ವವಿಲ್ಲದಿರುವುದರಿಂದ ಅಸಮಾನಕಾಲೀನತ್ವವೂ ಕೂಡುತ್ತದೆ, ಎಂದರೆ —) ಆತ್ಮನು ಇಲ್ಲದಿದ್ದರೆ, ಕಃ ಪುಮರ್ಥಃ = ಮೋಕ್ಷವು ಯಾವ **ಪುರುಷಾರ್ಥವು? (ಪುರುಷಾರ್ಥವೇ ಆಗಲಾರದು.) (ಆ ವಿಷಯದಲ್ಲಿ ಹೇತುವನ್ನು ಹೇಳುತ್ತಾರೆ.)**

ಇಷ್ಟಸ್ಯ = ಇಷ್ಟೋತ್ಕರ್ಷಪರಂಪರೆಗೆ, ಯತಃ = ಯಾವ ಕಾರಣದಿಂದ, ಆತ್ಮಾ = ಆತ್ಮನು, ಅವಧಿಃ = ಪರ್ಯಂತಭೂತನು. (ಅಂದರೆ ಎಲ್ಲವೂ ಆತ್ಮನಿಗಾಗಿ ಇಷ್ಟವು. ಆತ್ಮನಾದರೂ ಮುಖ್ಯೇಷ್ಟನು. ಪುರುಷನು ಕೇವಲ ಇಷ್ಟವಾದ ವಿತ್ತಾದಿಗಳ ವಿನಾಶವನ್ನೇ ಇಚ್ಛಿಸುವುದಿಲ್ಲ. ಇಷ್ಟತಮನಾದ ಆತ್ಮನ ನಾಶವನ್ನು ಇಚ್ಛಿಸುವುದಿಲ್ಲವೆಂದು ಏನು ಹೇಳಬೇಕು?) ಅಥವಾ ಆತ್ಮಾಭಾವೇ = ಆತ್ಮನಿಗೆ ನಾಶವಾದರೆ, ಮೋಕ್ಷಃ = ಮೋಕ್ಷವು, ಕಃ ಪುರುಷಾರ್ಥಃ=ಯಾವ ಪುರುಷಾರ್ಥವು? (೧ ಇಷ್ಟದ ಪ್ರಾಪ್ತಿರೂಪವೋ, ೨ ಅಥವಾ ಅನಿಷ್ಟನಿವೃತ್ತಿರೂಪವೋ, ೧ನೇದ್ದು ಕೂಡಲಾರದು.) ಯತಃ=ಯಾವ ಕಾರಣದೆಶೆಯಿಂದ, ಇಷ್ಟಸ್ಯ=ಎಲ್ಲಾ ಆತ್ಮೇತರವಾದ ಇಷ್ಟಕ್ಕೆ, ಆತ್ಮಾ=ಆತ್ಮನು, ಅವಧಿಃ=ಆಶ್ರಯನೋ, (ಆತ್ಮನಿಗೋಸ್ಕರವೇ ಎಲ್ಲವೂ ಇಷ್ಟವು. ಆತ್ಮನೇ ಇಲ್ಲವೆಂದಾದರೆ ಆಗ ಮೋಕ್ಷವು ಯಾರಿಗೆ ಪುರುಷಾರ್ಥವಾಗುವುದು?) (೨ನೇದ್ದು ಕೂಡಲಾರದು. ಇಷ್ಟಕ್ಕೆ ವಿಘಾತಕವಾಗದಿದ್ದರೆ ಅನಿಷ್ಟನಿವೃತ್ತಿಯೂ ಕೂಡ ಪುರುಷಾರ್ಥವಾಗಿ ಆಗುವುದು. ಇಷ್ಟಕ್ಕೆ ವಿಘಾತಕವಾಗುವುದಾದರೂ ಮಹತ್ತಾದ ಅನಿಷ್ಟಕ್ಕೆ ವಿಘಾತಕವಾಗಬೇಕು. ಯಾರೊಬ್ಬನೂ ಮಹತ್ತಾದ ಇಷ್ಟವನ್ನು ವಿನಾಶಪಡಿಸಿ, ಅಲ್ಪವಾದ ಅನಿಷ್ಟನಿವೃತ್ತಿಯನ್ನು ಮಾಡುವವನಾಗಿ ಪ್ರೇಕ್ಷಾವಂತನು ತೋರಿಬರುವುದಿಲ್ಲ. ಆತ್ಮನಾದರೂ ಸರ್ವವಸ್ತುಗಳಿಂದಲೂ ಇಷ್ಟತಮನು. ಇಷ್ಟತಮವಿಘಾತದಿಂದ ಆಗತಕ್ಕ ಅನಿಷ್ಟವೃತ್ತಿಯು ಹೇಗೆ ಪುರುಷಾರ್ಥವು ಆಗುವುದು?) (ಆ ಇದನ್ನು ಸೂಚಿಸುತ್ತಾ ವಿಪಕ್ಷೇ ಬಾಧಕವನ್ನು ಹೇಳುತ್ತಾರೆ.) ಯದಿ=ಯಾವ ಪಕ್ಷದಲ್ಲಿ, ನಮಗೆ ಅಭಿಮತವಾದ ಪ್ರಕಾರದಿಂದ, ಮೋಕ್ಷಃ= ಮೋಕ್ಷವು, ಆತ್ಮಾವಧಿಃ=ಆತ್ಮಾವಧಿಯಾದುದು, ನ ಸ್ಯಾತ್=ಆಗಲಾರದು. (ಅಂದರೆ— ಆತ್ಮವ್ಯತಿರಿಕ್ತಗಳಾದ, ದುಃಖಕ್ಕೆ ಕಾರಣಗಳಾದ ದೇಹಾದಿಗಳಿಗೇನೇ ನಿವೃತ್ತಿಯು. ಆತ್ಮನಿಗಾದರೂ ಸ್ವರೂಪತಃ ಅವಸ್ಥಿತಿಯು ಎನ್ನುವ ಪಕ್ಷವು ಆಗದೆ ಹೋದರೆ— ಅಂತೂ ಆತ್ಮನಿಗೂ ಶೂನ್ಯತ್ವಾಪತ್ತಿಯಾದರೆ) ಆಗ, ಘಟಶೂನ್ಯತಾ=ಘಟಶೂನ್ಯತ್ವವೂ ಕೂಡ, ಮೋಕ್ಷಃ= (ದೇವದತ್ತನಿಗೆ) ಮೋಕ್ಷವು, ಸ್ಯಾತ್=ಆಗುವುದು (ಅಂತೂ ಸಾಧನಗಳನ್ನು ಅನುಷ್ಠಾನ ಮಾಡುವುದು ವ್ಯರ್ಥವು. ಘಟಶೂನ್ಯತ್ವರೂಪವಾದ ಮೋಕ್ಷಕ್ಕೆ ವೈರಾಗ್ಯಾದಿ ಕಾರಣಾಪೇಕ್ಷೆ ಇಲ್ಲ.) (ಈ ಅತಿಪ್ರಸಂಗವು ಯಾವುದರಿಂದ, ವಿಶೇಷವಿಲ್ಲದಿರುವುದರಿಂದ ಎಂದರೆ ಹೀಗೆ ಹೇಳಕೂಡದು. ಆತ್ಮಶೂನ್ಯತ್ವವು, ಘಟಶೂನ್ಯತ್ವವು ಎಂದು ನೀವೇ ವಿಶೇಷವನ್ನು ಹೇಳಿರುತ್ತೀರಿ ಎಂದರೆ—) ವಿಶೇಷಾಣಾಂ = ವಿಶೇಷಗಳಿಗೆ, ಕಲ್ಪಿತತ್ವಾತ್ = ಕಲ್ಪಿತತ್ವವಿದ್ದಪ್ರಯುಕ್ತ, (ಅಂದರೆ— **'ಭಾವಾರ್ಥಪ್ರತಿಯೋಗಿತ್ವಂ ಭಾವತ್ವಂ ವಾ ನ ತತ್ವತಃ । ಯಸ್ಯ'** ಎಂದು ಹೇಳಿದುದರಿಂದ ಶೂನ್ಯತಾಶಬ್ದದಿಂದ ಅಭಾವವು ಹೇಳಲ್ಪಡುವುದಿಲ್ಲ. ನಷ್ಟನಾದ ಆತ್ಮನು, ನಷ್ಟವಾದ ಘಟವು ಎಂದು ಹೇಳಲ್ಪಡುತ್ತದೆ. ಅವುಗಳೆರಡೂ ಅಪ್ರಾಮಾಣಿಕಗಳು. ಅಂತಹುಗಳಿಗೆ ಪ್ರಾಮಾಣಿಕಗಳಾದ ವಿಶೇಷಗಳು ಇರುವುದಿಲ್ಲ. ಆದುದರಿಂದ ಆತ್ಮಶೂನ್ಯತ್ವವು, ಘಟಶೂನ್ಯತ್ವವು ಎಂದು ವ್ಯವಹರಿಸುವವರು ಕೇವಲ ವ್ಯವಹಾರಕ್ಕಾಗಿ ವಿಶೇಗಳು ಕಲ್ಪಿತಗಳೆಂದಂಗೀಕರಿಸಬೇಕು. ತಥಾಚ ಅವಿಶೇಷವು ಅಸಿದ್ಧವಲ್ಲ.) (ದೂಷಣಾತಿದೇಶಕ್ಕಾಗಿ ಮೊದಲು ಮತಸಾಮ್ಯವನ್ನುಪಪಾದಿಸಿರುವರು. ಆದುದರಿಂದ ಶೂನ್ಯವಾದಿಗಳ ದೂಷಣವನ್ನು ಮಾಯಾವಾದಿಗಳಿಗೆ ಅತಿದೇಶಮಾಡುತ್ತಾರೆ.) ತತ್=ಆತ್ಮಾಭಾವಃ ಇತ್ಯಾದಿಗಳಿಂದ ಹೇಳಲ್ಪಟ್ಟದ್ದೆಲ್ಲವೂ, ಮಾಯಿನೋಽಪಿ = ಮಾಯಾವಾದಿಗೂ ಕೂಡ, ಸಮಂ ಹಿ = ಸಮಾನವೇ. (ಅಂದರೆ— ಆತ್ಮನಾಶವು ಮಾಯಾವಾದಿಯಿಂದ ಹೇಳಲ್ಪಡುವುದಿಲ್ಲ. ಹಾಗೆ ಹೇಳಿದ್ದರೆ ಇಷ್ಟನಾಶದ್ವೇಷೆಯಿಂದ ಮೋಕ್ಷಕ್ಕೆ ಅಪುರುಷಾರ್ಥತ್ವವು ಬರುತ್ತಿತ್ತು. ಶೂನ್ಯತಾಪತ್ತಿಯೇ ಮುಕ್ತಿಯೂ

ಆಗುವುದಿಲ್ಲ. ಹಾಗೆ ಆಗಿದ್ದರೆ ಘಟಶೂನ್ಯತ್ವವೂ ಮುಕ್ತಿಯೂ ಆಗುತ್ತಿತ್ತು. ಮತ್ತೆ ಜೀವಭಾವವನ್ನು ಬಿಟ್ಟು ಬ್ರಹ್ಮತ್ವಪ್ರಾದುರ್ಭಾವವು. ಬ್ರಹ್ಮನು ಪರಮಾನಂದರೂಪನು. ಆದಕಾರಣ ಬ್ರಹ್ಮಭಾವವು ಪುರುಷಾರ್ಥವು ಎಂದರೆ— ಹೀಗೆ ಹೇಳಕೂಡದು. ಜೀವತ್ವವೆಂದರೆ— ಏನು? ಬ್ರಹ್ಮತ್ವವೆಂದರೂ ಏನು? ಅವಿದ್ಯಾಕಾಮುಕರ್ಮಾದಿಗಳಿಂದ ಬದ್ಧತ್ವವೇ ಜೀವತ್ವವು. ಪರಮಾನಂದ ಭೋಕ್ತೃತ್ವವೇ ಬ್ರಹ್ಮತ್ವವು, ಎಂದು ಹೇಳಿದರೆ ಅದು ನಮಗೆ ಇಷ್ಟವು. ಹೀಗೆ ಪರರ ರೀತಿಯು. ಕರ್ತೃತ್ವ-ಭೋಕ್ತೃತ್ವಶಕ್ತ್ಯುಪೇತವಾದುದು ಸಾಕಾರವಾದ ದೇಹಾದಿಗಳಿಂದ ವ್ಯತಿರಿಕ್ತವಾದ ರೂಪವು ಅಹಂ ಎನ್ನುವ ಸಾಕ್ಷಿಸಿದ್ಧವು. ಅದರ ನಾಶವೇ ಪರರಿಗೆ ಇಷ್ಟವಾದುದು. ಇದೇ ರೂಪವು ಪರಮೇಷ್ಟವೆಂದು ಅನುಭೂತವಾಗುತ್ತದೆ. ಆದ ಪ್ರಯುಕ್ತ ಜೀವಭಾವನಾಶವು ಪುರುಷಾರ್ಥವಾಗಲಾರದು ಎನ್ನುವ ದೋಷವು ಏಕೆ ಬರಲಾರದು. ಆನಂದರೂಪತ್ವವನ್ನುಪಪಾದನಮಾಡುವುದಕ್ಕಾಗಿ ಹಿಂದೆ ಹೇಳಿದ ರೂಪಕ್ಕೇನೇ ಪರಮ ಪ್ರೇಮಾಸ್ಪದತ್ವವನ್ನುಪಪಾದಿಸಿರುತ್ತಾರೆ.)

ತಾ. ಸ. ರ. ವಿ— (1) ಶೂನ್ಯವಾದಿಗಳು ಅಂಗೀಕರಿಸಿದ ಮೋಕ್ಷವು ಪುರುಷಾರ್ಥವು ಆಗುವುದಿಲ್ಲ. ಆತ್ಮಾಭಾವರೂಪವಾಗಿದೆ. ಆತ್ಮನಾಶವು ಪುರುಷರಿಂದ ಅರ್ಥಿಸಲ್ಪಡುವುದಿಲ್ಲ. ಪ್ರಿಯನಾಶವು ಅಪ್ರಿಯವಾಗಿದೆ. ಆತ್ಮನು ಪುತ್ರಾದಿಗಳಿಗಿಂತ ಅತಿಶಯವಾಗಿ ಸರ್ವರಿಗೂ ಪ್ರಿಯನಷ್ಟೆ. ಆತ್ಮನಿಗಿಂತ ಅಧಿಕವಾಗಿ ಲೋಕದಲ್ಲಿ ಪ್ರಿಯವಾದುದು ಯಾವುದೂ ಇಲ್ಲ. (2) ಯಾವನು ಸಜಾತೀಯ ವಿಜಾತೀಯ ಭೇದರಹಿತವಾದ ಶೂನ್ಯಭಾವರೂಪವಾದ ಮೋಕ್ಷವನ್ನು ಇಚ್ಛಿಸುತ್ತಾ ಆತ್ಮಾವಶೇಷರೂಪವಾದ ಮೋಕ್ಷವನ್ನು ಅಂಗೀಕರಿಸುವುದಿಲ್ಲವೋ, ಮತ್ತೆ ದೇಹದಂತೆ ಆತ್ಮನಿಗೂ ನಾಶವನ್ನು ಇಚ್ಛಿಸುತ್ತಾನೆ. ಅವರ ಮತದಲ್ಲಿ ಘಟನಾಶವೂ ಮೋಕ್ಷವಾಗಬೇಕಾಗುವುದು ಘಟನಾಶದೆಶೆಯಿಂದ ಬೇರೆ ನಾಶವು ಮೋಕ್ಷವೆಂದು ಅಪೇಕ್ಷಣೀಯವಾಗಿ ಇಲ್ಲ. ಅದ್ವೈತಕ್ಕೆ ಭಂಗವು ಬರುವುದು. ಇದು ಘಟನಾಶವು, ಇದು ಆತ್ಮನಾಶವು ಎನ್ನುವ ಭೇದಕ್ಕೆ ಸಾಂವೃತ ಘಟಾದಿಗಳೇ ಉಪಾಧಿಗಳಾಗಿ ಕಲ್ಪಿತಗಳೆಂದು ಅಂಗೀಕರಿಸಿದುದರಿಂದ ಬ್ರಹ್ಮಭಾವರೂಪವಾದ ಮೋಕ್ಷವನ್ನು ಅಂಗೀಕರಿಸತಕ್ಕ ಮಾಯಾವಾದಿಗಳಿಗೂ ಘಟನಾಶಕ್ಕೆ ಮೋಕ್ಷತ್ವಾಪತ್ತಿ ಬರಬೇಕಾಗುವುದು ಎನ್ನುವ ದೂಷಣವು ಬಂದೇ ಬರುತ್ತದೆ. ಬ್ರಹ್ಮನಿಂದ ಇತರವಾದುದು ಘಟನಾಶವಿಲ್ಲ. ಅದ್ವೈತಕ್ಕೆ ಭಂಗವು ಬರಬೇಕಾಗುವುದು ॥ ೫೭ ॥

ಸ. ರ. ವಿ— (1) ನಿರ್ವಿಶೇಷಶೂನ್ಯತಾಪತ್ತಿಯೇ ಮೋಕ್ಷವೆಂದು ಅಂಗೀಕೃತವಾಗಿದೆ. ಘಟ ನಾಶವಾದರೂ ಘಟ ಪ್ರತಿಯೋಗಿಕತ್ವದಿಂದ ವಿಶೇಷಿತವಾಗಿ ಮೋಕ್ಷತ್ವವನ್ನು ಹೊಂದಲಿಕ್ಕೆ ಯೋಗ್ಯವಾಗುವುದಿಲ್ಲವೆಂದು ಹೇಳಕೂಡದು. ಆತ್ಮ ಶೂನ್ಯಕ್ಕೂ ಆತ್ಮಪ್ರತಿಯೋಗಿಕತ್ವದಿಂದ ವಿಶೇಷಿತವಾದುದಕ್ಕೆ ನಿರ್ವಿಶೇಷತ್ವವಿದ್ದರೆ ಘಟ ನಾಶಕ್ಕೂ ನಿರ್ವಿಶೇಷತ್ವವು ಬರಬೇಕಾಗುವುದು. ಮುಂದೆ ಆಗತಕ್ಕ ಆತ್ಮಶೂನ್ಯಕ್ಕೆ ನಿರ್ವಿಶೇಷತ್ವವಿದ್ದರೆ ಮುಂದೆ ಆಗತಕ್ಕ ಘಟನಾಶಕ್ಕೂ ನಿರ್ವಿಶೇಷತ್ವವು ಬರಬೇಕಾಗುವುದು. (ನ್ಯಾಯಸುಧಾ— ಹೀಗೆ ಆತ್ಮಶೂನ್ಯತ್ವಕ್ಕೆ ವಿಶೇಷವು ಕಂಡರೂ ಯಾವುದೋ ಒಂದು ಅಭಿಪ್ರಾಯದಿಂದ ನಿರ್ವಿಶೇಷತ್ವವು ಹೇಳಲ್ಪಡುತ್ತದೆ ಎಂದರೆ—

**ಮೂ ॥ ದೃಶ್ಯಮಾನೇ ವಿಶೇಷೇಽಪಿ ಯದಿ ಚೇದವಿಶೇಷತಾ ॥ ೫೮ ॥**

**ಘಟಾಭಾವೇ (ಮೋಽ) ವಿಶೇಷಃ ಸ್ಯಾತ್ಪಾಶ್ಚಾತ್ಯಶ್ಛೇದನಾಗತಃ ।**

**ನ ಮೋಕ್ಷೋ ವಿಮತೋ ಯಸ್ಮಾದದೇಹೋ ಘಟಶೂನ್ಯತಾ ॥ ೫೯ ॥**

ಯಥೇತ್ಯುಕ್ತೇ ವದೇತ್ಕಿಂ ಸ ಯೋಽನುಮಾನಮಾತ್ರಮಾನಕಃ ।
ನ ಚ ಮಾಯಿಮಾ ವದೇದತ್ರ ಪೂರ್ವೋಕ್ತೇನೈವ ವರ್ತ್ಮನಾ ॥ ೬೦ ॥
ಅಮಾನತ್ವಾಚ್ಛ್ರುತೇಸ್ತಸ್ಯ ನ ಚಾದೇಹತ್ವವಾದಿನೀ ।
ಶ್ರುತಿಃ ಕಾಚಿದದೇಹತ್ವಮಪ್ರಾಕೃತಶರೀರತಾ ॥ ೬೧ ॥
ಮೋಕ್ಷೇ ಭೋಗಂ ಯತೋ ಬ್ರೂತೇ ಜಕ್ಷನ್ ಕ್ರೀಡನ್ನಿತಿ ಶ್ರುತಿಃ ।
ನಿರ್ದುಃಖತ್ವಾನ್ನ ತನ್ಮೋಕ್ಷಃ ಪ್ರತಿಪನ್ನಂ ಯಥೇತಿ ಚ ॥ ೬೨ ॥
ಅನುಮಾದೂಷಣಂ ಕಿಂ ಸ್ಯಾದ್ವಾದಿನೋ ಶೂನ್ಯಮಾಯಿನೋಃ ।
ದುಃಖಂ ದುಃಖಾದಭಿನ್ನತ್ವಾನ್ಮೋಕ್ಷೋಽಪಿ ಸ್ಯಾದಸಂಶಯಂ ॥ ೬೩ ॥
ಭೇದೇ ಸದ್ವೈತತೈವ ಸ್ಯಾದಿತ್ಯಾದ್ಯಮಿತದೋಷತಃ ।
ಹೇಯಂ ಮಾಯಾಮತೇನೈವ ಸಹ ಶೂನ್ಯಮತಂ ಬುಧೈಃ ॥ ೬೪ ॥

ಅ ॥ (ಮೋಕ್ಷವೆಂದಭಿಮತವಾದ ಶೂನ್ಯಭಾವಕ್ಕೆ) ವಿಶೇಷೇ = ವಿಶೇಷವು, ದೃಶ್ಯಮಾನೇಽಪಿ=ಕಾಣಲ್ಪಟ್ಟರೂ, ಅವಿಶೇಷಿತಾ ಯದಿ ಚೇತ್=ವಿಶೇಷಾಭಾವವು ಇದೆ ಎಂದು ಹೇಳುವುದಾದರೆ, ಘಟಾಭಾವಃ=ಘಟಶೂನ್ಯತ್ವವು, ಅವಿಶೇಷಃ=ನಿರ್ವಿಶೇಷವಾದುದು, ಸ್ಯಾತ್=ಬರುವುದು. (ಎನ್ನುವ ಅತಿಪ್ರಸಂಗವು ಬಂದೇ ಬರುವುದು.) (ಪೂರ್ವಪಕ್ಷಿಯ ಅಭಿಪ್ರಾಯವನ್ನು ವಿಶದೀಕರಿಸುತ್ತಾರೆ.) ಪಾಶ್ಚಾತ್ಯಶ್ಚೇತ್=ಆತ್ಮ ಶೂನ್ಯಭಾವವು ಮತ್ತೆ ವಿಶೇಷರಹಿತವು ಎಂದಾದರೆ— (ಅಂದರೆ— ಈಗ ನಿರೂಪಣ ಮಾಡುವ ಸಮಯದಲ್ಲಿ ವ್ಯವಹಾರಕ್ಕಾಗಿ ಕಲ್ಪಿತವಾದ ವಿಶೇಷದಿಂದಲೇ ಆತ್ಮಶೂನ್ಯಭಾವವು ವಿಶೇಷಸಹಿತವಾಗಿರುವುದರಂತೆ ತೋರುತ್ತದೆ. ನಿರೂಪಣವನ್ನು ಮಾಡದಿದ್ದರೆ ಸ್ವರೂಪತಃ ನಿರ್ವಿಶೇಷವೇ) (ಸಿದ್ಧಾಂತಿಯ ಅಭಿಪ್ರಾಯವನ್ನು ಬಿಡಿಸಿ ತೋರಿಸುತ್ತಾರೆ.) ಅನಾಗತಃ = ಅಪ್ರಾಪ್ತವಾದುದು. (ಅಂದರೆ— ಹೀಗಾದರೆ ಘಟಶೂನ್ಯಭಾವವೂ ನಿರೂಪಿಸುವ ಸಮಯದಲ್ಲಿಯೇ ಸವಿಶೇಷವಾಗಿ ಕಾಣಲ್ಪಡುತ್ತದೆ. ನಿರೂಪಣವನ್ನು ಹೊಂದದೆ ಇರುವುದು ನಿರ್ವಿಶೇಷವೇ ಎಂದು ನಮಗೂ ಹೇಳಲಿಕ್ಕೆ ಶಕ್ಯವಾಗುತ್ತದೆ. (ಸ. ರ. ವಿ.— ಅನುಮಾನದಿಂದ ಶೂನ್ಯರೂಪವಾದ ಮೋಕ್ಷವನ್ನು ಸಾಧಿಸಲಿಕ್ಕೆ ವೇದಬಾಹ್ಯನಾದ ಬೌದ್ಧನಿಗೆ ಶಕ್ಯವಲ್ಲ. ಏಕೆಂದರೆ— 'ಆತ್ಮನಃ ಶೂನ್ಯತಾಪತ್ತಿಃ ನ ಮೋಕ್ಷಃ ದೇಹರಹಿತತ್ವಾತ್ ಘಟನಾಶವತ್' ಎನ್ನುವ ಅನುಮಾನದಿಂದ ಪರಾಹತವಾಗಿದೆ ಎನ್ನುತ್ತಾರೆ) ವಿಮತಃ=ವಿವಾದ ವಿಷಯೀಭೂತವಾದ ಶೂನ್ಯಭಾವವು ಬ್ರಹ್ಮಭಾವವಾಗಲೀ, ನ ಮೋಕ್ಷಃ=ಮೋಕ್ಷವಲ್ಲ, ಯಸ್ಮಾತ್ ಅದೇಹಃ = ಅದೇಹತ್ವವಿದ್ದುದರಿಂದ, ಘಟಶೂನ್ಯತಾ ಯಥಾ=ಘಟಶೂನ್ಯತ್ವದಂತೆ, ಯಃ ಅನುಮಾನಮಾತ್ರಮಾನಕಃ=ಯಾವನು ಅನುಮಾನ ಮಾತ್ರವೇ ಪ್ರಮಾಣವಾಗಿ ಉಳ್ಳವನೋ, ಸಃ=ಆತನು, 'ಇತ್ಯುಕ್ತೇ = ಹೀಗೆ ಪ್ರತಿಪಕ್ಷಾನುಮಾನವನ್ನು ಹೇಳಿದರೆ— ಕಿಂ ವದೇತ್=ಏನನ್ನು ಹೇಳುವನು? (ಇದರಿಂದ ಹಿಂದೆ ಹೇಳಿದ ಪ್ರಕಾರ ಬೇರೆ ಪ್ರಮಾಣವಿಲ್ಲವೆನ್ನುವುದನ್ನೂ. ಅದರಿಂದಲೇ ತನ್ನ ಅನುಮಾನಕ್ಕೆ ಅಬಾಧಿತವಿಷಯತ್ವವನ್ನೂ ಸೂಚಿಸಿದರು.) (ಈ ವಿಷಯದಲ್ಲಿ ಮಾಯಾವಾದಿಗಳು ಈ ಪ್ರತ್ಯನುಮಾನವು ಪ್ರಮಾಣವಲ್ಲ. '**ವಿದೇಹಾವಸ್ಥೈವ ಮೋಕ್ಷಃ**' ಎನ್ನುವ ಶ್ರುತಿಯಿದ್ದುದರಿಂದ ಬಾಧಿತವಾಗಿದೆ. ಮತ್ತು ಶ್ರುತಿಯಿಂದಲೇ ಬ್ರಹ್ಮಭಾವದ ಆವಿರ್ಭಾವವು ಮೋಕ್ಷವು ಎಂದು ಹೇಳಿದುದರಿಂದ ಅನುಮಾನದಿಂದ ಏನು ಪ್ರಯೋಜನವು ಎಂದು ಹೇಳುತ್ತದೆ. ಆ ವಿಷಯದಲ್ಲಿ ಹೇಳುತ್ತಾರೆ.) ಅತ್ರ=ಈ ಅನುಮಾನ

ವಿಷಯದಲ್ಲಿ, ಮಾಯೀ=ಮಾಯಾವಾದಿಯು, ನ ಚ ವದೇತ್=( ಶ್ರುತಿಯನ್ನು ಆಶ್ರಯಿಸಿಕೊಂಡು ದೂಷಣವನ್ನು) ಹೇಳಲಾರನು. ಹಾಗೆಯೇ, ಅತ್ರ=ತನಗೆ ಅಭಿಮತವಾದ ಮೋಕ್ಷದಲ್ಲಿ (ಶ್ರುತಿಯನ್ನು ಪ್ರಮಾಣವನ್ನಾಗಿ) ನ ವದೇತ್=ಹೇಳಲಾರನು (ಏಕೆಂದರೆ—) ಪೂರ್ವೋಕ್ತೇನೈವ ವರ್ತ್ಮನಾ=('ಪ್ರಾಮಾಣ್ಯಾದಿ ಚ ವೇದಸ್ಯ' ಇತ್ಯಾದಿಗಳಿಂದ)ಹಿಂದೆ ಹೇಳಿದ ಮಾರ್ಗದಿಂದ, ತಸ್ಯ=ಮಾಯಾವಾದಿಯ ಮತದಲ್ಲಿ, ಶ್ರುತೇಃ=ಶ್ರುತಿಗೆ, ಅಮಾನತ್ವಾತ್=ಪ್ರಾಮಾಣ್ಯವಿಲ್ಲದಿರುವುದರಿಂದ, ನ ವದೇತ್=ಹೇಳಲಾರನು. (ಹಾಗಾದರೆ ಎಲ್ಲಾ ವೇದವು ಅತತ್ತ್ವಾವೇದಕವಲ್ಲ. ಮತ್ತೆ ವಿಧಿ ನಿಷೇಧರೂಪವಾದುದೇ. ಹಾಗೆ ಅಲ್ಲದಿರುವ ವೇದಾಂತಗಳಾದರೂ ತತ್ತ್ವಾವೇದಕಗಳು ಎಂದರೆ- ಹಾಗೆ ಹೇಳಕೂಡದು. **'ಸರ್ವಧರ್ಮೋಜ್ಝಿತಸ್ಯಾಸ್ಯ ಕಿಂ ಶಾಸ್ತ್ರೇಣಾಧಿಗಮ್ಯತೇ'** ಇತ್ಯಾದಿಗಳಿಂದ ಹಿಂದೆ ಹೇಳಿದ ಮಾರ್ಗದಿಂದಲೇ ಈ ತತ್ತ್ವದಲ್ಲಿ ಶ್ರುತಿಗೆ ಪ್ರಾಮಾಣ್ಯವಿಲ್ಲದಿರುವುದರಿಂದ.) (ಅಥವಾ ಶ್ರುತಿಯು ಕಥಂಚಿತ್ ಪ್ರಮಾಣವಾಗಲೀ ಆದಾಗ್ಯೂ ನಮ್ಮ ಅನುಮಾನಕ್ಕೆ ಅದರಿಂದ ಬಾಧವಿಲ್ಲವೆನ್ನುತ್ತಾರೆ.) ಅದೇಹತ್ವವಾದಿನಿ = (ಮುಕ್ತಿಯಲ್ಲಿ) ದೇಹವಿಲ್ಲವೆಂದು ಹೇಳತಕ್ಕ, (ಹಾಗೆಯೇ ಮಾಯಿಗಳಿಗೆ ಅಭಿಮತವಾದ ಮೋಕ್ಷವನ್ನು ಹೇಳತಕ್ಕ) ಕಾಚಿತ್‌ಶ್ರುತಿಃ = ಯಾವುದೊಂದು ಶ್ರುತಿಯೂ, ನ ಚ=ಇಲ್ಲವೇ ಇಲ್ಲ. (**'ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ'** ಇದು ಮೊದಲಾದ ಶ್ರುತಿಗಳು ಇದ್ದುದರಿಂದ ಅದೇಹತ್ವವನ್ನು ಹೇಳತಕ್ಕ ಶ್ರುತಿಯು ಇಲ್ಲವೆಂದು ಹೇಗೆ ಹೇಳಲ್ಪಡುತ್ತದೆ ಎಂದರೆ—) ಅದೇಹತ್ವಂ=ಯಾವುದು ಈ ಶ್ರುತಿಯಲ್ಲಿ ದೇಹರಾಹಿತ್ಯವು ಹೇಳಲ್ಪಡುತ್ತದೊ, ಅದು ಅಪ್ರಾಕೃತಶರೀರತಾ=ಪ್ರಾಕೃತ (ಜಡ) ಶರೀರರಾಹಿತ್ಯವೇ. (ಸರ್ವಥಾಪ್ಯದೇಹತ್ವವಲ್ಲ.) (ಅಶರೀರತ್ವ ಶ್ರುತಿಗೆ ಏಕೆ ಅರ್ಥ ಸಂಕೋಚವು ಮಾಡಲ್ಪಡುತ್ತದೆ ಎಂದರೆ—) ಜಕ್ಷನ್ ಕ್ರೀಡನ್ನಿತಿ ಶ್ರುತಿಃ= **'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾsಜ್ಞಾತಿಭಿರ್ವಾ'** ಎನ್ನುವ ಶ್ರುತಿಯು, ಮೋಕ್ಷೇ=ಮೋಕ್ಷದಲ್ಲಿ, ಯತಃ=ಯಾವಕಾರಣದೆಶೆಯಿಂದ, ಭೋಗಂ=ಸ್ತ್ರ್ಯಾದಿ ಭೋಗವನ್ನು, ಬ್ರೂತೇ = ಹೇಳುತ್ತದೋ, (ಅಶರೀರನಿಗೆ ಸ್ತ್ರ್ಯಾದಿ ಭೋಗವು ಕೂಡಲಾರದು. ಆದುದರಿಂದ ಶ್ರುತ್ಯರ್ಥ ಸಂಕೋಚವು) (ಪರಕೀಯಾನುಮಾನಕ್ಕೆ ಪ್ರತಿಪಕ್ಷಾಂತರವನ್ನು ಹೇಳುತ್ತಾರೆ.) ತತ್=ಶೂನ್ಯತ್ವವಾಗಲೀ, ಬ್ರಹ್ಮತ್ವವಾಗಲೀ, ಮೋಕ್ಷಃ=ಮೋಕ್ಷವು, ನ=ಆಗುವುದಿಲ್ಲ. ನಿರ್ದುಃಖತ್ವಾತ್ = ದುಃಖರಹಿತವಾಗಿರುವುದರಿಂದ, ಪ್ರತಿಪನ್ನಂ ಯಥಾ=ಘಟಶೂನ್ಯತ್ವದಂತೆ, ಇತಿ ಚ ಅನುಮಾದೂಷಣಂ = ಈ ಅನುಮಾನಕ್ಕೆ ದೂಷಣವು, ವಾದಿನೋಃ ಶೂನ್ಯಮಾಯಿನೋಃ=ಶೂನ್ಯವಾದಿ-ಮಾಯಾವಾದಿಗಳ ಮತದಲ್ಲಿ, ಕಿಂ ಸ್ಯಾತ್=ಏನು ಆಗುವುದು. (ಪ್ರತಿಪಕ್ಷಾಂತರವನ್ನು ಹೇಳುತ್ತಾರೆ—) ದುಃಖಂ=ದುಃಖವು, ದುಃಖಾತ್ = ದುಃಖದೆಸೆಯಿಂದ, ಅಭಿನ್ನತ್ವಾತ್ = ಭೇದವಿಲ್ಲದಿರುವುದರದೆಸೆಯಿಂದ, ಅಸಂಶಯಂ=ನಿಃಸಂಶಯವಾಗಿ, ಮೋಕ್ಷೋಽಪಿ = ಮೋಕ್ಷವೂ ಕೂಡ, (ಅಂದರೆ ಶೂನ್ಯವೂ ಬ್ರಹ್ಮನೂ ಕೂಡ) ದುಃಖಂ=ದುಃಖ ರೂಪವು, ಸ್ಯಾತ್=ಆಗುವುದು. 'ಸ ಮೋಕ್ಷಃ ದುಃಖಾತ್ಮಾ ಸ್ಯಾತ್ ದುಃಖಾದಭಿನ್ನತ್ವಾತ್' 'ದುಃಖಪ್ರತಿಯೋಗಿಕಭೇದಶೂನ್ಯತ್ವಾತ್' ಪ್ರಸಿದ್ಧ ದುಃಖವತ್ ಶೂನ್ಯಬ್ರಹ್ಮರಿಗೆ ದುಃಖತ್ವವಿದ್ದರೆ ಶೂನ್ಯಭಾವಾಪತ್ತಿಯೂ, ಬ್ರಹ್ಮಭಾವಾಪತ್ತಿಯೂ ಕೂಡ ಪುರುಷಾರ್ಥವಲ್ಲವೆಂದು ಸಿದ್ಧಿಸುತ್ತದೆ.) (ದುಃಖಪ್ರತಿಯೋಗಿಕ ಭೇದಾಭಾವವು ಯಾವ ಕಾರಣದಿಂದ ಎಂದರೆ—) ಭೇದೇ=(ದುಃಖದೆಶೆಯಿಂದ ಶೂನ್ಯಬ್ರಹ್ಮರಿಗೆ) ಭೇದವಿದ್ದರೆ, ಸದ್ದ್ವೈತತೈವ=ಸತ್ಯಭೂತವಾದ ದ್ವಿತೀಯವಸ್ತ್ವಂಗೀಕಾರವು, ಸ್ಯಾತ್=ಬರುವುದು. (ಅಂತೂ ಅಪಸಿದ್ಧಾಂತವು.) ಇತ್ಯಾದ್ಯಮಿತದೋಷತಃ=ಇದು ಮೊದಲಾದ ಅಪರಿಮಿತದೋಷಗಳ ದೆಶೆಯಿಂದ

ಮಾಯಾಮತೇನ ಸಹೈವ=ಮಾಯಾಮತದಿಂದ ಕೂಡಿಕೊಂಡೇ, ಶೂನ್ಯಮತಂ=ಬೌದ್ಧಮತವು, ಬುಧೈಃ=ಜ್ಞಾನಿಗಳಿಂದ, ಹೇಯಂ ಬಿಡಲರ್ಹವು.

**ತಾ ||** ಸ. ರ. ವಿ— (1) ಅನುಮಾನದಿಂದ ಶೂನ್ಯರೂಪವಾದ ಮೋಕ್ಷವನ್ನು ವೇದಬಾಹ್ಯನಾದ ಬೌದ್ಧನಿಗೆ ಸಾಧಿಸಲಿಕ್ಕೆ ಶಕ್ಯವಲ್ಲ. 'ಆತ್ಮನಃ ಶೂನ್ಯತ್ವಾಪತ್ತಿಃ ನ ಮೋಕ್ಷಃ ದೇಹರಹಿತತ್ವಾತ್ ಘಟನಾಶವತ್' ಎನ್ನುವ ಅನುಮಾನದಿಂದ ಪರಾಹತವಾಗಿದೆ. (2)ಹಾಗಾದರೆ ದೇಹರಹಿತತ್ವ ಹೇತುವಿನಿಂದ ಯಾವ ಮಾಧ್ಯಮಿಕ ಮೋಕ್ಷವು ದೂಷಿತವಾಗಿದೆಯೋ ಆ ಮೋಕ್ಷವನ್ನು ವೈದಿಕವನ್ನಾಗಿ ಹೇಳುತ್ತಾ ಮಾಯಾವಾದಿಗಳು ಆ ಹೇತುವಿಗೆ ಶ್ರುತಿಯಿಂದ ಬಾಧವನ್ನು ಹೇಳುವರು ಎಂದಾಶಂಕಿಸಿಕೊಂಡು ನಚೇತ್ಯಾದಿಗಳಿಂದ ಪರಿಹರಿಸಿದರು. 'ಯದ್ವೇದ್ಯಂ ತನ್ಮಿಥ್ಯಾ' ಎಂದಂಗೀಕರಿಸಿದರಿಂದ ಅವೇದ್ಯವನ್ನು ಶ್ರುತಿಯಿಂದಲೂ ತಿಳಿಯಲಿಕ್ಕೆ ಸಾಧ್ಯವಿಲ್ಲದಿರುವುದರಿಂದ ಶ್ರುತಿಯು ಅಪ್ರಮಾಣಭೂತನೇ ಆಗಿದೆ. ಆ ಶ್ರುತಿಯಿಂದ ಮಾಯಿಗೆ ಮೋಕ್ಷ ದೂಷಣವನ್ನು ಪರಿಹರಿಸಲು ಶಕ್ಯವಲ್ಲ. (3) ಹಾಗಾದರೆ '**ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ**' ಎಂದು ಮುಕ್ತನನ್ನು ದೇಹರಹಿತನನ್ನಾಗಿ ಕೇಳಿಸತಕ್ಕ ಶ್ರುತಿಯು ಹೇಗೆ ಕೂಡುತ್ತದೆ ಎಂದರೆ ನಚೇತ್ಯಾದಿಗಳಿಂದ ಪರಿಹರಿಸಿದರು. (4) '**ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್**' ಎನ್ನುವ ದಿವ್ಯ ವಿಷಯಭೋಗವನ್ನು ಹೇಳತಕ್ಕ ಶ್ರುತಿಯು ಮುಕ್ತನಿಗೆ ಸದೇಹತ್ವವನ್ನು ಪ್ರತಿಪಾದಿಸುವುದರಿಂದ ಅದೇಹತ್ವ ಶ್ರುತಿಯು ಪ್ರಾಕೃತ ಶರೀರರಾಹಿತ್ಯ ವಿಷಯಕವಾಗಿ ಕೂಡುವುದರಿಂದ ಯಾವುದೊಂದು ಶ್ರುತಿಯು ಅದೇಹತ್ವಪ್ರತಿಪಾದಕವಾದುದು ಆಗಲಾರದು (5) ಮತ್ತು ಯಾವನಾದರೂ ನಿರ್ವಿಶೇಷ ಭಾಗಕ್ಕೆ ಘಟನಾಶದಂತೆ ನಿರ್ದುಃಖತ್ವದಿಂದ ಮೋಕ್ಷತ್ವವನ್ನು ನಿರಾಕರಿಸುವನೋ, ಹಾಗಾದರೆ ಮಾಯಾವಾದಿ-ಬೌದ್ಧರು ಏನು ಉತ್ತರವನ್ನು ಕೊಡುವರು? ಅವರಲ್ಲಿ ಮಾಯಿಯು ಶ್ರುತಿಯಿಂದ ಉತ್ತರವನ್ನು ಕೊಡಲಿಕ್ಕೆ ಶಕ್ತನಾಗುವುದಿಲ್ಲ. ಅವರ ಮತದಲ್ಲಿ ಶ್ರುತಿಗೆ ಅಪ್ರಾಮಾಣ್ಯವು ಉಕ್ತವಾಗಿದೆ. (6) ಮತ್ತೂ ಅದ್ವೈತಮತದಲ್ಲಿ ಮುಕ್ತನಿಗೆ ಅದುಃಖರೂಪತ್ವವು ಸಿದ್ಧಿಸುವುದಿಲ್ಲ. ದುಃಖದಿಂದ ಅಭಿನ್ನನಾಗಿರುವುದರಿಂದ. ಭೇದವಿದ್ದರೆ ಸವಿಶೇಷಣತ್ವವೂ ಬರಬೇಕಾಗುವುದು; ಸದ್ವಿತೀಯತ್ವವೂ ಬರಬೇಕಾಗುವುದು. ಆದುದರಿಂದ ಅನಂತಾನಂತ ದೋಷಗಳಿಂದ ದುಷ್ಟವಾಗಿರುವುದರಿಂದ ಮಾಯಾವಾದಿಗಳಿಗೆ ಸಮ್ಮತವಾದ ಮೋಕ್ಷದಿಂದ ಕೂಡಿಕೊಂಡೇ ಬೌದ್ಧರಿಗೆ ಅಭಿಮತವಾದ ಮೋಕ್ಷವು ಹೇಯವಾಗಿದೆ ॥ ೫೮ ॥ ೫೯ ॥ ೬೦ ॥ ೬೧ ॥ ೬೨ ॥ ೬೩ ॥ ೬೪ ॥

ಸ. ರ. ವಿ— ನಿರ್ವಿಶೇಷಶೂನ್ಯತ್ವರೂಪವಾದ ಮೋಕ್ಷವನ್ನು ನಿರಾಕರಿಸಿದರಿಂದ ನಿರ್ವಿಶೇಷವಿಜ್ಞಾನಸ್ವರೂಪವಾದ ಮೋಕ್ಷವು ಯೋಗಾಚಾರ್ಯರಿಗೆ ಅಭಿಮತವಾದುದೂ ಕೂಡ ನಿರಾಕೃತವಾಗುತ್ತದೆ ಎನ್ನುತ್ತಾರೆ—

**ಮೂ ||** **ಏವಂ ವಿಜ್ಞಾನವಾದೋಽಪಿ ಜ್ಞಾನಮಾತ್ರವಿಶೇಷತಃ ।**
**ತಸ್ಯಾಪಿ ಭಂಗುರತ್ವಾದಿವಿಶೇಷಮುಪಹಾಯ ಹಿ ॥ ೬೫ ॥**
**ಅದ್ವೈತತಾಮತಂ ಸಾಕ್ಷಾದುಕ್ತದೋಷಸ್ತತೋ ಭವೇತ್ ।**
**ಕಾಲೋ ನ ಕೇವಲಜ್ಞಾನೀ ಕಾಲತ್ವಾತ್ಪ್ರತಿಪನ್ನವತ್ ।**
**ಏತಯಾನುಮಯಾ ರೋಧಾನ್ನ ತಾದೃಙ್ಮೋಕ್ಷರೂಪತಾ ॥ ೬೬ ॥**

**ಅ ||** ಏವಂ=ಹೀಗೆ, ಶೂನ್ಯವಾದಿ-ಮಾಯಾವಾದಿಗಳಿಗೆ ಅಭಿಮತವಾದ ಮೋಕ್ಷದಂತೆ, ವಿಜ್ಞಾನವಾದೋಽಪಿ=ವಿಜ್ಞಾನವಾದಿಗಳಿಗೆ ಅಭಿಮತವಾದ ಮೋಕ್ಷವೂಕೂಡ, (ಹೇಯವಾಗಿದೆ ) (ಹಾಗಾದರೆ ವಿಜ್ಞಾನವಾದಿಗಳು ವಿಜ್ಞಾನವನ್ನೇ ತತ್ವವನ್ನಾಗಿ ಹೇಳುತ್ತಾರೆ. ಆ ವಿಜ್ಞಾನ ತತ್ವಕ್ಕೂ ಕ್ಷಣಿಕತ್ವವು ಸ್ವಕರ್ಮಕ ಪ್ರಕಾಶಕತ್ವರೂಪವಾದ ಸ್ವಪ್ರಕಾಶತ್ವವೂ ಕೂಡ ಇದೆ. ಪೂರ್ವೋಕ್ತಗಳು ಹೀಗೆ ಅಲ್ಲ. ಆದುದರಿಂದ ವೈಷಮ್ಯವಿದ್ದುದರಿಂದ ಅತಿದೇಶವು ಹೇಗೆ ಎಂದರೆ-) ಹಿ=ಯಾವಕಾರಣದಿಂದ, ಜ್ಞಾನಮಾತ್ರವಿಶೇಷತಃ=ಜ್ಞಾನಮಾತ್ರದ ರೂಪವಾದ ವಿಶೇಷವನ್ನೂ, ತಸ್ಯ=ಆ ಜ್ಞಾನಕ್ಕೆ, ಭಂಗುರತ್ವಾದಿ ವಿಶೇಷಮಪಿ = ಭಂಗುರತ್ವ (ಕ್ಷಣಿಕತ್ವ ಮೊದಲಾದ) ವಿಶೇಷವನ್ನೂ ಕೂಡ, ಅಪಹಾಯ = ಬಿಟ್ಟು, ವಿಜ್ಞಾನವಾದೋಽಪಿ = ವಿಜ್ಞಾನವಾದವೂ ಕೂಡ, ಅದ್ವೈತತಾಮತಂ=ಅದ್ವೈತಮತವು ಎಂದು, ಜ್ಞಾತವ್ಯಂ=ತಿಳಿಯಲ್ಪಡತಕ್ಕದು. ತತಃ=ಆದಕಾರಣದಿಂದ, ಉಕ್ತದೋಷಃ=ಹೇಳಿದ ದೋಷವು, ಭವೇತ್=ಸಮವು ಆಗುವುದು. (ಅಂದರೆ— ವಿಜ್ಞಾನವಾದಕ್ಕೆ ಹಿಂದಿನಗಿಂತ ಯಾವುದಾದರೊಂದು ಸ್ವಲ್ಪ ವಿಶೇಷವು ಇರಲಿ. ಆದಾಗ್ಯೂ ಪ್ರಕೃತದಲ್ಲಿ ಉಪಯುಕ್ತವಾಗಿರುವುದರಿಂದ ಆ ವಿಶೇಷವು ಆದರಣೀಯವಲ್ಲ. ಮೋಕ್ಷಸ್ವರೂಪವಾದರೂ ಸಮಾನವೇ. ಪ್ರತಿಪನ್ನವಾದ ಜೀವಭಾವವನ್ನೂ ಬಿಟ್ಟು ಅದ್ವಿತೀಯ ವಿಜ್ಞಾನತ್ವಾಪತ್ತಿಯು ಮುಕ್ತಿಯೆಂದು ವಿಜ್ಞಾನವಾದಿಗಳೂ ಅಂಗೀಕರಿಸಿರುವರು. ಆದುದರಿಂದ ಅತಿದೇಶವು ಯುಕ್ತವೇ.) (ಅದರ ನಿರಾಸಕ್ಕಾಗಿ ಅನುಮಾನಾಂತರವನ್ನು ಹೇಳುತ್ತಾರೆ.) ಕಾಲಃ = ಮೋಕ್ಷಕಾಲವು, ಕೇವಲಜ್ಞಾನೀ ನ = ಅದ್ವಿತೀಯ ಜ್ಞಾನವುಳ್ಳದ್ದು ಆಗುವುದಿಲ್ಲ. ಕಾಲತ್ವಾತ್=ಕಾಲವಾಗಿರುವುದರಿಂದ, ಪ್ರತಿಪನ್ನವತ್ = ವರ್ತಮಾನಕಾಲದಂತೆ. ಏತಯಾ ಅನುಮಯಾ=ಈ ಅನುಮಾನದಿಂದ, ರೋಧಾತ್=ವಿರೋಧವಿದ್ದುದರಿಂದ, ತಾದೃಙ್ಮೋಕ್ಷರೂಪತಾ=ಅಂತಹಮೋಕ್ಷಸ್ವರೂಪತ್ವವೂ, ನ=ಆಗುವುದಿಲ್ಲ. || ೬೫ || ೬೬ ||

ಜ್ಞಾನಾತಿರಿಕ್ತವಾದುದು ಕಲ್ಪಿತವಾಗಿರುವುದರಿಂದ ವರ್ತಮಾನಕಾಲವೂ ಕೂಡ ಅದ್ವಿತೀಯಜ್ಞಾನವುಳ್ಳದ್ದು ಎಂದರೆ ಹೀಗೆ ಹೇಳಕೂಡದು. ಮುಕ್ತಿ ಸಂಸಾರಗಳಿಗೆ ವಿಶೇಷವಿಲ್ಲವೆಂದಾಗಬೇಕಾಗುವುದು. ಯಾವವಿಶೇಷವು ಅಂಗೀಕರಿಸಲ್ಪಡುತ್ತದೋ ಅದರ ಅಭಾವವೇ ಇದರಿಂದ ಸಾಧಿಸಲ್ಪಡುತ್ತದೆ. ಜ್ಞಾನವ್ಯತಿರಿಕ್ತವಾದುದು ಯಾವುದೂ ಇಲ್ಲವೆನ್ನುವಮತದಲ್ಲಿ ಕಾಲವೂ ಇಲ್ಲ. ಆದುದರಿಂದ ಅನುಮಾನಪ್ರವೃತ್ತಿಗೆ ಯಾವುದು ಆಶ್ರಯವು ಎಂದರೆ—

**ಮೂ ||** **ಯದಿ ಕಾಲೋಽಪಿ ನೇತ್ಯಾಹಿ ಕದೇತಿ ಪ್ರಶ್ನ ಉತ್ತರಂ || ೬೭ ||**
**ಕಿಂ ವಕ್ಷ್ಯತಿ ಯದಾವಸ್ಥಾಂ ವದೇಸ್ಸಾ ಪಕ್ಷತಾಂ ವ್ರಜೇತ್ ।**
**ಅವಸ್ಥಾತ್ವಾದಿತಿ ಹ್ಯೇವ ಹೇತುಃ ಸಾಪಿ ಕದೇತಿ ಚ || ೬೮ ||**
**ಪೃಷ್ಟೇ ಕಾಲಶ್ಚ ವಕ್ತವ್ಯೋ ನಾಕಾಲತ್ವಂ ತತೋ ಭವೇತ್ ।**
**ನ ಕಾಲ ಇತಿ ಸಾಮಾನ್ಯನಿಷೇಧೇ ಕಾಲಗಪ್ರಮಾ || ೬೯ ||**
**ನಿರುಣದ್ಧಿ ಸಮುಚ್ಚಾಯಂ ತ್ರಯಾಣಾಮುಕ್ತವಾದಿನಾಂ ।**
**ಏಕಜೀವತ್ವಪಕ್ಷೇ ತು ಕಾಲಾಭಾವಾದಿಯಂ ಪ್ರಮಾ ।**
**ಕುಪಿತಾ ಕಾಲಮಾಧಾಯ ದ್ವೈತಮೇವೋಪಪಾದಯೇತ್ || ೭೦ ||**

ಅ || ಯದಿ = ಯಾವ ಪಕ್ಷದಲ್ಲಿ, (ವಿಜ್ಞಾನವಾದಿಯು) ಕಾಲೋಽಪಿ = ಕಾಲವೂ ಕೂಡ, ನೇತ್ಯಾಹ = ಇಲ್ಲವೆಂದು ಹೇಳುತ್ತಾನೋ, (ಆಗ) ಕದಾ ಕಾಲೋ ನ ಇತಿ ಪ್ರಶ್ನೇ= ಯಾವಾಗ ಕಾಲವು ಇರುವುದಿಲ್ಲವೆನ್ನುವ ಪ್ರಶ್ನೆಯು, (ಪರರಿಂದ ಮಾಡಲ್ಪಡುತ್ತಿರಲು) ಕಿಂ ಉತ್ತರಂ=ಏನು ಉತ್ತರವನ್ನು, (ಇವನು) ವಕ್ಷ್ಯತಿ=ಹೇಳುವನು. (ನಿರಧಿಕರಣವಾದ ಅಭಾವವನ್ನು ನಿರೂಪಿಸಲಿಕ್ಕೆ ಅಶಕ್ಯವಾಗಿರುವುದರಿಂದ ಕಾಲೋ ನ ಎನ್ನುವುದು ನಿರೂಪಿಸಲಿಕ್ಕೆ ಅಶಕ್ಯವಾಗಬೇಕಾಗುವುದು). (ಮೋಕ್ಷಾವಸ್ಥೆಯಲ್ಲಿ ಕಾಲವು ಇರುವುದಿಲ್ಲವೆನ್ನುವ ಉತ್ತರವನ್ನು ಹೇಳುವೆನು ಎಂದರೆ—) ಯದಾ=ಯಾವಾಗ, ಅವಸ್ಥಾಂ=ಮೋಕ್ಷಾವಸ್ಥೆಯನ್ನು, ವದೇತ್= (ಕಾಲಾಭಾವಕ್ಕೆ ಅಧಿಕರಣವಾಗಿ) ಹೇಳುವನೋ, (ಹಾಗಾದರೆ) ಸಾ=ಆ ಮೋಕ್ಷಾವಸ್ಥೆಯು, (ಪೂರ್ವಾನುಮಾನದಲ್ಲಿ) ಪಕ್ಷತಾಂ=ಪಕ್ಷತ್ವ (ಧರ್ಮಿತ್ವ) ವನ್ನು, ವ್ರಜೇತ್=ಹೊಂದುವುದು. ('ಮೋಕ್ಷಾವಸ್ಥಾ ನ ಕೇವಲ ಜ್ಞಾನವತೀ' ಎಂದು ಪ್ರತಿಜ್ಞಾಮಾಡಲ್ಪಡುತ್ತದೆ). (ಹೀಗಾದರೆ ಕಾಲತ್ವಾತ್ ಎನ್ನುವ ಹೇತುವು ಸ್ವರೂಪಾಸಿದ್ಧವು ಆಗುವುದು ಎಂದರೆ-) ಅವಸ್ಥಾತ್ವಾದಿತಿ ಹ್ಯೇವ ಹೇತುಃ=(ಯಾವಾಗ ಅವಸ್ಥೆಯು ಪಕ್ಷೀಕರಿಸಲ್ಪಡುತ್ತದೋ ಆಗ) 'ಅವಸ್ಥಾತ್ವಾತ್' ಎನ್ನುವ ಹೇತುವೇ ಹೇಳಲ್ಪಡುತ್ತದೆ. ('ಕಾಲತ್ವಾತ್' ಎನ್ನುವ ಹೇತುವು ಹೇಳಲ್ಪಡುವುದಿಲ್ಲ. ಆದುದರಿಂದ ಹಿಂದೆ ಹೇಳಿದ ದೋಷವಿಲ್ಲ). ಸಾಪಿ ಕದಾ ಇತಿ=(ಮೋಕ್ಷಾವಸ್ಥೆಯನ್ನು ಕಾಲಾಭಾವಕ್ಕೆ ಅಧಿಕರಣವನ್ನಾಗಿ ಹೇಳುವ) ಆ ಮೋಕ್ಷಾವಸ್ಥೆಯೂ ಕೂಡ (ಯಾವಾಗ ಎಂದು, ಯಾರಿಂದ ಲಾದರೂ), ಪೃಷ್ಟೇ=ಪ್ರಶ್ನೆಮಾಡಿಸಿಕೊಳ್ಳಲ್ಪಡುತ್ತಿರಲು, (ಭಾವನಾಪರಿಪಾಕವಾದಮೇಲೆ ಎಂದು ಅವಸ್ಥಾಕ್ಕೆ ಅಧಿಕರಣವಾಗಿ) ಕಾಲಶ್ಚ=ಕಾಲವೇ, ವಕ್ತವ್ಯಃ=ಹೇಳಲ್ಪಡಬೇಕು. (ಈ ಪ್ರಕಾರ ಯಾವಾಗಲೂ ಪ್ರಶ್ನೆಮಾಡಬಾರದು ಎನ್ನುವಲ್ಲಿ ನಿಯಾಮಕವಿಲ್ಲ.) ತತಃ=ಕಾಲಕ್ಕೆ ಸರ್ವಥಾ ಅಪರಿಹಾರ್ಯತ್ವವಿದ್ದುದರಿಂದ, ಅಕಾಲತ್ವಂ = ಕಾಲಾಭಾವವು, ನ ಭವೇತ್ = ಆಗಲಾರದು. (ಅಂತೂ ಅದನ್ನು ಆಶ್ರಯಿಸಿಕೊಂಡೇ ಪ್ರಥಮಾನುಮಾನವೂ ಪ್ರವೃತ್ತವಾಗುವುದು.) ಹಾಗಾದರೆ ಕಾಲವಿಲ್ಲದಿರುವುದರಿಂದ ಆದ್ಯಾನುಮಾನವು ಆಶ್ರಯಾಸಿದ್ಧವು ಎಂದು ಯಾವುದು ಹೇಳಲ್ಪಟ್ಟದೋ, ಅದು ಅಸತ್ತಾಗಿದೆ. ಪ್ರತಿಯೋಗ್ಯಧಿಕರಣವೇ ಅಭಾವಕ್ಕೆ ಅಧಿಕರಣವು; ಕಾಲಕ್ಕೆ ಕಾಲವು ಅಧಿಕರಣವಾಗುವುದಿಲ್ಲ. ಕಾಲಾಭಾವವು ಕಾಲಾಧಿಕರಣಕವು ಹೇಗೆ ಆಗುವುದು? ಆದುದರಿಂದ 'ಕದಾ' ಎನ್ನುವ ಪ್ರಶ್ನೆಯೇ ಅಯುಕ್ತವು. ಆದುದರಿಂದ ಅದಕ್ಕೆ ಉತ್ತರ ಏತಕ್ಕೆ? ಎಂದರೆ— ಹೀಗಾದರೆ ಕಾಲವಿಶೇಷವನ್ನು ಅಧಿಕರಣವನ್ನಾಗಿ ತೆಗೆದುಕೊಳ್ಳದೆ ಕಾಲವನ್ನು ನಿಷೇಧಿಸುವವ ನಿಂದ ಕಾಲಸಾಮಾನ್ಯನಿಷೇಧವೇ ಮಾಡಲ್ಪಡುವುದು. ಅದರಿಂದ ಏನಾಯಿತೆಂದರೆ—) ಕಾಲಃ= ಕಾಲವು, ನ = ಇಲ್ಲ, ಇತಿ=ಈ ಪ್ರಕಾರ, ಸಾಮಾನ್ಯನಿಷೇಧೇ = ಸಾಮಾನ್ಯತಃ ನಿಷೇಧವು (ಮಾಡಲ್ಪಡುತ್ತಿರಲು) (ಕಾಲದ ಸ್ವರೂಪವನ್ನೇ ನಿಷೇಧಮಾಡಿದಂತೆ ಆಗುವುದು. ತಥಾ ಚ) ಕಾಲಗಪ್ರಮಾ=('ಕಾಲಂ ಗಚ್ಛತಿ ವಿಷಯೀಕರೋತೀತಿ' ಎನ್ನುವ ವ್ಯುತ್ಪತ್ತಿಯಿಂದ) ಕಾಲವನ್ನು ವಿಷಯೀಕರಿಸತಕ್ಕ ಸಾಕ್ಷಿಯು, ನಿರುಣದ್ಧಿ=(ಕಾಲಸಾಮಾನ್ಯನಿಷೇಧವನ್ನು) ತಡೆಯುತ್ತದೆ. (ಆ ಸಾಕ್ಷಿಯು ಪೂರ್ವೋತ್ತರಾವಧಿಯಿಲ್ಲ. ಕಾಲವದೆ ಎಂದು ಗ್ರಹಿಸುತ್ತದೆ.) (ಈ ಸಾಕ್ಷಿ ವಿರೋಧವು ಕೇವಲ ವಿಜ್ಞಾನವಾದಿಗೆ ಅಲ್ಲ. ಮತ್ತೆ ಮೂವರಿಗೂ ಕೂಡ (ಶೂನ್ಯವಾದಿ-ಮಾಯಾವಾದಿ-ವಿಜ್ಞಾನವಾದಿಗಳಿಗೂ ಕೂಡ) ಎನ್ನುತ್ತಾರೆ. ಅಯಂ=ಈ ಸಾಕ್ಷಿವಿರೋಧವು, ತ್ರಯಾಣಾಂ ಉಕ್ತವಾದಿನಾಂ=ತಿರಸ್ಕೃತರಾದ ಮಾಯಾವಾದಿ-ಶೂನ್ಯವಾದಿ-ವಿಜ್ಞಾನವಾದಿ ಈ ಮೂವರಿಗೂ, ಸಮುಚ್ಚ=ಸಮಾನವೇ, (ಹಾಗಾದರೆ ಶೂನ್ಯವಾದಿ-ಮಾಯಾವಾದಿಗಳಿಗೆ ಈ ಸಾಕ್ಷಿವಿರೋಧವು ಹೇಗೆ? ಆ ಶೂನ್ಯವಾದಿ-ಮಾಯಾವಾದಿಗಳು ಕಾಲಾಭಾವವನ್ನು

ಅಂಗೀಕರಿಸಲಿಲ್ಲ. ಹೇಗೆ ಲೋಕದಲ್ಲಿ ಅನೇಕ ಜನರು ಮಾಯಾಮಯಗಳಾದ ಗಜ-ತುರಗಾದಿ ಗಳನ್ನು ನೋಡುತ್ತಿರಲು ಯಾವಾತನಿಗೆ ಕಾರಣವಿಶೇಷದಿಂದ ಮಾಯೆಯು ಹೊರಟು ಹೋಗುತ್ತದೋ ಆತನೇ ಅವುಗಳನ್ನು ನೋಡುವುದಿಲ್ಲ. ಇತರರು ನೋಡಿಯೇ ನೋಡುತ್ತಾರೆ. ಹಾಗೆಯೇ ಯಾರಿಗೆ ದ್ವೈತದರ್ಶನಕ್ಕೆ ಕಾರಣವಾದ ಅಜ್ಞಾನವು ಹೊರಟುಹೋಗಿಯದೋ ಅವನೇ ದ್ವಿತೀಯ ವಸ್ತುವನ್ನು ನೋಡುವುದಿಲ್ಲ. ಇತರರಿಗಾದರೂ ಕಾಲಾದಿ ಪ್ರಪಂಚ ದರ್ಶನವು ಆಗಿಯೇ ಆಗುತ್ತದೆ ಎಂದು ಅವರಿಬ್ಬರಿಂದ ಅಂಗೀಕೃತವಾಗಿದೆ ಎಂದರೆ-) ಏಕಜೀವತ್ವ ಪಕ್ಷೇ ತು=ಒಬ್ಬನೇ ಜೀವನು ಎನ್ನುವ ಪಕ್ಷದಲ್ಲಿ ಆದರೂ, ಕಾಲಾಭಾವಾತ್=ಕಾಲವು ಇಲ್ಲದಿರು ವುದರಿಂದ, (ಅಂದರೆ ಮುಕ್ತಿಯಲ್ಲಿ ಕಾಲವನ್ನು ಒಪ್ಪದಿರುವುದರಿಂದ) ಇಯಂ ಪ್ರಮಾ=ಈ ಸಾಕ್ಷಿ ರೂಪವಾದ ಕಾಲವಿಷಯಕವಾದ ಪ್ರಮೆಯು) ಕುಪಿತಾ=ವಿರೋಧಿಯು ಆಗಿಯೇ ಆಗುತ್ತದೆ. (ಅಂದರೆ– ಬಹುಜೀವವಾದಿಯಾದ ಶೂನ್ಯವಾದಿಯ ಮತ್ತೂ ಮಾಯಾವಾದಿಯ ಮತಕ್ಕೆ ನಾವು ಸಾಕ್ಷಿವಿರೋಧವನ್ನು ಹೇಳಲಿಲ್ಲ. ಮತ್ತೆ ಒಬ್ಬನ ಮುಕ್ತಿಯೇ ಸರ್ವರ ಮುಕ್ತಿಯು. ಒಬ್ಬನಿಗೆ ಮುಕ್ತಿಯಾದರೆ ಯಾವುದೂ ಉಳಿಯುವುದಿಲ್ಲ ಎನ್ನುವ ಶೂನ್ಯವಾದಿ-ಮಾಯಾವಾದಿ ಗಳ ಏಕಜೀವ ಪಕ್ಷದಲ್ಲಿ ಆದರೂ ಮುಕ್ತಿಯಲ್ಲಿ ಕಾಲಾಭಾವವನ್ನು ಅಂಗೀಕರಿಸಿದರಿಂದ ಈ ಸಾಕ್ಷಿ ರೂಪವಾದ ಪ್ರಮೆಯು ವಿರೋಧಿನಿಯು ಆಗಿಯೇ ಆಗುತ್ತದೆ.) (ಶೂನ್ಯವಾದಿ-ಮಾಯಾ ವಾದಿಗಳನ್ನು ಕುರಿತು ಸಾಕ್ಷಿವಿರೋಧವನ್ನು ಹೇಳಿದ್ದು ಅಸಂಗತವು. ಕಾಲಾಭಾವವನ್ನು ಅಂಗೀಕರಿಸಿದರೂ ಈಗ ಅದು ಅಪ್ರಸ್ತುತವಾಗಿದೆ ಎಂದರೆ—) ಇಯಂ ಪ್ರಮಾ=ಈ ಪ್ರಮೆಯು, ಕಾಲಂ=ಕಾಲವನ್ನು, ಆದಾಯ=ಉಪಪಾದಿಸಿ, ದ್ವೈತಮೇವ=ದ್ವೈತ (ದ್ವಿತೀಯವಸ್ತುವನ್ನೇ) ಉಪಪಾದಯೇತ್=ಉಪಪಾದಿಸುವುದು (ಅಂದರೆ– ಅದ್ವಿತೀಯವಾದ ಶೂನ್ಯದ ಅಥವಾ ಬ್ರಹ್ಮನ ಅವಸ್ಥಾನವೇ ಮುಕ್ತಿಯೆಂದು ಏಕಜೀವವಾದಿಗಳಾದ ಶೂನ್ಯವಾದಿ-ಮಾಯಾವಾದಿ ಗಳಿಂದ ಹೇಳಲ್ಪಡುತ್ತದೆ. ಆ ವಿಷಯದಲ್ಲಿ ನಾವು ಹೀಗೆ ಹೇಳುತ್ತೇವೆ. ಕಾಲವಿದ್ದಪ್ರಯುಕ್ತ ಎರಡನೇ ವಸ್ತುವು ಇಲ್ಲವೆಂದು ಕೂಡುವುದಿಲ್ಲ. ಆ ವಿಷಯದಲ್ಲಿ ಪರನು ಕಾಲವೂ ಕೂಡ ಇಲ್ಲವೆಂದು ಹೇಳುತ್ತಾನೆ. ಆಗ ಸಾಕ್ಷಿವಿರೋಧವು ಹೇಳಲ್ಪಡುತ್ತದೆ ಎನ್ನುವ ಸಂಗತಿಯನ್ನು ಆಶ್ರಯಿಸಿಕೊಂಡು ಅತಿದೇಶವು ಮಾಡಲ್ಪಟ್ಟದೆ. ಆಶ್ರಯಾಸಿದ್ಧಿಯು ಬರುತ್ತದೆ ಎನ್ನುವುದ ರಿಂದ ಅಲ್ಲ) ॥ ೬೭ ॥ ೬೮ ॥ ೬೯ ॥ ೭೦ ॥

ಹಿಂದೆ ಹೇಳಿದ ಮೂರು ವಾದಿಗಳ ಮತದಲ್ಲಿಯೂ ದೋಷವನ್ನು ಹೇಳತಕ್ಕ ಅನು ಮಾನಾಂತರವನ್ನು ಹೇಳುತ್ತಾರೆ—

ಮೂ ॥ ವಿಮತಃ ಪ್ರಪಂಚವಾನ್ ಕಾಲಃ ಕಾಲತ್ವಾತ್ಪ್ರತಿಪನ್ನವತ್ ॥ ೭೧ ॥
ಇತಿ ಚಾನ್ಯಾನುಮೈಕತ್ವಂ ಜಿವಸ್ಯ ವಿನಿವಾರಯೇತ್ ।
ಕಾಲಶಬ್ದೇಶ್ವರೈಕತ್ವಮತಾನ್ಯಪ್ಯೇವಮೇವ ಹಿ ।
ನಿರಾಕೃತಾನಿ ತೇಷಾಂ ಚ ಸಮತ್ವಾತ್ಪಕ್ಷದೋಷಯೋಃ ॥ ೭೨ ॥

ಅ ॥ ವಿಮತಃ ಕಾಲಃ=ವಿವಾದವಿಷಯವಾದ ಕಾಲವೂ ಅಂದರೆ— ಮೋಕ್ಷಕಾಲವು, ಪ್ರಪಂಚವಾನ್=ಆಕಾಶಮೊದಲಾದ ಪ್ರಪಂಚವುಳ್ಳದ್ದು, ಕಾಲತ್ವಾತ್=ಕಾಲತ್ವವಿದ್ದುದರಿಂದ, ಪ್ರತಿಪನ್ನವತ್=ವರ್ತಮಾನಕಾಲದಂತೆ. ಇತಿ ಚ=ಹೀಗೆ, ಅನ್ಯಾನುಮಾ ಚ = ಇತರವಾದ

ಅನುಮಾನವೂ ಕೂಡ, ಜೀವಸ್ಯ=ಮುಕ್ತನಿಗೆ, ಏಕತ್ವಂ=ಐಕ್ಯವನ್ನು, (ಅಂದರೆ ಅದ್ವಿತೀಯ ತ್ವರೂಪದಿಂದ ಅವಸ್ಥಿತಿಯನ್ನು) ವಿನಿವಾರಯೇತ್=ತಡೆಯುವುದು. (ಹಿಂದೆ ಹೇಳಿದ ಅತಿದೇಶ ದಿಂದ) ಅದ್ವೈತಮತಾಂತರಗಳನ್ನು ದೂಷಿಸುತ್ತಾರೆ.) ಕಾಲಶಬ್ದೇಶ್ವರೈಕತ್ವಮತಾನ್ಯಪಿ = ಕಾಲ-ಶಬ್ದ-ಈಶ್ವರರಿಗೆ ಐಕ್ಯವನ್ನು ಹೇಳತಕ್ಕ ಮತಗಳೂ ಕೂಡ, ತೇಷಾಂ ಚ=ಶೂನ್ಯವಾದಿ ಪ್ರಭೃತಿಗಳಿಗೂ ಇವರಿಗೂ, ಪಕ್ಷದೋಷಯೋಃ = ಪಕ್ಷಕ್ಕೂ ದೋಷಕ್ಕೂ, ಸಮತ್ವಾತ್= ಸಾಮ್ಯವಿದ್ದಪ್ರಯುಕ್ತ, ಏವಮೇವ=ಹೀಗೆಯೇ, ನಿರಾಕೃತಾನಿ=ನಿರಾಕರಿಸಲ್ಪಟ್ಟವು.

**ತಾ ||** (1) ಯಾವುದು ಯಾವುದರಿಂದ ಸಂಬದ್ಧವಾಗಿ ತೋರುತ್ತದೋ, ಅದು ಅದ ರಲ್ಲಿ ಆರೋಪಿತವಾಗಿದೆ. ಹೇಗೆಂದರೆ— ಇದಮಾಕಾರದಲ್ಲಿ ರಜತವು ಆರೋಪಿತವಾಗಿದೆ. ಕಾಲಾನುವಿದ್ಧವಾದುದು ಎಲ್ಲವೂ ತೋರುತ್ತದೆ. ಆದುದರಿಂದ ಕಾಲದಲ್ಲಿಯೇ ಎಲ್ಲವೂ ಆರೋ ಪಿತವಾಗಿದೆ. ಆ ಕಾಲ ಒಂದೇ; ಸತ್ಯವು ಪರಮಾರ್ಥವು. ಆದುದರಿಂದ ಕಾಲಮಾತ್ರಾವಸ್ಥಿತಿಯೇ ಮುಕ್ತಿಯು ಎಂದು ಕಾಲೈಕತ್ವವಾದಿಗಳು (2) ಇದೇ ರೀತಿಯಾಗಿ ಶಬ್ದೈಕತ್ವವನ್ನು ಹೇಳ ತಕ್ಕ ವೈಯಾಕರಣರು ಹೇಳುತ್ತಾರೆ. ಹೇಗೆಂದರೆ— **'ನ ಸೋऽಸ್ತಿ ಪ್ರತ್ಯಯೋ ಲೋಕೇ ಯಃ ಶಬ್ದಾನುಗಮಾದೃತೇ । ಅನುವಿದ್ಧಮಿವ ಜ್ಞಾನಂ ಸರ್ವಂ ಶಬ್ದೇನ ಗಮ್ಯತೇ' ||** ಶಬ್ದಸಂಬಂಧವಿಲ್ಲದೆ ಯಾವ ಜ್ಞಾನವೂ ಇರುವುದಿಲ್ಲ. ಆದುದರಿಂದ ಸರ್ವಜ್ಞಾನವೂ ಶಬ್ದದಿಂದ ಸಂಬದ್ಧವಾಗಿಯೇ ಅನುಭೂತವಾಗುತ್ತದೆ. ಆದುದರಿಂದ ಸರ್ವವೂ ಶಬ್ದದಲ್ಲಿಯೇ ಆರೋಪಿತ ವಾಗಿರುವುದರಿಂದ ಶಬ್ದ ಒಂದೇ ಪರಮಾರ್ಥತತ್ವವೆಂದು ಶಬ್ದಸ್ಫೋಟವಾದಿಗಳಾದ ವೈಯಾಕರ ಣರು ಹೇಳುತ್ತಾರೆ. (3) ಶೈವೇಕದೇಶಿಗಳು ತಮ್ಮ ಆಗಮವನ್ನು ಆಶ್ರಯಿಸಿಕೊಂಡು ಈಶ್ವರೈಕ ತ್ವವನ್ನು (ಅಂದರೆ ಈಶ್ವರನಿಂದ ಜೀವರಿಗೆ ಐಕ್ಯವನ್ನು) ಹೇಳುತ್ತಾರೆ. (4) ಹಿಂದೆಹೇಳಿದ ಶೂನ್ಯವಾದಿಪ್ರಭೃತಿಗಳ, ಈ ವಾದಿಗಳ ಪಕ್ಷವೂ ಸಮಾನವೇ ಆಗಿದೆ. ಶೂನ್ಯಾದಿ ಶಬ್ದಭೇದ ಮಾತ್ರವು ಅಪ್ರಯೋಜಕವಾಗಿದೆ. ಪ್ರತಿಪನ್ನಸ್ವರೂಪವುಳ್ಳ ಜೀವರ ವಿನಾಶಾದಿಗಳನ್ನು ಎಲ್ಲರೂ ಅಂಗೀಕರಿಸಿರುವರು. ಆದುದರಿಂದ ಉತ್ತಮವಾದ ಇಷ್ಟರೂಪನಾದ ಜೀವನ ನಾಶವನ್ನೂ ಒಪ್ಪಿರುವುದರಿಂದ ಮೋಕ್ಷವು ಪುರುಷಾರ್ಥವಾಗಲಿಕ್ಕಿಲ್ಲ. ಇತ್ಯಾದಿದೋಷಗಳೂ ಸಮಾನಗಳೇ. (5) ಅನುಮಾನವಾದರೂ ಪ್ರತ್ಯಕ್ಷವಿರೋಧಾದಿಗಳಿಂದ ದುಷ್ಟವೇ. ಹಾಗೆಯೇ ಆಗಮವೂ ಕೂಡ ದುಷ್ಟವೇ. || ೭೧ || ೭೨ ||

ವೈಭಾಷಿಕ ಸೌತ್ರಾಂತಿಕರಿಗೆ ಅಭಿಮತವಾದ ಮೋಕ್ಷವನ್ನು ನಿರೂಪಿಸುತ್ತಾರೆ—

**ಮೂ ||** **ಜ್ಞಾನಂ ಸ್ವರಸಭಂಗ್ಯೇವ ನಿತ್ಯಸಂತಾನಮಿಷ್ಯತೇ || ೭೩ ||**
**ಬೌದ್ಧಾಭ್ಯಾಮಪರಾಭ್ಯಾಂ ತು ತತ್ರಾಪ್ಯುಕ್ತಾನುಮಾ ರಿಪುಃ ।**
**ಮೋಕ್ಷೋ ನ ಶುದ್ಧವಿಜ್ಞಾನಸಂತಾನೀ ಕಾಲಗತ್ವತಃ || ೭೪ ||**
**ಪ್ರತಿಪನ್ನೋ ಯಥೇತ್ಯೇತದನುಮಾನಂ ತದುತ್ತರಂ ।**
**ಅನುಮಾನಾನಿ ಸರ್ವಾಣಿ ಪ್ರತಿಸಾಧನಯೋಗತಃ ।**
**ನಿಷಿದ್ಧಾನ್ಯುಕ್ತಭಂಗ್ಯೈವ ಶ್ರುತಯಶ್ಚಾಸ್ಮದುಕ್ತಿಗಾಃ || ೭೫ ||**

**ಅ ||** ಅಪರಾಭ್ಯಾಂ=ಶೂನ್ಯವಾದಿ-ವಿಜ್ಞಾನವಾದಿಗಳಿಂದ ಇತರವಾದ, ಬೌದ್ಧಾಭ್ಯಾಂ ತು=ಬೌದ್ಧರಿಂದಲಾದರೂ, (ಅಂದರೆ ವೈಭಾಷಿಕ-ಸೌತ್ರಾಂತಿಕರಿಬ್ಬರಿಂದ) ಜ್ಞಾನಂ=ಜ್ಞಾನವು,

ಸ್ವರಸಭಂಗ್ಯೇವ=ಸ್ವಭಾವದಿಂದಲೇ ಭಂಗುರವಾದುದು ನಷ್ಟವಾಗುವುದು. ನಿತ್ಯಸಂತಾನಂ= ನಿತ್ಯಭೂತವಾದ ಸಂತಾನವೆಂದು, ಇಷ್ಯತೇ=ಅಂಗೀಕರಿಸಲ್ಪಡುತ್ತದೆ. (ಅಂದರೆ— ಜ್ಞಾನವೇ ಆತ್ಮನು. ಆ ಜ್ಞಾನವು ಸ್ವಭಾವದಿಂದಲೇ ಭಂಗುರವಾದುದು. ಆದುದರಿಂದಲೇ ಕ್ಷಣಿಕವು. ಜ್ಞಾನಸಂತಾನವಾದರೂ ನಿತ್ಯವೇ. ಅದಕ್ಕೆ ಅನಾದಿಯಾದ ಸಂಸ್ಕಾರವಶದೆಶೆಯಿಂದ ವಿಷಯ ಸಂಬದ್ಧವಾದುದಕ್ಕೆ ಯಾವುದು ಉತ್ಪತ್ತಿಯೋ ಅದೇಸಂಸಾರವು. ಸಂಸ್ಕಾರಾಧಿಕ್ಯವಶದಿಂದ ವಾಸನೆಯು ಹುಟ್ಟುತ್ತಿರಲು ವಿಷಯಸಂಬಂಧವಿಲ್ಲದೆ ಶುದ್ಧಜ್ಞಾನವಿರುವಿಕೆಯೇ ಮೋಕ್ಷವು ಎನ್ನುವುದು ಇಬ್ಬರಿಗೂ ಸಮಾನವೇ; ಸೌತ್ರಾಂತಿಕರಾದರೂ ಸಂಸಾರದಲ್ಲಿ ಸಾಕಾರತ್ವವನ್ನೂ, ಮುಕ್ತಿಯಲ್ಲಿ ನಿರಾಕಾರತ್ವರೂಪವಾದ ವಿಶೇಷವನ್ನೂ ಹೇಳುತ್ತಾರೆ.) (ಅದನ್ನು ನಿರಾಕರಿಸು ತ್ತಾರೆ.) ತತ್ರಾಪಿ = ಅದರಲ್ಲಿಯೂ, ಉಕ್ತಾ = 'ವಿಮತಃ ಕಾಲಃ ನ ನಿರ್ವಿಷಯೈತಜ್ಞಾನ ಸಂತತಿಮಾನ್ ಕಾಲತ್ವಾತ್ ಇದಾಂನೀತನ ಕಾಲವತ್' ಇದುಮೊದಲಾದ ಹಿಂದೆ ಹೇಳಿದಕ್ಕೆ ಸಮಾನವಾದ, ಅನುಮಾ=ಅನುಮಾನವು, ರಿಪುಃ=ವಿರೋಧಿಯು. (ಅನುಮಾನಾಂತರವನ್ನು ಹೇಳುತ್ತಾರೆ.) ಮೋಕ್ಷಃ=ಮುಕ್ತಿಯು, ಶುದ್ಧವಿಜ್ಞಾನಸಂತಾನೀ ನ=ನಿರ್ವಿಷಯಕವಾದ ಚಿತ್ತಿನ ಸಂತಾನಸಂಬಂಧಿಯು ಅಲ್ಲ, ಕಾಲಗತ್ವತಃ = ಕಾಲಸಂಬಂಧಿತ್ವವಿದ್ದಪ್ರಯುಕ್ತ, ಪ್ರತಿಪನ್ನಃ ಯಥಾ=ವರ್ತಮಾನಕಾಲಿಕವಾದ ಸಂಸಾರದಂತೆ, ಇತ್ಯೇತದನುಮಾನಂ=ಈ ಅನುಮಾನವು, ತದುತ್ತರಂ=ಆ ಪಕ್ಷಕ್ಕೆ ದೂಷಣವು (ಈ ಮೋಕ್ಷವೂ ಅಪ್ರಾಮಾಣಿಕವಾಗಿದೆ. ಈ ವಿಷ ಯದಲ್ಲಿ ಹಿಂದೆ ಹೇಳಿದರೀತಿಯು ಪ್ರತ್ಯಕ್ಷ ಆಗಮಗಳನ್ನು ಹೇಳಲಿಕ್ಕೆಬಾರದಿರುವುದರಿಂದ ಕೇವಲ ಅನುಮಾನಗಳನ್ನೇ ಹೇಳಬೇಕು. ಆ ವಿಷಯದಲ್ಲಿ ಹೇಳುತ್ತಾರೆ.) ಸರ್ವಾಣಿ ಅನು ಮಾನಾನಿ = ಎಲ್ಲಾ ಅನುಮಾನಗಳೂ, ಉಕ್ತಭಂಗ್ಯೈವ = ಹಿಂದೆಹೇಳಿದರೀತಿಯಿಂದಲೇ, ಪ್ರತಿಸಾಧನಯೋಗತಃ = ಪ್ರತಿಪಕ್ಷದ ಸಂಬಂಧದಿಂದ, ನಿಷಿದ್ಧಾನಿ = ನಿಷೇಧಿಸಿಕೊಳ್ಳಲ್ಪಟ್ಟವೆ. (ಶ್ರುತಿವಿರುದ್ಧಗಳಾಗಿರುವುದರಿಂದ ಬಾಧಿತಗಳೂ ಆಗಿವೆ ಎನ್ನುತ್ತಾರೆ.) ಶ್ರುತಯಶ್ಚ = ಶ್ರುತಿ ಗಳಾದರೂ, ಅಸ್ಮದುಕ್ತಿಗಾಃ=ನಮ್ಮ ಉಕ್ತಿಯನ್ನೇ ಪ್ರತಿಪಾದಿಸುತ್ತವೆ. (ಅಂದರೆ ನಮಗೆ ಅಭಿಮತವಾದ ಮೋಕ್ಷಸ್ವರೂಪವನ್ನೇ ಪ್ರತಿಪಾದಿಸುತ್ತವೆ.) ॥ ೭೩ ॥ ೭೪ ॥ ೭೫ ॥

ಸಾಂಖ್ಯಾದಿಗಳಿಗೆ ಅಭಿಮತವಾದ ಮೋಕ್ಷವನ್ನು ಅನುವಾದ ಮಾಡುತ್ತಾರೆ—

**ಮೂ ॥ ಸಾಂಖ್ಯನೈಯಾಯಿಕಾದ್ಯಾಶ್ಚ ಪ್ರಾಹುರ್ಮೋಕ್ಷಂ ಚ (ತು) ನಿಃಸುಖಂ ॥ ॥ ೭೬ ॥**

**ಇಚ್ಛಾದ್ವೇಷಪ್ರಯತ್ನಾದೇರಪಿ ಸರ್ವಾತ್ಮನಾ ಲಯಂ ।**
**ತತ್ರಾಹುರ್ನೈತದಪ್ಯತ್ರ ಶೋಭನಂ ಶ್ರುತಯೋ ಯತಃ ॥**
**ಮಹಾನಂದಂ ಚ ಭೋಗಂ ಚ ನಿಯಮೇನ ವದಂತಿ ಹಿ ॥ ೭೭ ॥**

ಅ ॥ ಸಾಂಖ್ಯನೈಯಾಯಿಕಾದ್ಯಾಶ್ಚ = ಸಾಂಖ್ಯರೂ, ನೈಯಾಯಿಕರೂ ಮೊದಲಾದ ವೈಶೇಷಿಕರೂ ಕೂಡ, ಮೋಕ್ಷಂ ತು=ಮುಕ್ತಿಯನ್ನು, ನಿಃಸುಖಂ=ಸುಖರಹಿತವಾದುದನ್ನಾಗಿ ಪ್ರಾಹುಃ=ಹೇಳುತ್ತಾರೆ. ಚ=ಮೊದಲಿನವರಂತೆಯೇ ಇವರೂ ಅನುವವನ್ನ ಭಾಷಿಗಳೇ. (ಏಕೆ ಹೀಗೆ ಹೇಳುತ್ತಾರೆಂದರೆ—) ತತ್ರ = ಮುಕ್ತಿಯಲ್ಲಿ, ಇಚ್ಛಾದ್ವೇಷ ಪ್ರಯತ್ನಾದೇರಪಿ = ಇಚ್ಛಾ ದ್ವೇಷಪ್ರಯತ್ನಮೊದಲಾದುದಕ್ಕೂ, ಸರ್ವಾತ್ಮನಾ = ಸರ್ವಪ್ರಕಾರದಿಂದಲೂ, ಲಯಂ= ನಾಶವನ್ನು, ಆಹುಃ=ಹೇಳುತ್ತಾರೆ. (ಅಂತೂ ಸುಖರಹಿತವಾದ ಮೋಕ್ಷವೇ ಪುರುಷಾರ್ಥ

ವೆನ್ನುತ್ತಾರೆ.) (ನಿರಾಕರಿಸುತ್ತಾರೆ.) ಅತ್ರ=ಮುಕ್ತಿಯಲ್ಲಿ, ಏತದಪಿ=ಸುಖರಾಹಿತ್ಯ ಮತವೂ ಕೂಡ, ನ ಶೋಭನಂ=ಶೋಭನವಲ್ಲ. (ಏಕೆಂದರೆ—) ಅತ್ರ = ಮುಕ್ತಿಯಲ್ಲಿ, ಯತಃ= ಯಾವ ಕಾರಣದಿಂದ, ಶ್ರುತಯಃ=ಶ್ರುತಿಗಳು, ಮಹಾನಂದಂ ಚ=ಮಹತ್ತಾದ ಆನಂದವನ್ನು ಭೋಗಂ ಚ=ಮಹಾನಂದಾನುಭವವನ್ನು, ನಿಯಮೇನ=ನಿಯಮದಿಂದ ವಿರೋಧವಿಲ್ಲದೇನೇ, ವದಂತಿ=ಹೇಳುತ್ತವೆ. ಹಿ=ಶ್ರುತಿಪ್ರಸಿದ್ಧವು ॥ ೭೬ ॥ ೭೭ ॥

ಹಾಗಾದರೆ ಮೋಕ್ಷದಲ್ಲಿ 'ಅಶರೀರಂ ವಾವಸಂತಂ ನ ಪ್ರಿಯಾಪ್ರಿಯೇಸ್ಪೃಶತಃ' ಎಂದು ಮುಕ್ತನಿಗೆ ದುಃಖದಂತೆಯೇ ಸುಖಕ್ಕೂ ಕೂಡ ಹಾನಿಯು ಶ್ರುತವಾಗುತ್ತದೆ. ಹಾಗೆಯೇ 'ನ ಪ್ರೇತ್ಯಸಂಜ್ಞಾಸ್ತಿ' ಎನ್ನುವುದರಿಂದ ಜ್ಞಾನಾಭಾವವೂ ಶ್ರುತವಾಗುತ್ತದೆ. ಆದುದರಿಂದ ಇದು ಹೇಗೆ ಕೂಡುತ್ತದೆ ಎಂದರೆ— ಸುಖಾಸ್ಪೃಷ್ಟಿಶ್ರುತಿಯನ್ನು ವ್ಯಾಖ್ಯಾನಮಾಡುತ್ತಾರೆ—

ಮೂ ॥ ಪ್ರಾಕೃತಪ್ರಿಯಹಾನಿಸ್ತು ಪ್ರಿಯಾಸ್ಪೃಷ್ಟಿರಿತೀರ್ಯತೇ ॥ ೭೮ ॥
ಅಪ್ರಿಯಂ ಪ್ರತಿಕೂಲಂ ತದವಿಶೇಷೇಣ ಶಬ್ದಿತಂ ।
ನಾಸ್ತಿ ಹ್ಯಪ್ರಾಕೃತಂ ದುಃಖಂ ಸತೋ ಜೀವಸ್ಯ ಕುತ್ರಚಿತ್ ॥ ೭೯ ॥
ಪ್ರಿಯಂ ಸ್ವರೂಪಮೇವಾಸ್ಯ ಬಲಾನಂದಾದಿವಾಕ್ಯತಃ ।
ಹೇಯತ್ವಾದಪ್ರಿಯಸ್ಯೈವ ಪ್ರಿಯಹಾನೇರನಿಷ್ಟತಃ ॥ ೮೦ ॥
ನ ಸಮಸ್ತಪ್ರಿಯಾಭಾವೋ ಮೋಕ್ಷೇ ಪ್ರೋಕ್ತೇ ತು ಯುಜ್ಯತೇ ।
ಅಪ್ರಿಯಸ್ಯ ಸ್ವರೂಪತ್ವಮಸುರೇಷ್ವೇವ ಹಿ ಶ್ರುತಂ ॥ ೮೧ ॥

ಅ ॥ (ಈ ಶ್ರುತಿಯಲ್ಲಿ) ಪ್ರಾಕೃತಪ್ರಿಯಹಾನಿಸ್ತು=ಪ್ರಾಕೃತವಾದ ಯಾವುದು ಅಂತಃ ಕರಣಪರಿಣತಿರೂಪವಾದುದು ಸುಖವೋ ಅದರ ಹಾನಿಯೇ, ಪ್ರಿಯಾಸ್ಪೃಷ್ಟಿರಿತಿ=ಪ್ರಿಯಾಸ್ಪೃಷ್ಟಿ ಎನ್ನುವ ಶಬ್ದದಿಂದ, ಈರ್ಯತೇ=ಪ್ರತಿಪಾದಿಸಲ್ಪಡುತ್ತದೆ. (ಸರ್ವಥಾ ಸುಖಾಭಾವವು ಪ್ರತಿ ಪಾದಿಸಲ್ಪಡುವುದಿಲ್ಲ.) (ಹೀಗಾದರೆ ಅಪ್ರಿಯಾಸ್ಪೃಷ್ಟಿಯನ್ನು ಹೀಗೆಯೇ ವ್ಯಾಖ್ಯಾನಮಾಡ ಬೇಕು. ತಥಾಚ ಮೋಕ್ಷದಲ್ಲಿ ದುಃಖವದೆ ಎನ್ನುವುದು ಪ್ರಸಕ್ತವಾಗಬೇಕಾಗುವುದು. ಎಂದರೆ–) ಅಪ್ರಿಯಂ = (ಯಾವ ಕಾರಣದಿಂದ) ಅಪ್ರಿಯವೆಲ್ಲವೂ, ಪ್ರತಿಕೂಲಂ = ಮುಮುಕ್ಷುವಿಗೆ ಅನ ಪೇಕ್ಷಿತವಾಗಿವೆಯೋ, ತತ್=ಆದಕಾರಣ. ಅಪ್ರಿಯಂ = ಅಪ್ರಿಯವಾದುದು, ಅವಿಶೇಷೇಣ= ಪ್ರಾಕೃತತ್ವಾದಿ ವಿಶೇಷವಿಲ್ಲದೇನೇ, ಶಬ್ದಿತಂ=ಶಬ್ದಬೋಧ್ಯವಾಗಿದೆ. (ಅಂದರೆ— ಸರ್ವಪ್ರಕಾರ ದಿಂದಲೂ ಅನಿಷ್ಟನಿವೃತ್ತಿಯು ಮೋಕ್ಷವೆನ್ನುವುದು ಎಲ್ಲಾ ವಾದಿಗಳಿಗೂ ವಿವಾದವಿಲ್ಲ. ದುಃಖ ವಾದರೂ ಅನಿಷ್ಟವೇ. ಆದುದರಿಂದ ಪ್ರಾಕೃತ - ಅಪ್ರಾಕೃತವೆಂದು ವಿಭಾಗಮಾಡಿಕೊಂಡು ವ್ಯಾಖ್ಯಾನಮಾಡುವುದು ಯುಕ್ತವಲ್ಲ.) (ಕಾರಣಾಂತರದಿಂದಲೂ ಅಪ್ರಿಯದಲ್ಲಿ ಪ್ರಾಕೃತ ವೆನ್ನುವ ವಿಶೇಷಣವನ್ನು ಕೊಡಕೂಡದು ಎನ್ನುತ್ತಾರೆ) ಸತಃ = ಮುಕ್ತಿಯೋಗ್ಯನಾದ, ಜೀವಸ್ಯ=ಜೀವನಿಗೆ, ಅಪ್ರಾಕೃತಂ=ಅಪ್ರಾಕೃತವಾದುದು, ದುಃಖಂ=ದುಃಖವು, ಕುತ್ರಚಿತ್= ಯಾವ ಶ್ರುತಿಯಲ್ಲಿಯೂ, (ಹೇಳಲ್ಪಟ್ಟದ್ದು.) ನಾಸ್ತಿ=ಇಲ್ಲವೇ ಇಲ್ಲ. ಅಂದರೆ, ಮುಕ್ತನಿಗೆ ಅಪ್ರಾಕೃತ ಸುಖವಿದೆ ಎನ್ನುವಲ್ಲಿ ಪ್ರಮಾಣವಿದೆಯೋ ಹಾಗೆಯೇ ಅಪ್ರಾಕೃತವಾದ ದುಃಖವಿದೆ ಎನ್ನುವಲ್ಲಿ ಪ್ರಮಾಣವಿಲ್ಲವೇ ಇಲ್ಲ. ಆದುದರಿಂದ ಅಪ್ರಿಯಾಸ್ಪೃಷ್ಟಿಃ ಎನ್ನುವಲ್ಲಿ ಪ್ರಾಕೃತತ್ವ ವಿಶೇಷಣವನ್ನು ಕೊಡದೆ ಸರ್ವಥಾ ದುಃಖಾಭಾವವನ್ನೇ ಅರ್ಥವೆಂದು ಹೇಳಬೇಕು.)

(ಹೀಗಾದರೆ— ಅಪ್ರಾಕೃತವಾದ ಸುಖವೂ ಅಪ್ರಮಿತವಾಗಿರುವುದರಿಂದ ಅಲ್ಲಿಯೂ ಪ್ರಾಕೃತತ್ವ ವಿಶೇಷಣವನ್ನು ಕೊಟ್ಟು ವ್ಯಾಖ್ಯಾನವು ಅಯುಕ್ತವು ಎಂದರೆ-) ಬಲಾನಂದಾದಿ ವಾಕ್ಯತಃ=ಬಲ-ಆನಂದವೊದಲಾದ ವಾಕ್ಯದೆಶೆಯಿಂದ, (ಅಂದರೆ- '**ಬಲಮಾನಂದ ಓಜಶ್ಚ ಸಹೋ ಜ್ಞಾನ ಮನಾಕುಲಂ। ಸ್ವರೂಪಾಣ್ಯೇವ ಜೀವಸ್ಯ ವ್ಯಜ್ಯಂತೇ ಪರಮಾದ್ವಿಭೋಃ**' ಎನ್ನುವ ಶ್ರುತಿ ವಾಕ್ಯದೆಶೆಯಿಂದ) ಅಸ್ಯ=ಮುಕ್ತಿಯೋಗ್ಯನಾದ ಜೀವನಿಗೆ, ಪ್ರಿಯಂ = ಸುಖವು, ಸ್ವರೂಪ ಮೇವ=ಅಪ್ರಾಕೃತವೇ ಎಂದು, (ತಿಳಿಯಲ್ಪಡುತ್ತದೆ.) (ಹಿಂದೆ ಹೇಳಿದ ಅರ್ಥವನ್ನು ಸಂಕ್ಷೇಪಿಸಿ ಹೇಳುತ್ತಾರೆ.) ಅಪ್ರಿಯಸ್ಯ = ದುಃಖಕ್ಕೆ, ಹೇಯತ್ವಾದೇವ = ಸರ್ವಥಾಹೇಯತ್ವವಿದ್ದುದರಿಂದಲೇ, ಪ್ರಿಯಹಾನೇಃ=ಪ್ರಿಯದ ಪರಿತ್ಯಾಗಕ್ಕೆ, ಅನಿಷ್ಟತಃ = ಅನಿಷ್ಟತ್ವವಿದ್ದುದರಿಂದಲೇ, '**ಅಶರೀರಂ ವಾವಸಂತಂ**' ಎನ್ನುವ ಶ್ರುತಿಯಲ್ಲಿ) ಪ್ರೋಕ್ತೇ=ಹೇಳಲ್ಪಟ್ಟ, ಮೋಕ್ಷೇ=ಮುಕ್ತಿಯಲ್ಲಿ, ಸಮಸ್ತಪ್ರಿಯಾಭಾವಃ = ಸರ್ವಥಾ ಸುಖದ ಅಭಾವವು, ನ ಯುಜ್ಯತೇ=ವ್ಯಾಖ್ಯಾನ ಮಾಡಲಿಕ್ಕೆ ಯುಕ್ತವಾಗುವುದಿಲ್ಲ. (ಅಂದರೆ— ಮುಕ್ತಿಯೋಗ್ಯನಾದ ಜೀವನಿಗೆ ಅಪ್ರಾಕೃತದುಃಖವಿಲ್ಲದಿರುವುದರಿಂದಲೂ ದುಃಖವು ಅನಿಷ್ಟವಾಗಿರುವುದರಿಂದಲೂ ಸರ್ವಥಾ ದುಃಖಪರಿತ್ಯಾಗಕ್ಕೆ ಹೇಳಬೇಕು.) (ಹಾಗಾದರೆ— ಅಪ್ರಿಯವಾದ ಸ್ವರೂಪಭೂತವಾದ ಅಪ್ರಾಕೃತ ದುಃಖವು ಶ್ರುತಿಯಲ್ಲಿ ಶ್ರುತವಾಗಿದೆ ಅದು ಹೇಗೆ ಕೂಡುತ್ತದೆ ಎಂದರೆ—) ಅಪ್ರಿಯಸ್ಯ= ಅಪ್ರಿಯಭೂತವಾದ ದುಃಖದ ಸ್ವರೂಪತ್ವವು, ಅಸುರೇಷ್ವೇವ=ಅಸುರರಲ್ಲಿಯೇ, ಶ್ರುತಂ ಹಿ= ಶ್ರುತಿಸಿದ್ಧವಾಗಿದೆ. (ಸಜ್ಜೀವರಲ್ಲಿ ಅಲ್ಲ.) ಹಿ = ಅಸುರರು ಸನ್ಮೋಕ್ಷಯೋಗ್ಯರು ಅಲ್ಲವೆಂದು ಪ್ರಸಿದ್ಧವು ॥ ೭೮ ॥ ೭೯ ॥ ೮೦ ॥ ೮೧ ॥

ಆ ಶ್ರುತಿಯನ್ನು ಅರ್ಥತಃ ಪಠನಮಾಡುತ್ತಾರೆ —

**ಮೂ ॥ ಅಸುರಾ ನೈವಮೇವಂ ಚ ನೈವಂ ಚಾಖಿಲಮಾನುಷಾಃ ।**
**ಇತ್ಯಾತ್ಮಪ್ರಿಯಹಾನಾಯ ಕೋ ಯತೇತ ಚ ಬುದ್ಧಿಮಾನ್ ॥ ೮೨ ॥**

**ಅ ॥** (ಅಸುರಾಃ ಎನ್ನುವುದರಿಂದ '**ನಿತ್ಯಾನಂದೋ ನಿತ್ಯಜ್ಞಾನೋ ನಿತ್ಯಬಲಃ ಪರಮಾತ್ಮಾ । ನೈವಮಸುರಾಃ ಏವಮನೇವಂ ಚ ಮನುಷ್ಯಾಃ**' ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು. ಪರಮಾತ್ಮನು ಅಥವಾ ಸಜ್ಜೀವನು ಸ್ವರೂಪಭೂತವಾದ ಆನಂದವುಳ್ಳವನು. ನಿತ್ಯವಾದ ಸ್ವರೂಪಭೂತವಾದ ಜ್ಞಾನವುಳ್ಳವನು. ನಿತ್ಯವಾದ ಸ್ವರೂಪಭೂತವಾದ ಸಾಮರ್ಥ್ಯವುಳ್ಳವನು.) ಅಸುರಾಃ=ಅಸುರರು, ಏವಂ ನ=ಹೀಗೆ ಅಲ್ಲ (ಅಂದರೆ— ವಿರುದ್ಧ ಸ್ವಭಾವವುಳ್ಳವರು. ದುಃಖಸ್ವರೂಪರೇ.) ಅಖಿಲಮಾನುಷಾಃ = ನಿತ್ಯಸಂಸಾರಿಗಳೂ, ಎಲ್ಲಾ ಮನುಷ್ಯರೂ, ಏವಂ ಚ ನೈವಂ ಚ=ಉಭಯಸ್ವಭಾವವುಳ್ಳವರು, ಇತಿ=ಹೀಗೆ, (ಶ್ರುತಂ= ಶ್ರುತಿಸಿದ್ಧವಾಗಿದೆ.) ಅದೇ ಮೋಕ್ಷದಲ್ಲಿ ಸರ್ವಥಾ ಸುಖಾಭಾವವನ್ನು ಹೇಳಬಾರದು ಎನ್ನುವಲ್ಲಿ ಸ್ಪಷ್ಟವಾದ ನಿಯಾಮಕವನ್ನು ಹೇಳುತ್ತಾರೆ. ಆತ್ಮಪ್ರಿಯಹಾನಾಯ=ಆತ್ಮರೂಪವಾಗಿರತಕ್ಕ ಪ್ರಿಯವನ್ನು ಅಥವಾ ತನ್ನ ಪ್ರಿಯವಾದುದನ್ನು ಪರಿತ್ಯಾಗಮಾಡುವುದಕ್ಕಾಗಿ, ಬುದ್ಧಿಮಾನ್=ಬುದ್ಧಿಯುಳ್ಳ, ಕಃ=ಯಾವಾತನು, ಯತೇತ ಚ=ಪ್ರಯತ್ನವನ್ನು ಮಾಡಿಯಾನು? ಮತ್ತೂ ಪ್ರಿಯಾಭಾವವನ್ನೂ ಇಚ್ಛಿಸುತ್ತಾನೆ. (ಅಂದರೆ— ಪ್ರಿಯಾಸ್ಪೃಷ್ಟಿಯು ಅವಿಶಿಷ್ಟವಾದರೆ ಯಾರೊಬ್ಬ ಜ್ಞಾನಿಯೂ, ಮುಕ್ತಿಯನ್ನು ಇಚ್ಛಿಸಲಾರನು, ಅದಕ್ಕಾಗಿ ಪ್ರಯತ್ನವನ್ನೂ ಮಾಡಲಾರನು.) ॥ ೮೨ ॥

ಹೀಗೆ ಸುಖಾಸ್ಪೃಷ್ಟಿಯನ್ನು ವ್ಯಾಖ್ಯಾನಮಾಡಿ ಜ್ಞಾನಾಭಾವ ಶ್ರುತಿಯನ್ನೂ ವ್ಯಾಖ್ಯಾನ ಮಾಡುತ್ತಾರೆ. –

ಮೂ ॥ ಸಂಜ್ಞಾ ನಾಸ್ತೀತ್ಯಪಿ ಹ್ಯಸ್ಯ ನಾಮುಕ್ತಜ್ಞೇಯತೇತಿ ಹಿ ।
ಧರ್ಮಾನುಚ್ಛಿತ್ತಿಮೇವಾಸ್ಯ ಯತೋ ವಕ್ತ್ಯುತ್ತರಶ್ರುತಿಃ ॥ ೮೩ ॥
ಆಶಂಕ್ಯಾಸ್ಯ ಜ್ಞಾನಹಾನಿಂ ಮೈತ್ರೇಯ್ಯಾ ಮೋಹಮಾಹ ಮಾಂ ।
ಭವಾನಿತ್ಯುಕ್ತವತ್ಯಾ ಹಿ ನಾಹಂ ಮೋಹಂ ವದಾಮಿ ತೇ ॥ ೮೪ ॥
ಇತ್ಯುಕ್ತ್ವಾ ಯಾಜ್ಞವಲ್ಕ್ಯೋ ಹಿ ಸ್ವರೂಪಾನಾಶಮೂಚಿವಾನ್ ।
ಜ್ಞಾನರೂಪಸ್ಯ ವಿಜ್ಞಾನನಾಶಸ್ತನ್ನಾಶ ಏವ ಯತ್ ॥ ೮೫ ॥
ಇತಿ ಶೂನ್ಯಮತೋಚ್ಛಿತ್ತ್ಯೈ ಪುನರಾನಂದಪೂರ್ವಕಾನ್ ।
ಧರ್ಮಾನಾಹಾಪ್ಯನುಚ್ಛಿನ್ನಾಂಸ್ತಾರ್ಕಿಕೈರ್ವಿನಿವಾರಿತಾನ್ ॥ ೮೬ ॥

ಅ ॥ ಸಂಜ್ಞಾನಾಸ್ತೀತ್ಯಪಿ=‘ನ ಪ್ರೇತ್ಯ ಸಂಜ್ಞಾಸ್ತಿ’ ಮರಣವಿಶೇಷವಾದ ಮೋಕ್ಷಾನಂತರದಲ್ಲಿ ಜ್ಞಾನವು ಇಲ್ಲ ಎನ್ನುವ ಶ್ರುತಿಯೂ ಕೂಡ, ಅಸ್ಯ=ಈ ಮುಕ್ತನಿಗೆ, ಅಮುಕ್ತಜ್ಞೇಯತಾ=ಅಮುಕ್ತರಿಂದ ತಿಳಿಯಲ್ಪಡುವಿಕೆಯು, ನಾಸ್ತಿ=ಇಲ್ಲ, ಇತಿ ಹಿ=ಹೀಗೆಯೇ, ವಕ್ತಿ=ಹೇಳಲ್ಪಡುತ್ತದೆ. (ಮುಕ್ತನಿಗೆ ಜ್ಞಾನವಿಲ್ಲವೆಂದು ಹೇಳುವುದಿಲ್ಲ.) (ಹಾಗಾದರೆ ಸಾಧಾರಣವಾದ ವಾಕ್ಯದಲ್ಲಿ ಮುಕ್ತವಿಷಯಕವಾದ ಜ್ಞಾನಕ್ಕೆ ಇದು ಪ್ರತಿಷೇಧವು. ಮುಕ್ತಕರ್ತೃಕವಾದ ಜ್ಞಾನಕ್ಕೆ ಪ್ರತಿಷೇಧವಲ್ಲ ಎಂದು ಯಾವುದರಿಂದ ಕಲ್ಪಿಸುತ್ತೀರಿ ಎಂದರೆ—) ಯತಃ=ಯಾವ ಕಾರಣದಿಂದ, ಉತ್ತರಶ್ರುತಿಃ = ‘ಅಯಮಾತ್ಮಾನುಚ್ಛಿತ್ತಿಧರ್ಮಾ’ ಎನ್ನುವ ಉತ್ತರಶ್ರುತಿಯು, (‘ನ ವಿದ್ಯತೇ ಉಚ್ಛಿತ್ತಿರ್ಯೇಷಾಂ ತೇ ಅನುಚ್ಛಿತ್ತಯಃ, ಅನುಚ್ಛಿತ್ತಯಃ ಧರ್ಮಾಃ ಯಸ್ಯ ಸಃ’ ಎನ್ನುವ ವ್ಯುತ್ಪತ್ತಿಯಿಂದ ನಾಶವಿಲ್ಲದಿರುವ ಧರ್ಮವುಳ್ಳವನು ಎಂದರ್ಥವು.) ಅಸ್ಯ=ಮುಕ್ತಾತ್ಮನಿಗೆ, ಧರ್ಮಾನುಚ್ಛಿತ್ತಿಮೇವ=ಜ್ಞಾನಾದಿ ಧರ್ಮಗಳಿಗೆ ನಾಶಾಭಾವವನ್ನೇ, ವಕ್ತಿ=ಹೇಳುತ್ತದೋ, (ಹಾಗಾದರೆ- ‘ಅನುಚ್ಛಿತ್ತಿಧರ್ಮಾ’ ಎನ್ನುವುದು ಸಂಖ್ಯಾದಿಧರ್ಮಗಳಿಗೆ ನಾಶಾಭಾವವನ್ನು ಹೇಳುತ್ತದೆ. ಅಥವಾ ‘ಉಚ್ಛಿತ್ತೇರಭಾವಃ ಅನುಚ್ಛಿತ್ತಿಃ, ಅನುಚ್ಛಿತ್ತಿಃ ಧರ್ಮಃ ಯಸ್ಯಾಸೌ’ ಎಂದೂ ಹೇಳಲಿಕ್ಕೆ ಶಕ್ಯವಾಗುತ್ತದೆ. ಆದುದರಿಂದ ಇದು ಹೇಗೆ ನಿಯಾಮಕವು ಎನ್ನುವ ಆಶಂಕೆಯನ್ನು ನಿರಾಕರಿಸುವುದಕ್ಕಾಗಿ ಆದಿಯಿಂದಲೇ ವಾಕ್ಯವನ್ನು ವ್ಯಾಖ್ಯಾನ ಮಾಡುತ್ತಾರೆ.) ಅಸ್ಯ=ಈ ಮುಕ್ತನಿಗೆ, ಜ್ಞಾನಹಾನಿಂ=ಜ್ಞಾನನಾಶವನ್ನು, ಆಶಂಕ್ಯ=ಆಶಂಕಿಸಿಕೊಂಡು, (ಅಂದರೆ—‘ವಿಜ್ಞಾನಘನ ಏವೈತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾನುವಿನಶ್ಯತಿ ನ ಪ್ರೇತ್ಯ ಸಂಜ್ಞಾಸ್ತಿ’ ವಿಜ್ಞಾನಮೂರ್ತಿಯಾದ ಈ ಆತ್ಮನು ಅನಾದಿಯಾದಾಗ್ಯೂ ಚರಮಜನ್ಮದಲ್ಲಿ ಈ ಪಂಚಭೂತಗಳ ದೆಶೆಯಿಂದ ಎದ್ದು ಅಂದರೆ-- ಭೂತಾತ್ಮಕವಾದ ಶರೀರದ ಉತ್ಪತ್ತಿನಿಮಿತ್ತವಾಗಿಯೇ ಹುಟ್ಟಿದನು ಎನ್ನುವ ವ್ಯವಹಾರವಿಷಯನು ಆಗಿ, ಪುನಃ ಆ ಭೂತಗಳನ್ನು ಅನುಸರಿಸಿಯೇ ಭೂತನಾಶಗಳ ನಿಮಿತ್ತವಾಗಿಯೇ ನಿತ್ಯಭೂತನಾದಾಗ್ಯೂ ವಿನಾಶವನ್ನು ಹೊಂದುತ್ತಾನೆ. ಅಂದರೆ— ನಾಶಹೊಂದಿದನು ಎನ್ನುವ ವ್ಯವಹಾರಗೋಚರನಾಗುತ್ತಾನೆ. ಮೋಕ್ಷಾನಂತರದಲ್ಲಿ ಈ ಮುಕ್ತನಿಗೆ ಜ್ಞಾನವಿಲ್ಲವೆನ್ನುವ ಅಸ್ಪಷ್ಟವಾದ ಯಾಜ್ಞವಲ್ಕ್ಯನಮಾತನ್ನು ಕೇಳಿ) ಅಸ್ಯ=ಈ ಮುಕ್ತನಿಗೆ, ಜ್ಞಾನಹಾನಿಂ = ಜ್ಞಾನನಾಶವನ್ನು,

ಆಶಂಕ್ಯ=ಆಶಂಕಿಸಿಕೊಂಡು, (ಈ ವಾಕ್ಯದಿಂದ ಮುಕ್ತನು ತಿಳಿಯುವುದಿಲ್ಲವೆಂದು ಹೇಳಲ್ಪಡುತ್ತದೆ, ಎಂದು ತಿಳಿದು) ಮೈತ್ರೇಯ್ಯಾ=ಮೈತ್ರೇಯಿಯಿಂದ, (ಈ ವಿಷಯದಲ್ಲಿಯೇ '**ಮಾಭವಾನ್ಮೋಹಾಂತಮಾಪೀಪತ್**' ಎನ್ನುವ ವಾಕ್ಯದಿಂದ) ಭವಾನ್=ನೀವು, ಮಾಂ=ನನ್ನನು ಕುರಿತು, ಅಹ=ಮುಕ್ತನು ತಿಳಿಯುವುದಿಲ್ಲವೆಂದು ಯಾವುದನ್ನು ಹೇಳಿರುವಿರೋ, (ಅದು) ಮೋಹಂ=ಮೋಹಕವೇ. ಇತಿ=ಈ ಅರ್ಥವನ್ನು, ಉಕ್ತವತ್ಯಾ = ಹೇಳಿರುವ ಮೈತ್ರೇಯಿಯಿಂದ, (ಪ್ರೇರಿಸಿಕೊಳ್ಳಲ್ಪಟ್ಟರುವಿರಿ ) ಯಾಜ್ಞವಲ್ಕ್ಯಃ = ಯಾಜ್ಞವಲ್ಕ್ಯನು ('**ನ ವಾ ಅರೇ ಅಹಂ ಮೋಹಂ ಬ್ರವೀಮಿ**' ಎನ್ನುವುದರಿಂದ ಜ್ಞಾನವನ್ನುಪದೇಶಕೊಡುವುದಕ್ಕಾಗಿ ಪ್ರವೃತ್ತನಾದ) ಅಹಂ=ನಾನು, (ಪರಮಪ್ರಿಯಳಾದ) ತೇ=ನಿನಗೋಸ್ಕರ, ಮೋಹಂ=ಮೋಹಕವಾದುದನ್ನು, ನ ವದಾಮಿ=ಹೇಳುವುದಿಲ್ಲ ಇತಿ=ಹೀಗೆ, ಉಕ್ತ್ವಾ=(ಪ್ರತಿಜ್ಞೆಯನ್ನು ) ಹೇಳಿ,(ಮಾಡಿ) (ಕಥಂ=ಹೇಗೆ ಎಂದು ಆಶಂಕಾ ಬಂದರೆ— '**ಅವಿನಾಶೀ ವಾ ಅರೇ ಅಯಮಾತ್ಮಾ**' ಎಂದು,) ಸ್ವರೂಪಾನಾಶಂ=ಆತ್ಮಸ್ವರೂಪಕ್ಕೆ ನಾಶಾಭಾವವನ್ನು, ಊಚಿವಾನ್=ಹೇಳಿದನು. (ಅಥವಾ ಯಾಜ್ಞವಲ್ಕ್ಯನು ಸಂಮುಗ್ಧವಾದ ಮಾತಿನಿಂದ ಈ ಮೈತ್ರೇಯಿಗೆ ಜ್ಞಾನಹಾನಿಯನ್ನು ಆಶಂಕಿಸಿಕೊಂಡು ಹೇಳಿರುವನು. ಅವಳಿಗೆ ಹಾಗೆ ಆಶಂಕೆಯು ಹುಟ್ಟಿತು ಎನ್ನುವಲ್ಲಿ ಏನು ಪ್ರಮಾಣವು ಎನ್ನುವಲ್ಲಿ ಹೇಳಲ್ಪಟ್ಟ, 'ಮೋಹಮಾಹ ಮಾಂ ಭವಾನ್' ಮೋಹವನ್ನು ನನ್ನನ್ನು ಕುರಿತು ನೀವು ಹೇಳಿರುವಿರಿ ಎಂದು 'ಇತ್ಯುಕ್ತವತ್ಯಾಹಿ' ಎನ್ನುವ ವಚನಲಿಂಗದಿಂದ ಆಶಂಕೆಯು ತಿಳಿಯಲ್ಪಡುತ್ತದೆ.) ಹಿ=ಈ ಅರ್ಥವು ಸ್ಪಷ್ಟವಾಗಿಯೇ ಶ್ರುತಿಯಲ್ಲಿ ಇದೆ. (ಜ್ಞಾನವಿನಾಶವಚನವು ಮೋಹಕವು ಎಂದಾಕ್ಷೇಪಿಸಿದರೆ— ಸ್ವರೂಪನಾಶವು ಅಸಂಗತವಾದುದು ಹೇಗೆ ಹೇಳಲ್ಪಟ್ಟಿತು ಎಂದರೆ-) ಯತ್=ಯಾವಕಾರಣದಿಂದ, ಜ್ಞಾನರೂಪಸ್ಯ=ಜ್ಞಾನರೂಪನಾದ ಆತ್ಮನ, ವಿಜ್ಞಾನನಾಶಃ=ವಿಜ್ಞಾನನಾಶವೆಂದರೆ, ತನ್ನಾಶ ಏವ=ಆತ್ಮನ ನಾಶವೇ. (ಆತ್ಮನಿಗೆ ನಾಶವಿಲ್ಲ; ಹಾಗಿದ್ದರೆ ಮುಕ್ತಿಗೆ ಅಪುರುಷಾರ್ಥತ್ವವು ಬರಬೇಕಾಗುವುದು ಆದುದರಿಂದ ಜ್ಞಾನಕ್ಕೆ ನಾಶವಿಲ್ಲ ಆದುದರಿಂದಲೇ ನನ್ನ ವಚನಕ್ಕೆ ಹಾಗೆ ಅರ್ಥವಲ್ಲ. ಮತ್ತೆ ಅಮುಕ್ತರಿಗೆ ಮುಕ್ತವಿಷಯದಲ್ಲಿ ಜ್ಞಾನವಿಲ್ಲ. ಅಥವಾ ಮುಕ್ತರಿಗೇನೇ ವೃತ್ತಿರೂಪವಾದ ಜ್ಞಾನವಿಲ್ಲ. ಇತ್ಯಾದಿಗಳೇ ನನ್ನ ವಚನದ ಅರ್ಥವು ಎಂದು ಅಭಿಪ್ರಾಯವುಳ್ಳವರಾಗಿ ಸ್ವರೂಪಾನಾಶವನ್ನು ಹೇಳಿದರು.) (ಹೀಗೆ ಸಂಗತಿಯಿರಲಿ. ಆದಾಗ್ಯೂ ಜ್ಞಾನವು ನಷ್ಟವಾಗುವುದಿಲ್ಲ ಎಂದು ಸಾಕ್ಷಾತ್ತಾಗಿ ಹೇಳದೆ ಹೀಗೆ ವಚನವು ಏತಕ್ಕೆ ಎಂದರೆ-) ಶೂನ್ಯಮತೋಚ್ಛಿತ್ತ್ಯೈ = ಶೂನ್ಯಮತದ ನಾಶಕ್ಕಾಗಿ (ಹೇಳಿದನು.) (ಅಂದರೆ— ಇಲ್ಲಿ ಯಾಜ್ಞವಲ್ಕ್ಯನು ಕೇವಲ ಪ್ರಮೇಯವನ್ನು ಮಾತ್ರ ನಿರೂಪಣ ಮಾಡುವುದಕ್ಕಾಗಿ ಪ್ರವೃತ್ತನಾದವನಲ್ಲ ಮತ್ತೆ ಪರೀಕ್ಷೆಯಿಂದ. ಆದುದರಿಂದಲೇ '**ನ ಪ್ರೇತ್ಯ ಜ್ಞಾಯತೇ**' ಎಂದು ವಿಶದವಾಗಿ ಹೇಳದೆ ಶಂಕೆಯನ್ನು ಹುಟ್ಟಿಸುವುದಕ್ಕಾಗಿ '**ನ ಪ್ರೇತ್ಯ ಸಂಜ್ಞಾಸ್ತಿ**' ಎಂದು ಸಾಧಾರಣವಾದ ವಚನವನ್ನೇ ಹೇಳಿರುವನು. ಪರೀಕ್ಷೆಯೆಂದರೆ ತನಗೆ ಅನಭಿಮತವಾದ ಮತದ ನಿರಾಸ ರೂಪವು. ಆದುದರಿಂದ ಈ ಪ್ರಕಾರ ಉತ್ತರವನ್ನು ಕೊಡುತ್ತಿರಲು ಆತ್ಮನಾಶರೂಪವಾದ ಶೂನ್ಯಮತದ ನಿರಾಸವೂ ಮಾಡಲ್ಪಟ್ಟದ್ದು ಆಗುತ್ತದೆ. ಅದಕ್ಕಾಗಿಯೇ ಸ್ವರೂಪಾನಾಶವನ್ನು ಹೇಳಿರುವರು ) (ಯಾವುದಕ್ಕಾಗಿ ಆದಿವಾಕ್ಯವನ್ನು ವ್ಯಾಖ್ಯಾನ ಮಾಡಿರುವರೋ ಈಗ ಆ 'ಅನುಚ್ಛಿತ್ತಿ ಧರ್ಮಾ' ಎನ್ನುವುದನ್ನು ವ್ಯಾಖ್ಯಾನ ಮಾಡುತ್ತಾರೆ.) ಪುನರಪಿ=ಸ್ವರೂಪಾನಾಶವನ್ನು ಹೇಳಿ ಮತ್ತೂ ಕೂಡ, (ಮುಕ್ತನಿಗೆ) ತಾರ್ಕಿಕೈಃ=ತಾರ್ಕಿಕರಿಂದ, ವಿನಿವಾರಿತಾನ್=ನಿರಾಕರಿಸಲ್ಪಟ್ಟ, ಆನಂದಪೂರ್ವಕಾನ್=ಆನಂದವೇ ಮೊದಲಾಗಿ ಉಳ್ಳ, ಧರ್ಮಾನ್=ಧರ್ಮಗಳನ್ನು, ಅನುಚ್ಛಿನ್ನಾನ್=ನಷ್ಟಗಳಾಗದೆ ಇದ್ದವುಗಳನ್ನೂ,

ಯಾಜ್ಞವಲ್ಕ್ಯಃ=ಯಾಜ್ಞವಲ್ಕ್ಯನು, ಆಹ=ಹೇಳಿರುವನು. (ಅಂದರೆ- ತಮಗೆ ಅನಭಿಮತವಾದ ಮತವನ್ನು ನಿರಾಕರಣ ಮಾಡುವುದರಲ್ಲಿ ಯಾಜ್ಞವಲ್ಕ್ಯನು ಪ್ರವೃತ್ತನಾಗಿರುತ್ತಾನೆ. ಆದುದರಿಂದ ಸ್ವರೂಪಕ್ಕೆ ವಿನಾಶಾಭಾವವನ್ನು ಅಂಗೀಕರಿಸಿಕೊಂಡು ಯಾವ ತಾರ್ಕಿಕರು ಬುದ್ಧಿ-ಸುಖ ಮೊದಲಾದ ಧರ್ಮಗಳನ್ನು ಮುಕ್ತನಿಗೆ ನಿವಾರಣಮಾಡುತ್ತಾರೋ, ಅವರೂ ಕೂಡ ಅಸಮೀಚೀನವಾದಿಗಳು ಎಂದು ತಿಳಿಸಿಕೊಡುವುದಕ್ಕಾಗಿ ಈ ವಾಕ್ಯವು. ಆದಕಾರಣ 'ಅವಿನಾಶೀ ಅನುಛಿತ್ತಿಧರ್ಮಾ' ಎನ್ನುವುದಕ್ಕೆ ಪೌನರುಕ್ತ್ಯದೋಷವಿಲ್ಲ ॥೮೩॥೮೪॥೮೫॥೮೬॥

ಮುಕ್ತನಿಗೆ ಜ್ಞಾನವಿಲ್ಲವೆನ್ನುವ ಕಾರಣಾಂತರದಿಂದಲೂ, 'ನ ಪ್ರೇತ್ಯ ಸಂಜ್ಞಾಸ್ತಿ' ಎನ್ನುವ ವಾಕ್ಯಕ್ಕೆ ಅರ್ಥವನ್ನು ಹೇಳಬಾರದೆನ್ನುತ್ತಾರೆ—

**ಮೂ ॥ ಮಾತ್ರಾಸಂಸರ್ಗಮಪ್ಯಾಹ ತಥಾ ಮಾಧ್ಯಂದಿನಶ್ರುತಿಃ ।**
**ಆಚಿಕ್ಷೇಪ ಮತಂ ತಚ್ಚ ಯಸ್ಮಿನ್ನ ವಿಷಯಾದನಂ ॥ ೮೭ ॥**
**ಘ್ರಾಣಾದಿಭೋಗಾಭಾವಸ್ಯ ತ್ವನಿಷ್ಟತ್ವಹೃದಾ ಶ್ರುತಿಃ ।**
**ಯೇನೇದಮಖಿಲಂ ವೇದ ವಿಜ್ಞಾತಾರಂ ಸ್ವಮೇವ ಚ ।**
**ಕೇನ ತಂ ಚ ವಿಜಾನೀಯಾದಿತ್ಯನಿಷ್ಟಂ ಚ (ಹಿ) ಸರ್ವಥಾ ॥ ೮೮ ॥**

**ಅ ॥** ತಥಾ = ಹೇಗೆ ಧರ್ಮಗಳಿಗೆ ನಾಶಾಭಾವವನ್ನು ಹೇಳುತ್ತದೋ ಹಾಗೆಯೇ, ಮಾತ್ರಾಸಂಸರ್ಗಮಪಿ = ರೂಪಾದಿ ವಿಷಯಗಳ ಉಪಭೋಗರೂಪವಾದ ಸಂಸರ್ಗವನ್ನೂ ಕೂಡ, ಮಾಧ್ಯಂದಿನಶ್ರುತಿಃ=ಮಾಧ್ಯಂದಿನಶ್ರುತಿಯು, ಆಹ= (**'ಮಾತ್ರಾಸಂಸರ್ಗಸ್ತ್ವಸ್ಯ ಭವತಿ'** ಎನ್ನುವ ವಾಕ್ಯದಿಂದ) ಹೇಳುತ್ತದೆ. (ಮೈತ್ರೇಯೀ-ಯಾಜ್ಞವಲ್ಕ್ಯ ಸಂವಾದರೂಪವಾದ ಈ ಪ್ರಕರಣವು ಕಾಣ್ವ-ಮಾಧ್ಯಂದಿನ ಶ್ರುತಿಗಳಲ್ಲಿ ಸಮಾನವು. 'ಮಾತ್ರಾಸಂಸರ್ಗಸ್ತ್ವಸ್ಯ ಭವತಿ' ಎನ್ನುವ ವಾಕ್ಯವಾದರೂ ಯದ್ಯಪಿ ಕಾಣ್ವಶ್ರುತಿಯಲ್ಲಿ ಇಲ್ಲ ಆದಾಗ್ಯೂ ಮಾಧ್ಯಂದಿನಶ್ರುತಿಯಲ್ಲಿ ಇದ್ದೇ ಇದೆ ) (ಕಾರಣಾಂತರದಿಂದಲೂ 'ಸಂಜ್ಞಾ ನಾಸ್ತಿ' ಎನ್ನುವ ವಾಕ್ಯಕ್ಕೆ ಮುಕ್ತನಿಗೆ ಅಮುಕ್ತಾಜ್ಞೇಯತ್ವ ಅಂದರೆ— ಅಮುಕ್ತರಿಂದ ತಿಳಿಯಲ್ಪಡದಿರುವಿಕೆಯು ಎನ್ನುವುದೇ ಅರ್ಥವೆನ್ನುತ್ತಾರೆ.) ಶ್ರುತಿಃ = **'ಯತ್ರ ಹಿ ದ್ವೈತಮಿವ ಭವತಿ'** ಇದು ಮೊದಲಾದ ಉತ್ತರಶ್ರುತಿಯು, ಯಸ್ಮಿನ್=ಯಾವ ಮತದಲ್ಲಿ, (ಮುಕ್ತನಿಗೆ) ವಿಷಯಾನಂದಂ= ರೂಪಾದಿ ವಿಷಯಭೋಗವು, ನ=ಇಲ್ಲವೆಂದು ಅಂಗೀಕಾರವೋ, ತತ್ ಮತಂ= ಆ ಮತವನ್ನು ಆಚಿಕ್ಷೇಪ=ನಿಂದಿಸಿರುತ್ತದೆ. (ಆದುದರಿಂದ **'ನ ಪ್ರೇತ್ಯ ಸಂಜ್ಞಾಸ್ತಿ'** ಎನ್ನುವ ವಾಕ್ಯವು ಮುಕ್ತನಿಗೆ ಜ್ಞಾನಾಭಾವವನ್ನು ಪ್ರತಿಪಾದಿಸುವುದಿಲ್ಲ ಮುಕ್ತನು ಜ್ಞಾನರಹಿತ ಘಟದಂತೆ ಇರುವವನಾದರೆ ಅವನಿಗೆ ವಿಷಯಾನುಭವವಿದೆ ಎಂದು ಪ್ರತಿಪಾದನೆಯಾಗಲಿ, ವಿಷಯಾನುಭವ ಇಲ್ಲದೆ ಹೋಗಬೇಕಾದೀತು. ಎನ್ನುವ ಅನಿಷ್ಟಾಪಾದನವಾಗಲಿ ಕೂಡುವುದಿಲ್ಲ.) (ಹೇಗೆ ಆಕ್ಷೇಪಿಸಿರುವರು ಎಂದರೆ— **'ಯತ್ರ ಹಿ ದ್ವೈತಮಿವ ಭವತಿ ತದಿತರಃ ಇತರಂ ಪಶ್ಯತಿ'** ಇತ್ಯಾದಿಗಳಿಂದ) ಯತ್ರ = ಯಾವ ಪಕ್ಷದಲ್ಲಿ, ದ್ವೈತಂ ಭವತಿ = ಭೇದವು ಬರುತ್ತದೋ, ಹಾಗಾದರೇನೇ ಇತರನು ಮತ್ತೊಬ್ಬನನ್ನು ನೋಡುತ್ತಾನೆ. ಇತ್ಯಾದಿಗಳಿಂದ ವ್ಯಾಪ್ತಿಯನ್ನು ಹೇಳಿ, ಹಿ ಶಬ್ದದಿಂದ ವ್ಯಾಪ್ತಿಯು ಪ್ರಮಿತವಾಗಿದೆ ಎಂದೂ ಹೇಳಿ, **'ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್'** ಇತ್ಯಾದಿಗಳಿಂದ ಅಪೇಕ್ಷಿತವಾದ ಯಾವ ಮುಕ್ತ್ಯವಸ್ಥೆಯಲ್ಲಿ ಸರ್ವವೂ ಆತ್ಮಸ್ವರೂಪವೇ ಆಯಿತೋ? ಅಂದರೆ— (ತನ್ನಿಂದ

ವ್ಯತಿರಿಕ್ತವಾದುದು ಯಾವುದೂ ಇಲ್ಲವೆಂದಾದರೆ— ಯಾವ ಸಾಧನದಿಂದ ಯಾವ ಅರ್ಥವನ್ನು ನೋಡುವನು? ಯಾವ ಸಾಧನದಿಂದಲೂ ಯಾವುದನ್ನೂ ನೋಡಲಾರನು, ಎನ್ನುವ ಅನಿಷ್ಟಪ್ರಸಂಗವು ಹೇಳಲ್ಪಡುತ್ತದೆ.) (ಹೀಗಾದರೆ ಮುಕ್ತಿಯಲ್ಲಿ ದ್ವೈತವೂ ಇಲ್ಲವೆಂದಾದರೆ— ಆಗ ರೂಪದರ್ಶನಾದಿಗಳೂ ಬರಲಾರವು ಎಂದು ತರ್ಕಿಸಲ್ಪಡುತ್ತವೆ. ತಥಾಚ ದ್ವೈತಾಭಾವ ಮತವು ಈ ಶ್ರುತಿಯಿಂದ ಆಕ್ಷಿಪ್ತವಾಗುತ್ತದೆ. ವಿಷಯಭೋಗಾಭಾವಮತವಲ್ಲವೆಂದರೆ—) ಘ್ರಾಣಾದಿ ಭೋಗಾಭಾವಸ್ಯ ತು=(**'ಕೇನ ಕಂ ಜಿಘ್ರೇತ್'** ಎಂದು) ಘ್ರಾಣ ಮೊದಲಾದವುಗಳಿಂದ ಗಂಧ ಮೊದಲಾದವುಗಳ ಭೋಗಾಭಾವಕ್ಕಾದರೂ, ಅನಿಷ್ಟತ್ವಹೃದಾ=ಅನಿಷ್ಟತ್ವಾಭಿಪ್ರಾಯದಿಂದ, ಶ್ರುತಿಃ=**'ಯತ್ರ ತ್ವಸ್ಯ'** ಇತ್ಯಾದ ಶ್ರುತಿಯು, ಆಚಿಕ್ಷೇಪ = ಆಕ್ಷೇಪಿಸಿರುತ್ತದೆ. (ಶೂನ್ಯಮತವನ್ನೂ ತಾರ್ಕಿಕರ ಮತವನ್ನೂ ನಿರಾಕರಿಸಿ, ಈ ಶ್ರುತಿಯಿಂದ ಅದ್ವೈತ ಮತವು ನಿರಾಕರಿಸಲ್ಪಡುತ್ತದೆ ಎನ್ನುವುದು ಸತ್ಯವೇ. ಆದಾಗರೂ ವಿಷಯಭೋಗಾಭಾವರೂಪವಾದ ಅನಿಷ್ಟಾಪಾದನದಿಂದಲೇ ನಿರಾಕೃತವಾಗುತ್ತದೆ. ಯಾವುದು ಅನಿಷ್ಟವೋ ಅದೇ ಪ್ರಸಂಜನೀಯವಾಗುತ್ತದೆ. ಆದುದರಿಂದ ಅದ್ವೈತಮತದಲ್ಲಿ ಘ್ರಾಣಾದಿ ಭೋಗಾಭಾವವನ್ನು ಆಪಾದಿಸತಕ್ಕ ಶ್ರುತಿಯು ಘ್ರಾಣಾದಿ ಭೋಗಕ್ಕೆ ಅನಿಷ್ಟತ್ವಾಭಿಪ್ರಾಯವುಳ್ಳದ್ದೆಂದು ತಿಳಿಯುತ್ತದೆ. ಅಪ್ರಾಮಾಣಿಕವೂ, ಪ್ರಮಾಣವಿರುದ್ಧವೂ ಆದುದು ಅನಿಷ್ಟವೆನ್ನಿಸುತ್ತದೆ. ಆದುದರಿಂದ ವಿಷಯಭೋಗಾಭಾವನಿಂದೆಯು ಶ್ರುತ್ಯಭಿಪ್ರೇತವೇ ಆಗುತ್ತದೆ.) (ಹಾಗಾದರೆ ಅದ್ವೈತಮತದಲ್ಲಿ ವಿಷಯಭೋಗಾಭಾವವು ಆಪಾದನೀಯವಾಗಿದ್ದರೆ ಈ ಅರ್ಥಾಪತ್ತಿಯಿಂದ ವಿಷಯಭೋಗಾಭಾವನಿಂದೆಯು ಅವಗತವಾಗುತ್ತದೆಂದು ಆಗುತ್ತಿತ್ತು. ಹೀಗೆ ಇಲ್ಲ. ಇದು ಆಪಾದನವಲ್ಲ. ಮತ್ತೆ ವಸ್ತುಸ್ಥಿತಿಯನ್ನೇ ಹೇಳಿದ್ದು. ಹೇಗೆಂದರೆ— ಈ ಆತ್ಮನು ನಾಶವಿಲ್ಲದಿರುವವನು. ಆದುದರಿಂದಲೇ ನಾಶಾಭಾವವು ಆತನ ಧರ್ಮವು. ಮುಕ್ತಿಯಲ್ಲಿ ಆತನಿಗೆ ರೂಪಾದಿ ವಿಷಯಗಳಿಂದ ಸಂಸರ್ಗಾಭಾವವು ಆಗುತ್ತದೆ. ಏಕೆಂದರೆ— ಎಲ್ಲಿ ಸಂಸಾರದಲ್ಲಿ ಭೇದವಿದ್ದಂತೆ ಆಗುತ್ತದೋ, ಆಗ ಒಬ್ಬನು ಮತ್ತೊಂದನ್ನು ನೋಡುತ್ತಾನೆ ಇತ್ಯಾದಿಗಳು ಕೂಡುತ್ತವೆ. ಎಲ್ಲಿ ಮುಕ್ತಿಯಲ್ಲಿ ಆತ್ಮನಿಗೆ ಎಲ್ಲವೂ ಆತ್ಮರೂಪವೇ ಆಯಿತೋ, ತನ್ನಿಂದ ವ್ಯತಿರಿಕ್ತವಾದುದು ಯಾವುದೂ ಇಲ್ಲವೋ ಅಲ್ಲಿ ಯಾವುದರಿಂದ ಯಾವುದನ್ನು ನೋಡಿಯಾನು? ಯಾವುದರಿಂದಲೂ ಯಾವುದನ್ನೂ ನೋಡಲಾರನು, ಎಂದು ಪರಮ ಮುಕ್ತಿಯಲ್ಲಿ ಸರ್ವಥಾ ಜ್ಞಾನಾಭಾವವನ್ನೇ ವಸ್ತುಸ್ಥಿತಿಯನ್ನಾಗಿ ಹೇಳುತ್ತದೆ. ಅಂದರೆ ಅನಿಷ್ಟಾಪಾದನರೂಪದಿಂದ ಅಲ್ಲ, ಎಂದು ಅದ್ವೈತಿಗಳು ಹೇಳುತ್ತಾರೆ. ಆ ವಿಷಯದಲ್ಲಿ ಹೇಳುತ್ತಾರೆ) ಯೇನ=ಯಾವ ಶ್ರೀಹರಿಯಿಂದ, ಇದಮಖಿಲಂ=ಈ ಎಲ್ಲವನ್ನೂ, ವೇದ=ತಿಳಿಯುತ್ತಾನೋ, ತಂ ಚ=ಆ ಶ್ರೀ ಹರಿಯನ್ನು, ಕೇನ=ಯಾವುದರಿಂದ, ವಿಜಾನೀಯಾತ್=ತಿಳಿದಾನು? ವಿಜ್ಞಾತಾರಂ=ತಿಳಿಯತಕ್ಕ, ಸ್ವಮೇವಚ=ತನ್ನನ್ನೇ, ಕೇನ = ಯಾವುದರಿಂದ, ವಿಜಾನೀಯಾತ್ = ತಿಳಿದಾನು? (ಎನ್ನುವುದರಿಂದ **'ಯೇನೇಹ ಸರ್ವಂ ವಿಜಾನಾತಿ ತಂ ಚ ಕೇನ ವಿಜಾನೀಯಾತ್ ವಿಜ್ಞಾತಾರಮರೇ ಕೇನ ವಿಜಾನೀಯಾತ್'** ಎನ್ನುವ ಎರಡು ವಾಕ್ಯಗಳನ್ನು ಇಟ್ಟುಕೊಳ್ಳಬೇಕು.) ಇತಿ=ಈ ಎರಡು ವಾಕ್ಯಗಳಲ್ಲಿ ಹೇಳಲ್ಪಟ್ಟ ವಿಷ್ಣುಜ್ಞಾನರಾಹಿತ್ಯವೂ, ತನ್ನ ಜ್ಞಾನರಾಹಿತ್ಯವೂ ಕೂಡ, ಸರ್ವಥಾ=ಸರ್ವಪ್ರಕಾರದಿಂದಲೂ, ಅನಿಷ್ಟಂ ಹಿ=ಅನಿಷ್ಟವಷ್ಟೆ. (ಅಂದರೆ— ಇಲ್ಲಿ ಅಂತ್ಯದಲ್ಲಿ 'ಯೇನೇದಂ' ಎಂದು ಹಿಂದೆ ಹೇಳಿದ ಎರಡು ವಾಕ್ಯಗಳು ಶ್ರುತಗಳಾಗುತ್ತವೆ. ಆ ಎರಡು ವಾಕ್ಯಗಳ ಅರ್ಥವು ಪರಮೇಶ್ವರನ ಜ್ಞಾನಾಭಾವವು, ತನ್ನ ಜ್ಞಾನಾಭಾವವು. ಅದು ಅನಿಷ್ಟವು ವಾಸ್ತವವೆಂದು ಹೇಳಕೂಡದು. ಆದುದರಿಂದ ಅದು ಅನಿಷ್ಟಾಪಾದನವೇ ಎಂದು ತಿಳಿಯುತ್ತದೆ.

ಅದರ ಸಾಹಚರ್ಯದಿಂದ 'ಕೇನ ಕಂ ಪಶ್ಯೇತ್' ಇತ್ಯಾದಿಗಳೂ ಕೂಡ ಅನಿಷ್ಟಾಪಾದನವೇ. ವಸ್ತುಸ್ಥಿತಿಕಥನವಲ್ಲವೆಂದು ತಿಳಿಯಬೇಕು.) ॥ ೮೭ ॥ ೮೮ ॥

ಹಾಗಾದರೆ— **'ಯತೋ ವಾಚೋ ನಿವರ್ತಂತೇ'** ಇತ್ಯಾದಿ ಶ್ರುತಿಗಳ ದೆಶೆಯಿಂದ ಈಶ್ವರನು ಸರ್ವಥಾಪಿ ಅಜ್ಞೇಯನೇ ಆಗಿರುತ್ತಾನೆ. ಜೀವಾತ್ಮನು ತನ್ನ ಜ್ಞಾನವುಳ್ಳವನಲ್ಲ. ಒಂದೇ ಕ್ರಿಯೆಯಲ್ಲಿ ಒಬ್ಬನಿಗೇನೇ ಕರ್ತೃಕರ್ಮಭಾವವು ವಿರುದ್ಧವಾಗಿದೆ. ಆದುದರಿಂದ ಶ್ರೀ ಹರಿಯ ಜ್ಞಾನಾಭಾವವೂ, ತನ್ನ ಜ್ಞಾನಾಭಾವವೂ ಹೇಗೆ ಅನಿಷ್ಟವು ಎಂದರೆ—ಶ್ರೀ ಹರಿಗೆ ಸರ್ವಥಾಪಿ ಅಜ್ಞೇಯತ್ವವನ್ನು ನಿರಾಕರಿಸುತ್ತಾರೆ—

**ಮೂ ॥ ನಾಖಿಲಜ್ಞಾಪಕೋ ವಿಷ್ಣುರಜ್ಞೇಯೋ ನಿಯಮೇನ ಹಿ ।**
**ತಜ್ಜ್ಞಾನಾರ್ಥಂ ಹಿ ವೇದಾನಾಮಖಿಲಾನಾಂ ಪ್ರವರ್ತನಂ ॥ ೮೯ ॥**

**ಅ ॥** ಅಖಿಲಜ್ಞಾಪಕಃ=ಎಲ್ಲವನ್ನು ತಿಳಿಸಿಕೊಡತಕ್ಕ, ವಿಷ್ಣುಃ = ಶ್ರೀ ಹರಿಯು, ನಿಯಮೇನ=ನಿಯಮದಿಂದ, (ಸರ್ವಥಾ,) ಅಜ್ಞೇಯಃ=ತಿಳಿಯಲ್ಪಡದಿರುವವನು, ನ ಹಿ=ಅಲ್ಲವಷ್ಟೆ! (ಶ್ರೀ ಹರಿಯು ಸರ್ವಥಾಪಿ ಅಜ್ಞೇಯನೆನ್ನುವುದು ಆಗುವುದಿಲ್ಲ, ಏಕೆಂದರೆ—) **ತಜ್ಜ್ಞಾನಾರ್ಥಂ**=ಆ ಶ್ರೀ ಹರಿಯ ಜ್ಞಾನಕ್ಕಾಗಿಯೇ, (**'ಸರ್ವೇ ವೇದಾ ಯತ್ಪದಮಾಮನಂತಿ'** ಇತ್ಯಾದಿ ಶ್ರುತಿಗಳ ದೆಶೆಯಿಂದ) ಅಖಿಲಾನಾಂ = ಎಲ್ಲಾ, ವೇದಾನಾಂ = ವೇದಗಳ, ಪ್ರವರ್ತನಂ = ಪ್ರವೃತ್ತಿಯು. (ಶ್ರೀ ಹರಿಯು ಸರ್ವಥಾಪಿ ಅಜ್ಞೇಯನೆಂದರೆ— ಎಲ್ಲಾ ವೇದಗಳಿಗೂ ವೈಯರ್ಥ್ಯವು ಪ್ರಸಕ್ತವಾಗುವುದರಿಂದ, **'ಯತೋ ವಾಚಃ'** ಇತ್ಯಾದಿ ಶ್ರುತಿಗಳನ್ನು ಸಾಕಲ್ಯದಿಂದ ಅವಾಚ್ಯತ್ವಾದಿ ಪರಗಳನ್ನಾಗಿ ವ್ಯಾಖ್ಯಾನಮಾಡಬೇಕು) ॥ ೮೯ ॥

ಈ ಪ್ರಕಾರವಾಗಿ ಶ್ರೀ ಹರಿಗೆ ಜ್ಞೇಯತ್ವವನ್ನುಪಪಾದಿಸಿ ಜೀವಾತ್ಮನಿಗೆ ತನ್ನ ಜ್ಞಾನವನ್ನುಪಪಾದಿಸುತ್ತಾರೆ—

**ಮೂ ॥ ಪ್ರತ್ಯಕ್ಷಮಾತ್ಮವಿಜ್ಞಾನಾವಿರೋಧಾನುಭವಾದಪಿ ॥ ೯೦ ॥**
**ನ ಸ್ವವಿಜ್ಞಾನಿತಾಯಾಂ ಚ ವಿರೋಧಃ ಕಶ್ಚನೇಯತೇ ।**
**ಕರ್ತೃಕರ್ಮವಿರೋಧಶ್ಚ ನಿತ್ಯಾನುಭವರೋಧತಃ ॥**
**ಕಥಮೇವ ಪದಂ ಗಚ್ಛೇದ್ವಿರೋಧೋಽದೃಷ್ಟಬಾಧನಂ ॥ ೯೧ ॥**

**ಅ ॥** ಪ್ರತ್ಯಕ್ಷಂ=ಪ್ರತ್ಯಕ್ಷವು ಹೇಗೆ ಆದೀತೋ ಹಾಗೆ, ಆತ್ಮವಿಜ್ಞಾನಾವಿರೋಧಾನುಭವಾತ್=ಆತ್ಮವಿಷಯಕ ಜ್ಞಾನವೂ, ಆತ್ಮವಿಜ್ಞಾನದಲ್ಲಿಯೇ ವಿರೋಧಾಭಾವವೂ, ಇವುಗಳ ಪ್ರತ್ಯಕ್ಷರೂಪವಾದ ಅನುಭವದೆಶೆಯಿಂದಲೂ, ಅಪಿ=ಶ್ರುತ್ಯಾದಿಗಳಿಂದಲೂ ಕೂಡ, ಸ್ವವಿಜ್ಞಾನಿತಾಯಾಂ=(ಜೀವನಿಗೆ) ತನಗೆ ತನ್ನ ಜ್ಞಾನವದೆ ಎನ್ನುವಲ್ಲಿ, ಕಶ್ಚನ=ಯಾವುದೊಂದೂ, ವಿರೋಧಃ=ವಿರೋಧವು, ನೇಯತೇ=ಹೊಂದುವುದಿಲ್ಲ. (ಅಂದರೆ— ಯಾವ ಅನುಪಪತ್ತಿಯೂ ತೋರುವುದಿಲ್ಲ) (ಅಂದರೆ- ಆತ್ಮವಿಜ್ಞಾನಾನುಭವವು 'ಮಾಮಹಂ ಜಾನಾಮಿ' ಎನ್ನುವುದು ಸಾಕ್ಷಿರೂಪವಾದುದು ಪ್ರಸಿದ್ಧವೇ. ಹೇಗೆ 'ಘಟಮಹಂ ಜಾನಾಮಿ' ಎನ್ನುವಲ್ಲಿ ಯಾವ ಅನುಪಪತ್ತಿಯೂ ತೋರುವುದಿಲ್ಲವೋ ಮತ್ತೆ ಅನುಪಲಂಭದಿಂದ ಸಹಕೃತವಾದ) (ಅಂದರೆ—'ಯದ್ಯತ್ರ ಅನುಪಪತ್ತಿಃ ಸ್ಯಾತ್ ತರ್ಹಿ ಉಪಲಭ್ಯೇತ ನೋಪಲಭ್ಯತೇ' ಎನ್ನುವ ಅನುಪಲಂಭದಿಂದ

ಯುಕ್ತವಾದ) ಸಾಕ್ಷಿಯಿಂದ ಅನುಪತ್ಯಭಾವವೇ ಸಾಕ್ಷಾತ್ಕರಿಸಲ್ಪಡುತ್ತದೆ. ಅದೇ ಪ್ರಕಾರ ಅದರಿಂದ ಅವಿಶಿಷ್ಟವಾದ 'ಮಾಮಹಂ ಜಾನಾಮಿ' ಎನ್ನುವ ಜ್ಞಾನದಲ್ಲಿಯೂ ಅನುಪಪತ್ಯಭಾವವೇ ಸಾಕ್ಷಾತ್ಕರಿಸಲ್ಪಡುತ್ತದೆ. **'ಅಹಮಿತ್ಯೇವ ಯೋ ವೇದ್ಯಃ ಸ ಜೀವ ಇತಿ ಕೀರ್ತಿತಃ । ಸ ದುಃಖೀ ಸ ಸುಖೀ ಚೈವ ಸ ಪಾತ್ರಂ ಬಂಧಮೋಕ್ಷಯೋಃ'** ಇದು ಮೊದಲಾದ ಶ್ರುತಿಗಳು ತರ್ಕಾದಿಗಳು ಇವೆ. ಆತ್ಮನು ತನ್ನನ್ನು ತಿಳಿದುಕೊಳ್ಳದಿದ್ದರೆ ಆಗ ನನಗೆ ಇದು ಇಷ್ಟಸಾಧನವು. ಇದು ಮೊದಲಾದ ಜ್ಞಾನವಿಲ್ಲದಿರುವುದರಿಂದ ಅಂತಹ ಇಚ್ಛಾಪ್ರಯತ್ನಗಳೂ ಕೂಡ ಇಲ್ಲದಿರುವುದರಿಂದ ಎಲ್ಲಾ ಪ್ರವೃತ್ತಿ ನಿವೃತ್ತಿಗಳಿಗೆ ವಿಲೋಪವು ಬರಬೇಕಾದೀತು. ಸ್ವಪ್ರಕಾಶತ್ವವೂ ಜ್ಞಾನಾಶ್ರಯವಾಗಿ ಪ್ರಕಾಶಮಾನತ್ವವೂ ಕೂಡ ತನ್ನ ಜ್ಞಾನವಿಲ್ಲದಿದ್ದರೆ ಕೂಡಲಾರದು.) (ಛೇದನಾದಿ ಕ್ರಿಯೆಗಳಲ್ಲಿ ಕರ್ತೃ-ಕರ್ಮಗಳಿಗೆ ಭೇದವು ಕಂಡದರಿಂದ ಒಂದೇ ಕ್ರಿಯೆಯಲ್ಲಿ ಕರ್ತೃಕರ್ಮಗಳಿಗೆ ಏಕತ್ವಾಂಗೀಕಾರವು ವಿರುದ್ಧವೆಂದು ಯಾವುದು ಹೇಳಲ್ಪಟ್ಟದೋ ಅದನ್ನು ನಿರಾಕರಿಸುತ್ತಾರೆ. ಕರ್ತೃ-ಕರ್ಮವಿರೋಧಶ್ಚ=ಒಂದೇ ಕ್ರಿಯೆಯಲ್ಲಿ ಕರ್ತೃ-ಕರ್ಮತ್ವಗಳಿಗೆ ವಿರೋಧವು, ನಿತ್ಯಾನುಭವರೋಧತಃ=ಉಕ್ತವಾದ ಸಾಕ್ಷ್ಯನುಭವದ ವಿರೋಧ ದೆಸೆಯಿಂದ, ಕಥಮೇವ=ಹೇಗೆ ತಾನೇ (ಪ್ರಕೃತದಲ್ಲಿ) ಪದಂ=ಆಸ್ಪದವನ್ನು ಗಚ್ಛೇತ್=ಹೊಂದುವುದು. ('ಮಾಮಹಂ ಜಾನಾಮಿ' ಎನ್ನುವ ಸಾಕ್ಷ್ಯನುಭವದ ವಿರೋಧದೆಶೆಯಿಂದ ಈ ನ್ಯಾಯಕ್ಕೆ ಇದು ವಿಷಯವಲ್ಲ. ಮತ್ತೆ ಎಲ್ಲಿ?) ಅದೃಷ್ಟಬಾಧನಂ=ಪ್ರಮಾಣವಿರೋಧಾಭಾವವೋ (ಅಲ್ಲಿಯೇ) ವಿರೋಧಃ=(ಒಂದೇ ಕ್ರಿಯೆಯಲ್ಲಿ ಕರ್ತೃ-ಕರ್ಮಗಳಿಗೆ ಏಕತ್ವವು ಕೂಡ ಲಾರದು ಎನ್ನುವ) ವಿರೋಧವು. (ಪ್ರವೃತ್ತವಾಗುತ್ತದೆ.) ॥ ೯೦ ॥ ೯೧ ॥

ಹೀಗೆ ಈಶ್ವರನಿಗೆ ಜ್ಞೇಯತ್ವವೂ ಜೀವನಿಗೆ ತನ್ನ ಜ್ಞಾನವೂ ಕೂಡ ಇರಲಿ. ಆದಾಗ್ಯೂ ಮುಕ್ತಿಯಲ್ಲಿ ಜ್ಞಾನಾಭಾವವು ಹೇಗೆ ಅನಿಷ್ಟವು? ಎಂದರೆ— **'ನಾತ್ಮಾನಂ ನ ಪರಾಂಶ್ಚೈವ ನ ಸತ್ಯಂ ನಾಪಿ ಚಾನೃತಂ । ಪ್ರಾಜ್ಞಃ ಕಿಂಚನ ಸಂವೇತ್ತಿ ತುರ್ಯಂ ತತ್ಸರ್ವದೃಕ್ಸದಾ'** ಎನ್ನುವ ಶ್ರುತಿಯಲ್ಲಿ ಸುಪ್ತನಿಗೆ ತನ್ನ ಜ್ಞಾನವೂ ಈಶ್ವರ ಜ್ಞಾನವೂ ಕೂಡ ಇಲ್ಲವೆಂದು ಹೇಳಿ ಮುಕ್ತನಿಗಾದರೂ ತನ್ನ ಜ್ಞಾನವೂ ಈಶ್ವರಜ್ಞಾನವೂ ಕೂಡ ಇದೆ ಎಂದು ಹೇಳಲ್ಪಡುತ್ತದೆ. ಆದುದರಿಂದ ಜ್ಞಾನಾಭಾವವು ಪ್ರಮಾಣವಿರುದ್ಧವು, ಆದುದರಿಂದ ಹೇಗೆ ಅನಿಷ್ಟವಲ್ಲ?) ಅನಿಷ್ಟಹೇಳುವ ಪ್ರಕರಣಬಲದಿಂದ ವಿಷಯಭೋಗಾಭಾವಕ್ಕೆ ಅನಿಷ್ಟತ್ವವು ತಿಳಿದುಬರುತ್ತದೆ ಎಂದು ಇಷ್ಟೇ ಅಲ್ಲ. ಮತ್ತೆ ವಿಷಯಭೋಗವು ಶ್ರುತಿಸಿದ್ಧವೂ ಆಗಿದೆ ಎನ್ನುತ್ತಾರೆ—

**ಮೂ ॥ ಸೋಽಶ್ನುತೇ ಸರ್ವಕಾಮಾಂಶ್ಚ ಕಾಮಾನ್ನೀ ಕಾಮರೂಪ್ಯಥ ॥ ೯೨ ॥**
**ಇತ್ಯಾದಿ ಶ್ರುತಯಶ್ಚೋಕ್ತಮರ್ಥಮೇವ ವದಂತಿ ಹಿ ।**
**ಅಸ್ವಾತಂತ್ರ್ಯಾದಿವೇತ್ಯುಕ್ತಂ ನ ದ್ವೈತಾಭಾವತಃ ಕ್ವಚಿತ್ ॥ ೯೩ ॥**
**ಆತ್ಮೈವಾಭೂದಿತಿ ಹ್ಯಸ್ಮಾದವಿಶೇಷಪ್ರಸಂಗತಃ ।**
**ಅಸ್ವಾತಂತ್ರ್ಯೋಪಮಾಭೇದಭೇದೇಷ್ವಿವ ಉದೀರಿತಃ ॥ ೯೪ ॥**
**ಶಬ್ದತತ್ವ ಇತಿ ಪ್ರೋಕ್ತಂ ಮೈತ್ರೇಯ್ಯುಕ್ತೋತ್ತರಂ ಚ ಕಿಂ ।**
**ಸುಖಾದಿಧರ್ಮಹಾನೌ ತು ಮುಕ್ತೇಃ ಕಿಂ ಚ ಪ್ರಯೋಜನಂ ॥ ೯೫ ॥**
**ಯದ್ಯರ್ಥೋ ದುಃಖಹಾನಿಃ ಸ್ಯಾದನರ್ಥಃ ಸುಖನಾಶನಂ ।**
**ತಯೋಶ್ಚ ದುಃಖಹಾನಾದ್ಧಿ ಸುಖನಾಶೋಽಧಿಕೋ ಭವೇತ್ ॥ ೯೬ ॥**

**ಪ್ರಾಪ್ಯಾಪಿ ದುಃಖಂ ಸುಮಹತ್ಸುಖಲೇಶಾಪ್ತಯೇ ಜನಃ ।**
**ಯತತೇ ಸುಖಹಾನೌ ಹಿ ಕೋ ಮೋಕ್ಷಾಯ ಯತೇತ್ಸುಮಾನ್ ॥**
**॥ ೯೭ ॥**

ಅ ॥ ಅಥ=ಮುಕ್ತಿಯ ಅನಂತರದಲ್ಲಿ, ಸಃ=ಆ ಮುಕ್ತನು, ಸರ್ವಕಾಮಾಂಶ್ಚ= ಎಲ್ಲಾ ಅಭೀಷ್ಟಗಳನ್ನು, ಅಶ್ನುತೇ=ಬೋಧಿಸುತ್ತಾನೆ ಕಾಮಾನ್ನೀ = ಇಚ್ಛಾನುಸಾರವಾದ ಅನ್ನ (ಭೋಗ್ಯವಸ್ತು) ವುಳ್ಳವನು ಆಗುತ್ತಾನೆ. ಕಾಮರೂಪೀ=ಇಚ್ಛಾನುಸಾರವಾದ ರೂಪವು ಳ್ಳವನು ಆಗುತ್ತಾನೆ ಇತ್ಯಾದಿ ಶ್ರುತಯಶ್ಚ=ಇದು ಮೊದಲಾದ ಶ್ರುತಿಗಳು, ಉಕ್ತಂ= ಹೇಳಿದ, ಅರ್ಥಮೇವ=ಮುಕ್ತನಿಗೆ ವಿಷಯಭೋಗವಿದೆ ಎನ್ನುವ ಅರ್ಥವನ್ನೇ, ವದಂತಿ= ಹೇಳು ತ್ತವೆ, ಹಿ=ಪ್ರಸಿದ್ಧವು (ಆದುದರಿಂದ **'ಮಾತ್ರಾ ಸಂಸರ್ಗಸ್ತ್ವಸ್ಯ ಭವತಿ'** ಎನ್ನುವಲ್ಲಿ 'ಅಸಂಸರ್ಗಃ' ಎನ್ನುವ ಪರಕೀಯ ವ್ಯಾಖ್ಯಾನವು ಅಯುಕ್ತವೆ.) (**'ಯತ್ರ ಹಿ ದ್ವೈತಮಿವ ಭವತಿ'** ಎಂದು ಇವ ಶಬ್ದದಿಂದ ದ್ವೈತಾಭಾವವು ಪ್ರತಿಪಾದಿಸಲ್ಪಡುತ್ತದೆ. ಆದುದರಿಂದ ದ್ವೈತವಿಲ್ಲದಿದ್ದರೆ ಅನಿಷ್ಟವು ಬರಬೇಕಾದೀತು ಎಂದು ಹೇಳಿದ್ದು ಹೇಗೆ ಎಂದರೆ—) ಅಸ್ವಾತಂ ತ್ರ್ಯಾತ್=ದ್ವೈತಕ್ಕೆ ಅಸ್ವಾತಂತ್ರ್ಯವನ್ನು ಅಭಿಪ್ರಾಯಮಾಡಿಕೊಂಡು, ಇವೇತ್ಯುಕ್ತಂ=ದ್ವೈತ ಮಿವ ಎಂದು ಹೇಳಲ್ಪಟ್ಟಿತು. ನ ದ್ವೈತಾಭಾವತಃ=ದ್ವೈತಾಭಾವವನ್ನು ಅಭಿಪ್ರಾಯ ಮಾಡಿ ಕೊಂಡು ಹೇಳಿದ್ದಲ್ಲ. ಕ್ವಚಿತ್=ಎಲ್ಲಿಯೂ, ಯಾವ ಕೋಶಾದಿಗಳಲ್ಲಿಯೂ, ಇವ ಶಬ್ದಕ್ಕೆ ಅಭಾವ ವಾಚಕತ್ವವನ್ನು ಹೇಳದೆ ಇರುವುದರಿಂದ (ಇವ ಶಬ್ದಕ್ಕೆ ಅಭಾವಾರ್ಥತ್ವವನ್ನು ಹೇಳಿ ದರೆ ಬಾಧಕವನ್ನು ಹೇಳುತ್ತಾರೆ) ಆತ್ಮೈವ ಅಭೂತ್=ಆತ್ಮನೇ ಇದ್ದನು, ಇತಿ=ಹೀಗೆ, ಅಸ್ಮಾತ್=ಇದರಿಂದ, ಅವಿಶೇಷಪ್ರಸಂಗತಃ = ಅದಕ್ಕೆ ವಿಶೇಷವಿಲ್ಲವೆಂದು ಪ್ರಸಕ್ತವಾಗುವುದ ರಿಂದ (ಅಂದರೆ— ಇವ ಶಬ್ದಕ್ಕೆ ಅಭಾವಾರ್ಥಕತ್ವವಿದ್ದರೆ 'ದ್ವೈತಮಿವ ಭವತಿ' ಎನ್ನುವುದಕ್ಕೆ ದ್ವೈತವು ಇಲ್ಲವೆಂದು ಅರ್ಥವು ಆಗಬೇಕಾಗುವುದು. **'ಯತ್ರ ತ್ವಸ್ಯ ಸರ್ವಮಾತ್ಮೈವಾ ಭೂತ್'** ಎನ್ನುವುದಕ್ಕೆ ದ್ವೈತಾಭಾವರೂಪವಾದ ಅರ್ಥವು ಸ್ಪಷ್ಟವೇ. ಆದುದರಿಂದ ಅದ ರಿಂದ ಇದಕ್ಕೆ ವಿಶೇಷವು ಇಲ್ಲದೆ ಹೋಗುವುದು. ತಥಾಚ ೧ ದ್ವೈತವು ಇಲ್ಲವಾದರೆ ಒಬ್ಬನು ಮತ್ತೊಂದನ್ನು ನೋಡಿಯಾನು. ೨ ದ್ವೈತವಲ್ಲವಾದರೆ ಯಾವುದರಿಂದ ಯಾವುದನ್ನು ನೋಡಿ ಯಾನು? ಹೀಗೆ ಎರಡು ವಾಕ್ಯಗಳ ಅರ್ಥವು ಪ್ರಸಕ್ತವಾಗುವುದು. ಅಂತೂ ಶ್ರುತಿಗೆ ಉನ್ಮತ್ತವಾಕ್ಯತ್ವವು ಪ್ರಾಪ್ತವಾಗುತ್ತದೆ ) (ಹಾಗಾದರೆ ಇವ ಶಬ್ದಕ್ಕೆ ಅಸ್ವಾತಂತ್ರ್ಯವಾಚಿತ್ವವು ಯಾವುದರಿಂದ ಎಂದರೆ—) ಇವ=ಇವ ಶಬ್ದವು, ಅಸ್ವಾತಂತ್ರ್ಯೋಪಮಾಭೇದಭೇದೇಷು= ಅಸ್ವಾಂತ್ರ್ಯವು, ಉಪಮಾನವು, ಭೇದಾಭೇದ ಮತ್ತು ವಿರುದ್ಧಗಳಾದ ಎರಡು ವಸ್ತು ಇವು ಗಳಲ್ಲಿ, ಉದೀರಿತಃ = ಹೇಳಲ್ಪಟ್ಟದೆ. ಇತಿ=ಹೀಗೆ, ಶಬ್ದತತ್ವೇ=ಶಬ್ದತತ್ವಾಖ್ಯಗ್ರಂಥದಲ್ಲಿ, ಪ್ರೋಕ್ತಂ=ಹೇಳಲ್ಪಟ್ಟದೆ. (**'ನ ಪ್ರೇತ್ಯಸಂಜ್ಞಾಸ್ತಿ'** ಎನ್ನುವ ವಾಕ್ಯಕ್ಕೆ ಮುಕ್ತನು ತಿಳಿಯು ವುದಿಲ್ಲ ಎಂದೇ ಅರ್ಥವನ್ನು ಅಂಗೀಕರಿಸಿಕೊಂಡು ಅವಿನಾಶೀ ಇತ್ಯಾದಿ ವಾಕ್ಯಗಳನ್ನು ಅನ್ಯಥಾ ವ್ಯಾಖ್ಯಾನಮಾಡುವವನಿಗೆ ಬಾಧಕವನ್ನು ಹೇಳುತ್ತಾರೆ.) ಮೈತ್ರೇಯ್ಯುಕ್ತ್ಯುತ್ತರಂ=(**'ನ ಪ್ರೇತ್ಯ ಸಂಜ್ಞಾಸ್ತಿ'** ಎನ್ನುವ ವಾಕ್ಯವನ್ನು ಕೇಳಿ) ಮೈತ್ರೇಯಿಯಿಂದ, **'ಆತ್ಮೈವ ಮಾಭವಾನ್'** ಇತ್ಯಾದಿ ಹೇಳಲ್ಪಟ್ಟದ್ದಕ್ಕೆ ಉತ್ತರವು, ಕಿಂ=ಯಾವುದು? (ಮೈತ್ರೇಯಿಯು ಮಾಡಿದ ಆಕ್ಷೇಪ ವಾಕ್ಯವು ತಾತ್ಪರ್ಯ ವಿಶೇಷವುಳ್ಳದ್ದು ನಿರ್ಬಲವಾಗಿ ಆಕ್ಷೇಪಮಾಡಿದ್ದಲ್ಲ. ಆದುದರಿಂದ **'ಪ್ರಜ್ಞಾನಘನಃ'** ಎಂದು ಆತ್ಮನಿಗೆ ಜ್ಞಾನಸ್ವರೂಪತ್ವವನ್ನು ಹಿಂದೆ ಹೇಳಿದ ಈಗ ಜ್ಞಾನಾ ಭಾವವನ್ನು ಹೇಳತಕ್ಕ ನ ಪ್ರೇತ್ಯ ಎನ್ನುವ ನಿನ್ನ ವಾಕ್ಯವು ಮೋಹಕವು ಎಂದಭಿಪ್ರಾಯವನ್ನು

ಕಲ್ಪಿಸಬೇಕು. ಅಥವಾ ಸರ್ವಥಾ ಜ್ಞಾನಾಭಾವವು ಅಪುರುಷಾರ್ಥವೆ-ಬುವ ಪ್ರಸಂಗವಾಗಲೀ ಅಭಿಪ್ರಾಯವೆಂದು ಕಲ್ಪಿಸಬೇಕು ) ಅತ ಏವ '**ಸಂಜ್ಞಾನಾಶೋ ಯದಿ ಭವೇತ್ ಕಿಂ ಮುಕ್ತ್ಯಾ ನಃ ಪ್ರಯೋಜನಂ । ಮೋಹಂ ಮಾಂ ಪ್ರಾಪಯಾಮಾಸ ಭವಾನತ್ರೇತಿ ಚೋದಿತಃ ॥**' ಎಂದು ಹೇಳಿರುವರು. ಸಂಜ್ಞಾನಾಸ್ತಿ ಎನ್ನುವ ವಾಕ್ಯಕ್ಕೆ ಮುಕ್ತನಿಗೆ ಜ್ಞಾನ ವಿಲ್ಲವೆಂದೇ ವ್ಯಾಖ್ಯಾನಮಾಡಿದರೆ ಮೈತ್ರೇಯಿಯು ಹೇಳಿದ ಆಕ್ಷೇಪಕ್ಕೆ ಉತ್ತರವಿಲ್ಲವೆಂದಾಗ ಬೇಕಾಗುವುದು. (ಏಕೆಂದರೆ— 'ನ ಪ್ರೇತ್ಯ' ಇತ್ಯಾದಿ ವಾಕ್ಯಗಳಿಂದ ಸ್ವವಚನ ವ್ಯಾಘಾತವು ಪರಿಹೃತವಾಗಲಿಲ್ಲ. ಪುರುಷಾರ್ಥತ್ವವು ಸಮರ್ಥಿತವೂ ಆಗಲಿಲ್ಲವೆಂದಾಗುವುದು). (ಹೀಗೆ ಸಾಂಖ್ಯ ನೈಯಾಯಿಕಾದಿಗಳಿಗೆ ಅಭಿಮತವಾದ ಮೋಕ್ಷಕ್ಕೆ ಅಪ್ರಾಮಾಣಿಕತ್ವವನ್ನು ಹೇಳಿ ಮೋಕ್ಷವು ಪುರುಷಾರ್ಥವಾಗದೆ ಹೋಗಬೇಕಾಗುವುದು, ಎಂದು ಯಾವುದು ಹೇಳಲ್ಪಟ್ಟದೋ ಅದನ್ನು ವಿಸ್ತರಿಸುತ್ತಾರೆ.) ಸುಖಾದಿ ಧರ್ಮಹಾನೌ=ಸುಖಮೊದಲಾದ ಧರ್ಮಗಳ ರಾಹಿತ್ಯವೇ, (ಮುಕ್ತಿಯೆಂದಂಗೀಕರಿಸಿದರೆ) ಮುಕ್ತೇಃ=ಮುಕ್ತಿಗೆ, ಕಿಂ ಪ್ರಯೋಜನಂ=ಯಾವ ಪ್ರಯೋಜನವು? (ಅಂದರೆ— 'ಪ್ರಯುಜ್ಯತೇ ಪ್ರವರ್ತ್ಯತೇ ಪುರುಷಃ ಅನೇನ' ಎನ್ನುವ ವ್ಯುತ್ಪತ್ತಿಯಿಂದ ಮುಕ್ತಿಗಾಗಿ ಪುರುಷನನ್ನು ಪ್ರವರ್ತಿಸತಕ್ಕದು ಯಾವುದೂ ಇಲ್ಲ.) ತು=ಪರರಿಗೆ ಆಪಾದಿಸತಕ್ಕ ದೋಷವು ತಮ್ಮ ಮತದಲ್ಲಿ ಇಲ್ಲ. ಚ=ಮತ್ತು ಮುಕ್ತಿಯಲ್ಲಿ ಸುಖಾಭಾವವು ಅಪ್ರಾಮಾಣಿಕವೇ. ಇಷ್ಟಪ್ರಾಪ್ತಿಯು, ಅನಿಷ್ಟನಿವೃತ್ತಿ ಯೆಂದು ಪ್ರಯೊಜನವು ಎರಡು ವಿಧವು. ಅದರಲ್ಲಿ ಯದ್ಯಪಿ ಮುಕ್ತಿಯು ಇಷ್ಟಪ್ರಾಪ್ತಿರೂಪವಾಗುವುದಿಲ್ಲ. ಆದಾಗ್ಯೂ ಅನಿಷ್ಟನಿವೃತ್ತಿರೂಪವು ಆಗಿಯೇ ಆಗುತ್ತದೆ. ಆದುದರಿಂದ ಪುರುಷರಿಂದ ಅರ್ಥಿಸಲ್ಪಡುತ್ತದೆ ಎಂದಾಶಂಕಿಸುತ್ತಾರೆ.) ದುಃಖಹಾನಿಃ = ದುಃಖಹಾನಿರೂಪವಾದ ಮುಕ್ತಿಯು, ಅರ್ಥಃ=ಪುರುಷರಿಗೆ ಅರ್ಥನೀಯವು, ಸ್ಯಾತ್ = ಆಗುವುದು, ಇತಿ=ಹೀಗೆ, ಯದಿ=ಯಾವಪಕ್ಷದಲ್ಲಿ, (ಹೇಳುತ್ತಿಯೋ) (ಈ ವಿಷಯದಲ್ಲಿ ಹೇಳಲ್ಪಡುತ್ತದೆ ಅನಿಷ್ಟನಿವೃತ್ತಿಯು ಪುರುಷಾರ್ಥವಾಗುತ್ತದೆ. ಮುಕ್ತಿಯೂ ಸಮಸ್ತ ದುಃಖಹಾನಿರೂಪವೇ. ಆದಾಗ್ಯೂ ಪುರುಷಾರ್ಥವಲ್ಲ, ಹೇಗೆಂದರೆ -) ಸುಖನಾಶನಂ = ಸುಖನಾಶರೂಪವಾದ, ಅನರ್ಥಃ ಅಪಿ=ಅನರ್ಥವು ಕೂಡ ಇದೆ (ಅಂದರೆ— ಕೇವಲವಾಗಿ ದುಃಖದ ಸಂಪೂರ್ತಿ ನಿವೃತ್ತಿಯು ಪುರುಷಾರ್ಥವಾಗುತ್ತದೆ ಎನ್ನುವುದು ಸತ್ಯವೇ ಇದಾದರೂ ದುಃಖದಂತೆಯೇ ಸುಖಕ್ಕೂ ಕೂಡ ಸಂಪೂರ್ತಿನಿವೃತ್ತಿರೂಪವಾಗಿದೆ. ಆದುದರಿಂದ ಹೇಗೆ ಪುರುಷಾರ್ಥವು? ಅನಿಷ್ಟವು ನಿವೃತ್ತಿಯಾಗುತ್ತದೆ ಎನ್ನುವ ಆಶೆಯಿಂದ ಪ್ರವೃತ್ತಿಯಾಗುತ್ತದೆಂದು ಹೇಳಿ ಇಷ್ಟದ ನಿವೃತ್ತಿಯಾಗುತ್ತದೆನ್ನುವ ಭಯದಿಂದ ಮೋಕ್ಷಸಾಧನದಿಂದ ನಿವೃತ್ತಿಯಾಗಬೇಕಾಗುವುದು. ಈ ವಿಷಯದಲ್ಲಿ '**ಯಸ್ಯ ದುಃಖಮುಪಾದೇಯಂ ತಸ್ಯ ಹೇಯಂ ಕಿಮುಚ್ಯತಾಂ। ಹೇಯಹೀನಸ್ಯ ಕಾ ಮುಕ್ತಿಃ ಕೇನ ಚಾಪ್ಯುಪದಿಶ್ಯತೇ**' ಎಂದು ಯಾವುದು ಹೇಳಲ್ಪಟ್ಟದೋ ಅದು ಅಸಂಗತವು. ನಾವು ದುಃಖವನ್ನು ತೆಗೆದುಕೊಳ್ಳಬೇಕೆಂದು ಹೇಳುವುದಿಲ್ಲ. ಮತ್ತೆ ಸಮವಾದ ವ್ಯಯಫಲವುಳ್ಳವುಗಳಾಗಿರುವುದರಿಂದ ವಿನಿಗಮನದಲ್ಲಿ ಕಾರಣವಿಲ್ಲದಿರುವುದರಿಂದ ಪ್ರವೃತ್ತಿಯೇ ಕೂಡಲಾರದೆನ್ನುತ್ತೇವೆ. '**ಅಸತ್ಯಾನಿ ದುರಂತಾನಿ ಸಮವ್ಯಯ ಫಲಾನಿ ಚ । ಅಶಕ್ಯಾನಿ ಚ ವಸ್ತೂನಿ ನಾರಭೇತ ವಿಚಕ್ಷಣಃ**' ಎನ್ನುವ ನೀತಿವಾಕ್ಯವನ್ನು ಅಂಗೀಕರಿಸಿಕೊಂಡೇ ಸಮವ್ಯಯಫಲತ್ವವನ್ನು ಹೇಳಿರುವರು. ಅಂತೂ ಮೋಕ್ಷದಲ್ಲಿ ಸುಖನಿವೃತ್ತಿಯನ್ನು ಒಪ್ಪಿದರೆ ಸಮವ್ಯಯಫಲವತ್ವವಿದ್ದುದರಿಂದ ಮೋಕ್ಷಸಾಧನದಲ್ಲಿ ಯಾರೂ ಪ್ರವರ್ತಿಸಲಾರರು. ವಸ್ತುತಸ್ತು ಲಾಭಕ್ಕಿಂತಲೂ ವ್ಯಯವು ಅಧಿಕವೆನ್ನುತ್ತಾರೆ.)

ತಯೋಃ=ಸುಖದುಃಖಗಳ ಪರಿತ್ಯಾಗಗಳ ಮಧ್ಯದಲ್ಲಿ, ದುಃಖಹಾನಾತ್ ಹಿ=ದುಃಖಪರಿತ್ಯಾಗದಿಂದ, ಸುಖನಾಶಃ=ಸುಖನಾಶವು, ಅಧಿಕಃ=ಅಧಿಕವು, ಭವೇತ್=ಆಗುವುದು. (ಏಕೆಂದರೆ— ರಾಜರು ರಾಜ್ಯಾದಿಗಳು ಹೋದರೆ— ದುಃಖಪರಿತ್ಯಾಗದಿಂದ ಅಂದರೆ ರಾಜ್ಯವ್ಯಾಪಾರ ವಿಕ್ಷೇಪನಿಮಿತ್ತವಾದ ದುಃಖಪರಿತ್ಯಾಗದಿಂದ) ಭೋಗನಿಮಿತ್ತವಾದ ಸುಖದ ಪರಿತ್ಯಾಗವ್ಯಥೆಯನ್ನು ಸಮಾಧಾನಮಾಡಿಕೊಳ್ಳುವುದಿಲ್ಲ. ಅಂತೂ ಸುಖನಾಶವು ಅತ್ಯಂತ ಅನಿಷ್ಟವಾಗಿರುವುದರಿಂದ ಅಂತಹ ಮೋಕ್ಷಕ್ಕಾಗಿ ಯಾರೂ ಪ್ರವೃತ್ತಿಮಾಡಲಿಕ್ಕಿಲ್ಲ. ಹಾಗಾದರೆ—ಎಲ್ಲಿ ಸ್ವಲ್ಪ ದುಃಖವು ನಿವೃತ್ತಿಯೋ ಬಹುಸುಖದ ನಾಶವಾಗುತ್ತದೋ ಅಲ್ಲಿ ಸುಖನಾಶವು ಅನಿಷ್ಟವು. ಮೋಕ್ಷದಲ್ಲಿ ಆದರೂ ಮಹತ್ತಾದ ದುಃಖವು ಹೊರಟುಹೋಗುತ್ತದೆ. ಸುಖವಾದರೂ ಅತ್ಯಲ್ಪವಾದದ್ದೂ ಹೋಗುವುದು. ಆದುದರಿಂದ ಹೇಗೆ ಇದಕ್ಕೆ ಪುರುಷಾರ್ಥವಿಲ್ಲ? **‘ಯಸ್ತು ಘನತರ ದುಃಖನಿರಂತರಾತ್ ಸಂಸಾರಕಾಂತಾರಾತ್ ಸುಖಖದ್ಯೋತಿಕಾಸು ದ್ಯೋತಮಾನಾಸ್ವಪಿ ಬಿಭೇತಿ ತಂ ಪ್ರತ್ಯಯಂ ನಿರಸ್ತ ತಸ್ಕರತಯಾ ಸುಗಮೋ ಮಾರ್ಗ ಉಪದರ್ಶಿತಃ’** ಯಾವಾತನು ನಿಬಿಡವಾದ ದುಃಖಯುಕ್ತವಾದ ಸಂಸಾರವೆನ್ನುವ ದುರ್ಗಮ ಮಾರ್ಗದೆಶೆಯಿಂದ ಅತ್ಯಲ್ಪ ಸುಖಗಳು ತೋರಿದಾಗ್ಯೂ ಭಯಪಡುತ್ತಾನೋ, ಆತನನ್ನು ಕುರಿತು ಕಳ್ಳರು ಇರತಕ್ಕ ದೊಡ್ಡ ಕಾಡಿನಲ್ಲಿ ಹೋಗಲಿಕ್ಕೆ ಹೆದರಿದವನಿಗೆ ಕಳ್ಳರನ್ನು ನಿರಾಕರಿಸಿ, ಸುಗಮವಾದ ಮಾರ್ಗವನ್ನು ಲೋಕದಲ್ಲಿ ದಯಾಳುವಾದವನು ಹೇಗೆ ಉಪದೇಶಿಸುತ್ತಾನೋ ಹಾಗೆಯೇ ಸುಗಮವಾದ ಮಾರ್ಗವನ್ನು ತೋರಿಸಿರುವರು, ಎಂದು ಹೇಳಿರುವರು. ಆ ವಿಷಯದಲ್ಲಿ ಹೇಳುತ್ತಾರೆ.) ಜನಃ=ಮೊಳಕಾಲುಗಳಿಂದಲೇ ಜೀವಿಸಿಕೊಂಡಿರತಕ್ಕ ಜನರು (ಅಂದರೆ ಕಷ್ಟದಿಂದ ಜೀವಿಸಿಕೊಂಡು ಇರತಕ್ಕವರು) ಸುಮಹತ್=ಅತಿಮಹತ್ತಾದ, ದುಃಖಂ= ದುಃಖವನ್ನು, ಪ್ರಾಪ್ಯಾಪಿ = ಹೊಂದಿಯೂ ಕೂಡ, ಸುಖಲೇಶಾಪ್ತಯೇ = ಸುಖಲೇಶವನ್ನು ಹೊಂದುವುದಕ್ಕಾಗಿ, ಯತತೇ = ಪ್ರಯತ್ನಪಡುತ್ತಾನೋ, (ಆದುದರಿಂದ) ಸುಖಹಾನೌ = ಅತ್ಯಲ್ಪವಾದ ಸುಖಕ್ಕೂ ನಾಶವಾಗುವುದಾದರೆ, ಮೋಕ್ಷಾಯ = ಮಹತ್ತಾದ ದುಃಖವನ್ನು ಬಿಡುವುದಕ್ಕಾಗಿ, ಕಃ ಪುಮಾನ್ = ಯಾವ ಪುರುಷನು, ಯತೇತ್ = ಪ್ರಯತ್ನವನ್ನು ಮಾಡಿಯಾನು? (ಯಾರೊಬ್ಬನೂ ಇಲ್ಲ. ಅಂತೂ ಸುಖನಾಶಕ್ಕಾಗಿ ಯಾರೂ ಪ್ರಯತ್ನ ಮಾಡಲಿಕ್ಕಿಲ್ಲ.) (ಮತ್ತು ಸಾಂಸಾರಿಕ ಸುಖವು ದುಃಖಕ್ಕಿಂತ ಅಲ್ಪವೆಂದು ಪ್ರಮಿತವೂ ಆಗಲಿಲ್ಲ. ಏಕೆಂದರೆ— ಯಾವುದಾದರೋ ಒಂದು ಜನ್ಮದಲ್ಲಿ ಇವನು ದುಃಖಿತನಾಗುತ್ತಾನೆ; ಯಾವುದೋ ಒಂದು ಜನ್ಮದಲ್ಲಿ ರಾಜಾಧಿರಾಜನಾಗುತ್ತಾನೆ. ಕೆಲವು ವೇಳೆ ನರಕವನ್ನು ಅನುಭವಿಸುತ್ತಾನೆ. ಕೆಲವು ವೇಳೆ ಸ್ವರ್ಗವನ್ನು ಅನುಭವಿಸುತ್ತಾನೆ. **ಧರ್ಮಾರ್ಥಕಾಮಾಃ ಸರ್ವೇಽಪಿ ನ ನಿತ್ಯಾ ಮೋಕ್ಷ ಏವ ತು । ನಿತ್ಯಸ್ತಸ್ಮಾತ್ತದರ್ಥಾಯ ಯತೇತ ಮತಿಮಾನ್ನರಃ । ಅನಿತ್ಯತ್ವಾತ್ಸದುಃಖತ್ವಾನ್ನಧರ್ಮಾದ್ಯಾಃ ಪರಂ ಸುಖಂ । ಮೋಕ್ಷ ಏವ ಪರಾನಂದಃ ಸಂಸಾರೇ ಪರಿವರ್ತತಾಂ’** । ಇತ್ಯಾದಿ ಮೋಕ್ಷಶಾಸ್ತ್ರಗಳಲ್ಲಿ ಯಾವುದು ಸಾಂಸಾರಿಕ ಸುಖ ಇದೆಯೋ ಅದು ಸಮಸ್ತ ದುಃಖವಿಲ್ಲದಿರುವ ಮೋಕ್ಷದಲ್ಲಿರತಕ್ಕ ಪರಮಾನಂದವನ್ನು ಅಪೇಕ್ಷಿಸಿಕೊಂಡು ಅಲ್ಪತ್ವಾಭಿಪ್ರಾಯದಿಂದ ಹೇಳಿದ್ದು.) ॥ ೯೨ ॥ ೯೩ ॥ ೯೪ ॥ ೯೫ ॥ ೯೬ ॥ ೯೭ ॥

ಮಹತ್ತಾದ ದುಃಖವನ್ನು ಬಿಡುವುದರಿಂದ ಅಲ್ಪವಾದ ಸುಖವು ಶ್ರೇಷ್ಠವು ಎನ್ನುವುದನ್ನು ಪ್ರಕಾರಾಂತರದಿಂದ ಉಪಪಾದಿಸುತ್ತಾರೆ—

**ಮೂ ॥ ಅಲ್ಪಾಚ್ಚ ಸುಖನಾಶಾದ್ಧಿ ಬಿಭೇತ್ಯತಿತರಾಂ ಜನಃ ।**
**ಮಹಚ್ಚ ದುಃಖಮಾಪ್ನೋತಿ ಸುಖನಾಶನಿವೃತ್ತಯೇ ॥ ೯೮ ॥**

ನ ಚ ರಾಗನಿಮಿತ್ತಂ ತದ್ವೀತರಾಗಾ ಅಪಿ ಸ್ಫುಟಂ ।
ನಾರದಾದ್ಯಾಃ ಸುಖಾರ್ಥಾಯ ಸಹಂತೇ ದುಃಖಮಂಜಸಾ ॥ ೯೯ ॥
ಯುದ್ಧಾದಿದರ್ಶನಂ ಯಸ್ಮಾತ್ಸುದುಃಖೇನಾಪಿ ಕುರ್ವತೇ ।
ಯದೇಂದ್ರವೈರೋಚನಯೋರ್ಬ್ರಹ್ಮಾಸ್ತ್ರಾಭ್ಯಾಂ ಸುತಾಪಿತಾಃ ॥೧೦೦॥
ಅಪಿ ನೈವಾಜಹುರ್ಯುದ್ಧರಸಾತ್ತೇ ನಾರದಾದಯಃ ।
ಇತಿ ಸ್ಕಾಂದವಚಸ್ತಸ್ಮಾತ್ಸುಖಾಭಾವಾಯ ಕೋ ಯ ತೇತ್ ॥ ೧೦೧ ॥

ಅ ॥ ಅಲ್ಪಾಚ್ಚ ಸುಖನಾಶಾತ್ = ಅಲ್ಪವಾದ ಸುಖದ ನಾಶದೆಶೆಯಿಂದ, ಜನಃ= ಜನವು, ಅತಿತರಾಂ=ಅತ್ಯಂತವಾಗಿ, ಬಿಭೇತಿ=ಭಯಪಡುತ್ತದೆ. ಹಿ=ಪ್ರಸಿದ್ಧವು. ಸುಖನಾಶ ನಿವೃತ್ತಯೇ=ಪ್ರಸಕ್ತವಾದ ಸುಖನಾಶಹೇತುವಿನ ನಿವೃತ್ತಿಗಾಗಿ, ಮಹಚ್ಚ = ಮಹತ್ತಾದ, ದುಃಖಂ=ದುಃಖವನ್ನೂ, ಆಪ್ನೋತಿ=ಹೊಂದುತ್ತದೆ. (ಹಾಗಾದರೆ— ಮಧು ವಿಷಗಳಿಂದ ಮಿಶ್ರವಾದ ಅನ್ನದ ಭೋಜನ ಪರಿತ್ಯಾಗವು ಹೇಗೆಂದರೆ- ಬಹುತರವಾದ ಸುಖಹಾನಿಯಿಂದಲೇ ಎನ್ನುತ್ತೇವೆ. (ಇದಾಗುತ್ತಿತ್ತು.) ಆದರೆ— ರಾಗಿಗಳು ವೀತರಾಗಿಗಳು ಎಂದು ಪುರುಷರು ಎರಡು ವಿಧದವರು ಅವರಲ್ಲಿ ರಾಗಿಗಳು ಸುಖಕ್ಕಾಗಿ ದುಃಖವನ್ನೂ ಅನುಭವಿಸುತ್ತಾರೆ. ಅವರು ಮಧುವಿಷಗಳಿಂದ ಮಿಶ್ರವಾದಾಗ್ಯೂ, ಅನ್ನವನ್ನು ಮಧುವಾಗಿರುವುದರಿಂದ ಆಪಾತ ರಮಣೀಯವಾಗಿ ವಿಷಸಂಯೋಗದಿಂದ ಸಂಹರಿಸಲಿ, ಸಂಹರಿಸದೆ ಇರಲಿ, ಉಪಭೋಗಿಸು ವೆವು. ಯಾರು ತಾನೇ ಹಸ್ತಗತವಾದ ಆಪಾತಸುಖವನ್ನು ಪಾದಗತವನ್ನಾಗಿ ಮಾಡುತ್ತಾರೆ? ಎಂದರೆ— ಕೈಗೆ ಸಿಕ್ಕಿದ ಸುಖವನ್ನು ಕಾಲಡಿಗೆ ಹಾಕುತ್ತಾರೆ. ಎಂದಾಲೋಚಿಸಿ ಉಪಭೋಗಿ ಸುತ್ತಾರೆ. ೨ ರಾಗರಹಿತರಾದವರೂ, ಅಂತಹ ಅನ್ನಾದಿಗಳ ಉಪಭೋಗದಿಂದುಂಟಾಗುವ ಆಪತ್ತನ್ನು ಆಲೋಚಿಸುವವರಾಗಿ ಸ್ವರ್ಗವೂ ಕೂಡ, ಕೋಪಗೊಂಡ ಹಾವಿನ ಫಣಾಮಂಡಲದ ಛಾಯಕ್ಕೆ ಸದೃಶವು ಎಂದು ಬಿಟ್ಟು ಬಿಡುತ್ತಾರೆ, ಎಂದರೆ—) ತತ್=ಪ್ರಾಪ್ಯಾಪಿ ದುಃಖಂ ಇತ್ಯಾದಿಗಳಿಂದ ಹೇಳಲ್ಪಟ್ಟದ್ದು, ರಾಗನಿಮಿತ್ತಂ=ರಾಗವೇ ನಿಮಿತ್ತವಾಗಿ ಉಳ್ಳದ್ದು, ಮತ್ತೂ ತತ್=ಮೋಕ್ಷೇಚ್ಛುಗಳಾದರೂ ರಾಗರಹಿತರಾದವರು. ಆದುದರಿಂದ ಸುಖವನ್ನು ಅಪರಿಸದೆ ದುಃಖಧ್ವಂಸಕ್ಕೇನೇ ಪ್ರಯತ್ನ ಮಾಡುತ್ತಾರೆ ಎನ್ನುವುದೂ, ನ=ಕೂಡುವುದಿಲ್ಲ. ಏಕೆಂದರೆ- ಸ್ಫುಟಂ=ಸ್ಪಷ್ಟವಾಗಿ ಶ್ರುತ್ಯಾದಿಗಳಲ್ಲಿ ಪ್ರಸಿದ್ಧವಾದ, ವೀತರಾಗಾಃ ಅಪಿ=ಹೋಗಲ್ಪಟ್ಟ ರಾಗ ವುಳ್ಳವರಾದಾಗ್ಯೂ, ನಾರದಾದ್ಯಾಃ = ನಾರದರೇ ಮೊದಲಾದವರು, ಸುಖಾರ್ಥಾಯ = ಅಲ್ಪ ವಾದ ಸುಖರೂಪವಾದ ಅರ್ಥಕ್ಕಾಗಿ, ಯಸ್ಮಾತ್ =ಯಾವ ಕಾರಣದಿಂದ, ಅಂಜಸಾ=ಬಹಳ ವಾಗಿ, ದುಃಖಂ=ದುಃಖವನ್ನು, ಸಹಂತೇ=ಸಹಿಸುತ್ತಾರೆ. (ಇದು ಯಾವುದರಿಂದ ತಿಳಿದು ಬರುತ್ತದೆ ಎಂದರೆ—) ಯಸ್ಮಾತ್=ಯಾವ ಕಾರಣದಿಂದ, ನಾರದಾದ್ಯಾಃ=ನಾರದನೇ ಮೊದ ಲಾದವರು, ಸುಖಾರ್ಥಾಯ=ಸುಖರೂಪವಾದ ಪ್ರಯೋಜನಕ್ಕಾಗಿ, ಯುದ್ಧಾದಿದರ್ಶನಂ= ಯುದ್ಧದರ್ಶನ, ದೂರಗಮನಾದಿಗಳಿಂದ ಸಾಧ್ಯವಾದ ಸ್ವಯಂವರದರ್ಶನ ಮೊದಲಾದು ದನ್ನು, ಸುದುಃಖೇನಾಪಿ = ಅತಿ ದುಃಖದಿಂದಲೂ ಕೂಡ, ಕುರ್ವತೇ = ಮಾಡುತ್ತಾರೋ, (ಇದೂ ಕೂಡ ಯಾವುದರಿಂದ ಎಂದರೆ—) ಯದಾ = ಯಾವಾಗ ಇಂದ್ರವೈರೋ ಚನಯೋಃ = ಇಂದ್ರವೈರೋಚನರ, ಬ್ರಹ್ಮಾಸ್ತ್ರಾಭ್ಯಾಂ = ಬ್ರಹ್ಮಾಸ್ತ್ರಗಳಿಂದ, ಸುತಾಪಿತಾ ಅಪಿ = ಅತ್ಯಂತ ಸಂತಾಪಿಸಿಕೊಳ್ಳಲ್ಪಟ್ಟವರಾದಾಗ್ಯೂ, ತೇ ನಾರದಾದ್ಯಾಃ = ಆ ನಾರದನೇ

ಮೊದಲಾದವರು, ಯುದ್ಧರಸಾತ್=ಯುದ್ಧದ ದರ್ಶನ ನಿಮಿತ್ತವಾದ ಸುಖರೂಪವಾದ ಕಾರಣ ದೆಶೆಯಿಂದ, ಯುದ್ಧಂ = ಯುದ್ಧದರ್ಶನವನ್ನು, ನೈವಾಜಹುಃ=ಬಿಡಲೇ ಇಲ್ಲ. ಇತಿ=ಈ ಪ್ರಕಾರ, ಯಸ್ಮಾತ್=ಯಾವಕಾರಣದಿಂದ, ಸ್ಕಾಂದವಚಃ = ಸ್ಕಾಂದ ಪುರಾಣದ ವಚನವು ಇದೆಯೋ, ತಸ್ಮಾತ್=ಆದುದರಿಂದ, ಸುಖಾಭಾವಾಯ=ಸುಖಾಭಾವಕ್ಕಾಗಿ, (ಹೋಗಲ್ಪಟ್ಟ ರಾಗವುಳ್ಳವನಾದಾಗ್ಯೂ) ಕಃ=ಯಾವಾತನು, ಯತೇತ = ಪ್ರಯತ್ನಮಾಡುವನು? ॥ ೯೮ ॥ ॥ ೯೯ ॥ ೧೦೦ ॥ ೧೦೧ ॥

ಹೀಗೆ ಪರರಿಂದ ನಿರೂಪಿಸಿಕೊಳ್ಳಲ್ಪಟ್ಟ ಮೋಕ್ಷದಲ್ಲಿ ದುಃಖಾಭಾವವನ್ನು ಅಂಗೀಕರಿಸಿ ಕೊಂಡು ಅಲ್ಲಿ ಪ್ರವೃತ್ತಿಯಿಲ್ಲವೆಂದು ಆಗಬೇಕಾಗುವುದು ಎಂದು ಹೇಳಲ್ಪಟ್ಟಿದೆ. ಈಗಲಾದರೂ ದುಃಖಾಭಾವವೂ ಕೂಡ ಕೂಡುವುದಿಲ್ಲವೆನ್ನುತ್ತಾರೆ.

**ಮೂ ॥ ವಿಮುಕ್ತೋ ದುಃಖಯುಗ್ಯಸ್ಮಾಚ್ಚೇತನಃ ಸಂತ್ಸುಖೋಜ್ಝಿತಃ ।**
**ಪ್ರತಿಪನ್ನೋ ಯಥೇತ್ಯೇವ ಚಾನುಮಾ ಕೇನ ವಾರ್ಯತೇ ॥ ೧೦೨ ॥**

**ಅ ॥** ವಿಮುತಃ = ಮುಕ್ತನೆಂದು ಪರರಿಂದ ಅಂಗೀಕೃತನಾದವನು, ದುಃಖಯುಕ್= ದುಃಖದಿಂದಕೂಡಿದವನು, ಯಸ್ಮಾಚ್ಚೇತನಃ ಸನ್‌ಸುಖೋಜ್ಝಿತಃ=ಚೇತನನಾಗಿದ್ದು ಸುಖದಿಂದ ರಹಿತನಾದುದರಿಂದ, ಪ್ರತಿಪನ್ನೋ ಯಥಾ=ನರಕದಲ್ಲಿದ್ದ ಪ್ರಜೆಯಂತೆ. ಇತ್ಯೇವಚ ಅನುಮಾ= ಇಂತಹ ಅನುಮಾನವು, ಕೇನ = ಯಾರಿಂದ, ವಾರ್ಯತೇ=ನಿವಾರಿಸಲ್ಪಡುತ್ತದೆ ? ' ಯದಿ ಮುಕ್ತಃ ಸುಖೀ ನ ಸ್ಯಾತ್ ತದಾ ಅನಾತ್ಮಾ ವಾ ದುಃಖೀ ವಾ ಸ್ಯಾತ್ ಸಮಂತವತ್ ' ಇದು ಮೊದಲಾದ ಅತಿಪ್ರಸಂಗಗಳನ್ನು ತಿಳಿಯಬೇಕು. ॥ ೧೦೨ ॥

' ಶ್ರುತಯೋ ಯತಃ ' ಎಂದು ಮೊದಲು ಹೇಳಿದ್ದನ್ನು ಈಗ ವಿಸ್ತರಿಸುತ್ತಾರೆ—

**ಮೂ ॥ ಸರ್ವಶ್ರುತಿಪುರಾಣೇಷು ಸುಖಭಾವೋಕ್ತಿತಸ್ತಥಾ ।**
**ಮುಕ್ತೌ ನ ಗ್ರಾಹ್ಯಮೇವೈತತ್ಸುಖಾಭಾವಮತಂ ಬುಧೈಃ ॥ ೧೦೩ ॥**
**ಸೋಽನಾನಂದಾದ್ವಿಮುಕ್ತಃ ಸನ್ನಾನಂದೀ ಭವತಿ ಸ್ಫುಟಂ ।**
**ನಿರ್ಗುಣೇ ಬ್ರಹ್ಮಣಿ ಮಯಿ ಧಾರಯನ್ವಿಶದಂ ಮನಃ ॥ ೧೦೪ ॥**
**ಪರಮಾನಂದಮಾಪ್ನೋತಿ ಯತ್ರ ಕಾಮೋಽವಸೀಯತೇ ।**
**ನ ವಿಷ್ಣುಸದೃಶಂ ದೈವಂ ನ ಮೋಕ್ಷಸದೃಶಂ ಸುಖಂ ॥ ೧೦೫ ॥**
**ನ ವೇದಸದೃಶಂ ವಾಕ್ಯಂ ನ ವರ್ಣೋಽಂ(ರ್ಣೋಽs)ಕಾರಸಂಮಿತಃ ।**
**ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ॥ ೧೦೬ ॥**
**ಕಾಮಸ್ಯ ಯತ್ರಾಪ್ತಾಃ ಕಾಮಾಃ ತತ್ರ ಮಾಮಮೃತಂ ಕೃಧಿ ।**
**ಇತಿ ಶ್ರುತಿಪುರಾಣಾನಿ ತತ್ರ ತತ್ರ ವದಂತಿ ಹಿ ॥ ೧೦೭ ॥**
**ಅತೋ ಮೋಕ್ಷೇ ಸುಖಾಭಾವ ಇತಿ ಯತ್ಕಿಂಚಿದೇವ ಹಿ ।**
**ಶಿರಃ ಕರಾದ್ಯಭಾವಶ್ಚ ನ ಮುಕ್ತಸ್ಯ ಭವೇತ್ಕ್ವಚಿತ್ ।**
**ಶ್ರುತಯಶ್ಚ ಪುರಾಣಾನಿ ಮಾನಮತ್ರ ಬಹೂನಿ ಚ ॥ ೧೦೮ ॥**

ಅ || ಸರ್ವಶ್ರುತಿಪುರಾಣೇಷು=ಎಲ್ಲಾ ಶ್ರುತಿಪುರಾಣಗಳಲ್ಲಿ, ಮುಕ್ತೌ=ಮುಕ್ತಿಯಲ್ಲಿ, ಸುಖಭಾವೋಕ್ತಿತಸ್ತಥಾ=ಸುಖವಿದೆಯೆಂದು ಪ್ರತಿಪಾದಿಸತಕ್ಕ ಉಕ್ತಿಯಿಂದಲೂ, ಬುಧೈಃ= ಜ್ಞಾನಿಗಳಿಂದ, ಏತತ್ಸುಖಾಭಾವಮತಂ=ಈ ಸುಖವಿಲ್ಲವೆನ್ನುವ ಈ ಮತವು, ನ ಗ್ರಾಹ್ಯಮೇವ= ಸ್ವೀಕರಿಸಲಿಕ್ಕೇನೇ ಕೂಡದು. (ಆ ಶ್ರುತ್ಯಾದಿಗಳನ್ನುದಾಹರಿಸುತ್ತಾರೆ.) ಸಃ=ಆ ಮುಕ್ತನು, ಅನಾನಂದಾತ್=ದುಃಖದೆಶೆಯಿಂದ, ವಿಮುಕ್ತಃಸನ್=ಬಿಡಲ್ಪಟ್ಟವನಾಗಿ, ಸ್ಫುಟಂ=ಸ್ಪಷ್ಟವಾಗಿ, ಆನಂದೀಭವತಿ=ಆನಂದವುಳ್ಳವನು ಆಗುತ್ತಾನೆ. (ಇದರಿಂದ '**ಸೋಽನಾನಂದಾದ್ವಿಮುಕ್ತಃ ಆನಂದೀ ಭವತಿ**' ಎನ್ನುವ ಶ್ರುತಿಯನ್ನು ತೆಗೆದುಕೊಳ್ಳತಕ್ಕದು) ನಿರ್ಗುಣೇ = ಸತ್ವ-ರಜ-ಸ್ತಮೋ ಗುಣರಹಿತನಾದ, ಬ್ರಹ್ಮಣಿ=ಗುಣಪರಿಪೂರ್ಣನಾದುದರಿಂದ ಬ್ರಹ್ಮಶಬ್ದವಾಚ್ಯನಾದ, ಮಯಿ=ನನ್ನಲ್ಲಿ, ವಿಶದಂ=ವಿಸ್ತಾರವಾದ, ನಿರ್ಮಲವಾದ, ಮನಃ=ಮನಸ್ಸನ್ನೂ, ಧಾರಯನ್= ಧರಿಸುವವನಾಗಿ, ಪರಮಾನಂದಂ=ಉತ್ಕೃಷ್ಟವಾದ ಆನಂದವನ್ನು, ಆಪ್ನೋತಿ=ಹೊಂದುತ್ತಾನೆ. ಯತ್ರ=ಎಲ್ಲಿ ಪರಮಾನಂದವು ಪ್ರಾಪ್ತವಾಗುತ್ತಿರಲು, ಕಾಮಃ=ಸ್ಪೃಹೆಯು, ಅವಸೀಯತೇ= ಅವಸಾನವನ್ನು ಹೊಂದುತ್ತದೋ, (ಇದು ಭಾಗವತದಲ್ಲಿ ಭಗವದ್ವಾಕ್ಯವು.) ವಿಷ್ಣುಸದೃಶಂ= ಶ್ರೀ ಹರಿಗೆ ಸದೃಶವಾದ, ದೈವಂ=ದೈವವು, ನ=ಇಲ್ಲ. ಮೋಕ್ಷಸದೃಶಂ=ಮುಕ್ತಿಗೆ ಸಮಾನ ವಾದ, ಸುಖಂ=ಸುಖವು, ನ=ಇಲ್ಲ. ವೇದಸದೃಶಂ = ವೇದಕ್ಕೆ ಸದೃಶವಾದ, ವಾಕ್ಯಂ= ವಾಕ್ಯವು, ನ=ಇಲ್ಲ. ಅಕಾರಸಂಮಿತಃ=ಅಕಾರ ಸದೃಶವಾದ, ಅಥವಾ ಓಂಕಾರಸಂಮಿತಃ= ಓಂಕಾರ ಸದೃಶವಾದ, ವರ್ಣಃ=ಅಕ್ಷರವು, ನ=ಇಲ್ಲ. (ಇದೂ ಪುರಾಣವಾಕ್ಯವು) ಯತ್ರ= ಯಾವಲೋಕದಲ್ಲಿ, ಆನಂದಾಶ್ಚ = ಆನಂದಗಳೂ, (ಸ್ವರೂಪಸುಖಗಳೂ) ಮೋದಾಶ್ಚ= ಸಂತೋಷವಿಶೇಷಗಳೂ, ಮುದಃ=ವಿಷಯಗಳಿಂದ ಅಭಿವ್ಯಕ್ತವಾಗುವ ಸುಖಗಳೂ, ಪ್ರಮುದಃ= ಪ್ರಕೃಷ್ಟವಿಷಯಗಳಿಂದ ಅಭಿವ್ಯಕ್ತವಾಗುವ ಸುಖಗಳೂ, ಆಸತೇ=ಇರುತ್ತಾವೋ, ಯತ್ರ= ಎಲ್ಲಿ, ಕಾಮಸ್ಯಕಾಮಾಃ=ಇಚ್ಛೆಯ ವಿಷಯಗಳೂ, ಆಪ್ತಾಃ = ಪರ್ಯಾಪ್ತಗಳಾಗಿದ್ದಾವೋ, ತತ್ರ=ಅಲ್ಲಿ, ಮಾಂ=ನನ್ನನ್ನು, ಅಮೃತಂ=ಮುಕ್ತನನ್ನಾಗಿ, ಕೃಧಿ=ಮಾಡು. (ಹೀಗೆ ವಾಯು ದೇವರನ್ನು ಕುರಿತು ಪ್ರಾರ್ಥನೆಯು.) ಶ್ರುತಿಯ ಸಾಮ್ಯವನ್ನು ತೋರಿಸುವುದಕ್ಕಾಗಿ ಶ್ರುತಿಗಳ ಮಧ್ಯದಲ್ಲಿ ಪುರಾಣವನ್ನು ಹೇಳಿರುವರು ) (ಉದಾಹೃತಗಳಾದ ಶ್ರುತ್ಯಾದಿಗಳ ಫಲವನ್ನುಪ ಸಂಹಾರಮಾಡುತ್ತಾರೆ.) ಇತಿ= ಹೀಗೆ, ಶ್ರುತಿಪುರಾಣಾನಿ = ಶ್ರುತಿಪುರಾಣಗಳು, ತತ್ರ ತತ್ರ= ಆಯಾವ ಪ್ರದೇಶದಲ್ಲಿ, ಹಿ=ಯಾವ ಕಾರಣದಿಂದ, ವದಂತಿ= (ಮುಕ್ತನಿಗೆ ಸುಖವನ್ನೂ) ಹೇಳು ತ್ತವೋ, ಅತಃ=ಆದುದರಿಂದ, ಮೋಕ್ಷೇ=ಮೋಕ್ಷದಲ್ಲಿ. ಸುಖಾಭಾವ ಇತಿ = ಸುಖವಿಲ್ಲವೆನ್ನು ವುದು, ಯತ್ಕಿಂಚಿದೇವಹಿ=ಅತ್ಯಲ್ಪವಾದುದೇ, ಹಿ=ಪ್ರಸಿದ್ಧವು. (ಮುಕ್ತನಿಗೆ ಸುಖಾಭಾವ ವನ್ನುಪಪಾದಿಸುವುದಕ್ಕಾಗಿ ಶರೀರರಾಹಿತ್ಯವು ಸಾಂಖ್ಯಾದಿಗಳಿಂದ ಯಾವುದು ಹೇಳಲ್ಪಟ್ಟದೋ. ಅದು ಅಸಿದ್ಧವು ಆಗಿದೆ ಎನ್ನುತ್ತಾರೆ.) ಮುಕ್ತಸ್ಯ=ಮುಕ್ತನಿಗೆ, ಕ್ವಚಿತ್ = ಎಲ್ಲಿಯೂ, ಶಿರಃ ಕರಾದ್ಯಭಾವಶ್ಚ= (ಕೇವಲ ಸುಖಾದ್ಯಭಾವವು ಅಲ್ಲ. ಮತ್ತೆ) ಶಿರಸ್ಸು ಹಸ್ತ ಮೊದಲಾದ ಅವಯವಗಳ ಅಭಾವವೂ ಕೂಡ, ನ ಭವೇತ್ = ಆಗಲಾರದು. (ಯಾವಕಾರಣದಿಂದ, ಎಂದರೆ—) ಚ=ಯಾವಕಾರಣದಿಂದ, ಶ್ರುತಯಃ = ಶ್ರುತಿಗಳೂ, ಬಹೂನಿ ಪುರಾಣಾನಿ ಚ= ಬಹುಪುರಾಣಗಳೂ ಕೂಡ, ಅತ್ರ = ಶಿರಸ್ಸು ಮೊದಲಾದ ಅವಯವಗಳು ಇವೆ ಎನ್ನುವಲ್ಲಿ, ಮಾನಂ=ಪ್ರಮಾಣವಾಗಿ, (ಸಂತಿ=ಇರುತ್ತವೆ.) ॥ ೧೦೩ ॥ ೧೦೪ ॥ ೧೦೫ ॥ ೧೦೬ ॥ ೧೦೭ ॥ ೧೦೮ ॥

ಸ್ಪಷ್ಟವಾದ ಅರ್ಥವಿದ್ದಪ್ರಯುಕ್ತ ಪುರಾಣವನ್ನು ಆದಿಯಲ್ಲಿ ಉದಾಹರಿಸುತ್ತಾರೆ—

ಮೂ ॥ ನ ವರ್ತತೇ ಯತ್ರ ರಜಸ್ತಮಸ್ತಯೋಃ
ಸತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ ॥ ೧೦೯ ॥
ನ ಯತ್ರ ಮಾಯಾ ಕಿಮುತಾಪರೇ ಹರೇ-
ರನುವ್ರತಾ ಯತ್ರ ಸುರಾಸುರಾರ್ಚಿತಾಃ ॥
ಶ್ಯಾಮಾವದಾತಾಃ ಶತಪತ್ರಲೋಚನಾಃ
ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ ॥ ೧೧೦ ॥
ಸರ್ವೇ ಚತುರ್ಬಾಹವ ಉನ್ಮಿಷನ್ಮಣಿ
ಪ್ರವೇಕನಿಷ್ಕಾಭರಣಾಃ ಸುವರ್ಚಸಃ ॥
ಪ್ರವಾಲವೈಡೂರ್ಯಮೃಣಾಲವರ್ಚಸಾಂ
ಪರಿಸ್ಫುರತ್ಕುಂಡಲಮೌಲಿಮಾಲಿನಾಂ ॥ ೧೧೧ ॥
ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜತೇ
ಲಸದ್ವಿಮಾನಾವಲಿಭಿರ್ಮಹಾತ್ಮನಾಂ ॥
ವಿದ್ಯೋತಮಾನಪ್ರಮದೋತ್ತಮಾಭಿಃ
ಸವಿದ್ಯುದಭ್ರಾವಲಿಭಿರ್ಯಥಾ ನಭಃ ॥ ೧೧೨ ॥
ಶ್ರೀರ್ಯತ್ರ ರೂಪಿಣ್ಯುರುಗಾಯ ಪಾದಯೋಃ
ಕರೋತಿ ಮಾನಂ ಬಹುಧಾ ವಿಭೂತಿಭಿಃ ॥
ಋಚಾಂ ತ್ವಃ ಪೋಷಮಾಸ್ತೇ ಪುಪುಷ್ವಾನ್
ಗಾಯತ್ರಂ ತ್ವೋ ಗಾಯತಿ ಶಕ್ವರೀಷು ॥ ೧೧೩ ॥
ಬ್ರಹ್ಮಾ ತ್ವೋ ವದತಿ ಜಾತವಿದ್ಯಾಂ
ಯಜ್ಞಸ್ಯ ಮಾತ್ರಾಂ ವಿಮಿಮೀತ ಉ ತ್ವಃ ॥
ಕಾಮಾನ್ನರೂಪೀ ಚರತೀತಿ ಪೂರ್ವ
ಶ್ರುತ್ಯಾ ಪುರಾಣೋಕ್ತಿಭಿರಪ್ಯದೋಷಃ ॥
ದೇಹಃ ಸ್ವರೂಪಾತ್ಮಕ ಏವ ತೇಷಾಂ
ಮುಕ್ತಿಂ ಗತಾನಾಮಪಿ ಚೇಯತೇ ಹಿ ॥ ೧೧೪ ॥

ಅ ॥ ಯತ್ರ=ಯಾವ ಲೋಕದಲ್ಲಿ, ರಜಃ=ರಜೋಗುಣವು, ನ ವರ್ತತೇ=ಇರುವುದಿಲ್ಲವೋ, ತಮಃ=ತಮೋ ಗುಣವೂ, ನ ವರ್ತತೇ=ಇರುವುದಿಲ್ಲವೋ, ತಯೋಃ=ಆ ರಜಸ್ತಮಸ್ಸುಗಳ, ಮಿಶ್ರಂ=ಸಹಚರಿತವಾದ ಸತ್ವಂಚ=ಸತ್ವಗುಣವೂ, ನ ವರ್ತತೇ=ಇರುವುದಿಲ್ಲವೋ (ಅಂದರೆ— ರಜ ಆದಿ ಗುಣಗಳಿಗೆ ಬಂಧಕಗಳಾಗಿ ವ್ಯಾಪಾರವಿಲ್ಲದಿರುವಿಕೆಯು.) ಕಾಲವಿಕ್ರಮಃ=ಕಾಲಸಾಮರ್ಥ್ಯಕೃತವಾದ ಭಾವವಿಕಾರವು, ನ ಚ=ಇಲ್ಲ. ಯತ್ರ=ಎಲ್ಲಿ, ಮಾಯಾ=ಪ್ರಕೃತಿಯು, ನ=ಬಂಧಕವಾಗಿ ಇಲ್ಲವೋ, ಅಪರೇ=ಮಹದಾದಿಗಳು, ನ ವರ್ತಂತೇ ಇತಿ ಕಿಮುತ = ಇರುವುದಿಲ್ಲವೆಂದು ಏನು ಹೇಳಬೇಕು? ಸುರಾಸುರಾರ್ಚಿತಾಃ = ದೇವತೆಗಳಿಂದಲೂ ಸಾಧುಗಳಾದ ಪ್ರಹ್ಲಾದಾದಿಗಳಿಂದಲೂ ಪೂಜಿಸಿಕೊಳ್ಳಲ್ಪಟ್ಟವರಾಗಿ, ಹರೇಃ=ಶ್ರೀಹರಿಗೆ, ಅನುವ್ರತಾಃ=ಸೇವಕರಾಗಿ, ಯತ್ರ=ಎಲ್ಲಿ, ವರ್ತಂತೇ=ಇರುತ್ತಾರೆ. ಶ್ಯಾಮಾವದಾತಾಃ=

ಶ್ಯಾಮವರ್ಣವುಳ್ಳವರೂ, ನಿರ್ಮಲರೂ ಆದವರು, ಶತಪತ್ರಲೋಚನಾಃ = ಕಮಲದಂತೆ ಲೋಚನಗಳುಳ್ಳವರು, ಪಿಶಂಗವಸ್ತ್ರಾಃ=ಪಿಂಗಲವಸ್ತ್ರಗಳುಳ್ಳವರು, ಸುರುಚಃ=ಶೋಭನವಾದ ಪ್ರಭೆಯುಳ್ಳವರು, ಸುಪೇಶಸಃ=ಶೋಭನವಾದ ರೂಪವುಳ್ಳವರು, ಉಸ್ರಿಮನ್ಮಣಿಪ್ರವೇಕನಿಷ್ಕಾಭರಣಾಃ=ರಶ್ಮಿಗಳುಳ್ಳ ರತ್ನಶ್ರೇಷ್ಠಗಳೂ ಮುತ್ತಿನ ಸರಗಳೂ ಇವುಗಳೇ ಆಭರಣಗಳಾಗಿ ಉಳ್ಳವರು, ಸುವರ್ಚಸಃ=ಅತ್ಯಂತ ಬಲವುಳ್ಳವರು, ಚತುರ್ಬಾಹವಃ=ನಾಲ್ಕು ಭುಜಗಳುಳ್ಳವರು, ಸರ್ವೇ=ಎಲ್ಲರೂ, ಹರೇಃ=ಶ್ರೀ ಹರಿಗೆ, ಅನುವೃತಾಃ=ಸೇವಕರಾಗಿ, ವರ್ತಂತೇ=ಇರುತ್ತಾರೆ. ಪ್ರವಾಲವೈಡೂರ್ಯಮೃಣಾಲವರ್ಚಸಾಂ=ಹವಳವು-ವೈಡೂರ್ಯವು-ಕಮಲದ ದಂಡು ಇವುಗಳ ವರ್ಚಸ್ಸುಳ್ಳ, ಪರಿಸ್ಫುರತ್ಕುಂಡಲಮೌಲಿಮಾಲಿನಾಂ = ಪ್ರಕಾಶಮಾನಗಳಾದ ಕುಂಡಲಗಳೂ, ಕಿರೀಟಗಳೂ, ಮಾಲಿಕೆಗಳೂ ಇವುಗಳುಳ್ಳ ಇಂತಹ, ಮಹಾತ್ಮನಾಂ = ಮಹಾನುಭಾವರಾದ ದೇವತೆಗಳ, ವಿದ್ಯೋತಮಾನಪ್ರಮದೋತ್ತಮಾಭಿಃ = ವಿಶೇಷವಾಗಿ ಪ್ರಕಾಶಿಸಿಕೊಂಡಿರುವ ಉತ್ತಮ ಸ್ತ್ರೀಯರುಳ್ಳ ಅಥವಾ ವಿಶೇಷವಾಗಿ ಪ್ರಕಾಶಿಸಿ ಕೊಂಡಿರತಕ್ಕ ಉತ್ತಮ ಸ್ತ್ರೀಯರಿಂದ, ಭ್ರಾಜಿಷ್ಣುಭಿಃ = ಪ್ರಕಾಶಿಸಿಕೊಂಡಿರತಕ್ಕ, ಲಸದ್ವಿಮಾನಾವಲಿಭಿಃ = ಪ್ರಕಾಶಿಸಿಕೊಂಡಿರತಕ್ಕ ವಿಮಾನಗಳ ಪಙ್ಕ್ತಿಗಳಿಂದ, ಯಃ=ಯಾವ ಲೋಕವು, ಸವಿದ್ಯುದಭ್ರಾವಲಿಭಿಃ = ಮಿಂಚುಗಳಿಂದ ಸಹಿತಗಳಾದ ಮೇಘಗಳ ಪಙ್ಕ್ತಿಗಳಿಂದ, ಯಥಾ ನಭಃ=ಆಕಾಶದಂತೆ, ಪರಿತಃ= ಸುತ್ತಮುತ್ತಲೂ, ವಿರಾಜತೇ=ಪ್ರಕಾಶಿಸುತ್ತದೊ, ಯತ್ರ=ಯಾವ ಲೋಕದಲ್ಲಿ, ರೂಪಿಣೀ= ಪ್ರತ್ಯಕ್ಷಳಾದ, ಶ್ರೀಃ = ಸಾಕ್ಷಾಲ್ಲಕ್ಷ್ಮೀದೇವಿಯು, ಉರುಗಾಯಃ ಪಾದಯೋಃ = ಶ್ರೀ ಹರಿಯ ಚರಣಗಳಲ್ಲಿ, ಬಹುಧಾ = ಬಹುಪ್ರಕಾರವಾಗಿರತಕ್ಕ, ವಿಭೂತಿಭಿಃ = ತನ್ನ ಮೂರ್ತಿಗಳಿಂದ, ಮಾನಂ=ಪೂಜೆಯನ್ನು, ಕರೋತಿ=ಮಾಡುತ್ತಾಳೋ. (ಇಂತಹ ಲೋಕವನ್ನು ಶ್ರೀ ಹರಿಯು ತೋರಿಸಿದನು. ಎಂದು '**ತಸ್ಮೈ ಸ್ವಲೋಕಂ ಭಗವಾನ್ ಸಭಾಜಿತಃ ಸಂದರ್ಶಯಾಮಾಸ ಪರಂ ನ ಯತ್ಪದಂ**' ಎನ್ನುವ ಶ್ಲೋಕದಿಂದ ಅನ್ವಯವು) ತ್ವಃ=ಒಬ್ಬ ಬ್ರಹ್ಮನು, ಋಚಾಂ = ಋಕ್ಕುಗಳ, ಪೋಷಂ = ಪುಷ್ಟಿಯನ್ನು, ಪುಪುಷ್ವಾನ್ = ಪುಷ್ಟೀಕರಿಸುವವನಾಗಿ, ಆಸ್ತೇ=ಇರುತ್ತಾನೆ. ತ್ವಃ=ಒಬ್ಬ ಬ್ರಹ್ಮನು, ಶಕ್ವರೀಷು=ಶಕ್ವರೀ ಛಂದಸ್ಕ ಋಕ್ಕುಗಳಲ್ಲಿ, ಗಾಯತ್ರಂ=ಗಾಯತ್ರವೆನ್ನುವ ನಾಮವನ್ನು, ಗಾಯತಿ=ಗಾನಮಾಡುತ್ತಾನೆ. ತ್ವಃ ಬ್ರಹ್ಮಾ= ಮತ್ತೊಬ್ಬ ಬ್ರಹ್ಮನು, ಜಾತವಿದ್ಯಾಂ=ಪೌರುಷೇಯ ವಿದ್ಯೆಯನ್ನು, ವದತಿ=ಉಪದೇಶಿಸುತ್ತಾನೆ. ತ್ವಃ ಉ = ಮತ್ತೊಬ್ಬನು, ಯಜ್ಞಸ್ಯ = ಶ್ರೀ ಹರಿಯ, ಮಾತ್ರಾಂ = ಅಂಶವನ್ನು (ಮತ್ಸ್ಯಾದ್ಯವತಾರವನ್ನು) ವಿಮಿಮೀತೇ=ವಿಶೇಷವಾಗಿ ತಿಳಿಯುತ್ತಾನೆ. ಕಾಮಾನ್ನರೂಪೀ=ಸ್ವೇಚ್ಛಾನುಸಾರವಾದ ಅನ್ನವೂ, ರೂಪವೂ ಇವುಗಳುಳ್ಳವನಾಗಿ, ಚರತಿ=ಸಂಚಾರಮಾಡುತ್ತಾನೆ. ಇತಿ ಪೂರ್ವ ಶ್ರುತ್ಯಾ=ಇದೇಮೊದಲಾಗಿವುಳ್ಳ ಶ್ರುತಿಯಿಂದಲೂ, ಪುರಾಣೋಕ್ತಿಭಿರಪಿ=ಪುರಾಣಗಳ ವಚನಗಳಿಂದಲೂ, ಅದೋಷಃ=ದೋಷರಹಿತವಾದ, ಸ್ವರೂಪಾತ್ಮಕ ಏವ=ಜೀವಸ್ವರೂಪವೇ ಸ್ವರೂಪವಾಗಿವುಳ್ಳ, ದೇಹಃ=ಶರೀರವು, ತೇಷಾಂ ಮುಕ್ತಿಂ ಗತಾನಾಮಪಿ=ಆ ಮುಕ್ತಿಯನ್ನು ಹೊಂದಿದವರಿಗೂ ಕೂಡ, ಈಯತೇ ಹಿ=ಹೊಂದಲ್ಪಡುತ್ತದಷ್ಟೆ; ಪ್ರಮಾಣಪ್ರಮಿತವೇ ಆಗಿದೆ.

**ತಾ** ॥ (1) **ಪುರಾಣವಾಕ್ಯದಲ್ಲಿ 'ಶ್ಯಾಮಾವದಾತಾಃ' ಇತ್ಯಾದಿಗಳಿಂದ ದೇಹವು ತೋರುತ್ತದೆ. ನ 'ವರ್ತತೇ' ಎನ್ನುವಲ್ಲಿ ಪ್ರಕೃತ್ಯಾದ್ಯಭಾವವನ್ನು ಹೇಳಿದರಿಂದ ಪರಮ ಮುಕ್ತಿತ್ವವೂ, ದೇಹಕ್ಕೆ ಸ್ವರೂಪತ್ವವೂ ಅದರಿಂದಲೇ ಅದೋಷತ್ವವು ಸಿದ್ಧವಾಯಿತು ಶ್ರುತಿಯಲ್ಲಿ ಋಗುಚ್ಚಾರಣಾದಿಗಳಿಂದ ದೇಹಿತ್ವವೂ ತೋರುತ್ತದೆ** ॥ ೧೦೯ ॥ ೧೧೦ ॥ ೧೧೧ ॥ ೧೧೨ ॥ ೧೧೩ ॥ ೧೧೪ ॥

ಈ ವಿಷಯದಲ್ಲಿ ಅನುಮಾನವನ್ನು ಹೇಳುತ್ತಾರೆ—

ಮೂ ॥ ಶಿರಃಕರಾದ್ಯೈರಪಿ ಮುಕ್ತಿಭಾಜೋ
ಯುಕ್ತಾ ಯತಸ್ತೇ ಪುರುಷಾ ಇದಾನೀಂ ॥ ೧೧೫ ॥
ಯಥೇತಿ ಪೂರ್ವಾ ಅನುಮಾಶ್ಚ ಜೀವ-
ಸ್ವರೂಪಮಂಗಾದಿಯುಗಾವ (ಪ)ಯಂತಿ ।
ನ ಬ್ರಹ್ಮರೂಪತ್ವಮಮುಷ್ಯ ದೇಹಿನೋ
ಮುಕ್ತಾವಪಿ ಸ್ಯಾತ್ಪ್ರಮಯಾ ಕಥಂಚಿತ್ ॥ ೧೧೬ ॥

ಅ ॥ ಮುಕ್ತಿಭಾಜಃ=ಮುಕ್ತಿಯನ್ನು ಹೊಂದಿದವರು, (ಪಕ್ಷವು) ಶಿರಃ ಕರಾದ್ಯೈರಪಿ=ಶಿರಸ್ಸು-ಕೈಮೊದಲಾದವುಗಳಿಂದಲೂ ಕೂಡ, ಯುಕ್ತಾಃ=ಕೂಡಿದವರು, (ಸಾಧ್ಯ) ಯತಃ ತೇ ಪುರುಷಾಃ=ಯಾವ ಕಾರಣದಿಂದ ಅವರು ಪುರುಷರೋ, (ಅಂದರೆ ಆತ್ಮತ್ವವಿದ್ದ ಪ್ರಯುಕ್ತ,) (ಹೇತುವಿದು) ಇದಾನೀಂ ಯಥಾ = ಅಸ್ಮದಾದಿಗಳಂತೆಯೇ. 'ಇತಿಪೂರ್ವಾಃ' ಎನ್ನುವುದೇ ಮೊದಲಾಗಿವುಳ್ಳ ('ಮುಕ್ತಿರ್ದೇಹಿನಿಷ್ಠಾ ಜೀವಾವಸ್ಥಾತ್ವಾತ್ ಸಂಸಾರವತ್' ಇದು ಮೊದಲಾದ,) ಅನುಮಾಶ್ಚ = ಅನುಮಾನಗಳೂ ಕೂಡ, ಜೀವಸ್ವರೂಪಂ = ಮುಕ್ತಜೀವರ ಸ್ವರೂಪವನ್ನು, ಅಂಗಾದಿಯುಕ್=ಶರೀರವೂ, ಇಂದ್ರಿಯಗಳೂ ಇವುಗಳಿಂದ ಕೂಡಿದ್ದನ್ನಾಗಿ, ಆವ (ಪ) ಯಂತಿ=ತಿಳಿಸಿಕೊಡುತ್ತವೆ. (ಹೀಗೆ ಸಾಂಖ್ಯಾದಿಗಳ ಮತವನ್ನು ತಿರಸ್ಕರಿಸಿ, ಈಗ ಯಾರು ಮೊದಲು ಭಿನ್ನನಾದ ಅಥವಾ ಭಿನ್ನಾಭಿನ್ನನಾದ ಜೀವನಿಗೆ ಮುಕ್ತಿಯಲ್ಲಿ ಪರಬ್ರಹ್ಮನಿಂದ ಅತ್ಯಂತ ಐಕ್ಯವಾಗುತ್ತದೆ ಎಂದು ತಿಳಿಯುತ್ತಾರೋ ಅವರ ಮತವನ್ನು ತಿರಸ್ಕರಿಸುತ್ತಾರೆ.) ಅಮುಷ್ಯ ದೇಹಿನಃ=ಈ ಜೀವನಿಗೆ, ಮುಕ್ತಾವಪಿ=ಮುಕ್ತಿಯಲ್ಲಿಯೂ ಕೂಡ, ಕಥಂಚಿತ್ ಪ್ರಮಯಾ=ಯಾವ ಪ್ರಮಾಣದಿಂದಲೂ, ಬ್ರಹ್ಮರೂಪತ್ವಂ=ಬ್ರಹ್ಮಸ್ವರೂಪತ್ವವು, ನ ಸ್ಯಾತ್=ಆಗಲಾರದು. ಅಥವಾ ಕಥಂಚಿತ್=ಯಾವ ಸಾಧನದಿಂದಲೂ, ನ ಸ್ಯಾತ್=ಆಗಲಾರದು. ಪ್ರಮಯಾ=ಮುಕ್ತಿಯಲ್ಲಿಯೂ ಭೇದವಿಷಯದಲ್ಲಿ ಪ್ರಮಾಣವಿದ್ದಪ್ರಯುಕ್ತ. ॥ ೧೧೫ ॥ ೧೧೬ ॥

ಆ ಪ್ರಮಾಣವನ್ನು ಹೇಳುತ್ತಾರೆ—

ಮೂ ॥ ಸ ಬ್ರಹ್ಮಣಾ ಸಹಿತೋಽಶೇಷಭೋಗಾನ್
ಭುಂಕ್ತೇ ತಥೋಪೇತ್ಯ ಸುಖಾರ್ಣವಂ ತಂ ।
ಯತ್ತತ್ಪರಂ ಜ್ಯೋತಿರುಪೇತ್ಯ ಜೀವೋ
ನಿಜಸ್ವರೂಪತ್ವಮವಾಪ್ಯ ಕಾಮಾನ್ ॥ ೧೧೭ ॥
ಭುಂಕ್ತೇ ಸ ದೇವಃ (ದೈವಂ) ಪುರುಷೋತ್ತಮೋಽ-
ಅತ್ಯೇತಿ ಚೋಕ್ತೋ ಗುಣಪೂರ್ತಿಹೇತೋಃ ।
ಸೇತುಃ ಸ ದೇವೋಽಖಿಲಮುಕ್ತಿಭಾಜಾ-
ಮುತಾಮೃತಸ್ಯೇಷ್ಟ ಇಹೇಶಿತಾ ಯತ್ ॥ ೧೧೮ ॥

ಇತ್ಯಾದಿವಾಕ್ಯೈರ್ಭಗವದ್ವಶಃ ಸನ್
ಭುಂಕ್ತೇಽಖಿಲಾನ್ಮುಕ್ತಿಗತೋಽಪಿ ಭೋಗಾನ್ ।
ಕಾಲೋಽಸ್ಯಸೌ ನೈಕ್ಯಯುತಃ ಪರೇಣ
ಜೀವಸ್ಯ ಕಾಲೋ ಯುತ ಏಷ ಯದ್ವತ್ ॥ ೧೧೯ ॥
ಇತ್ಯಾದಿಕಾ ಅಪ್ಯನುಮಾಃ ಪ್ರಮಾಣಂ
ಮುಕ್ತೌ ಚ ಜೀವಸ್ಯ ಪರತ್ರರೋಧೇ ।
ಕಥಂ ಚ ಯಃ ಪೂರ್ವಮಸೌ ನ ಪಶ್ಚಾತ್
ಭವೇತ್ಸ ಏವೇತ್ಯಪಿ ಯುಕ್ತಿಮೇತಿ ॥ ೧೨೦ ॥
ಯತೋ ನ ದೃಷ್ಟಂ ಯದಭೂನ್ನ ಪೂರ್ವಂ
ಪಶ್ಚಾತ್ತದಾ ಸೇತಿ ಕುತಶ್ಚ ಕಿಂಚಿತ್ ॥ ೧೨೧ ॥

ಅ ॥ ಸಃ=ಮುಕ್ತನು, ಬ್ರಹ್ಮಣಾ=ಬ್ರಹ್ಮನಿಂದ, ಸಹಿತಃ=ಕೂಡಿದವನಾಗಿ, ಅಶೇಷ ಭೋಗಾನ್=ಎಲ್ಲಾ ಭೋಗಗಳನ್ನು, ಭುಂಕ್ತೇ=ಅನುಭವಿಸುತ್ತಾನೆ. (ಇದರಿಂದ '**ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ**' ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು.) ತಥಾ=ಹಾಗೆ, ಸುಖಾರ್ಣವಂ=ಸುಖಪೂರ್ಣನಾದ, ತಂ=ಆ ಶ್ರೀ ಹರಿಯನ್ನು, ಉಪೇತ್ಯ=ಹೊಂದಿ ಎಲ್ಲಾ ಭೋಗಗಳನ್ನು ಅನುಭವಿಸುತ್ತಾನೆ. (ಇದರಿಂದ '**ಏತಮಾನಂದಮಯಮಾತ್ಮಾನಮುಪಸಂಕ್ರಮ್ಯ**' ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು.) ಯತ್=ಯಾವ, ತತ್=ಪ್ರಸಿದ್ಧವಾದ, ಪರಂಜ್ಯೋತಿಃ=ಉತ್ಕೃಷ್ಟವಾದ ಜ್ಯೋತಿರೂಪನಾದ ಶ್ರೀ ಹರಿಯನ್ನು, ಜೀವಃ=ಜೀವನು, ಉಪೇತ್ಯ=ಹೊಂದಿ, ನಿಜಸ್ವರೂಪತ್ವಂ=ತನ್ನ ಸ್ವರೂಪತ್ವವನ್ನು, ಅವಾಪ್ಯ=ಹೊಂದಿ, ಸದಾ=ಯಾವಾಗಲೂ, ಏವಂ=ಹೀಗೆ, ಕಾಮಾನ್=ಅಭೀಷ್ಟಗಳನ್ನು, ಭುಂಕ್ತೇ = ಅನುಭವಿಸುತ್ತಾನೋ, ದೇವಃ = ಕ್ರೀಡಾದಿಗುಣವಿಶಿಷ್ಟನಾದ, ಅಜಃ = ಉತ್ಪತ್ತಿರಹಿತನಾದ ಶ್ರೀ ಹರಿಯು, ಗುಣಪೂರ್ತಿಹೇತೋಃ=ಗುಣಪೂರ್ಣತ್ವರೂಪ ಕಾರಣದಿಂದ, ಪುರುಷೋತ್ತಮಃ=ಪುರುಷೋತ್ತಮನೆಂದೂ, ಆತ್ಮೇತಿ ಚ=ಆತ್ಮನೆಂದೂ, ಉಕ್ತಃ=ಹೇಳಿಸಿಕೊಳ್ಳಲ್ಪಟ್ಟದ್ದಾನೆ. (ಯತ್ತತ್ ಎನ್ನುವುದರಿಂದ '**ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ಏಷ ಆತ್ಮಾ**' ಎನ್ನುವ ಎರಡು ಶ್ರುತಿಗಳನ್ನು ಇಟ್ಟುಕೊಳ್ಳಬೇಕು.) ಸ ದೇವಃ=ಆ ಶ್ರೀ ಹರಿಯು, ಅಖಿಲಮುಕ್ತಿಭಾಜಾಂ=ಎಲ್ಲಾ ಮುಕ್ತಿಯನ್ನು ಹೊಂದಿದವರಿಗೂ, ಸೇತುಃ = ಆಶ್ರಯನು. (ಇದರಿಂದ '**ಅಮೃತಸ್ಯೈಷ ಸೇತುಃ**' ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು.) ಇಹ = ಇಲ್ಲಿ, ಯತ್=ಯಾವ ಕಾರಣದಿಂದ, ಈಶಿತಾ = ನಿಯಾಮಕನೋ, ಅಮೃತಸ್ಯ ಉತ = ಮುಕ್ತವರ್ಗಕ್ಕೂ ಕೂಡ, ಈಷ್ಟೇ=ನಿಯಾಮಕನಾಗಿರುತ್ತಾನೆ. (ಇದರಿಂದ '**ಅಮೃತತ್ವಸ್ಯೇಶಾನೋ ಯದನ್ನೇನಾತಿರೋಹತಿ**' ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು.) (ಉದಾಹರಿಸಲ್ಪಟ್ಟ ವಾಕ್ಯಗಳ ಫಲವನ್ನು ತೋರಿಸುತ್ತಾರೆ.) ಇತ್ಯಾದಿ ವಾಕ್ಯೈಃ = ಇದು ಮೊದಲಾದ ವಾಕ್ಯಗಳಿಂದ, ಮುಕ್ತಿಗತೋಽಪಿ=ಮುಕ್ತಿಯನ್ನು ಹೊಂದಿದವನೂ ಕೂಡ, ಭಗವದ್ವಶಃ ಸನ್=ಶ್ರೀ ಹರಿಯ ಅಧೀನನಾಗಿ, ಅಖಿಲಾನ್ ಭೋಗಾನ್=ಎಲ್ಲಾ ಭೋಗಗಳನ್ನೂ, ಭುಂಕ್ತೇ=ಅನುಭವಿಸುತ್ತಾನೆ. (ಈ ವಿಷಯದಲ್ಲಿ ಅನುಮಾನವನ್ನು ಹೇಳುತ್ತಾರೆ.) ಅಸೌ ಕಾಲಃ =

ಮೋಕ್ಷಸಂಬಂಧಿಯಾದ ಈ ಕಾಲವೂ, ಜೀವಸ್ಯ = ಜೀವನಿಗೆ, ಪರೇಣ = ಶ್ರೀ ಹರಿಯಿಂದ, ಐಕ್ಯಯುತಃ = ಯಾವುದು ಐಕ್ಯವೋ, ಅದರಿಂದ ಯುಕ್ತವಾದುದು, ನ = ಆಗುವುದಿಲ್ಲ. ಕಾಲೋ ಯತಃ = ಕಾಲತ್ವವಿದ್ದುದರಿಂದ, ಏವ ಯದ್ವತ್ = ಸಂಸಾರಕಾಲದಂತೆ, ಇತ್ಯಾದಿಕಾ ಅಪಿ ಅನುಮಾಃ=ಇದು ಮೊದಲಾದ ಅನುಮಾನಗಳೂ ಕೂಡ, ಮುಕ್ತೌ ಚ=ಮುಕ್ತಿಯಲ್ಲಿಯೂ ಜೀವಸ್ಯ=ಜೀವನಿಗೆ, ಪರತ್ವರೋಧೇ=ಪರಬ್ರಹ್ಮತ್ವನಿವಾರಣದಲ್ಲಿ, ಪ್ರಮಾಣಂ=ಪ್ರಮಾಣವು. (ಅದು ಯಾವುದೆಂದರೆ— ಅನುಮಾನವು.) (ಯಾರು ಮೊದಲು ಅತ್ಯಂತಭಿನ್ನನಿಗೆ ಮುಕ್ತಿಯಲ್ಲಿ ಐಕ್ಯವನ್ನು ಹೇಳುತ್ತಾರೋ, ಅವರ ರೀತಿಯಾಗಿ ಐಕ್ಯಶಬ್ದವು ಐಕ್ಯಪರವು. ಪರತ್ವಶಬ್ದವೂ ಐಕ್ಯಪರವೇ. ಯಾರು ಮೊದಲು ಭೇದಾಭೇದಗಳನ್ನು ಅಂಗೀಕರಿಸಿಕೊಂಡು, ಮುಕ್ತಿಯಲ್ಲಿ ಅತ್ಯಂತಾಭೇದವನ್ನು ಹೇಳುತ್ತಾರೋ, ಅವರನ್ನು ಕುರಿತು ಐಕ್ಯಾದಿಶಬ್ದವು ಅತ್ಯಂತಾಭೇದಪರ ವೆಂದು ವ್ಯಾಖ್ಯಾನಮಾಡಬೇಕು. ಅಂತೂ ದೃಷ್ಟಾಂತದೋಷವಿಲ್ಲ. ದೃಷ್ಟಾಂತದಲ್ಲಿರುವ ಜೀವಶಬ್ದವು ಅಹಂಕಾರಾದ್ಯುಪಾಧಿಪರಿಚ್ಛಿನ್ನವಿಶಿಷ್ಟಪರವು. ವಿಶೇಷ್ಯಭೂತ ಚೇತನಮಾತ್ರಪರತ್ವ ವನ್ನು ಇಟ್ಟುಕೊಂಡರೆ ಅಂತಹ ವಿಶೇಷ್ಯಾಂಶಕ್ಕೆ ಪರಮಾತ್ಮನಿಂದ ಐಕ್ಯವೂ ಸಂಸಾರಾವಸ್ಥೆಯೂ ಇದ್ದುದರಿಂದ ಸಾಧ್ಯವೈಕಲ್ಯವು ಬರುವುದು ) (ಸ್ವಕೀಯವಾದ ಆದಿಪದವನ್ನು ವ್ಯಾಖ್ಯಾನ ಮಾಡುತ್ತಾ ಅನುಮಾನಾಂತರವನ್ನು ಹೇಳುತ್ತಾರೆ.) ಯಃ=ಯಾವ ಜೀವನು, ಪೂರ್ವಂ= ಮೊದಲು ಸಂಸಾರದಲ್ಲಿ, ಅಸೌ ನ = ಪರಮಾತ್ಮನಾಗುವುದಿಲ್ಲವೋ, ಅಸೌ = ಈ ಜೀವನು, ಪಶ್ಚಾತ್ = ಮುಕ್ತಿಯಲ್ಲಿ, ಸ ಏವ ಭವೇತ್ = ಆ ಪರಮಾತ್ಮನೇ ಆಗುವನು. ಇತ್ಯಪಿ = ಎನ್ನುವುದೂ ಕೂಡ, ಕಥಂ = ಹೇಗೆ, ಯುಕ್ತಿಂ = ಯುಕ್ತಿಯನ್ನು, ಏತಿ=ಹೊಂದುತ್ತದೆ. (ಅಯುಕ್ತವು.) (ಇದಕ್ಕೆ ವ್ಯಾಪ್ತಿಯನ್ನುಪಪಾದಿಸುತ್ತಾರೆ.) ಯತಃ = ಯಾವ ಕಾರಣ ದೆಶೆಯಿಂದ, ಯತ್ ಕಿಂಚಿತ್=ಯಾವುದಾದರೂ ಘಟಾದಿವಸ್ತುವು, ಪೂರ್ವಂ=ಮೊದಲು, ಯತ್=ಯಾವುದೋ ಒಂದು ಘಟಾದಿಸ್ವರೂಪವು, ನಾಭೂತ್=ಆಗಲಿಲ್ಲವೋ, (ಅಂದರೆ— ಯಾವುದು ಇದ್ದ ವಸ್ತ್ವಂತರದಿಂದ ಏಕೀಭೂತವಾಗಲಿಲ್ಲವೋ,) ತತ್=ಅದು, ಪಶ್ಚಾತ್= ಮೇಲೆ, ಕುತಶ್ಚಿತ್ = ಯಾವುದಾದರೊಂದು ಕಾರಣದಿಂದ, ತತ್ ಆಸ=ಅದು ಆಯಿತು. (ಅದರಿಂದ ಐಕ್ಯವನ್ನು ಹೊಂದಿತು.) ಇತ್ಯೇತತ್=ಇದು, ನ ದೃಷ್ಟಂ = ಕಾಣಲ್ಪಡಲಿಲ್ಲ. (ಈಗ ಕಾಣಲ್ಪಡುವುದಿಲ್ಲ. ಮುಂದಕ್ಕೆ ಕಾಣಿಸಲ್ಪಡಲಾರದು. ಆದುದರಿಂದ ಮೊದಲು ಭಿನ್ನನಾ ದವನು ಮೇಲೆ ಐಕ್ಯವನ್ನು ಹೊಂದಲಾರನು) ॥ ೧೧೭ ॥ ೧೧೮ ॥ ೧೧೯ ॥ ೧೨೦ ॥ ೧೨೧ ॥

ಹೀಗೆ ಭಾಸ್ಕರಾದಿಗಳ ಮತವನ್ನು ತಿರಸ್ಕರಿಸಿ ಸ್ವಾಭಾವಿಕವಾಗಿಯೇ ಶ್ರೀ ಹರಿಯಿಂದ ಜೀವನು ಭಿನ್ನಾಭಿನ್ನನು. ಆತನಿಗೆ ಸಂಸಾರದಲ್ಲಿ ಭೇದವೇ ವ್ಯಕ್ತವಾಗಿದೆ. ಅಭೇದವಾದರೂ ಅವಿದ್ಯಾದಿಗಳಿಂದ ಆವೃತ್ತವಾಗಿರುತ್ತದೆ. ಮುಕ್ತಿಯಲ್ಲಿ ಆದರೂ ಭೇದಾಭೇದಗಳು ಎರಡೂ ವ್ಯಕ್ತಗಳಾಗುತ್ತವೆ, ಎಂದು ಯಾವ ಯಾದವಪ್ರಕಾಶಾದಿಗಳು ಹೇಳುತ್ತಾರೋ ಅವರ ಮತ ವನ್ನು ಈಗ ನಿರಾಕರಿಸುತ್ತಾರೆ—

ಮೂ ॥ ನ ಚೈವ ಮುಕ್ತೇನ (ಕ್ತೌ ತು) ಹರೇಃ ಪೃಥಕ್ತ್ವ-
ಮೈಕ್ಯಂ ತಥಾ ಸ್ಯಾದಿತಿ ಯುಕ್ತಿಮೇತಿ ।
ಯತೋ ನ ಕುತ್ರಾಪಿ ಭಿದಾಭಿದಾ ಚ
ದೃಷ್ಟಾಚಿತಶ್ಚೇತನಯೋಃ ಕುತಶ್ಚಿತ್ ॥ ೧೨೨ ॥

**ಇತ್ಥಂ ಮತಾನಿ ಭ್ರಮಜಾನಿ ಯಸ್ಮಾ-**
**ನ್ಮೋಕ್ಷಂ ಸಮುದ್ದೇಶ್ಯಮಪಿ ಭ್ರಮೇಣ ।**
**ವಿದುರ್ನ ಸಮ್ಯಗ್ಯದಪೀಹ ಲೌಕಿಕಾಃ**
**ಸುಖಂ ಮಮ ಸ್ಯಾದ್ಧಿ ಸದೇತಿ ಜಾನತೇ ॥ ೧೨೩ ॥**

ಅ ॥ ಹರೇಃ = ಶ್ರೀ ಹರಿಗೆ, ಮುಕ್ತೇನ = ಮುಕ್ತನಿಂದ, ಅಥವಾ ಮುಕ್ತೌ ತು= ಮುಕ್ತಿಯಲ್ಲಿ ಆದರೂ, ಪೃಥಕ್ತ್ವಂ=ಭೇದವು, ತಥಾ=ಹಾಗೆ, ಐಕ್ಯಂ=ಐಕ್ಯವು, ಸ್ಯಾತ್= ಆಗುವುದು. ಇತಿ ತಥಾ = ಈ ಮತವೂ ಕೂಡ, ಯುಕ್ತಿಂ = ಯುಕ್ತಿಯನ್ನು, ನೈವೇತಿ= ಹೊಂದುವುದೇ ಇಲ್ಲ. (ಏಕೆಂದರೆ— ಅನುಮಾನವಿರೋಧವನ್ನು ಹೇಳುತ್ತಾರೆ.) ಯತಃ= ಯಾವಕಾರಣದಿಂದ, ಚಿತಃ = ಚೇತನಕ್ಕೆ, ಚೇತನಯಾ = ಚೇತನದಿಂದ, ಭಿದಾಭಿದಾ ಚ= ಭೇದಾಭೇದವೂ ಕೂಡ, ಕುತ್ರಾಪಿ=ಯಾವ ದೇಶದಲ್ಲಿಯೂ, ಕುತಶ್ಚಿತ್ = ಯಾವ ಪ್ರಮಾಣ ದಿಂದಲೂ, ನ ದೃಷ್ಟಾ=ಕಾಣಲ್ಪಡಲಿಲ್ಲ. (ಎನ್ನುವುದರಿಂದ 'ಜೀವೇಶ್ವರೌ ನ ಭಿನ್ನಾಭಿನ್ನೌ ಚೇತನತ್ವಾತ್ ದೇವದತ್ತ ಯಜ್ಞದತ್ತವತ್' 'ಈಶ್ವರೋ ಜೀವೇನ ಭಿನ್ನಾಭಿನ್ನೋ ನ ಭವತಿ ಚೇತನತ್ವಾದ್ಯಜ್ಞದತ್ತವತ್' ಇದುಮೊದಲಾದ ಅನುಮಾನವು ಸೂಚಿತವಾಯಿತು.) (ಮೋಕ್ಷ ವಾದಾರ್ಥವನ್ನುಪಸಂಹಾರಮಾಡುತ್ತಾರೆ.) ಇತ್ಥಂ=ಹಿಂದೆ ಹೇಳಿದಪ್ರಕಾರದಿಂದ, ಮತಾನಿ= ಜೈನಾದಿ ಮತಗಳು, ಭ್ರಮಜಾನಿ=ಭ್ರಾಂತಿಜನ್ಯಗಳು, (ಕೆಲವು ಮತಗಳು ವಿಪ್ರಲಂಭಜನ್ಯಗಳು) (ಆದುದರಿಂದಲೇ ಬಿಡಲರ್ಹಗಳು.) ಹಾಗಾದರೆ— ವಕ್ತೃಗಳಿಗೆ ಕೆಲವು ಕಡೆ ಭ್ರಾಂತಿಯು ಹುಟ್ಟುತ್ತದೆ. ದೋಷವೇನೆಂದರೆ) ಯಸ್ಮಾತ್=ಯಾವಕಾರಣದಿಂದ, (ಮತಗಳನ್ನು ನಿರ್ಮಾಣ ಮಾಡಿದವರು ಪ್ರಾಕರಣಿಕವಲ್ಲದಿರುವ ಪ್ರಸಕ್ತ ಅನುಪ್ರಸಕ್ತಿಯಿಂದ ಬಂದಿರತಕ್ಕ ಅರ್ಥವನ್ನು, ಕಥಂಚಿತ್=ವಿಪರೀತವಾಗಿ ತಿಳಿದವರಾದಾಗ್ಯೂ ಅತ್ಯಂತ ನಿಂದ್ಯರಾಗುವುದಿಲ್ಲ. ಈ ಜೈನಾದಿ ಗಳಾದರೂ) ಸಮುದ್ದೇಶ್ಯಮಪಿ=ಪ್ರಧಾನವಾಗಿ ಉದ್ದೇಶ್ಯವಾದ, ಮೋಕ್ಷಂ ಅಪಿ=ಮೋಕ್ಷವನ್ನೂ ಕೂಡ, ಸಮ್ಯಕ್=ಚೆನ್ನಾಗಿ, ನ ವಿದುಃ=ತಿಳಿಯಲಿಲ್ಲ. (ಮತ್ತೆ) ಭ್ರಮೇಣ=ವೈಪರೀತ್ಯದಿಂದ, ವಿದುಃ=ತಿಳಿಯುತ್ತಾರೆ. ತಸ್ಮಾತ್=ಆದುದರಿಂದ, ಮತಾನಿ=ಅವರಿಂದ ಮಾಡಲ್ಪಟ್ಟ ಮತ ಗಳು, ಭ್ರಮಜಾನಿ=ಭ್ರಮಜನ್ಯಗಳು. (ಮತ್ತೂ ಅತಿಸೂಕ್ಷ್ಮವಾದ ಪ್ರಮೇಯದಲ್ಲಿ ಇವರಿಗೆ ಅಜ್ಞಾನವಿಪರ್ಯಯಗಳು ಅಲ್ಲ; ಮತ್ತೆ ಗೋಪಾಲ ಅವಿಪಾಲರೇ ಮೊದಲಾಗಿವುಳ್ಳ ಪಾಮರ ರಿಂದಲೂ ಕೂಡ ಚೆನ್ನಾಗಿ ತಿಳಿಯಲ್ಪಟ್ಟ ಪ್ರಮೇಯದಲ್ಲಿಯೂ ಇವರಿಗೆ ಅಜ್ಞಾನವಿದೆ ಎನ್ನುವ ಅಭಿಪ್ರಾಯದಿಂದ ಹೇಳುತ್ತಾರೆ.) ಯತ್=ಯಾವಕಾರಣದೆಶೆಯಿಂದ, ಇಹ = ಪ್ರಾಣಿಗಳಲ್ಲಿ, ಲೌಕಿಕಾ ಅಪಿ=ಲೌಕಿಕ ಬುದ್ಧಿರಹಿತರಾದವರೂ ಕೂಡ, ಮಮ=ನನಗೆ, ಸದಾ=ಯಾವಾಗಲೂ, ಸುಖಂ=ಸುಖವು, ಸ್ಯಾತ್=ಆಗಲಿ, ಇತಿ = ಈ ಪ್ರಕಾರ ತಮ್ಮ ಉದ್ದೇಶ್ಯವನ್ನು, ಜಾನತೇ= ತಿಳಿಯುತ್ತಾರೆ. ಹಿ=ಪ್ರಸಿದ್ಧವು. ('ಮಮ ಸತ್ವಂ ಮಾಭೂತ್' ಎಂದು ತನ್ನ ಅಭಾವವನ್ನೇ ಉದ್ದೇಶ್ಯವನ್ನಾಗಿ ತಿಳಿಯುವುದಿಲ್ಲ. ನನಗೆ ಕ್ಲೇಶನಿವೃತ್ತಿಯೇ ಆಗಲಿ ಸುಖವು ಆಗುವುದುಬೇಡ ಎಂದು ತಿಳಿಯುವುದಿಲ್ಲ. ಆದುದರಿಂದ ಅವಿಪಾಲ-ಗೋಪಾಲರಕ್ಕಿಂತಲೂ ಇವರು ಅತಿಮೂಢರು) ಹೀಗೆ ಪಾದಪ್ರತಿಪಾದ್ಯ ವಿಷಯವನ್ನು ಪಾದಗಳಿಗೆ ಸಂಗತಿಯನ್ನು ಸಮರ್ಥಿಸಿದರು. ॥ ॥ ೧೨೨ ॥ ೧೨೩ ॥

**ಈಗ ಈ ಪಾದದ ಅಧಿಕರಣಗಳಲ್ಲಿ ಪೂರ್ವಪಕ್ಷಸಿದ್ಧಾಂತಯುಕ್ತಿಗಳನ್ನು ಹೇಳಲಿಚ್ಛಿಸಿದ ವರಾಗಿ ಪ್ರಸಂಗಸಂಗತಿಯಿಂದ ಸಿಂಹಾವಲೋಕನನ್ಯಾಯದಿಂದ ಜ್ಞಾನಪಾದ, (ಅಧ್ಯಾ. ೩.**

ಪಾದ ೪.) ಕರ್ಮಕ್ಷಯ ಪಾದ (ಅಧ್ಯಾ. ೪. ಪಾದ ೧.) ಇವುಗಳ ಪೂರ್ವಪಕ್ಷಸಿದ್ಧಾಂತ ಯುಕ್ತಿಗಳನ್ನು ಹೇಳುತ್ತಾ ಈ ಪಾದದ ಪೂರ್ವಪಕ್ಷಸಿದ್ಧಾಂತಯುಕ್ತಿಗಳನ್ನು ಹೇಳುವರು.

ಪ್ರಕೃತ ತೃತೀಯಾಧ್ಯಾಯದ ಚತುರ್ಥ ಪಾದದ ಪೂರ್ವಪಕ್ಷಸಿದ್ಧಾಂತಯುಕ್ತಿಯನ್ನು ಹೇಳುತ್ತಾರೆ—

**ಮೂ ॥ ಔದಾರ್ಯಮುಚ್ಚಾವಚಶಕ್ತಿರಾತ್ಮ-**
**ಸ್ವರೂಪದಾರ್ಢ್ಯಂ ಚ ನಿಜಸ್ವಭಾವಃ ।**
**ಸ್ವಾತಂತ್ರ್ಯಮಾಪೂರ್ಣವಿಶೇಷಯೋಗ್ಯತಾ**
**ವಿರೋಧಹಾನಿಶ್ಚ ಚತುರ್ಥಪಾದೇ ॥ ೧೨೪ ॥**
**ವ್ಯವಸ್ಥಿತಿಸ್ತ್ವವಿಶೇಷಸ್ಥಿತಿಶ್ಚ**
**ನಿಷೇಧಸಾಮಾನ್ಯವಿಧಿಕ್ರಿಯಾಣಾಂ ।**
**ವಿಭಕ್ತತಾ ಚಾತ್ವರಯೈವ ಸಿದ್ಧಿ-**
**ರ್ವಿಪಕ್ಷಸಂಪ್ರಾಪ್ತಿವಿರೋಧ (ರುದ್ಧ) ಹೇತವಃ ॥**
**(ವಿಪಕ್ಷಸಂಪ್ರಾಪ್ತಿಕೃತಾಂನಿರೋಧಾಃ) ॥ ೧೨೫ ॥**

ಅ ॥ (೩ನೇ ಅಧ್ಯಾಯದ ೪ನೇ ಪಾದದ ಪೂರ್ವಪಕ್ಷಸಿದ್ಧಾಂತಯುಕ್ತಿಗಳು) (೧ನೇ ಪುರುಷಾರ್ಥಾಧಿಕರಣದಲ್ಲಿ ಬ್ರಹ್ಮಜ್ಞಾನವು ಮೋಕ್ಷಮಾತ್ರಸಾಧನವೋ, ಫಲಾಂತರಕ್ಕೂ ಸಾಧನವೋ ಎಂದು ಸಂಶಯವು ಬಂದರೆ— ಜ್ಞಾನವು ಮೋಕ್ಷಮಾತ್ರಕ್ಕೆ ಸಾಧನವು ಎಂದು ಪೂರ್ವಪಕ್ಷವು; ಮೋಕ್ಷಸ್ವರ್ಗಾದಿ ಸರ್ವ ಪುರುಷಾರ್ಥಗಳಿಗೂ ಸಾಧನವೆಂದು ಸಿದ್ಧಾಂತವು. ಅದರಲ್ಲಿ) ಔದಾರ್ಯಂ = ವಿರಕ್ತತ್ವವು, (ಎಂದು ಪೂರ್ವಪಕ್ಷ ನ್ಯಾಯವು;) ವ್ಯವಸ್ಥಿತಿಃ= ವ್ಯವಸ್ಥೆಯು (ಎಂದು ಸಿದ್ಧಾಂತನ್ಯಾಯವು.) (ಅಂದರೆ— ಜ್ಞಾನಿಯು ವಿರಕ್ತನಾದುದರಿಂದ ಆತನಿಗೆ ಮೋಕ್ಷದಿಂದ ವ್ಯತಿರಿಕ್ತವಾದ ಫಲೇಚ್ಛೆಯೇ ಕೂಡದಿರುವುದರಿಂದ '**ಜ್ಞಾನಾದೇವ ಸ್ವರ್ಗಃ**' ಇತ್ಯಾದಿ ರೂಪವಾದ ಜ್ಞಾನಕ್ಕೆ ಮೋಕ್ಷೇತರವಾದ ಪುರುಷಾರ್ಥಸಾಧನತ್ವೋಕ್ತಿಯು ಜ್ಞಾನಕ್ಕೆ ಪ್ರಾಶಸ್ತ್ಯಜ್ಞಾಪಕವೇ ಎಂದು ಹೇಳಕೂಡದು. ಜ್ಞಾನಿಗೆ ಮೋಕ್ಷದಿಂದ ವ್ಯತಿರಿಕ್ತವಾದ ಫಲೇಚ್ಛೆಯು ಪ್ರಾಯಶಃ ಕೂಡುವುದೇ ಇಲ್ಲ. ಕೆಲವು ಜ್ಞಾನಿಗಳಿಗೆ ಸೌಭರ್ಯಾದಿಗಳಂತೆಯೇ ಮೋಕ್ಷದಿಂದ ವ್ಯತಿರಿಕ್ತವಾದ ಫಲೇಚ್ಛೆಯು ಆಗುವುದಾದರೂ ಬ್ರಹ್ಮಾಪರೋಕ್ಷಜ್ಞಾನದಿಂದಲೇ ಆ ಮೋಕ್ಷವ್ಯತಿರಿಕ್ತ ಅಭೀಷ್ಟವೆಲ್ಲವೂ ಆಗುತ್ತದೆ ಎನ್ನುವ ವ್ಯವಸ್ಥೆಯು ಕೂಡುತ್ತದೆ. ಅಂದರೆ— ಜ್ಞಾನಿಗಳಿಗೂ ಮೋಕ್ಷದಿಂದ ವ್ಯತಿರಿಕ್ತವಾದ ಫಲೇಚ್ಛೆಯನ್ನು ಪ್ರತಿಪಾದಿಸತಕ್ಕ ಶ್ರುತ್ಯಾದಿವಾಕ್ಯವು ಫಲಾಂತರೇಚ್ಛೆಯುಳ್ಳ ಸೌಭರ್ಯಾದಿ ವಿಷಯಕವಾಗುತ್ತದೆಂದು ವ್ಯವಸ್ಥೆಯು ಕೂಡುತ್ತದೆ. (೨ನೇ ಅಸಾರ್ವತ್ರಿಕ್ಯಧಿಕರಣದಲ್ಲಿ-ಬ್ರಹ್ಮಜ್ಞಾನವು ಸರ್ವಾಧಿಕಾರಿಕವೋ ಅಲ್ಲವೋ ಎಂದು ಸಂಶಯವು ಬಂದರೆ— ಸರ್ವಾಧಿಕಾರಿಕವೆಂದು ಪೂರ್ವಪಕ್ಷವು; ಅಲ್ಲವೆಂದು ಸಿದ್ಧಾಂತವು. ಅದರಲ್ಲಿ) ಔದಾರ್ಯಂ = ಉತ್ಕೃಷ್ಟತ್ವವು (ಪೂರ್ವಪಕ್ಷಯುಕ್ತಿಯು.) ವ್ಯವಸ್ಥಿತಿಃ = ವ್ಯವಸ್ಥೆಯು (ಎಂದು ಸಿದ್ಧಾಂತಯುಕ್ತಿಯು.) (ಅಂದರೆ— ಜ್ಞಾನಫಲವಾದಮೋಕ್ಷಕ್ಕೆ ನಿರ್ದುಃಖಾನಂದಾದ್ಯಾತ್ಮಕತ್ವರೂಪ ಉತ್ಕೃಷ್ಟತ್ವವಿದ್ದುದರಿಂದ ಎಲ್ಲರಿಗೂ ಅದರಲ್ಲಿ ಅರ್ಥಿತ್ವವು ಕೂಡುವುದರಿಂದ ಸರ್ವರಿಗೂ ಶ್ರವಣಾದಿ ಸಾಮರ್ಥ್ಯವಿದ್ದುದರಿಂದ

'ಅರ್ಥೀ ಸಮರ್ಥೋ ವಿದ್ವಾನಧಿಕ್ರಿಯತೇ' ಎನ್ನುವ ನ್ಯಾಯದಿಂದ ಸರ್ವರಿಗೂ ಜ್ಞಾನದಲ್ಲಿ ಅಧಿಕಾರವಿದೆ ಎಂದರೆ ಅರ್ಥಿತ್ವಾದಿಗಳು ಸಮಾನಗಳಾಗಿದ್ದಾಗ್ಯೂ ಸರ್ವರಿಗೆ ಜ್ಞಾನಾಧಿಕಾರ ವಿಲ್ಲ.ಮತ್ತೆ ಯಥಾಶಕ್ತ್ಯಖಿಲ ಅಧ್ಯಯನದಿಂದ ಕೂಡಿದವನಿಗೇನೇ ಎನ್ನುವ ವ್ಯವಸ್ಥೆಯು ಕೂಡು ತ್ತದೆ.) (೩ನೇ ನಾವಿಶೇಷಾಧಿಕರಣದಲ್ಲಿ- ಬ್ರಹ್ಮಜ್ಞಾನಾಧಿಕಾರವು ದೇವತೆಗಳಿಗೆ ಏಕಪ್ರಕಾರವೋ ಅನೇಕಪ್ರಕಾರವೋ ಎಂದು ಸಂಶಯವು ಬಂದರೆ— ಏಕಪ್ರಕಾರವೆಂದು ಪೂರ್ವಪಕ್ಷವು; ಅನೇಕಪ್ರಕಾರವೆಂದು ಸಿದ್ಧಾಂತವು. ಅದರಲ್ಲಿ) ಉಚ್ಚಾವಚಶಕ್ತಿಃ=ಉತ್ಕೃಷ್ಟ-ನಿಕೃಷ್ಟಶಕ್ತಿಯು (ಎಂದು ಪೂರ್ವಪಕ್ಷಯುಕ್ತಿಯು.) ಅವಿಶೇಷಃ = ವಿಶೇಷವಿಲ್ಲದಿರುವಿಕೆಯು, (ಎನ್ನುವುದು ಸಿದ್ಧಾಂತಯುಕ್ತಿಯು.) (ಅಂದರೆ— ಅಧಿಕಾರವು ಸ್ವಾಭಾವಿಕವಾಗಿ ಸಮವಾದಾಗ್ಯೂ ಆ ಅಧಿ ಕಾರಿಗಳಿಗೆ ಉತ್ಕೃಷ್ಟ-ನಿಕೃಷ್ಟಶಕ್ತಿರೂಪವಾದ ಉಪಾಯದಿಂದಲೇ ಜ್ಞಾನರೂಪವಾದ ಫಲ ತಾರತಮ್ಯವು ಕೂಡುವುದರಿಂದ ಫಲಭೇದವು ಕಲ್ಪಿತವಾಗದಿರುವುದರಿಂದ ಭಕ್ತ್ಯಾದಿಮತ್ವರೂಪ ವಾದ ಅಧಿಕಾರದ ವಿಶೇಷವಾದ ಸ್ವಾಭಾವಿಕ-ದೇವತ್ವ-ಋಷಿತ್ವ-ಮನುಷ್ಯೋತ್ತಮತ್ವರೂಪ ವಾದ ಅಧಿಕಾರವಿಶೇಷವನ್ನು ಕಲ್ಪಿಸುವುದು ವ್ಯರ್ಥವು. ಏವಂಚ ಅಧಿಕಾರಿಗಳಿಗೆ ಉತ್ಕೃಷ್ಟ-ನಿಕೃಷ್ಟಶಕ್ತಿಯೋಗದಿಂದ ಜ್ಞಾನತಾರತಮ್ಯವು ಕೂಡುವುದರಿಂದ ಏಕಪ್ರಕಾರವೇ. ಜ್ಞಾನಾಧಿ ಕಾರವು ಎಂದರೆ— ಭಕ್ತಿ-ಅಧ್ಯಯನ ಮೊದಲಾದ ಅಧಿಕಾರವನ್ನು ಅನುಸರಿಸಿಯೇ ಎಲ್ಲಾ ಅಧಿ ಕಾರಿಗಳಿಗೂ ಶಾಸ್ತ್ರವಿಚಾರದಿಂದ ಜ್ಞಾನಪ್ರಾಪ್ತಿಯು, ಭಕ್ತ್ಯಾದ್ಯಧಿಕಾರತಾರತಮ್ಯವು, ಪ್ರತ್ಯಕ್ಷಸಿದ್ಧವೂ ಆಗಿದೆ. ಏವಂಚ ಎಲ್ಲಾ ಜ್ಞಾನಾಧಿಕಾರಿಗಳಿಗೆ ಭಕ್ತ್ಯಾದ್ಯಧಿಕಾರತಾರತಮ್ಯ ವನ್ನು ಒಪ್ಪಿಕೊಳ್ಳದಿದ್ದರೆ ಅವರ ಜ್ಞಾನಕ್ಕೆ ವಿಶೇಷವಿಲ್ಲವೆಂದಾಗಬೇಕಾಗುವುದರಿಂದ ಜ್ಞಾನತಾರ ತಮ್ಯವು ಪ್ರಮಿತವಾಗಿರುವುದರಿಂದ ಮತ್ತು ಅವರ ಉಚ್ಚಾವಚಶಕ್ತಿಯೂ ಅಧಿಕಾರತಾರತಮ್ಯ ಪ್ರಯುಕ್ತವೇ ಆಗಿರುವುದರಿಂದ ಜ್ಞಾನಾಧಿಕಾರವು ಏಕಪ್ರಕಾರವಲ್ಲ. ಆದುದರಿಂದ ತಾರತಮ್ಯ ವುಳ್ಳದ್ದು.) (೪ನೇ ಸ್ತುತ್ಯಧಿಕರಣದಲ್ಲಿ- ಭಗವಜ್ಜ್ಞಾನಿಗಳಲ್ಲಿ ಸದಸತ್ಪ್ರವೃತ್ತಿಯಿಂದ ವಿಶೇಷವು ಇದೆಯೋ ಇಲ್ಲವೋ ಎಂದು ಸಂಶಯವು ಬಂದರೆ- ಇಲ್ಲವೆಂದು ಪೂರ್ವಪಕ್ಷವು; ಇದೆ ಎಂದು ಸಿದ್ಧಾಂತವು. ಅದರಲ್ಲಿ) ಆತ್ಮಸ್ವರೂಪದಾರ್ಢ್ಯಂ ಚ=ಆವಿರ್ಭೂತವಾದ ಆತ್ಮಸ್ವರೂಪಾನಂದಾ ದಿಗಳಿಗೆ ನಿಶ್ಚಿತತ್ವವು (ಎಂದು ಪೂರ್ವಪಕ್ಷ ಯುಕ್ತಿಯು;) ಸ್ಥಿತಿಃ=ಇರುವಿಕೆಯು (ಎನ್ನುವುದು ಸಿದ್ಧಾಂತನ್ಯಾಯವು.) (ಅಂದರೆ— ಜ್ಞಾನಿಗಳಿಗೆ ಆತ್ಮಸ್ವರೂಪವು ನಿಶ್ಚಿತವಾಗಿರುವುದರಿಂದ ಸತ್ಪ್ರವೃತ್ತಿಯಿಂದ ಸಂಪಾದ್ಯವಾದ ಅತಿಶಯವೂ, ಅಸತ್ಪ್ರವೃತ್ತಿಯಿಂದ ಪ್ರತಿಬಧ್ಯವಾದುದಾಗಲೀ ಮೋಕ್ಷಾತಿರಿಕ್ತವಾದುದು ಯಾವುದೂ ಇಲ್ಲ ಎಂದರೆ— 'ಏತಾವತೋಽಧಿಕಾ ನಾಸ್ತಿ' ಎನ್ನುವ ಪ್ರಮಾಣದಿಂದ ಸತ್ಪ್ರವೃತ್ತಿಯಿಂದ ಜ್ಞಾನದಿಂದ ಅಭಿವ್ಯಕ್ತವಾದ ಆನಂದಾ ತಿಶಯಾವಿರ್ಭಾವ ರೂಪವಾದ ಸ್ಥಿತಿವಿಶೇಷವೂ, ಅಸತ್ಪ್ರವೃತ್ತಿಯಿಂದ ಸ್ವರೂಪದಿಂದ ಅಧಿಕವಾಗಿರುವ ಆನಂದಾದಿಗಳಿಗೆ ಹ್ರಾಸವೆನ್ನುವ ವಿಶೇಷವೂ ಕೂಡುತ್ತದೆ.) (೫ನೇ ಉಭಯ ಲಿಂಗಾಧಿಕರಣದಲ್ಲಿ— ಶ್ರೀ ಹರಿಯ ಅಪರೋಕ್ಷಜ್ಞಾನವು ಅಧಿಕಾರಿಗಳಿಂದಲೇ ಹೊಂದಲ್ಪಡುತ್ತದೋ ಅನಧಿಕಾರಿಗಳಿಂದಲೂ ಹೊಂದಲ್ಪಡುತ್ತದೋ ಎಂದು ಸಂಶಯವು ಬಂದರೆ— ಅನಧಿಕಾರಿಗಳಿಂದಲೂ ಹೊಂದಲ್ಪಡುತ್ತದೆ ಎಂದು ಪೂರ್ವಪಕ್ಷವು; ಅಧಿಕಾರಿ ಗಳಿಂದಲೇ ಹೊಂದಲ್ಪಡುತ್ತದೆ ಎಂದು ಸಿದ್ಧಾಂತವು. ಅದರಲ್ಲಿ) ನಿಜಸ್ವಭಾವಃ = ತನ್ನ ಸ್ವಭಾವವು (ಎನ್ನುವುದು ಪೂರ್ವಪಕ್ಷ ನ್ಯಾಯವು;) ನಿಷೇಧ ಸಾಮಾನ್ಯ ವಿಧಿಕ್ರಿಯಾಣಾಂ= ವಿಭಕ್ತತಾ ಚ=ನಿಷೇಧದ ವಿಭಾಗವು, ಸಾಮಾನ್ಯದ ವಿಭಾಗವು, ವಿಧಿಯ ವಿಭಾಗವು, ಕ್ರಿಯೆಯ ವಿಭಾಗವು, (ಇದು ಸಿದ್ಧಾಂತ ಯುಕ್ತಿಯು.) (ಅಂದರೆ— ಎಲ್ಲಾ ಜೀವರಿಗೂ ನಿಜ ಸ್ವಭಾವ

ಭೂತವಾದ ಚೈತನ್ಯವು ಏಕಪ್ರಕಾರವೇ ಆಗಿರುವುದರಿಂದ ಫಲದಲ್ಲಿಯೂ ವಿಶೇಷವಿಲ್ಲವೆಂದರೆ— **'ನಾದೇವೋ ದೇವಪದಮನ್ವಿಚ್ಛೇದನ್ವಿಚ್ಛನ್ನಾತ್ಯಧರಂ ತಮಃ । ನ ದೇವಃ ಸ್ತ್ರೀಯಂ ಪದಮನ್ವಿಚ್ಛನ್ವಿದುಷ್ಯತಿ ತದೇವ ಹ್ಯಸ್ಯಸ್ವಂ '** ಎಂದು ನಿಷೇಧವಿಭಾಗವು, **ಸ್ಥಿರಂ ಜ್ಞಾನಂ ಸ್ಥಿರೋ ಹರಾವಭಿಷಂಗಃ ಸ್ಥಿರವೋಜೋ ಬಲಂ ವಿರಾಗಃ ಏತದ್ಧಿ ಸಾಮಾನ್ಯಂ ದೇವಾನಾಂ ಅನ್ಯೇಷಾಮಸ್ಥಿರಾಣ್ಯೇತಾನಿ'** ಎಂದು ಸಾಮಾನ್ಯವಿಭಾಗವು. **'ಜ್ಞಾನ ದಾನಮೇವ ದೇವಾನಾಂ ವಿಹಿತಂ ತಪ ಏವರ್ಷೀಣಾಂ '** ಇತ್ಯಾದಿಗಳಿಂದ ವಿಧಿವಿಭಾಗವು, **'ಚರಂತಿ ದೇವಾ ವಿಹಿತಂ ಸಮಸ್ತಮರ್ಥಮೇವ ಮುನಯೋ ದಶಾಂಶತೋ ಮನುಷ್ಯಾಃ'** ಎಂದು ಕ್ರಿಯಾವಿಭಾಗವು. ಆದುದರಿಂದ ಅಪರೋಕ್ಷಜ್ಞಾನ ಮತ್ತೂ ಬ್ರಹ್ಮಾದಿ ಪದ ಇವುಗಳಿಗೆ ಕೇವಲ ಅಧಿಕಾರಿಗಳಿಂದಲೇ ಪ್ರಾಪ್ಯತ್ವವು.) (೬ನೇ ಆಧಿಕಾರಿಕಾಧಿಕರಣದಲ್ಲಿ- ನಿಷೇಧವಿಭಾಗವನ್ನು ಪ್ರತಿಪಾದಿಸತಕ್ಕ **' ನ ಚಾಧಿಕಾರಿಕಂ ಉಪಪೂರ್ವಮಪಿ ಬಹಿಸ್ತು '** ಇತ್ಯಾದಿ ಮೂರು ಸೂತ್ರಗಳು ಇತರ ವಿಭಾಗಕ್ಕೆ ಉಪಲಕ್ಷಕಗಳಾಗಿರುವುದರಿಂದ ಈ ಪೂರ್ವಪಕ್ಷಸಿದ್ಧಾಂತನ್ಯಾಯವೇ ಸೂಚಿತವಾಯಿತು.) (೭ನೇ ಫಲಶ್ರುತ್ಯಧಿಕರಣದಲ್ಲಿ- ಪ್ರಯೋಜಕತ್ವ-ಕರ್ತೃತ್ವಗಳಿಂದ ಭಗವಜ್ಜ್ಞಾನವು ದೇವತೆಗಳಿಗೇನೇ ಫಲವನ್ನು ಕೊಡುತ್ತದೋ, ಪ್ರಜೆಗಳಿಗೂ ಫಲವನ್ನು ಕೊಡುತ್ತದೋ ಎಂದು ಸಂಶಯವು ಬಂದರೆ—ಪ್ರೇರಕರಾದ ದೇವತೆಗಳಿಗೇನೇ ಎಂದು ಪೂರ್ವಪಕ್ಷವು; ದೇವಾದಿಗಳಿಗೂ ಪ್ರಜೆಗಳಿಗೂ ಎಂದು ಸಿದ್ಧಾಂತವು. ಅದರಲ್ಲಿ) ಸ್ವಾತಂತ್ರ್ಯಂ=ಇಂದ್ರಿಯಾದಿ ಪ್ರೇರಕತ್ವದಿಂದ ಸ್ವಾಮಿತ್ವವು, (ಎಂದು ಪೂರ್ವಪಕ್ಷ ಯುಕ್ತಿಯು;) ಅತ್ವರಯೈವ ಸಿದ್ಧಿಃ=ವಿಲಂಬದಿಂದಲೇ ಸಿದ್ಧಿಯು. (ಎಂದು ಸಿದ್ಧಾಂತ ಯುಕ್ತಿಯು.) (ಅಂದರೆ— ದೇವತೆಗಳೇ ಇಂದ್ರಿಯಾದಿಗಳಿಗೆ ಪ್ರೇರಕರಾಗಿ ಸ್ವಾಮಿಗಳಾಗಿರುವುದರಿಂದ ಅವರಿಗೇನೇ ಜ್ಞಾನಾದಿ ಫಲವು. ಪ್ರಜೆಗಳಿಗೆ ಸ್ವಲ್ಪವೂ ಇಲ್ಲ ಎಂದರೆ— **' ತ್ವರಯೈವ ಮನುಷ್ಯಾಣಾಂ ಸಿದ್ಧಿರತ್ವರಯೈವ ತು । ದೇವಾನಾಂ ತತ್ಪ್ರಸಾದೇನ ಮುಕ್ತಿರೇವ ಸತಾಂ ನೃಣಾಂ'** ಎನ್ನುವ ಪ್ರಮಾಣದಿಂದ ದೇವತೆಗಳಿಗೆ ತ್ವರೆಯಿಂದಲೇ ಸಿದ್ಧಿಯಾಗುವುದಾದರೆ ಮನುಷ್ಯರಿಗೆ ಇಂದ್ರಿಯಾದಿಗಳ ಪ್ರೇರಣೆಯಿಲ್ಲದಿರುವುದರಿಂದ, ಜ್ಞಾನಾದಿಗಳೇ ಲಭಿಸದೆ ಹೋಗಬೇಕಾಗುವುದರಿಂದ ಮುಕ್ತಿಯೇ ಆಗದೆಹೋಗಬೇಕಾಗುವುದು. ಏವಂಚ ಮನುಷ್ಯರ ಮುಕ್ತಿಗಾಗಿಯೇ ದೇವತೆಗಳಿಗೆ ಅತ್ವರೆಯಿಂದ ಸಿದ್ಧಿಯಾಗುವುದರಿಂದ ಮನುಷ್ಯರಿಗೂ ಕೂಡ ಜ್ಞಾನಫಲವಾದ ಮೋಕ್ಷವು ಪ್ರಾಪ್ತವಾಗುತ್ತದೆ.) (೮ನೇ ಕೃತ್ಸ್ನಭಾವಾಧಿಕರಣದಲ್ಲಿ— ಆಶ್ರಮಭೇದದಿಂದ ಭಿನ್ನರಾದ ಮನುಷ್ಯರೆಲ್ಲರೂ ಮೋಕ್ಷದಲ್ಲಿ ಸಮಾನಿಕರೋ ಅಥವಾ ತಾರತಮ್ಯದಿಂದ ಕೂಡಿದವರೋ ಎಂದು ಸಂದೇಹವು ಬಂದರೆ— ಗೃಹಸ್ಥನು ಮುಕ್ತಿಯಲ್ಲಿ ಉತ್ತಮನು ಎಂದು ಪೂರ್ವಪಕ್ಷವು; ಸರ್ವಾಶ್ರಮಿಗಳಲ್ಲಿಯೂ ಯತಿಯೇ ಉತ್ತಮನು ಎಂದು ಸಿದ್ಧಾಂತವು ಅದರಲ್ಲಿ) ಅಪೂರ್ಣವಿಶೇಷಯೋಗ್ಯತಾ=ಅಶೇಷ ಕರ್ಮವಿಶೇಷಗಳಲ್ಲಿ ಯೋಗ್ಯತೆಯು, (ಎಂದು (ಪೂರ್ವಪಕ್ಷಯುಕ್ತಿಯು.) ಅತ್ವರಯೈವ ಸಿದ್ಧಿಃ=ತ್ವರೆಯಿಲ್ಲದೇನೇ ಸಿದ್ಧಿಯು. (ಎನ್ನುವುದು ಸಿದ್ಧಾಂತಯುಕ್ತಿಯು.) (ಅಂದರೆ— ಗೃಹಸ್ಥಾಶ್ರಮಿಗಳಿಗೇನೇ ಅಶೇಷ ಧರ್ಮವಿಶೇಷಗಳಲ್ಲಿ ಯೋಗ್ಯತೆಯಿದ್ದುದರಿಂದ ಮುಕ್ತಿಯಲ್ಲಿ ಆಧಿಕ್ಯವು ಎಂದರೆ— **' ತ್ವರಯೈವ ಗೃಹಿಣಃ ಸಾಧಯಂತಿ ಮುಕ್ತಿಮತ್ವರಯೈವ ಯತಯಃ ತೇಭ್ಯಶ್ಚಾತ್ವರಯಾ ದೇವಾಸ್ತೇಷು ಚ ಬ್ರಹ್ಮಾ'** ಇತ್ಯಾದಿ ಶ್ರುತಿಗಳಿಂದ, ಗೃಹಸ್ಥಾಶ್ರಮಿಗಳಿಂದ ಉತ್ತರೋತ್ತರಮೋಕ್ಷವು ಪೂರ್ವಪೂರ್ವ ಪ್ರಾಪ್ಯವಾದ ಮೋಕ್ಷದಿಂದ ಉತ್ತಮವಾಗಿರುವುದರಿಂದ ಸಾಧನವಿಶೇಷಾನುಷ್ಠಾನಕ್ಕಾಗಿ ಯತಿಗಳಿಗೂ, ಅವರಿಂದ ದೇವತೆಗಳಿಗೂ, ವಿಲಂಬದಿಂದಲೇ ಮೋಕ್ಷವಾಗುವುದರಿಂದ

ಜ್ಞಾನಪ್ರಚುರರಾದ ಯತಿಗಳಿಗೇನೇ ಉತ್ತಮತ್ವವು.) (೯ನೇ ಅನಾವಿಷ್ಕಾರಾಧಿಕರಣದಲ್ಲಿ— ಬ್ರಹ್ಮವಿಷಯಕ ಅಪರೋಕ್ಷ ಜ್ಞಾನಸಾಧನವನ್ನು ಪ್ರಕಟೀಕರಿಸಿಕೊಂಡು ಉಪದೇಶಿಸಬೇಕೋ, ಬೇಡವೋ ಎಂದು ಸಂದೇಹವು ಬಂದರೆ, ಪ್ರಕಟೀಕರಿಸಿಕೊಂಡು ಎಂದು ಪೂರ್ವಪಕ್ಷವು; ಅಲ್ಲ ವೆಂದು ಸಿದ್ಧಾಂತವು. ಅದರಲ್ಲಿ) 'ಅಪೂರ್ಣವಿಶೇಷ ಯೋಗ್ಯತಾ' ಎನ್ನುವುದೇ ಪೂರ್ವಪಕ್ಷ ನ್ಯಾಯವು; 'ಅತ್ವರಯೈವ ಸಿದ್ಧಿಃ' ಎನ್ನುವುದೇ ಸಿದ್ಧಾಂತನ್ಯಾಯವು. (ಅಂದರೆ— ಆವಿಷ್ಕ ರಿಸಿಕೊಂಡು ಹೇಳಿದರೆ ಎಲ್ಲಾ ಯೋಗ್ಯರೂ ಜ್ಞಾನಿಗಳು ಆಗುತ್ತಾರೆ. ಆದುದರಿಂದ ಅಸ್ಥಾನ ಚತ್ವರಾದಿಗಳಲ್ಲಿ ನಿಂತುಕೊಂಡೇ ಪ್ರಕಟಿಸಬೇಕೆಂದರೆ— ಹೀಗೆ ತ್ವರಮಾಡಿದರೆ ಬ್ರಹ್ಮಜ್ಞಾನ ಸಿದ್ಧಿಯಾಗಲಾರದು. ಏಕೆಂದರೆ— ಅಯೋಗ್ಯರಿಗೂ ಶ್ರವಣವು ಪ್ರಸಕ್ತವಾಗುವುದು. ಅಯೋಗ್ಯೋಪದೇಶವು ನಿಷಿದ್ಧವು. ಆದುದರಿಂದ ವಿಚಾರಮಾಡಿ ಯೋಗ್ಯರಿಗೇನೇ, ತ್ವರಾವಿಲ್ಲ ದೇನೇ ಹೇಳಿ ಸಿದ್ಧಿಯಾಗುತ್ತದೆ. ಏವಂಚ ಆವಿಷ್ಕರಿಸದೇನೇ ಜ್ಞಾನಸಾಧನವನ್ನು ಉಪದೇಶಿಸ ಬೇಕಾದುದರಿಂದ ಅದಕ್ಕೆ ಅತಿಶಯವು ಯುಕ್ತವು.) (೧೦ನೇ ವಿಹಿತಾಧಿಕರಣದಲ್ಲಿ—ಶ್ರವಣಾದಿ ಸಾಧನವು ಶ್ರವಣಾದಿಗಳು ಆದ ಜನ್ಮದಲ್ಲಿಯೋ ಅಪರೋಕ್ಷಜ್ಞಾನಸಾಧನವೋ, ಜನ್ಮಾಂತರ ದಲ್ಲಿಯೋ ಎಂದು ಸಂಶಯವು ಬಂದರೆ— ಅದೇ ಜನ್ಮದಲ್ಲಿ ಎಂದು ಪೂರ್ವಪಕ್ಷವು; ಆ ಜನ್ಮ ದಲ್ಲಿ ಆಗಲೀ ಜನ್ಮಾಂತರದಲ್ಲಿ ಆಗಲಿ ಎಂದು ಸಿದ್ಧಾಂತವು.) (೧೧ನೇ ಮುಕ್ತಾಫಲಾಧಿಕರಣದಲ್ಲಿ- ಅದೃಷ್ಟಫಲವು ಸಾಧನೋತ್ಪತ್ತಿ ಜನ್ಮದಲ್ಲಿಯೂ, ಜನ್ಮಾಂತರದಲ್ಲಿಯೂ ಕಂಡದರಿಂದ ಜ್ಞಾನ ಸಾಧ್ಯವಾದ ಮೋಕ್ಷವು ಯಾವ ಶರೀರದಲ್ಲಿ ಜ್ಞಾನವು ಹುಟ್ಟಿಯದೋ, ಆ ಶರೀರಪಾತಾನಂತರ ದಲ್ಲಿಯೇ ಆಗುತ್ತದೋ, ಇಲ್ಲವೋ ಎಂದು ಸಂಶಯವು ಬಂದರೆ— ಯಾವ ಶರೀರದಲ್ಲಿ ಜ್ಞಾನವು ಹುಟ್ಟಿಯದೋ, ಆ ಶರೀರ ಪಾತಾನಂತರದಲ್ಲಿಯೋ ಎಂದು ಪೂರ್ವಪಕ್ಷವು; ಆ ದೇಹ ಪಾತಾ ನಂತರದಲ್ಲಿ ದೇಹಾಂತರವನ್ನು ಹೊಂದಿ ಆ ದೇಹ ಪಾತಾನಂತರದಲ್ಲಿಯೂ ಎಂದು ಸಿದ್ಧಾಂತವು. ಈ ಎರಡು ಅಧಿಕರಣಗಳಲ್ಲಿಯೂ,) ವಿರೋಧಹಾನಿಶ್ಚ=ಪ್ರತಿಬಂಧರೂಪವಾದ ವಿರೋಧವಿಲ್ಲ ದಿರುವಿಕೆಯು ಪೂರ್ವಪಕ್ಷಯುಕ್ತಿಯು ಇವುಗಳು. ಚತುರ್ಥಪಾದೇ = (೩ನೇ ಅಧ್ಯಾಯದ) ನಾಲ್ಕನೇ ಪಾದದಲ್ಲಿ, ಅತ್ವರಯೈವ ಸಿದ್ಧಿಃ=ವಿಲಂಬದಿಂದಲೇ ಸಿದ್ಧಿಯು (ಎನ್ನುವುದು ಸಿದ್ಧಾಂತ ಯುಕ್ತಿಯು.) ಇವುಗಳು, ವಿಪಕ್ಷಸಂಪ್ರಾಪ್ತಿ ವಿರೋದ (ರುದ್ಧ) ಹೇತವಃ = ಪೂರ್ವಪಕ್ಷ ಸಂಪ್ರಾಪ್ತಿಯನ್ನು ಮಾಡತಕ್ಕ ಯುಕ್ತಿಗಳಿಗೆ ನಿವಾರಕಗಳಾದ ಹೇತುಗಳು. ಅಂದರೆ- ಸಿದ್ಧಾಂತ ಯುಕ್ತಿಗಳು. (ಅಂದರೆ— ಪ್ರತಿಬಂಧಕವಿಲ್ಲದಿರುವುದರಿಂದ ಅಪರೋಕ್ಷಜ್ಞಾನಸಾಧನಗಳಾದ ಶ್ರವಣಾದಿಗಳೂ, ಮುಕ್ತಿಸಾಧನವಾದ ಅಪರೋಕ್ಷ ಜ್ಞಾನವೂ, ಇವುಗಳುಂಟಾದೊಡನೆಯೇ ಅಪರೋಕ್ಷ ಜ್ಞಾನವೂ, ಮುಕ್ತಿಯೂ ಆಗುತ್ತದೆಂದರೆ— ಪ್ರಾರಬ್ಧಕರ್ಮರೂಪ ಪ್ರತಿಬಂಧ ಕವು ಇದ್ದರೆ ಪ್ರತಿಬಂಧಕನಿವೃತ್ತ್ಯಂತರದಲ್ಲಿ ಜನ್ಮಾಂತರದಲ್ಲಿ ಸಿದ್ಧಿಯಾಗುತ್ತದೆ. ಏವಂಚ ಜ್ಞಾನಕ್ಕೆ ಪ್ರತಿಬಂಧಕವಿದ್ದರೆ ವಿಲಂಬದಿಂದಲೇ ಸಿದ್ಧಿಯು, ಪ್ರತಿಬಂಧಕವಿಲ್ಲವಾದರೆ ಜ್ಞಾನವು ಹುಟ್ಟಿದ ಜನ್ಮದಲ್ಲಿ ಹೇಗೆ ಆಗುತ್ತದೋ, ಹಾಗೆಯೇ ವಿಹಿತವಾಗಿರುವುದರಿಂದ ಮೋಕ್ಷಕ್ಕೂ ಪ್ರತಿಬಂಧಕವಿದ್ದರೆ ಅತ್ವರೆಯಿಂದಲೇ ಸಿದ್ಧಿಯಾಗುತ್ತದೆ. ಪ್ರತಿಬಂಧಕವಿಲ್ಲವಾದರೆ ಆ ದೇಹ ಪಾತಾನಂತರದಲ್ಲಿಯೇ ಮೋಕ್ಷವು ಆಗುತ್ತದೆ.) ॥ ೧೨೪ ॥ ೧೨೫ ॥

## ತೃತೀಯಾಧ್ಯಾಯದ ಚತುರ್ಥಪಾದದ ಪೂರ್ವಪಕ್ಷ ಸಿದ್ಧಾಂತಯುಕ್ತಿ ನಿರೂಪಣವು ಸಮಾಪ್ತವಾಯಿತು.

---

## ಚತುರ್ಥಾಧ್ಯಾಯದ ಪ್ರಥಮಪಾದದ ಪೂರ್ವಪಕ್ಷ-ಸಿದ್ಧಾಂತಯುಕ್ತಿನಿರೂಪಣವು.

ಮೂ || ಸುಶಕ್ಯತಾ ಶಶ್ವದತಿಪ್ರಸಿದ್ಧಿರ್ವಿವೇಕವಿನ್ಯಾಸವಿಚಾರಸಂಜ್ಞಾಃ |
ನಾನಾಪ್ರವೃತ್ತಿಃ ಕೃತಕೃತ್ಯತಾ ಚ ವಿಪಕ್ಷತರ್ಕಾಃ ಸಮತೀತಪಾದೇ ||
|| ೧೨೬ ||
ಮಹಾಫಲತ್ವಂ ಪ್ರವಿವಿಕ್ತತಾ ಚ ಸಂಧಿಗ್ರಹಃ ಸಾಧನಮಾಪ್ತಕೃತ್ಯಂ |
ವಿಶೇಷಕಾರ್ಯಂ ಕೃತಿಸಂಸ್ಥಿತಿಶ್ಚ ಸುಯುಕ್ತಯೋ ನಿರ್ಣಯಗಾಃ
ಸ್ವಪಕ್ಷೇ || ೧೨೭ ||

ಅ || (೧ನೇ ಆವೃತ್ತ್ಯಧಿಕರಣದಲ್ಲಿ-ಶ್ರವಣಾದಿಗಳನ್ನು ಒಂದಾವರ್ತಿ ಅನುಷ್ಠಾನಮಾಡಬೇಕೋ, ಆವರ್ತನ ಮಾಡಬೇಕೋ ಎಂದು ಸಂಶಯವು ಬಂದರೆ— ಜ್ಯೋತಿಷ್ಟೋಮಾದಿಗಳಂತೆಯೇ ಒಂದಾವರ್ತಿಯೇ ಅನುಷ್ಠಾನ ಮಾಡಬೇಕು ಎಂದು ಪೂರ್ವಪಕ್ಷವು; ವ್ರೀಹ್ಯವಘಾತದಂತೆ ಆವರ್ತನ ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ), ಸುಶಕ್ಯತಾ=ಸುಲಭದಿಂದ ಶಕ್ಯವಾಗುವಿಕೆ, (ಎಂದು ಪೂರ್ವಪಕ್ಷಯುಕ್ತಿಯು;) ಮಹಾಫಲತ್ವಂ = ಮಹತ್ತಾದ ಫಲವಿರುವಿಕೆ, (ಎನ್ನುವುದು ಸಿದ್ಧಾಂತಯುಕ್ತಿಯು.) (ಅಂದರೆ— ಶ್ರವಣಾದಿಗಳ ಆವೃತ್ತಿಯಿಲ್ಲದೇನೇ ಅಪರೋಕ್ಷಜ್ಞಾನವು ಹುಟ್ಟುತ್ತದೆಂದು ಅಂಗೀಕರಿಸಿದರೆ ಒಂದಾವರ್ತಿ ಶ್ರವಣಾದ್ಯನುಷ್ಠಾನವು ಸರ್ವರಿಗೂ ಸುಲಭವಾಗುವುದರಿಂದ, ಸುಶಕ್ಯತ್ವರೂಪವಾದ ಗುಣವು ಸಿಗುವುದರಿಂದ, ಅಂತಹ ಶ್ರವಣಾದಿಗಳಿಂದ ಅಪರೋಕ್ಷಜ್ಞಾನವು ಹುಟ್ಟದಿರುವುದರಿಂದ ಶ್ರವಣಾದಿಗಳು ಅಪರೋಕ್ಷಜ್ಞಾನಸಾಧನವಲ್ಲ ಎಂದರೆ— ಮಹತ್ತಾದ ಫಲವಿದ್ದುದರಿಂದ ಸರ್ವರಿಗೆ ಅಶಕ್ಯತ್ವವೇ ಯುಕ್ತವು. ಏವಂಚ ಜ್ಞಾನಕ್ಕೆ ಮಹಾಫಲವಿದ್ದುದರಿಂದ ಶ್ರವಣಾದ್ಯಾವೃತ್ತಿಸಾಧ್ಯತ್ವವು.) (೨ನೇ ಆತ್ಮಾಧಿಕರಣದಲ್ಲಿ— ಆತ್ಮತ್ವವನ್ನು ನಿತ್ಯದಲ್ಲಿ ಉಪಾಸನಮಾಡಬೇಕೋ, ಬೇಡವೋ ಎಂದು ಸಂಶಯವು ಬಂದರೆ —ಉಪಾಸನಾಮಾಡಕೂಡದೆಂದು ಪೂರ್ವಪಕ್ಷವು; ನಿತ್ಯದಲ್ಲಿಯೂ ಉಪಾಸನಾಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ), ಶಶ್ವದತಿಪ್ರಸಿದ್ಧಿಃ = ಯಾವಾಗಲೂ ಅತ್ಯಂತ ಪ್ರಸಿದ್ಧಿಯು, (ಎಂದು ಪೂರ್ವಪಕ್ಷನ್ಯಾಯವು;) ಪ್ರವಿವಿಕ್ತತಾ ಚ=ಸವಿಶೇಷತ್ವವು, (ಎಂದು ಸಿದ್ಧಾಂತನ್ಯಾಯವು.) (ಅಂದರೆ- ಯಾವಾಗಲೂ ಅತ್ಯಂತ ಪ್ರಸಿದ್ಧವಾದುದಕ್ಕೆ ನಿತ್ಯದಲ್ಲಿ ಉಪಾಸನವು ವ್ಯರ್ಥವೇ. ಮತ್ತೆ ಅಪ್ರಸಿದ್ಧಗುಣೋಪಾಸನವು ಶ್ರೇಷ್ಠವಾಗಿರುವುದರಿಂದ ಅದನ್ನೇ ನಿತ್ಯದಲ್ಲಿಯೂ ಮಾಡಬೇಕು. ಆದಕಾರಣ ಯಾವಾಗಲೂ ಅತಿಪ್ರಸಿದ್ಧವಾಗಿರುವುದರಿಂದ ಆತ್ಮಶಬ್ದೋದಿತವಾದ ಸ್ವಾಮಿತ್ವವನ್ನು ನಿತ್ಯದಲ್ಲಿ ಉಪಾಸನ ಮಾಡಕೂಡದು ಎಂದರೆ— ಉಪಾಸಿತಗಳಾದ ಆನಂದಾದಿಗುಣಗಳದೆಶೆಯಿಂದ ಸ್ವಾವರಸ್ವಾಮಿತ್ವರೂಪವಾದ ಅಧಿಕಫಲವಿದ್ದುದರಿಂದ ಆನಂದಾದಿಗಳಂತೆಯೇ ಆತ್ಮತ್ವವು ಸಕಲಮುಕ್ತಿಯೋಗ್ಯರಿಂದಲೂ ಉಪಾಸ್ಯವಾಗಿರುವುದರಿಂದ ಶ್ರೇಷ್ಠವಾಗಿದೆ.) (೩ನೇ ನಪ್ರತೀಕಾಧಿಕರಣದಲ್ಲಿ- ನಾಮವಾಗಾದಿರೂಪವಾದ ಭಗವತ್ಪ್ರತೀಕವು ಬ್ರಹ್ಮಾಭೇದದಿಂದ ಉಪಾಸನಾರ್ಹವೋ, ಅಲ್ಲವೋ ಎಂದು ಸಂಶಯವು ಬಂದರೆ— ಅಭೇದದಿಂದಲೇ ಉಪಾಸನಾರ್ಹವೆಂದು ಪೂರ್ವಪಕ್ಷವು; ಅಲ್ಲವೆಂದು ಸಿದ್ಧಾಂತವು. ಅದರಲ್ಲಿ) ವಿವೇಕವಿನ್ಯಾಸವಿಚಾರಸಂಜ್ಞಾಃ=ವಿವೇಕವೂ-ವಿನ್ಯಾಸವೂ-ವಿಚಾರವೂ-ಸಂಜ್ಞೆಯೂ ಇವುಗಳು

(ಅದರಲ್ಲಿ) ವಿವೇಕವಿಶೇಷವತ್ವವು (ಎನ್ನುವುದು ಪೂರ್ವಪಕ್ಷಯುಕ್ತಿಯು); ಸಂಧಿಗ್ರಹಃ = ಉಪಪತ್ತಿಯಿಂದ ಅಂಗೀಕಾರವು (ಎಂದು ಸಿದ್ಧಾಂತಯುಕ್ತಿಯು.) (ಅಂದರೆ— **'ನಾಮ ಬ್ರಹ್ಮೇತ್ಯುಪಾಸ್ತೇ ಯಾವನ್ನಾಮ್ನೋಪಗತಂ ತತ್ರಾಸ್ಯ ಕಾಮಚಾರೋ ಭವತಿ'** ಎನ್ನುವ ಶ್ರುತಿಯಿಂದ ಪ್ರತೀಕದಲ್ಲಿ ಬ್ರಹ್ಮತ್ವೋಪಾಸನಕ್ಕೆ ಫಲಾಧಿಕ್ಯವು ಕೂಡುವುದರಿಂದ ವಿಶೇಷವಿದ್ದ ಪ್ರಯುಕ್ತವೇ ಪ್ರತೀಕವನ್ನೂ ಕೂಡ ಈಶ್ವರನೆಂದು ಉಪಾಸನಾಮಾಡಬೇಕು. ಎಂದರೆ— ಉಪಪನ್ನವಾದುದಕ್ಕೇನೇ ಗ್ರಾಹ್ಯತ್ವವಿದ್ದುದರಿಂದ, ಈಶ್ವರನಿಂದ ವ್ಯತಿರಿಕ್ತವಾದುದನ್ನು ಈಶ್ವರನೆಂದು ತೆಗೆದುಕೊಳ್ಳುವುದು ಮಿಥ್ಯಾಜ್ಞಾನವಾಗಿರುವುದರಿಂದ, ಪ್ರತೀಕದಲ್ಲಿ ಬ್ರಹ್ಮತ್ವೋಪಾಸನವು ಅನುಪಪನ್ನವಾಗಿರುವುದರಿಂದಲೂ ಸರ್ವರಿಗೂ ಸ್ವಾಮಿಯೆಂದೇ ಉಪಾಸನವನ್ನು ಸರ್ವರೂ ಮಾಡಬೇಕು.) (೪ನೇ ಬ್ರಹ್ಮದೃಷ್ಟ್ಯಧಿಕರಣದಲ್ಲಿ— ಭೂಮತ್ವರೂಪವಾದ ಬ್ರಹ್ಮತ್ವವನ್ನು ಸರ್ವದಾ ಉಪಾಸನಾಮಾಡಬೇಕೋ, ಬೇಡವೋ ಎಂದು ಸಂಶಯವು ಬಂದರೆ— ಉಪಾಸನಾ ಮಾಡಕೂಡದೆಂದು ಪೂರ್ವಪಕ್ಷವು; ಸರ್ವದಾ ಉಪಾಸನಾ ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ) ವಿನ್ಯಾಸಃ=ವಿವಿಧ ಗುಣಗಳನ್ನು ಉಪಸಂಹಾರಮಾಡಿ ಉಪಾಸನೆಯು (ಎಂದು ಪೂರ್ವಪಕ್ಷನ್ಯಾಯವು); ಸಾಧನಂ=ಅಧಿಕ ಸಾಧನವು (ಎಂದು ಸಿದ್ಧಾಂತನ್ಯಾಯವು.) (ಅಂದರೆ— ಪ್ರತಿನಿತ್ಯವೂ ಬಹುವಿಧಗಳಾದ ಗುಣಗಳನ್ನು ಉಪಸಂಹಾರಮಾಡಿ ಧ್ಯಾನಿಸುವುದರಿಂದಲೇ ಶ್ರೀ ಹರಿಯ ಪ್ರೀತಿಯು ಕೂಡುವುದರಿಂದ ಬ್ರಹ್ಮತ್ವೋಪಾಸನ ನಿಯಮವಿಲ್ಲ ಎಂದರೆ- ಬ್ರಹ್ಮತ್ವದಲ್ಲಿಯೇ ಎಲ್ಲಾ ಗುಣಗಳೂ ಅಂತರ್ಭೂತಗಳಾಗುವುದರಿಂದ, ಬ್ರಹ್ಮತ್ವೋಪಾಸನೆಯೇ ಇತರ ಗುಣಗಳಕ್ಕಿಂತ ಅಧಿಕ ಪ್ರಸಾದಕ್ಕೆ ಕಾರಣವಾಗಿರುವುದರಿಂದ ಬ್ರಹ್ಮತ್ವವನ್ನೇ ಸರ್ವದಾ ಉಪಾಸನಾ ಮಾಡಬೇಕು.) (೫ನೇ ಆದಿತ್ಯಾಧಿಕರಣದಲ್ಲಿ— ದೇವತೆಗಳು ತಮ್ಮ ತಮ್ಮನ್ನು ಹುಟ್ಟಿಸತಕ್ಕ ಶ್ರೀ ಹರಿಯ ಅಂಗಗಳನ್ನು ಆಶ್ರಯಿಸಿರುತ್ತಾರೆಂದು ದೇವತೆಗಳು ಸರ್ವದಾ ಉಪಾಸನಾ ಮಾಡಬೇಕೋ, ಬೇಡವೋ ಎಂದು ಸಂಶಯವು ಬಂದರೆ— ಮಾಡಕೂಡದೆಂದು ಪೂರ್ವಪಕ್ಷವು; ಸದಾ ಮಾಡಬೇಕೆಂದು ಸಿದ್ಧಾಂತವು. ಅದರಲ್ಲಿ) ವಿಚಾರಃ=ವಿವಿಧ ಸ್ಥಾನಗಳಲ್ಲಿ ಸಂಚಾರವು (ಎಂದು ಪೂರ್ವಪಕ್ಷಯುಕ್ತಿಯು); ಆಪ್ತಕೃತ್ಯಂ=ಹೊಂದಲ್ಪಟ್ಟ ಭಗವದಂಗಾಶ್ರಿತತ್ವರೂಪಕೃತ್ಯವು (ಎಂದು ಸಿದ್ಧಾಂತನ್ಯಾಯವು.) (ಅಂದರೆ— ಸೂರ್ಯಾದಿ ದೇವತೆಗಳಿಗೆ ವಿವಿಧ ಸ್ಥಾನಗಳಲ್ಲಿ ಸಂಚಾರದಿಂದ ಸರ್ವದಾ ಚಕ್ಷುರಾದ್ಯಂಗಾಶ್ರಿತತ್ವವಿಲ್ಲದಿರುವುದರಿಂದ ಹಾಗೆ ಉಪಾಸನವು ಅನರ್ಥಫಲಕ್ಕೆ ಕಾರಣವಾಗಿದೆ. ಆದುದರಿಂದ ತಮ್ಮನ್ನು ಹುಟ್ಟಿಸತಕ್ಕ ಶ್ರೀ ಹರಿಯ ಅಂಗಗಳನ್ನು ಆಶ್ರಯಿಸಿದ್ದಾರೆಂದು ದೇವತೆಗಳು ಉಪಾಸನೆಯನ್ನು ಮಾಡುವುದು ಅಯುಕ್ತವಾಗಿರುವುದರಿಂದ ಸರ್ವದಾ ಉಪಾಸನ ಮಾಡಕೂಡದು ಎಂದರೆ— ಸೂರ್ಯಾದಿ ದೇವತೆಗಳಿಗೆ ಸ್ವೋತ್ಪತ್ತ್ಯಂಗಾಶ್ರಿತತ್ವದಿಂದ ಉಪಾಸನೆಯನ್ನು ಮಾಡಿದರೇನೇ ಅಲ್ಲಿ ದೇಹಕ್ಕೆ ಲಯವಾಗಿ ಮೋಕ್ಷರೂಪವಾದ ಕೃತ್ಯವು ಹೊಂದಲರ್ಹವಾಗಿರುವುದರಿಂದ ಶ್ರೀ ಹರಿಯ ಅಂಗಾಶ್ರಿತರಾದ ದೇವತೆಗಳ ಉಪಾಸನೆಯು ಆವಶ್ಯಕವು.) (೬ನೇ ಆಸೀನಾಧಿಕರಣದಲ್ಲಿ— ಆಸನವು ಸರ್ವಥಾ ಅಪೇಕ್ಷಿತವೋ, ಅಲ್ಲವೋ ಎಂದು ಸಂಶಯವು ಬಂದರೆ- ಅಲ್ಲವೆಂದು ಪೂರ್ವಪಕ್ಷವು; ಸರ್ವಥಾ ಅಪೇಕ್ಷಿತವೇ ಎಂದು ಸಿದ್ಧಾಂತವು. ಅದರಲ್ಲಿ) ಸಂಜ್ಞಾ = ಜ್ಞಾನವು, (ಎಂದು ಪೂರ್ವಪಕ್ಷನ್ಯಾಯವು); ವಿಶೇಷಕಾರ್ಯಂ=ಶರೀರಕ್ಕೆ ಅಚಲತ್ವದ್ವಾರಾ ಮನಸ್ಸಿಗೆ ಅಚಲತ್ವರೂಪವಾದ ಕಾರ್ಯವಿಶೇಷವು (ಎಂದು ಸಿದ್ಧಾಂತಯುಕ್ತಿಯು.) (ಅಂದರೆ— ಆಸನಾದಿಗಳು ಇಲ್ಲದಿದ್ದರೂ ಮನಸ್ಸಿಗೆ ಭಗವದ್ವಿಷಯತ್ವಮಾತ್ರದಿಂದ ಅಪರೋಕ್ಷಜ್ಞಾನವು ಕೂಡುವುದರಿಂದ ಆಸನಾದಿಗಳು ವ್ಯರ್ಥವು ಎಂದರೆ— ಆಸನಾದಿಗಳಿಂದ ನಿಶ್ಚಲತ್ವ ಮೊದಲಾದ

ಕಾರ್ಯವು ಹುಟ್ಟುವುದರಿಂದ ಆಸನಾದಿಗಳು ಆವಶ್ಯಕಗಳು.) (೭ನೇ ಆಪ್ರಾಯಣಾಧಿಕರಣದಲ್ಲಿ— ಧ್ಯಾನವು ಜ್ಞಾನಪರ್ಯಂತರವೇ ಆವಶ್ಯಕವೋ, ಮುಕ್ತಿಪರ್ಯಂತವಾಗಿಯೋ ಎಂದು ಸಂಶಯವು ಬಂದರೆ— ಜ್ಞಾನಪರ್ಯಂತವಾಗಿಯೇ ಆವಶ್ಯಕವು ಎಂದು ಪೂರ್ವಪಕ್ಷವು; ಮುಕ್ತಿಪರ್ಯಂತವಾಗಿಯೇ ಎಂದು ಸಿದ್ಧಾಂತವು. ಅದರಲ್ಲಿ) ನಾನಾಪ್ರವೃತ್ತಿಃ=ಧ್ಯಾನದಿಂದ ಇತರವಾದ ಶ್ರವಣ ಮೊದಲಾದ ಸಾಧನಕ್ಕೂ ಪ್ರವೃತ್ತಿಯು. (ಎಂದು ಪೂರ್ವಪಕ್ಷಯುಕ್ತಿಯು.) ವಿಶೇಷಕಾರ್ಯಂ=ಅಪರೋಕ್ಷಜ್ಞಾನಾಖ್ಯ ವಿಶೇಷ ಕಾರ್ಯವು (ಎಂದು ಸಿದ್ಧಾಂತಯುಕ್ತಿಯು;) (ಅಂದರೆ— ಧ್ಯಾನದಿಂದ ಇತರವಾದ ಶ್ರವಣ ಮೊದಲಾದ ಸಾಧನಕ್ಕೂ ಆನಂದಾತಿಶಯಕ್ಕಾಗಿ ಮಾಡಲಿಕ್ಕೆ ಸಾಧ್ಯವಿದ್ದುದರಿಂದ ಅದಕ್ಕಾಗಿ ಧ್ಯಾನವು ಆವಶ್ಯಕವು ಎಂದರೆ— ಧ್ಯಾನವಿಲ್ಲದೆ ಅಪರೋಕ್ಷ ಜ್ಞಾನಾಖ್ಯ ವಿಶೇಷಕಾರ್ಯವು ಕೂಡದೆ ಇರುವುದರಿಂದಲೂ, ಆನಂದಾತಿಶಯಾಖ್ಯ ವಿಶೇಷಕಾರ್ಯವು ಉಂಟಾಗದೆ ಇದ್ದುದರಿಂದಲೂ ಮುಕ್ತಿಪರ್ಯಂತವಾಗಿಯೂ ಧ್ಯಾನವು ಆವಶ್ಯಕವು.) (೮ನೇ ತದಧಿಗಮಾಧಿಕರಣದಲ್ಲಿ- ಸಕಾಮ- ನಿಷ್ಕಾಮ ಕರ್ಮಗಳಿಗೆ ಮೋಕ್ಷಸಾಧನತ್ವ-ಅಸಾಧನತ್ವಗಳು ಕಂಡದರಿಂದ ಜ್ಞಾನವು ಮುಕ್ತಿಸಾಧನವೋ ಅಲ್ಲವೋ ಎಂದು ಸಂದೇಹವು ಬಂದರೆ— ಮುಕ್ತಿಸಾಧನವಲ್ಲವೆಂದು ಪೂರ್ವಪಕ್ಷವು;ಮುಕ್ತಿಸಾಧನವು ಎಂದು ಸಿದ್ಧಾಂತವು ಅದರಲ್ಲಿ) ಕೃತಕೃತ್ಯತಾಚ=ಜ್ಞಾನವು ಹುಟ್ಟಿದಮೇಲೆ ಎಲ್ಲಾ ಕರ್ಮಗಳಿಗೆ ನಾಶವಾಗುತ್ತಿರಲು ಕೃತಕೃತ್ಯತ್ವವು (ಎಂದು ಪೂರ್ವಪಕ್ಷಯುಕ್ತಿಯು;) (ಹೀಗೆ) ಇವುಗಳು ಸಮತೀತಪಾದೇ= ಅತೀತವಾದ ಈ ಅಧ್ಯಾಯದ ೧ನೇ ಪಾದದಲ್ಲಿ, ವಿಪಕ್ಷತರ್ಕಾಃ = ಪೂರ್ವಪಕ್ಷಯುಕ್ತಿಗಳು. ಕೃತಸಂಸ್ಥಿತಿಶ್ಚ =ಮಾಡಲ್ಪಟ್ಟಕರ್ಮಕ್ಕೆ ಭೋಗಪರ್ಯಂತವಾಗಿ ಇರುವಿಕೆಯು; ಇವುಗಳು, ಸ್ವಪಕ್ಷೇ=ತಮ್ಮಪಕ್ಷದಲ್ಲಿ, ನಿರ್ಣಯಗಾಃ=ನಿಶ್ಚಯುವನ್ನು ಮಾಡಿಕೊಡತಕ್ಕ, ಸುಯುಕ್ತಯಃ= ಶೋಭನಯುಕ್ತಿಗಳು. (ಅಂದರೆ— ಸಿದ್ಧಾಂತಯುಕ್ತಿಗಳು ) (ಅಂದರೆ— ಜ್ಞಾನವು ಹುಟ್ಟಿದರೂ ಮುಕ್ತಿಯು ಆಗದಿದ್ದರೆ ಕರ್ಮಕ್ಷಯುವೂ ಆಗದೆ ಹೋಗುವುದು. ಏವಂಚ ಜ್ಞಾನದಿಂದಲೇ ಎಲ್ಲಾ ಕರ್ಮಗಳಿಗೂ ನಾಶವಾದರೆ ಆವಾಗಲೇ ಮುಕ್ತಿಯಾಗುವುದು. ಆದುದರಿಂದ ಕರ್ಮಗಳು ಪ್ರತಿಬಂಧಕಗಳು ಆಗಿರುವುದರಿಂದ ಜ್ಞಾನಕ್ಕೆ ಮೋಕ್ಷಸಾಧನತ್ವಾ ನಿಯಮವು ಎಂದರೆ— ಹೀಗೆ ಹೇಳಕೂಡದು. ಜ್ಞಾನವು ಹುಟ್ಟಿದರೂ ಪ್ರಾರಬ್ಧವಾದ ಮಾಡಲ್ಪಟ್ಟ ಕರ್ಮವು ಭೋಗಪರ್ಯಂತವಾಗಿ ಇರುವುದರಿಂದ ಆವಾಗಲೇ ಮೋಕ್ಷವು ಆಗುವುದಿಲ್ಲ. '**ಕರ್ಮಾಣಿ ಕ್ಷಪಯೇದ್ವಿಷ್ಣುರಪ್ರಾರಬ್ಧಾನಿ ವಿದ್ಯಯಾ । ಪ್ರಾರಬ್ಧಾನಿ ತು ಭೋಗೇನ ಕ್ಷಪಯಾನ್ ಸ್ವಂ ಪದಂ ನಯೇತ್**' ಎನ್ನುವ ವಚನವೂ ಇದೆ.) ॥ ೧೨೬ ॥ ೧೨೭ ॥

**ಚತುರ್ಥಾಧ್ಯಾಯದ ಪ್ರಥಮಪಾದದ ಪೂರ್ವಪಕ್ಷ**

**ಸಿದ್ಧಾಂತಯುಕ್ತಿಸಮರ್ಥನವು.**

---

# ವಾಗಧಿಕರಣವು

*** 'ಓಂ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ಓಂ' ಸೂ. ೧ ॥**

---

* ಈ ಎರಡನೇ ಪಾದದ ಸೂತ್ರಾರ್ಥವನ್ನು ಹೇಳದೆ ಇದ್ದುದರಿಂದ ಅದನ್ನು ಹೇಳುತ್ತಾ ಪೂರ್ವಪಕ್ಷ ಸಿದ್ಧಾಂತಯುಕ್ತಿಗಳನ್ನು ನಿರೂಪಿಸುತ್ತೇವೆ.

ವಾಗಭಿಮಾನಿಯಾದ ವಾರುಣಿಯೂ ಸೌಪರ್ಣಿಯೂ ಕೂಡ ಮನೋಽಭಿಮಾನಿಯಾದ ಶೇಷನಲ್ಲಿಯೂ ಸುಪರ್ಣನಲ್ಲಿಯೂ ಕೂಡ ಲಯವನ್ನು ಹೊಂದುತ್ತಾರೆ. ವಾಗಿಂದ್ರಿಯಕ್ಕೆ ಮನೋವಶತ್ವವು ಪ್ರತ್ಯಕ್ಷದಿಂದಲೇ ಸಿದ್ಧವಾಗಿದೆ. ಮನಸ್ಸಿನಿಂದ ಸಂಕಲ್ಪಿತವಾದುದನ್ನು ವಚನ ದಿಂದ ವ್ಯವಹಾರ ಮಾಡುತ್ತಾರೆ. **'ತಸ್ಯ ಯಾವನ್ನ ವಾಙ್ಮನಸಿ ಸಂಪದ್ಯತೇ'** ಎನ್ನುವ ಶ್ರುತಿಯಿದ್ದುದರಿಂದಲೂ,

**'ಓಂ ಅತ ಏವ ಚ ಸರ್ವಾಣ್ಯನು ಓಂ'** ॥ ಸೂ. ೨ ॥

**'ಅಗ್ನೌ ಸರ್ವೇ ದೇವಾ ವಿಲೀಯಂತೇ'** ಎನ್ನುವ ಶ್ರುತಿಯಿಂದಲೇ ಇಂದ್ರಿಯಾದ್ಯಭಿ ಮಾನಿ ದೇವತೆಗಳು ನಿಯಮ್ಯ-ನಿಯಾಮಕಾನುಸಾರದಿಂದಲೇ ಲಯವನ್ನು ಹೊಂದುತ್ತಾರೆ ॥ ಸೂ. ೧ ॥ ೨ ॥ ಅಧಿ ೧ ॥

**ವಾಗಧಿಕರಣವು ಸಮಾಪ್ತವಾಯಿತು.**

---

## ಮನಃಪ್ರಾಣಾಧಿಕರಣವು

**'ಓಂ ತನ್ಮನಃ ಪ್ರಾಣ ಉತ್ತರಾತ್ ಓಂ'** ॥ ಸೂ. ೩ ॥

ವಾಙ್ನಿಯಾಮಕರಾಗಿ ಪ್ರಸ್ತುತರಾದ ಮನೋಭಿಮಾನಿಗಳಾದ ಶೇಷ ಗರುಡರು ವಾಣೀ ದ್ವಾರಾ ಚತುರ್ಮುಖನಲ್ಲಿ ಲಯವನ್ನು ಹೊಂದುತ್ತಾರೆ. **'ಮನಃ ಪ್ರಾಣೇ'** ಎನ್ನುವ ಉತ್ತರ ವಾಕ್ಯದಿಂದ ॥ ಸೂ ೩ ॥ ಅಧಿ. ೧೨ ॥

**ಮನಃಪ್ರಾಣಾಧಿಕರಣವು ಸಮಾಪ್ತವಾಯಿತು**

---

## ಅಧ್ಯಕ್ಷಾಧಿಕರಣವು

'ಓಂ **ಸೋಽಧ್ಯಕ್ಷೇ ತದುಪಗಮಾದಿಭ್ಯಃ** ಓಂ' ॥ ಸೂ. ೪ ॥

ಪ್ರಾಣನು ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾನೆ. **'ಪ್ರಾಣಃ ಪರಮುಪಗಚ್ಛತಿ ಪ್ರಾಣಃ ಪರಮನು ಪ್ರಾಣಿತಿ ಪ್ರಾಣಃ ಪರಸ್ಯಾಂ ದೇವತಾಯಾಂ'** ಇತ್ಯಾದಿ ಶ್ರೀ ಹರಿಯ ಪ್ರಾಪ್ತಿಯನ್ನು ಪ್ರತಿಪಾದಿಸತಕ್ಕ ಶ್ರುತಿಸ್ಮೃತಿಗಳು ಇದ್ದುದದರಿಂದ ॥ ಸೂ. ೪ ॥ ಅಧಿ. ೩ ॥

**ಅಧ್ಯಕ್ಷಾಧಿಕರಣವು ಸಮಾಪ್ತವಾಯಿತು**

---

## ಭೂತಾಧಿಕರಣವು

'ಓಂ **ಭೂತೇಷು ತಚ್ಛ್ರುತೇಃ** ಓಂ' ॥ ಸೂ. ೫ ॥

ಇತರ ದೇವತೆಗಳು ಭೂತಾಭಿಮಾನಗಳಲ್ಲಿ ಲಯುವನ್ನು ಹೊಂದುತ್ತಾರೆ. **'ಭೂತೇಷು ದೇವಾಃ ವಿಲೀಯಂತೇ'** ಎಂದು ಶ್ರುತಿಯಿದ್ದದರಿಂದ ॥ ಸೂ. ॥ ೫ ॥ ಅಧಿ. ॥ ೪ ॥

**ಭೂತಾಧಿಕರಣವು ಸಮಾಪ್ತವಾಯಿತು.**

# ನೈಕಸ್ಮಿನ್ನಧಿಕರಣವು.

## 'ಓಂ ನೈಕಸ್ಮಿನ್ ದರ್ಶಯತೋ ಹಿ ಓಂ' ॥ ಸೂ. ೫ ॥

ಅಗ್ನಿಯಲ್ಲಿಯೇ ಎಲ್ಲಾ ದೇವತೆಗಳೂ ಲಯುವನ್ನು ಹೊಂದುವುದಿಲ್ಲ. **'ಪೃಥಿವ್ಯಾಮೃಭವೋ ವಿಲೀಯಂತೇ ಋಭವಃ ಪೃಥಿವ್ಯಾಂ'** ಎನ್ನುವ ಮಹೋಪನಿಷತ್ತು ಚತುರ್ವೇದ ಶಿಖೆಗಳು ತೋರಿಸುತ್ತವೆ ॥ ಸೂ. ॥ ೬ ॥ ಅಧಿ. ॥ ೫ ॥

**ನೈಕಸ್ಮಿನ್ನಧಿಕರಣವು ಸಮಾಪ್ತವಾಯಿತು.**

# ಸಮನಾಧಿಕರಣವು

## 'ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ' ॥ ಸೂ. ॥ ೭ ॥

ದೇಶಕಾಲವ್ಯಾಪ್ತಿಯಿಂದಲೇ ಸಮನಾದ ಪರಮಪುರುಷನಾದ ಶ್ರೀ ಹರಿಯುಳ್ಳ ಲಕ್ಷ್ಮೀದೇವಿಯು ಶ್ರೀ ಹರಿಯಲ್ಲಿ ಲಯುವನ್ನು ಹೊಂದುವುದಿಲ್ಲ. ಯಾವಾಗಲೂ ಸಂಸಾರೋಪಕ್ರಮಣವೇ ಇಲ್ಲದಿರುವುದರಿಂದ ಉಪಾಸನಮಾಡದೇನೇ ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವವು—

## 'ಓಂ ತದಪಿತೇಃ ಸಂಸಾರವ್ಯಪದೇಶಾತ್ ಓಂ' ॥ ಸೂ ॥ ೮ ॥

**'ವಿಲೀನೋ ಹಿ ಪ್ರಕೃತೌ ಸಂಸಾರಮೇತಿ ವಿಲೀನಃ ಪರಮೋ ಹ್ಯಮೃತತ್ವಮೇತಿ'** ಎನ್ನುವ ಶ್ರುತಿಯಲ್ಲಿ ಲಕ್ಷ್ಮೀದೇವಿಯಲ್ಲಿ ಲಯುಕ್ಕೆ ಸಂಸಾರಕಾರಣತ್ವವನ್ನು ವ್ಯಪದೇಶ ಮಾಡಿದರಿಂದಲೂ, ಶ್ರೀ ಹರಿಯಲ್ಲಿ ಲಯುಕ್ಕೆ ಮುಕ್ತಿಕಾರಣತ್ವವನ್ನು ವ್ಯಪದೇಶಮಾಡಿದರಿಂದಲೂ, ಲಕ್ಷ್ಮಿಗೆ ಶ್ರೀ ಹರಿಯಿಂದ ಸರ್ವಸಾಮ್ಯವಿಲ್ಲ—

## 'ಓಂ ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ ಓಂ' ॥ ಸೂ ॥ ೯ ॥

ಲಕ್ಷ್ಮೀದೇವಿಯಿಂದಲೂ ಪರಬ್ರಹ್ಮನು ಅತಿ ಸೂಕ್ಷ್ಮನು. ಜ್ಞಾನಾನಂದಾದಿ ಗುಣಪರಿಮಾಣದಿಂದ ಅಧಿಕನು. **'ಸರ್ವತಃ ಪ್ರಕೃತಿಃ ಸೂಕ್ಷ್ಮಾ ಪ್ರಕೃತೇಃ ಪರಮೇಶ್ವರಃ'** ಎನ್ನುವ ಶ್ರುತಿಯಲ್ಲಿ ಹಾಗೆ ಕಂಡದರಿಂದ. ಆದುದರಿಂದಲೂ ಸರ್ವಸಾಮ್ಯವಿಲ್ಲ—

## 'ಓಂ ನೋಪಮರ್ದೇನಾತಃ ಓಂ' ॥ ಸೂ ॥ ೧೦ ॥

ಸಾಮ್ಯ ಸಾಮ್ಯಾಭಾವವನ್ನು ಹೀಗೆ ಸಾಧಿಸಿದರಿಂದ ಸ್ವಾತಂತ್ರ್ಯಮೊದಲಾದ ಅಸಾಧಾರಣ ಗುಣಗಳನ್ನು ಬಿಟ್ಟು ಶ್ರೀ ಹರಿಯಿಂದ ಲಕ್ಷ್ಮೀದೇವಿಗೆ ನಿತ್ಯಮುಕ್ತತ್ವಾದಿಗಳಿಂದ ಸಾಮ್ಯವು.

**'ಓಂ ಅಸ್ಯೈವ ಚೋಪಪತ್ತೇರೂಷ್ಮಾ ಓಂ'** ॥ ಸೂ ॥ ೧೧ ॥

ಊಷ್ಮಾಪದ ಘಟಿತವಾದ **'ದ್ವಿಧಾ ಹೀದಂ ದೃಶ್ಯತೇ'** ಎನ್ನುವ ಶ್ರುತಿಯು ಸ್ವಲ್ಪ ಸಾಮ್ಯವನ್ನೇ ಉಪಪಾದಿಸುತ್ತದೆ

**'ಓಂ ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ಓಂ'** ॥ ಸೂ ॥೧೨ ॥

**'ಅಸನ್ನೋ ವಾ ಏಷ ಭವತಿ'** ಎನ್ನುವ ಚತುರ್ವೇದಶಿಖೆಯಲ್ಲಿ ದೇಶಕಾಲ ವ್ಯಾಪ್ತ್ಯಾದಿಗಳಿಂದಲೂ ಸಾಮ್ಯವನ್ನು ನಿಷೇಧಮಾಡಿದ್ದರಿಂದ ಲಕ್ಷ್ಮೀದೇವಿಗೆ ದೇಶಕಾಲ ವ್ಯಾಪ್ತಿಯಿಂದ ಸಾಮ್ಯವಿಲ್ಲ, ಎಂದು ಹೇಳಕೂಡದು. ಈ ಸಾಮ್ಯವನ್ನು ಜೀವನಿಂದಲೇ ಪ್ರತಿಷೇಧಮಾಡಿದ್ದು. ಲಕ್ಷ್ಮೀದೇವಿಯಿಂದಲ್ಲ.

**'ಓಂ ಸ್ಪಷ್ಟೋ ಹ್ಯೇಕೇಷಾಂ ಓಂ'** ॥ ಸೂ ॥ ೧೩ ॥

ಮಾಧ್ಯಂದಿನರ **'ಅಥಾಸಮಾಃ ಬ್ರಹ್ಮೇಂದ್ರೋ ರುದ್ರಃ'** ಎನ್ನುವ ಶ್ರುತಿಯಲ್ಲಿ ಜೀವರಿಗೇನೇ ಅಸಮತ್ವೋಕ್ತಿಪೂರ್ವಕವಾಗಿ ಲಕ್ಷ್ಮಿಗೆ ಸಮಾಸಮತ್ವವಾದವು ಸ್ಪಷ್ಟವಾಗಿದೆ.

**'ಓಂ ಸ್ಮರ್ಯತೇ ಚ ಓಂ'** ॥ ಸೂ ॥ ೧೪ ॥

**'ಬ್ರಹ್ಮಾದ್ಯಾಸ್ತ್ವತ್ಸಮಾಃ ಪ್ರೋಕ್ತಾಃ ಪ್ರಕೃತಿಶ್ಚ ಸಮಾಸಮಾ'** ಎಂದು ಜೀವರಿಗೆ ಅಸಮತ್ವವು ಲಕ್ಷ್ಮಿಗೆ ಸಮಾಸಮತ್ವವು ಎಂದು ಸ್ಮೃತಿಸಿದ್ಧವಾಗಿದೆ ॥ ಸೂ ॥ ೭ ॥ ೮ ॥ ೯ ॥ ॥ ೧೦ ॥ ೧೧ ॥ ೧೨ ॥ ೧೩ ॥ ೧೪ ॥ ಅಧಿ ॥ ೬ ॥

**ಸಮನಾಧಿಕರಣವು ಸಮಾಪ್ತವಾಯಿತು.**

---

# ತಾನಿಪರಾಧಿಕರಣವು.

**"ಓಂ ತಾನಿ ಪರೇ ತಥಾ ಹ್ಯಾಹ ಓಂ"** ॥ ಸೂ. ೧೫ ॥

ಇತರ ದೇವತೆಗಳು ಪರಮಾತ್ಮನಲ್ಲಿ ವಿರಿಂಚಿದ್ವಾರಾ ಲಯವನ್ನು ಹೊಂದುತ್ತಾರೆ. ಏಕೆಂದರೆ- ಸರ್ವೇ ದೇವಾ ಎನ್ನುವ ಶ್ರುತಿಯು ಹಾಗೆ ಹೇಳುತ್ತದೆ ॥ ಸೂ. ॥ ೧೫ ॥ಅಧಿ. ॥ ೭ ॥

**ತಾನಿಪರಾಧಿಕರಣವು ಸಮಾಪ್ತವಾಯಿತು.**

---

# ಅವಿಭಾಗಾಧಿಕರಣವು.

**"ಓಂ ಅವಿಭಾಗೋ ವಚನಾತ್ ಓಂ"** ॥ ಸೂ. ೧೬ ॥

ದೇವಾದಿ ಮುಕ್ತರ ಸತ್ಯಕಾಮತ್ವಕ್ಕೆ ಈಶ್ವರೇಚ್ಛೆಯಿಂದ ಅವಿಭಾಗವು ಅಂದರೆ ಈಶೇಚ್ಛಾನುಸಾರವಾದ ಇಚ್ಛಾವತ್ವವೂ 'ಕಾಮೇನ ಮೇ ಕಾಮ ಆಗಾತ್' ಎನ್ನುವ ಶ್ರುತಿಯಿಂದ್ಧ ಸೂ. ॥ ೧೬ ॥ ಅಧಿ. ೮ ॥

**ಅವಿಭಾಗಾಧಿಕರಣವು ಸಮಾಪ್ತವಾಯಿತು.**

---

## ತದೋಕೋಧಿಕರಣವು.

**"ಓಂ ತದೋಕೋಗ್ರಜ್ವಲನಂ ತತ್ಪ್ರಕಾಶಿಕದ್ವಾರೋ ವಿದ್ಯಾಸಾಮರ್ಥ್ಯಾತ್ತಚ್ಛೇಷಗತ್ಯನುಸ್ಮೃತಿಯೋಗಾಚ್ಚಹಾರ್ದಾನುಗೃಹೀತಃ ಶತಾಧಿಕಯಾ ಓಂ"** ॥ ಸೂ. ೧೭ ॥

ಉತ್ಕ್ರಮಣಕಾಲದಲ್ಲಿ ಶ್ರೀ ಹರಿಗೆ ಆವಾಸಸ್ಥಾನವಾಗಿರುವ ಜೀವನ ಹೃದಯದ ಅಗ್ರಭಾಗದಲ್ಲಿ ಪ್ರಭೆಯು ಪ್ರಾದುರ್ಭವಿಸುತ್ತದೆ. ಆ ಪ್ರಕಾಶದಿಂದ ಪ್ರಕಾಶಿಸಲ್ಪಟ್ಟ ನಾಡೀದ್ವಾರವುಳ್ಳವನಾಗಿ ದೇಹದಿಂದ ಅಪರೋಕ್ಷಜ್ಞಾನಿಯು ಹೊರಟುಹೋಗುತ್ತಾನೆ. ಅಜ್ಞನು ಹೀಗೆ ಅಲ್ಲ. ಆದುದರಿಂದ ಜ್ಞಾನಿಗಳಿಗೆ ವಿಶೇಷವಿದೆ. ಈಶ್ವರಾಪರೋಕ್ಷಶಕ್ತಿಯಿಂದ ವಿದ್ಯೆಗೆ ಅಂಗಭೂತವಾದ ಹೃದಯವನ್ನಾರಂಭಿಸಿ ಬ್ರಹ್ಮಪ್ರಾಪ್ತಿಪರ್ಯಂತರವಾಗಿ ಯಾವ ಗತಿಯೋ ಅದರ ಸಾಹಿತ್ಯದಿಂದ ಗತಾಧಿಕವಾದ ಸುಷುಮ್ನಾಖ್ಯವಾದ ನಾಡಿಯಿಂದ ಹೃದಯದಲ್ಲಿರತಕ್ಕ ವಿದ್ಯಾಪ್ರಸನ್ನನಾದ ಶ್ರೀ ಹರಿಯಿಂದ ಅನುಗೃಹೀತನಾಗಿ ಹೋಗುತ್ತಾನೆ.

**'ಓಂ ರಶ್ಮ್ಯನುಸಾರೀ ಓಂ'** ॥ ಸೂ. ೧೮ ॥

'ಸಹಸ್ರಂ ವಾ ಆದಿತ್ಯಸ್ಯ ರಶ್ಮಯಃ' ಎನ್ನುವ ಶ್ರುತಿಯಿಂದ ನಾಡ್ಯಂತರ್ಗತಗಳಾದ ಸೂರ್ಯ ರಶ್ಮಿಗಳಿಂದ ಕೂಡಿದವನಾಗಿ ಜ್ಞಾನಿಯು ಹೊರಟುಹೋಗುತ್ತಾನೆ.

**'ಓಂ ನಿಶಿ ನೇತಿ ಚೇನ್ನ ಸಂಬಂಧಾತ್ ಓಂ'** ॥ ಸೂ. ೧೯ ॥

ರಾತ್ರಿಯಲ್ಲಿ ಪರ್ಯವಸಿತ ಕರ್ಮವುಳ್ಳವರಿಗೆ ಉತ್ಕ್ರಮಣವೇ ಇಲ್ಲವೆಂದಾಗುವುದು. ಸೌರರಶ್ಮಿ ಇಲ್ಲದಿರುವುದರಿಂದ ಎಂದರೆ ಹಾಗೆ ಹೇಳಕೂಡದು. ಬಾಹ್ಯಾದಿತ್ಯನಿಲ್ಲದಿದ್ದರೂ, ಅಂತಸ್ಥ ಆದಿತ್ಯರಶ್ಮಿಗಳಿಗೆ ಸದಾ ನಾಡಿಸಂಬಂಧವದೆ.

**'ಓಂ ಯಾವದ್ದೇಹಭಾವಿತ್ವಾದ್ದರ್ಶಯತಿ ಚ ಓಂ'** ಸೂ. ॥ ೨೦ ॥

ನಾಡಿರಶ್ಮಿ ಸಂಬಂಧವು ದೇಹ ಇರುವತನಕವಿದೆ. 'ಸಂಸೃಷ್ಟಾ ವಾ ಏತೇ ರಶ್ಮಯಶ್ಚ ನಾಡ್ಯಶ್ಚ ನೈಷಾಂ ಯೋಗಃ ಯಾವದಿದಂ ಶರೀರಂ' ಎನ್ನುವ ಶ್ರುತಿಯು ತೋರಿಸುತ್ತದೆ.

'ಓಂ ಅತಶ್ಚಾಯನೇಽಪಿ ಹಿ ದಕ್ಷಿಣೇ ಓಂ' ಸೂ. ॥ ೨೧ ॥

ನಾಡೀರಶ್ಮಿಸಂಬಂಧವು ದೇಹವಿರುವತನಕವಿರುವುದರಿಂದಲೇ, ದಕ್ಷಿಣಾಯನ ಕಾಲದಲ್ಲಿಯೂ ಜ್ಞಾನಿಗೆ ಉತ್ಕ್ರಮಣವು ಯುಕ್ತವು. ಸೂ. ॥ ೧೭ ॥ ೧೮ ॥ ೧೯ ॥ ೨೦ ॥ ೨೧ ॥ ಅಧಿ. ॥ ೯ ॥

**ತದೋಕೋಧಿಕರಣವು ಸಮಾಪ್ತವಾಯಿತು.**

---

# ಯೋಗ್ಯಧಿಕರಣವು.

'ಓಂ ಯೋಗಿನಃ ಪ್ರತಿಸ್ಮರ್ಯೇತೇ ಸ್ಮಾರ್ತೇ ಚೈತೇ ಓಂ' ಸೂ. ॥ ೨೨ ॥

ಬ್ರಹ್ಮ ಚಂದ್ರಗತಿಗಳು ಜ್ಞಾನಕರ್ಮರೂಪ ಉಪಾಯವುಳ್ಳವರನ್ನು ಕುರಿತು 'ಅಗ್ನಿರ್ಜ್ಯೋತಿರಹಃ ಶುಕ್ಲಃ ಧೂಮೋ ರಾತ್ರಿಸ್ತಥಾ ಕೃಷ್ಣಃ' ಇತ್ಯಾದಿಶ್ರುತಿಗಳಲ್ಲಿ ಹೇಳಲ್ಪಡುತ್ತದೆ. ಇವುಗಳು ಗತ್ಯನುಶ್ರುತಿಸಾಧ್ಯಗಳೇ ಆಗಿವೆ. ಸೂ. ॥ ೨೨ ॥ ಅಧಿ. ॥ ೧೦ ॥

**ಯೋಗ್ಯಧಿಕಣರವು ಸಮಾಪ್ತವಾಯಿತು.**

---

ಮೂ ॥ ವ್ಯಾಮಿಶ್ರತಾ ಕಾರ್ಯಕರತ್ವಮರ್ಥಃ
ಕ್ಲೃಪ್ತಿಃ ಸುದಾರ್ಢ್ಯಂ ಪರತಂತ್ರತಾ ಚ ।
ಸಮಾನಧರ್ಮಃ ಕೃತಶೇಷತಾ ಚ
ಲೋಕೋಪಮಾ ಪೂರ್ವಮತಾನುಸಾರಾಃ ॥ ೧೨೮ ॥
ವಿಶೇಷಸಾಮ್ಯಂ ಶ್ರುತಿದಾರ್ಢ್ಯ(ರಾಢ್ಯ)ತಾ ಚ
ಸಮಾನಲೋಪೋ ಮಹಿಮಾ ವಿಶೇಷಃ ।
ಕೃತಾರ್ಥತಾ ಶಶ್ವದನುಪ್ರವೃತ್ತಿಃ
ಸಿದ್ಧಾಂತನಿರ್ಣೀತಿವಿಶಿಷ್ಟಹೇತವಃ ॥ ೧೨೯ ॥

ಅ ॥ (೧ನೇ ಅಧಿಕರಣದಲ್ಲಿ— ವಾಗಭಿಮಾನಿಯು ಮನೋಽಭಿಮಾನಿಯಲ್ಲಿ ಲಯವನ್ನು ಹೊಂದುತ್ತದೋ, ಇಲ್ಲವೋ ಎಂದು ಸಂದೇಹವು ಬಂದರೆ— ಇಲ್ಲವೆಂದು ಪೂರ್ವಪಕ್ಷವು; ಮನಸ್ಸಿನಲ್ಲಿಯೇ ಲಯವನ್ನು ಹೊಂದುತ್ತದೆಂದು ಸಿದ್ಧಾಂತವು. ಅದರಲ್ಲಿ), ವ್ಯಾಮಿಶ್ರತಾ= ಉಕ್ತಿಗೆ ಮಿಶ್ರತ್ವವು, (ಎಂದು ಪೂರ್ವಪಕ್ಷನ್ಯಾಯವು;) ವಿಶೇಷಸಾಮ್ಯಶ್ರುತಿಃ=ವಿಶೇಷವಾಗಿ ಸಾಮ್ಯಶ್ರುತಿಯು, (ಎಂದು ಸಿದ್ಧಾಂತನ್ಯಾಯವು.) (ಅಂದರೆ— ವಾಙ್ಮನಸ್ಸುಗಳಿಗೆ ನಿಯಮ್ಯ-ನಿಯಾಮಕ ಭಾವವಿಷಯದಲ್ಲಿ 'ವಾಕ್ಪೂರ್ವರೂಪಂ ಮನ ಉತ್ತರರೂಪಂ ಮನಃ

**ಪೂರ್ವರೂಪಂ ವಾಗುತ್ತರರೂಪಂ'** ಎಂದು ಪ್ರತಿಪಾದಕ ಉಕ್ತಿಗಳು ವ್ಯಾಮಿಶ್ರಗಳಾಗಿರುವುದರಿಂದ, ನಿಶ್ಚಯುವಾಗದಿರುವುದರಿಂದ ಮನಸ್ಸಿನಲ್ಲಿ ವಾಗಭಿಮಾನಿಗೆ ಲಯುವಾಗುವುದಿಲ್ಲ ಎಂದರೆ— ವಾಙ್ಮನಸ್ಸುಗಳಿಗೆ ನಿಯಮ್ಯ-ನಿಯಾಮಕಭಾವವು '**ಮನಸಾ ವಾ ಅಗ್ರೇ ಸಂಕಲ್ಪಯತಿ ಅಥ ವಾಚಾ ವ್ಯಾಹರತಿ'** 'ಇತ್ಯಾದ್ಯುಕ್ತರೀತಿಯಿಂದ ನಿಶ್ಚಯುವು ಕೂಡುವುದರಿಂದ ವಾಗಿಂದ್ರಿಯಕ್ಕೆ ಮನಸ್ಸಿನಲ್ಲಿ ಲಯುವು ಕೂಡುತ್ತದೆ.) (೨ನೇ ಅಧಿಕರಣದಲ್ಲಿ— ಮನಸ್ಸು ಪ್ರಾಣನಲ್ಲಿ ಲಯುವನ್ನು ಹೊಂದುತ್ತದೋ, ಇಲ್ಲವೋ ಎಂದು ಸಂದೇಹವು ಬಂದರೆ— ಇಲ್ಲವೆಂದು ಪೂರ್ವಪಕ್ಷವು; ಪ್ರಾಣನಲ್ಲಿ ಲಯುವನ್ನು ಹೊಂದುತ್ತದೆಂದು ಸಿದ್ಧಾಂತವು. ಅದರಲ್ಲಿ), **ಕಾರ್ಯಕರತ್ವಂ**=ಎಲ್ಲಾ ಕಾರ್ಯಗಳನ್ನು ಮಾಡುವಿಕ, (ಎಂದು ಪೂರ್ವಪಕ್ಷನ್ಯಾಯುವು;) **ಆಧ್ಯತಾ**=ಪ್ರಾಣನಿಗೇನೇ ಆಧ್ಯತ್ವವು, (ಎಂದು ಸಿದ್ಧಾಂತನ್ಯಾಯುವು.) (ಅಂದರೆ— ಹೇಗೆ ಪ್ರಾಣನು ಸರ್ವಪ್ರವೃತ್ತಿಗೆ ಕಾರಣನೋ, ಹಾಗೆಯೇ ಮನಸ್ಸೂ ಕೂಡ ಅನ್ವಯ ವ್ಯತಿರೇಕಗಳಿಂದ ಸರ್ವಪ್ರವೃತ್ತಿಕಾರಣವಾಗಿ ಕಾಣಲ್ಪಡುತ್ತದೆ. ಏನಂಚ ಮನಸ್ಸು ಸರ್ವಕಾರ್ಯಕ್ಕೂ ಕರಣವಾಗಿರುವುದರಿಂದ, ಪ್ರಾಣನಕ್ಕಿಂತ ಅನೂನತ್ವವಿದ್ದುದರಿಂದ, ಪ್ರಾಣನಲ್ಲಿ ಲಯುವಿಲ್ಲದಿರುವುದರಿಂದ ಹೇಳಿದ್ದು ಅಯುಕ್ತವು. ಎಂದರೆ— '**ಇಂದ್ರಿಯಸ್ಥೈಃ ಸ್ವರೂಪೈಸ್ತು'** ಇತ್ಯಾದಿ ಶ್ರುತಿಗಳಿಂದ ಮನಸ್ಸಿಗಿಂತ ಪ್ರಾಣನಿಗೆ ಆಧ್ಯತ್ವವಿದ್ದುದರಿಂದ ಮನಸ್ಸಿಗೆ ಪ್ರಾಣನಲ್ಲಿ ಲಯುವು.) (೩ನೇ ಅಧಿಕರಣದಲ್ಲಿ— ಶ್ರೀ ಹರಿಯಲ್ಲಿ ಪ್ರಾಣನು ಲಯುವನ್ನು ಹೊಂದುತ್ತಾನೋ, ಇಲ್ಲವೋ ಎಂದು ಸಂದೇಹವು ಬಂದರೆ— ಹೊಂದುವುದಿಲ್ಲವೆಂದು ಪೂರ್ವಪಕ್ಷವು; ಹೊಂದುತ್ತಾನೆಂದು ಸಿದ್ಧಾಂತವು. ಅದರಲ್ಲಿ), 'ಕಾರ್ಯಕರತ್ವಂ' (ಎಂದು ಪೂರ್ವಪಕ್ಷನ್ಯಾಯುವು;) 'ಆಧ್ಯತಾ' (ಎನ್ನುವುದೇ ಸಿದ್ಧಾಂತನ್ಯಾಯುವು) (ಅಂದರೆ— ಶ್ರೀ ಹರಿಯಕ್ಕಿಂತ ಊನನಾದವನಿಗೇನೇ ಶ್ರೀ ಹರಿಯಲ್ಲಿ ಲಯುವನ್ನು ಹೇಳಬೇಕು; ಪ್ರಾಣನಿಗೆ ಶ್ರೀ ಹರಿಯಕ್ಕಿಂತ ಊನತ್ವವು ಕೂಡುವುದಿಲ್ಲ ಹೇಗೆ ಶ್ರೀ ಹರಿಯು ಸರ್ವಕಾರ್ಯಗಳನ್ನು ಮಾಡುವವನೋ, ಹಾಗೆಯೇ ಪ್ರಾಣನು; '**ಪ್ರಾಣಾದಿದಮಾವಿರಾಸೀತ್'** ಎನ್ನುವ ಶ್ರುತಿಯಿಂದ ಪ್ರಾಣನೇ ಸರ್ವಕಾರ್ಯಕರ್ತನೆಂದು ಪ್ರತೀತನಾಗುತ್ತಾನೆ. ಆದುದರಿಂದ ಪ್ರಾಣನು ಪರಮಾತ್ಮನಲ್ಲಿ ಲಯುವನ್ನು ಹೊಂದುವುದಿಲ್ಲ ಎಂದರೆ- '**ಸರ್ವಂ ಹ್ಯೇವತತ್ಪರಮೇऽವತಿಷ್ಠತೇ ಪ್ರಾಣಶ್ಚ ಪ್ರಾಣಾಶ್ಚ'** ಇತ್ಯಾದಿ ಶ್ರುತಿಯಿಂದ ಪ್ರಾಣನಿಂದಲೂ ಪರಮಾತ್ಮನಿಗೆ ಆಧ್ಯತ್ವವು ಅವಗತವಾಗುತ್ತದೆ.)(೪ನೇ ಅಧಿಕರಣದಲ್ಲಿ- ಋಭ್ವಾದಿ ದೇವತೆಗಳು ಅಗ್ನಿಯಲ್ಲಿಯೇ, ಲಯುವನ್ನು ಹೊಂದುತ್ತಾರೆ (ಭೂತಾಂತರದಲ್ಲಿಯೋ ಎಂದು ಸಂದೇಹವು ಬಂದರೆ— ಅಗ್ನಿಯಲ್ಲಿಯೇ ಸರ್ವರಿಗೂ ಲಯುವು ಎಂದು ಪೂರ್ವಪಕ್ಷವು; ಕೇವಲ ಅಗ್ನಿಯಲ್ಲಿ ಅಲ್ಲ, ಪೃಥಿವ್ಯಾದಿ-ಭೂತಾಂತರದಲ್ಲಿಯೂ ಎಂದು ಸಿದ್ಧಾಂತವು. ಅದರಲ್ಲಿ ಕಾರ್ಯಕರತ್ವ-ಆಧ್ಯತ್ವಗಳೇ ಪೂರ್ವಪಕ್ಷಸಿದ್ಧಾಂತನ್ಯಾಯುಗಳು. ಅಂದರೆ— '**ಅಗ್ನೌ ಸರ್ವೇ ದೇವಾ ವಿಲೀಯಂತೇ'** ಎನ್ನುವ ಶ್ರುತ್ಯರ್ಥವಾದ ಎಲ್ಲಾ ದೇವತೆಗಳಿಗೂ ಅಗ್ನಿಯಲ್ಲಿಯೇ ಲಯುವು ಎನ್ನುವ ಅರ್ಥವು ಕ್ಲೃಪ್ತವಾಗಿದೆ. ಎಂದರೆ— '**ಭೂತೇಷು ದೇವಾ ವಿಲೀಯಂತೇ'** ಎನ್ನುವ ಶ್ರುತಿರೂಪವಾದ, ಪ್ರಮಾಣಸಹಿತವಾದ ಲಯುವೇ ಗ್ರಾಹ್ಯವಾಗಿದೆ.) (೫ನೇ ಅಧಿಕರಣದಲ್ಲಿ— ದೇವತೆಗಳು ಅಗ್ನಿಯಲ್ಲಿಯೇ ಲಯುವನ್ನು ಹೊಂದುತ್ತಾರೋ, ಎಲ್ಲಾ ಭೂತಗಳಲ್ಲಿಯೋ ಎಂದು ಸಂದೇಹವು ಬಂದರೆ— ಅಗ್ನಿಯಲ್ಲಿಯೇ ಲಯುವನ್ನು ಹೊಂದುತ್ತಾರೆಂದು ಪೂರ್ವಪಕ್ಷವು; ಎಲ್ಲಾ ಭೂತಗಳಲ್ಲಿ ಎಂದು ಸಿದ್ಧಾಂತವು. ಅದರಲ್ಲಿ), **ಅರ್ಥಕ್ಲೃಪ್ತಿಃ**=ಕ್ಲೃಪ್ತವಾದ ಅರ್ಥವು, (ಎಂದು ಪೂರ್ವಪಕ್ಷನ್ಯಾಯುವು.) **ಸಮಾನಲೋಪಃ**=ವಿಶೇಷ ಶ್ರುತಿರೂಪವಾದ, ಪ್ರಮಾಣಸಹಿತವಾದ **ಲಯುವು,**

(ಎಂದು ಸಿದ್ಧಾಂತನ್ಯಾಯವು.) (ಅಂದರೆ— ಭೂತಗಳಿಗೆ ಉತ್ಪತ್ತಿಕ್ರಮಕ್ಕಿಂತ ವಿಪರೀತವಾಗಿ ಲಯವನ್ನು ಹೇಳಿದರಿಂದ ಮುಕ್ತಿ-ಲಯಗಳಿಗೆ ವಿಶೇಷವಿಲ್ಲದಿರುವುದರಿಂದಲೂ ಒಂದೇ ಅಗ್ನಿಯಲ್ಲಿ ಸರ್ವರಿಗೂ ಲಯವು ಅರ್ಥತಃ ಕ್ಲ್ಪಪ್ತವಾಗಿದೆ ಎಂದರೆ— ಆಯಾವ ದೇವತೆಗಳಿಗೆ ಆಯಾವ ಭೂತದಲ್ಲಿಯೇ ಸಾಕ್ಷಾತ್ ಲಯವು ಎಂದು ಹೇಳಬೇಕು. ಒಂದೇ ಭೂತದಲ್ಲಿ ಸರ್ವರಿಗೆ ಲಯವಲ್ಲ. ಮತ್ತು ವಿಶೇಷವಚನವಿಲ್ಲದಿದ್ದರೆ ವರುಣಾದಿಗಳಿಂದ ಹುಟ್ಟಿರತಕ್ಕ ಅಬಾದಿ ದೇವತೆಗಳಿಗೆ ಸಮಾನರಾದ ವರುಣಾದಿಗಳಿಂದ ಹುಟ್ಟಿರತಕ್ಕ ಅಶ್ವಿನೀ ಮೊದಲಾದವರಿಗೆ ಸ್ವಸಮಾನ ಅಬಾದಿ ದೇವತಾಲಯಸ್ಥಾನರಾದ ವರುಣಾದಿಗಳಲ್ಲಿ ಲಯವನ್ನು ಹೇಳಬೇಕು. **'ಪೃಥಿವ್ಯಾ-ವ್ಯಭವಃ'** ಇತ್ಯಾದಿ ವಿಶೇಷಶ್ರುತಿಯೂ ಇದೆ. ಏಸಂಚ ಅವರವರಿಂದ ಉತ್ಪನ್ನರೆಂದು ಅನುಕ್ತ ದೇವತೆಗಳಿಗೂ ಅಲ್ಲಿಯೇ ಲಯವೆಂದು ಹೇಳಬೇಕು.) (೬ನೇ ಅಧಿಕರಣದಲ್ಲಿ— ಪ್ರಕೃತಿಯು ಶ್ರೀ ಹರಿಯಲ್ಲಿ ಲಯವನ್ನು ಹೊಂದುತ್ತಾಳೋ, ಇಲ್ಲವೋ ಎಂದು ಸಂದೇಹವು ಬಂದರೆ— ಲಯವನ್ನು ಹೊಂದುತ್ತಾಳೆಂದು ಪೂರ್ವಪಕ್ಷವು; ಇಲ್ಲವೆಂದು ಸಿದ್ಧಾಂತವು. ಅದರಲ್ಲಿ), ಸುದಾರ್ಢ್ಯಂ=ಅತಿದಾರ್ಢ್ಯವು, (ಎಂದು ಪೂರ್ವಪಕ್ಷನ್ಯಾಯವು;) ಮಹಿಮಾ= ಮಾಹಾತ್ಮ್ಯವು, (ಎಂದು ಸಿದ್ಧಾಂತನ್ಯಾಯವು.)(ಅಂದರೆ—ಲಕ್ಷ್ಮೀದೇವಿಗೆ ಸಂಸಾರಾಭಾವಾದಿಗಳಿಂದ ಶ್ರೀ ಹರಿಯಿಂದಲೂ ಕೂಡ ಅನ್ಯಥಾ ಮಾಡಲಿಕ್ಕೆ ಶಕ್ಯವಲ್ಲದಿರುವುದರಿಂದ, ಅತಿ ದೃಢವಾಗಿರುವುದರಿಂದ ಶ್ರೀ ಹರಿಯಿಂದ ಸರ್ವಸಾಮ್ಯವೇ ಎಂದರೆ— **'ಸದಾಽನಿತ್ಯತಯಾಽ-ನಿತ್ಯಂ ನಿತ್ಯಂ ನಿತ್ಯಾತ್ಮನಾ ಯತಃ'** ಇತ್ಯಾದಿ ಶ್ರುತಿಗಳಿಂದ ಈಶ್ವರನಿಗೆ ಮಹಾಮಹಿಮೆಯಿದ್ದುದರಿಂದ ಲಕ್ಷ್ಮೀದೇವಿಗೆ ಈಶ್ವರನ ಸಾಮ್ಯವಿಲ್ಲ.) (೭ನೇ ಅಧಿಕರಣದಲ್ಲಿ— ಚತುರ್ಮುಖನಿಂದ ಇತರರಾದ ದೇವತೆಗಳು ಪರಮಾತ್ಮನಲ್ಲಿ ಲಯವನ್ನು ಹೊಂದುತ್ತಾರೋ, ಇಲ್ಲವೋ ಎಂದು ಸಂದೇಹವು ಬಂದರೆ— ಇಲ್ಲವೆಂದು ಪೂರ್ವಪಕ್ಷವು; ಲಯವನ್ನು ಹೊಂದುತ್ತಾರೆಂದು ಸಿದ್ಧಾಂತವು. ಅದರಲ್ಲಿ), ಪರತಂತ್ರತಾ ಚ=ಪರಾಧೀನತ್ವವು, (ಎಂದು ಪೂರ್ವಪಕ್ಷನ್ಯಾಯವು;) ವಿಶೇಷಃ=ವಿಶೇಷವು, (ಎಂದು ಸಿದ್ಧಾಂತನ್ಯಾಯವು) (ಅಂದರೆ—ಚತುರ್ಮುಖನಿಂದ ಇತರರಾದ ದೇವತೆಗಳಿಗೆ ಪ್ರಾಣಾಧೀನತ್ವವಿದ್ದುದರಿಂದ, ಪ್ರತಿಬಿಂಬಕ್ಕೆ ಬಿಂಬದಲ್ಲಿಯೇ ಲಯವು ನಿಯತವಾಗಿರುವುದರಿಂದ ಪರಮಾತ್ಮಪ್ರತಿಬಿಂಬತ್ವವಿಲ್ಲದಿರುವುದರಿಂದ ಪರಮಾತ್ಮನಲ್ಲಿ ಲಯವು ಇಲ್ಲ ಎಂದರೆ— **'ಪ್ರಾಣಂ ಪ್ರಾಪ್ಯ ಪರಂ ದೇವಾಃ'** ಎನ್ನುವ ವಿಶೇಷ ಶ್ರುತಿಯಿಂದ ಪ್ರಾಣದ್ವಾರಾ ಶ್ರೀಹರಿಪ್ರಾಪ್ತಿಯು.) (೮ನೇ ಅಧಿಕರಣದಲ್ಲಿ— ಮುಕ್ತರು ಸ್ವತಂತ್ರರೋ, ಅಲ್ಲವೋ ಎಂದು ಸಂಶಯವು ಬಂದರೆ— ಸ್ವತಂತ್ರರೆಂದು ಪೂರ್ವಪಕ್ಷವು; ಅಲ್ಲವೆಂದು ಸಿದ್ಧಾಂತವು. ಅದರಲ್ಲಿ), ಸಮಾನಧರ್ಮಃ=ಸಂಸಾರ ಸಮಾನಧರ್ಮವು, (ಎಂದು ಪೂರ್ವಪಕ್ಷನ್ಯಾಯವು.) ಕೃತಾರ್ಥತಾ=ಕೃತಕೃತ್ಯತ್ವವು (ಎಂದು ಸಿದ್ಧಾಂತನ್ಯಾಯವು.) (ಅಂದರೆ— ಮುಕ್ತರಿಗೆ ಅಸ್ವಾತಂತ್ರ್ಯವಿದ್ದರೆ ಮುಕ್ತಿಗೆ ಸಂಸಾರಸಮಾನಧರ್ಮತ್ವವು ಪ್ರಾಪ್ತವಾಗುವುದರಿಂದ ಮುಕ್ತರು ಸ್ವತಂತ್ರರೇ ಎಂದರೆ- ಮುಕ್ತರಿಗೆ ಕೃತಾರ್ಥತ್ವವಿದ್ದುದರಿಂದ ಪಾರತಂತ್ರ್ಯವಿದ್ದರೂ ದುಃಖಾದಿಗಳು ಬಾರದೆ ಇರುವುದರಿಂದ ಮುಕ್ತಿಗೆ ಸಂಸಾರಸಮಾನಧರ್ಮತ್ವವು ಇಲ್ಲದಿರುವುದರಿಂದ ವಿಷ್ಣುವಿಗೆ ಸರ್ವೋತ್ತಮತ್ವವು ಯುಕ್ತವು.) (೯ನೇ ಅಧಿಕರಣದಲ್ಲಿ— ಜ್ಞಾನಿಗಳ ಮರಣವೂ ಅಜ್ಞಜನರ ಮರಣದಂತೆಯೋ ಅಥವಾ ವೈಲಕ್ಷಣ್ಯದಿಂದಲೋ ಎಂದು ಸಂಶಯವು ಬಂದರೆ— ಅಜ್ಞಜನರ ಮರಣದಂತೆಯೇ ಎಂದು ಪೂರ್ವಪಕ್ಷವು; ವೈಲಕ್ಷಣ್ಯದಿಂದ ಎಂದು ಸಿದ್ಧಾಂತವು. ಅದರಲ್ಲಿ), ಕೃತಶೇಷತಾ = ಪ್ರಾರಬ್ಧಕರ್ಮಶೇಷತ್ವವು; (ಎಂದು ಪೂರ್ವಪಕ್ಷನ್ಯಾಯವು.) ಶಶ್ವದನುಪ್ರವೃತ್ತಿಃ=ಯಾವಾಗಲೂ ಜ್ಞಾನವು ಹುಟ್ಟದ ಮೇಲೆ ಜ್ಞಾನಫಲವು ಅನುವೃತ್ತವಾಗುವುದು.

(ಎಂದು ಸಿದ್ಧಾಂತನ್ಯಾಯವು.) (ಅಂದರೆ— ಜ್ಞಾನಿಗೂ ಪ್ರಾರಬ್ಧಕರ್ಮವಿದ್ದಪ್ರಯುಕ್ತ ಉತ್ಕ್ರಮಣಕಾಲದಲ್ಲಿ ವಿಶೇಷವಿಲ್ಲ. ಅಂತೂ ಜ್ಞಾನಿಗಳ ಮರಣಕ್ಕೂ ಅಜ್ಞಮರಣ ಸಾಧಾರಣ್ಯ ವಿದ್ದಪ್ರಯುಕ್ತ ಜ್ಞಾನಕ್ಕೆ ಅತಿಶಯವಿಲ್ಲ ಎಂದರೆ— ಜ್ಞಾನಲಕ್ಷಣ ವಿಶೇಷಕಾರಣವಿದ್ದಪ್ರಯುಕ್ತ ಜ್ಞಾನಿಗಳ ಮರಣಕ್ಕೆ ಅಜ್ಞಾನಿಗಳ ಮರಣಕ್ಕಿಂತ ವೈಲಕ್ಷಣ್ಯವು ಕೂಡುತ್ತಿರಲು ಕೃತಶೇಷತ್ವವು ಅಪ್ರಯೋಜಕವು. ಆದುದರಿಂದ ಜ್ಞಾನಕ್ಕೆ ಮಾಹಾತ್ಮ್ಯೆಯು ಯುಕ್ತವು.) (೧೦ನೇ ಅಧಿ-ಕರಣದಲ್ಲಿ—ವಿದ್ಯಾಗತಿಸ್ಮೃತಿಗಳು ಅಪೇಕ್ಷಿತಗಳೋ, ಅಲ್ಲವೋ ಎಂದು ಸಂದೇಹವು ಬಂದರೆ— ಅಪೇಕ್ಷಿತಗಳಲ್ಲವೆಂದು ಪೂರ್ವಪಕ್ಷವು; ಅಪೇಕ್ಷಿತಗಳು ಎಂದು ಸಿದ್ಧಾಂತವು. ಅದ್ದರಲ್ಲಿ), **ಲೋಕೋಪಮಾ**=ಲೋಕದೃಷ್ಟಾಂತವು ಇವುಗಳು, **ಪೂರ್ವಮತಾನುಸಾರಾಃ** = ಪೂರ್ವಪಕ್ಷ ವನ್ನು ಅನುಸರಿಸಿಕೊಂಡಿರತಕ್ಕ ಯುಕ್ತಿಗಳು. **ಶಶ್ವದನುಪ್ರವೃತ್ತಿಃ** = ಯಾವಾಗಲೂ ಅನು ವೃತ್ತಿಯು ಇವುಗಳು, **ಸಿದ್ಧಾಂತನಿರ್ಣೀತಿವಿಶಿಷ್ಟಹೇತವಃ** = ಸಿದ್ಧಾಂತನಿರ್ಣಯಕ್ಕೆ ಉತ್ತಮ ಗಳಾದ ಹೇತುಗಳು ಸಿದ್ಧಾಂತಯುಕ್ತಿಗಳು; (ಅಂದರೆ— ಕೃಷ್ಯಾದಿ ಲೌಕಿಕಸಾಧನಕ್ಕೆ ಫಲಸ್ಮರಣಾಪೇಕ್ಷೆಯಿಲ್ಲದಿರುವುದರಿಂದ ಸ್ವರ್ಗ-ಮೋಕ್ಷಗಳಿಗೂ ಫಲಸ್ಮರಣಾನಪೇಕ್ಷತ್ವವು. ಹೀಗಂತ ಲೋಕೋಪಮತ್ವವಿದ್ದುದರಿಂದ ವಿದ್ಯಾಗತಿಸ್ಮೃತಿಗಳು ಅಪೇಕ್ಷಿತಗಳಲ್ಲ. ಆದುದರಿಂದ ಜ್ಞಾನಕ್ಕೆ ಸಂಪೂರ್ಣ ಮೋಕ್ಷಾರ್ಥತ್ವವಿಲ್ಲವೆಂದರೆ— '**ಕ್ರಿಯಾನುವೃತ್ತಿರ್ಲೌಕಿಕೇ ಸಾಧನೇ ತು ಮನೋಽನುವೃತ್ತಿರ್ವೈದಿಕೇ ಸಾಧನೇ ಸ್ಯಾತ್ । ಫಲಂ ಭವೇತ್ಸರ್ವಥೇತ್ಯೇವ ತಸ್ಮಾತ್ಸ್ಮರೇತ್ಸದಾ ನಿಶ್ಚಿತತ್ವೇನ ವಿದ್ವಾನ್**' ಎನ್ನುವ ಶ್ರುತಿಯಿಂದ ಅದನ್ನು ಅನುಸರಿಸಿ ಅನು ವೃತ್ತಿಯು ಲೌಕಿಕ-ವೈದಿಕರಲ್ಲಿ ಸಮಾನವಾಗಿದೆ. ಹೀಗಂತ ಶಶ್ವದನುವೃತ್ತಿಯಿಂದ ಅನುಗಮನಕ್ಕೆ ವಿದ್ಯಾದಿ ಸಾಪೇಕ್ಷತ್ವವಿದ್ದುದರಿಂದ ಜ್ಞಾನಕ್ಕೆ ಸಂಪೂರ್ಣ ಮೋಕ್ಷಾರ್ಥತ್ವವು ॥ ೧೨೮ ॥ ೧೨೯ ॥

---

# ನೈಕಸ್ಮಿನ್ನಧಿಕರಣವು.

## ' ಓಂ ನೈಕಸ್ಮಿನ್ ದರ್ಶಯತೋ ಹಿ ಓಂ ' ॥ ಸೂ ॥ ೬ ॥

ಇಲ್ಲಿ '**ಅಗ್ನೌ ಸರ್ವೇ ದೇವಾ ವಿಲೀಯಂತೇ**' '**ಭೂತೇಷು ದೇವಾ ವಿಲೀಯಂತೇ**' ಎನ್ನುವ ಎರಡು ಶ್ರುತಿಗಳ ವಿಪ್ರತಿಪತ್ತಿಯಿಂದ ಒಬ್ಬ ಅಗ್ನಿಯಲ್ಲಿಯೇ ಎಲ್ಲಾ ದೇವತೆಗಳೂ ಲಯವನ್ನು ಹೊಂದುತ್ತಾರೋ, ಅಥವಾ ಐದು ಭೂತಗಳಲ್ಲಿಯೂ ಲಯವನ್ನು ಹೊಂದು ತ್ತಾರೋ ಎಂದು ಸಂಶಯವು ಬಂದರೆ- ಒಬ್ಬ ಅಗ್ನಿಯಲ್ಲಿಯೇ ಎಲ್ಲಾ ದೇವತೆಗಳಿಗೂ ಲಯವು. ಅಗ್ನಿಶ್ರುತಿಯು ನಿರವಕಾಶವಾಗಿದೆ; ಭೂತ ಶ್ರುತಿಯಾದರೂ ಸಾವಕಾಶವಾಗಿದೆ. ಒಬ್ಬ ಅಗ್ನಿ ಯಲ್ಲಿಯೇ ಎಲ್ಲಾ ದೇವತೆಗಳಿಗೂ ಲಯವಾದರೆ, ಅಗ್ನಿಗೆ ವಾಯುವಿನಲ್ಲಿಯೂ, ವಾಯುವಿಗೆ ಆಕಾಶದಲ್ಲಿ ಹೀಗೆ ಇಟ್ಟುಕೊಂಡರೆ ಭೂತೇಷು ಎನ್ನುವ ಬಹುವಚನವು ಉಪಪನ್ನವಾಗುತ್ತದೆ ಎಂದು ಪೂರ್ವಪಕ್ಷವು ಪ್ರಾಪ್ತವಾದರೆ ಹೀಗೆ ಸಿದ್ಧಾಂತವು. ಒಬ್ಬ ಅಗ್ನಿಯಲ್ಲಿಯೇ ಎಲ್ಲಾ ದೇವತೆ ಗಳಿಗೆ ಲಯವಲ್ಲ. ಮತ್ತೆ ಐದು ಭೂತಗಳಲ್ಲಿಯೂ ಲಯವು. ಏಕೆಂದರೆ— '**ಪೃಥಿವ್ಯಾ ವೃಭವೋ ವಿಲೀಯಂತೇ ವರುಣೇಽಶ್ವಿನಾವಗ್ನಾವಗ್ನಯೋ ವಾಯಾವಿಂದ್ರಃ ಸೋಮ ಆದಿತ್ಯೋ ಬೃಹಸ್ಪತಿರಿತ್ಯಾಕಾಶ ಏವ ಸಾಧ್ಯಾ ವಿಲೀಯಂತೇ ಋಭವಃ ಪೃಥಿವ್ಯಾಂ ವರುಣ ಆಪೋಽಗ್ನಯಸ್ತೇಜಸಿ ಮರುತೋ ಮಾರುತೇ ಆಕಾಶೇ ವಿನಾಯಕಾ**

ವಿಲೀಯಂತೇ' ಎನ್ನುವ ಶ್ರುತಿಗಳು ಯಥಾ ಯೋಗ್ಯವಾಗಿ ಐದು ಭೂತಗಳಲ್ಲಿಯೂ ದೇವತೆಗಳಿಗೆ ಲಯವನ್ನು ತೋರಿಸುತ್ತವೆ. ಇಲ್ಲಿ 'ವಾಯಾವಿಂದ್ರಃ' ಎನ್ನುವಲ್ಲಿದ್ದ ವಾಯುಶಬ್ದವು ಅಪ್ರಧಾನವಾದ ಭೂತವಾಯುವನ್ನು ಪ್ರತಿಪಾದಿಸುತ್ತದೆಂದು ವಿವಕ್ಷಿತವೆಂದು ತೋರುತ್ತದೆ. ಪೃಥಿವ್ಯಾದಿಗಳನ್ನು ಹೇಳಿದರಿಂದ ಭೂತಪ್ರಕರಣವಾಗಿದೆ. ಸೂತ್ರಕಾರರು ಎಲ್ಲಾ ಭೂತಗಳಲ್ಲಿ ದೇವತೆಗಳಿಗೆ ಲಯವು ಎನ್ನುವ ಅರ್ಥದಲ್ಲಿ ಈ ಶ್ರುತಿಯನ್ನು ತೆಗೆದುಕೊಂಡಿರುವರು. 'ಭೂತೇಷು ತಚ್ಛ್ರುತೇಃ' ಎಂದುಪಕ್ರಮದಲ್ಲಿದೆ. ಆದುದರಿಂದಲೂ ಅಪ್ರಧಾನ ವಾಯುವು ಎನ್ನುವ ಪ್ರತೀತಿಯನ್ನು ನಿವಾರಣಮಾಡುವುದಕ್ಕಾಗಿ ಹೇಳುತ್ತಾರೆ.

ಮೂ || ಪ್ರಧಾನವಾಯುಸ್ತ್ವಿಹ ವಾಯುನಾಮಾ
ಭೂತೇಷ್ವಿತಿ ಪ್ರೋಕ್ತಗತೋಽಪಿ ಯುಕ್ತ್ಯಾ ।
ಯಸ್ಮಾಚ್ಛ್ರುತೌ ಪವತೇ ಚೇತಿ ಭೂರಿ
ಪ್ರೋಕ್ತೋ ಯತೋ ಭೂತಮಾನೀ ಚ ಸೋಽಪಿ ||
ಮಹಾಮಾನೀ ತ್ವಲ್ಪಮಾನೀ ಚ ಯಸ್ಮಾತ್ತಚ್ಛ-
ಬ್ದೇನಾಪ್ಯುಚ್ಯತೇ ತೇನ ಸೋಽಪಿ || ೧೩೦ ||

ಅ || ಇಹ = ಈ ಶ್ರುತಿಯಲ್ಲಿ, ವಾಯುನಾಮಾ = ವಾಯುವೆಂದು ಹೆಸರುಳ್ಳವನು, ಭೂತೇಷ್ವಿತಿಪ್ರೋಕ್ತ ಗತೋಽಪಿ = ಭೂತಗಳಲ್ಲಿ ಲಯವನ್ನು ಹೇಳುವೆನು ಎನ್ನುವ ಅಭಿಪ್ರಾಯದಿಂದ ಶ್ರುತಿಯಿಂದ ಹೇಳಲ್ಪಟ್ಟ ಯಾವ ಪೃಥಿವ್ಯಾಧಿಗಳೋ ಆದರಲ್ಲಿ ಸೇರಿದ್ದರೂ, ಅಥವಾ 'ಭೂತೇಷು ದೇವಾನಾಂ ಲಯಃ' ಎನ್ನುವ, ಅರ್ಥದಲ್ಲಿ ಹೇಳಲ್ಪಟ್ಟ ಸೂತ್ರಕಾರರಿಂದ ಸ್ವೀಕರಿಸಲ್ಪಟ್ಟ ಶ್ರುತಿ ವಾಕ್ಯದಲ್ಲಿದ್ದಾಗ್ಯೂ, ಯುಕ್ತ್ಯಾ = ಉತ್ತಮರಾದ ಇಂದ್ರಾದಿಗಳಿಗೆ ಅಧಮವಾದ ಭೂತವಾಯುವಿನಲ್ಲಿ ಲಯವು ಕೂಡುವುದಿಲ್ಲ ಎನ್ನುವ ಯುಕ್ತಿಯಿಂದ, ಪ್ರಧಾನವಾಯುಸ್ತು = ಪ್ರಧಾನವಾಯುವೇ. (ಪ್ರಧಾನ ವಾಯುವಿನಲ್ಲಿಯೂ ಕೂಡ ಇಂದ್ರಾದಿ ದೇವತೆಗಳಿಗೆ ಹೇಗೆ ಲಯವು ಕೂಡುವುದು ಎಂದರೆ—) ಯಸ್ಮಾತ್ = ಯಾವಕಾರಣದಿಂದ, ಪವತೇ ಇತಿ ಶ್ರುತೌ = 'ಸಾ ವಾ ಏಷಾ ದೇವತಾ ಅನಾದಿಯೋಽಯಂ ಪವತೇ' ಎನ್ನುವ ಶ್ರುತಿಯಲ್ಲಿಯೂ, ಚ = ಬೇರೆಶ್ರುತಿಗಳಲ್ಲಿಯೂ, (ಪ್ರಧಾನವಾಯುವು) ಭೂರಿ = ಸಕಲ ಜೀವೋತ್ತಮನೆಂದು, ಪ್ರೋಕ್ತಃ = ಹೇಳಲ್ಪಟ್ಟದ್ದಾನೆ. (ಆದುದರಿಂದ ಆ ವಾಯುವಿನಲ್ಲಿ ಇಂದ್ರಾದಿ ದೇವತೆಗಳಿಗೆ ಲಯವು ಕೂಡುವುದರಿಂದ,) ಪ್ರಧಾನವಾಯುಃ = ಪ್ರಧಾನವಾಯುವೇ, ಇಹ = ಈ ಶ್ರುತಿಯಲ್ಲಿ, ವಾಯುನಾಮಾ = ವಾಯುವೆಂದು ಹೆಸರುಳ್ಳವನು. ಅಥವಾ '**ಏಷ ವೈ ಬ್ರಹ್ಮ ಯೋಽಯಂ ಪವತೇ ತಮೇತಾಃ ಪಂಚದೇವತಾಃ । ಪರಿಮ್ರಿಯಂತೇ ವಿದ್ಯುದ್ವೃಷ್ಟಿ-ಶ್ಚಂದ್ರಮಾಃ ಆದಿತ್ಯೋಽಗ್ನಿಃ**' ಎನ್ನುವ ಶ್ರುತಿಯನ್ನು ಇಲ್ಲಿ ಇಟ್ಟುಕೊಳ್ಳಬೇಕು. ತತ್ = ಅದರಲ್ಲಿ ವಾಯುವು, ಭೂರಿ = ಸ್ಪಷ್ಟವಾಗಿ, ಪ್ರೋಕ್ತಃ = ಸೂರ್ಯಾದಿಗಳಿಗೆ ಸಂಹಾರಕನೆಂದು ಹೇಳಲ್ಪಟ್ಟದ್ದಾನೆ. (ಹೀಗಾದರೆ ಭೂತಪ್ರಕರಣಕ್ಕೆ ಬಾಧವು ಬರಬೇಕಾಗುವುದು. ಎಂದರೆ—) ಯತಃ = ಯಾವಕಾರಣದಿಂದ, ಸೋಽಪಿ = ಕೇವಲ ಅಪ್ರಧಾನವಾಯುವಲ್ಲ, ಮತ್ತೆ ಆ ಪ್ರಧಾನವಾಯುವೂ ಕೂಡ, ಭೂತಮಾನೀ ಚ = ಭೂತಗಳಿಗೆ ಅಭಿಮಾನಿಯಾಗಿರುವುದರಿಂದ ಭೂತನಾಮಕನೂ ಆಗಿರುತ್ತಾನೆ. (ಆದುದರಿಂದ ಪ್ರಕರಣ ವಿರೋಧ ವಿಲ್ಲದಿರುವುದರಿಂದ ಪ್ರಧಾನವಾಯುವೇ ಇಲ್ಲಿ

ವಾಯುನಾಮಕನು.) (ಹೇಳಿದ್ದನ್ನೇ ಪುನಃ ವಿಸ್ತರಿಸುತ್ತಾರೆ.) ಯಸ್ಮಾತ್=ಯಾವಕಾರಣದಿಂದ, ಮಹಾಮಾನೀ ತು=ಸರ್ವಾಭಿಮಾನಿಯಾದವನಾದರೂ, ಅಲ್ಪಮಾನೀ ಚ=ಅಲ್ಪಾಭಿಮಾನಿಯಾಗಿರುತ್ತಾನೋ, (ಅಂದರೆ— ಹೇಗೆ ಸಮಸ್ತರಾಷ್ಟ್ರಗಳಿಗೆ ಅಧಿಪತಿಯಾದ ರಾಜನು ರಾಷ್ಟ್ರಾಂತರ್ಗತವಾದ ಗ್ರಾಮಕ್ಕೆ ಅಧಿಪತಿಯಾಗುತ್ತಾನೋ ಹೀಗೆಯೇ ಸರ್ವಾಭಿಮಾನಿಯಾದ ಪ್ರಧಾನ ವಾಯುವು ಅಲ್ಪವಾದ ಭೂತವಾಯುವಿಗೆ ಅಭಿಮಾನಿಯು ಆಗುತ್ತಾನೆ) ತೇನ = ಆದುದರಿಂದ, ತಚ್ಛಬ್ದೇನಾಪಿ=ಕೇವಲ ವಾಯುಶಬ್ದದಿಂದ ಅಲ್ಲ; ಭೂತಶಬ್ದದಿಂದಲೂ ಕೂಡ, ಸೋಽಪಿ= ಮುಖ್ಯವಾಯುವೂ ಕೂಡ, ಉಚ್ಯತೇ=ಹೇಳಲ್ಪಡುತ್ತಾನೆ. ॥ ೧೩೦ ॥ ಅಧಿ ॥ ೫ ॥

**ನೈಕಸ್ಮಿನ್ನಧಿಕರಣವು ಸಮಾಪ್ತವಾಯಿತು.**

---

# ತಾನಿಪರಾಧಿಕರಣವು

**'ಓಂ ತಾನಿ ಪರೇ ತಥಾ ಹ್ಯಾಹ ಓಂ'** ॥ ಸೂ. ॥ ೧೫ ॥

ಇಲ್ಲಿ ಭೂತಾಭಿಮಾನಿಗಳಾದ ದೇವತೆಗಳೇ ಮೊದಲಾದ ಎಲ್ಲಾ ದೇವತೆಗಳಿಗೆ ಶ್ರೀ ಹರಿಯಲ್ಲಿ ಸಾಕ್ಷಾತ್ತಾಗಿ ಲಯವು ತೋರುತ್ತದೆ. ಅದರ ಪರಿಹಾರಕ್ಕಾಗಿ **'ಪ್ರಾಣದ್ವಾರೇಣ'** ಎಂದು ಭಾಷ್ಯವು. ಅಲ್ಲಿಯೂ ಪ್ರಾಣನಲ್ಲಿ ಸರ್ವರಿಗೆ ಸಾಕ್ಷಾತ್ತಾಗಿ ಲಯವು ಪ್ರತೀತವಾಗುತ್ತದೆ. ಆದ ಕಾರಣ ಸ್ಪಷ್ಟವಾಗಿ ವ್ಯಾಖ್ಯಾನ ಮಾಡುತ್ತಾರೆ—

**ಮೂ ॥ ತಸ್ಮಿನ್ ಲಯಂ ಯಾಂತಿ ಭೂತಾನ್ಯಶೇಷ**
**ಕ್ರಮಾದ್ವಿರೋಧೇನ ಸ ಏವ ವಿಷ್ಣೌ ।**
**ಇಂದ್ರಾದೀನಾಂ ತತ್ರ ಲಯಃ ಕ್ರಮಂ ತು**
**ಪ್ರೋಕ್ತಂ ವಿಶೇಷಾದನುಸೃತ್ಯ ನಾನ್ಯತ್ ॥ ೧೩೧ ॥**
**ತಸ್ಮಾದಶೇಷಾ ಗಿರಿಜಾಂ ಪ್ರವಿಶ್ಯ**
**ತಯೈವ ರುದ್ರಂ ಸಹ ತೇನ ವಾಣೀಂ ।**
**ತಯಾ ಪತಿಂ ಪ್ರಾಪ್ಯ ಸಹೈವ ತೇನ**
**ಲಯಂ ಹರೌ ಯಾಂತಿ ಸಮಸ್ತಜೀವಾಃ ॥ ೧೩೨ ॥**

ಅ ॥ ಅಶೇಷಕ್ರಮಾದ್ವಿರೋಧೇನ=ಶ್ರುತ್ಯಾದ್ಯುಕ್ತವಾದ ಎಲ್ಲಾ ಕ್ರಮವನ್ನು ಅನುಸರಿಸಿ, ಭೂತಾನಿ=ಭೂತಾಭಿಮಾನಿದೇವತೆಗಳು, ತಸ್ಮಿನ್=ಪ್ರಧಾನ ವಾಯುವಿನಲ್ಲಿ, ಲಯಂ= ಲಯವನ್ನು, ಯಾಂತಿ=ಹೊಂದುತ್ತಾರೆ. ಸ ಏವ=ಆ ಪ್ರಧಾನ (ವಾಯುವೇ, ವಿಷ್ಣೌ=ಶ್ರೀ ಹರಿಯಲ್ಲಿ, ಲಯಂ=ನಾಶವನ್ನು, ಯಾತಿ=ಹೊಂದುತ್ತಾನೆ. **'ವಾಯಾವಿಂದ್ರಃ'** ಎನ್ನುವ ಶ್ರುತಿಯಲ್ಲಿ ಇಂದ್ರಾದಿಗಳಿಗೆ ಪ್ರಧಾನವಾಯುವಿನಲ್ಲಿ ಯಾವ ಲಯವು ಹೇಳಲ್ಪಟ್ಟದೋ ಅದೂ ಕೂಡ ಸಾಕ್ಷಾತ್ತಲ್ಲವೆನ್ನುತ್ತಾರೆ.) ಇಂದ್ರಾದೀನಾಂ=ಇಂದ್ರ ಮೊದಲಾದ ದೇವತೆಗಳಿಗೆ, ತತ್ರ= ಪ್ರಧಾನ ವಾಯುವಿನಲ್ಲಿ, ಲಯಃ ತು=ನಾಶವಾದರೂ, ವಿಶೇಷಾತ್ = ವಿಶೇಷವಾಕ್ಯದಿಂದ, ಪ್ರೋಕ್ತಂ=ಹೇಳಲ್ಪಟ್ಟ, ಕ್ರಮಂ ತು=ಕ್ರಮವನ್ನು, ಅನುಸೃತ್ಯ=ಅನುಸರಿಸಿ, (ವ್ಯಾಖ್ಯಾನ

ಮಾಡತಕ್ಕದ್ದು.) ಅನ್ಯತ್=ಇತರವಾದ ವ್ಯಾಖ್ಯಾನವು ಸಾಕ್ಷಾತ್ತಾಗಿಯೇ ಶ್ರೀ ವಾಯುವಿನಲ್ಲಿ ಲಯವು ಎನ್ನುವುದು, ನ ತು=ಅಲ್ಲ. (ವಿಶೇಷ ವಾಕ್ಯದಿಂದ ವಿರೋಧವು.) (ಆಕ್ರಮವನ್ನೇ ಸಂಕ್ಷೇಪದಿಂದ ಹೇಳುತ್ತಾರೆ.) ತಸ್ಮಾತ್=ವಿಶೇಷ ಪ್ರಮಾಣವನ್ನು ಸರ್ವಥಾ ಅನುಸರಿಸಬೇಕಾಗಿರುವುದರಿಂದ, ಅಶೇಷಾಃ=ಎಲ್ಲಾ ದೇವತೆಗಳೂ, ಗಿರಿಜಾಂ=ವಾರುಣೀ-ಸೌಪರ್ಣಿಯರನ್ನು ಪ್ರವಿಶ್ಯ=ಪ್ರವೇಶಮಾಡಿ, ತಯಾ=ಅವರಿಂದ, ಕೂಡಿಕೊಂಡು, ರುದ್ರಂ=ಶೇಷ-ಗರುಡರನ್ನು, ಪ್ರಾಪ್ಯ=ಹೊಂದಿ, ತೇನ=ಆ ಶೇಷ-ಗರುಡರಿಂದ, ವಾಣೀಂ=ಸರಸ್ವತಿಯನ್ನು, ಪ್ರಾಪ್ಯ=ಹೊಂದಿ ತಯಾ=ಸರಸ್ವತಿಯಿಂದ, ಸಹೈವ=ಕೂಡಿಕೊಂಡೇ, ಪತಿಂ=ವಾಯುಸಮಾನಬ್ರಹ್ಮನನ್ನು, ಪ್ರಾಪ್ಯ=ಹೊಂದಿ, ತೇನ=ಆ ಬ್ರಹ್ಮನಿಂದ, ಸಮುಸ್ತಜೀವಾಃ=ಎಲ್ಲಾ ಜೀವರು, ಹರೌ=ಶ್ರೀ ಹರಿಯಲ್ಲಿ, ಲಯಂ=ನಾಶವನ್ನು, ಯಾಂತಿ=ಹೊಂದುತ್ತಾರೆ ॥ ೧೩೧ ॥ ೧೩೨ ॥

ಇದನ್ನೇ ಉತ್ತರವಾಕ್ಯದಲ್ಲಿ ವಿವರಿಸಿರುವರು. ಅದರಲ್ಲಿ 'ಮಾಯಾವಿಂದ್ರಃ' ಎನ್ನುವ ಶ್ರುತಿಯಲ್ಲಿ ಪ್ರತಿಪಾದಿತರಾದ ಇಂದ್ರಾದಿ ನಾಲ್ವರಿಗೂ ಪೃಥಿವ್ಯಾದಿ ಭೂತಗಳಿಗೂ ಕ್ರಮದಿಂದಲೆ ವಾಯುವಿನಲ್ಲಿ ಪ್ರವೇಶವು ಎಂದು ಯಾವುದು ಹೇಳಿಯದೋ ಅದನ್ನು ವಿಸ್ತರಿಸುವರು. ಅದರಲ್ಲಿ ಶೇಷಮಾರ್ಗ-ಗರುಡಮಾರ್ಗಗಳೆಂದು ಎರಡು ಮಾರ್ಗಗಳು. ಅದರಲ್ಲಿ ಆದಿಯಲ್ಲಿ ಶೇಷ ಮಾರ್ಗವನ್ನು ಹೇಳುತ್ತಾರೆ—

ಮೂ ॥ ಸೋಮುಸ್ತು ವಾರೀಶಯುತೋಽನಿರುದ್ಧಂ
ವಿಶತ್ಯಸೌ ಕಾಮುಮುಸೌ ತು (ಚ) ವಾರುಣೀಂ ।
ಸಾ ಶೇಷದೇವಂ ಸ ಗಿರಂ ಚ ಸೈವ
ವಾಯುಂ ವಿಶಂತ್ಯಂಜ ಇತೀಹ ನಿರ್ಣಯಃ ॥ ೧೩೩ ॥
ಉಮಾ ಗಿರೀಶಾವಿತಿ ಭಾರತೀರಾ-
ವಿತಿ ಸ್ಮ ವಾಗ್ವೇದಗತಾ ಬ್ರವೀತಿ ।
ಅಹೀಂದ್ರಪತ್ನೀಮಹಿಪಂ ವಿರಿಂಚ-
ಪತ್ನೀಂ ವಿರಿಂಚಂ ಚ ವಿಮುಕ್ತಿಕಾಲೇ ॥ ೧೩೪ ॥

ಅ ॥ ಸೋಮುಸ್ತು=ಸೋಮು (ಚಂದ್ರ) ನಾದರೂ, ವಾರೀಶಯುತಃ=ವರುಣನಿಂದ ಕೂಡಿದವನಾಗಿ, ಅನಿರುದ್ಧಂ=ಅನಿರುದ್ಧನನ್ನು, ವಿಶತಿ=ಪ್ರವೇಶಮಾಡುತ್ತಾನೆ. ಅಸೌ=ಈ ಅನಿರುದ್ಧನು, ಕಾಮಂ=ಕಾಮನನ್ನು, ವಿಶತಿ = ಪ್ರವೇಶಮಾಡುತ್ತಾನೆ. ಅಸೌ ತು= ಈ ಕಾಮನಾದರೂ, ವಾರುಣೀಂ = ವಾರುಣಿಯನ್ನು, ವಿಶತಿ = ಪ್ರವೇಶಮಾಡುತ್ತಾನೆ. ಸಾ= ವಾರುಣಿಯು, ಶೇಷದೇವಂ=ಶೇಷದೇವರನ್ನು, ವಿಶತಿ=ಪ್ರವೇಶಮಾಡುತ್ತಾಳೆ. ಸಃ=ಆ ಶೇಷ ದೇವನು, ಗಿರಂ=ಭಾರತಿ (ಸರಸ್ವತಿ) ಯನ್ನು, ವಿಶತಿ=ಪ್ರವೇಶ ಮಾಡುತ್ತಾನೆ. ಸೈವ=ಭಾರತಿ (ಸರಸ್ವತಿ) ಯೇ ವಾಯುಂ=ಮುಖ್ಯಪ್ರಾಣ (ಬ್ರಹ್ಮ) ನನ್ನು, ಅಂಜಃ=ಚೆನ್ನಾಗಿ, ವಿಶತಿ= ಪ್ರವೇಶಮಾಡುತ್ತಾಳೆ. ಇತಿ=ಹೀಗೆ, ಇಹ=ಇಂದ್ರಾದಿ ನಾಲ್ವರ ಮಧ್ಯದಲ್ಲಿ ಸೋಮನಿಗೆ ಭೂತ ಗಳಲ್ಲಿಯೂ, ಜಲಗಳಿಗೆ ವಾಯುಪ್ರವೇಶದಲ್ಲಿಯೂ ನಿರ್ಣಯಃ=ನಿರ್ಣಯವು.(ಮೊದಲು ಗಿರಿಜಾಂ ರುದ್ರಂ ಎಂದು ಹೇಳಿಯದೆ. 'ಈಗ ಗಿರಂ ವಾಯುಂ' ಎಂದು ಇದೆ. ಈ ನಾಲ್ಕು ಶಬ್ದಗಳು ಪಾರ್ವತೀ-ರುದ್ರ, ಭಾರತೀ-ವಾಯುದೇವರು ಎನ್ನುವ ಪ್ರಸಿದ್ಧಾರ್ಥವುಳ್ಳವುಗಳು ಎನ್ನುವ

ಪ್ರತೀತಿಯನ್ನು ನಿವಾರಣ ಮಾಡುವುದಕ್ಕಾಗಿ ಹೇಳುತ್ತಾರೆ.) ಉಮಾಗಿರೀಶಾವಿತಿ=ಉಮಾ ಗಿರೀಶ ಎನ್ನುವವುಗಳು, ಭಾರತೀಂಶಾವಿತಿ=ಭಾರತೀ-ಈಶ (ವಾಯು) ಎನ್ನುವ, ವೇದಗತಾ= ವೇದದಲ್ಲಿರತಕ್ಕ, ವಾಕ್=ವಚನವು, ವಿಮುಕ್ತಿಕಾಲೇ=ವಿಮುಕ್ತಿಯನ್ನು ಪ್ರತಿಪಾದಿಸುವ ಕಾಲ ದಲ್ಲಿ, (೧) ಅಹೀಂದ್ರಪತ್ನೀಂ=ಶೇಷಪತ್ನಿಯಾದ ಸೌಪರ್ಣಿಯನ್ನೂ (೨) ಅಹಿಪಂ=ಶೇಷನನ್ನೂ (೩) ವಿರಿಂಚಪತ್ನೀಂ=ಸರಸ್ವತಿಯನ್ನೂ, (೪) ವಿರಿಂಚಂ ಚ=ಬ್ರಹ್ಮನನ್ನೂ ಕೂಡ, ಬ್ರವೀತಿ= ಪ್ರತಿಪಾದಿಸುತ್ತದೆ ॥ ೧೩೩ ॥ ೧೩೪ ॥

ಉಮಾದಿ ಶಬ್ದಗಳು ವಾರುಣ್ಯಾದಿರೂಪವಾದ ಅರ್ಥವನ್ನು ಪ್ರತಿಪಾದಿಸುವುದರಲ್ಲಿ ಏನು ಕಾರಣವು ಎಂದರೆ—

**ಮೂ ॥ ತ ಏವ ಯತ್ತತ್ಪದಮಾಪ್ನುವಂತಿ**
**ತತ್ಕಾಲ ಏತಾನ್ಸಮುಪಾಸ್ಯ ಜೀವಾಃ ।**
**ಬ್ರಹ್ಮತ್ವಕಾಲೇ ಪ್ರವಿಶಂತಿ ಚೈತಾ-**
**ನಿತಿ ಸ್ಮ ವಾಕ್ತಾದೃಶತಾಮುಪೈತಿ ॥ ೧೩೫ ॥**
**ಸೂರ್ಯೋಽಗ್ನಿಯುಕ್ತೋ ಗುರುಮಾಪ್ಯ ತೇನ**
**ಶಕ್ರಂ ಸಹೈತೇ (ನೇ) ನ ಸುಪರ್ಣಪತ್ನೀಂ ।**
**ತಯಾ ಸುಪರ್ಣಂ ಸಹ ತೇನ ವಾಣೀಂ**
**ಬ್ರಹ್ಮಾಣಮೇತದ್ಗತ ಏವ ಯಾತಿ ॥ ೧೩೬ ॥**

ಅ ॥ ಯತ್ = ಯಾವ ಕಾರಣದಿಂದ, ತ ಏವ=ಆ ಉಮಾದಿಗಳೇ, ತತ್ಪದಂ=ಆ ವಾರುಣ್ಯಾದಿಗಳ ಪದವನ್ನು, ಆಪ್ನುವಂತಿ ಉತ್ತರಕಲ್ಪದಲ್ಲಿ ಹೊಂದುತ್ತಾರೋ, (ಆದುದರಿಂದ ಉಮಾದಿಶಬ್ದಗಳು ವಾರುಣ್ಯಾದಿ ಪದಗಳು) (ಪ್ರಸಿದ್ಧ ಪದವನ್ನು ಬಿಟ್ಟು ಅಪ್ರಸಿದ್ಧ ಪದವನ್ನು ಪ್ರಯೋಗಮಾಡಲಿಕ್ಕೆ ಪ್ರಯೋಜನವೇನು ಎಂದರೆ—) ಜೀವಾಃ=ಜೀವರು, ತತ್ಕಾಲೇ=ಉಮಾ ತ್ವಾದಿಕಾಲದಲ್ಲಿ, ಏತಾನ್=ಉಮಾದಿ ದೇವತೆಗಳನ್ನು, ಸಮುಪಾಸ್ಯ=ಉಪಾಸನ ಮಾಡಿ, ಬ್ರಹ್ಮತ್ವಕಾಲೇ=ಆ ವಾಯ್ವಾದಿ ದೇವತೆಗಳಿಗೇನೇ ಬ್ರಹ್ಮತ್ವಾದಿಗಳು ಬರುವ ಕಾಲದಲ್ಲಿ, ಏತಾನ್=ವಾರುಣ್ಯಾದಿ ದೇವಿಯರನ್ನು, ಚ= ಯಾವ ಕಾರಣದಿಂದ, ಪ್ರವಿಶಂತಿ = ಪ್ರವೇಶ ಮಾಡುತ್ತಾರೋ, ಇತಿ = ಆ ಕಾರಣದಿಂದ, ವಾಕ್ = ವೇದವಾಣಿಯು, ತಾದೃಶತಾಂ = ಉಮಾದಿ ಶಬ್ದವತ್ವವನ್ನು, ಉಪೈತಿ=ಹೊಂದುತ್ತದೆ. (ಅಂತೂ ಯಾವನು ಯಾರಲ್ಲಿ ಅತಿ ಪರಿಚಯವುಳ್ಳವನೋ, ಆತನಿಗೆ ಆಶ್ರಮಾಂತರಪ್ರಾಪ್ತ್ಯಾದಿಗಳಿಂದ ನಾಮಾಂತರವು ಪ್ರಾಪ್ತ ವಾದಾಗ್ಯೂ, ಪರಿಚಯವಿಶೇಷವುಳ್ಳವರು ಮೊದಲಿನ ನಾಮದಿಂದಲೇ ಆತನನ್ನು ವ್ಯವಹರಿಸುತ್ತಾರೆ ಎನ್ನುವುದು ಲೋಕದಲ್ಲಿ ಸುಪ್ರಸಿದ್ಧವಾಗಿದೆ. ಅದೇ ರೀತಿಯಾಗಿ ಇಲ್ಲಿಯೂ ಪ್ರಯೋಗವು. ಪ್ರಯೋಜನವನ್ನು ಹುಡುಕುವುದರಿಂದ ಏನು ಪ್ರಯೋಜನವು?) (ಈಗ ಗರುಡಮಾರ್ಗವನ್ನು ಹೇಳುತ್ತಾರೆ—) ಅಗ್ನಿಯುಕ್ತಃ = ಅಗ್ನಿಯಿಂದ ಕೂಡಿರುವ, ಸೂರ್ಯಃ = ಸೂರ್ಯನು, ಗುರುಂ = ಬೃಹಸ್ಪತ್ಯಾಚಾರ್ಯರನ್ನು, ಆಪ್ಯ=ಹೊಂದಿ, ತೇನ = ಬೃಹಸ್ಪತ್ಯಾಚಾರ್ಯರಿಂದ, ಸಹ=ಕೂಡಿಕೊಂಡು, ಶಕ್ರಂ=ದೇವೇಂದ್ರನನ್ನು, ಆಪ್ಯ=ಹೊಂದಿ, ಏತೇನ=ಈ ಇಂದ್ರನಿಂದ, ಸಹ=ಕೂಡಿಕೊಂಡು, ಸುಪರ್ಣಪತ್ನೀಂ=ಗರುಡನ ಹೆಂಡತಿಯಾದ ಸೌಪರ್ಣಿಯನ್ನು, ಆಪ್ಯ= ಹೊಂದಿ, ತಯಾ=ಸೌಪರ್ಣಿಯಿಂದ, ಸುಪರ್ಣಂ=ಗರುಡನನ್ನು, ತೇನ = ಗರುಡನಿಂದ,

ಸಹ = ಕೂಡಿಕೊಂಡು, ವಾಣೀಂ = ಸರಸ್ವತಿಯನ್ನು, ಏತದ್ಗತಏವ = ವಾಣೀಗತನಾಗಿಯೇ, ಬಹ್ಮಾಣಂ=ಬ್ರಹ್ಮನನ್ನು, ಯಾತಿ=ಹೊಂದುತ್ತಾನೆ. (ಇದರಿಂದ ಇಂದ್ರಾದಿಗಳಲ್ಲಿ ಇಂದ್ರಾದಿತ್ಯ ಬೃಹಸ್ಪತಿಯರಿಗೂ, ಭೂತಗಳಲ್ಲಿ ತೇಜಸ್ಸಿಗೆ ವಾಯುವಿನಲ್ಲಿ ಲಯವು ಎಂದು ಹೇಳಿದಂತೆ ಆಯಿತು.) ॥ ೧೩೫ ॥ ೧೩೬ ॥

ಹಾಗಾದರೆ ಇದು 'ಇಂದ್ರ ಉಮಾಯಾಮುಮಾ ರುದ್ರೇ ವಿಲೀಯತೇ' ಎನ್ನುವ ಶ್ರುತಿವಿರುದ್ಧವಾಗಿದೆ. ಹೇಗೆಂದರೆ— ಉಮಾರುದ್ರಶಬ್ದಗಳಿಗೆ ಸ್ವಾರ್ಥಪರಿತ್ಯಾಗವಿದ್ದರೂ ವಾರುಣೀ-ಶೇಷಪರಗಳಾಗಿಯೇ ವ್ಯಾಖ್ಯಾತಗಳಾಗಿವೆ. ಅಲ್ಲದೆ ಸೌಪರ್ಣೀ-ಗರುಡಪರಗಳಾಗಿ ವ್ಯಾಖ್ಯಾತಗಳಾಗಲಿಲ್ಲ ಎಂದರೆ—

ಮೂ ॥ ಇಂದ್ರಪ್ರವೇಶಸ್ತು ಯದೋಚ್ಯತೇಽತ್ರ
ತದಾ ಹ್ಯುಮೇತ್ಯೇವ ಸುಪರ್ಣಪತ್ನೀ ।
ಉಕ್ತಾ ಸುಪರ್ಣಶ್ಚ ಗಿರೀಶನಾಮ್ನಾ
ತತೋ ವಿರೋಧಶ್ಚ ನ ಕಶ್ಚನಾತ್ರ ॥ ೧೩೭ ॥

ಅ ॥ ಯದಾ = ಯಾವ ಶ್ರುತಿಯಲ್ಲಿ, ಅತ್ರ = ಉಮೆಯಲ್ಲಿ, ಇಂದ್ರಪ್ರವೇಶಸ್ತು= ಇಂದ್ರನ ಪ್ರವೇಶವಾದರೂ, ಉಚ್ಯತೇ = ಹೇಳಲ್ಪಡುತ್ತದೋ, ತದಾ = ಆ ಶ್ರುತಿಯಲ್ಲಿ, ಉಮಾ ಇತಿ=ಉಮಾ ಎನ್ನುವ ಪದದಿಂದ, ಸುಪರ್ಣಪತ್ನ್ಯೇವ=ಗರುಡನ ಹೆಂಡತಿಯಾದ ಸೌಪರ್ಣಿಯೇ, ಉಕ್ತಾ ಹೇಳಲ್ಪಡುತ್ತಾಳೆ. ಗಿರೀಶನಾಮ್ನಾ=ಗಿರಿಶಪರ್ಯಾಯವಾದ ರುದ್ರಾದಿ ಶಬ್ದದಿಂದ, ಸುಪರ್ಣಶ್ಚ=ಗರುಡನು, ಉಕ್ತಃ=ಹೇಳಲ್ಪಡುತ್ತಾನೆ ಹಿ = ಇಂದ್ರನ ಲಯವು ಸೌಪರ್ಣಿಯಲ್ಲಿ ಎನ್ನುವುದು ಪ್ರಬಲಶ್ರುತಿಸಿದ್ಧವಾಗಿದೆ. ತತಃ=ಆದುದರಿಂದ, ಅತ್ರ=ಇಲ್ಲಿ, ಕಶ್ಚನ=ಯಾವುದೊಂದೂ, ವಿರೋಧಃ=ವಿರೋಧವೂ, ನ ಚ=ಇಲ್ಲವೇ ಇಲ್ಲ ॥ ೧೩೭ ॥

ಈಗ 'ತಾನಿಪರೇ' ಎಂದು ಹೇಳಲ್ಪಟ್ಟವುಗಳಿಗೆ ಹಿರಣ್ಯಗರ್ಭನಲ್ಲಿ ಲಯ ಪ್ರಕಾರವನ್ನು ಹೇಳುತ್ತಾರೆ—

ಮೂ ॥ ಭೃಗ್ವಾದಯೋ ದಕ್ಷಮವಾಪ್ಯ ತೇನ
ಪ್ರಾಪ್ಯೇಂದ್ರಮೇತೇನ ಸುಪರ್ಣಪತ್ನೀಂ ।
ವಿಶಂತಿ ಯೇ ಮನವೋ ರಾಜಮುಖ್ಯಾ
ಮನುಂ ಪ್ರವಿಶ್ಯಾತ್ರ ಗತಾ ಮಹೇಂದ್ರಂ ॥ ೧೩೮ ॥

ಅ ॥ ಭೃಗ್ವಾದಯಃ=ಭೃಗುಋಷಿಯೇ ಮೊದಲಾದವರು,(ವಸಿಷ್ಠ ಮರೀಚ್ಯಾದಿಗಳು) ದಕ್ಷಂ=ದಕ್ಷಪ್ರಜಾಪತಿಯನ್ನು, ಅವಾಪ್ಯ=ಹೊಂದಿ, ತೇನ=ಆ ದಕ್ಷಪ್ರಜಾಪತಿಯಿಂದ, ಇಂದ್ರಂ=ಇಂದ್ರನನ್ನು,ಪ್ರಾಪ್ಯ=ಹೊಂದಿ,ಏತೇನ=ಈ ಇಂದ್ರನಿಂದ,ಸುಪರ್ಣಪತ್ನೀಂ=ಸೌಪರ್ಣಿ ಯನ್ನು, ವಿಶಂತಿ=ಪ್ರವೇಶಮಾಡುತ್ತಾರೆ. ಯೇ ಮನವಃ=ಯಾವ ವೈವಸ್ವತಾದಿ ಮನು ಗಳೋ,ಯೇ ರಾಜಮುಖ್ಯಾಃ=ಪ್ರಿಯವ್ರತಾದಿ ರಾಜಶ್ರೇಷ್ಠರೋ, ತೇ=ಅವರು, ಮನುಂ=ಸ್ವಾಯಂ ಭುವ ಮನುವನ್ನು, ಪ್ರವಿಶ್ಯ=ಪ್ರವೇಶಮಾಡಿ, ಅತ್ರ=ಸ್ವಾಯಂಭುವ ಮನುವಿನಲ್ಲಿ, ಗತಾಃ= ಇರುವವರಾಗಿ, ಮಹೇಂದ್ರಂ=ದೇವೇಂದ್ರನನ್ನು, ವಿಶಂತಿ=ಪ್ರವೇಶಮಾಡುತ್ತಾರೆ. ॥ ೧೩೮ ॥

ಭೂಗಳಲ್ಲಿ ಪೃಥಿವ್ಯಾಕಾಶಗಳಿಗೆ ಲಯಪ್ರಕಾರವನ್ನು ಹೇಳುತ್ತಾರೆ —

ಮೂ || ಆಕಾಶ ಉರ್ವೀ ಚ ಗುರುಂ ಪ್ರವಿಶ್ಯ
ತೇನೈವ ಯಾತಃ ಪುರುಹೂತದೇವಂ |
ಸನಾದಯೋ ಯತಯಃ ಕಾಮಮೇವ
ವಿಶಂತಿ ಶಿಷ್ಟಾ ಅಪಿ ಹವ್ಯವಾಹಂ || ೧೩೯ ||

ಅ || ಆಕಾಶಃ = ಆಕಾಶಾಭಿಮಾನಿಯು, ಉರ್ವೀ ಚ=ಭೂಮಿಯೂ, ಗುರುಂ= ಗುರುವನ್ನೂ, ಪ್ರವಿಶ್ಯ = ಪ್ರವೇಶಮಾಡಿ, ತೇನೈವ = ಬೃಹಸ್ಪತಿಯಿಂದಲೇ, ಪುರುಹೂತ ದೇವಂ=ಇಂದ್ರನನ್ನೂ, ಯಾತಃ=ಹೊಂದುತ್ತಾನೆ, ಸನಾದಯಃ ಯತಯಃ=ಸನತ್ಕುಮಾರ ನಿಂದ ವ್ಯತಿರಿಕ್ತರಾದ ಸನಂದಸುಜಾತಾದಿ ಯತಿಗಳು, ಕಾಮಮೇವ=ಕಾಮನನ್ನೇ, ವಿಶಂತಿ= ಪ್ರವೇಶಮಾಡುತ್ತವೆ. ಶಿಷ್ಟಾ ಅಪಿ=ಹಿಂದೆ ಹೇಳಿದವರಿಂದ ಅವಶಿಷ್ಟರಾದವರೂ ಕೂಡ, ಹವ ವಾಹಂ=ಅಗ್ನಿಯನ್ನೂ, ವಿಶಂತಿ = ಪ್ರವೇಶಮಾಡುತ್ತಾರೆ. (ಇದರಿಂದ 'ಅಗ್ನೌ ಸರ್ವೇ ದೇವಾ ವಿಲೀಯಂತೇ' ಎನ್ನುವುದಕ್ಕೆ ವಿಷಯವು ತೋರಿಸಲ್ಪಟ್ಟಿತು) || ೧೩೯ ||

ಇದಕ್ಕೆ ಅಪವಾದವನ್ನು ಹೇಳುತ್ತಾರೆ—

ಮೂ || ವರ್ಣಾಶ್ರಮಾಚಾರರತಾ ಮನುಷ್ಯಾ
ಧರ್ಮಂ ಮನುಂ ಸೋಽಪಿ ಸಮೇತಿ ಕಾಲೇ |
ತಮೇವ ಸರ್ವೇ ಪಿತರಃ ಸುರಾನುಗಾಃ
ಸರ್ವೇ ಕುಬೇರಂ ಸ ಚ ಸೋಮಮೇವ || ೧೪೦ ||
ವಿಮುಕ್ತಿಕಾಲೇ ಪ್ರವಿಶಂ(ಶ)ತ್ಯಭೀಕ್ಷ್ಣಂ
ಭೋಗಾಂಶ್ಚ ತದ್ದೇಹಗತಾಃ ಪ್ರಭುಂಜತೇ |
ಆನಂದುಸುವ್ಯಕ್ತಿರಮುತ್ರ ತೇಷಾಂ
ಭವತ್ಯತಶ್ಚೇಷ್ಟತ ಏವ ನಿರ್ಗತಾಃ || ೧೪೧ ||
ಕ್ರೀಡಂತಿ ಭೂಯಶ್ಚ ಸಮಾವಿಶಂತಿ
ತಾನೇವ ಸಾಯುಜ್ಯಮಿದಂ ವದಂತಿ |
ಸಾಯುಜ್ಯ ಹೀನಾಸ್ತು (ಶ್ಚ)ಲಯೇ ತು ಸರ್ವೇ
ಪ್ರೋಕ್ತೇನ ಮಾರ್ಗೇಣ ವಿಶಂತಿ ಸೃಷ್ಟೌ || ೧೪೨ ||
ಬಹಿಶ್ಚ ನಿರ್ಯಾಂತಿ ತತೋಽನ್ಯದಾಪಿ
ಸಾಯುಜ್ಯಭಾಜಾಂ ಭವತಿ ಪ್ರವೇಶಃ |
ಉಕ್ತಂ ಸಮಸ್ತಂ ಪರಮಶ್ರುತೌ ಹಿ
ಪ್ರೋಕ್ತಂ ಚ (ತು) ಸರ್ಗಕ್ರಮತೋ ವಿಪರ್ಯಯಃ || ೧೪೩ ||
ಮುಕ್ತೌ ಲಯೋ ಯದ್ವದಥೋ ಲಯಶ್ಚ
ವಿಪರ್ಯಯೇಣೇತ್ಯವದದ್ಗಿರಾಂ ಪ್ರಭುಃ |
ಲಯೋ ಯತೋ ಮುಕ್ತಿರಿಯಂ ಸುರಾಣಾಂ
ಭೋಗೋ ವಿಶೇಷೇಣ ಚ ಯಂ ವದಿಷ್ಯತಿ || ೧೪೪ ||

**ಉಕ್ತಶ್ಚ ಬಿಂಬಪ್ರತಿಬಿಂಬಭಾವಃ**
**ಪೈಂಗಿ (ಪಿಂಗ) ಶ್ರುತಾವುಕ್ತಲಯಾನುಸಾರತಃ ।**
**ಬಿಂಬೇ ಲಯೋ ಯನ್ನಿಯತಶ್ಚ ಮುಕ್ತೌ**
**ಚಿದಾತ್ಮನಾಂ ತದ್ವಶತಾ ಚ ಸರ್ವದಾ ॥ ೧೪೫ ॥**

ಅ ॥ ವರ್ಣಾಶ್ರಮಾಚಾರರತಾಃ=ಬ್ರಾಹ್ಮಣಾದಿ ವರ್ಣಗಳೂ ಗೃಹಸ್ಥಾದ್ಯಾಶ್ರಮಗಳೂ ಇವುಗಳ ಆಚಾರಗಳಲ್ಲಿ ಆಸಕ್ತರಾದ, ಮನುಷ್ಯಾಃ=ಮನುಷ್ಯರು, ಧರ್ಮಂ=ಯಮಧರ್ಮರಾಜನನ್ನು, (ಹೊಂದುತ್ತಾರೆ.) ಸೋऽಪಿ=ಆ ಯಮಧರ್ಮರಾಜನು, ಮನುಂ=ಸ್ವಾಯಂಭುವಮನುವನ್ನು, ಕಾಲೇ=ಮೋಕ್ಷಕಾಲದಲ್ಲಿ, ಸಮೇತಿ=ಹೊಂದುತ್ತಾನೆ. ಸರ್ವೇ ಪಿತರಃ=ಎಲ್ಲಾ ಪಿತೃಗಳೂ, ತಮೇವ=ಆ ಯಮಧರ್ಮರಾಜನನ್ನೇ, ಸಂಯಾಂತಿ=ಹೊಂದುತ್ತಾರೆ. ಸರ್ವೇ ಸುರಾನುಗಾಃ=ಎಲ್ಲಾ ದೇವತೆಗಳ ಭೃತ್ಯರಾದ ಗಂಧರ್ವಾದಿಗಳು, ಕುಬೇರಂ=ಕುಬೇರನನ್ನು, ಹೊಂದುತ್ತಾರೆ. ಸ ಚ=ಆ ಕುಬೇರನು, ಸೋಮಮೇವ=ಸೋಮ(ಚಂದ್ರ)ನನ್ನೇ ಹೊಂದುತ್ತಾನೆ. (ಉಪಸಂಹಾರ ಮಾಡುತ್ತಾರೆ.) (ಈ ಪ್ರಕಾರವಾಗಿ ಎಲ್ಲರೂ ಹಿಂದೆ ಹೇಳಿದಪ್ರಕಾರ), ವಿಮುಕ್ತಿಕಾಲೇ=ಮೋಕ್ಷಕಾಲದಲ್ಲಿ,(ತಮ್ಮ ತಮ್ಮಕ್ಕಿಂತ ಉತ್ತಮರನ್ನು ), ಪ್ರವಿಶಂತಿ=ಪ್ರವೇಶಮಾಡುತ್ತಾರೆ. ಅಥವಾ ಪ್ರವೇಶಮಾಡುತ್ತಾನೆ. (ಪ್ರವೇಶಮಾತ್ರ ಮಾಡುವುದಲ್ಲ. ಮತ್ತೆ) ಅಭೀಕ್ಷ್ಣಂ=ಆವಿಷ್ಟವಾದ ಪಿಶಾಚಿಯಂತೆ, ತದ್ದೇಹಗತಾಃ=ಅವರ ಶರೀರದಲ್ಲಿದ್ದವರಾಗಿ, ಭೋಗಾಂಶ್ಚ=ಭೋಗಗಳನ್ನೂ ಕೂಡ, ಪ್ರಭುಂಜತೇ=ಭೋಗಿಸುತ್ತಾರೆ. (ಪ್ರವೇಶದಿಂದ ಏನು ಪ್ರಯೋಜನವೇನಂದರೆ—) ಅಮುತ್ರ=ಉತ್ತಮರಲ್ಲಿ ಪ್ರವೇಶದಿಂದ, ತೇಷಾಂ=ಮುಕ್ತರಿಗೆ, ಆನಂದ ಸುವ್ಯಕ್ತಿಃ=ಆನಂದದ ಅಭಿವ್ಯಕ್ತಿಯು, ಭವತಿ=ಆಗುತ್ತದೆ. (ಪ್ರವೇಶಮಾಡಿದವರಿಗೆ ಪುನಃ ನಿರ್ಗಮವು ಇದೆಯೋ, ಇಲ್ಲವೋ ಎಂದರೆ—) ಅತಃ=ಈ ಉತ್ತಮರಿಂದ, ಇಷ್ಟತಃ ಏವ=ಇಚ್ಛೆಯಿಂದಲೇ, ನಿರ್ಗತಾಶ್ಚ = ಹೊರಟವರಾಗಿ, ಕ್ರೀಡಂತಿ=ಕ್ರೀಡಿಸುತ್ತಾರೆ. ಭೂಯಶ್ಚ = ಮತ್ತೂ ಕೂಡ, ತಾನೇವ=ಪೂರ್ವಪ್ರವಿಷ್ಟರಾದವರನ್ನೆ, ಸಮಾವಿಶಂತಿ=ಪ್ರವೇಶಮಾಡುತ್ತಾರೆ. (ಹಾಗಾದರೆ— ಇಂತಹ ಮುಕ್ತಿಯು ಎಲ್ಲಿಯೂ ಉಪಲಬ್ಧವಾಗಲಿಲ್ಲ ಎಂದರೆ-) ಇದಂ=ಇದನ್ನು, ಸಾಯುಜ್ಯಂ= ಸಾಯುಜ್ಯವನ್ನಾಗಿ, ವದಂತಿ = (ಪುರಾಣಾದಿಗಳು) ಹೇಳುತ್ತವೆ. ('ಸಯುಜಾಂ ಭಾವಃ ಸಾಯುಜ್ಯಂ' ಇಂತಹ ಸಾಯುಜ್ಯವು ಸರ್ವರಿಗೂ ಇದೆಯೋ, ಇಲ್ಲವೆನ್ನುತ್ತೇವೆ. ಹಾಗಾದರೆ— ಸಾಯುಜ್ಯರಹಿತರಾದವರು ಯಾವ ರೀತಿಯಿಂದ ಇರುತ್ತಾರೆ ಎಂದರೆ—) ಸಾಯುಜ್ಯಹೀನಾಸ್ತು=ಸಾಯುಜ್ಯರಹಿತರಾದವರೂ, ಸರ್ವೇ=ಎಲ್ಲರೂ, ಲಯೇ ತು=ಪ್ರಲಯಕಾಲದಲ್ಲಿಯೇ, ಪ್ರೋಕ್ತೇನ ಮಾರ್ಗೇಣ=ಹೇಳಲ್ಪಟ್ಟ ಮಾರ್ಗದಿಂದ, ವಿಶಂತಿ=(ಸ್ವೋತ್ತಮರನ್ನು) ಪ್ರವೇಶಮಾಡುತ್ತಾರೆ. ಸೃಷ್ಟೌ = ಸೃಷ್ಟಿಕಾಲದಲ್ಲಿ, ತತಃ=ಅವರ ದೇಶೆಯಿಂದ, ಬಹಿಃ= ಹೊರಗೆ, ನಿರ್ಯಾಂತಿ=ಹೊರಡುತ್ತಾರೆ. (ಇದು ಸಾಯುಜ್ಯವನ್ನು ಹೊಂದಿದವರಿಗೂ, ಸಮಾನವೋ ಅಂದರೆ— ಅಲ್ಲವೆನ್ನುತ್ತಾರೆ—) ತತಃ=ಲಯಕಾಲದೇಶೆಯಿಂದ, ಅನ್ಯದಾಪಿ=ಬೇರೆ ಕಾಲದಲ್ಲಿಯೂ, ಸಾಯುಜ್ಯಭಾಜಾಂ=ಸಾಯುಜ್ಯವನ್ನು ಹೊಂದಿದವರಿಗೆ, ಪ್ರವೇಶಃ=ಪ್ರವೇಶವು, ಭವತಿ=ಆಗುತ್ತದೆ. (ಹಾಗಾದರೆ- ಇದೆಲ್ಲವನ್ನೂ ಯಾವ ಪ್ರಮಾಣದಿಂದ ತಿಳಿಯಬೇಕಾದುದು ಎಂದರೆ—) ಉಕ್ತಂ ಸಮಸ್ತಂ = ಇವರಿಗೆ ಇವರಲ್ಲಿ ಲಯವು ಎಂದು ಹೇಳಲ್ಪಟ್ಟದ್ದೆಲ್ಲವೂ, ಪರಮಶ್ರುತೌ = ಪರಮಶ್ರುತಿಯಲ್ಲಿ, ಪ್ರೋಕ್ತಂ = ಹೇಳಲ್ಪಟ್ಟದೆ. (ಪ್ರಮಾಣಾಂತರವನ್ನು

ಹೇಳುತ್ತಾರೆ.) ಮುಕ್ತೌ = ಮುಕ್ತಿಯಲ್ಲಿ, ಸರ್ಗಕ್ರಮತಃ = ಸೃಷ್ಟಿಕ್ರಮದೆಶೆಯಿಂದ, ವಿಪರ್ಯಯಃ=ವ್ಯತ್ಯಾಸವು. (ಯಾರು ಯಾರ ದೆಶೆಯಿಂದ ಹುಟ್ಟಿರುತ್ತಾರೋ, ಅವರಿಗೆ ಅವರಲ್ಲಿ ಮುಕ್ತಿಯು ಎಂದಂಗೀಕರಿಸಬೇಕು. ಅಪವಾದವಿಲ್ಲದಿದ್ದರೆ.) (ಇದೂ ಕೂಡ ಯಾವುದರಿಂದ ಎಂದರೆ—) ಪ್ರಲಯದಲ್ಲಿ ಹೇಗೋ ಹಾಗೆಯೇ ಅಂದರೆ— ಸಾಧಾರಣ ಪ್ರಲಯದಲ್ಲಿ ಸೃಷ್ಟಿಕ್ರಮದೆಶೆಯಿಂದ ವ್ಯತ್ಯಾಸವು ಇದೆ.) (ಇದೂ ಕೂಡ ಯಾವುದರಿಂದ ಎಂದರೆ-) ಅಥೋ=ಹಾಗೆಯೇ, ಲಯಶ್ಚ=ಲಯವಾದರೂ, ವಿಪರ್ಯಯೇಣ = ಸೃಷ್ಟಿಕ್ರಮವನ್ನು ಅಪೇಕ್ಷಿಸಿ ವ್ಯತ್ಯಾಸದಿಂದ (ಅಂದರೆ— ಸೃಷ್ಟಿಕ್ರಮಕ್ಕಿಂತ ವಿಪರೀತಕ್ರಮದಿಂದ,) ಇತಿ = ಹೀಗೆ, ಗಿರಾಂ ಪ್ರಭುಃ = ವೇದ ವಚನಗಳಿಗೆ ಪ್ರಭುವಾದ ಸೂತ್ರಕಾರರು, ಅವದತ್=(**ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ**' ಎನ್ನುವ ಸೂತ್ರದಿಂದ) ಉಪಪಾದಿಸಿರುವರು. (ಲಯದಲ್ಲಿ ಸೃಷ್ಟಿಕ್ರಮದೆಶೆಯಿಂದ ವ್ಯತ್ಯಾಸವಾದರೆ ಮುಕ್ತಿಯಲ್ಲಿ ಹಾಗೆಯೇ ಆಗಬೇಕು ಎನ್ನುವಲ್ಲಿ ಏನು ನಿಯಾಮಕವು ಎಂದರೆ—) ಯತಃ=ಯಾವಕಾರಣದೆಶೆಯಿಂದ, ಸುರಾಣಾಂ=ದೇವತೆಗಳ, ಲಯಃ= ಲಯವೇ, ಇಯಂ ಮುಕ್ತಿಃ = ಈ ಮುಕ್ತಿಯೋ, (ಮನುಷ್ಯರಂತೆ ಮೊದಲೇ ದೇಹದಿಂದ ಉತ್ಕ್ರಾಂತಿಯು ಅಲ್ಲ. ಆದುದರಿಂದ ಹಿಂದೆ ಹೇಳಿದ್ದು ಯುಕ್ತವು.) (ಹಾಗಾದರೆ ಮೊದಲು ಮುಕ್ತರಿಗೆ ಭೋಗಾದಿಗಳು ಸಮರ್ಥಿಸಲ್ಪಟ್ಟವೆ. ಈಗಲಾದರೂ ಲಯವೇ ಮುಕ್ತಿಯೆಂದು ಹೇಳಲ್ಪಡುತ್ತದೆ. ಆದುದರಿಂದ ಹೇಗೆ ಪೂರ್ವಾಪರವಿಲ್ಲದಿರುವುದು ಎಂದರೆ—) ವಿಶೇಷೇಣ= ದೇವಪದಕ್ಕಿಂತಲೂ ಅತಿಶಯವಾಗಿ, ಭೋಗಃ=ಭೋಗವು ಆನಂದಾನುಭವವು ಮುಕ್ತಿಯೋ, (ದೇಹಹಾನಿರೂಪವಾದ ಮುಕ್ತಿಯು, ಲಯದೆಶೆಯಿಂದ ವಿಲಕ್ಷಣವಲ್ಲವೆನ್ನುವ ಅಭಿಪ್ರಾಯದಿಂದ ದೇಹಲಯವು ಮುಕ್ತಿಯೆಂದು ಹೇಳಿದ್ದು ಭೋಗಾದಿಗಳು ಮುಕ್ತಿಯಲ್ಲವೆನ್ನುವ ಅಭಿಪ್ರಾಯದಿಂದ ಅಲ್ಲ.) (ಭೋಗವು ಮುಕ್ತಿಯು ಎಂದು ಸೂತ್ರಕಾರರು ಹೇಳದೆ ಇದ್ದುದನ್ನು ಯಾವುದರಿಂದ ಇಟ್ಟುಕೊಳ್ಳಬೇಕೆಂದರೆ—) ಯಂ=ಯಾವ ಭೋಗವನ್ನು (ನಾಲ್ಕನೇ ಪಾದದಲ್ಲಿ ಸೂತ್ರಕಾರರು ಮುಕ್ತಿಯೆಂದು) ವದಿಷ್ಯತಿ=ಹೇಳುವರು.(ಆದುದರಿಂದ ಭೋಗವು ಮುಕ್ತಿಯು.)(ಪ್ರಮಾಣಾಂತರವನ್ನು ಹೇಳುತ್ತಾರೆ-) ಉಕ್ತಲಯಾನುಸಾರತಃ=ಹಿಂದೆ ಹೇಳಿದ ಲಯವನ್ನು ಅನುಸರಿಸಿ, ಪೈಂಗಿ (ಪಿಂಗ) ಶ್ರುತೌ=ಪೈಂಗಿ (ಪಿಂಗ) ಶ್ರುತಿಯಲ್ಲಿ, ಬಿಂಬ ಪ್ರತಿಬಿಂಬಭಾವಃ=ಬಿಂಬ-ಪ್ರತಿಬಿಂಬಭಾವವು, ಉಕ್ತಶ್ಚ=ಹೇಳಲ್ಪಟ್ಟದೆ.(ಅಂದರೆ, ಯಾರಲ್ಲಿ ಯಾರಿಗೆ ನಮ್ಮಿಂದ ಲಯವು ಹೇಳಲ್ಪಟ್ಟದೋ ಅದು ಬಿಂಬವು; ಮತ್ತೊಂದು ಪ್ರತಿಬಿಂಬವು) ಯತ್ = ಯಾವಕಾರಣದೆಶೆಯಿಂದ, ಮುಕ್ತೌ= ಮುಕ್ತಿಯಲ್ಲಿ, (ಪ್ರತಿಬಿಂಬಕ್ಕೆ) ಬಿಂಬೇ=ಬಿಂಬದಲ್ಲಿ, ಲಯಃ=ನಾಶವು, ಸರ್ವದಾ=ಮೋಕ್ಷಾನಂತರದಲ್ಲಿಯೂ ಕೂಡ, ನಿಯತಃ=ಪ್ರಮಾಣಸಿದ್ಧವಾಗಿದೆಯೋ, ಚಿದಾತ್ಮನಾಂ=ಚೇತನರಿಗೆ, ಸರ್ವದಾ= ಯಾವಾಗಲೂ ಮುಕ್ತ್ಯನಂತರದಲ್ಲಿಯೂ, ತದ್ವಶತಾ ಚ = ಬಿಂಬದ ಅಧೀನತ್ವವಿದೆಯೋ, (ಆದುದರಿಂದ ಹೇಳಿದ್ದು ಯುಕ್ತವು.) ॥ ೧೪೦ ॥ ೧೪೧ ॥ ೧೪೨ ॥ ೧೪೩ ॥ ೧೪೪ ॥ ೧೪೫ ॥

ಸಮಸ್ತ ಭೂತಗಳಿಗೂ ಪ್ರಾಣನಲ್ಲಿ ಲಯವು. ಪ್ರಾಣನಿಗೆ ವಿಷ್ಣುವಿನಲ್ಲಿ ಲಯವು ಎಂದು ಯಾವುದು ಹೇಳಲ್ಪಟ್ಟದೋ ಅದು ಅಯುಕ್ತವು. '**ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ**' ಎನ್ನುವ ಶ್ರುತಿವಿರೋಧವಿದೆ. ಬಿಂಬದಲ್ಲಿ ಪ್ರತಿಬಿಂಬಕ್ಕೆ ಲಯವು ಎನ್ನುವುದೂ ಅಸತ್ಯವು. ಪ್ರಾಣನು ಭೂತವಾದ ತೇಜಸ್ಸಿಗೆ ಬಿಂಬವಲ್ಲವಷ್ಟೆ. ಎಂದರೆ—

**ಮೂ ॥ ತೇಜೋಽಭಿಧಾಂತು ಶ್ರಿಯಮಾಪ್ಯ ವಿಷ್ಣು**
**ಮಗ್ರೇ ತತಃ ಪುತ್ರತಯೈವ ವಾಯುಃ ।**

**ಆಪ್ತಃ ಪ್ರಸೂತಃ ಪುನರೇವ ವಿಷ್ಣುಂ**
**ಪ್ರವಿಶ್ಯ ಮುಕ್ತಃ ಪ್ರಲಯೇತ್ರ ತಿಷ್ಠತಿ ॥ ೧೪೬ ॥**

**ಅ ॥** ವಾಯುಃ=ವಾಯುದೇವರು, ಪ್ರಲಯೇ=ಪ್ರಲಯಕಾಲದಲ್ಲಿ, ತೇಜೋಽಭಿಧಾಂ= ತೇಜಶ್ಶಬ್ದವಾಚ್ಯಳಾದ, ಶ್ರಿಯಂ=ಲಕ್ಷ್ಮೀದೇವಿಯನ್ನು, ಆಪ್ಯ=ಹೊಂದಿ, (ಅಲ್ಲಿಯೇ ಲೀನರಾಗಿ) ವಿಷ್ಣುಂ=ಶ್ರೀ ಹರಿಯನ್ನು, ಆಪ್ತಃ=ಹೊಂದುವರು. ಅಗ್ರೇ=ಸೃಷ್ಟಿಕಾಲವು ಉಂಟಾಗುತ್ತಿರಲು ಸರ್ವರಕ್ಕಿಂತಲೂ ಮೊದಲು, ತತಃ=ವಿಷ್ಣುವಿಗೆ, ಪುತ್ರತಯೈವ = ಪುತ್ರತ್ವದಿಂದ ಅಂದರೆ— ಹಿರಣ್ಯಗರ್ಭತ್ವದಿಂದ, ಪ್ರಸೂತಃ=ಹುಟ್ಟುವರು. ಪುನರೇವ=ಮತ್ತು, ಪ್ರಲಯೇಃ = ಮುಕ್ತಿ ಯಲ್ಲಿರತಕ್ಕ, ವಿಷ್ಣುಂ=ಶ್ರೀ ಹರಿಯನ್ನು, ಪ್ರವಿಶ್ಯ=ಪ್ರವೇಶಮಾಡಿ, ಅತ್ರ=ಶ್ರೀ ಹರಿಯಲ್ಲಿ, ತಿಷ್ಠತಿ=ಇರುತ್ತಾನೋ, ಅಥವಾ (ಸ. ರ. ವಿ–) '**ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ**' ಎನ್ನುವ ಶ್ರುತಿಯಲ್ಲಿ ಪ್ರಾಣಪರಮಾತ್ಮರ ಮಧ್ಯದಲ್ಲಿ ತೇಜಶ್ಶಬ್ದದಿಂದ ನಿರ್ದಿಷ್ಟಳಾದ ಲಕ್ಷ್ಮೀದೇವಿಯನ್ನು ಪ್ರಲಯಕಾಲದಲ್ಲಿ (ಅಗ್ರೇ=) ಭವಿಷ್ಯದ್ಬ್ರಹ್ಮ ಪದವಿಯನ್ನು ಅನುಸರಿಸಿ ಮುಂದಿನ ಮುಖ್ಯ ವಾಯುವೂ ಕೂಡ ಅನಂತರದಲ್ಲಿ ಲಕ್ಷ್ಮಿಯನ್ನು ಹೊಂದಿದವನಾಗಿ ಆ ಮಾತಾಪಿತೃಗಳಿಂದ ಪುತ್ರನಾಗಿ, ಪ್ರಸೂತಃ=ಹುಟ್ಟಿಸಲ್ಪಟ್ಟನು. ಪುನಃ ಪ್ರಲಯಕಾಲದಲ್ಲಿ ವಿಷ್ಣುವನ್ನು ಪ್ರವೇಶಮಾಡಿ ಮುಕ್ತನಾಗಿ ಅಲ್ಲಿ ಇರುತ್ತಾನೆ.

**ತಾ ॥** (1) ತೇಜಃ ಶಬ್ದವು ಲಕ್ಷ್ಮೀವಾಚಕವಾದುದರಿಂದ ಹಿಂದೆ ಹೇಳಿದ ಶ್ರುತಿ ವಿರೋಧವಿಲ್ಲ, (2) ಹೀಗಾದರೆ '**ವಿಲೀನೋ ಹಿ ಪ್ರಕೃತೌ ಸಂಸಾರಮೇತಿ**' ಎನ್ನುವ ಶ್ರುತಿಯಿಂದ ವಾಯುವಿಗೆ ಸಂಸಾರವು ಪ್ರಸಕ್ತವಾಗುವುದು ಎಂದರೆ ಹಿರಣ್ಯಗರ್ಭನಾಗಿ ಪುನಃ ಹುಟ್ಟಿದಪ್ರಯುಕ್ತ ಇಷ್ಟವೇ. ಹೀಗಾದರೆ— ಬ್ರಹ್ಮಜ್ಞಾನಿಗೆ ಮುಕ್ತಿಯೇ ಇಲ್ಲವೆಂದಾಗಬೇಕಾಗುವುದು. ಎಂದರೆ— ಹಿರಣ್ಯಗರ್ಭತ್ವಾನಂತರದಲ್ಲಿ ಮುಕ್ತಿಯು ॥ ೪೬ ॥

ಮುಕ್ತರಿಗೆ ತಮ್ಮತಮ್ಮಕ್ಕಿಂತ ಉತ್ತಮರಾದ ದೇವತೆಗಳನ್ನು ಪ್ರವೇಶಮಾಡಿ ಅವಸ್ಥಿತಿಯು ಎಂದು ಹೇಳಲ್ಪಟ್ಟಿತು ಇಷ್ಟೇಅಲ್ಲ ಮತ್ತೆ ಭಗವತ್ಪ್ರವೇಶವೂ ಕೂಡ ಇದೆ. ಉಕ್ತವಾದ ಭೋಗವು ಆನಂದವನ್ನು ಹುಟ್ಟಿಸತಕ್ಕದಲ್ಲ; ಮತ್ತೆ ವ್ಯಂಜಕವೇ, ಆನಂದವಾದರೂ ಸ್ವರೂಪ ಭೂತವಾಗಿದೆ ಎನ್ನುತ್ತಾರೆ—

**ಮೂ ॥ ಸರ್ವೇಽಪಿ ತೇ ಮುಕ್ತಗಣಾ ಅಮಂದ–**
**ಸಾಂದ್ರಂ ನಿಜಾನಂದಮಶೇಷತೋಽಪಿ ।**
**ಭುಂಜಂತ ಏವಾಸತ ಈಶದೇಹೇ**
**ಲಯೇಽಥ ಸರ್ಗೇ ಬಹಿರೇವ ಯಾಂತಿ ॥ ೧೪೭ ॥**
**ಪ್ರಯಾತಿ ಧರ್ಮಂ ನಿರ್ಋತಿಸ್ತು ಶಕ್ರಂ**
**ಮರುದ್ಗಣಾಃ ಪಾರಿಷ(ರ್ಷ)ದಾಸ್ತಥೈವ ।**
**ಸರ್ವೇಽನಿರುದ್ಧಂ ಪೃತನಾಧಿಪಾದ್ಯಾ-**
**ಸ್ತುರಶ್ರುತಿರ್ಹೀತ್ಥಮಿಯಂ ವಿಮುಕ್ತಿಃ ॥ ೧೪೮ ॥**

ಅ || ಸರ್ವೇಽಪಿ ತೇ ಅಶೇಷತೋಽಪಿ ಮುಕ್ತಗಣಾಃ=ಎಲ್ಲಾ ಮುಕ್ತರ ಸಮುದಾಯಗಳೂ, ಆಮಂದಸಾಂದ್ರಂ=ಅತಿಪೂರ್ಣವಾದ ನಿಬಿಡವಾದ, ನಿಜಾನಂದಂ=ಸ್ವರೂಪಾನಂದವನ್ನೂ, ಭುಂಜಂತ ಏವ = ಅನುಭವಿಸುವವರಾಗಿಯೇ, ಲಯೇ = ಪ್ರಲಯಕಾಲದಲ್ಲಿ, ಈಶದೇಹೇ=ಶ್ರೀ ಹರಿಯ ಶರೀರದಲ್ಲಿ ಆಸತೇ=ಇರುತ್ತಾರೆ. ಅಥ=ಮೇಲೆ, ಸರ್ವೇ=ಸೃಷ್ಟಿಕಾಲದಲ್ಲಿ, ಬಹಿರೇವ=ಹೊರಗೆಯೇ, ಯಾಂತಿ=ಬರುತ್ತಾರೆ. ಶಿಷ್ಟಾ ಅಪಿ ಹವ್ಯಹಂ ಎಂದು ಉಳಿದವರು ಅಗ್ನಿಯನ್ನು ಎಂದು ಹೇಳಿದ್ದಕ್ಕೆ ಅಪವಾದವನ್ನು ಹೇಳುತ್ತಾರೆ.) ನಿಋತಿಸ್ತು=ನಿಋತಿಯಾದರೂ, ಧರ್ಮಂ=ಯಮಧರ್ಮರಾಜನನ್ನು, ಪ್ರಯಾತಿ=ಹೊಂದುತ್ತಾನೆ. ಮರುದ್ಗಣಾಃ=ಮರುತ್‌ಗಳು, ಶಕ್ರಂ=ದೇವೇಂದ್ರನನ್ನು ಪ್ರಯಾಂತಿ=ಹೊಂದುತ್ತವೆ. ತಥಾ=ಹಾಗೆಯೇ, ಪೃತನಾಧಿಪಾದ್ಯಾಃ=ವಿಷ್ವಕ್ಸೇನನೇ ಮೊದಲಾಗಿವುಳ್ಳ, ಸರ್ವೇ=ಎಲ್ಲಾ, ಪಾರ್ಷದಾಃ=ಶ್ರೀ ಹರಿಯ ಪಾರ್ಷದರು, ಅನಿರುದ್ಧಂ=ಅನಿರುದ್ಧನನ್ನು, (ದೇಹಲಯಕ್ಕಾಗಿ) ಪ್ರಯಾಂತಿ=ಹೊಂದುತ್ತಾರೆ. (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ) ಇತ್ಥಂ=ಹೀಗೆ, ತುರಶ್ರುತಿರ್ಹಿ = ತುರಶ್ರುತಿಯಷ್ಟೆ, ಇಯಂ = ಇದು, ದೇವಾದಿಗಳಿಗೆ ದೇಹಲಯರೂಪವಾದ, ವಿಮುಕ್ತಿಃ = ವಿಮುಕ್ತಿಯು, (ಉಕ್ತಾ = ಹೇಳಲ್ಪಟ್ಟಿತು. ಅಥವಾ ಇಯಂ=ಇಲ್ಲಿ ಹೇಳಿದ ಪ್ರಕಾರವಾದುದೇ ಮುಕ್ತಿಯು. ಜಿನಾದ್ಯುಕ್ತಪ್ರಕಾರವಾದುದು ಅಲ್ಲ. || ೧೪೬ || ೧೪೭ ||

ತಾ || ಸಾರಾಂಶ- ಸ. ರ. ವಿ.— (1) ಉಮಾದಿಗಳಿಗೆ ರುದ್ರಾದಿ ದೇವತೆಗಳಲ್ಲಿ ಪ್ರವೇಶವು ಹೇಳಲ್ಪಟ್ಟಿತು. ಅವರಿಂದ ಇತರರಾದ ದೇವತೆಗಳಿಗೆ ಪೃಥ್ವ್ಯಾದಿಭೂತಗಳಲ್ಲಿ ಲಯವು. 'ಭೂತೇಷು ತಚ್ಛ್ರುತೇಃ' ಎನ್ನುವ ಸೂತ್ರದಿಂದ ಹೇಳಲ್ಪಟ್ಟದೆ. ಅಲ್ಲಿ ಉದಾಹೃತವಾದ 'ವಾಯಾವಿಂದ್ರಃ ಸೋಮ ಆದಿತ್ಯೋ ಬೃಹಸ್ಪತಿಃ' ಎನ್ನುವ ಶ್ರುತಿಯಲ್ಲಿ ಇಂದ್ರಾದಿಗಳಿಗೆ ಯಾವ ವಾಯುವಿನಲ್ಲಿ ಲಯವು ಹೇಳಲ್ಪಡುತ್ತದೋ, ಆ ವಾಯುವು ಭೂತಪ್ರಕರಣದಲ್ಲಿದ್ದಾಗ್ಯೂ ಪ್ರಧಾನವಾಯುವೇ. ಭೂತವಾಯುವಲ್ಲ. ಭೂತವಾಯುವೆಂದಂಗೀಕರಿಸಿದರೆ– ಅವನಲ್ಲಿ ಭೂತವಾಯುವಿಗಿಂತ ಉತ್ತಮನಾದ ಇಂದ್ರನಿಗೆ ಲಯವು ಕೂಡಲಾರದು. 'ವಾತೀತಿ ವಾಯುಃ' ಎನ್ನುವ ಯೋಗವು ಪ್ರಧಾನವಾಯುವಿನಲ್ಲಿ ಕೂಡುತ್ತದೆ. ಆದುದರಿಂದ ಪ್ರಧಾನವಾಯುವಿಗೂ ಜಡಭೂತ ವಾಯ್ವಭಿಮಾನಿತ್ವವಿದ್ದುದರಿಂದಲೂ ಭೂತಪ್ರಕರಣಪಠಿತ ವಾಯುಶಬ್ದವಾಚ್ಯತ್ವವು ಯುಕ್ತವು. ಅಪ್ರಧಾನ ವಾಯುವೇ ಜಡಭೂತವಾಯುವಿಗೆ ಅಭಿಮಾನಿಯು. ಪ್ರಧಾನವಾಯುವು ಅಲ್ಲವೆಂದು ಹೇಳಕೂಡದು. ಮಹದಾದಿ ಸರ್ವವಸ್ತುಗಳಿಗೆ ಅಭಿಮಾನಿಯಾದ ಪ್ರಧಾನವಾಯುವಿನಲ್ಲಿ ಭೂತವಾಯ್ವಭಿಮಾನಿತ್ವವು ಸುತರಾಂ ಸಿದ್ಧವು. ರಾಜ್ಯಾಧಿಪತಿಗೆ ಗ್ರಾಮಸ್ವಾಮಿತ್ವವು ವಿರುದ್ಧವಲ್ಲವಷ್ಟೆ. (೩) 'ಭೂತಾನಿಪರೇ' ಎನ್ನುವ ವಚನದಿಂದ ಭೂತಗಳಿಗೆ ಪರಮಾತ್ಮನಲ್ಲಿ ಪ್ರಧಾನವಾಯುದ್ವಾರಾ ಲಯವು ಹೇಳಲ್ಪಟ್ಟದೆ. ಪ್ರಧಾನವಾಯುವೇ ಸಾಕ್ಷಾತ್ಪರಮಾತ್ಮನಲ್ಲಿ ಪ್ರವೇಶಮಾಡುತ್ತಾನೆ. 'ಸ ಪ್ರಾಣಮಸೃಜತ ಪ್ರಾಣಃ ಶ್ರದ್ಧಾಂ ಖಂ ವಾಯುಂ' ಇತ್ಯಾದಿ ಶ್ರುತಿಗಳಿಂದ ಮುಖ್ಯ ವಾಯ್ವಾದಿ ಕ್ರಮದಿಂದ ಸೃಷ್ಟಿಯು ಶ್ರುತವಾಗಿದೆ. ಪೃಥಿವ್ಯಾದಿ ಭೂತಗಳಿಗೆ ತಂತಮಗೆ ಕಾರಣಭೂತರಾದ ದೇವತೆಗಳಲ್ಲಿ ಪ್ರವೇಶದ್ವಾರಾ ಮುಖ್ಯವಾಯುವಿನಲ್ಲಿ ಪ್ರವೇಶವು. ಸಾಕ್ಷಾತ್ತಲ್ಲ. ಎಲ್ಲಾ ಇಂದ್ರ ಸೋಮಾದಿಗಳೂ ಮುಖ್ಯವಾಯುವಿನಲ್ಲಿ ಶ್ರುತ್ಯುಕ್ತವಾದ ಪ್ರವೇಶವೋ ಅವೂಕೂಡ ತಂತಮಗೆ ಕಾರಣಭೂತರಾದ ದೇವತೆಗಳಲ್ಲಿ ಪ್ರವೇಶದ್ವಾರದಿಂದಲೇ ಎಂದು ತಿಳಿಯತಕ್ಕದು. (3) ಪಾರ್ವತೀ-ರುದ್ರಂಗೆ ವಾರುಣೀ ಶೇಷ ಜನ್ಮದಲ್ಲಿಯೇ ಮುಕ್ತಿಯು. ಭಾರತೀ ಮುಖ್ಯಪ್ರಾಣರಿಗೆ ಸರಸ್ವತೀ ಬ್ರಹ್ಮ

ಜನ್ಮದಲ್ಲಿಯೇ ಮುಕ್ತಿಯು. '**ಸ್ಥಿತಪ್ರಜ್ಞೋಽಪಿ ಯಸ್ತ್ವೂರ್ಧ್ವಂ ಪ್ರಾಪ್ಯ ರೌದ್ರಪದಂ ತತಃ । ಸಾಂಕರ್ಷಣಂ ತತೋ ಮುಕ್ತಿಮುಗಾದ್ವಿಷ್ಣುಪ್ರಸಾದತಃ ॥** ಇತ್ಯಾದಿ ಪ್ರಮಾಣಗಳಿಂದ ಸಿದ್ಧವಾಗಿದೆ. ಬಲಿಚಕ್ರವರ್ತಿಗೆ ಭವಿಷ್ಯದಿಂದ್ರತ್ವವು ಇದ್ದಂತೆಯೇ ಮುಖ್ಯ ವಾಯ್ವವತಾರನಾದ ಹನುಮಂತನಿಗೆ ಮರಣಾದಿಗಳಲ್ಲಿ ಭವಿಷ್ಯದ್ಬ್ರಹ್ಮತ್ವವು ಪ್ರಸಿದ್ಧವು. ಆದುದರಿಂದ ಉಮಾದಿಗಳಲ್ಲಿ ಮುಕ್ತಿಯನ್ನು ಹೊಂದತಕ್ಕ ಇಂದ್ರಾದಿಗಳಿಗೆ ಲಯವು ಕೂಡುವುದಿಲ್ಲ. (4) ಹಾಗಾದರೆ ಉಮಾದಿಗಳನ್ನು ಪ್ರವೇಶ ಮಾಡಿದವರಿಗೆ ಉಮಾದಿಗಳಿಂದ ಕೂಡಿಕೊಂಡು ಪುನಃ ಉತ್ಪತ್ತಿಯು ಬರಬೇಕಾದೀತು ಎಂದರೆ— ಇದು ದೋಷವಲ್ಲ. '**ಅಗ್ನಿರಿಂದ್ರ ಇಂದ್ರ ಉಮಾಯಾಂ ಉಮಾರುದ್ರೇ ವಿಲೀಯತೇ**' ಇತ್ಯಾದಿ ಶ್ರುತಿಗಳಲ್ಲಿ ಉಮಾದಿಗಳಿಗೆ ಮುಕ್ತಿಕಾಲೀನಪ್ರವೇಶಸ್ಥಾನತ್ವವು ಹೇಳಲ್ಪಡುತ್ತದೆ. ಅದರಲ್ಲಿ ಉಮಾ, ಗಿರೀಶ, ಭಾರತೀ-ವಾಯುಶಬ್ದಗಳಿಂದ ವಾರುಣೀ, ಶೇಷ, ಬ್ರಹ್ಮಾಣೀ- ವಿರಿಂಚಾದಿಗಳಿಗೆ ಭೂತ ಪೂರ್ವಗತಿಯಿಂದ ಗ್ರಹಣವು ಏಕೆಂದರೆ— ಉಮಾದಿಗಳೇ ಮಹಾಕಲ್ಪಾಂತರದಲ್ಲಿ ವಾರುಣ್ಯಾದಿಗಳ ಪದವಿಯನ್ನು ಹೊಂದುತ್ತಾರೆ. ಆದುದರಿಂದ ಉಮಾದಿ ಪದಗಳಿಂದ ವಾರುಣ್ಯಾದಿಗಳನ್ನು ಇಟ್ಟುಕೊಳ್ಳಬೇಕು. (5) ಹಾಗಾದರೆ— ಇಂದ್ರನಿಗೆ ಪಾರ್ವತಿಯನ್ನು ಪ್ರವೇಶಮಾಡಿ ರುದ್ರಾದಿಗಳಲ್ಲಿ ಪ್ರವೇಶವು ಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಆದುದರಿಂದ ಆ ಇಂದ್ರನಿಗೆ ಸೌಪರ್ಣಿಯನ್ನು ಪ್ರವೇಶ ಮಾಡಿ, ಗರುಡನಲ್ಲಿ ಪ್ರವೇಶವನ್ನು ಹೇಳಿದ್ದು ಹೇಗೆಂದರೆ— ಇದು ದೋಷವಲ್ಲ. ಯಾವಾಗ ಉಮೆಯಲ್ಲಿ ಕಾಮದೇವನು ಪ್ರವೇಶಮಾಡುತ್ತಾನೆಂದು ಹೇಳಲ್ಪಡುತ್ತದೋ, ಆಗ ಉಮಾ ಶಬ್ದದಿಂದ ವಾರುಣಿಯು ಹೇಳಲ್ಪಡುತ್ತಾಳೆ. ಯಾವಾಗ ಇಂದ್ರನು ಪ್ರವೇಶಮಾಡುತ್ತಾನೆಂದು ಹೇಳಲ್ಪಡುತ್ತಾನೋ, ಆಗ ಉಮಾ ಶಬ್ದದಿಂದ ಸೌಪರ್ಣಿಯು ಹೇಳಲ್ಪಡುತ್ತಾಳೆ. ಗರುಡನು ಗಿರೀಶ ನಾಮದಿಂದ ಹೇಳಲ್ಪಡುತ್ತಾನೆ. ಹೀಗೆ ವ್ಯವಸ್ಥೆಯನ್ನು ಮಾಡಿ ವಿರೋಧವನ್ನು ಪರಿಹರಿಸಬೇಕು (6) ಯಾವ ಈ ದೇವಾದಿಗಳು ತಮ್ಮ ತಮ್ಮಕ್ಕಿಂತ ಉತ್ತಮರಾದ ದೇವತೆಗಳಲ್ಲಿ ಪ್ರವಿಷ್ಟರಾಗಿದ್ದಾರೆಂದು ಹೇಳಲ್ಪಟ್ಟಿರುತ್ತಾರೋ, ಅವರು ಪರಕಾಯವನ್ನು ಪ್ರವೇಶ ಮಾಡಿದ ಯೋಗ ಸಿದ್ಧನಂತೆ ಅಲ್ಲಿಯೇ ಭೋಗಗಳನ್ನು ಅನುಭವಿಸುತ್ತಾರೆ. ಮುಕ್ತರಾಗಿ ಅಲ್ಲಿಯೇ ವ್ಯಕ್ತವಾದ ಸ್ವರೂಪಭೂತವಾದ ಆನಂದವುಳ್ಳವರಾಗಿ ಇರುತ್ತಾರೆ. ಸಚ್ಚಿದಾನಂದ ಶರೀರವುಳ್ಳ ಮುಕ್ತರಾದ ತಮ್ಮತಮ್ಮಕ್ಕಿಂತ ಉತ್ತಮರಾದ ದೇವತೆಗಳಿಂದ ಹೊರಗೆ ತಮ್ಮ ಇಚ್ಛೆಯಿಂದ ಹೊರಗೆ ಹೊರಟು ಬಂದು ಕ್ರೀಡಿಸಿ, ಅವರನ್ನೇ ಪ್ರವೀಶಮಾಡುತ್ತಾರೆ. ಕ್ಷೀರನೀರಗಳಂತೆ ವಿಷ್ಣುವನ್ನೂ ಅವಧಿಮಾಡಿಕೊಂಡು ತಮ್ಮತಮ್ಮಕ್ಕಿಂತ ಉತ್ತಮರಾದ ದೇವತಾ ಸಂಶ್ಲೇಷರೂಪವಾದ ಸಂಯೋಗವೇ ಸಾಯುಜ್ಯರೂಪವಾದ ಮುಕ್ತಿಯು. ತನಗೆ ಉತ್ತಮ ದೇವತಾಪ್ರವೇಶವಾದರೂ, ಕ್ರಮದಿಂದ ಪ್ರಲಯಕಾಲದಲ್ಲಿ ಸಾಯುಜ್ಯರಹಿತರಿಗೂ ಇದೆ. ಸೃಷ್ಟಿಕಾಲದಲ್ಲಿ ಆದರೂ ಅವರ ದೆಶೆಯಿಂದ ಹೊರಗೆ ಹೊರಟರತಕ್ಕವರಿಗೆ ಸಾಮೀಪ್ಯಾದಿಗಳೇ; ಸಾಯುಜ್ಯವಲ್ಲ. ಸಾಯುಜ್ಯ ಮೋಕ್ಷವನ್ನೂ ಹೊಂದಿದವರಿಗೆ ಆದರೂ, ಸೃಷ್ಟಿಕಾಲದಲ್ಲಿ ತಮ್ಮತಮ್ಮಕ್ಕಿಂತ ಉತ್ತಮರಾದ ದೇವತೆಗಳಲ್ಲಿ ಪ್ರವೇಶವು ಇದ್ದೇ ಇದೆ. (7) ದೇವತೆಗಳಿಗೆ ತಮತಮಗೆ ಕಾರಣೀ ಭೂತರಾದ ದೇವತೆಗಳಲ್ಲಿ ಪ್ರವೇಶನಾಮಕವಾದುದು ಲಯವು ಯಾವುದು ಹೇಳಲ್ಪಟ್ಟದೋ, ಯಾವುದು ನಾಲ್ಕನೇ ಪಾದದಲ್ಲಿ ವಿಶೇಷವಾಗಿ ಹೇಳಲ್ಪಡತಕ್ಕುದು ಭೋಗವೋ, ಅವೆರಡೂ ಅವರಿಗೆ ಮುಕ್ತಿಯು. ಆದುದರಿಂದ ಹೇಗೆ ಮಹದಾದಿ ಜಡಪದಾರ್ಥಗಳಿಗೆ ಸೃಷ್ಟಿಕ್ರಮದಿಂದ ವಿಪರೀತವಾಗಿ ಲಯವೋ, ಹಾಗೆಯೇ ಅವುಗಳಿಗೆ ಅಭಿಮಾನಿಗಳಾದ ದೇವತೆಗಳಿಗೂ, ಸೃಷ್ಟಿವೈಪರೀತ್ಯದಿಂದಲೇ ಮೋಕ್ಷವು ಕೂಡುತ್ತದೆ. ಲಯವಿಶೇಷವೇ ಮೋಕ್ಷವು.

ಬ್ರಹ್ಮಾದಿಕ್ರಮದಿಂದಲೇ ದೇವತೆಗಳಿಗೆ ಬಿಂಬಪ್ರತಿಬಿಂಬ ಭಾವಗಳು. ದೇವತೆಗಳಲ್ಲಿ ಅವರರಾದ ದೇವತೆಗಳಿಗೆ ಉತ್ತಮ ದೇವತೆಗಳಲ್ಲಿ ಲಯವು, ಹಿಂದೆ ಹೇಳಿದಂತೆಯೇ ಅಂಗೀಕರಿಸಬೇಕು. ಹಾಗೆ ಇವರಿಗೆ ಬಿಂಬಪ್ರತಿಬಿಂಬಭಾವವು ಪಿಂಗ ಶ್ರುತಿಯಲ್ಲಿ ಹೇಳಿದ ಪ್ರಕಾರ ಯುಕ್ತವಾಗುತ್ತದೆ. ಬಿಂಬಭೂತನಾದ ದೇವನಲ್ಲಿಯೇ ಮುಕ್ತಿಕಾಲದಲ್ಲಿ ಪ್ರತಿಬಿಂಬಭೂತನಾದ ದೇವತೆಗೆ ಲಯವು. ಪ್ರತಿಬಿಂಬಭೂತವಾದ ದೇವತೆಯಲ್ಲಿ ಬಿಂಬಭೂತ ದೇವತೆಗೆ ಲಯವಲ್ಲ. ಪ್ರತಿಬಿಂಬವು ಬಿಂಬಾಧೀನವಾದುದು. ಆದುದರಿಂದ ಪ್ರತಿಬಿಂಬರೂಪರಾದ ಮುಕ್ತರಿಗೆ ತಮ್ಮ ತಮ್ಮ ಬಿಂಬದೇವತಾಧೀನತ್ವವು ಯಾವಾಗಲೂ ನಿವೃತ್ತವಾಗುವುದಿಲ್ಲ. (8) ಹಿಂದೆ ಹೇಳಿದ ಪ್ರಕಾರ ಯಾರು ವಿಷ್ಣುವನ್ನು ಪ್ರವೇಶಮಾಡಿದವರಾಗಿ ಮುಕ್ತರಾಗಿರುತ್ತಾರೋ, ಅವರು ಪ್ರಲಯಕಾಲದಲ್ಲಿ ಸುಪ್ತರಾದವರಂತೆ ವಿಷ್ಣುವಿನಲ್ಲಿ ವಿಷ್ಣುವಿನ ಸಂಸ್ಪರ್ಶದಿಂದುಂಟಾದ ಸುಖವನ್ನು ತಿಳಿಯದೆ ಇದ್ದವರಾಗಿ ಇರುವುದಿಲ್ಲ. ಮತ್ತೆ ವಿಷ್ಣುವಿನ ಸಂಸರ್ಗದಿಂದ ಚೆನ್ನಾಗಿ ಆವಿರ್ಭೂತವಾದ ಸ್ವರೂಪಾನಂದವನ್ನು ಅನುಭವಿಸುವವರಾಗಿಯೇ ಇರುತ್ತಾರೆ. ಸೃಷ್ಟಿಕಾಲದಲ್ಲಿ ಆದರೂ ಶ್ರೀಹರಿಯ ದೇಹವಿಶೇಷದೆಶೆಯಿಂದ ಹೊರಟು ವೈಕುಂಠಾದಿಗಳಲ್ಲಿ ಕ್ರೀಡಿಸುತ್ತಾ ಇರುತ್ತಾರೆ. (9) ಧರ್ಮ ದೇವತೆಗಳಿಗೆ ಸ್ವಾಯಂಭುವ ಮನ್ವಾದಿ ಮಾರ್ಗದಿಂದ ಮುಕ್ತಿಯೆಂದು ತಿಳಿಯತಕ್ಕದು. ಅದರಲ್ಲಿ ಮರುತುಗಳು ಇಂದ್ರನನ್ನು ಹೊಂದುತ್ತಾರೆ. ಇದರಿಂದ 'ಮರುತೋ ಮಾರುತೇ' ಎನ್ನುವ ಶ್ರುತಿಯಿಂದ ಮರುತ್‌ಗಳಿಗೆ ಪ್ರಧಾನವಾಯುವಿನಲ್ಲಿ ಯಾವ ಲಯವು ಹೇಳಲ್ಪಟ್ಟದೋ, ಅದು ಇಂದ್ರಾದಿಗಳ ದ್ವಾರದಿಂದ ಎಂದು ತಿಳಿಯತಕ್ಕದು. ॥ ೧೪೮ ॥ ೧೪೯ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ
ಚತುರ್ಥಾಧ್ಯಾಯಸ್ಯ ದ್ವಿತೀಯಃ ಪಾದಃ ॥

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಿಕೊಳ್ಳಲ್ಪಟ್ಟ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ
ನಾಲ್ಕನೇ ಅಧ್ಯಾಯದಲ್ಲಿ ಎರಡನೇ ಪಾದವು ಸಮಾಪ್ತವಾಯಿತು.

॥ ಶ್ರೀಕೃಷ್ಣಾರ್ಪಣಮಸ್ತು ॥

---

*

॥ ಶ್ರೀಃ ॥

# ಮೂರನೇ ಪಾದವು.

---

**ಮೂ ॥ ಉತ್ಕ್ರಾಂತಮಾರ್ಗಶ್ಚ ವಿಮುಕ್ತಗಮ್ಯಂ**
**ಪಾದೋದಿತಂ [ಸುಕ್ರಮವಿಕ್ರಮೌ ಚ] ॥ ೧ ॥**

ಅ ॥ ಉತ್ಕ್ರಾಂತಮಾರ್ಗಶ್ಚ=ಶರೀರದಿಂದ ಉತ್ಕ್ರಾಂತರಾದ ಮನುಷ್ಯರಿಗೆ ಭಗವಂತನ ಲೋಕಗಮನಕ್ಕಾಗಿ ಮಾರ್ಗವು, ವಿಮುಕ್ತಗಮ್ಯಂ ಚ=ಕರ್ಮದಿಂದಲೂ ದೇಹದಿಂದಲೂ ಯಾರು ವಿಮುಕ್ತರಾಗಿರುವರೋ ಅವರೆಲ್ಲರಿಗೂ ಗಮ್ಯವಾದುದು ಇವೆರಡೂ, ಪಾದೋದಿತಂ= ಈ ಪಾದದಲ್ಲಿ ಹೇಳಲ್ಪಟ್ಟದೆ. ಅಂದರೆ— ಕ್ಷೀಣಕರ್ಮವುಳ್ಳ ಯಾವ ಪುರುಷನಿಗೆ ಉತ್ಕ್ರಮಣವು ಮೊದಲು ನಿರೂಪಿತವಾಗಿದೆಯೋ ಅಂತಹ ಉತ್ಕ್ರಾಂತನಿಗೆ ಗಮನಮಾರ್ಗವೂ ಗಮ್ಯವಾದ ವಸ್ತುವೂ ಕೂಡ ನಿರೂಪಿಸಲ್ಪಡುತ್ತದೆ) ॥ ೧ ॥

---

## ಅರ್ಚಿರಧಿಕರಣವು.

**'ಓಂ ಅರ್ಚಿರಾದಿನಾ ತತ್ಪ್ರಥಿತೇಃ ಓಂ'** ॥ ಸೂ. ೧ ॥

ಬ್ರಹ್ಮನನ್ನು ಹೊಂದತಕ್ಕ ಜ್ಞಾನಿಯು ಅರ್ಚಿರಾದಿ ಮಾರ್ಗದಿಂದ ಹೋಗುತ್ತಾನೆ. ವಾಯ್ವಾದಿ ಮಾರ್ಗದಿಂದ ಅಲ್ಲ. **'ತೇಽರ್ಚಿಷಮಭಿಸಂಭವಂತಿ'** ಎನ್ನುವ ಶ್ರುತಿಯಲ್ಲಿಯೂ **'ದ್ವಾವೇವ ಮಾರ್ಗೌ ಪ್ರಥಿತೌ'** ಎನ್ನುವ ಸ್ಮೃತಿಯಲ್ಲಿಯೂ ಪ್ರಸಿದ್ಧವಾಗಿದೆ ॥೧॥ ಅಧಿ. ೧ ॥

**ಅರ್ಚಿರಧಿಕರಣವು ಸಮಾಪ್ತವಾಯಿತು.**

---

## ವಾಯುಶಬ್ದಾಧಿಕರಣವು.

**'ಓಂ ವಾಯುಶಬ್ದಾದವಿಶೇಷ ವಿಶೇಷಾಭ್ಯಾಂ ಓಂ'** ॥ ಸೂ. ೨ ॥

ಜ್ಞಾನಿಯು ಅರ್ಚಿರ್ಲೋಕದೆಸೆಯಿಂದ ವಾಯುಲೋಕವನ್ನು ಹೊಂದುತ್ತಾನೆ. **'ಸ ವಾಯುಮಾಗಚ್ಛತಿ'** ಎನ್ನುವ ಸಾಮಾನ್ಯರೂಪವಾದ, **'ಸ ಇತೋ ಗತೋ ದ್ವಿತೀಯಾಂ ಗತಿಂ ವಾಯುಮಾಗಚ್ಛತಿ'** ಎನ್ನುವ ವಿಶೇಷರೂಪವಾದ ವಾಯುಶಬ್ದದೆಸೆಯಿಂದ ಹಾಗೆಯೇ ತಿಳಿಯುತ್ತದೆ ॥ ೨ ॥ ಅಧಿ. ೨ ॥

**ವಾಯುಶಬ್ದಾಧಿಕರಣವು ಸಮಾಪ್ತವಾಯಿತು.**

---

## ತಟಿದಧಿಕರಣವು.

**ಓಂ ತಟಿತೋಽಧಿವರುಣಃ ಸಂಬಂಧಾತ್ ಓಂ'** ॥ ಸೂ. ೩ ॥

ತಟಲ್ಲೋಕಪ್ರಾಪ್ತ್ಯನಂತರದಲ್ಲಿ ವರುಣಲೋಕವು ಉತ್ಕ್ರಾಂತನಾದ ಜ್ಞಾನಿಯಿಂದ ಪ್ರಾಪ್ಯವು. 'ತಟಿತಾ ಧ್ರುವ್ಯಹ್ಯತೇ ವರುಣಲೋಕಃ' ಎನ್ನುವ ಶ್ರುತಿಯಿಂದ ತಟಲ್ಲೋಕದ ಮೇಲೆ ವರುಣನಿಗೆ ಸಂಬಂಧವನ್ನು ಬೋಧಿಸತಕ್ಕ ಶ್ರುತಿಯಿದ್ದುದರಿಂದ ॥ ೩ ॥ ಅಧಿ. ೩ ॥

**ತಟಿದಧಿಕರಣವು ಸಮಾಪ್ತವಾಯಿತು.**

---

## ಆತಿವಾಹಿಕಾಧಿಕರಣವು.

### "ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ" ॥ ಸೂ. ೪ ॥

ದ್ವಿತೀಯಪ್ರಾಪ್ಯನಾದ ವಾಯುವು ಆತಿವಾಹಿಕ ನಾಮಕನಾದ ಮುಖ್ಯವಾಯುಪುತ್ರನು ಪೂರ್ವಪ್ರಾಪ್ಯತ್ವಲಿಂಗದೆಸೆಯಿಂದ.

### 'ಓಂ ಉಭಯವ್ಯಾಮೋಹಾತ್ತತ್ಸಿದ್ಧೇಃ ಓಂ' ॥ ಸೂ. ೫ ॥

ಪೂರ್ವೋಕ್ತವಾಯುವು ಮುಖ್ಯನೋ ಆತಿವಾಹಿಕನೋ ಎಂದು ಸಂಶಯವು ಬರುತ್ತಿರಲು 'ದಿವಸ್ಪತಿಃ' ಎನ್ನುವ ವಿಶೇಷಣರೂಪವಾದ ಲಿಂಗದೆಸೆಯಿಂದ ಉತ್ತರಪ್ರಾಪ್ಯನಾದ ವಾಯುವಿನಲ್ಲಿ ಮುಖ್ಯತ್ವವು ಸಿದ್ಧಿಸುವುದರಿಂದ ಪೂರ್ವಪ್ರಾಪ್ಯವಾಯುವಿನಲ್ಲಿ ಆತಿವಾಹಿಕತ್ವವು ಸಿದ್ಧಿಸುತ್ತದೆ ॥ ೪ ॥ ೫ ॥ ಅಧಿ. ॥ ೪ ॥

**ಅತಿವಾಹಿಕಾಧಿಕರಣವು ಸಮಾಪ್ತವಾಯಿತು.**

---

## ವೈದ್ಯುತಾಧಿಕರಣವು.

### "ಓಂ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ" ॥ ಸೂ. ೬ ॥

ವಿದ್ಯುತ್ಪತಿಯಾದ ವಾಯುವಿನಿಂದಲೇ ಯಾವ ಕಾರಣದಿಂದ ಬ್ರಹ್ಮನು ಪ್ರಾಪ್ಯನೋ ಆದುದರಿಂದ ವಾಯುವೇ ಅಂತಿಮಪ್ರಾಪ್ಯನು. 'ಸ ಏನಾನ್ ಬ್ರಹ್ಮ ಗಮಯತಿ' ಎಂದು ಬ್ರಹ್ಮಗಮನವು ಶ್ರುತವಾಗಿರುವುದರಿಂದ ॥ ೬ ॥ ಅಧಿ. ೫ ॥

**ವೈದ್ಯುತಾಧಿಕರಣವು ಸಮಾಪ್ತವಾಯಿತು.**

---

## ಕಾರ್ಯಾಧಿಕರಣವು.

### 'ಓಂ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ಓಂ' ॥ ಸೂ. ೭ ॥

'ಸ ಏನಾನ್ ಬ್ರಹ್ಮ ಗಮಯತಿ' ಎನ್ನುವ ಶ್ರುತಿಯಲ್ಲಿ ಚತುರ್ಮುಖಾಖ್ಯ ಬ್ರಹ್ಮನನ್ನೇ ವಾಯುವು ಹೊಂದಿಸುತ್ತಾನೆ ಎಂದು ಬಾದರಿ ಋಷಿಯು (ಬಾದರಾಯಣ ಪುತ್ರರಾದ

ಶುಕ್ರಾಚಾರ್ಯರು) ತಿಳಿದುಕೊಳ್ಳುತ್ತಾರೆ. '**ತಥಾಪಿ ಪ್ರಕೃತೇರ್ಬಂಧೋ ಬ್ರಹ್ಮಣಾ ಸಹ ಭಿದ್ಯತೇ**' ಎನ್ನುವ ಉಕ್ತಿಯಿಂದ ಚತುರ್ಮುಖ ಮುಕ್ತಿಪರ್ಯಂತವಾಗಿ ಬಂಧವು ಅನುವೃತ್ತವಾಗಿರುವುದರಿಂದ ಮೊದಲು ಕಾರ್ಯಬ್ರಹ್ಮನಿಗೇ ಪ್ರಾಪ್ಯತ್ವವು ಕೂಡುತ್ತದೆ.

'ಓಂ ವಿಶೇಷಿತತ್ವಾಚ್ಚ ಓಂ' ॥ ಸೂ. ೮ ॥

'**ಯದಿ ಹ ವಾವ ಪರಮಭಿಪಶ್ಯತಿ ಪ್ರಾಪ್ನೋತಿ ಬ್ರಹ್ಮಾಣಂ ಚತುರ್ಮುಖಂ**' ಎನ್ನುವ ಶ್ರುತಿಯಲ್ಲಿ ಬ್ರಹ್ಮನಿಗೆ ಚತುರ್ಮುಖನೆಂದು ವಿಶೇಷಣ ಕೊಟ್ಟಪ್ರಯುಕ್ತ ಕಾರ್ಯಬ್ರಹ್ಮನೇ ಬ್ರಹ್ಮಪದಾರ್ಥನು.

'ಓಂ ಸಾಮೀಪ್ಯಾತ್ತು ತದ್ವ್ಯಪದೇಶಃ ಓಂ' ॥ ಸೂ. ೯ ॥

ಜ್ಞಾನಿಗೆ ಪರಬ್ರಹ್ಮಪ್ರಾಪ್ತಿವ್ಯಪದೇಶವು ಪರಬ್ರಹ್ಮಪ್ರಾಪ್ತಿಗೆ ಕಾಲತಃ ಸಾಮೀಪ್ಯರೂಪವಾದ ಹೇತುವಿನಿಂದಲೇ. ಕಾರ್ಯಬ್ರಹ್ಮನಿಗೆ ಅಪ್ರಾಪ್ಯತ್ವದಿಂದಲೂ ಅಲ್ಲ, ಪರಬ್ರಹ್ಮನಿಗೆ ಪ್ರಥಮ ಪ್ರಾಪ್ಯತ್ವದಿಂದ ಅಲ್ಲ.

'ಓಂ ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್ ಓಂ' ॥ ಸೂ ೧೦ ॥

ಕಾರ್ಯಗಳಿಗೆ ನಾಶರೂಪವಾದ ಪ್ರಲಯದಲ್ಲಿ ಕಾರ್ಯಗಳಿಗೆ ಸ್ವಾಮಿಯಾದ ಚತುರ್ಮುಖನಿಂದ ಕೂಡಿಕೊಂಡು ಚತುರ್ಮುಖನದೆಶೆಯಿಂದ ಪರಬ್ರಹ್ಮನನ್ನು ಜ್ಞಾನಿಯು ಹೊಂದುತ್ತಾನೆ. '**ತೇ ಹಿ ಬ್ರಹ್ಮಾಣಮಭಿಪದ್ಯ ಯದ್ಯೈತದ್ವಿಲೀಯತೇಽಥ ಸಹ ಬ್ರಹ್ಮಣಾ ಪರಮಭಿಗಚ್ಛಂತಿ**' ಎನ್ನುವ ಶ್ರುತಿಯಲ್ಲಿ ಹೇಳಿದರಿಂದ.

'ಓಂ ಸ್ಮೃತೇಶ್ಚ ಓಂ' ॥ ಸೂ. ೧೧ ॥

'**ಬ್ರಹ್ಮಣಾ ಸಹ ತೇ ಸರ್ವೇ**' ಎನ್ನುವ ಸ್ಮೃತಿಯಿಂದಲೂ ಜ್ಞಾನಿಯು ಕಾರ್ಯಸ್ವಾಮಿಯಾದ ಚತುರ್ಮುಖನಿಂದ ಕೂಡಿಕೊಂಡೇ ಪರಬ್ರಹ್ಮನನ್ನು ಹೊಂದುತ್ತಾನೆ.

'ಓಂ ಪರಂ ಜೈಮಿನಿರ್ಮುಖ್ಯತ್ವಾತ್ ಓಂ' ॥ ಸೂ. ೧೨ ॥

'**ಸ ಏನಾನ್ ಬ್ರಹ್ಮ ಗಮಯತಿ**' ಎನ್ನುವ ಶ್ರುತಿಯಲ್ಲಿ ಪರಬ್ರಹ್ಮನನ್ನು ವಾಯುವು ಹೊಂದಿಸಿ ಕೊಡುತ್ತಾನೆ. ಕಾರ್ಯಬ್ರಹ್ಮನನ್ನು ಅಲ್ಲ ಎಂದು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. ಬ್ರಹ್ಮಶಬ್ದಕ್ಕೆ ಅಲ್ಲಿಯೇ ಮುಖ್ಯತ್ವವಿದ್ದುದರಿಂದ.

'ಓಂ ದರ್ಶನಾಚ್ಚ ಓಂ' ॥ ಸೂ. ೧೩ ॥

ಶ್ರವಣಾದಿ ಸಾಧನಗಳಿಂದ ಅಪರೋಕ್ಷನಾಗಿ ಪರಬ್ರಹ್ಮನಿಗೇನೇ ದರ್ಶನವಾಗುವುದರಿಂದಲೂ ಇತರರಿಗೆ ಅದು ಅಲ್ಲದಿರುವುದರಿಂದಲೂ ಮುಖ್ಯಾರ್ಥ ಸ್ವೀಕಾರವೇ ಯುಕ್ತವು.

'ಓಂ ನ ಚ ಕಾರ್ಯೇ ಪ್ರತಿಪತ್ತ್ಯಭಿಸಂಧಿಃ ಓಂ' ॥ ಸೂ. ೧೪ ॥

ಕಾರ್ಯಬ್ರಹ್ಮನಲ್ಲಿ ಉಪಾಸನೆಯು, ಕಾರ್ಯಬ್ರಹ್ಮನನ್ನು ಹೊಂದುತ್ತೇನೆ ಎನ್ನುವ ಇಚ್ಛೆಯೂ ಕೂಡ ಇಲ್ಲ, ಆದುದರಿಂದ ಪರಬ್ರಹ್ಮನೇ ಪ್ರಾಪ್ಯನು ಕಾರ್ಯಬ್ರಹ್ಮನಲ್ಲ.

**'ಓಂ ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾ ಚ ದೋಷಾತ್ತತ್ಕ್ರತುಶ್ಚ ಓಂ' ॥ ಸೂ. ೧೫ ॥**

ದೇಹಾದಿಗಳಲ್ಲಿಯೇ ಬ್ರಹ್ಮನನ್ನು ನೋಡುವವರು ಪ್ರತೀಕಾಲಂಬನರು, ತದ್ವ್ಯತಿರಿಕ್ತರು ಅಪ್ರತೀಕಾಲಂಬನರು. ವ್ಯಾಪ್ತರೂಪದಿಂದ ಬ್ರಹ್ಮನನ್ನು ನೋಡುವವರು ಅಪ್ರತೀಕಾಲಂಬನರು, ಅಂತಹವರನ್ನು ವಾಯುವು ಪರಬ್ರಹ್ಮನನ್ನು ಹೊಂದಿಸಿಕೊಡುತ್ತಾನೆ. ಸರ್ವರನ್ನು ಅಲ್ಲ. ಇತರರನ್ನೇ ಕಾರ್ಯಬ್ರಹ್ಮನನ್ನು ಹೊಂದಿಸಿಕೊಡುತ್ತಾನೆ, ಎಂದು ಶ್ರುತ್ಯರ್ಥವು ಎಂದು ಬಾದರಾಯಣಾಚಾರ್ಯರು ತಿಳಿಯುತ್ತಾರೆ. ಎರಡು ರೀತಿ ಅಂಗೀಕರಿಸಿದರೂ ದೋಷವದೆ. ಅಂದರೆ— ಕೆಲವರನ್ನು ಕಾರ್ಯಬ್ರಹ್ಮನನ್ನು ಹೊಂದಿಸಿಕೊಡುತ್ತಾನೆ. ಕೆಲವರನ್ನು ವಾಯುವು ಪರಬ್ರಹ್ಮನನ್ನು ಹೊಂದಿಸಿಕೊಡುತ್ತಾನೆ, ಎಂದಂಗೀಕರಿಸದೆ ಸರ್ವರನ್ನೂ ಕಾರ್ಯಬ್ರಹ್ಮನನ್ನೇ ಹೊಂದಿಸಿಕೊಡುತ್ತಾನೆ; ಪರಬ್ರಹ್ಮನನ್ನು ಹೊಂದಿಸಿಕೊಡುವುದಿಲ್ಲ, ಪರಬ್ರಹ್ಮನನ್ನೇ ಹೊಂದಿಸಿಕೊಡುತ್ತಾನೆ, ಕಾರ್ಯಬ್ರಹ್ಮನನ್ನು ಅಲ್ಲ. ಎಂದಂಗೀಕರಿಸಿದರೆ ದೋಷವಿದೆ.

**'ಓಂ ವಿಶೇಷಂ ಚ ದರ್ಶಯತಿ ಓಂ'** ॥ ಸೂ. ೧೬ ॥

ಅಪ್ರತೀಕಾಲಂಬನತ್ವಾದಿ ವಿಶೇಷಗಳನ್ನು **'ದೇವಾ ವಾವ ಸರ್ವಪ್ರಕಾಶಾಃ ಋಷಯೋಂತಃಪ್ರಕಾಶಾಃ ಮನುಷ್ಯಾ ಏವ ಬಹಿಃಪ್ರಕಾಶಾಃ'** ಎನ್ನುವ ಶ್ರುತಿಯು ತೋರಿಸುತ್ತದೆ. ॥ ೭ ॥ ॥ ೮ ॥ ೯ ॥ ೧೦ ॥ ೧೧ ॥ ೧೨ ॥ ೧೩ ॥ ೧೪ ॥ ೧೫ ॥ ೧೬ ॥ ಅಧಿ. ೬ ॥

**ಕಾರ್ಯಾಧಿಕರಣವು ಸಮಾಪ್ತವಾಯಿತು.**

---

ಈ ಅಧಿಕರಣಗಳಲ್ಲಿ ಪೂರ್ವಪಕ್ಷಯುಕ್ತಿಗಳನ್ನೂ ಸಿದ್ಧಾಂತಯುಕ್ತಿಗಳನ್ನೂ ಹೇಳುತ್ತಾರೆ.

**ಮೂ ॥ [ಉತ್ಕ್ರಾಂತಮಾರ್ಗಶ್ಚ ವಿಮುಕ್ತಗಮ್ಯ ಪಾದೋದಿತಂ]**
**ಸುಕ್ರಮವಿಕ್ರಮೌ ಚ ।**
**ಸಾಂತಾನಿಕಪ್ರಾಪ್ತಿರಭೀಷ್ಟತಾ ಚ ಸೌಕರ್ಯ-**
**ಮಿತ್ಯನ್ಯಮತಸ್ಯ ತರ್ಕಾಃ ।**
**ವಿಶೇಷಸಂಪ್ರಾಪ್ತಿರುರುತ್ವಮಾಪ್ತಿಃ**
**ಕ್ರಮಾನುರಾಗಃ ಕಥಿತಾನುವೃತ್ತಿಃ ।**
**ಸಿದ್ಧಾಂತನಿರ್ಣೀತಿಕರಾಃ [ಪ್ರತೀಕಂ ದೇಹಾದಿಕಂ**
**ತದ್ಗತಮೇವ ಯೇ ನರಾಃ] ॥ ೨ ॥**

ಅ ॥ (೧ನೇ ಅಧಿಕರಣದಲ್ಲಿ ಅರ್ಚಿರ್ಲೋಕಕ್ಕೆ ಪ್ರಥಮಪ್ರಾಪ್ಯತ್ವವೋ ವಾಯುಲೋಕಕ್ಕೆ ಪ್ರಥಮಪ್ರಾಪ್ಯತ್ವವೋ ಎಂದು ಸಂಶಯುವು ಬಂದರೆ— ಎರಡು ಲೋಕಗಳಿಗೂ ಪ್ರಥಮಪ್ರಾಪ್ಯತ್ವವು ಎಂದು ಪೂರ್ವಪಕ್ಷವು; ಅರ್ಚಿರ್ಲೋಕಕ್ಕೇನೇ ಪ್ರಾಥಮ್ಯವು ಎಂದು ಸಿದ್ಧಾಂತವು. ಅದರಲ್ಲಿ) ಸುಕ್ರಮ-ವಿಕ್ರಮೌ ಚ = ಸುಕ್ರಮ-ವಿಕ್ರಮಗಳು, ಅದರಲ್ಲಿ ಸುಕ್ರಮಃ=ಮಾರ್ಗನಾನಾತ್ವರೂಪವಾದ ಸುಕ್ರಮವು, ಎಂದು ಇಲ್ಲಿ(ಪೂರ್ವಪಕ್ಷಯುಕ್ತಿಯು.) ವಿಶೇಷಸಂಪ್ರಾಪ್ತಿಃ=

ವಿಶೇಷಪ್ರಾಪ್ತಿಯು, ಎಂದು (ಸಿದ್ಧಾಂತಯುಕ್ತಿಯು.) (ಅಂದರೆ— **'ತೇಽರ್ಚಿಷಮಭಿ ಸಂಭವಂತಿ' 'ಸ ವಾಯುಮಾಗಚ್ಛತಿ'** ಎನ್ನುವ ಎರಡು ಶ್ರುತಿಗಳಲ್ಲಿ ಮಾರ್ಗವು ಅರ್ಚಿರಾದಿತ್ವದಿಂದಲೂ, ವಾಯ್ವಾದಿತ್ವದಿಂದಲೂ ಹೇಳಲ್ಪಟ್ಟಪ್ರಯುಕ್ತ ಮಾರ್ಗಭೇದದಿಂದ ಎರಡಕ್ಕೂ ಪ್ರಾಥಮಿಕತ್ವವಿದ್ದರೂ ಅಧಿಕಾರಿ ಭೇದದಿಂದ ವಿರೋಧವಿಲ್ಲದಿರುವುದರಿಂದಲೂ ಮಾರ್ಗನಾನಾತ್ವ ರೂಪವಾದ ಸುಕ್ರಮವು ಕೂಡುತ್ತದೆ. ಆದುದರಿಂದ ಮಾರ್ಗಕ್ಕೆ ನಿರ್ಣಯವಿಲ್ಲದಿರುವುದರಿಂದ ಅದರ ಅನುಸ್ಮೃತಿಯು ಕೂಡಲಾರದು ಎಂದರೆ— **'ಸರ್ವೇ ವಾ ಏತೇ ಉತ್ಕ್ರಾಮಂತಿ ತೇಽರ್ಚಿಷಮೇವಾಭಿಸಂಯಂತಿ ತತೋ ವಾಯುಂ'** ಇತ್ಯಾದಿ ಶ್ರುತಿಗಳ ದೆಶೆಯಿಂದ ಜ್ಞಾನಿಗಳಿಗೆ ಒಂದೇ ಮಾರ್ಗವು ಪ್ರಾಪ್ತವಾಗುತ್ತದೆ. **'ಏಷ ಏವ ಬ್ರಹ್ಮಪಥಃ'** ಎಂದವಧಾರಣವು. ಏವಂಚ ವಿಶೇಷವಾಕ್ಯದಿಂದ ಅರ್ಚಿಲೋಕಕ್ಕೇನೇ ಪ್ರಥಮಪ್ರಾಪ್ಯತ್ವವು ನಿರ್ಣೀತವಾಗುವುದರಿಂದ ಮಾರ್ಗನಾನಾದ್ವವು ಇಲ್ಲದಿರುವುದರಿಂದ ಗತಿಸ್ಮೃತಿಯು ಕೂಡುತ್ತದೆ. (೨ನೇ ಅಧಿಕರಣದಲ್ಲಿ ವಾಯುಲೋಕಕ್ಕೆ ದ್ವಿತೀಯಪ್ರಾಪ್ಯತ್ವವೋ, ಅಹರ್ಲೋಕಕ್ಕೋ? ಎಂದ ಸಂದೇಹವು ಬಂದರೆ— ಎರಡಕ್ಕೂ ಎಂದು ಪೂರ್ವಪಕ್ಷವು; ವಾಯುವಿಗೇನೇ ದ್ವಿತೀಯಪ್ರಾಪ್ಯತ್ವವು ಎಂದು ಸಿದ್ಧಾಂತವು. ಅದರಲ್ಲಿ 'ಸುಕ್ರಮಃ' ಎನ್ನುವುದೇ ಪೂರ್ವಪಕ್ಷನ್ಯಾಯವು; 'ವಿಶೇಷಸಂಪ್ರಾಪ್ತಿಃ' ಎನ್ನುವುದೇ ಸಿದ್ಧಾಂತನ್ಯಾಯವು.) (ಅಂದರೆ— ಅಲ್ಲಲ್ಲಿ **'ಸ ವಾಯುಮಾಗಚ್ಛತಿ' 'ಅರ್ಚಿಷೋಽಹಃ'** ಎನ್ನುವ ಎರಡು ಶ್ರುತಿಗಳಲ್ಲಿ ವಾಯುಮಾರ್ಗಕ್ಕೆ ದ್ವಿತೀಯತ್ವವು, ಅಹರ್ಮಾರ್ಗಕ್ಕೆ ದ್ವಿತೀಯತ್ವವು ಇವೆರಡನ್ನು ಹೇಳಿದರಿಂದ ಅಧಿಕಾರಿ ಭೇದದಿಂದ ಪ್ರತ್ಯೇಕವಾಗಿ ಮಾರ್ಗ ಸುಕ್ರಮವು ಕೂಡುತ್ತದೆ, ಎಂದರೆ— ಮಾರ್ಗಭೇದದಿಂದ ಎರಡು ಲೋಕಗಳಿಗೆ ದ್ವಿತೀಯ ಪ್ರಾಪ್ಯತ್ವವಿಲ್ಲ. ಮತ್ತೆ ಒಂದೇ ಮಾರ್ಗವು; ಆ ಮಾರ್ಗದಲ್ಲಿಯೂ ಅರ್ಚಿರ್ಲೋಕದ ಅನಂತರದಲ್ಲಿಯೇ ವಾಯುಲೋಕವನ್ನು ಹೊಂದುತ್ತಾರೆ. ವಾಯುಲೋಕದ ಅನಂತರದಲ್ಲಿ ಅಹರ್ಲೋಕಕ್ಕೆ ಪ್ರಾಪ್ತಿಯು ಕೂಡುವುದರಿಂದ ಶ್ರುತ್ಯಂತರ ವಿರೋಧವಿಲ್ಲ.) (೩ನೇ ಅಧಿಕರಣದಲ್ಲಿ ಸಂವತ್ಸರಾನಂತರದಲ್ಲಿ ವರುಣಲೋಕಕ್ಕೆ ಪ್ರಾಪ್ಯತ್ವವೋ ಅಥವಾ ತಟಿಲ್ಲೋಕಕ್ಕೋ ಎಂದು ಸಂಶಯವು ಬಂದರೆ— ಎರಡು ಲೋಕಗಳಿಗೂ ಪ್ರಾಪ್ಯತ್ವವೆಂದು ಪೂರ್ವಪಕ್ಷವು; ತಟಿಲ್ಲೋಕಕ್ಕೇನೇ ಪ್ರಾಪ್ಯತ್ವವೆಂದು ಸಿದ್ಧಾಂತವು. ಇಲ್ಲಿಯೂ ಸುಕ್ರಮ ವಿಶೇಷಸಂಪ್ರಾಪ್ತಿಗಳೇ ಪೂರ್ವಪಕ್ಷ ಸಿದ್ಧಾಂತನ್ಯಾಯಗಳು. ಅಂದರೆ— **'ಸಂವತ್ಸರಾದ್ವರುಣಲೋಕಂ' 'ಸಂವತ್ಸರಾತ್ತಟಿತಂ'** ಎನ್ನುವ ಎರಡು ಶ್ರುತಿಗಳಲ್ಲಿ ತಟಿರ್ಲೋಕಕ್ಕೂ, ವರುಣಲೋಕಕ್ಕೂ ಸಾಕ್ಷಾತ್ತಾಗಿ ಸಂವತ್ಸರಾನಂತರ್ಯವನ್ನು ಹೇಳಿದರಿಂದ ಸುವತ್ಸರ ಲೋಕದೆಶೆಯಿಂದ ಪ್ರಜಾಪತಿಲೋಕಕ್ಕೆ ಹೋಗಲಿಕ್ಕೆ ಅಧಿಕಾರಿಭೇದದಿಂದ ಮಾರ್ಗಭೇದವು ಕೂಡುವುದರಿಂದ ವಿರೋಧವಿಲ್ಲ; ಎಂದರೆ— ಉದಾಹೃತಶ್ರುತ್ಯಾದಿಗಳು ಮಾರ್ಗೈಕತ್ವ ವಿಷಯಕಗಳು. ತಟಿಲ್ಲೋಕಕ್ಕೇನೇ ಸಂವತ್ಸರಾನಂತರ ಪ್ರಾಪ್ಯತ್ವ ವಿಷಯದಲ್ಲಿ, **'ತಟಿತಾ ದ್ಧ್ಯಧ್ಯತೇ ವರುಣಲೋಕಃ'** ಎನ್ನುವ ವಿಶೇಷ ಶ್ರುತಿಯನ್ನು ಇಟ್ಟುಕೊಳ್ಳಬೇಕು.) (೪ನೇ ಅಧಿಕರಣದಲ್ಲಿ ಅರ್ಚಿರ್ಲೋಕಾನಂತರದಲ್ಲಿ ಪ್ರಾಪ್ಯನಾಗಿ ಹೇಳಲ್ಪಟ್ಟ ವಾಯುವು, ಆತಿವಾಹಿಕನೋ ಮುಖ್ಯನೋ ಎಂದು ಸಂಶಯವು ಬಂದರೆ— ಮುಖ್ಯನೆಂದು ಪೂರ್ವಪಕ್ಷವು; ಆತಿವಾಹಿಕನೆಂದು ಸಿದ್ಧಾಂತವು. ಅಲ್ಲಿಯೂ ಸುಕ್ರಮ ವಿಶೇಷಸಂಪ್ರಾಪ್ತಿರೂಪಗಳೇ ಪೂರ್ವಪಕ್ಷಸಿದ್ಧಾಂತ ನ್ಯಾಯಗಳು. ಅಂದರೆ— **'ಸ ವಾಯುಮಾಗಚ್ಛತಿ' 'ಉತ್ಕ್ರಾಂತೋ ವಿದ್ವಾನ್'** ಎನ್ನುವ ಎರಡು ಶ್ರುತಿಗಳಲ್ಲಿ ಮಾರ್ಗಭೂತನಾದ ವಾಯುವಿಗೆ ಅರ್ಚಿರನಂತರದಲ್ಲಿಯೂ, ವಿದ್ಯುದನಂತರದಲ್ಲಿಯೂ ಪ್ರಾಪ್ಯತ್ವವನ್ನು ಹೇಳಿದರಿಂದ ಪ್ರಥಮದಲ್ಲಿಯೇ ಮುಖ್ಯವಾಯುವನ್ನು ತೆಗೆದುಕೊಂಡಿದ್ದರೆ

ವಾಯುಶಬ್ದ ಮುಖ್ಯಾರ್ಥವಾದ ಪ್ರಥಮ ಪ್ರಾಪ್ಯತ್ವರೂಪವಾದ ಸುಕ್ರಮವು ಕೂಡುತ್ತದೆ; ಎಂದರೆ— ವಿಶೇಷಶ್ರುತಿಯಿಂದ ಜ್ಞಾನಿಗಳಿಗೆ ಒಂದು ಮಾರ್ಗವೇ ಪ್ರಾಪ್ತವಾಗುವುದರಿಂದ ಅಂತಿಮಪ್ರಾಪ್ಯನಾದ ವಾಯುವಿಗೆ ದಿನಸ್ಪತಿತ್ವಾದಿ ವಿಶೇಷಣದಿಂದ ಮುಖ್ಯವಾಯುತ್ವವೇ ತಿಳಿದು ಬರುವುದರಿಂದ ಪರಿಶೇಷಾತ್ ದ್ವಿತೀಯಪ್ರಾಪ್ಯನಾದ ವಾಯುವು ಆತಿವಾಹಿಕನೇ.)(೫ನೇ ಅಧಿಕರಣದಲ್ಲಿ ಮುಖ್ಯವಾಯುವಿನಮೇಲೆ ಮತ್ತೊಬ್ಬನು ಪ್ರಾಪ್ಯನು ಇದ್ದಾನೋ ಇಲ್ಲವೋ ಎಂದು ಸಂದೇಹವು ಬಂದರೆ— ಇದ್ದಾನೆಂದು ಪೂರ್ವಪಕ್ಷವು; ಇಲ್ಲವೆಂದು ಸಿದ್ಧಾಂತವು. ಅವಿಕ್ರಮಃ=ಅಧಮನಿಗೂ ಪ್ರಾಪ್ಯತ್ವವು ಎಂದು ಪೂರ್ವಪಕ್ಷಯುಕ್ತಿಯು.) ಉರುತ್ವತ್ವಂ=ಉತ್ತಮತ್ವವು ಎನ್ನುವುದು ಸಿದ್ಧಾಂತಯುಕ್ತಿಯು. (ಅಂದರೆ— '**ಸೋಮಾದಗ್ನಿಂ ಅಗ್ನೇರಿಂದ್ರಂ**' ಎಂದು ಸೋಮನ ದೆಶೆಯಿಂದ ಅವರನಾದ ಅಗ್ನಿಗೆ ಪ್ರಾಪ್ಯತ್ವವಿದ್ದಂತೆ ಪ್ರಧಾನವಾಯುವಿನ ದೆಶೆಯಿಂದ ಅಧಮನಿಗೂ ಪ್ರಾಪ್ಯತ್ವವು ಕೂಡುವುದರಿಂದ ವಿಕ್ರಮದೆಶೆಯಿಂದ ಮುಖ್ಯವಾಯುವಿನ ದೆಶೆಯಿಂದಲೂ ಮೇಲೆ ಮತ್ತೊಬ್ಬನಿಗೆ ಪ್ರಾಪ್ಯತ್ವವು ಕೂಡುವುದು. ಆದುದರಿಂದ ಆ ಮುಖ್ಯವಾಯುವಿಗೆ ಅತಿಶಯದಿಂದ ಪ್ರಾಧಾನ್ಯವಿಲ್ಲ. ಎಂದರೆ— ವಾಯುವಿಗೇನೇ ಉತ್ತಮತ್ವವಿದ್ದುದರಿಂದ ಆತನಿಗೇನೇ ಬ್ರಹ್ಮನನ್ನು ಹೊಂದಿಸಿ ಕೊಡತಕ್ಕ ಶಕ್ತಿಯಿರುವುದು. '**ವಾಯುರೇವ ಬ್ರಹ್ಮ ಗಮಯತಿ ತಸ್ಯ ಹ್ಯೇಷಾ ಶಕ್ತಿಃ ನ ಹ್ಯನ್ಯೋ ಬ್ರಹ್ಮಗಮಯತಿ**' ಇತ್ಯಾದಿ ಶ್ರುತಿಗಳದೆಶೆಯಿಂದ ಆತನಿಗೇನೇ ಪ್ರಾಧಾನ್ಯವು ಯುಕ್ತವು.)(೬ನೇ ಅಧಿಕರಣದಲ್ಲಿ '**ಸ ಏನಾನ್ ಬ್ರಹ್ಮಗಮಯತಿ**' ಎನ್ನುವ ಶ್ರುತ್ಯುಕ್ತವಾದ ಬ್ರಹ್ಮಶಬ್ದವು ಶ್ರುತವಾದುದರಿಂದ ಮುಖ್ಯಬ್ರಹ್ಮನೋ, ಅಮುಖ್ಯಬ್ರಹ್ಮನೋ ಅಥವಾ ಇಬ್ಬರೂ ವಿವಕ್ಷಿತರೋ ಎನ್ನುವಲ್ಲಿಯೂ ಒಬ್ಬನಿಗೆ ಉಭಯ ಪ್ರಾಪ್ಯತ್ವವು ಕೂಡುವುದರಿಂದ ಒಬ್ಬನು ಪರಬ್ರಹ್ಮನನ್ನು, ಮತ್ತೊಬ್ಬನು ಕಾರ್ಯಬ್ರಹ್ಮನನ್ನು ಎಂದರ್ಥವಾಗುವುದು. ಅದರಲ್ಲಿ ಯಾವುದಾದರೊಂದು ಕ್ರಮದಿಂದ ಉಭಯಪ್ರಾಪ್ತಿಯೋ, ಅಥವಾ ಕ್ರಮವಿಲ್ಲದೇನೇ ಸ್ವೇಚ್ಛಾನುಸಾರದಿಂದಲೋ, ಕ್ರಮಪಕ್ಷದಲ್ಲಿಯೂ ಯಾವುದಾದರೊಂದು ಯೋಗ್ಯತಾರೂಪವಾದ ಕ್ರಮವೋ, ಬೇರೆಯೋ ಎಂದು ಸಂದೇಹವು ಬಂದರೆ— ಕಾರ್ಯಬ್ರಹ್ಮನನ್ನೇ, ಪರಬ್ರಹ್ಮನನ್ನೇ ಕ್ರಮವನ್ನು ಬಿಟ್ಟು ತನ್ನ ಇಚ್ಛಾನುಸಾರವಾಗಿ ಕಾರ್ಯಬ್ರಹ್ಮ, ಪರಬ್ರಹ್ಮ ಇಬ್ಬರ ಪ್ರಾಪ್ತಿಯೂ ಆಗುತ್ತದೆ. ಕ್ರಮಪಕ್ಷದಲ್ಲಿಯೂ ಯೋಗ್ಯತಾತಿರಿಕ್ತವಾದುದೇ ಕ್ರಮವು ಎಂದು ಪೂರ್ವಪಕ್ಷವು. ಎರಡೂ ಶ್ರುತ್ಯುಕ್ತವಾದುದು, ಯಾವುದಾದರೊಂದು ಕ್ರಮದಿಂದಲೇ ಉಭಯಪ್ರಾಪ್ತಿಯು ಅಲ್ಲಿಯೂ ಯೋಗ್ಯತಾರೂಪವಾದುದೇ ಕ್ರಮವು ಎಂದು ಸಿದ್ಧಾಂತವು. ಅದರಲ್ಲಿ) ಸಾಂತಾನಿಕಪ್ರಾಪ್ತಿಃ=ಸಂತತ್ವದ ನಿಯಮವು, ಎಂದು ಪೂರ್ವಪಕ್ಷಯುಕ್ತಿಯು, ಆಪ್ತಿಃ=ಪ್ರಾಪ್ತಿಯು ಎನ್ನುವುದು ಸಿದ್ಧಾಂತನ್ಯಾಯವು. (ಅಂದರೆ— ಚತುರ್ಮುಖಮುಕ್ತಿಪರ್ಯಂತವಾಗಿ ಬಂಧವು ಯಾವಾಗಲೂ ಇರತಕ್ಕದು ಆದುದರಿಂದ ಭಗವತ್ಪ್ರಾಪ್ತಿಯಾಗುವುದಿಲ್ಲ. ಚತುರ್ಮುಖಪ್ರಾಪ್ತಿಯೇ, ಎಂದರೆ— '**ಯಾಂತಿ ದೇವಂ ಪರಂ ಕೇಚಿತ್ ಪೂರ್ವಂಕೇಚಿಲ್ಲಯೇ ವಿಭುಂ,ಯೋಗ್ಯತಾ ತಾರತಮ್ಯೇನ ವಿಶೇಷೋಽಯಮಪೇಕ್ಷ್ಯತೇ**' ಎನ್ನುವ ಶ್ರುತಿಯದೆಶೆಯಿಂದ ಉಭಯಪ್ರಾಪ್ತಿಯೂ ಪ್ರಾಪ್ತವಾಗಿದೆ. ಪರಬ್ರಹ್ಮನನ್ನೆ ಎನ್ನುವ ಪೂರ್ವಪಕ್ಷದಲ್ಲಿ) ಪ್ರಾಪ್ತಿಃ=ಪ್ರಾಪ್ತಿಯು, (ಎನ್ನುವುದು ಪೂರ್ವಪಕ್ಷನ್ಯಾಯವು; ಆಪ್ತಿಃ ಎನ್ನುವುದು.) ಸಿದ್ಧಾಂತನ್ಯಾಯವು. (ಅಂದರೆ— ಪರಬ್ರಹ್ಮನಿಗೇನೇ ಬ್ರಹ್ಮಶಬ್ದಮುಖ್ಯಾರ್ಥತ್ವವಿದ್ದುದರಿಂದ, ಪ್ರಥಮಪ್ರಾಪ್ತವಾಗಿರುವುದರಿಂದ, ಬಾಧಕವಿಲ್ಲದಿರುವುದರಿಂದ, ಆ ಪರಬ್ರಹ್ಮನಿಗೇ ಪ್ರಾಪ್ತಿನಿಯಮವು. ಎಂದರೆ— 'ಯಾಂತಿ ದೇವಂ ಕೇಚಿತ್' ಎನ್ನುವ ಪ್ರಮಾಣಪ್ರಾಪ್ತವಾಗಿದೆ. **(3) ಕ್ರಮವಿಲ್ಲದೆತನ್ನ ಇಚ್ಛಾನುಸಾರದಿಂದಲೇ ಉಭಯಪ್ರಾಪ್ತಿಯು ಎನ್ನುವ ಮೂರನೇ ಪಕ್ಷದಲ್ಲಿ)**

ಅಭೀಪ್ಸತಾಂಚ=ಅಭೀಪ್ಸತ್ವವು ಎನ್ನುವ ಪೂರ್ವಪಕ್ಷನ್ಯಾಯವು; 'ಕ್ರಮಾನುರಾಗಃ' ಎನ್ನುವುದು ಸಿದ್ಧಾಂತನ್ಯಾಯವು. ಅಂದರೆ— ಪರಪ್ರಾಪ್ತಿಯು ಯಾರಿಗೆ ಅಭೀಪ್ಸವೋ ಆತನಿಗೆ ಆತನ ಪ್ರಾಪ್ತಿಯು. ಯಾರಿಗೆ ಚತುರ್ಮುಖ ಪ್ರಾಪ್ತಿಯು ಅಭೀಪ್ಸವೋ ಆತನಿಗೆ ಚತುರ್ಮುಖ ಪ್ರಾಪ್ತಿಯು. ಎನ್ನುವ ನಿಯಮವಿಲ್ಲ. '**ಕ್ರಮಾನುರಾಗೀ ಭಗವಾನ್ ಕ್ರಮಾತ್ಪುಂಭಿರ ವಾಪ್ಯತೇ ಅತಃ ಕ್ರಮಾತ್ಸಮೃದ್ಧೇ ತು**' ಇತ್ಯಾದಿ ಶ್ರೀಹರಿಗೆ ಕ್ರಮಾನುರಾಗಿತ್ವಶ್ರುತಿಯಿಂದ (೪) ಕ್ರಮಪಕ್ಷದಲ್ಲಿಯೂ ಯೋಗ್ಯತಾತಿರಿಕ್ತವಾದ ಸೌಕರ್ಯರೂಪವಾದುದೇ ಕ್ರಮವು ಎನ್ನುವ ಪೂರ್ವಪಕ್ಷದಲ್ಲಿ, ಸೌಕರ್ಯಂ = ಸುಕರತ್ವವು, ಇತಿ=ಎನ್ನುವುದು, ಅನ್ಯಮತಸ್ಯ ತರ್ಕಾಃ= ಪೂರ್ವಪಕ್ಷನ್ಯಾಯಗಳು. ಕಥಿತಾನುವೃತ್ತಿಃ=ಹೇಳಲ್ಪಟ್ಟ ಅನುಸರಣವು ಇವುಗಳು, ಸಿದ್ಧಾಂತ ನಿರ್ಣೀತಿಕರಾಃ=ಸಿದ್ಧಾಂತನಿರ್ಣಾಯಕಯುಕ್ತಿಗಳು. ಅಂದರೆ— ಬಹುಧಾ ಶ್ರುತಿಗಳು ಇದ್ದು ದರಿಂದ ಸೌಕರ್ಯಾನುಸಾರವಾಗಿ ಚತುರ್ಮುಖನ ಅಥವಾ ಪರಬ್ರಹ್ಮನ ಪ್ರಾಪ್ತಿಯು ಎಂದರೆ— ಶ್ರುತ್ಯುಕ್ತವಾದ ಅನುಸರಣವೇ ನ್ಯಾಯವಾದುದು. '**ಸಪ್ರತೀಕಾಶ್ಚತುರ್ಮುಖಮಪ್ರ ತೀಕಾಃ ಪರಮುಹ್ಯತೇ ಗಚ್ಛಂತ್ಯಾಗಚ್ಛಂತಿ ಚ । ಚತುರ್ಮುಖಾತ್ಪರಮಂ ಪರಾ ಚ್ಚತುರ್ಮುಖಂ ಯಾವದ್ವಿಲಯಮಥ ಸಹ ಚತುರ್ಮುಖೇನ ವಿಮುಚ್ಯಂತೇ ಆನಂದಿ ನೋ ಭವಂತಿ**' ಎಂದು ಶ್ರುತಿಯು. ॥ ೧ ॥ ೨ ॥

'**ಅಪ್ರತೀಕಾಲಂಬನಾನ್ನಯತೀತಿ ಬಾದರಾಯಣ ಉಭಯಥಾದೋಷಾತ್ತ ತ್ಕ್ರತುಶ್ಚ**' ವಿಮುಕ್ತಗಮ್ಯರನ್ನು ಪ್ರತಿಪಾದಿಸುವುದಕ್ಕಾಗಿ ಈ ಸೂತ್ರವು. ಅದು ಭಾಷ್ಯದಲ್ಲಿ ಸ್ಪಷ್ಟವಾಗದಿರುವುದರಿಂದ ಸ್ಪಷ್ಟೀಕರಿಸುತ್ತಾ ಪ್ರತೀತ ಶಬ್ದಾರ್ಥವನ್ನು ಹೇಳುತ್ತಾರೆ—

**ಮೂ ॥ (ಸಿದ್ಧಾಂತನಿರ್ಣೀತಕರಾಃ) ಪ್ರತೀಕಕಂ**
**ದೇಹಾದಿಕಂ ತದ್ಗತಮೇವ ಯೇ ನರಾಃ ॥ ೨ ॥**
**ಉಪಾಸತೇ ತೇ ಪುರತಃ ಸಮಾಪ್ನುಯುಃ**
**ಬ್ರಹ್ಮಾಣಮಸ್ಮಾನ್ಮತಿಮಾಪ್ಯ ವಿಷ್ಣುಂ ॥**
**ಪ್ರಾಪ್ಸ್ಯಂತ್ಯತೋಽನ್ಯೇಪಿ ತಮಾಪ್ಯ ತಸ್ಮಾ-**
**ದ್ಧರಿಂಗತಾ ಮುಕ್ತಿಭಾಜಃ ಪರಾಂತೇ ॥ ೩ ॥**

**ಅ ॥** ಪ್ರತೀಕಂ = ಪ್ರತೀಕವು, ದೇಹಾದಿಕಂ = ಶರೀರ-ಮನಸ್ಸು ಮೊದಲಾದುವು, (ಯದ್ಯಪಿ ಸೂತ್ರದಲ್ಲಿ ಅಪ್ರತೀಕಾಲಂಬನರಿಗೆ ಗಮ್ಯವನ್ನು ಹೇಳಿದ್ದಾರೆ. ಪ್ರತೀಕಾಲಂಬನರಿ ಗಾದರೂ ಪರಿಶೇಷಸಿದ್ಧವಾಗಿದೆ. ಆದಾಗ್ಯೂ ಅಸ್ಪಷ್ಟವನ್ನು ಸ್ಪಷ್ಟೀಕರಿಸುವುದಕ್ಕಾಗಿ ಪ್ರವೃತ್ತ ವಾಗಿರುವುದರಿಂದಲೂ ಅಭಾವಕ್ಕೆ ಭಾವಪೂರ್ವಕತ್ವವಿದ್ದುದರಿಂದಲೂ ಪರಿಶೇಷಸಿದ್ಧವೇ ಆದ ಅರ್ಥವನ್ನು ಆದಿಯಲ್ಲಿ ಹೇಳುತ್ತಾರೆ.) ತದ್ಗತಮೇವ=ಪ್ರತೀಕರಲ್ಲಿಯೇ ಇರತಕ್ಕ ವಿಷ್ಣುವನ್ನು, ಯೇ ನರಾಃ=ಯಾವ ಮನುಷ್ಯರು, ಉಪಾಸತೇ=ಉಪಾಸನ ಮಾಡುತ್ತಾರೋ, ತೇ=ಆ ಪ್ರತೀ ಕಾಲಂಬನವರು, ಪುರತಃ=ಪ್ರಲಯಕಾಲದೆಶೆಯಿಂದ ಮೊದಲು, ಬ್ರಹ್ಮಾಣಂ=ಚತುರ್ಮುಖ ಬ್ರಹ್ಮನನ್ನೂ, ಸಮಾಪ್ನುಯುಃ=ಹೊಂದುವರು. ಅಸ್ಮಾತ್=ಬ್ರಹ್ಮನ ದೆಸೆಯಿಂದ, ಮತಿಂ= ಭಗವಜ್ಞಾನ ವಿಶೇಷವನ್ನು, ಆಪ್ಯ=ಹೊಂದಿ, ವಿಷ್ಣುಂ=ಶ್ರೀ ಹರಿಯನ್ನು, ಪ್ರಾಪ್ಸ್ಯಂತಿ=ಪ್ರಲಯ ಕಾಲದಲ್ಲಿ ಹೊಂದುವರು. (ಈಗ ಸೂತ್ರದಲ್ಲಿ ಹೇಳಲ್ಪಟ್ಟ ಅಪ್ರತೀತಕಾಲಂಬನರ ಗತಿಯನ್ನು

ವಿಸ್ತರಿಸುತ್ತಾರೆ.) ಅತಃ=ಪ್ರತೀಕಾಲಂಬನರ ದೆಶೆಯಿಂದ, ಅನ್ಯೇ=ಇತರರಾದ ವ್ಯಾಪ್ತ್ಯುಪಾಸಕರಾದ ಅಪ್ರತೀಕಾಲಂಬನರು, ತಂ=ಆ ವಿಷ್ಣುವನ್ನು, ಆಪ್ಯಾಪಿ=ಪ್ರಥಮದಲ್ಲಿ ಹೊಂದಿದಾಗ್ಯೂ ಪರಾಂತಕಾಲೇ=ಪ್ರಲಯಕಾಲದಲ್ಲಿ, ತಸ್ಮಾತ್=ಆ ವಿಷ್ಣುವಿನ ದೆಸೆಯಿಂದ, ತಂ=ಆ ಬ್ರಹ್ಮನನ್ನು, ಆಪ್ಯ=ಹೊಂದಿ, ಹರಿಂ ಗತಾಃ=ಶ್ರೀ ಹರಿಯನ್ನು ಹೊಂದಿದವರಾಗಿ, ಮುಕ್ತಿಭಾಜಃ=ಮೋಕ್ಷವನ್ನು ಹೊಂದಿದವರು, ಭವಂತಿ=ಆಗುತ್ತಾರೆ.

ತಾ || ಸ. ರ. ವಿ.— (1) ಅರ್ಚಿರಾದಿ ಮಾರ್ಗದಿಂದ, ಹೋದವರಿಗೆ '**ಸ ಏನಾನ್ ಬ್ರಹ್ಮ ಗಮಯತಿ**' ಎಂದು ಬ್ರಹ್ಮಪ್ರಾಪ್ತಿಯು ಶ್ರುತವಾಗುತದೆ. ಇಲ್ಲಿ ಗಮ್ಯನಾಗಿ ಪ್ರತೀತನಾದ ಬ್ರಹ್ಮನು ಚತುರ್ಮುಖಾಖ್ಯ ಕಾರ್ಯಬ್ರಹ್ಮನು ಎಂದು ಬಾದರಿಯ ಮತವು. ಪರಬ್ರಹ್ಮನೇ ಎಂದು ಜೈಮಿನಿಯ ಮತವು. ಈ ಎರಡು ಮತಗಳನ್ನು ಸಯುಕ್ತಿಕವಾಗಿ ಉಪನ್ಯಾಸ ಮಾಡಿ, ವೇದವ್ಯಾಸರು ತನ್ನ ಮತವನ್ನು ಉಪನ್ಯಾಸ ಮಾಡಿರುವರು. (2) ದೇಹಾದ್ಯಧಿಷ್ಠಾನದಲ್ಲಿರತಕ್ಕ ವಿಷ್ಣುವನ್ನು ನೋಡುವವರು ಪ್ರತೀಕಾಲಂಬನರು. ಸರ್ವತ್ರ ವ್ಯಾಪ್ತನಾದ ವಿಷ್ಣುವನ್ನು ನೋಡುವವರು ಅಪ್ರತೀಕಾಲಂಬನರು. ಅದರಲ್ಲಿ ಪ್ರತೀಕಾಲಂಬನರು ಚತುರ್ಮುಖನನ್ನೇ ಹೊಂದಿ ಚತುರ್ಮುಖನ ಉಪದೇಶದಿಂದ ಜ್ಞಾನವನ್ನು ಪ್ರಕಾಶಿತವನ್ನಾಗಿ ಮಾಡುತ್ತಾ ಇರುತ್ತಾರೆ. ಪ್ರಲಯಕಾಲದಲ್ಲಿ ವಿಷ್ಣುವನ್ನು ಹೊಂದುತ್ತಾರೆ. ಅಪ್ರತೀಕಾಲಂಬನರೂ ಚತುರ್ಮುಖನನ್ನು ಹೊಂದಿ ಮೇಲೆಯೇ ವಿಷ್ಣುವನ್ನು ಹೊಂದುತ್ತಾರೆ. ಇವರಿಬ್ಬರೂ ನಿಶ್ಶೇಷವಾಗಿ ಬಂಧ ಧ್ವಂಸವನ್ನು ಪ್ರಲಯಕಾಲದಲ್ಲಿಯೇ ಹೊಂದುತ್ತಾರೆ. ಅಂತೂ ಬಾದರಿ ಮತಕ್ಕೆ ಅತ್ಯಂತ ಬಾಧವಿಲ್ಲ. ಜೈಮಿನಿ ಮತಕ್ಕೂ ಬಾಧಇಲ್ಲ || ೨ || ೩ ||

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತೇ**
**ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ**

**ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಲ್ಪಟ್ಟ**
**ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ ನಾಲ್ಕನೇ ಅಧ್ಯಾಯದಲ್ಲಿ**
**ಮೂರನೇ ಪಾದವು ಸಮಾಪ್ತವಾಯಿತು.**

ಇತಿ ಶ್ರೀಮತ್ಪೂರ್ಣಪ್ರಮತಿ ಭಗವತ್ಪಾದಸುಕೃತೇ
ರನುವ್ಯಾಖ್ಯಾನಸ್ಯ ಪ್ರಗಣಜಯತೀರ್ಥಾಖ್ಯಯತಿನಾ ||
ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ |
ಚತುರ್ಥಾಧ್ಯಾಯೇಽರ್ಚಿಃ ಪ್ರಭೃತಿಚರಣಃ ಪರ್ಯವಸಿತಃ ||
ಕಲ್ಯಾಣಗುಣಪೂರ್ಣಾಯ ದೋಷದೂರಾಯ ವಿಷ್ಣವೇ |
ನಮಃ ಶ್ರೀ ಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ |||

|| ಶ್ರೀ ಕೃಷ್ಣಾರ್ಪಣಮಸ್ತು ||

|| ಶ್ರೀಃ ||

# ನಾಲ್ಕನೇ ಪಾದವು.

**ಓಂ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ ಲಕ್ಷ್ಮೀಹಯಗ್ರೀವಾಯ ನಮಃ || ಓಂ ||**

## ಸಂಪದ್ಯಾಧಿಕರಣವು

**'ಓಂ ಸಂಪದ್ಯಾವಿಹಾಯ ಸ್ವೇ ನಶಬ್ದಾತ್ ಓಂ' || ಸೂ. ೧ ||**

ಜ್ಞಾನಿಯು ಪರಬ್ರಹ್ಮನನ್ನು ಹೊಂದಿ ಪರಬ್ರಹ್ಮನನ್ನೂ ಅತಿಕ್ರಮಿಸದೆ ತನ್ನ ರೂಪದಿಂದಲೇ ಇರತಕ್ಕವನಾಗಿ ಭೋಗಗಳನ್ನು ಅನುಭವಿಸುತ್ತಾನೆ. **'ಇಮಾಂ ಘೋರಾಮಶಿವಾಂ ನದೀಂ ತೀರ್ತ್ವಾ ಏತಂ ಸೇತುಮಾಪ್ಯೈತೇನ ಸೇತುನಾ ಮೋದತೇ'** ಇತ್ಯಾದಿ ಶ್ರುತಿಗಳ ದೆಶೆಯಿಂದ ||೧|| ಅಧಿ ೧ ||

**ಸಂಪದ್ಯಾಧಿಕರಣವು ಸಮಾಪ್ತವಾಯಿತು.**

## ಮುಕ್ತಾಧಿಕರಣವು

**'ಓಂ ಮುಕ್ತಃ ಪ್ರತಿಜ್ಞಾನಾತ್ ಓಂ' || ಸೂ. ೨ ||**

**'ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್'** ಎನ್ನುವ ಶ್ರುತಿಯಲ್ಲಿ ಮುಕ್ತನು ಹೇಳಲ್ಪಡುತ್ತಾನೆ. ಸಂಸಾರಿಯಲ್ಲ. **'ಅಥ ಯದ್ಯೈನಂ ಮುಕ್ತೋಽನುಪ್ರವಿಶತಿ ಮೋದತೇ ಪ್ರಮೋದತೇ'** ಎನ್ನುವ ಶ್ರುತ್ಯಂತರದಲ್ಲಿ ಮುಕ್ತನಿಗೆ ಇಂತಹ ಭೋಗವನ್ನು ಪ್ರತಿಜ್ಞಾ ಮಾಡಿರುವರು || ೨ || ಅಧಿ. ೨ ||

**ಮುಕ್ತಾಧಿಕರಣವು ಸಮಾಪ್ತವಾಯಿತು.**

## ಆತ್ಮಾಧಿಕರಣವು

**'ಓಂ ಆತ್ಮಾ ಪ್ರಕರಣಾತ್ ಓಂ' || ಸೂ ೩ ||**

**'ಪರಂ ಜ್ಯೋತಿರುಪಸಂಪದ್ಯ'** ಎಂದು ಶ್ರುತವಾದ ಮುಕ್ತಪ್ರಾಪ್ಯವಾದ ಜ್ಯೋತಿಸ್ಸು ಪರಮಾತ್ಮನೇ ಸೂರ್ಯನಲ್ಲ. **'ಯ ಆತ್ಮಾ ಅಪಹತ ಪಾಪ್ಮಾ'** ಎಂದು ಪರಮಾತ್ಮ ಪ್ರಕರಣವಾಗಿರುವುದರಿಂದ, || ೩ || ಅಧಿ. ೩ ||

**ಆತ್ಮಾಧಿಕರಣವು ಸಮಾಪ್ತವಾಯಿತು.**

# ಅವಿಭಾಗಾಧಿಕರಣವು

**'ಓಂ ಅವಿಭಾಗೇನ ದೃಷ್ಟತ್ವಾತ್ ಓಂ'** ॥ ಸೂ. ೪ ॥

ಸಾಯುಜ್ಯ ಮುಕ್ತಿಯುಳ್ಳವನು ಶ್ರೀಹರಿಯಿಂದ ಭುಕ್ತಗಳಾದ ಭೋಗಗಳನ್ನೇ ಸ್ವಯೋಗ್ಯತಾನುಸಾರದಿಂದ ಅನುಭವಿಸುತ್ತಾನೆ. ಶ್ರೀಹರಿಯಿಂದ ಅಭುಕ್ತಗಳಾದ ಭೋಗಗಳನ್ನು ಅನುಭವಿಸುವುದಿಲ್ಲ. **'ಯಾನೇವಾಹಂ ಶೃಣೋಮಿ ಯಾನ್ ಪಶ್ಯಾಮಿ'** ಇತ್ಯಾದಿ ಶ್ರುತಿಗಳಲ್ಲಿ ಹಾಗೆ ದೃಷ್ಟವಾಗಿದೆ. ॥ ೪ ॥ ಅಧಿ ೪ ॥

**ಅವಿಭಾಗಾಧಿಕರಣವು ಸಮಾಪ್ತವಾಯಿತು.**

---

# ಬ್ರಾಹ್ಮಾಧಿಕರಣವು

**'ಓಂ ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ಓಂ'** ॥ ಸೂ.೫ ॥

ಮುಕ್ತರಿಗೆ ತನಗೆ ದೇಹವಿಲ್ಲದಿದ್ದರೂ ಈಶನನ್ನು ಪ್ರವೇಶಮಾಡಿದವನಿಗೆ ಬ್ರಹ್ಮಸಂಬಂಧಿಯಾದ ಶರೀರದಿಂದ ಪಿಶಾಚಿಯಂತೆ ಭೋಗವಿದೆ ಎಂದು ಜೈಮಿನಿಯು ತಿಳಿಯುತ್ತಾನೆ. 'ಬ್ರಹ್ಮಣಾ ಪಶ್ಯತಿ ಬ್ರಹ್ಮಣಾ ಶೃಣೋತಿ' ಎನ್ನುವ ಶ್ರುತಿಯಲ್ಲಿ ಹಾಗೆ ಉಪನ್ಯಾಸಮಾಡಿದುದರಿಂದ **'ಆದತ್ತೇ ಹರಿಹಸ್ತೇನ ಹರಿದೃಷ್ಟ್ಯೈವ ಪಶ್ಯತಿ'** ಇತ್ಯಾದಿ ಸ್ಮೃತಿಯಿಂದಲೂ **'ಗಚ್ಛಾಮಿ ವಿಷ್ಣುಪಾದಾಭ್ಯಾಂ ವಿಷ್ಣುದೃಷ್ಟ್ಯಾ ಚ ದರ್ಶನಂ'** ಇತ್ಯಾದಿ **ಪೂರ್ವಸ್ಮರಣಾನ್ಮುಕ್ತಸ್ಯೈತದ್ಭವಿಷ್ಯತಿ'** ಇತ್ಯಾದಿ ಸ್ಮೃತ್ಯುಕ್ತವಾದ ಯುಕ್ತಿಯಿಂದಲೂ.

**'ಓಂ ಚಿತಿಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ಓಂ'** ॥ ಸೂ. ೬ ॥

ಚಿನ್ಮಾತ್ರರೂಪವಾದ ದೇಹದಿಂದ ಮುಕ್ತನು ಭೋಗಗಳನ್ನು ಅನುಭವಿಸುತ್ತಾನೆ ಚಿನ್ಮಾತ್ರದೇಹಕ್ಕೆ ಮುಕ್ತಸ್ವರೂಪತ್ವವಿದ್ದುದರಿಂದ ಎಂದು ಔಡುಲೋಮ್ಯಾಚಾರ್ಯರು ತಿಳಿಯುತ್ತಾರೆ.

**'ಓಂ ಏವಮಪ್ಯುಪನ್ಯಾಸಾತ್ಪೂರ್ವಭಾವಾದವಿರೋಧಂ ಬಾದರಾಯಣಃ ಓಂ'** ॥ ಸೂ. ೭ ॥

ಚಿನ್ಮಾತ್ರದೇಹದಿಂದ ಭೋಗಗಳನ್ನು ಅನುಭವಿಸುತ್ತಾರೆ ಎಂಬುವ ರೀತಿಯಿಂದಲೂ **'ಸ ವಾ ಏಷ ಏತಸ್ಮಾನ್ಮರ್ತ್ಯಾದ್ವಿಮುಕ್ತಶ್ಚಿನ್ಮಾತ್ರೋ ಭವತಿ'** ಇತ್ಯಾದಿ ಶ್ರುತಿಯಲ್ಲಿ ಉಪನ್ಯಾಸ ಮಾಡಿದರಿಂದ ಜೈಮಿನ್ಯುಕ್ತವಾದ ದೇಹಾಭಾವವೂ ಇದ್ದುದರಿಂದ ಅಂದರೆ ಎರಡಕ್ಕೂ ಪ್ರಾಮಾಣಿಕತ್ವವಿದ್ದುದರಿಂದ ಜೈಮಿನಿ-ಔಡುಲೋಮಿ ಮತಗಳಿಗೆ ವಿರೋಧಾಭಾವವನ್ನು ಬಾದರಾಯಣಾಚಾರ್ಯರು ತಿಳಿಯುತ್ತಾರೆ. ॥ ೫ ॥ ೬ ॥ ೭ ॥ ಅಧಿ. ೭ ॥

**ಬ್ರಾಹ್ಮಾಧಿಕರಣವು ಸಮಾಪ್ತವಾಯಿತು.**

---

## ಸಂಕಲ್ಪಾಧಿಕರಣವು.

**'ಓಂ ಸಂಕಲ್ಪಾದೇವ ಚ ತಚ್ಛ್ರುತೇಃ ಓಂ'** ಸೂ. ॥ ೮ ॥

ಮುಕ್ತರಿಗೆ ಸಂಕಲ್ಪದಿಂದಲೇ (ಅಪ್ರತಿಹತವಾದ ತಮ್ಮ ಇಚ್ಛೆಯಿಂದಲೇ,) ಭೋಗಸಿದ್ಧಿ ಯಾಗುತ್ತದೆ. **'ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ'** ಎಂದು ಶ್ರುತವಾಗಿರುವುದ ರಿಂದ. ॥ ೮ ॥ ಅಧಿ. ೬ ॥

**ಸಂಕಲ್ಪಾಧಿಕರಣವು ಸಮಾಪ್ತವಾಯಿತು.**

---

## ಅನನ್ಯಾಧಿಪತ್ಯಧಿಕರಣವು

**'ಓಂ ಅತ ಏವ ಚಾನನ್ಯಾಧಿಪತಿಃ ಓಂ'** ಸೂ. ॥ ೯ ॥ ಅಧಿ. ೭ ॥

ಸತ್ಯಸಂಕಲ್ಪನಾದುದರಿಂದಲೇ ಮುಕ್ತನು ಕ್ಲೃಪ್ತರಾದ ಸ್ವೋತ್ತಮರಿಂದ ಇತರರಾದ ಅಧಿಪತಿಗಳಿಂದ ರಹಿತನು. ॥ ೯ ॥ ಅಧಿ. ೭ ॥

**ಅನನ್ಯಾಧಿಪತ್ಯಧಿಕರಣವು ಸಮಾಪ್ತವಾಯಿತು.**

---

## ಅಭಾವಾಧಿಕರಣವು.

**'ಓಂ ಅಭಾವಂ ಬಾದರಿರಾಹ ಹ್ಯೇವಂ ಓಂ'** ಸೂ. ॥ ೧೦ ॥

ಚಿನ್ಮಾತ್ರದೇಹದಿಂದ ಇತರವಾದ ಪ್ರಾಕೃತದೇಹದ ಅಭಾವವನ್ನು ಮುಕ್ತರಿಗೆ ಬಾದರಿಯು ತಿಳಿದುಕೊಳ್ಳುತ್ತಾನೆ. **'ಅಶರೀರೋ ವಾ ವ ತದಾ ಭವತಿ'** ಎನ್ನುವ ಶ್ರುತಿಯು ಹಾಗೆ ಹೇಳುತ್ತದೆ.

**'ಓಂ ಭಾವಂ ಜೈಮಿನಿರ್ವಿಕಲ್ಪಾಮ್ನಾನಾತ್ ಓಂ'** ಸೂ. ॥ ೧೧ ॥

ಕೆಲವು ವೇಳೆ ಭೋಗಕ್ಕಾಗಿ ಮುಕ್ತರಿಗೆ ಚಿನ್ಮಾತ್ರ ದೇಹದಿಂದ ವ್ಯತಿರಿಕ್ತವಾದ ಪ್ರಾಕೃತ ದೇಹಸದ್ಭಾವವನ್ನು ಜೈಮಿನ್ಯಾಚಾರ್ಯರು ತಿಳಿಯುತ್ತಾರೆ. **'ಚಿತಾ ವಾ ಅಚಿತಾ ವಾ'** ಇತ್ಯಾದಿ ಶ್ರುತಿಗಳಲ್ಲಿ ವಿಕಲ್ಪವನ್ನು ಹೇಳಿದರಿಂದ.

**'ಓಂ ದ್ವಾದಶಾಹವದುಭಯವಿಧಂ ಬಾದರಾಯಣೋಽತಃ ಓಂ'** ॥ ಸೂ. ೧೨ ॥

ದ್ವಾದಶಾಹಾಖ್ಯ ಯಾಗಕ್ಕೆ ಯಜಮಾನನ ಇಚ್ಛೆಯಿಂದ ಒಬ್ಬನೇ ಯಜಮಾನನಾಗಿದ್ದರೆ ಕ್ರತುತ್ವವೂ ಅನೇಕ ಯಜಮಾನರಾಗಿದ್ದರೆ ಸತ್ರತ್ವವೂ ಹೇಗೆ ವಿರುದ್ಧವಲ್ಲವೋ, ಹಾಗೆಯೇ

ಮುಕ್ತರಿಗೆ ತಮ್ಮ ಇಚ್ಛೆಯಿಂದ ದೇಹಭಾವ-ಅಭಾವಗಳು ವಿರುದ್ಧಗಳಲ್ಲ. ಆದುದರಿಂದ ಮುಕ್ತರಿಗೆ ದೇಹಭಾವ-ಅಭಾವಾಖ್ಯವಾದ ಎರಡು ವಿಧವನ್ನು ತನ್ನ ಮತವನ್ನಾಗಿ ವೇದವ್ಯಾಸರು ತಿಳಿಯುತ್ತಾರೆ.

**'ಓಂ ತನ್ವಭಾವೇ ಸಂಧ್ಯವದುಪಪತ್ತೇಃ ಓಂ' ॥ ಸೂ. ॥ ೧೩ ॥**

ಸ್ವಪ್ನಾವಸ್ಥೆಯಲ್ಲಿ ದೇಹಾಭಿಮಾನವಿಲ್ಲವಾದರೂ ಹೇಗೆ ಭೋಗವಿದೆಯೋ, ಹಾಗೆಯೇ ಮುಕ್ತನಿಗೆ ಬಾಹ್ಯಶರೀರವಿಲ್ಲವಾದರೂ ಭೋಗವು ಕೂಡುವುದರಿಂದ ಭೋಗಾಭಾವವು ಬರಬೇಕಾದೀತು ಎನ್ನುವ ದೋಷವಿಲ್ಲ.

**'ಓಂ ಭಾವೇ ಜಾಗ್ರದ್ವತ್ ಓಂ' ॥ ಸೂ. ೧೪ ॥**

ಹೇಗೆ ಜಾಗ್ರದ್ದೆಶೆಯಲ್ಲಿ ದೇಹವಿರುವಾಗ ಭೋಗವಿದೆಯೋ ಹಾಗೆಯೇ ಮುಕ್ತಿಯಲ್ಲಿಯೂ ದೇಹವಿರುವಾಗ ಭೋಗವು ಯುಕ್ತವು.

**'ಓಂ ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ ಓಂ' ॥ ಸೂ. ೧೫ ॥**

ಮುಕ್ತರಿಗೆ ಆವೇಶವು ಶುದ್ಧಪ್ರಕೃತಿಮಯವಾದ ಜ್ಯೋತೀರೂಪವಾದ ಬಾಹ್ಯದೇಹಪ್ರವೇಶವು ದೀಪಿಕಾವೇಶದಂತೆ. ಅಂದರೆ— ಪ್ರದೀಪವು, ದೀಪಿತಾವಿಷ್ಟವಾದುದಾಗಿ ಆ ದೀಪದಲ್ಲಿರತಕ್ಕ ತೈಲಾದಿಗಳನ್ನೇ ಅನುಭವಿಸುತ್ತದೆ. ಕಾಷ್ಠಾರ್ದ್ಯದಿಗಳನ್ನು ಅನುಭವಿಸುವುದಿಲ್ಲ. ಹಾಗೆ ಮುಕ್ತನು ಜಡದೇಹವನ್ನು ಪ್ರವೇಶಮಾಡಿದವನಾದಾಗ್ಯೂ ದುಃಖವನ್ನು ಅನುಭವಿಸುವುದಿಲ್ಲ. ಮತ್ತೆ ಸುಖವನ್ನೇ ಅನುಭವಿಸುತ್ತಾನೆ. **'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್ ಹೃದಯಸ್ಯ ಭವತಿ'** ಎನ್ನುವ ಶ್ರುತಿಯು ಮುಕ್ತಿಯಲ್ಲಿ ದುಃಖಾಭಾವವನ್ನು ತೋರಿಸುತ್ತದೆ.

**'ಓಂ ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ಓಂ' ॥ ಸೂ. ೧೬ ॥**

**'ತೀರ್ಣೋ ಹಿ ತದಾ ಸರ್ವಾನ್ ಶೋಕಾನ್'** ಎನ್ನುವ ವಾಕ್ಯವು ಸುಪ್ತಿ-ಮುಕ್ತಿ ಉಭಯಪರವಾದುದು, ಸ್ವರ್ಗವಿಷಯಕವಲ್ಲ. ಏಕೆಂದರೆ— ಈವಾಕ್ಯಕ್ಕೆ ಉಭಯವಿಷಯಕತ್ವವು ಅಸ್ಪಷ್ಟವಾಗಿದೆ. **'ಅತ್ರ ಪಿತಾಽಪಿತಾ ಭವತಿ ಅನನ್ವಾಗತಂ ಪುಣ್ಯೇನ'** ಇತ್ಯಾದ್ಯಪಿತೃತಪ್ತಾದಿ ಲಿಂಗಗಳು ಶ್ರುತಗಳಾಗಿವೆ ॥ ೧೦ ॥ ೧೧ ॥ ೧೨ ॥ ೧೩ ॥ ೧೪ ॥ ೧೫ ॥ ೧೬ ॥ ಅಧಿ. ॥ ೮ ॥

**ಅಭಾವಾಧಿಕರಣವು ಸಮಾಪ್ತವಾಯಿತು.**

---

## ಜಗದ್ವ್ಯಾಪಾರಾಧಿಕರಣವು.

**'ಓಂ ಜಗದ್ವ್ಯಾಪಾರ ವರ್ಜಂ ಓಂ' ಸೂ. ॥ ೧೭ ॥**

ಮುಕ್ತನು ಜಗತ್ಕರ್ಮಕ ಸೃಷ್ಟ್ಯಾದಿವ್ಯಾಪಾರಗಳನ್ನು ಬಿಟ್ಟು ಸರ್ವಕಾಮಗಳನ್ನು ಅನುಭವಿಸುತ್ತಾನೆ. **'ಸರ್ವಾನ್ ಕಾಮಾನಾಪ್ತ್ವಾ'** ಎನ್ನುವ ಶ್ರುತಿಗೆ ಸರ್ವಶಬ್ದಾರ್ಥ ಸಂಕೋಚದಿಂದ ಕೂಡುವ ಪ್ರಯುಕ್ತ ಅದರಿಂದ ವಿರೋಧವಿಲ್ಲ.

'ಓಂ **ಪ್ರಕರಣಾದಸನ್ನಿಹಿತತ್ವಾಚ್ಚ** ಓಂ' ಸೂ. ॥ ೧೮ ॥

**'ಶರೀರಭೇದಾದೂರ್ಧ್ವಮುತ್ಕ್ರಮ್ಯ'** ಎಂದು ಜೀವಪ್ರಕರಣವಾಗಿರುವುದರಿಂದ ಜೀವರಿಗೆ ಜಗಜ್ಜನನಾದಿ ಸಾಮರ್ಥ್ಯದಲ್ಲಿ ಸನ್ನಿಹಿತತ್ವವಿಲ್ಲದಿರುವುದರಿಂದ (ಅಂದರೆ- ಸಾಮರ್ಥ್ಯ ವಿಲ್ಲದಿರುವುದರಿಂದ) **'ಸರ್ವಾನ್ ಕಾಮಾನ್'** ಎನ್ನುವ ಶ್ರುತಿಗೆ ಅರ್ಥಸಂಕೋಚವು ಯುಕ್ತವು.

'ಓಂ **ಪ್ರತ್ಯಕ್ಷೋಪದೇಶಾದಿತಿಚೇನ್ನಾಧಿಕಾರಿಕಮಂಡಲಸ್ಥೋಕ್ತೇಃ** ಓಂ' ಸೂ. ॥ ೧೯ ॥

**'ತಾ ಯೋ ವೇದ ಸ ವೇದ ಬ್ರಹ್ಮ ಸರ್ವೇಽಸ್ಮೈ ದೇವಾ ಬಲಿಮಾವಹಂತಿ'** ಎಂದು ಸ್ಪಷ್ಟವಾಗಿ ಮುಕ್ತನಿಗೆ ಸರ್ವದೇವಪೂಜ್ಯತ್ವವನ್ನು ಉಪದೇಶ ಮಾಡಿದರಿಂದ ಮುಕ್ತರಿಗೆ ಜಗದೈಶ್ವರ್ಯವೂ ಅದೆ. ಎಂದು ಹೇಳಕೂಡದು. ತಮಗೆ ಯೋಗ್ಯವಾದ ಪದವಿಯನ್ನು ಹೊಂದಿರತಕ್ಕ ದೇವತೆಗಳ ಮಂಡಲದಲ್ಲಿ ನಿಯಾಮಕನಾಗಿರತಕ್ಕ ಮುಕ್ತ ವಿರಿಂಚನನ್ನೇ ಅಲ್ಲಿ ಹೇಳಿದರಿಂದ ಅಶೇಷಮುಕ್ತರಿಗೆ ಜಗದ್ವಿಷಯಕ ಐಶ್ವರ್ಯವಿಲ್ಲ.

'ಓಂ **ವಿಕಾರಾವರ್ತಿ ಚ ತಥಾಹಿ ದರ್ಶಯತಿ** ಓಂ' ಸೂ. ॥ ೨೦ ॥

ಸಂಸಾರವನ್ನೇ ಹೊಂದಿಸಿಕೊಡತಕ್ಕ ವ್ಯಾಪಾರವು ಮುಕ್ತರಿಗೆ ಇಲ್ಲ. **'ಇಮಂ ಮಾನವ ಮಾವರ್ತಂ ನಾವರ್ತಂತೇ'** ಎನ್ನುವ ಶ್ರುತಿಯು ಹಾಗೆ ತೋರಿಸುತ್ತದೆ. ॥ ೧೭ ॥ ೧೮ ॥ ॥ ೧೯ ॥ ೨೦ ॥ ಅಧಿ. ೯ ॥

**ಜಗದ್ವ್ಯಾಪಾರಾಧಿಕರಣವು ಸಮಾಪ್ತವಾಯಿತು.**

---

## ಸ್ಥಿತ್ಯಧಿಕರಣವು.

'ಓಂ **ಸ್ಥಿತಿಮಾಹ ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ** ಓಂ' ॥ ಸೂ. ೨೧ ॥

**'ಬ್ರಹ್ಮಣಿ ಸಂಪನ್ನೋ ನ ಜಾಯತೇ ನ ಮ್ರಿಯತೇ ನ ಹೀಯತೇ ನ ವರ್ಧತೇ'** ಎನ್ನುವ ಶ್ರುತಿಯು ಮುಕ್ತರಿಗೆ ಏಕಪ್ರಕಾರದಿಂದ ಅವಸ್ಥಿತಿಯನ್ನು ಹೇಳುತ್ತದೆ. ಮಹಾನು ಭಾವರ ಪ್ರತ್ಯಕ್ಷವು, **'ಮುಕ್ತೋನ ವೃದ್ಧ್ಯಾದಿಮಾನ್ ತದ್ಧೇತುಶೂನ್ಯತ್ವಾತ್'** ಎನ್ನುವ ಅನುಮಾನವೂ ಕೂಡ ಏಕಪ್ರಕಾರದಿಂದ ಅವಸ್ಥಿತಿಯನ್ನೇ ತೋರಿಸಿಕೊಡುತ್ತವೆ.

'ಓಂ **ಭೋಗಮಾತ್ರಸಾಮ್ಯಲಿಂಗಾಚ್ಚ** ಓಂ' ॥ ಸೂ. ೨೨ ॥

ಭೋಗಮಾತ್ರಕ್ಕೆ ಸಾಮ್ಯದಲ್ಲಿ ಮುಕ್ತನಿಗೆ ಆನಂದವೃದ್ಧ್ಯಾದ್ಯಕಾರಣತ್ವದಲ್ಲಿ ಲಿಂಗವು ಇದ್ದುದರಿಂದ ಅಂದರೆ— '**ಏತಮಾನಂದಮಯಮಾತ್ಮಾನಮನುವಿಶ್ಯ ನ ಜಾಯತೇ ನ ಮ್ರಿಯತೇ ನ ಹ್ರಸತೇ ನ ವರ್ಧತೇ ಯಥಾಕಾಮಂ ಚರತಿ ಯಥಾಕಾಮಂ ಪಿಬತಿ ಯಥಾಕಾಮಂ ರಮತೇ ಯಥಾಕಾಮಮುಪರಮತೇ**' ಎನ್ನುವ ಶ್ರುತಿಯಲ್ಲಿ ಮುಕ್ತನಿಗೆ ವೃದ್ಧ್ಯಾದಿಗಳು ಇಲ್ಲವೆಂದು ಹೇಳುತ್ತಾ ಭೋಗಭಾವಾಭಾವವನ್ನು ಹೇಳಿದರಿಂದ ಭೋಗವಿಶೇಷವು ಆನಂದವೃದ್ಧ್ಯಾದಿಗಳಿಗೆ ಹೇತುವಲ್ಲ ॥ ೨೧ ॥ ೨೨ ॥ ಅಧಿ. ೧೦ ॥

**ಸ್ಥಿತ್ಯಧಿಕರಣವು ಸಮಾಪ್ತವಾಯಿತು.**

---

## ಅನಾವೃತ್ಯಧಿಕರಣವು.

**'ಓಂ ಅನಾವೃತ್ತಿಃ ಶಬ್ದಾದನಾವೃತ್ತಿಃ ಶಬ್ದಾತ್ ಓಂ'** ॥ ಸೂ. ೨೩ ॥

ಮುಕ್ತರಿಗೆ ಅನಾವೃತ್ತಿಯು ಅಂದರೆ— ಸರ್ವಕಾಲಕ್ಕೂ ಸಮಾಪ್ತಿಯಾಗುವುದರಿಂದ ಸ್ವರ್ಗಿಗಳಂತೆ ಪುನರಾವೃತ್ತಿಯಿಲ್ಲ. '**ನ ಚ ಪುನರಾವರ್ತತೇ**' ಎನ್ನುವ ಶ್ರುತಿಯಿದ್ದುದರಿಂದ ತಿಳಿಯುತ್ತದೆ. ॥ ಸೂ. ೨೩ ॥ ಅಧಿ. ೧೧ ॥

**ಅನಾವೃತ್ಯಧಿಕರಣವು ಸಮಾಪ್ತವಾಯಿತು.**

---

ಪಾದ ಪ್ರತಿಪಾದ್ಯವಿಷಯವೂ ಪಾದಸಂಗತಿಯೂ, ಪ್ರಸಿದ್ಧವೇ ಆಗಿರುವುದರಿಂದ ಪೂರ್ವೋತ್ತರಪಕ್ಷಯುಕ್ತಿಗಳನ್ನೇ ಹೇಳುತ್ತಾರೆ.

**ಮೂ ॥ ಅತಿಕ್ರಮೋಕ್ತಿಃ ಕೃತಿರರ್ಥಲಾಭಃ**
**ಪರಾಗತಿಃ ಪಾರಾಗತಿಸ್ತದೋಕಃ ।**
**ಸಮಸ್ತಕಾರ್ಯಂ ವಶಿತಾ ಚ ವಿಶ್ವ-**
**ಸಂಭಾವನಾ ಯುಕ್ತಯಸ್ತ್ವನ್ಯಪಕ್ಷೇ ॥ ೧ ॥**
**ಸಾಮಾನ್ಯರೂಪಂ ಪ್ರತಿಭಾನಮುಕ್ತಿ-**
**ರಾಶ್ಚರ್ಯತಾಕೃತ್ರಿಮತಾಸ್ತದೋಷಃ ।**
**ವಿಶೇಷಕ್ಲೃಪ್ತಿಃ ಕೃತನಿಶ್ಚಯಶ್ಚ**
**ಮಾಹಾತ್ಮ್ಯಮಿತ್ಯೇವ ಸುನಿರ್ಣಯಾರ್ಥಾಃ ॥ ೨ ॥**

ಅ ॥ (೧ನೇ ಅಧಿಕರಣದಲ್ಲಿ-ಅರ್ಚಿರಾದ್ಯತಿಕ್ರಮವನ್ನು ಹೇಳಿದರಿಂದಲೂ, ಬ್ರಹ್ಮನಿಗೆ ಗಮ್ಯತ್ವವನ್ನು ಹೇಳಿದರಿಂದಲೂ, ಜ್ಞಾನಿಯು ಬ್ರಹ್ಮನನ್ನು ಅತಿಕ್ರಮಿಸಿ ಭೋಗಗಳನ್ನು ಅನುಭವಿಸುತ್ತಾನೋ, ಬ್ರಹ್ಮನ ಸಮೀಪದಲ್ಲಿಯೇ ಭೋಗಗಳನ್ನು ಅನುಭವಿಸುತ್ತಾನೋ, ಎಂದು ಸಂದೇಹವು ಬಂದರೆ— ಅತಿಕ್ರಮಿಸಿಯೇ ಎಂದು ಪೂರ್ವಪಕ್ಷವು; ಸಮೀಪದಲ್ಲಿಯೇ ಎಂದು ಸಿದ್ಧಾಂತವು. ಅದರಲ್ಲಿ) **ಅತಿಕ್ರಮೋಕ್ತಿಃ**=ಅತಿಕ್ರಮೋಕ್ತಿಯು. (ಎನ್ನುವುದು ಪೂರ್ವಪಕ್ಷ

ನ್ಯಾಯುವು;) ಸಾಮಾನ್ಯರೂಪಂ = ಸಾಮಾನ್ಯರೂಪವಾದುದು (ಎನ್ನುವುದು ಸಿದ್ಧಾಂತ ನ್ಯಾಯವು (ಅಂದರೆ— '**ಏತಂ ಸೇತುಂ ತೀರ್ತ್ವಾ**' ಎಂದು ಬ್ರಹ್ಮನಿಗೂ, ಅತಿಕ್ರಮ ವನ್ನು ಹೇಳಿದರಿಂದ ಮುಕ್ತನು ಬ್ರಹ್ಮನನ್ನು ದಾಟಿ ಹೋಗುತ್ತಾನೆ. ಆದುದರಿಂದ ಬ್ರಹ್ಮನು ಗಮ್ಯನಲ್ಲ ಎಂದರೆ— '**ತರತಿ**' ಎನ್ನುವ ಸಾಮಾನ್ಯಪ್ರತೀತಿಯಿದ್ದುದರಿಂದ ಬ್ರಹ್ಮನನ್ನು ದಾಟಿ ಇದನ್ನು ಹೊಂದುತ್ತಾನೆ ಎಂದು ವಿಶೇಷವನ್ನು ಹೇಳಲಿಲ್ಲ. '**ಇಮಾಂ ಘೋರಾಮಶಿವಾಂ ನದೀಂ ತೀರ್ತ್ವಾ ಬ್ರಹ್ಮ ಸಂಪದ್ಯತೇ**' ಎಂದು ವಿಶೇಷ ಉಕ್ತಿಯಿದ್ದುದರಿಂದಲೂ '**ಏತಂ ಸೇತುಂ**' ಎನ್ನುವ ಶ್ರುತಿಯು ಸಾಮಾನ್ಯರೂಪವಾಗಿರುವುದರಿಂದ ಈ ಸರ್ವಾಶ್ರಯನಾದ ಶ್ರೀಹರಿಯನ್ನು ಹೊಂದುವುದಕ್ಕಾಗಿ ಇತರವಾದದ್ದನ್ನು ದಾಟಿ ಎನ್ನುವ ಅರ್ಥವು ಕೂಡು ವುದರಿಂದ ಆತನಿಗೆ ಗಮ್ಯತ್ವವು ಯುಕ್ತವು ) (೨ನೇ ಅಧಿಕರಣದಲ್ಲಿ- '**ಸ ತತ್ರಪರ್ಯೇತಿ**' ಇತ್ಯಾದಿಗಳಿಂದ ಈತನಿಗೆ ಕ್ರಿಯೆಯು ತೋರುವುದರಿಂದ, ಶ್ರುತ್ಯುಕ್ತಿಯು ಎರಡು ಪ್ರಕಾರವೂ ಕೂಡುವುದರಿಂದ ಈ ಶ್ರುತಿಪ್ರಾಪ್ಯನು ಮುಕ್ತನೋ, ಅಮುಕ್ತನೋ ಎಂದು ಸಂದೇಹವು ಬಂದರೆ- ಮುಕ್ತನಲ್ಲವೆಂದು ಪೂರ್ವಪಕ್ಷವು; ಮುಕ್ತನೆಂದು ಸಿದ್ಧಾಂತವು. ಅದರಲ್ಲಿ) ಕೃತಿಃ = ಕ್ರಿಯೆಯು, (ಎಂದು ಪೂರ್ವಪಕ್ಷನ್ಯಾಯವು;) ಪ್ರತಿಭಾನಂ = ಸ್ಪಷ್ಟಪ್ರತೀತಿಯು, (ಎಂದು ಸಿದ್ಧಾಂತನ್ಯಾಯವು.) (ಅಂದರೆ ಕೃತಕೃತ್ಯನಾದ ಮುಕ್ತನಿಗೆ ಕ್ರಿಯೆಯು ಇದ್ದುದರಿಂದ ಶ್ರುತ್ಯುಕ್ತ ಅಮುಕ್ತನಾದುದರಿಂದ, ಮುಕ್ತನಿಗೆ ಭೋಗವು ಕೂಡಲಾರದು ಎಂದರೆ— '**ಸ ತತ್ರ ಪರ್ಯೇತಿ**' ಇತ್ಯಾದಿಗಳಲ್ಲಿದ್ದ ತಚ್ಛಬ್ದದಿಂದ '**ಸ್ವೇನ ರೂಪೇಣಾಭಿನಿಷ್ಪದ್ಯತೇ**' ಎಂದು ಪೂರ್ವದಲ್ಲಿ ಹೇಳಲ್ಪಟ್ಟ ಮುಕ್ತನೇ ಸ್ಪಷ್ಟವಾಗಿ ಶ್ರುತಿಯಲ್ಲಿ ತೋರುತ್ತಾನೆ. ಆದುದರಿಂದ ಮುಕ್ತನಿಗೆ ಭೋಗವು ಯುಕ್ತವು) (೩ನೇ ಅಧಿಕರಣದಲ್ಲಿ- '**ಪರಂಜ್ಯೋತಿರುಪಸಂಪದ್ಯಸ್ವೇನ**' ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟವನು 'ಜ್ಯೋತಿಃ' ಶಬ್ದವಾಚ್ಯತ್ವದಿಂದ ವಿಶೇಷವಿಲ್ಲದಿರುವುದ ರಿಂದ ಅಂದರೆ- ಜ್ಯೋತಿಶ್ಶಬ್ದವಾಚ್ಯತ್ವವು ಇಬ್ಬರಲ್ಲಿಯೂ ಇದ್ದುದರಿಂದ ವಿಷ್ಣುವೋ, ಆದಿತ್ಯನೋ ಎಂದು ಸಂದೇಹವು ಬಂದರೆ— ಆದಿತ್ಯನೆಂದು ಪೂರ್ವಪಕ್ಷವು; ವಿಷ್ಣುವೆಂದು ಸಿದ್ಧಾಂತವು. ಅದರಲ್ಲಿ) ಅರ್ಥಲಾಭಃ = ಏಕವಾಕ್ಯತ್ವರೂಪ ಅರ್ಥಲಾಭವು. (ಎಂದು ಪೂರ್ವಪಕ್ಷ ಯುಕ್ತಿಯು) ಉಕ್ತಿಃ = ಪರಂಜ್ಯೋತಿಷ್ಟ್ವೋಕ್ತಿಯು, (ಎನ್ನುವುದು ಸಿದ್ಧಾಂತ ಯುಕ್ತಿಯು.) (ಅಂದರೆ— '**ಪರಂಜ್ಯೋತಿರುಪಸಂಪದ್ಯ**' ಎನ್ನುವಲ್ಲಿ ಪರಂಜ್ಯೋತಿಃ ಶಬ್ದದಿಂದ ಆದಿತ್ಯ ಜ್ಯೋತಿಸ್ಸನ್ನು ಅಂಗೀಕರಿಸಿದರೆ— '**ಸ ತೇಜಸಿ ಸೂರ್ಯೇ ಸಂಪನ್ನೋ ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತೇ ಏವಂ ಹೈವ ಸ ಪಾಪ್ಮನಾ ವಿನಿರ್ಮುಕ್ತಃ**' ಎನ್ನುವ ಶ್ರುತಿಸಮಾಖ್ಯೆಯಿಂದ ಆದಿತ್ಯಾಖ್ಯವಾದ ಪರಂಜ್ಯೋತಿಯನ್ನು ಹೊಂದಿ, ಪ್ರಾರಬ್ಧ ಕರ್ಮದಿಂದ ಬಿಡಲ್ಪಡುತ್ತಾನೆ, ಎನ್ನುವ ಅರ್ಥವನ್ನು 'ಪರಂಜ್ಯೋತಿಃ' ಎನ್ನುವ ವಾಕ್ಯಕ್ಕೆ ಹೇಳಲಿಕ್ಕೆ ಶಕ್ಯವಾಗುತ್ತದೆ. ಏವಂಚ ಪರಂಜ್ಯೋತಿಃ ಶಬ್ದಕ್ಕೆ ಆದಿತ್ಯಪರತ್ವವನ್ನು ಅಂಗೀಕರಿ ಸಿದರೆ— '**ಸ ತೇಜಸಿ**' ಎನ್ನುವ ಶ್ರುತಿಯಿಂದ ಏಕವಾಕ್ಯತ್ವವು ಕೂಡುವುದರಿಂದ ಮುಕ್ತನಿಗೆ ಬ್ರಹ್ಮಸಮೀಪದಲ್ಲಿ ಭೋಗವೆನ್ನುವುದು ಕೂಡುವುದಿಲ್ಲ ಎಂದರೆ— '**ಅಥ ಕಿಮುಚ್ಯತೇ ಪರಂ ಜ್ಯೋತಿರಿತ್ಯಾತ್ಮೈವ ಪರಂಜ್ಯೋತಿಃ ಸಹಿ ಪರಮೋ ದ್ಯೋತತೇ ಜೀವಾಚ್ಚ ಜೀವಾಚ್ಚ ತಸ್ಮಾದಾಹುಃ ಪರಂಜ್ಯೋತಿರಿತಿ ತಮೇವೈಷ ಜೀವೋಽಭಿಸಂಪದ್ಯ ಸ್ವೇನ ರೂಪೇಣಾ- ಭಿನಿಷ್ಪದ್ಯತೇ**' ಎಂದು ಆ ಶ್ರೀಹರಿಗೇನೇ ಪರಂಜ್ಯೋತಿಷ್ಟ್ವವನ್ನು ಹೇಳಿದ್ದಾರೆ. ಏವಂಚ ಪರಂಜ್ಯೋತಿಃಶಬ್ದದಿಂದ ಬ್ರಹ್ಮನನ್ನೇ ಹೇಳಿದರಿಂದ ಬ್ರಹ್ಮನನ್ನು ಹೊಂದಿಯೇ ಭೋಗಗಳನ್ನು (ಅನುಭವಿಸುತ್ತಾನೆ.) (೪ನೇ ಅಧಿಕರಣದಲ್ಲಿ- ಸಾಯುಜ್ಯವನ್ನೂ ಹೊಂದಿದವರು ಶ್ರೀಹರಿಯಿಂದ

ಭುಕ್ತಗಳೇ ಆದ ಭೋಗಗಳನ್ನು ಉಪಭೋಗಿಸುತ್ತಾರೋ, ಅಥವಾ ಶ್ರೀ ಹರಿಯಿಂದ ಅಭುಕ್ತಗಳೇ ಆದ ಭೋಗಗಳನ್ನು ಭೋಗಿಸುತ್ತಾರೋ, ಎಂದು ಸಂದೇಹವು ಬಂದರೆ— ಶ್ರೀಹರಿಯಿಂದ ಅಭುಕ್ತಗಳೇ ಆದ ಭೋಗಗಳನ್ನು ಭೋಗಿಸುತ್ತಾರೆ ಎಂದು **ಪೂರ್ವಪಕ್ಷವು;** ಶ್ರೀ ಹರಿಯಿಂದ ಭುಕ್ತಗಳೇ ಆದ ಭೋಗಗಳನ್ನು ಭೋಗಿಸುತ್ತಾರೆ ಎಂದು ಸಿದ್ಧಾಂತವು. ಅದರಲ್ಲಿ), ಪರಾಗತಿಃ=ಪರಮಗತಿಯು, (ಎನ್ನುವುದು ಪೂರ್ವಪಕ್ಷನ್ಯಾಯವು;) ಆಶ್ಚರ್ಯತಾ= ಆಶ್ಚರ್ಯತನವು, (ಎನ್ನುವುದು ಸಿದ್ಧಾಂತನ್ಯಾಯವು.) (ಅಂದರೆ— ಶ್ರೀ ಹರಿಯಿಂದ ಭುಕ್ತಗಳೇ ಆದ ಭೋಗಗಳು ಮುಕ್ತಿಯಲ್ಲಿ ಭೋಗಿಸಲ್ಪಡುತ್ತವೆ ಎಂದು ನಿಯಮವಿದ್ದರೆ— ಈಶ್ವರನು ನಿತ್ಯಪೂರ್ಣಾನಂದನಾದುದರಿಂದ ಕೆಲವು ವೇಳೆ ಅವನಿಗೆ ಭೋಗಾಭಾವವೂ ಕೂಡು ತ್ತಿರಲು ಆಗ ಭೋಗೇಚ್ಛೆಯನ್ನು ಹೊಂದಿದ ಮುಕ್ತರಿಗೂ ಭೋಗವಿಲ್ಲವೆಂದಾಗಬೇಕಾಗುವು ದರಿಂದ, ಮೋಕ್ಷಕ್ಕೆ ಅಪುರುಷಾರ್ಥತ್ವವು ಬರಬೇಕಾಗುವುದರಿಂದ ಪರಮಗತಿತ್ವವೇ ಇಲ್ಲದೆ ಹೋಗಬೇಕಾಗುವುದು. ಏವಂಚ ಮೋಕ್ಷಕ್ಕೆ ಪರಮಗತಿತ್ವವಿದ್ದುದರಿಂದ ಮುಕ್ತನಾದ ಜೀವನಿಂದ ಶ್ರೀಹರಿಯಿಂದ ಅಭುಕ್ತಗಳೇ ಆದ ಭೋಗಗಳು ಭೋಗಿಸಲ್ಪಡುತ್ತವೆ. ಆದುದರಿಂದ ಶ್ರೀಹರಿಗೆ ಸರ್ವಭೋಕ್ತೃತ್ವವು ಇಲ್ಲ, ಎಂದರೆ— **'ಪೂರ್ಣಾನಂದಃ ಪೂರ್ಣಭುಕ್ ಪೂರ್ಣಕರ್ತಾ ಪೂರ್ಣಜ್ಞಾನಃ ಪೂರ್ಣಭಾಃ ಪೂರ್ಣಶಕ್ತಿಃ ಆಶ್ಚರ್ಯತ್ವಾದ್ಭಗ- ವಾನ್ವಾಸುದೇವೋ ವಿರುದ್ಧಶಕ್ತಿರ್ನ ಚ ದೋಷಸ್ಪೃಗೀಶಃ'** ಎನ್ನುವ ಶ್ರುತಿಯಿಂದ ಬ್ರಹ್ಮ ನಿಗೆ ಆಶ್ಚರ್ಯತ್ವವಿದ್ದುದರಿಂದಲೇ ಪೂರ್ಣಾನಂದತ್ವ-ಪೂರ್ಣಭೋಗಭೋಕ್ತೃತ್ವ ಇವೆರಡನ್ನು ಹೇಳಿರುತ್ತಾರೆ. ಏವಂಚ ಬ್ರಹ್ಮನಿಗೆ ಅತ್ಯಾಶ್ಚರ್ಯತ್ವವಿದ್ದುದರಿಂದಲೇ ಪೂರ್ಣಾನಂದತ್ವವಿದ್ದರೂ ಪೂರ್ಣಭೋಗವು ಶ್ರುತವಾಗುವುದರಿಂದ ಮುಕ್ತರಿಗೆ ಭಗವದ್ಭುಕ್ತ ಭೋಗಭೋಕ್ತೃತ್ವವು ಯುಕ್ತವೇ.) (೫ನೇ ಅಧಿಕರಣದಲ್ಲಿ— ವಾದಿಗಳ ವಿಪ್ರತಿಪತ್ತಿಯಿಂದ ಮುಕ್ತರಿಗೆ ಭೋಗವು ಯುಕ್ತವೋ, ಅಲ್ಲವೋ ಎಂದು ಸಂದೇಹವು ಬಂದರೆ— ಯುಕ್ತವಲ್ಲವೆಂದು ಪೂರ್ವಪಕ್ಷವು; ಯುಕ್ತವೆಂದು ಸಿದ್ಧಾಂತವು. ಅದರಲ್ಲಿ), ಪಾರಗತಿಃ=ಸಂಸಾರಪಾರಗತಿಯು, (ಎನ್ನುವುದು ಪೂರ್ವಪಕ್ಷನ್ಯಾಯವು;) ಅಕೃತ್ರಿಮತಾ=ಜೀವಸ್ವರೂಪಕ್ಕೆ ಕೃತ್ರಿಮತ್ವಾಭಾವವು, (ಎನ್ನುವುದು ಸಿದ್ಧಾಂತನ್ಯಾಯವು.) (ಅಂದರೆ— ಮುಕ್ತನು ಸಂಸಾರಪಾರವನ್ನು ಹೊಂದಿದರಿಂದ ಆತನಿಗೆ ಚಿನ್ಮಾತ್ರದೇಹವೂ ಇಲ್ಲ. ಆದುದರಿಂದ ಶರೀರವೇ ಇಲ್ಲದಿರುವುದರಿಂದ, ಭೋಗವು ಕೂಡದಿರು ವುದರಿಂದ ಮುಕ್ತಿಗೆ ಅಪುರುಷಾರ್ಥತ್ವವು ಎಂದರೆ— **'ಅಥ ವಿಮುಕ್ತಸ್ಯ ಚಿನ್ಮಾತ್ರ ಏವ ದೇಹೋ ಭವತಿ ಚಿನ್ಮಾತ್ರಾಣಿ ಕರಣಾನಿ ತೈರೀಶಾನುಗೃಹೀತೈರ್ಭೋಗಾನ್ ಭುಙ್ಕ್ತೇ'** ಎನ್ನುವ ಶ್ರುತಿಯಿಂದ ಚಿನ್ಮಾತ್ರವಾದ ಜೀವಸ್ವರೂಪವು ಅಕೃತ್ರಿಮವಾಗಿದೆ, ಕೃತ್ರಿಮ ಶರೀರವೇ ಸಂಸಾರವನ್ನು ಹೊಂದಿಸಿ ಕೊಡುತ್ತದೆ. ಅಕೃತ್ರಿಮವಾದ ಚಿನ್ಮಾತ್ರ ಶರೀರವನ್ನು ಅಂಗೀ ಕರಿಸಿದರೂ ಕೂಡ ಸಂಸಾರ ಪಾರಗತತ್ವ ರೂಪವಾದ ಮುಕ್ತತ್ವಕ್ಕೆ ಅನುಪಪತ್ತಿಯು ಇಲ್ಲ.) (೬ನೇ ಅಧಿಕರಣದಲ್ಲಿ— ಮುಕ್ತರ ಭೋಗವು ಆಯಾಯ ಉಪಾಯಗಳಿಂದ ಸಾಧ್ಯಗಳಾದ ಸಾಧನಗಳಿಂದ ಸಾಧ್ಯವೋ ಅಥವಾ ಸಂಕಲ್ಪಮಾತ್ರ ಸಾಧ್ಯವೋ ಎಂದು ಸಂದೇಹವು ಬಂದರೆ— ಆಯಾಯ ಉಪಾಯ ಸಾಧ್ಯಗಳಾದ ಸಾಧನಗಳಿಂದ ಸಾಧ್ಯವು ಎಂದು ಪೂರ್ವಪಕ್ಷವು; ಸಂಕಲ್ಪಮಾತ್ರ ಸಾಧ್ಯವೆಂದು ಸಿದ್ಧಾಂತವು. ಅದರಲ್ಲಿ) ತದೋಕಃ=ಶ್ರೀ ಹರಿಯ ಸ್ಥಾನವು, (ಎನ್ನುವುದು ಪೂರ್ವಪಕ್ಷನ್ಯಾಯವು.) ಅಸ್ತದೋಷಃ=ಹೋಗಲ್ಪಟ್ಟ ದೋಷವುಳ್ಳದ್ದು, (ಎಂದು ಸಿದ್ಧಾಂತನ್ಯಾಯವು) (ಅಂದರೆ— ಮುಕ್ತನು ಶ್ರೀ ಹರಿಯ ಸ್ಥಾನದಲ್ಲಿಯೇ ಇದ್ದುದರಿಂದ ಶ್ರೀ ಹರಿಯ ಲೋಕಕ್ಕೂ ಭೂಮ್ಯಾದಿ ಲೋಕ ಸಾಮ್ಯವಿರುವುದರಿಂದ ಆ ಲೋಕವೂ ಕೂಡ

ಆವಾವ ಉಪಾಯುಗಳಿಂದ ಸಾಧ್ಯಗಳಾದ ಭೋಗಗಳಿಗೆ ಸಾಧನವು. ಏವಂಚ ಮುಕ್ತಿಗೂ ಕೂಡ ಸಂಸಾರ ಸಮಾನ ಧರ್ಮತ್ವವಿದ್ದುದರಿಂದ ಅಪುರುಷಾರ್ಥತ್ವವು ಎಂದರೆ— ಭೂಮ್ಯಾದಿ ಲೋಕತ್ವದಿಂದ ಸಾಮ್ಯವಿದ್ದರೂ ಶ್ರೀ ಹರಿಯು ಸ್ಥಾನಕ್ಕೆ ನಿರ್ದೋಷತ್ವವಿದ್ದುದರಿಂದ ಇತರ ಲೋಕವೈಲಕ್ಷಣ್ಯವೇ ಯುಕ್ತವಾಗಿರುವುದರಿಂದ ಮುಕ್ತನಿಗೆ ಮುಕ್ತಿಯಲ್ಲಿ ಭೋಗವೆಲ್ಲವೂ ಸಂಕಲ್ಪಮಾತ್ರ ಸಾಧ್ಯವೆಂದಂಗೀಕರಿಸಿದರೂ ಲೋಕವಿರೋಧವು ಬಾಧಕವಲ್ಲ. **‘ಸ ಯದಿ ಪಿತೃಲೋಕಕಾಮೋ ಭವತಿ ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ’** ಎನ್ನುವ ಶ್ರುತ್ಯುಕ್ತಿಯನ್ನು ಅನುಸರಿಸಿ ಸಂಕಲ್ಪಮಾತ್ರ ಸಾಧವಾದ್ಯ ಭೋಗವು ಯುಕ್ತವಾಗುತ್ತದೆ. ಏವಂಚ ಶ್ರೀ ಹರಿಯು ಲೋಕಕ್ಕೆ ನಿರ್ದೋಷತ್ವವಿದ್ದುದರಿಂದ ಮುಕ್ತಭೋಗಕ್ಕೆ ಸಂಕಲ್ಪಮಾತ್ರ ಸಾಧ್ಯತ್ವವಿದ್ದುದರಿಂದ ಅದಕ್ಕೆ ಪುರುಷಾರ್ಥತ್ವವು ಯುಕ್ತವು.) (೭ನೇ ಅಧಿಕರಣದಲ್ಲಿ-ಮುಕ್ತನು ಕ್ಲಪ್ತ ಪತಿಗಳಿಂದ ಇತರರಾದ ಅಧಿಪತಿಗಳಿಂದ ಯುಕ್ತನೋ ಅಲ್ಲವೋ ಎಂದು ಸಂದೇಹವು ಬಂದರೆ— ಮುಕ್ತನಿಗೆ ಅಧಮರೂ ಕೂಡ ಪತಿಗಳು ಇರುತ್ತಾರೆ ಎಂದು ಪೂರ್ವಪಕ್ಷವು; ಇಲ್ಲವೆಂದು ಸಿದ್ಧಾಂತವು. ಅದರಲ್ಲಿಯೂ) ‘ತದೋಕಃ’ (ಎನ್ನುವುದೇ ಪೂರ್ವಪಕ್ಷನ್ಯಾಯವು.) ‘ಅಸ್ತದೋಷಃ’ (ಎನ್ನುವುದೇ ಸಿದ್ಧಾಂತನ್ಯಾಯವು.) (ಅಂದರೆ— ರಾಜನ ಮನೆಯಲ್ಲಿದ್ದವನಿಗೆ ಹೇಗೆ ಅಧಮರೂ ನಿಮಾಮಕರಾಗುತ್ತಾರೋ ಹಾಗೆಯೇ ಮುಕ್ತನೂ ಪರನ ಮನೆಯಲ್ಲಿ ಇದ್ದುದರಿಂದ ಮುಕ್ತಿಯಲ್ಲಿ ಅಧಮರೂ ಕೂಡ ನಿಯಾಮಕರಾಗಿ ಇರುತ್ತಾರೆ. ಆದುದರಿಂದ ಮುಕ್ತರಿಗೆ ಸಂಸಾರ ಸಮಾನಧರ್ಮತ್ವವಿದ್ದುದರಿಂದ ಅಪುರುಷಾರ್ಥತ್ವವು. ಎಂದರೆ— ಶ್ರೀ ಹರಿಯು ಲೋಕದಲ್ಲಿರತಕ್ಕ ಮುಕ್ತನಿಗೂ ಸರ್ವನಿಯಾಮಕನಾದ ಈಶ್ವರನಿಗೂ ಮುಕ್ತಾಂತರರಿಗೂ ನಿರ್ದೋಷತ್ವವಿದ್ದುದರಿಂದಲೇ ರಾಜನಲ್ಲಿ ದೋಷವಿದ್ದಂತೆ ದೋಷವು ಕೂಡದಿರುವುದರಿಂದ ಅಜ್ಞಾನ ವಿರುದ್ಧ ಕಾಮಾದಿ ದೋಷಗಳ ಸಂಪರ್ಕವೇ ಇಲ್ಲದಿರುವುದರಿಂದಲೇ ಅಧಮ ಉತ್ತಮ ಭಾವವನ್ನು ಅತಿಕ್ರಮಿಸದೇನೇ ನಿಯಮ್ಯನಿಯಾಮಕಭಾವ ಸ್ವೀಕಾರವು ಕೂಡುತ್ತದೆ. ಏವಂಚ ಮುಕ್ತನು ಶ್ರೀ ಹರಿಯು ಲೋಕದಲ್ಲಿದ್ದರೂ **‘ಮುಕ್ತಾನಾಂ ಪತಯೋ ದೇವಾಃ ದೇವಾನಾಂ ಚ ಪ್ರಜಾಪ್ರತಿ । ತಸ್ಯ ವಿಷ್ಣುರ್ನಚೈವೇದಂ ಪಾರಾವರ್ಯಂ ವಿನಶ್ಯತಿ’** ಎನ್ನುವ ಶ್ರುತಿಯುದೆಶೆಯಿಂದ ನಿರ್ದೋಷತ್ವವಿದ್ದುದರಿಂದ ಅಧಮ ನಿಯಮ್ಯತ್ವವಿಲ್ಲದಿರುವುದರಿಂದ ಮುಕ್ತಿಗೆ ಪುರುಷಾರ್ಥತ್ವವು ಯುಕ್ತವು.) (೮ನೇ ಅಧಿಕರಣದಲ್ಲಿ— ಮುಕ್ತರಿಗೆ ಭೋಗವು ಕೂಡುತ್ತದೋ ಇಲ್ಲವೋ ಎಂದು ಸಂದೇಹವು ಬಂದರೆ— ಕೂಡುವುದಿಲ್ಲವೆಂದು ಪೂರ್ವಪಕ್ಷವು; ಕೂಡುತ್ತದೆಂದು ಸಿದ್ಧಾಂತವು. ಅದರಲ್ಲಿ) ಸಮುಸ್ತಕಾರ್ಯಂ=ಎಲ್ಲಾ ಕಾರ್ಯವು. (ಎನ್ನುವುದು ಪೂರ್ವಪಕ್ಷನ್ಯಾಯವು;) ವಿಶೇಷಕ್ಲಪ್ತಿಃ = ವಿಶೇಷಕ್ಲಪ್ತಿಯು (ಎನ್ನುವುದು ಸಿದ್ಧಾಂತನ್ಯಾಯವು;) (ಅಂದರೆ— ಮುಕ್ತನಿಗೆ ದೇಹವಿಲ್ಲವಾದರೆ ಭೋಗವು ಕೂಡದೆ ಹೋಗಬೇಕಾಗುವುದರಿಂದಲೂ ದೇಹವಿದ್ದರೆ ತತ್ಪ್ರಯುಕ್ತ ದುಃಖಾದಿ ಸಮಸ್ತ ಕಾರ್ಯಗಳು ಪ್ರಾಪ್ತಗಳಾಗುವುದರಿಂದ ಮೋಕ್ಷದಲ್ಲಿ ದುಃಖಮಿಶ್ರವಾಗದಿರುವ ಸುಖವು ಪ್ರಾಪ್ತವಾಗಿರುವುದರಿಂದ ಅಪುರುಷಾರ್ಥತ್ವವು, ಎಂದರೆ— **‘ದೇಹಾಭಾವಾಚ್ಚ ಭಾವಾಚ್ಚ ನಿಭೋಗಿತ್ವಂ ಚ ದುಃಖಿತಾಂ । ಯಾಂತ್ಯಮುಕ್ತಾ ನೋ ಭಯಂ ಚ ಮುಕ್ತಾನಾಂ ವಶಿತಾ ಯತಃ ॥’** ಎನ್ನುವ ಶ್ರುತಿಯಿಂದ ಮುಕ್ತನಿಗೆ ವಶ್ಯಪ್ರಕೃತಿತ್ವವಿದ್ದುದರಿಂದ ಅಂದರೆ ಪ್ರಕೃತ್ಯಧೀನತ್ವವಿಲ್ಲದಿರುವುದರಿಂದ ವಹ್ನ್ಯಾದಿಗಳನ್ನು ಅಧೀನೀಕರಿಸಿಕೊಂಡಿರತಕ್ಕ ಪುರುಷನಿಗೆ ವಹ್ನಿಯೋಗದಿಂದ ಉಂಟಾಗುವ ದುಃಖಾಭಾವದಂತೆ ಮುಕ್ತನಿಗೆ ಬಾಹ್ಯದೇಹವನ್ನು ಅಂಗೀಕರಿಸಿದರೂ ದುಃಖಾಭಾವವು ಕೂಡುತ್ತದೆ. ಏವಂಚ ಶ್ರುತಿಯಿಂದಲೇ ವಿಶೇಷಕ್ಲೃಪ್ತಿಯಿದ್ದುದರಿಂದ ಮೋಕ್ಷಕ್ಕೆ

ಪುರುಷಾರ್ಥತ್ವವು ಯುಕ್ತವು ) (೯ನೇ ಅಧಿಕರಣದಲ್ಲಿ— ಮುಕ್ತರಿಗೆ ಸತ್ಯಸಂಕಲ್ಪತ್ವದಿಂದಲೂ ಜಗತ್ಸೃಷ್ಟ್ಯಾದಿಗಳಿಗೆ ಈಶ್ವರಧರ್ಮತ್ವವನ್ನು ಹೇಳಿದರಿಂದಲೂ ಮುಕ್ತರು ಜಗತ್ಸೃಷ್ಟ್ಯಾದಿ ವ್ಯಾಪಾರಗಳನ್ನು ಹೊಂದುತ್ತಾರೋ ಇಲ್ಲವೋ ಎಂದು ಸಂದೇಹವು ಬಂದರೆ— ಹೊಂದುತ್ತಾರೆಂದು ಪೂರ್ವಪಕ್ಷವು; ಇಲ್ಲವೆಂದು ಸಿದ್ಧಾಂತವು ಅದರಲ್ಲಿ), ಸಮಸ್ತಕಾರ್ಯಂ=ಸೃಷ್ಟ್ಯಾದಿ ಸಮಸ್ತಕಾರ್ಯವು, (ಎಂದು ಪೂರ್ವಪಕ್ಷವು;) ವಿಶೇಷಕ್ಲೃಪ್ತಿಃ=ವಿಶೇಷಕ್ಲೃಪ್ತಿಯು, (ಎಂದು ಸಿದ್ಧಾಂತನ್ಯಾಯವು.) (ಅಂದರೆ— ಮುಕ್ತನಿಗೆ ಸತ್ಯಸಂಕಲ್ಪತವಿದ್ದುದರಿಂದ ಕಾಮಿತ ಸಮಸ್ತ ವಸ್ತುಗಳ ಪ್ರಾಪ್ತಿಯು ಕೂಡುವುದರಿಂದ ಸೃಷ್ಟ್ಯಾದಿ ಸಮಸ್ತವ್ಯಾಪಾರಗಳಿಗೆ ಮುಕ್ತಕಾಮ್ಯತ್ವವಿದ್ದುದರಿಂದ ಸೃಷ್ಟ್ಯಾದಿ ಸಮಸ್ತಕಾರ್ಯಗಳೂ ಕೂಡುತ್ತವೆ. ಏವಂಚ ಮುಕ್ತರಿಗೆ ಸತ್ಯಸಂಕಲ್ಪತ್ವವಿದ್ದುದರಿಂದ ಜಗತ್ಸೃಷ್ಟ್ಯಾದಿ ಸಮಸ್ತವ್ಯಾಪಾರಗಳೂ ಪ್ರಾಪ್ತಗಳಾಗುವುದರಿಂದ ಲಕ್ಷಣಸೂತ್ರವು ಯುಕ್ತವಲ್ಲ ಎಂದರೆ— **'ವ್ಯಾಪಾರೋ ಜಗತೋ ವಿಷ್ಣೋರ್ಮುಕ್ತಾನಾಂ ತು ಸ್ವಭೋಗತಃ । ನ ಹಿ ಸ್ವರ್ಣಂ ಶುದ್ಧಮಪಿ ವಹ್ನಿಕಾರ್ಯಕರಂ ಭವೇತ್ । ಅಯೋಗ್ಯಶಕ್ತಿತಸ್ತ್ವೇವ ನಾಧಿಕಾನಂದಸಂಭವಃ । ನ ಹಿ ಕಶ್ಚಿತ್ಸುಶಕ್ತೋಽಪಿ ಚಕಾರಾಚೇತನಂ ಚಿತಿಂ । ನ ಚ ಕಾಮಸ್ತಥಾಭೂಯಾತ್ತತಃ ಸ್ಯಾತ್ಸತ್ಯಕಾಮಿತಾ'** ॥ ಎನ್ನುವ ಶ್ರುತಿಯಿಂದ ವಿಶೇಷಕ್ಲೃಪ್ತಿಯಿದೆ. ಮತ್ತು **'ಮುಕ್ತಾನಾಂ ನ ಜಗದ್ಯತ್ನಃ ತಥಾಪಿ ವಿಬುಧಃ ಸದಾ । ಮುಕ್ತಾನಂ ತು ನಿಯಂತ ರಸ್ತೇಷಂ ಬ್ರಹ್ಮಾಸ್ಯ ನೈ ಹರಿಃ'** ॥ ಎಂದು ವಿಶೇಷಕ್ಲೃಪ್ತಿಯು. ಏವಂಚ ಶ್ರುತಿಯಿಂದಲೇ ವಿಶೇಷಕ್ಲೃಪ್ತಿಯಿದ್ದುದರಿಂದ ಮುಕ್ತನಿಗೆ ಜಗದ್ವ್ಯಾಪಾರವಿಲ್ಲದಿರುವುದರಿಂದ ಲಕ್ಷಣಸೂತ್ರವು ಯುಕ್ತವು.) (೧೦ನೇ ಅಧಿಕರಣದಲ್ಲಿ— ಲೋಕದರ್ಶನ ಅಲೌಕಿಕತ್ವಗಳಿಂದ ಮುಕ್ತನು ಆನಂದಾದಿ ವೃದ್ಧಿಹ್ರಾಸವುಳ್ಳವನೋ ಅಲ್ಲವೋ ಎಂದು ಸಂದೇಹವು ಬಂದರೆ— ವೃದ್ಧ್ಯಾದಿಗಳುಳ್ಳವನೆಂದು ಪೂರ್ವಪಕ್ಷವು; ಇಲ್ಲವೆಂದು ಸಿದ್ಧಾಂತವು. ಅದರಲ್ಲಿ) ವಶಿತಾ ಚ=ವಶಿತ್ವವು, (ಎನ್ನುವುದು ಪೂರ್ವಪಕ್ಷನ್ಯಾಯವು;) ಕೃತನಿಶ್ಚಯಶ್ಚ=ಮಾಡಲ್ಪಟ್ಟ ನಿಶ್ಚಯವುಳ್ಳವನು, (ಎಂದು ಸಿದ್ಧಾಂತನ್ಯಾಯವು.) (ಅಂದರೆ— ಮುಕ್ತನಿಗೆ ವಶಿತ್ವವಿದ್ದುದರಿಂದ, ಕಾಮಿತವಾದುದೆಲ್ಲವೂ ಪ್ರಾಪ್ತವಾಗುವುದರಿಂದ, ಆನಂದಾದಿಗಳ ಅಭಿವೃದ್ಧಿಯು ಇಷ್ಟವಾಗಿರುವುದರಿಂದ, ಅಕಾಮನೆಯು ಕೂಡದಿರುವುದರಿಂದ ಸುಖಾಭಿವೃದ್ಧಿಯು ಯುಕ್ತವು. ಏವಂಚ ಮುಕ್ತನೂ ವಶಿಯಾದುದರಿಂದ, ವೃದ್ಧ್ಯಾದಿಗಳು ಇದ್ದುದರಿಂದ, ಮುಕ್ತಿಯು ಸಂಸಾರಸಮಾನಧರ್ಮವುಳ್ಳದ್ದಾದುದರಿಂದ ಪುರುಷಾರ್ಥವಲ್ಲ,) (ಎಂದರೆ— ಮುಕ್ತನಾದುದರಿಂದ ಉಪಾಸನಾದಿ ವಿಷಯದಲ್ಲಿ ಶ್ರಮಾದಿದೋಷಗಳು ಇಲ್ಲದಿರುವುದರಿಂದಲೂ, ಅಭ್ಯಾಸಾಧಿಕ್ಯದಿಂದಲೂ, ದೋಷರಾಹಿತ್ಯದಿಂದಲೂ, ವಿಷ್ಣುವಿನಲ್ಲಿ ಸ್ನೇಹಾಧಿಕ್ಯದಿಂದಲೂ, ಅಸಾಧನರೂಪವಾದುದಾಗ್ಯೂ ಉಪಾಸನಾದಿಗಳು ಮುಕ್ತನಿಂದ ಮಾಡಲ್ಪಡುತ್ತವೆ. ಆ ಉಪಾಸನಾದಿಗಳೇ ಪರಮಸುಖರೂಪವಾಗಿರುವುದರಿಂದ ಫಲರೂಪವಾಗಿದೆ. **'ಅಭ್ಯಾಸಪಾಟವಾತ್ಸ್ನೇಹಾದಶ್ರಮತ್ವಾದುಪಾಸನಾ । ಭಕ್ತಿಶ್ಚ ಸುಖರೂಪೈವ ಮುಕ್ತಾನಾಂ ನ ತು ಸಾಧನಂ'** ॥ ಎಂದು ಶ್ರುತಿಯಿದೆ. ಏವಂಚ ಕೃತಕೃತ್ಯರಾದುದರಿಂದ ಮುಕ್ತರಿಗೆ ವೃದ್ಧ್ಯಾದಿಗಳು ಇಲ್ಲದಿರುವುದರಿಂದ ಮೋಕ್ಷಕ್ಕೆ ಪುರುಷಾರ್ಥತ್ವವು ಯುಕ್ತವು ) (೧೧ನೇ ಅಧಿಕರಣದಲ್ಲಿ— ಮುಕ್ತನು ಪುನಃ ಹಿಂದೆ ತಿರುಗಿ ಸಂಸಾರಕ್ಕೆ ಬರುತ್ತಾನೋ ಇಲ್ಲವೋ ಎಂದು ಸಂದೇಹವು ಬಂದರೆ— ಹಿಂದೆ ತಿರುಗಿ ಸಂಸಾರಕ್ಕೆ ಬರುತ್ತಾನೆ ಎಂದು ಪೂರ್ವಪಕ್ಷವು; ಇಲ್ಲವೆಂದು ಸಿದ್ಧಾಂತವು. ಅದರಲ್ಲಿ) ವಿಶ್ವಸಂಭಾವನಾ=ಸಮಸ್ತ ಕಾಲಕ್ಕೆ ಸಮಾಪ್ತಿಸಂಭಾವನೆಯು, ಇವುಗಳು, ಅನ್ಯಪಕ್ಷೇ=ಪೂರ್ವಪಕ್ಷದಲ್ಲಿ, ಯುಕ್ತಯಃ = ಯುಕ್ತಿಗಳು, ಮಾಹಾತ್ಮ್ಯಂ = ಮಹಿಮೆಯು,

ಇತ್ಯೇವ=ಇವುಗಳೇ, ಸುನಿರ್ಣಯಾರ್ಥಾಃ = ಸಿದ್ಧಾಂತನಿರ್ಣಯವೇ ಪ್ರಯೋಜನವಾಗಿವುಳ್ಳವುಗಳು (ಸಿದ್ಧಾಂತಯುಕ್ತಿಗಳು.) (ಅಂದರೆ— ಯದ್ಯಪಿ ಸ್ವರ್ಗಾದಿಗಳಲ್ಲಿರತಕ್ಕವರು ಯುಗ ಮನ್ವಂತರಾದಿಗಳಲ್ಲಿ ಆವಾಸಮಾಡುವವರಾದುದರಿಂದ ಪುನಃ ಅವರಿಗೆ ಆವೃತ್ತಿಯು ಕೂಡಿದರೂ ಮುಕ್ತರು ಸಮಸ್ತಕಾಲದಲ್ಲಿಯೂ ಆವಾಸಮಾಡುವವರಾದುದರಿಂದ ಅವರಿಗೆ ಪುನರಾವೃತ್ತಿಯು ಕೂಡಲಾರದು. ಆದಾಗ್ಯೂ ಭಾರತಯುದ್ಧದಲ್ಲಿ ತ್ರಯೋದಶಿಗೆ (೧೩ ದಿನಗಳಿಗೆ) ಪಂಚದಶೀತ್ವವನ್ನು (೧೫ ದಿವಸವಾಗುವಿಕೆಯನ್ನು) ನಿರ್ದೇಶಮಾಡಿದರಿಂದ ಆ ದಿನದಲ್ಲಿ ಮೂರು ತಿಥಿಗಳು ಏಕಕಾಲದಲ್ಲಿ ಸಮಾಪ್ತಿಯಾಗುವುದರಂತೆ ಕಾಲವು ಅನಂತವಾದುದಾಗ್ಯೂ ಎಲ್ಲಾ ಕಾಲಕ್ಕೂ ಏಕಕಾಲದಲ್ಲಿ ಕೆಲವುವೇಳೆ ಸಮಾಪ್ತಿಯು ಕೂಡುವುದರಿಂದ ಮುಕ್ತನಿಗೂ ಪುನರಾವೃತ್ತ್ಯಾಶಂಕೆಯು. ಏವಂಚ ಸಮಸ್ತಕಾಲಕ್ಕೂ ಸಮಾಪ್ತಿಯಾಗಬಹುದೆನ್ನುವ ಸಂಭಾವನೆಯಿಂದ ಮುಕ್ತನಿಗೆ ಪುನರಾವೃತ್ತ್ಯಾಶಂಕೆಯು ಎಂದರೆ— '**ಅಶೇಷಕಾಮಸತ್ಯತ್ವಾನ್ಮುಕ್ತಾನಾಂ ನ ಪುನರ್ಭವಃ । ಯಸ್ಮಾತ್ಸ ಕಾಮಯೇದೇವ ನಿತ್ಯಮಾತ್ಮಾ ಪುನರ್ಭವಂ**' ಎನ್ನುವ ಶ್ರುತಿಯಿಂದ ಮುಕ್ತರಿಗೆ ಸತ್ಯಕಾಮತ್ವಾದಿ ಮಹಿಮೆಯಿಂದ ಪುನರಾವೃತ್ತಿಯಿಲ್ಲದಿರುವುದರಿಂದ ಮೋಕ್ಷಕ್ಕೆ ಪುರುಷಾರ್ಥತ್ವವು ಯುಕ್ತವು.

## 'ಓಂ ಅತ ಏವ ಚಾನನ್ಯಾಧಿಪತಿಃ ಓಂ' ‖ ಸೂ. ೯ ‖

ಈ ಸೂತ್ರವನ್ನು ಅವಂಧ್ಯ (ಸತ್ಯ) ಸಂಕಲ್ಪತ್ವವಿದ್ದುದರಿಂದಲೇ ಜ್ಞಾನಿಗೆ ಮತ್ತೊಬ್ಬನು ಅಧಿಪತಿಯು ಇರುವುದಿಲ್ಲ ಅಂದರೆ— ಮುಕ್ತನು ಯಾರಿಗೂ ನಿಯಮ್ಯನಲ್ಲ, ಎಂದು ಒಬ್ಬನು ವ್ಯಾಖ್ಯಾನಮಾಡುತ್ತಾನೆ ಇದು ದುಷ್ಟವೆನ್ನುವ ಅಭಿಪ್ರಾಯದಿಂದ ಹೇಳುತ್ತಾರೆ—

ಮೂ ‖ ಅನನ್ಯಭೃತ್ಯತ್ವಮಿಹೋದಿತೇಭ್ಯ-
ಸ್ತ್ವನ್ಯಸ್ಯ ಭೃತ್ಯತ್ವನಿವಾರಣಾಯ ।
ಪತಿಂ ಯದೇಷಾಮಪಿ ವಿಷ್ಣುಮಾಹ
ಹ್ಯುತಾಮೃತತ್ವಸ್ಯ ಪತಿತ್ವವಾಗ್ಘರೇಃ ‖ ೩ ‖

ಅ ‖ ಇಹ=ಈ ಸೂತ್ರದಲ್ಲಿ. ಅನನ್ಯಭೃತ್ಯತ್ವಂ=ಮುಕ್ತನಿಗೆ ಅನ್ಯಾಧಿಪತಿಯು ಇಲ್ಲವೆಂದು ಯಾವುದು ಅನನ್ಯಭೃತ್ಯತ್ವವು ಹೇಳಲ್ಪಟ್ಟದೋ ಅದಾದರೂ, ಉದಿತೇಭ್ಯಃ=ಯಾರು ಯಾವ ಮುಕ್ತನಿಗೆ ಅಧಿಪತಿಯಾಗಿ ಶಾಸ್ತ್ರದಲ್ಲಿ ಹೇಳಲ್ಪಟ್ಟದ್ದಾರೋ ಅವರದೆಶೆಯಿಂದ, ಅನ್ಯಸ್ಯ=ಇತರರಿಗೆ, ಭೃತ್ಯತ್ವನಿವಾರಣಾಯ=ಭೃತ್ಯನು ಮುಕ್ತನು ಆಗುವುದಿಲ್ಲ, ಎಂದು ಪ್ರತಿಪಾದಿಸುವುದಕ್ಕಾಗಿ. (ಸರ್ವಥಾ ಅಧಿಪತಿಯನ್ನು ನಿವಾರಣಮಾಡುವುದಕ್ಕಾಗಿ ಅಲ್ಲ. ಏಕೆಂದರೆ ಅನ್ಯಪದವನ್ನು ಪ್ರಯೋಗಮಾಡಿರುತ್ತಾರೆ— ಅಧಿಪತಿಯೇ ಇಲ್ಲವೆಂದು ಅಭಿಪ್ರಾಯವಾದರೆ 'ಅನಧಿಪತಿಃ' ಎಂದು ಹೇಳುತ್ತಿದ್ದರು.) (ಕಾರಣಾಂತರದಿಂದಲೂ ಹೀಗೆಯೇ ಆಗಬೇಕೆನ್ನುತ್ತಾರೆ.) ಯತ್=ಯಾವಕಾರಣದಿಂದ, ಹರೇಃ=ಶ್ರೀ ಹರಿಗೆ, ಅಮೃತತ್ವಸ್ಯ ಉತ ಪತಿತ್ವವಾಕ್=ಮುಕ್ತವರ್ಗಕ್ಕೆ ನಿಯಾಮಕತ್ವಪ್ರತಿಪಾದಕವಾದ ವಚನವು, (ಅಂದರೆ— '**ಉತಾಮೃತತ್ವಸ್ಯೇಶಾನಃ**' ಎನ್ನುವ ಶ್ರುತಿಯು) ವಿಷ್ಣುಂ = ಶ್ರೀ ಹರಿಯನ್ನು, ಏಷಾಂ=ಈ ಮುಕ್ತರಿಗೆ, ಪತಿಮಪಿ=ಪತಿಯನ್ನಾಗಿ, ಆಹ=ಹೇಳುತ್ತದೆ. (ಆದುದರಿಂದಲೂ ಹಿಂದೆ ಹೇಳಿದ್ದೇ ಸೂತ್ರಾರ್ಥವು. ಬೇರೆಯಲ್ಲ.)

**ಶಾ ||** ಸ. ರ. ವಿ— (1) ಯಾವ ಮುಕ್ತನಿಗೆ ವಿಷ್ಣು ಮೊದಲಾದ ಎಷ್ಟು ಅಧಿಪತಿಗಳು 'ಇಯದಾಮನಾತ್' ಇತ್ಯಾದಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುತ್ತಾರೋ ಆತನಿಗೆ ಅವರಿಂದ ಮತ್ತೊಬ್ಬನು ನಿಯಾಮಕನು ಸಂಸಾರಿಗೆ ತನ್ನಿಂದ ಅಧಮನು ಇದ್ದಂತೆಯೇ ಯಾವಾಗಲೂ ಇಲ್ಲ ಎನ್ನುವುದೇ ಈ ಸೂತ್ರದಲ್ಲಿ ವಿವಕ್ಷಿತವಾಗಿದೆ. ಆ ಮುಕ್ತನಿಗೆ ಯಾರೊಬ್ಬನೂ ಅಧಿಪತಿಯು ಇಲ್ಲವೆಂದು ವಿವಕ್ಷಿತವಾಗಲಿಲ್ಲ. ಹಾಗೆ ಇದ್ದರೆ ಶ್ರೀಹರಿಗೆ ಮುಕ್ತರ ಆಧಿಪತ್ಯವನ್ನು ಹೇಳತಕ್ಕ 'ಉತಾಮೃತತ್ವಸ್ಯೇಶಾನಃ' ಎನ್ನುವ ಶ್ರುತಿಯಿಂದ ವಿರೋಧವು ಬರುವುದು ಆ ಸೂತ್ರದಲ್ಲಿ ಮುಕ್ತನಿಗೆ ಅಧಿಪತಿಶೂನ್ಯತ್ವವೇ ವಿವಕ್ಷಿತವಾಗಿದ್ದರೆ 'ಅಧಿಪತಿರಸ್ಯ ನಾಸ್ತಿ' ಎನ್ನುವುದರಿಂದಲೇ ಪೂರ್ಣವಾಗಿರುವುದರಿಂದ 'ಅನಧಿಪತಿಃ' ಎಂದು ಸೂತ್ರವು ಇರಬೇಕಿತ್ತು. 'ಅನನ್ಯಾಧಿಪತಿಃ' ಎಂದು ಇಲ್ಲದೆಹೋಗುತ್ತಿತ್ತು. ಅನ್ಯಶಬ್ದಕ್ಕೆ ವೈಯರ್ಥ್ಯವು. ॥ ೩ ॥

ಅನುಮಾನದಿಂದಲೂ ಈ ಅರ್ಥವನ್ನು ಸಮರ್ಥಿಸುತ್ತಾರೆ—

**ಮೂ ||** ಏತೇಽಪಿ ಚಾನ್ಯಾಧಿಪತಿತ್ವಯುಕ್ತಾ
ವಿಷ್ಣ್ವನ್ಯಚಿತ್ತ್ವೇನ ಯಥಾ ಪುಮಾಂಸಃ ।
ಪ್ರಸಿದ್ಧಿಭಾಜಸ್ತ್ವಿತಿ ಚಾನುಮೈವ
ಹ್ಯಭೀಷ್ಟಸಿದ್ಧ್ಯೈ ಭವತೀಹ ನಿಶ್ಚಯಾತ್ ॥ ೪ ॥

**ಅ ||** ಏತೇಽಪಿ=ಈ ಮುಕ್ತರು, ಅನ್ಯಾಧಿಪತಿತ್ವಯುಕ್ತಾಃ=('ಅನ್ಯಃ ಅಧಿಪತಿಃ ಯೇಷಾಂ ತೇ ಅನ್ಯಾಧಿಪತಯಃ ತೇಷಾಂ ಭಾವಃ' ಎನ್ನುವ ವ್ಯುತ್ಪತ್ತಿಯಿಂದ) ಅನ್ಯಾಧಿಪತಿತ್ವದಿಂದ ಯುಕ್ತರು, (ಅಂದರೆ— ಅನ್ಯ ನಿಯಮ್ಯರು) ವಿಷ್ಣ್ವನ್ಯಚಿತ್ತ್ವೇನ=ವಿಷ್ಣ್ವನ್ಯತ್ವದಿಂದಲೂ ಜೀವತ್ವ ದಿಂದಲೂ; ಪ್ರಸಿದ್ಧಿಭಾಜಃ=ಅನ್ಯ ನಿಯಮ್ಯರಾಗಿ ಪ್ರಸಿದ್ಧಿಯನ್ನು ಹೊಂದಿದ, ಯಥಾಪುಮಾಂಸಃ= ಸಂಸಾರಿಪುರುಷರಂತೆ, ಇತಿ ಚ ಅನುಮೈವ=ಈ ಅನುಮಾನವೇ, ಇಹ=ಮುಕ್ತರಲ್ಲಿ,ನಿಶ್ಚಯಾತ್ ನಿಶ್ಚಯವಾಗಿಯೂ, ಅಭೀಷ್ಟಸಿದ್ಧ್ಯೈ = ಸ್ವೋತ್ತಮ, ನಿಯಮ್ಯತ್ವರೂಪವಾದ ಅಭೀಷ್ಟದ ಸಿದ್ಧಿಗೋಸ್ಕರ, ಭವತಿ=ಆಗುತ್ತದೆ. ಹಿ=ವ್ಯಾಪ್ತಿಪಕ್ಷಧರ್ಮತೆಗಳು ಪ್ರಮಿತಗಳಾಗಿವೆ. ॥ ೪ ॥

ಕೇವಲ ವಿಷ್ಣುವಿಗೇನೇ ಮುಕ್ತಾಧಿಪತ್ಯವಲ್ಲ, ಮತ್ತೆ ಮುಕ್ತಬ್ರಹ್ಮಾದಿಗಳಿಗೂ ತಮ್ಮ ತಮ್ಮಕ್ಕಿಂತ ಅವರರಾದ ಮುಕ್ತರ ಆಧಿಪತ್ಯವಿದೆ ಎನ್ನುತ್ತಾರೆ. ಅಥವಾ ಮುಕ್ತರಿಗೆ ಶ್ರೀ ಹರಿಯು ಮಾತ್ರ ಅಧಿಪತಿಯಲ್ಲ. ಹರಿಯಿಂದ ಇತರರಾದ ಸ್ವೋತ್ತಮರಾದ ಇತರರೂ ಕೂಡ ಯಥಾಯೋಗ್ಯವಾಗಿ ಅಧಿಪತಿಗಳಾಗಿರುತ್ತಾರೆ ಎನ್ನುತ್ತಾರೆ—

**ಮೂ ||** ಮುಕ್ತಸ್ವಕೀಯಾವರಯಂತೃತಾಸ್ತಿ
ಮುಕ್ತಾವಪಿ ಬ್ರಹ್ಮಪುರಸ್ಸರಾಣಾಂ ।
ಅನೇನ ದೇವೇನ ತಥಾಮುನಾ ಚ
ಹೀಷ್ಟೇ ಪರಾರ್ವಾಕ್ತನಲೋಕಿನಾಮಿತಿ ॥ ೫ ॥
ಫಲಂ ಶ್ರುತಿರ್ಜ್ಞಾನತ ಆಹ ಮುಕ್ತಾ-
ವೇತಚ್ಚ ಸರ್ವಾಶುಭನಾಶಲಿಂಗಾತ್ ।
ಲೋಕಾಧಿಪತ್ಯಂ ಚ ವಿಧಾತುರೇವ
ಸರ್ವಾತ್ಮನೇಶ್ಯಾಹ ತುರಶ್ರುತಿಶ್ಚ ॥ ೬ ॥

ಅ ॥ ಬ್ರಹ್ಮಪುರಸ್ಸರಾಣಾಮಪಿ = ಬ್ರಹ್ಮನೇ ಮೊದಲಾದವರಿಗೂ ಕೂಡ, ಮುಕ್ತೌ = ಮುಕ್ತಿಯಲ್ಲಿ, ಮುಕ್ತಸ್ವಕೀಯಾವರಯಂತೃತಾ=ಮುಕ್ತರಾದ, ತಮ್ಮಿಂದ ಕೂಡಿಕೊಂಡು ಮುಕ್ತಿಯನ್ನು ಹೊಂದಿರತಕ್ಕ, ತಮ್ಮಿಂದ ಅವರರಾದವರನ್ನು ಕುರಿತು ನಿಯಾಮಕತ್ವವು, ಅಸ್ತಿ=ಇದೆ. (ಅಮುಕ್ತರನ್ನು ಕುರಿತು ಯಂತೃತ್ವವು ಸರ್ವಥಾ ಇಲ್ಲ. ಮುಕ್ತರಲ್ಲಿಯೂ ಕೂಡ ಕಲ್ಪಾಂತರದಲ್ಲಿ ಮುಕ್ತರಾದವರನ್ನೂ ತಮ್ಮ ಕಲ್ಪದಲ್ಲಿಯೇ ಮುಕ್ತರಾದವರಲ್ಲಿ ಉತ್ತಮರಾದವರನ್ನೂ ಸಮರನ್ನೂ ಕುರಿತು ಕೂಡ ನಿಯಾಮಕತ್ವವಿಲ್ಲ.) (ಇದು ಯಾವುದರಿಂದ ಎಂದರೆ—) ಅನೇನ=ಚಕ್ಷುರಂತಸ್ಥನಾದ, ದೇವೇನ=ಪ್ರಸನ್ನನಾದ, ಶ್ರೀಹರಿಯಿಂದ ತಥಾ=ಹಾಗೆಯೇ, ಅಮುನಾ = ಆದಿತ್ಯಾಂತರ್ಗತನಾದ ಶ್ರೀಹರಿಯಿಂದ, ಪರಾವಾರ್ಕ್ತನಲೋಕಿನಾಂ = ಪರಾವರಲೋಕಗಳಲ್ಲಿರತಕ್ಕ (ಅಂದರೆ— ಉತ್ತಮಗಳಾದ ಸ್ವರ್ಗಾದಿಗಳಲ್ಲಿಯೂ, ಮುಕ್ತಿಯಲ್ಲಿಯೂ, ಕೆಳಗಿನದ್ದಾದ ಪಾತಾಳಾದಿ ಲೋಕಗಲ್ಲಿಯೂ ಇರತಕ್ಕ ಮುಕ್ತರಿಗೆ, ಈಷ್ಟೇ=ನಿಯಾಮಕನಾಗಿರುತ್ತಾನೆ. ಇತಿ ಶ್ರುತಿಃ=ಈ ಶ್ರುತಿಯು, ಜ್ಞಾನತಃ=ಜ್ಞಾನದೆಶೆಯಿಂದ, ಫಲಂ=ಮುಕ್ತನಿಯಂತೃತ್ವರೂಪವಾದ ಫಲವನ್ನು, ಆಹ=ಹೇಳುತ್ತದೆ. (ಇದರಿಂದ '**ಅಥ ಯ ಏವಂ ವಿದ್ವಾನ್**' ಇದೇ ಮೊದಲಾಗಿ ಉಳ್ಳ '**ಸೋಽಮುನೈವ ಯೇ ಚಾಮುಷ್ಮಾತ್ಪರಾಂಚೋ ಲೋಕಾಸ್ತಾಂಶ್ಚಾಪ್ನೋತಿ ದೇವಕಾಮಾಂಶ್ಚ ಅಥಾನೇನೈವ ಯೇ ಚೈತಸ್ಮಾದರ್ವಾಂಚೋ ಲೋಕಾಸ್ತಾಂಶ್ಚಾಪ್ನೋತಿ ಮನುಷ್ಯಕಾಮಾಂಶ್ಚ**' ಎನ್ನುವ ಶ್ರುತಿಯನ್ನು ಇಟ್ಟುಕೊಳ್ಳಬೇಕು.) (ಹಾಗಾದರೆ— ಈ ಶ್ರುತಿಯಲ್ಲಿ ಹೇಳಲ್ಪಟ್ಟ ಈ ಜ್ಞಾನಫಲವು ಮುಕ್ತಿಯಲ್ಲಿರತಕ್ಕುದು ಎನ್ನುವುದು ಯಾವುದರಿಂದ ಎಂದರೆ—) ಏತಚ್ಚ=ಸರ್ವಲೋಕಾಪ್ತಿ ಲಕ್ಷಣಫಲವು, ಮುಕ್ತೌ = ಮುಕ್ತಿಯಲ್ಲಿಯೇ. ಏಕೆಂದರೆ— ಸರ್ವಾಶುಭನಾಶಲಿಂಗಾತ್ = '**ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ**' ಎಂದು ಸರ್ವಪಾಪಕ್ಷಯರೂಪವಾದ ಮುಕ್ತತ್ವಜ್ಞಾಪಕಲಿಂಗದೆಶೆಯಿಂದ, (ಮುಕ್ತಿಯಿಂದ ಬೇರೆಕಡೆ ಸರ್ವಪಾಪರಾಹಿತ್ಯವು ಕೂಡಲಾರದು ಏಕೆಂದರೆ— ಪ್ರಾರಬ್ಧಪಾಪವು ಮೋಕ್ಷಪರ್ಯಂತವಾಗಿ ಇದೆ.) (ಯಾವುದೊಂದು ಸರ್ವಲೋಕಾಧಿಪತ್ಯವು ಮುಕ್ತಿಯಲ್ಲಿ ಜ್ಞಾನಫಲವಾಗಿ ಹೇಳಲ್ಪಟ್ಟದೋ ಅದು ಎಲ್ಲಾ ಮುಕ್ತರಿಗೂ ಎನ್ನುವ ಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ) ಲೋಕಾಧಿಪತ್ಯಂ ಚ=ಲೋಕಾಧಿಪತಿತ್ವವು, ಸರ್ವಾತ್ಮನಾ=ಸರ್ವಪ್ರಕಾರದಿಂದ, ವಿಧಾತುರೇವ=ಮುಕ್ತನಾದ ಬ್ರಹ್ಮನಿಗೇನೇ, (ಇತರರಿಗೆ ಯಥಾ ಯೋಗ್ಯವಾಗಿ,) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ-) ತುರಶ್ರುತಿಶ್ಚ=ತುರಶ್ರುತಿಯಾದರೂ, ಇತಿ=ಹೀಗೆ, ಆಹ=ಹೇಳುತ್ತದೆ. ॥ ೫ ॥ ೬ ॥

ಶ್ರುತ್ಯಂತರವನ್ನೂ ಕೂಡ ಹೀಗೆಯೇ ವ್ಯಾಖ್ಯಾನಮಾಡಬೇಕೆನ್ನುತ್ತಾರೆ.

**ಮೂ ॥ ಸರ್ವೇ ಬಲಿಂ ದೇವಗಣಾ ವಹಂತೀ**
**ತ್ಯೇತಚ್ಚ ನಾನ್ಯಸ್ಯ ತು ಯುಕ್ತಿಮೇತಿ ।**
**ಲೋಕಾ ಇತೀಹಾಪಿ ತು ಲೋಕಿನಾಂ**
**ವಚೋ ಲೋಕಾ ಇತಿ ಹ್ಯೇವ ರವಃ ಪ್ರಜಾಸು ॥ ೭ ॥**
**ಪ್ರಯುಜ್ಯತೇ ಸರ್ವಜನೈಃ ಸದೈವ**
**ತಸ್ಮಾನ್ನಿನೋ ಲೋಕಪದೇನ ಚೋಕ್ತಾಃ ।**
**ತದ್ಗಾಸ್ತು ಮುಕ್ತಾ ಇಹ ಲೋಕಶಬ್ದಾ**
**ಅನ್ಯೋನ್ಯನಾಥಾ ಇತಿ ಪೈಂಗಿನಾಂ ಶ್ರುತಿಃ ॥ ೮ ॥**

ಅ || ಸರ್ವೇ ದೇವಗಣಾಃ = ಎಲ್ಲಾ ದೇವತೆಗಳ ಸಮೂಹಗಳೂ, ಬಲಿಂ = ಪೂಜೆಯನ್ನು, ವಹಂತಿ = ಮಾಡುತ್ತಾರೆ. ಏತಚ್ಚ = ಈ ಸರ್ವದೇವಪೂಜ್ಯತ್ವವು, ಅನ್ಯಸ್ಯ = ಬ್ರಹ್ಮನಿಂದ ಇತರರಿಗೆ, ಯುಕ್ತಿಂ = ಯುಕ್ತಿಯನ್ನು, ನ ಏತಿ = ಹೊಂದುವುದಿಲ್ಲ. (ಅಂದರೆ — ಯುಕ್ತಿ ಸಿದ್ಧವಾಗುವುದಿಲ್ಲ.) (ಇದರಿಂದ **'ಸ ವೇದ ಬ್ರಹ್ಮ ಸರ್ವೇಽಸ್ಮೈ ದೇವಾ ಬಲಿಮಾವಹಂತಿ'** ಎನ್ನುವ ಶ್ರುತಿಯಲ್ಲಿ ಹೇಳಲ್ಪಟ್ಟ ಮುಕ್ತಸರ್ವದೇವಪೂಜ್ಯತ್ವವು ನಿರವಧಿಕವಾದುದು; ಮುಕ್ತನಾದ ಬ್ರಹ್ಮನಿಗೇನೇ. ಸರ್ವರಿಗೆ ಅಲ್ಲ. ಪೂಜಕರಾದ ದೇವತೆಗಳೂ ಮುಕ್ತರೇ. ಅಮುಕ್ತರಿಗೆ ಮುಕ್ತ ಸಂಬಂಧವೇ ಇಲ್ಲ. ಅಂತೂ ಮುಕ್ತರಾದ ಎಲ್ಲಾ ದೇವತೆಗಳೂ, ಎಲ್ಲಾ ಮುಕ್ತರಾದ ಅವರ ದೇವತೆಗಳಿಂದ ಪೂಜಿಸಿಕೊಳ್ಳಲ್ಪಡುತ್ತಾರೆ ಎಂದು ಹೇಳಿದಂತೆ ಆಯಿತು.) ('ತಾಂಶ್ಚಾಪ್ನೋತಿ' ಎಂದು ಹೇಳಲ್ಪಟ್ಟ ಆಪ್ತನು ಲೋಕಾಪ್ತಿಯುಳ್ಳವನು. ಸರ್ವ ಅಶುಭನಾಶಲಿಂಗದೆಶೆಯಿಂದ ಮುಕ್ತನು ಆಗಲಿ, ಆತನಿಗೆ ಇಲ್ಲಿ ಲೋಕಾಪ್ತಿಯೇ ಹೇಳಲ್ಪಡುತ್ತದೆ. ಮುಕ್ತರಾದ ಸ್ವಕೀಯ ಅವರ ಯಂತೃತ್ವವು ಹೇಳಲ್ಪಡುವುದಿಲ್ಲ, ಎಂದರೆ-) ಇಹ = ಈ ಶ್ರುತಿಯಲ್ಲಿ, ಲೋಕಾಃ ಇತಿ = ಲೋಕಾಃ ಎನ್ನುವ ಪದವು, ಲೋಕಿನಾಂ ವಚಃ = ಲೋಕದಲ್ಲಿದ್ದವರಿಗೆ ಪ್ರತಿಪಾದಕವು. ಅಪಿ = ಲೋಕಾಧಿಪತ್ಯವನ್ನು ಹೊಂದಿದವನು ಮಾತ್ರ ಮುಕ್ತನಲ್ಲ ಮತ್ತೆ ಲೋಕಪದವೂ ಕೂಡ ಲೋಕಿವಿಷಯವಾಗಿದೆ. ತು = ವೃತ್ತಿವಿಶೇಷವನ್ನು ಲಕ್ಷಣಾವೃತ್ತಿಯನ್ನಾಗಲೀ, ಮುಖ್ಯವೃತ್ತಿಯನ್ನಾಗಲೀ ತೋರಿಸುತ್ತದೆ. (ಅಂದರೆ — ಹೇಗೆ ಮಂಚಶಬ್ದವು ಮಂಚಸ್ಥ ಪುರುಷರಲ್ಲಿದೆಯೋ, ಹಾಗೆಯೇ ಲೋಕಶಬ್ದವೂ ಕೂಡ ಲೋಕಸ್ಥ ಪುರುಷರಲ್ಲಿದೆ.) (ಲಕ್ಷಣಾಬೀಜಸಂಬಂಧವು ಆಧಾರಾಧೇಯಭಾವರೂಪಾದುದು ಸ್ಪಷ್ಟವಾಗಿಯೇ ಇದೆ. ಲಾಕ್ಷಣಿಕಪದವನ್ನು ಪ್ರಯೋಗ ಮಾಡಲಿಕ್ಕೆ ಪ್ರಯೋಜನವನ್ನು ಹೇಳಬೇಕು ಎಂದರೆ — ) ಲೋಕಾ ಇತಿ ಹ್ಯೇವ = ಪ್ರಯೋಜನಾನುಸಂಧಾನವಿಲ್ಲದೇನೇ 'ಲೋಕಾಃ' ಎನ್ನುವ, ರವಃ = ಶಬ್ದವು, ಪ್ರಜಾಸು = ಲೋಕಸ್ಥ ಪ್ರಜಾ ವಿಷಯದಲ್ಲಿ, ಸರ್ವಜನೈಃ = ಎಲ್ಲಾ ಪುರುಷರಿಂದ, ಸದೈವ = ಯಾವಾಗಲೂ, ಪ್ರಯುಜ್ಯತೇ = ಪ್ರಯೋಗಿಸಲ್ಪಡುತ್ತದೆ. (ಇದು ರೂಢಲಕ್ಷಣೆಯು. ಸ್ವಾರಸಿಕಲಕ್ಷಣಾವೃತ್ತಿಯಲ್ಲ. ಆದುದರಿಂದ ಪ್ರಯೋಜನವನ್ನು ಹುಡುಕುವುದರಿಂದ ಏನು ಪ್ರಯೋಜನವು? ಅಥವಾ ಲಕ್ಷಣಾದಿಂದ ಏನು ಪ್ರಯೋಜನವು? ಏಕೆಂದರೆ — ಲೋಕಶಬ್ದವು ಜನರಿಗೆ ವಾಚಕವೇ ಆಗಿದೆ.) ಸರ್ವಜನೈಃ = ಶಬ್ದಶಕ್ತಿಯನ್ನು ತಿಳಿದ ಎಲ್ಲಾ ಜನರಿಂದ, ಲೋಕಾಃ ಎನ್ನುವ ಶಬ್ದವು ಮುಖ್ಯವೃತ್ತಿಯಿಂದಲೇ, ಪ್ರಜೆಗಳಲ್ಲಿ ಪ್ರಯೋಗಿಸಲ್ಪಡುತ್ತದೆ. (ಪ್ರಕಾರಾಂತರದಿಂದ ಲೋಕಶಬ್ದಕ್ಕೆ ಪುರುಷವಾಚಿತ್ವವನ್ನು ಹೇಳುತ್ತಾರೆ.) ತನ್ಮಾನಿನಃ = ಲೋಕಾಭಿಮಾನಿಗಳು, ಲೋಕಪದೇನ ಚ = ಲೋಕಪದದಿಂದ (ಅಭಿಮಾನ್ಯಧಿಕರಣನ್ಯಾಯದಿಂದ) ಉಕ್ತಾಃ = ಮುಖ್ಯವೃತ್ತಿಯಿಂದ ಹೇಳಲ್ಪಟ್ಟರುತ್ತಾರೆ. (ಲೋಕಶಬ್ದಕ್ಕೆ ಜನರಲ್ಲಿ ವೃತ್ತಿಯಿರಲಿ, ಆದಾಗ್ಯೂ ಈ ಶ್ರುತಿಯಲ್ಲಿ ಜನರನ್ನು ಹೇಳಬೇಕೆನ್ನುವ ಇಚ್ಛೆಯು ಯಾವುದರಿಂದ ತಿಳಿಯುತ್ತದೆ, ಅಷ್ಟರಿಂದಲೂ ಇಷ್ಟಸಿದ್ಧಿಯಾಗುವುದಿಲ್ಲ. ಈ ಶ್ರುತಿಗೆ ಮುಕ್ತವಿಷಯತ್ವವದೆ ಎನ್ನುವಲ್ಲಿ ಪ್ರಮಾಣವಿಲ್ಲ. 'ಆಪ್ನೋತಿ' ಎಂದು ಆಪ್ತಿಯೇ ಇಲ್ಲಿ ಹೇಡಲ್ಪಡುತ್ತದೆ. ಅದರ ನಿಯಮನವು ಇಲ್ಲಿ ಹೇಳಲ್ಪಡುವುದಿಲ್ಲ ಎಂದರೆ — ) ಇಹ = **'ಯೇ ಚಾಮುಷ್ಮಾತ್'** ಎನ್ನುವ ಶ್ರುತಿಯಲ್ಲಿ, ತದ್ಗಾಃ = ಪರಾವರಲೋಕಗಳಲ್ಲಿರತಕ್ಕ, ಮುಕ್ತಾಸ್ತು = ಮುಕ್ತರೇ, ಲೋಕಶಬ್ದಾಃ = ಲೋಕಎನ್ನುವ ಶಬ್ದವುಳ್ಳವರು (ಶಬ್ದವಾಚ್ಯರು) ಅನ್ಯೋನ್ಯನಾಥಾಃ = ಉತ್ತಮರು ಅಧಮರಾದ ಸ್ವಕೀಯರಿಗೆ ನಿಯಾಮಕರು, ಇತಿ = ಈಪ್ರಕಾರ, ಈ ಶ್ರುತಿವ್ಯಾಖ್ಯಾನರೂಪವಾದ, ಪೈಂಗಿನಾಂ ಶ್ರುತಿಃ = ಪೈಂಗಿಗಳ ಶ್ರುತಿಯು (ಇದೆ.) ಅಂದರೆ 'ಅನೇನ' ಇತ್ಯಾದಿ ಪೂರ್ವಶ್ರುತಿಗೆ ಉದಾಹೃತ ವ್ಯಾಖ್ಯಾನರೂಪವಾದ ಈ ಪೈಂಗಿಶ್ರುತಿಯಿಂದ

ಲೋಕಶಬ್ದವು ಲೋಕಸ್ಥ ಪಜಾಪರವೆಂತಲೂ ಆಪ್ತಿಯಿಂದರೆ ನಿಯುಮುನವೆಂದೂ ಸ್ಪಷ್ಟವಾಗಿ ತಿಳಿಯುತ್ತದೆ. ಆದುದರಿಂದ ಹಿಂದೆ ಹೇಳಿದ ವ್ಯಾಖ್ಯಾನವು ಯುಕ್ತವೇ.) ॥ ೭ ॥ ೮ ॥

ಪ್ರಕಾರಾಂತರದಿಂದ ಈ ಶ್ರುತಿಯಲ್ಲಿ ಮುಕ್ತನಿಗೆ ಮುಕ್ತನಿಯಾಮಕತ್ವವು ಪ್ರತಿಪಾದಿತ ವಾಗಿದೆ ಎಂದು ತೋರಿಸುತ್ತಾ ಹೇಳುತ್ತಾರೆ—

ಮೂ ॥ ಅಲೋಕಶಬ್ದೇನ ವಿಮುಕ್ತಿಭಾಜೋ
ವಾಚ್ಯಾಃ ಪದಂ ತಾದೃಗಪೀಹ ಯುಕ್ತಂ ।
ಲೋಕಾಭಿಧಾಶ್ಚಾಪಿ ಯತೋ ಹಿ ಮುಕ್ತಾಃ
ಪ್ರಕಾಶರೂಪಾಃ ಸತತಂ ಚ ಸರ್ವೇ ॥ ೯ ॥

ಅ ॥ ಅಲೋಕಶಬ್ದೇನ = ಅಲೋಕಶಬ್ದದಿಂದ, (ಲೋಕದೋಷವನ್ನು ಅತಿಕ್ರಮಿಸಿದ ರಿಂದಲೂ ದೇಹವಿಲ್ಲದಿರುವುದರಿಂದಲೂ) ವಿಮುಕ್ತಿಭಾಜಃ=ಮೋಕ್ಷವನ್ನು ಹೊಂದಿದವರು, ವಾಚ್ಯಾಃ=ಹೇಳಲ್ಪಡುತ್ತಾರೆ. (ಅದರಿಂದ ಪ್ರಕೃತವೇನಾಯಿತೆಂದರೆ-)ಇಹ=ಇಲ್ಲಿ, **'ಪರಾಂಚೋ ಲೋಕಾಃ'** (ಉಪರಿತನ ಲೋಕಗಳು) **'ಅರ್ವಾಂಚೋ ಲೋಕಾಃ'** (ಕೆಳಗಿನ ಲೋಕಗಳು) ಎನ್ನುವಲ್ಲಿ 'ತಾದೃಗಪಿಪದಂ=ಅಲೋಕಃ ಎನ್ನುವ ಪದವು, ಯುಕ್ತಂ=ಭೇದಿಸಲಿಕ್ಕೆ ಯುಕ್ತವು. (ಲೋಕಾಲೋಕಶಬ್ದಗಳು ಸಂಹಿತೆಯಲ್ಲಿ ಸಮಾನರೂಪಗಳಾಗಿವೆ.) (ಅಂತೂ ಈ ಶ್ರುತಿ ಯಲ್ಲಿ ಅಲೋಕ ಎಂದು ಪದಭೇದ ಮಾಡಿಕೊಂಡರೆ ಪ್ರಾಕೃತ ದೇಹರಹಿತರಾದ ಮುಕ್ತರು ಈ ಶಬ್ದದಿಂದ ಮುಖ್ಯವೃತ್ತಿಯಿಂದಲೇ ಪ್ರತಿಪಾದಿತರಾಗುತ್ತಾರೆ.) (ಯೋಗವೃತ್ತಿಯಿಂದಲೂ ಲೋಕಶಬ್ದಕ್ಕೆ ಮುಕ್ತರಲ್ಲಿ ವೃತ್ತಿಯು ಕೂಡುತ್ತದೆ ಎನ್ನುತ್ತಾರೆ.) ಯತಃ=ಯಾವಕಾರಣದಿಂದ, ಸರ್ವೇ ಮುಕ್ತಾಃ=ಎಲ್ಲಾ ಮುಕ್ತರೂ, ಸತತಮಪಿ=ನಿರಂತರದಲ್ಲಿಯೂ, ಪ್ರಕಾಶರೂಪಾಃ= ಪ್ರಕಾಶಸ್ವರೂಪರಾಗಿ ಪ್ರಸಿದ್ಧರಾಗಿರುತ್ತಾರೋ, ಆದುದರಿಂದಲೂ, ಮುಕ್ತಾಃ = ಮುಕ್ತರು, ಲೋಕಾಭಿಧಾಶ್ಚ=(ಲೋಕವೆಂದು ಹೆಸರುಳ್ಳವರು, ಲೋಕೃದರ್ಶನೇ ಎನ್ನುವುದರಿಂದ ಅಚ್ ಪ್ರತ್ಯಯವನ್ನು ಮಾಡಿದರೆ ಲೋಕವೆಂದು ರೂಪವು. ದರ್ಶನವೆಂದರೆ ಪ್ರಕಾಶವು.) ॥ ೯ ॥

ಮೊದಲು ಲೋಕಾಭಿಮಾನಿಗಳಾದ ಯಾವ ಮುಕ್ತರೋ ಅವರು ಇಲ್ಲಿ ಲೋಕಶಬ್ದಾ ರ್ಥರು ಎಂದು ಯಾವುದು ಹೇಳಲ್ಪಟ್ಟದೋ ಅದು ಸರಿಯಲ್ಲ. ಅವರು ಉತ್ತಮರಷ್ಟೆ! ಮುಕ್ತಂಗೆ ಅವರ ನಿಯಮವು ಕೂಡಲಾರದು. ಎಂದರೆ—

ಮೂ ॥ ಬ್ರಹ್ಮೈವ ಲೋಕಾಧಿಪತಿರ್ವಿಮುಕ್ತೋ
ಭವೇದಿತಿ ಪ್ರಾಹ ತುರಶ್ರುತಿಶ್ಚ ।
ನಚೇಹ ವಿಜ್ಞಾನಫಲಂ ಸಮುಕ್ತಂ
ಲೋಕಾಧಿಪತ್ಯಂ ರವಿಬಿಂಬಗೇ ಹರೌ ॥ ೧೦ ॥
ಉಕ್ತಂ ಪೃಥಕ್ತ್ವಚ್ಚ ಪುರೈವ ಯಸ್ಮಾ-
ದ್ಭೇದೋ ಮುನೇತ್ಯಾದಿ ಚ ಸಮ್ಯಗುಕ್ತಃ ।
ತ್ವಪ್ರತ್ಯಯಂ ಚಾಪ್ಯತಿಹಾಯ ನೈವ
ರೂಪೇಣ ತೇನೇತಿ ಭವೇದಿಹಾರ್ಥಃ ॥ ೧೧ ॥

ಭವತ್ಯಸಾವಿತ್ಯಣುಶಬ್ದ ಮತ್ರ
ವಿಹಾಯ ವಾಕ್ಯಾನಿ ಬಹೂನಿ ದೋಷಃ ।
ಅತೋ ಜಗದ್ವ್ಯಾಪೃತಿಮಂತ ಏವ
ಬ್ರಹ್ಮಾದಯಃ ಪೂರ್ಣಗುಣಾಃ ಕ್ರಮೇಣ ॥ ೧೨ ॥
ಅಮಂದಮಾನಂದಮಜಸ್ರಮೇವ
ಭುಂಜಂತ ಆತ್ಮೀಯಮುಜಾತ್ಸಮಾಸತೇ ॥ ೧೩ ॥

ಅ ॥ ವಿಮುಕ್ತಃ=ವಿಮುಕ್ತನಾದ, ಬ್ರಹ್ಮೈವ=ಚತುರ್ಮುಖ ಬ್ರಹ್ಮನೇ, ಲೋಕಾಧಿಪತಿಃ=ಲೋಕಗಳಿಗೆ ಅಧಿಪತಿಯೆಂದು, ಭವೇತ್=ಆಗುವನು. ಇತಿ=ಹೀಗೆ, ತುರಶ್ರುತಿಶ್ಚ=ತುರಶ್ರುತಿಯು, ಪ್ರಾಹ=ಹೇಳುತ್ತದೆ. (ತಥಾಚ ಬ್ರಹ್ಮನು ಸರ್ವಜೀವೋತ್ತಮನಾದುದರಿಂದ ಉತ್ತಮರಾದ ಲೋಕಾಭಿಮಾನಿಗಳಾದ ಮುಕ್ತರಾದ ದೇವತೆಗಳ ನಿಯಾಮಕತ್ವವು ಬ್ರಹ್ಮನಿಗೆ ಯುಕ್ತವೆ.) (ಹೀಗೆ ತಮ್ಮ ಮತದಿಂದ ಶ್ರುತಿಯನ್ನು ವ್ಯಾಖ್ಯಾನಮಾಡಿ ಆದಿತ್ಯ ಮಂಡಲದಲ್ಲಿ ಪರಮೇಶ್ವರನನ್ನು ಉಪಾಸನೆ ಮಾಡಿದ ಜ್ಞಾನಿಗೆ ಪರಲೋಕಾಧಿಪತ್ಯವು ಆಗುತ್ತದೆ. ಚಕ್ಷುಸ್ಸಿನಲ್ಲಿ ಉಪಾಸನಮಾಡಿದ ಜ್ಞಾನಿಗೆ ಅರ್ವಾಕ್ತನಲೋಕಗಳ ಆಧಿಪತ್ಯವು ಬರುತ್ತದೆ ಎಂದು ಪರರ ವ್ಯಾಖ್ಯಾನವೋ ಅದನ್ನು ನಿರಾಕರಿಸುತ್ತಾರೆ.) ಇಹ=ಈ ಶ್ರುತಿಯಲ್ಲಿ, ಲೋಕಾಧಿಪತ್ಯಂ=ಲೋಕಾಧಿಪತಿತ್ವವು, ವಿಜ್ಞಾನಫಲಂ=ಜ್ಞಾನದ ಫಲವೆಂದು, ಸಮುಕ್ತಂ= ಚೆನ್ನಾಗಿ ಉಕ್ತವಾಗಿದೆ ಎನ್ನುವ ವ್ಯಾಖ್ಯಾನವು, ನ ಚ=ಯುಕ್ತವಲ್ಲ (ಏಕೆಂದರೆ—) ಯಸ್ಮಾತ್=ಯಾವ ಕಾರಣದಿಂದ, ತತ್ = ಲೋಕಾಧಿಪತ್ಯವು, ಪುರೈವ = ಮೊದಲೇ ಪೂರ್ವವಾಕ್ಯದಲ್ಲಿಯೇ, (ಅಂದರೆ ಆದಿತ್ಯನಲ್ಲಿರತಕ್ಕ ಶ್ರೀ ಹರಿಯನ್ನುಪಕ್ರಮಿಸಿ **'ಸ ಏಷ ಯೇ ಚಾಮುಷ್ಮಾತ್ಪರಾಂಚೋಲೋಕಾಸ್ತೇಷಾಂ ಚೇಷ್ಟೇ ದೈವಕಾಮಾನಾಂ ಚ'** ಹಾಗೆಯೇ ಅಕ್ಷಿಯಲ್ಲಿರತಕ್ಕ ಶ್ರೀ ಹರಿಯನ್ನುಪಕ್ರಮಿಸಿ **'ಸ ಏಷ ಯೇ ಚೈತಸ್ಮಾದರ್ವಾಂಚೋ ಲೋಕಾಸ್ತೇಷಾಂ ಚೇಷ್ಟೇ ಮನುಷ್ಯಕಾಮಾನಾಂ ಚ'** ಎನ್ನುವ ಈ ಎರಡು ವಾಕ್ಯಗಳಿಂದ ಲೋಕಾಧಿಪತ್ಯವು ಅಸಾಧಾರಣ ಧರ್ಮವಾಗಿ) ರವಿಬಿಂಬಗೇ ಹರೌ=ಸೂರ್ಯಬಿಂಬದಲ್ಲಿರತಕ್ಕ ಹರಿಯಲ್ಲಿ ಚಕ್ಷುರಂತರ್ಗತನಾದ ಶ್ರೀ ಹರಿಯಲ್ಲಿಯೂ ಕೂಡ, ಪೃಥಕ್=ವಿಭಾಗದಿಂದ, ಉಕ್ತಂ=ಹೇಳಲ್ಪಟ್ಟದೋ ಆದುದರಿಂದ ಲೋಕಾಧಿಪತ್ಯವು ಜ್ಞಾನಿಗೆ **'ಇಹ ಪರಾಂಚೋ ಲೋಕಾಃ'** ಇತ್ಯಾದಿ ಶ್ರುತಿಯು ಹೇಳುತ್ತದೆ ಎನ್ನುವ ವ್ಯಾಖ್ಯಾನವು ಸರಿಯಲ್ಲ.) (ಅಂದರೆ— ಸಮಸ್ತ ಲೋಕಾಧಿಪತ್ಯವು ಭಗವದ್ಧರ್ಮವೆಂದು ಪೂರ್ವವಾಕ್ಯದಲ್ಲಿಯೇ ಹೇಳಿದರಿಂದ ಅದು ಜ್ಞಾನಿಗೆ ಕೂಡುವುದಿಲ್ಲ. ಭಗವದ್ಧರ್ಮವೂ ಜ್ಞಾನಿಗೆ ಬರುತ್ತದೆಂದು ಅಂಗೀಕರಿಸಿದರೆ ದೋಷವೇನೆಂದರೆ- ಹಾಗಾದರೆ (೧) ಶ್ರೀ ಹರಿಯು ತನ್ನಲ್ಲಿರುವ ಸರ್ವಲೋಕಾಧಿಪತ್ಯವನ್ನು ಬಿಟ್ಟು ಜ್ಞಾನಿಗೆ ಕೊಡುತ್ತಾನೋ (೨)ಅಥವಾ ಜ್ಞಾನಿಯನ್ನು ಅವಾಂತರೇಶ್ವರನನ್ನಾಗಿ ಮಾಡುತ್ತಾನೋ, (೩) ಅಥವಾ ಜ್ಞಾನಿಯು ತಾದಾತ್ಮ್ಯವನ್ನು (ಶ್ರೀ ಹರಿಯಿಂದ ಐಕ್ಯವನ್ನು) ಹೊಂದುತ್ತಾನೋ, ೧ನೇದ್ದು ಕೂಡಲಾರದು. ಎಲ್ಲಾ ಶ್ರುತ್ಯಾದಿಗಳಲ್ಲಿ ಭಗವದೈಶ್ವರ್ಯವು ನಿತ್ಯವೆಂದು ಅವಗತವಾಗಿದೆ. ಮತ್ತು ಒಬ್ಬ ಜ್ಞಾನಿಗೆ ತನ್ನಲ್ಲಿರತಕ್ಕ ಆಧಿಪತ್ಯವನ್ನು ಕೊಟ್ಟರೆ ಇತರರಿಗೆ ಏನನ್ನು ಕೊಡುವನು. ಮತ್ತು ಉಪಾಸಕನಲ್ಲಿ ಸರ್ವಪಾಪಕ್ಷಯಲಿಂಗವೂ ಕೂಡಲಾರದು. ಆದುದರಿಂದಲೇ ೨ನೇದ್ದು ಕೂಡಲಾರದು. ಹಿರಣ್ಯಗರ್ಭನಲ್ಲಿ ಪಾಪರಾಹಿತ್ಯವು ಕೂಡುತ್ತದೆ ಎಂದು ಹೇಳಕೂಡದು. ಪಾಪ್ಮಶಬ್ದದಿಂದ ಪ್ರಕೃತ್ಯಾದಿ ಬಂಧವು ವಿವಕ್ಷಿತವಾಗಿದೆ. ಏಕೇದರೆ—

**'ಸ ಏಷ ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ'** ಎಂದು ಸರ್ವಾಶುಭ ರಾಹಿತ್ಯವು ವಿವಕ್ಷಿತ ವಾಗಿದೆ. ಅದು ಅಮುಕ್ತಬ್ರಹ್ಮನಲ್ಲಿಯೂ ಕೂಡಲಾರದು. (ಇನ್ನೊಂದನ್ನು ನಿರಾಕರಿಸುತ್ತಾರೆ.) ವಿದುಷಃ=ಜ್ಞಾನಿಗೆ, (ಪರಮೇಶ್ವರನ ದೆಶೆಯಿಂದ) ಭೇದತ್ವ=ಭೇದವಾದರೂ, ಅಮುನೇತ್ಯಾದಿ ಚ= (ಆದಿತ್ಯಮಂಡಲಸ್ಥನಾದ ಪ್ರಸನ್ನನಾದ ಶ್ರೀಹರಿಯ ನಿಮಿತ್ತದಿಂದಲೂ ಚಕ್ಷುರ್ಗತನಾದ ಪ್ರಸನ್ನ ನಾದ ಶ್ರೀ ಹರಿಯ ನಿಮಿತ್ತದಿಂದಲೂ) ಅಮುನೇತ್ಯಾದಿ ವಾಕ್ಯದಿಂದ, ಸಮ್ಯಕ್=ಸ್ಪಷ್ಟವಾಗಿ, ಉಕ್ತಃ=ಹೇಳಲ್ಪಟ್ಟದೆ. (ಆ ಶ್ರೀ ಹರಿಯ ಸ್ವರೂಪನೇ ಆದವನು ಆ ಶ್ರೀ ಹರಿಯ ಪ್ರಸಾದ ದಿಂದ ಶ್ರೀ ಹರಿಯ ಧರ್ಮವುಳ್ಳವನು ಆಗುವುದಿಲ್ಲ.) ('ಅಮುನಾ ಅನೇನ' ಎನ್ನುವುದಕ್ಕೆ ಪ್ರಸ ನ್ನನಾದ ಶ್ರೀ ಹರಿಯ ನಿಮಿತ್ತದಿಂದ ಎನ್ನುವ ವ್ಯಾಖ್ಯಾನವನ್ನು ಮಾಡುವುದಾದರೆ ಹಿಂದೆ ಹೇಳಿದ ರೀತಿಯಿಂದ ಜೀವೇಶ್ವರಭೇದಪರವು ಆಗುತ್ತಿತ್ತು. ಹೀಗೆ ವ್ಯಾಖ್ಯಾನಮಾಡುವುದಿಲ್ಲ ಮತ್ತೆ ಅಮುನಾ = ಈ ರೂಪದಿಂದ, ಅಮುಷ್ಯ = ಈ ಶ್ರೀ ಹರಿಯ ತಾದಾತ್ಮವನ್ನುಹೊಂದಿ ಹಾಗೆಯೇ, ಅನೇನ=ಈ ರೂಪದಿಂದ, ಅಸ್ಯ=ಈ ಶ್ರೀಹರಿಯ ತಾದಾತ್ಮ್ಯವನ್ನುಹೊಂದಿ, ಎಂದು ವ್ಯಾಖ್ಯಾನಮಾಡುತ್ತೇವೆ. ಹೀಗೆ ವ್ಯಾಖ್ಯಾನಮಾಡಿದರೆ ಈ ವಾಕ್ಯವು ಭೇದಪರವಾಗುವುದಿಲ್ಲ. ಎಂದರೆ—) ತ್ವಪ್ರತ್ಯಯಂ=ತ್ವಪ್ರತ್ಯಯವನ್ನು, ಚ=ತ್ವಪ್ರತ್ಯಯ ಸಮಾನಾರ್ಥಕವಾದ ತಲ್ ಪ್ರತ್ಯಯಾದಿಗಳನ್ನು, ಅಪಿ=ರೂಪೇಣ ಎನ್ನುವ ಪದವನ್ನು, ಅತಿಹಾಯ=ಬಿಟ್ಟು, (ಪ್ರವೃತ್ತ ವಾದ) ಇಹ=ಈ ಶ್ರುತಿಯಲ್ಲಿ, 'ತೇನ ರೂಪೇಣೇತಿ ಅರ್ಥಃ=ಅಮುನಾರೂಪೇಣ ಅನೇನ ರೂಪೇಣ' ಎಂದು ಅಭೇದರೂಪವಾದ ಅರ್ಥವು. ನೈವ ಭವೇತ್ = ಸರ್ವಥಾ ಆಗಲಾ ರದು. ಜೀವನಿಗೆ ಪರಮಾತ್ಮನಿಂದ ಐಕ್ಯವೆನ್ನುವ (ಪರರ ಅಭಿಲಾಷೆಯು ಕೂಡುತ್ತಿತ್ತು. ಈ ಶ್ರುತಿಯು ಐಕ್ಯವನ್ನು ಹೇಳುವುದಿಲ್ಲ. ಏಕೆಂದರೆ— ಈ ಶ್ರುತಿಯಲ್ಲಿ ಅದಸ್ತ್ವೇನ, 'ಅದಸ್ತಯಾ, ಇದಂತ್ವೇನ, ಇದಂತಯಾ' ಎಂದು ಭಾವವಾಚಕ ಪ್ರತ್ಯಯವಿರುತ್ತಿದ್ದರೆ ಮತ್ತು ಅಮುನಾ ರೂಪೇಣ ಆತ್ಮನಾ, ಅನೇನ ರೂಪೇಣ ಆತ್ಮನಾ ಎನ್ನುವ ರೂಪಾದಿ ಪದ ವಾದರೂ ಇರುತ್ತಿದ್ದರೆ ಆಗ ಈ ಐಕ್ಯರೂಪವಾದ ಅರ್ಥವು ಶ್ರುತ್ಯಭಿಪ್ರೇತವೆಂದು ತಿಳಿಯುತ್ತಿದ್ದೆವು ಹೀಗೆ ಹಿಂದೆಹೇಳಿದ ಶ್ರುತಿಯಲ್ಲಿ ತ್ವಪ್ರತ್ಯಯವಾಗಲೀ,ರೂಪಪದವಾಗಲೀ ಐಕ್ಯಜ್ಞಾಪಕವಾದುದು ಇಲ್ಲ.) (ಹಾಗಾದರೆ— ಭಾವಪ್ರಧಾನ ನಿರ್ದೇಶಗಳು ಬಹಳ ಕಡೆ ಕಾಣುತ್ತವೆ. ಆದುದರಿಂದ ಭಾವಾರ್ಥಕ ಪ್ರತ್ಯಯವಿಲ್ಲದಿದ್ದರೂ ಆ ಅರ್ಥವು ಆಗುವುದು. ಅಧ್ಯಾಹಾರವುಳ್ಳ ವಾಕ್ಯಗಳು ಎಷ್ಟೋ ಇರುತ್ತವೆ. ಆದುದರಿಂದ ರೂಪೇಣ ಇತ್ಯಾದಿ ಪದಗಳ ಅಧ್ಯಾಹಾರವು ಆಗುವುದು. ಏನು ದೋಷವು ಎಂದು ಹೇಳಕೂಡದು. ಐಕ್ಯರೂಪವಾದ ವಾಕ್ಯಾರ್ಥವು ನಿಶ್ಚಿತವಾಗಿದ್ದರೆ ಹಿಂದೆ ಹೇಳಿದ ರೀತಿಯಾಗಿ ಅಧ್ಯಾಹಾರಾದಿಗಳು ಕೂಡುತ್ತಿದ್ದುವು. ಐಕ್ಯತಾತ್ಪರ್ಯನಿಶ್ಚಾಯಕ ವಾದುದು ಇಲ್ಲಿ ಯಾವ ಪದವೂ ಇಲ್ಲ ಎನ್ನುವ ಅಭಿಪ್ರಾಯವುಳ್ಳವರಾಗಿ ದೋಷಾಂತರವನ್ನು ಹೇಳುತ್ತಾರೆ.) ಅತ್ರ=ಈ ಶ್ರುತಿಯಲ್ಲಿ, ಅಸೌಭವತಿ=ಇವನು ಆಗುತ್ತಾನೆ. (ಅಂದರೆ— ಈ ಶ್ರುತಿಯಲ್ಲಿ ಜ್ಞಾನಿಗೆ ಶ್ರೀ ಹರಿಯ ತಾದಾತ್ಮ್ಯಪ್ರಾಪ್ತಿಯಾಗಿ ಈಶ್ವರಸಂಬಂಧಿಯಾದ ಸರ್ವ ಲೋಕಾಧಿಪತ್ಯವು ಜ್ಞಾನಿಗೆ ಆಗುತ್ತದೆ ಎನ್ನುವ ಅರ್ಥವು ವಿವಕ್ಷಿತವಾಗಿದ್ದರೆ ಆಗ) ಅತ್ರ=ಈ ಅರ್ಥವನ್ನು ಪ್ರತಿಪಾದಿಸುವ ವಿಷಯದಲ್ಲಿ (ಈ ಜ್ಞಾನಿಯು) ಅಸೌ=ಈ ಪರಮಾತ್ಮನು, ಭವತಿ= ಆಗುತ್ತಾನೆ. (ಎಂದಿಷ್ಟೇ ಹೇಳಬೇಕಿತ್ತು. ಸೋಽಮುನೈವ ಇತ್ಯಾದಿಗಳನ್ನು ಹೇಳಬೇಕಾಗುತ್ತಿರ ಲಿಲ್ಲ. ತಾದಾತ್ಮ್ಯ ಪ್ರಾಪ್ತಿಯಾದರೆ ಶ್ರೀ ಹರಿಯ ಧರ್ಮವು ಸ್ವತಃ ಸಿದ್ಧವಾಗಿದೆ.) ಈ ಜ್ಞಾನಿಯು, ಅಣು ಶಬ್ದಂ=ಅಸೌ ಭವತಿ ಪರಮಾತ್ಮನು ಆಗುತ್ತಾನೆ ಎನ್ನುವ) ಅಲ್ಪಶಬ್ದ ವನ್ನು, ವಿಹಾಯ=ಬಿಟ್ಟು, ಬಹೂನಿ ವಾಕ್ಯಾನಿ=(ಸೋಽಮುನೇತ್ಯಾದಿ) ಬಹು ವಾಕ್ಯಗಳನ್ನು

ಪ್ರಯೋಗ ಮಾಡತಕ್ಕ ಶ್ರುತಿಗೆ ಅಕುಶಲತ್ವರೂಪವಾದ, ದೋಷಃ = ದೋಷವು (ಬರುವುದು.) (ಯಾರೊಬ್ಬನೂ ಅಲ್ಪವಾದ ಪ್ರಯತ್ನದಿಂದ ಸಿದ್ಧಿಸತಕ್ಕ ಅರ್ಥದಲ್ಲಿ ಮಹಾಪ್ರಯತ್ನ ವನ್ನು ಮಾಡುವವನು ಅಭಿಜ್ಞರಿಂದ ಆದರಿಸಲ್ಪಡುವುದಿಲ್ಲ) (ಮತ್ತು ಇಲ್ಲಿ ಪರಮೇಶ್ವರನು ಸಗುಣನು ವಿವಕ್ಷಿತನೋ, ನಿರ್ಗುಣನೋ, ಸಗುಣನು ವಿವಕ್ಷಿತನಾದರೆ— ಜ್ಞಾನಿಗೆ ಸಗುಣ ತಾದಾತ್ಮ್ಯವನ್ನು ಪರರು ಅಂಗೀಕರಿಸಲಿಲ್ಲ. ಎರಡನೇದ್ದು ಕೂಡಲಾರದು. ನಿರ್ಗುಣನಿಗೆ ಆದಿತ್ಯಾದಿಗಳ ನಿಯಮನಾದಿಗಳು ಕೂಡಲಾರವು. ಲೋಕಾಧಿಪತ್ಯಾದಿ ಐಶ್ವರ್ಯವೂ ಕೂಡ ಲಾರದು. ಆದುದರಿಂದ ನಿರ್ಗುಣ ತಾದಾತ್ಮ್ಯವನ್ನು ಹೊಂದಿದವನಿಗೆ ಸರ್ವಲೋಕಾಧಿಪತ್ಯವೂ ಬರಲಾರದು) (ಅಪವ್ಯಾಖ್ಯಾನ ನಿರಾಕರಣವನ್ನು ಉಪಸಂಹಾರ ಮಾಡುತ್ತಾ ಪಾದಾರ್ಥವನ್ನು ಸಂಕ್ಷೇಪದಿಂದ ಹೇಳುತ್ತಾರೆ) ಅತಃ=ಆದುದರಿಂದ, ಬ್ರಹ್ಮಾದಯಃ=ಬ್ರಹ್ಮನೇ ಮೊದಲಾದ ವರು ಮುಕ್ತರು, ಜಗದ್ವ್ಯಾಪ್ರುತಿಮಂತ ಏವ=ಜಗತ್ತಿನ ವ್ಯಾಪಾರವುಳ್ಳವರೇ. (ಅಂದರೆ—ತಮ್ಮ ಸಂಗಡ ಮುಕ್ತಿಯನ್ನು ಹೊಂದಿದ ಅವರರಿಗೆ ನಿಯಾಮಕರೇ.) ಕ್ರಮೇಣ = ಕ್ರಮದಿಂದ, ಪೂರ್ಣಗುಣಾಃ = ಪರಿಪೂರ್ಣಗಳಾದ ಗುಣಗಳುಳ್ಳವರು. ಅಮಂದಂ = ಪೂರ್ಣವಾದ, ಆತ್ಮೀಯಂ = ತನ್ನದ್ದಾದ, ಆನಂದಂ = ಆನಂದವನ್ನು, ಅಜಸ್ರಮೇವ=ನಿರಂತರದಲ್ಲಿಯೂ, ಅಜಾತ್ = ಶ್ರೀ ಹರಿಯ ಪ್ರಸಾದದಿಂದ, ಭುಂಜಂತ ಏವ = ಅನುಭವಿಸುವವರಾಗಿಯೇ ಅಜಾತ್ = ಪರಮೇಶ್ವರನಿಂದ, (ಪರಮೇಶ್ವರನನ್ನು ಬಿಡದೆ) ಸಮಾಸತೇ = (ವೈಕುಂಠಾದಿ ಲೋಕಗಳಲ್ಲಿ) ಇರುತ್ತಾರೆ.

ತಾ || ಸ. ರ. ವಿ.— (1) 'ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ । ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ । ಅಥ ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ । ಅಥ ಯ ಏತದೇವಂ ವಿದ್ವಾನ್ ಸಾಮಗಾಯತ್ಯುಭೌ ಸಾಮ ಗಾಯತಿ ಸೋಽಮುನೈವ ಸ ಏಷ ಯೇ ಚಾಮುಷ್ಮಾತ್ಪರಾಂಚೋಲೋಕಾಸ್ತಾಂಶ್ಚಾಪ್ನೋತಿ ದೇವಕಾಮಾಂಶ್ಚಾಥಾನೇನೈವ ಯೇ ಚೈತದ ಸ್ಮಾದರ್ವಾಂಚೋ ಲೋಕಾಂಸ್ತಾಂಶ್ಚಾಪ್ನೋತಿ ಮನುಷ್ಯಕಾಮಾಂಶ್ಚ' ಎನ್ನುವ ಛಂದೋಗ ಶ್ರುತಿಯಲ್ಲಿ(ಅಧ್ಯಾ. ೧. ಖಂಡ ೭)ಆದಿತ್ಯನಲ್ಲಿಯೂ ಅಕ್ಷಿಯಲ್ಲಿಯೂ ಇರತಕ್ಕ ವಿಷ್ಣುಜ್ಞಾನಫಲವಾ ದರೂ ಮೇಲಿನ ಮತ್ತು ಕೆಳಗಿನ ಲೋಕಗಳ ಆಧಿಪತ್ಯವು ಸರ್ವಪಾಪಗಳ ನಿವೃತ್ತಿವಿಶಿಷ್ಟವಾದುದು ತೋರುತ್ತದೆ. ಇದಾದರೂ ಸರ್ವಾಶುಭನಾಶ ಲಿಂಗದೆಶೆಯಿಂದ ಮುಕ್ತಿಯಲ್ಲಿಯೇ ಎಂದಂಗೀ ಕರಿಸಬೇಕು. ಅಮುಕ್ತನಿಗೆ ಸರ್ವಪಾಪಗಳಿಂದ ನಿವೃತ್ತಿಯು ಕೂಡಲಾರದು. ಜ್ಞಾನಫಲ ವಾದ ಲೋಕಾಧಿಪತಿತ್ವವು ಜ್ಞಾನತಾರತಮ್ಯದೆಶೆಯಿಂದ ತಾರತಮ್ಯದಿಂದಲೇ ಸಿದ್ಧಿಸುತ್ತದೆ. ಅದರಲ್ಲಿ ಸಮಗ್ರವಾದ ಲೋಕಾಧಿಪತ್ಯವು ಸಂಪೂರ್ಣಜ್ಞಾನವುಳ್ಳ, ಮುಕ್ತನಾದ ಬ್ರಹ್ಮನಿಗೇನೇ ಎನ್ನುವ ವಿಷಯದಲ್ಲಿ 'ಲೋಕಾಧಿಪತ್ಯಂ' ಎನ್ನುವ ತುರಶ್ರುತಿಯನ್ನು ಹೇಳಿದರು. (2) 'ತಾ ಯೋ ವೇದ ಸ ವೇದ ಬ್ರಹ್ಮ ಸರ್ವೇಽಸ್ಮೈ ದೇವಾ ಬಲಿಮಾವಹಂತಿ' ಎನ್ನುವ ತೈತ್ತಿರೀಯ ಈಶ್ರುತಿಯಲ್ಲಿ ವ್ಯಾಹೃತಿಗಳಿಂದ ಪ್ರತಿಪಾದ್ಯಪರಬ್ರಹ್ಮಜ್ಞಾನಫಲವಾಗಿ ಮುಕ್ತಿಯಲ್ಲಿ ಸರ್ವದೇವಪೂಜ್ಯತ್ವವು ತೋರತಕ್ಕದು ಮುಖ್ಯವಾದುದು. ಮುಕ್ತಬ್ರಹ್ಮನಿಗೇನೇ ಸಂಪೂರ್ಣ ಜ್ಞಾನವಿದ್ದುದರಿಂದ ಯಾವನಾದರೊಬ್ಬ ದೇವತೆಗೆ ಸಮಸ್ತ ದೇವತೆಗಳು ಪೂಜೆಯನ್ನು ಮಾಡು ತ್ತಾರೆನ್ನುವುದು ಕೂಡುವುದಿಲ್ಲ, ಎನ್ನುವ ಅಭಿಪ್ರಾಯದಿಂದ 'ಸರ್ವೇ ಬಲಿಂ' ಎಂದು ಹೇಳಿರುವರು. (3) ಲೋಕಾಧಿಪತ್ಯವು ಮುಕ್ತಬ್ರಹ್ಮಾದಿಗಳಿಗೆ ಎಂದು ಯಾವುದು ಹೇಳಿ ಯದೋ, ಅದು ಕೂಡುವುದಿಲ್ಲ. ಪ್ರಾಕೃತಲೋಕಾಧಿಪತಿತ್ವವು ಅಮುಕ್ತ ಬ್ರಹ್ಮಾದಿಗಳಲ್ಲಿಯೇ

ಯುಕ್ತವಾಗಿದೆ ಎಂದರೆ— ಲೋಕಶಬ್ದದಿಂದ ಪ್ರಾಕೃತ ಭುವನಮಾತ್ರ ಹೇಳಲ್ಪಡುವುದಲ್ಲ. **'ಲೋಕಸ್ತು ಭುವನೇ ಜನೇ'** ಎನ್ನುವ ಕೋಶದಿಂದ ಜನರೂ ಲೋಕಶಬ್ದವಾಚ್ಯರು. ಲೋಕಾಭಿಮಾನಿಗಳಿಗೂ ಲೋಕಶಬ್ದಾರ್ಥತ್ವವದೆ, ಆದುದರಿಂದ ಇಲ್ಲಿ ಯೋಗ್ಯತಾವಶದಿಂದ ಭೂರಾದಿ ಲೋಕಗಳಲ್ಲಿಯೂ, ಅತಲಾದಿ ಲೋಕಗಳಲ್ಲಿಯೂ ಇರತಕ್ಕ ಮುಕ್ತರನ್ನು ತಮ್ಮಿಂದ ನಿಯಮ್ಯರನ್ನಾಗಿ ತಿಳಿದುಕೊಂಡಿರುವ ಮುಕ್ತರಿಗೆ ನಾಥರಾದ ಉತ್ತಮ ಮುಕ್ತರೂ ಕೂಡ ಲೋಕ ಎನ್ನುವ ಶಬ್ದದಿಂದ ನಿರ್ದಿಷ್ಟರಾಗಿರುತ್ತಾರೆ ಎನ್ನುವಲ್ಲಿ **'ತದ್ಗಾಸ್ತು ಮುಕ್ತಾಃ'** ಎನ್ನುವ ಪೈಂಗಿಶ್ರುತಿಯನ್ನು ಹೇಳಿದರು. ಅಥವಾ ಪೂರ್ವನಿರ್ದಿಷ್ಟರಾದ ಮುಕ್ತರು ಲೋಕ ದೋಷಗಳನ್ನು ಅತಿಕ್ರಮಿಸಿದರಿಂದ, ಅಲೋಕತ್ವವಿದ್ದಪ್ರಯುಕ **'ಪರಾಂಚೋ ಲೋಕಾಃ'** ಎನ್ನುವಲ್ಲಿ ಅಕಾರ ಪ್ರಶ್ಲೇಷದಿಂದ 'ಅಲೋಕಾಃ' ಎಂದು ಹೇಳಲ್ಪಡುತ್ತಾರೆ. ಅಥವಾ ಮುಕ್ತರು ಪ್ರಕಾಶಸ್ವರೂಪರು ಆಗಿರುವುದರಿಂದ 'ಲೋಕಾಃ' ಎಂದು ಮುಕ್ತರಿಗೆ ನಿರ್ದೇಶವು. 'ಲೋಕ ಆಲೋಕೇ' ಎನ್ನುವ ಧಾತುವಿನಿಂದ ಪ್ರಕಾಶವೂ ಲೋಕಶಬ್ದಾರ್ಥವಾಗಿದೆ ಎಂದು **'ಅಲೋಕಶಬ್ದೇನ'** ಇತ್ಯಾದಿಗಳಿಂದ ಹೇಳಿದರು. (4) ಇಂತಹ ಲೋಕಾಧಿಪತಿತ್ವವು ಮುಕ್ತಚತುರ್ಮುಖನಿಗೇನೇ ಎನ್ನುವ ವಿಷಯದಲ್ಲಿ **'ಬ್ರಹ್ಮೈವ ಲೋಕಾಧಿಪತಿಃ'** ಎನ್ನುವ ತುರಶ್ರುತಿಯನ್ನು ಹೇಳಿದರು (5) ಹಾಗಾದರೆ— **'ಯೇ ಚಾಮುಷ್ಮಾತ್ಪರಾಂಚೋ ಲೋಕಾಃ ತೇಷಾಂ ಚೇಷ್ಟೇ ದೇವಕಾಮಾನಾಂ ಚ ಯೇ ಚೈತಸ್ಮಾದರ್ವಾಂಚೋ ಲೋಕಾಸ್ತೇಷಾಂ ಚೇಷ್ಟೇ ಮನುಷ್ಯಕಾಮಾನಾಂ ಚ'** ಎನ್ನುವುದರಿಂದ ಆದಿತ್ಯನಲ್ಲಿಯೂ ಅಕ್ಷಿಯಲ್ಲಿಯೂ ಇರತಕ್ಕ ಶ್ರೀ ಹರಿಗೆ ಯಾವುದು ಲೋಕಾಧಿಪತ್ಯವು ಹೇಳಲ್ಪಟ್ಟದೋ, ಆ ಆಧಿಪತ್ಯವೇ **'ಏತದೇವಂ ವಿದ್ವಾನ್ ಸಾಮ ಗಾಯತಿ'** ಇತ್ಯಾದಿಗಳಿಂದ ಜ್ಞಾನಫಲವಾಗಿ ಹೇಳಲ್ಪಟ್ಟದೆ; ಬೇರೆಯಲ್ಲ. ಆದಿತ್ಯಾದಿಗಳಲ್ಲಿರತಕ್ಕ ಶ್ರೀ ಹರಿಯಿಂದ ಏಕೀಭೂತನಾದ ಜ್ಞಾನಿಗೆ ಪ್ರತ್ಯೇಕವಾಗಿ ಆಧಿಪತ್ಯವು ಕೂಡುವುದಿಲ್ಲ. ಆದುದರಿಂದ ಮುಕ್ತಬ್ರಹ್ಮನಿಗೂ ಲೋಕಾಧಿಪತಿತ್ವವು ಹೇಗೆ ಹೇಳಲ್ಪಡುತ್ತದೆ? ಎಂದಾಶಂಕಿಸಿದರೆ— ಆದಿತ್ಯಾದಿಗಳಲ್ಲಿರತಕ್ಕ ಶ್ರೀ ಹರಿಯಲ್ಲಿ ಲೋಕಾಧಿಪತ್ಯವನ್ನು ಮೊದಲು ಪ್ರತ್ಯೇಕವಾಗಿಯೇ ಹೇಳಿರುತ್ತಾರೆ. ಅದನ್ನು ತಿಳಿದವನಿಗೆ ಮೇಲೆ ಲೋಕಾಧಿಪತ್ಯವು ಪ್ರತ್ಯೇಕವಾಗಿಯೇ ಉಕ್ತವಾಗಿದೆ. ಆದಿತ್ಯಸ್ಥನಾದ ಶ್ರೀ ಹರಿಯಲ್ಲಿ ಹೇಳಿದ ಲೋಕಾಧಿಪತ್ಯವು ಜ್ಞಾನಫಲವೆಂದು ಹೇಳಿದ್ದಲ್ಲ. ಯಾವುದು ರಾಜನಿಗೆ ಗ್ರಾಮಸ್ವಾಮಿತ್ವವಿದೆಯೋ, ಅದೇ ರಾಜನಿಯುಕ್ತನಾದ ಪುರುಷನಿಗೂ ಕೂಡಲಾರದು. ಆದಿತ್ಯಸ್ಥ ಹರಿಯಿಂದ ಐಕ್ಯವನ್ನು ಹೊಂದಿದ ಜ್ಞಾನಿಗೆ ಪ್ರತ್ಯೇಕವಾಗಿ ಲೋಕಾಧಿಪತ್ಯವು ಕೂಡಲಾರದು ಎಂದು ಹೇಳಕೂಡದು. **'ಸೋಽಮುನೈವ'** ಇತ್ಯಾದಿಗಳಿಂದ ಆದಿತ್ಯಾದಿಗಳಲ್ಲಿರತಕ್ಕ ಹರಿಯಿಂದ ಕೊಡಲ್ಪಟ್ಟ ಲೋಕಾಧಿಪತ್ಯವುಳ್ಳ ಜ್ಞಾನಿಗೆ ಶ್ರೀ ಹರಿಯಿಂದ ಭೇದವು ಸ್ಪಷ್ಟವಾಗಿ ಹೇಳಲ್ಪಟ್ಟದೆ. **'ಸೋಽಮುನಾ'** ಇತ್ಯಾದಿಗಳಿಂದ ಆದಿತ್ಯಸ್ಥ ಪುರುಷರೂಪದಿಂದಲೂ, ಅಕ್ಷಿಸ್ಥ ಪುರುಷರೂಪದಿಂದಲೂ ಅಂದರೆ— ಆದಿತ್ಯಾದಿಸ್ಥ ಪುರುಷರೂಪನಾಗಿ ಜ್ಞಾನಿಯು ಆಯಾವ ಲೋಕಗಳನ್ನು ಹೊಂದುತ್ತಾನೆಂದು ಹೇಳಲ್ಪಡುತ್ತದೆಂದು ಹೇಳಕೂಡದು. 'ರೂಪೇಣ' ಎಂದು ಶಬ್ದವು ಆ ಶ್ರುತಿಯಲ್ಲಿ ಶ್ರುತವಾಗಲಿಲ್ಲ. **'ಸೋಽಮುನಾ'** ಎನ್ನುವುದರಂತೆ 'ಆದಸ್ತ್ವೇನ' ಇತ್ಯಾದಿ ಇದ್ದಿದ್ದರೆ ಆದಿತ್ಯಾದಿಗಳಲ್ಲಿರತಕ್ಕ ರೂಪದಿಂದ ಐಕ್ಯವನ್ನು ಹೊಂದಿ, ಜ್ಞಾನಿಯು ಆ ಲೋಕಗಳನ್ನು ಹೊಂದುತ್ತಾನೆ ಎನ್ನುವ ಅರ್ಥವು ಯುಕ್ತವಾಗುತ್ತಿತ್ತು. ಹಾಗೆ ಇಲ್ಲಿ ಭಾವವಾಚಕವಾದ ತ್ವತಲಾದಿಪ್ರತ್ಯಯವು ಇಲ್ಲ. ಆದುದರಿಂದ ಪರರು ಹೇಳುವ ಐಕ್ಯರೂಪವಾದ ಅರ್ಥವು ಯುಕ್ತವಲ್ಲ. (6) ಮತ್ತು ಈ ಪಕ್ಷದಲ್ಲಿ

**, ಯೇ ಚಾಮುಷ್ಮಾತ್ '** ಎಂದು ಜ್ಞಾನಿಗೆ ಮುಕ್ತಿಯಲ್ಲಿ ಲೋಕಾಧಿಪತ್ಯ ಪ್ರತಿಪಾದಕಗಳಾದ ವಾಕ್ಯಗಳು ವ್ಯರ್ಥಗಳೇ ಆಗುವವು. ಮತ್ತೆ **' ಯ ಏತದೇವಂ ವಿದ್ವಾನಯಮುಸೌ ಭವತಿ '** ಇಷ್ಟು ಅಲ್ಪವಾಕ್ಯವೇ ಸಾಕಾಗುವುದು. ಏಕೆಂದರೆ— ಜ್ಞಾನಿಗೆ ಆದಿತ್ಯನಲ್ಲಿರತಕ್ಕ ಹರಿಗೂ ಅಭೇದವನ್ನು ಹೇಳಿದರಿಂದಲೇ ಆದಿತ್ಯನಲ್ಲಿರತಕ್ಕ ಶ್ರೀ ಹರಿಯಲ್ಲಿರುವ ಲೋಕಾಧಿಪತ್ಯವು ಜ್ಞಾನಿಯಲ್ಲಿ ಸಿದ್ಧವಾಗುವುದರಿಂದ **' ಅಯಮಸೌ ಭವತಿ '** ಎನ್ನುವ ವಾಕ್ಯವೇ ಇರಬೇಕಿತ್ತು. **' ಸೋಽಮುನಾ '** ಇತ್ಯಾದಿಗಳು ಬಹುವಾಕ್ಯಶ್ರವಣವೂ ವ್ಯರ್ಥವು, ಇದುಮೊದಲಾದ ದೋಷಗಳು ಜೀವೇಶಾಭೇದವಾದಿಗಳಿಗೆ ನಿವಾರಿಸಲು ಅಶಕ್ಯವು. ಆದುದರಿಂದ **' ಹಿರಣ್ಮಯಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುರ್ಹಿರಣ್ಯಕೇಶಃ ಆಪ್ರಣಖಾತ್ಸರ್ವ ಏವ ಸುವರ್ಣಸ್ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ ತಸ್ಯೋದಿತಿ ನಾಮ ಸ ಏಷ ಸರ್ವೇಭ್ಯಃ ಪಾಪ್ಮಭ್ಯಃ ಉದಿತಃ '** ಎನ್ನುವಲ್ಲಿ ಪುಂಡರೀಕಾಕ್ಷತ್ವಾದಿಗಳಿಂದ ಆದಿತ್ಯಾದಿಗಳಲ್ಲಿರತಕ್ಕವನು ಯಾವನು ವಿಷ್ಣುವು ನಿರ್ಧಾರಿಸಲ್ಪಟ್ಟಿರುತ್ತಾನೋ ಆ ಶ್ರೀ ಹರಿಯು ಪ್ರಸಾದದೆಶೆಯಿಂದ ತಮ್ಮಕ್ಕಿಂತ ಅವರರಾದ ಮುಕ್ತಜೀವರಿಗೆ ನಿಯಾಮಕರಾಗಿರುವ ಮುಕ್ತರಾದ ಬ್ರಹ್ಮಾದಿಗಳು ಕ್ರಮದಿಂದ ಪೂರ್ಣಗುಣಗಳುಳ್ಳವರು; ತಮ್ಮ ತಮ್ಮ ಪೂರ್ಣಾನಂದವನ್ನು ನಿರಂತರದಲ್ಲಿ ಅನುಭವಿಸುವವರಾಗಿ ಶ್ರೀ ಹರಿಯಿಂದ ಕೂಡಿಕೊಂಡೇ ವೈಕುಂಠಾದಿ ಲೋಕಗಳಲ್ಲಿ ಇರುತ್ತಾರೆ. ॥ ೧೦ ॥ ೧೧ ॥ ೧೨ ॥ ೧೩ ॥ ಅಧಿ. ॥ ೭ ॥

**ಅನನ್ಯಾಧಿಪತ್ಯಧಿಕರಣವು ಸಮಾಪ್ತವಾಯಿತು.**

---

ಸ. ರ. ವಿ.— ಈಗ ಶ್ರೀಮದಾಚಾರ್ಯರು ಯಾರ ಅನುಗ್ರಹದೆಶೆಯಿಂದ ಆಗಮಗಳೆನ್ನುವ ಅಪಾರವಾದ ಸಮುದ್ರವನ್ನು ದಾಟಲಿಕ್ಕೆ ಉಪಾಯಭೂತವಾದ ನ್ಯಾಯಗಳೆನ್ನುವ ಪ್ಲವರೂಪವಾದ ಈ ಗ್ರಂಥವನ್ನು ಮಾಡಿರುವರೋ, ಯಾವ ಶ್ರೀ ಹರಿಯನ್ನು ಈ ಗ್ರಂಥದಿಂದ, ಎಲ್ಲಾ ಅಶೇಷ ಪೂರ್ಣಗಳಾದ ಗುಣಗಳ ಸಮುದಾಯಕ್ಕೆ ಪಾತ್ರನನ್ನಾಗಿ ಪ್ರತಿಪಾದಿಸಿರುವರೋ, ಯಾವ ಶ್ರೀ ಹರಿಯ ದಯೆಯಿಂದ ಇಂತಹ ಅತಿಶುದ್ಧವಾದ ಜ್ಞಾನವನ್ನು ಹೊಂದಿರುವರೋ, ಯಾವ ಶ್ರೀ ಹರಿಯ ನಿರವಧಿಕ ಅನವದ್ಯ ಅನಂತ ಕಲ್ಯಾಣಗುಣಗಳಲ್ಲಿ ತನಗೆ ನಿರುಪಾಧಿಕವಾದ ಪ್ರೀತಿಯು ಇದೆಯೋ, ಅಂತಹ ಪುರುಷೋತ್ತಮನಾದ ಶ್ರೀ ನಾರಾಯಣನನ್ನು ಮತ್ತೂ ಮತ್ತು ಗ್ರಂಥಾಂತ್ಯದಲ್ಲಿಯೂ ನಮಸ್ಕರಿಸುತ್ತಾರೆ—

**ನ್ಯಾಯಸುಧಾ ॥** ಈ ಪ್ರಕಾರವಾಗಿ ಗ್ರಂಥವನ್ನು ಸಮಾಪಿಸಿರತಕ್ಕ ಶ್ರೀಮದಾಚಾರ್ಯರು ತಾನು ಪ್ರತಿಪಾದನಮಾಡಿದ ಶುಭಧರ್ಮಗಳುಳ್ಳ, ತನಗೆ ಅತಿವಿಶದವಾದ ಅನಾದಿಯಾದ ಸಾರ್ವಜ್ಞವನ್ನು ಹೊಂದಿಸಿಕೊಟ್ಟ, ನಿರುಪಾಧಿಕವಾದ, ಮೋಕ್ಷಾದಿ ಫಲಾಂತರೋಪಾಧಿರಹಿತವಾದ ಪರಮ ಪ್ರೇಮಾಸ್ಪದ ಗುಣಗಳ ಸಮುದಾಯವುಳ್ಳ ಲಕ್ಷ್ಮೀಪತಿಯಾದ ಶ್ರೀನಾರಾಯಣನನ್ನು ಮತ್ತೂ ಮತ್ತು ನಮಸ್ಕರಿಸುತ್ತಾರೆ.

**ಮೂ ॥ ನಮೋ ನಮೋಽಶೇಷವಿಶೇಷಪೂರ್ಣ-**
**ಗುಣೈಕಧಾಮ್ನೇ ಪುರುಷೋತ್ತಮಾಯ ।**
**ಭಕ್ತಾನುಕಂಪಾದತಿಶುದ್ಧಸಂವಿ-**
**ದ್ದಾತ್ರೇಽನುಪಾಧಿಪ್ರಿಯಸದ್ಗುಣಾತ್ಮನೇ ॥ ೧೪ ॥**

ಅ ॥ ಅಶೇಷ-ವಿಶೇಷಪೂರ್ಣಗುಣೈಕಧಾಮ್ನೇ=ಅಶೇಷವಿಶೇಷಗಳಿಂದ ಪೂರ್ಣಗಳಾದ ಗುಣಗಳಿಗೆ ಪ್ರಧಾನಾಶ್ರಯನಾದ, ಭಕ್ತಾನುಕಂಪಾತ್=ಭಕ್ತನಾದ ನನ್ನಲ್ಲಿ ದಯೆಯಿಂದ, ಅತಿಶುದ್ಧಸಂವಿದ್ದಾತ್ರೇ = ಅತ್ಯಂತಶುದ್ಧವಾದ ಜ್ಞಾನವನ್ನು ಕೊಡತಕ್ಕ, ಅನುಪಾಧಿಪ್ರಿಯ ಸದ್ಗುಣಾತ್ಮನೇ = ಮೋಕ್ಷಾದಿ ಉಪಾಧಿರಹಿತವಾದ, ಪ್ರಿಯುವಾದ, ಸದ್ಗುಣಸ್ವರೂಪಿಯಾದ, ಪುರುಷೋತ್ತಮಾಯ = ಕ್ಷರಾಕ್ಷರಪುರುಷರಿಂದ ಉತ್ತಮನಾದ ಲಕ್ಷ್ಮೀಪತಿಯಾದ ಶ್ರೀ ನಾರಾಯಣನಿಗೋಸ್ಕರ, ನಮೋನಮಃ=ನಮಸ್ಕಾರ ನಮಸ್ಕಾರವು ॥ ೧೪ ॥

ಹೇಗೆ ಭಗವಂತನ ಸ್ವರೂಪವಿಜ್ಞಾನವು ಸಮಸ್ತ ಪುರುಷಾರ್ಥಗಳಿಗೆ ಸಾಧನವೋ, ಹಾಗೆಯೇ ತನ್ನ ಸ್ವರೂಪವಿಜ್ಞಾನವೂ ಕೂಡ ಮೋಕ್ಷಾದಿ ಪುರುಷಾರ್ಥಸಾಧನವು. ಆದುದರಿಂದ ಅದನ್ನು ಆವಿಷ್ಕರಿಸುತ್ತಾ ಹೇಳುತ್ತಾರೆ.

**ಮೂ ॥ ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ**
**ಬಟ್ ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ ।**
**ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ**
**ವಪುರ್ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ**
**ಕೇಶವೇ ॥ ೧೫ ॥**

ಅ ॥ ಯಸ್ಯ ವಾಯೋಃ ದೇವಸ್ಯ=ಯಾವ ವಾಯುದೇವರ, ಅಲಂ ದಿವ್ಯಾನಿ=ಅತ್ಯಾಶ್ಚರ್ಯಕರಗಳಾದ, ತ್ರೀಣಿ ರೂಪಾಣಿ=ಹನುಮದ್ಭೀಮಮಧ್ವಾಖ್ಯಮೂರು ರೂಪಗಳು, ವೇದ ವಚನೇ=ಬಳಿತ್ಥೇತ್ಯಾದಿ ವೇದವಚನದಲ್ಲಿ, ಉದಿತಾನಿ=ಪ್ರತಿಪಾದಿತಗಳಾಗಿವೆಯೋ, ಯಸ್ಯ= ಯಾವವಾಯುದೇವರ, ತತ್=ಮೂಲರೂಪವೂ, ಅವತಾರರೂಪತ್ರಯವೂ ಕೂಡ, ಬಟ್= ಬಲಾತ್ಮಕವೋ, ದರ್ಶತಂ=ಜ್ಞಾನರೂಪವೋ, ಅಥವಾ ಶ್ರೀಹರಿಯನ್ನು ನೋಡತಕ್ಕುದೋ, (ಇದರಿಂದ ವ ಶಬ್ದವು ಬಲವಾಚಕವು; ಅಯ ಧಾತುವು ಗತ್ಯರ್ಥ(ಜ್ಞಾನಾರ್ಥ)ಕವು. 'ವಶ್ಚಾಸಾ ಆಯುಶ್ಚ' ಎಂದು ವಾಯುಶಬ್ದವು ವ್ಯಾಖ್ಯಾತವಾಯಿತು.) ಭರ್ಗಃ=ಭರಣಗಮನಗಳ ಯೋಗದಿಂದ ಭರ್ಗ ಶಬ್ದವಾಚ್ಯವೋ, ('ಡುಭೃಞ್ ಭರಣೇ, ಗಮ್ಲೃ ಗತೌ ಇವುಗಳಿಂದ' ಅಸುನ್ಪ್ರತ್ಯಯವು. ಡಿತ್ತಾಗಿದೆ.) (ಇದೂ ಕೂಡ 'ವಾ ಗತಿಗಂಧನಯೋಃ' ಎನ್ನುವುದರಿಂದ 'ಕೃ ವಾ ಪಾ ಜಿಮಿ ಸ್ವದಿ ಸಾಧ್ಯಶೂಭ್ಯಃ ಉಣ್' ಎನ್ನುವುದರಿಂದ ಉಣ್ ಪ್ರತ್ಯಯವು. ಧಾತುಗಳಿಗೆ ಅನೇಕಾರ್ಥಗಳು ಇದ್ದುದರಿಂದ ವಾ ಧಾತುವು ಭರಣಾರ್ಥದಲ್ಲಿಯೂ ಇದೆ. ಆದುದರಿಂದ ವಾಯುಶಬ್ದಕ್ಕೆ ವ್ಯಾಖ್ಯಾನವು) ಅಥವಾ 'ದುಷ್ಟಾನ್ ಭರ್ಜಯತೀತಿ ಭರ್ಗಃ' ಎನ್ನುವ ವ್ಯುತ್ಪತ್ತಿಯಿಂದ ದುರ್ಜನ ಸಂಹಾರಕವು, ಮಹತ್=ಶ್ರೇಷ್ಠವು. ಅಥವಾ ಮಹನೀಯವು. ('ವಯಶ್ರೇಷ್ಠತ್ವೇ' ಎನ್ನುವುದರಿಂದ ಉಣ್ ಪ್ರತ್ಯಯವು ಅಂತೂ ವಾಯುಃ) ಯಸ್ಯ = ಯಾವ ವಾಯುದೇವರ ಅವತಾರಗಳಲ್ಲಿ, ನಿಹಿತಂ = ವಿಷ್ಣುವಿನಿಂದ ಪ್ರೇರಿತವಾದ, ರೂಪವು, ಅಥವಾ ಶ್ರೀಮನ್ನಾರಾಯಣನಿಂದ ಮೂರು ಅವತಾರಕ್ಕಾಗಿ ಪ್ರೇರಿತವಾದುದು ಇತ್ಥಮೇವ = ಹೀಗೆಯೇ ಇದೆಯೋ, ಯಸ್ಯ = ಯಾವ ವಾಯು ದೇವರ, ಪ್ರಥಮಕಂ = ಪ್ರಥಮದ್ದಾದ ಹನುಮದ್ರೂಪವು, ರಾಮವಚೋನಯಂ = ರಾಮದೇವರ ವಚನವನ್ನು ಸೀತೆಯನ್ನು ಕುರಿತು ಹೊಂದಿಸಿಕೊಡತಕ್ಕುದೋ, ಅಥವಾ ರಾಮ ವಿಷಯಕಗಳಾದ ಮೂಲ ರಾಮಾಯಣಾದಿ ವಚನಗಳನ್ನು ಶಿಷ್ಯರಲ್ಲಿ ಪ್ರವರ್ತಿಸಿಕೊಂಡಿರತಕ್ಕುದೋ, ದ್ವಿತೀಯಂ ವಪುಃ=

ಎರಡನೇದ್ದಾದ ಭೀಮಾಖ್ಯರೂಪವು, ಪೃಕ್ಷಃ=ನೃಪರೆಂದು ವ್ಯಾಜಭೂತರಾದ ಶತ್ರುಗಳಾದ ದೈತ್ಯರ ಸೈನ್ಯದ ನಾಶವನ್ನು ಮಾಡಿದರಿಂದ ಪೃಕ್ಷಶಬ್ದವಾಚ್ಯವ್ರೋ, 'ಪೃತಂ ಕ್ಷಯತೀತಿ ಪೃಕ್ಷಃ' ಎಂದು ವ್ಯುತ್ಪತ್ತಿಯು;) ಯಸ್ಯ=ಯಾವ ವಾಯುದೇವರ, ಯತ್ತು ತೃತೀಯಂ= ಯಾವುದು ಮೂರನೇ ಅವತಾರವ್ರೋ, ಏತತ್=ದೇಶಕಾಲಗಳಿಂದ ಸನ್ನಿಕೃಷ್ಟವಾದ, ಮಧ್ವಃ= ಮಧ್ವಶಬ್ದಾಭಿದೇಯ ಆನಂದತೀರ್ಥಾಖ್ಯವಾದುದು. ('ಮಧು ದ್ಯೌರಸ್ತು ನಃ ಪಿತಾ' ಎನ್ನುವ ಪ್ರಯೋಗ ದೆಶೆಯಿಂದ ಮಧುಶಬ್ದವು ಸುಖವಾಚಕವು; ವ ಶಬ್ದವು ಶಾಸ್ತ್ರಾಪರಪರ್ಯಾಯವಾದ ತೀರ್ಥವಾಚಕವು. ಅವಗತ್ಯರ್ಥಕವಾದ ವಾ ಧಾತುವಿನ ದೆಶೆಯಿಂದ ಕರಣಾರ್ಥದಲ್ಲಿ ಘಞರ್ಥದಲ್ಲಿ ಕ ಪ್ರತ್ಯಯವು) ಸುಖಸಾಧನವಾದ ಶಾಸ್ತ್ರವನ್ನು ನಿರ್ಮಾಣಮಾಡಿದುದರಿಂದ ಮಧ್ವಶಬ್ದವಾಚ್ಯವಾದುದು. ಮತ್ತು ಅದರ ಸಮಾನಾರ್ಥಕವಾದ ಆನಂದತೀರ್ಥಾದಿ ಶಬ್ದ ವಾಚ್ಯವಾದುದು. ಅಮುನಾ=ಈ ವಾಯುದೇವರ ಅವತಾರರೂಪವಾದ ಶ್ರೀಮದಾನಂದತೀರ್ಥಾ ಚಾರ್ಯರಿಂದ, ಗ್ರಂಥಃ=ಬ್ರಹ್ಮಸೂತ್ರಾನುಭಾಷ್ಯಾತ್ಮಕವಾದ ಈ ಗ್ರಂಥವು, ಕೇಶವೇ=ಕೇಶವನ ವಿಷಯದಲ್ಲಿ (ಶ್ರೀಕೇಶವನನ್ನು ಉದ್ದೇಶಿಸಿಕೊಂಡು) ಕೃತಃ=ಮಾಡಲ್ಪಟ್ಟಿತು,

ಶಾ || ಸ. ರ. ವಿ.— (1) ಈ ವಿಷಯವು ಭಾವವೃತ್ತಾದಿಗಳಲ್ಲಿ ಹೇಳಲ್ಪಟ್ಟದೆ. **'ಹನುಶಬ್ದೋ ಜ್ಞಾನವಾಚೀ ಹನುಮಾನ್ ಮತಿಶಬ್ದಿತಃ | ರಾಮಸ್ಯ ಸ್ಮೃತರೂಪಸ್ಯ ವಾಚಸ್ತೇನಾನಯಂತ ಹಿ || ಭೃತಮೋ ಭೀಮ ಇತ್ಯುಕ್ತೋ ವಾಚೋ ಮಾ ಮಾತರಃ ಸ್ಮೃತಾಃ | ಯುಗಾದ್ಯಾ ಇತಿಹಾಸಶ್ಚ ಪುರಾಣಂ ಪಂಚರಾತ್ರಕಂ | ಪ್ರೋಕ್ತಾಃ ಸಪ್ತ ಶಿವಾಸ್ತತ್ರ ಶಯೋ ಭೀಮಸ್ತತಃ ಸ್ಮೃತಃ || ಮಧ್ವಿತ್ಯಾನಂದ ಉದ್ದಿಷ್ಟೋ ವೇತಿ ತೀರ್ಥಮುದಾಹೃತಂ | ಮಧ್ವ ಆನಂದತೀರ್ಥಃ ಸ್ಯಾತ್ತೃತೀಯಾ ಮಾರುತೀ ತನುಃ || ಇತಿ ಸೂಕ್ತಗತಂ ರೂಪತ್ರಯಮೇತನ್ಮಹಾತ್ಮನಃ | ಯೋ ವೇದ ವೇದವಿತ್ಸ ಸ್ಯಾತ್ತತ್ತ್ವ- ವಿತ್ತತ್ಪ್ರಸಾದತಃ** || ಇತಿ || **ಸಾಧಕೋ ರಾಮವಾಕ್ಯಾನಾಂ ತತ್ಸಮೀಪಗತಃ ಸದಾ | ಹನುಮಾನ್ ಪ್ರಥಮೋ ಜ್ಞೇಯೋ ಭೀಮಸ್ತು ಬಹುಭುಕ್ ಪಿತೋಃ (ಕ್ ರಿಪೋಃ) | ಪೃತನಾಕ್ಷಯಕಾರೀ ಚ ದ್ವಿತೀಯಸ್ತು ತೃತೀಯಕಃ | ಪೂರ್ಣಪ್ರಜ್ಞಸ್ತಥಾನಂದತೀರ್ಥ ನಾಮಾ ಪ್ರಕೀರ್ತಿತಃ || ದಶೇತಿ ಸರ್ವಮುದ್ದಿಷ್ಟಂ ಸರ್ವಂ ಪೂರ್ಣಮಿಹೋಚ್ಯತೇ | ಪ್ರಜ್ಞಾ ಪ್ರಮಿತಿರುದ್ದಿಷ್ಟಾ ಪೂರ್ಣಪ್ರಜ್ಞಸ್ತತಃ ಸ್ಮೃತಃ || ಆಸಮಂತಾತ್ಪತಿತ್ವೇನ ಗೂಢಂ ಕಲಿಯುಗೇ ಹರಿಂ | ಅಸತ್ಯಮಪ್ರತಿಷ್ಠಂತೇ ಜಗದಾಹುರನೀಶ್ವರಂ || ವದದ್ಭಿರ್ಗೂಹಿತಂ ಸಂತಂ ತೃತೀಯೋಽಸುರ್ವ್ಯಥಾಯತಿ | ಯೇನ ವಿಷ್ಣೋರ್ಹಿ ವರ್ಪಾಖ್ಯಾನ್ ಗುಣಾನಜ್ಞಾಸಿಷುಃಪರಾನ್ || ಈಶಾನಾಸಃ ಸೂರಯಶ್ಚ ನಿಗೂಢಾ- ನ್ನಿರ್ಗುಣೋಕ್ತಿಭಿಃ | ತ್ರೇತಾಯಾಂ ದ್ವಾಪರೇ ಚೈವ ಕಲೌ ಚೇತೇ ಕ್ರಮಾತ್ತ್ರಯಃ || ಏತೇಷಾಂ ಪರಮೋ ವಿಷ್ಣುರ್ನೇತಾ ಸರ್ವೇಶ್ವರಃ ಪರಃ | ಸ್ವಯಂ ತು ಬ್ರಹ್ಮ ಸಂಜ್ಞೋಽಸೌ ಪರಸ್ಮೈ ಬ್ರಹ್ಮಣೇ ನಮಃ'** ಇತ್ಯಾದಿ ಯಜುಃಸಂಹಿತೆಯಲ್ಲಿ ಹೇಳಿಯದೆ || || ೧೫ ||

ಈ ಶಾಸ್ತ್ರದಿಂದ ಪ್ರತಿಪಾದ್ಯವಾದ ವಿಷ್ಣುವಿನ ತತ್ವವನ್ನು ಸಂಕ್ಷೇಪದಿಂದ ತೋರಿಸುತ್ತಾ ಪುನಃಪುನಃ ನಮಸ್ಕರಿಸುತ್ತಾರೆ.

**ಮೂ || ನಿಃಶೇಷದೋಷರಹಿತ ಕಲ್ಯಾಣಾಖಿಲಸದ್ಗುಣ |**
**ಭೂತಿಸ್ಸ್ವಯಂಭುಶರ್ವಾದಿವಂದ್ಯಂ ತ್ವಾಂ ನೌಮಿ ಮೇ ಪ್ರಿಯಂ || ೧೬ ||**

ಅ || ನಿಃಶೇಷದೋಷರಹಿತ=ನಿಃಶೇಷಗಳಾದ ದೋಷಗಳಿಂದ ವಿರಹಿತನಾದ, ಕಲ್ಯಾಣಾಖಿಲಸದ್ಗುಣ=ಮಂಗಲಕರಗಳಾದ ಎಲ್ಲಾ ನಿರ್ದುಷ್ಟಗಳಾದ ಗುಣಗಳುಳ್ಳ ಶ್ರೀ ಹರಿಯೆ, ಭೂತಿಸ್ವಯಂಭುಶರ್ವಾದಿವಂದ್ಯಂ=ಮಹಾಲಕ್ಷ್ಮೀದೇವಿಯು-ಬ್ರಹ್ಮನು-ರುದ್ರನೂ ಇವರೇ ಮೊದಲಾದವರಿಂದ ನಮಸ್ಕರಿಸಿಕೊಳ್ಳಲ್ಪಡತಕ್ಕ, ಮೇ=ನನಗೆ, ಪ್ರಿಯಂ=ಪ್ರಿಯನಾದ, ತ್ವಾಂ=ನಿನ್ನನ್ನು, ಸರ್ವದಾ=ಯಾವಾಗಲೂ, ನೌಮಿ=ನಮಸ್ಕರಿಸುತ್ತೇನೆ. || ೧೬ ||

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನೇ ಚತುರ್ಥಾಧ್ಯಾಯಸ್ಯ
ಚತುರ್ಥಃ ಪಾದಃ

ಹೀಗೆ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ನಿರ್ಮಿಸಿಕೊಳ್ಳಲ್ಪಟ್ಟ
ಶ್ರೀಮದ್ಬ್ರಹ್ಮಸೂತ್ರಾನುವ್ಯಾಖ್ಯಾನದಲ್ಲಿ ನಾಲ್ಕನೇ ಅಧ್ಯಾಯದಲ್ಲಿ
ನಾಲ್ಕನೇ ಪಾದವು ಸಮಾಪ್ತವಾಯಿತು.

* ಲಕ್ಷ್ಮೀನಾರಾಯಣೌ ವಂದೇ ತದ್ಭಕ್ತಪ್ರವರೋ ಹಿ ಯಃ ।
ಶ್ರೀಮದಾನಂದತೀರ್ಥಾಖ್ಯೋ ಗುರುಸ್ತಂ ಚ ನಮಾಮ್ಯಹಂ || ೧ ||

ಈಶಾಯ ನಾರಾಯಣಸಂಜ್ಞಕಾಯ
ಜನ್ಮಾದಿಕರ್ತ್ರೇ ಜಗತೋ ನಮೋಽಸ್ತು ।
ವ್ಯಾಸಾಭಿಧಾನಾಯ ತಥಾ ಗುರುಭ್ಯೋ-
ಪ್ಯಾನಂದತೀರ್ಥಾಭಿಧಯಾ ಯುತೇಭ್ಯಃ || ೨ ||

ಶ್ರೀಪದ್ಮನಾಭಯತಿಸಿಂಧುಸಮುತ್ಥಿತೇಯಂ
ಸನ್ನ್ಯಾಯರತ್ನಪರಮಾವಲಿರುಜ್ವಲಾಲಂ ।
ಭೂಯಾದಶೇಷಸುಜನೌಘಸುಖೈಕಹೇತುಃ
ಸೂತ್ರಾನುಭಾಷ್ಯಪದದೀಪನದೀಪರೂಪಾ || ೩ ||

ಅಶೇಷಕಲ್ಯಾಣಗುಣೌಘಹೇತುರ್ಹರಿಃ
ಸುಖಾತ್ಮಾಖಿಲದೋಷದೂರಃ ।
ಭಕ್ತ್ಯಾ ಪ್ರಸನ್ನಸ್ಯ ಸುಖೈಷಿಣಃ ಸದಾ
ಕರೋತ್ವಭೀಷ್ಟಂ ಹಿ ರಮಾಸಹಾಯಃ || ೪ ||

---

* ಇವು ನಾಲ್ಕು ಶ್ರೀಮದಾಚಾರ್ಯರ ಸಾಕ್ಷಾಚ್ಛಿಷ್ಯರಾದ ಶ್ರೀ ಪದ್ಮನಾಭತೀರ್ಥ ಯತಿವರ್ಯ ವಿರಚಿತ ಮಂಗಲಾಚರಣ ಪದ್ಯಗಳು.

* ವಚನಪ್ರಸೂನಮಾಲಾ ಜಯತೀರ್ಥಾಖ್ಯೇನ ಭಿಕ್ಷುಣಾ ರಚಿತಾ ।
ಧ್ರಿಯತಾಂ ಹೃದಯೇ ಸದಯೇ ಕಮಲಾಮಹಿಲೇನ ಪುರುಷೇಣ ॥ ೧ ॥

ಅನುವ್ಯಾಖ್ಯಾನ್ಮೃತಾಂಬೋಧೇಃ ಸಮುತ್ಪನ್ನಾತಿನಿರ್ಮಲಾ ।
ಇಯಂ ನ್ಯಾಯಸುಧಾ ಭೌಮ್ಯೈರ್ವಿಬುಧೈಃ ಸೇವ್ಯತಾಂ ಸದಾ ॥ ೨ ॥

ಇತಿ ಶ್ರೀಮತ್ಪೂರ್ಣಪ್ರಮತಿಭಗವತ್ಪಾದಸುಕೃತೇ-
ರನುವ್ಯಾಖ್ಯಾನಸ್ಯ ಪ್ರಗುಣಜಯತೀರ್ಥಾಖ್ಯಯತಿನಾ ।
ಕೃತಾಯಾಂ ಟೀಕಾಯಾಂ ವಿಷಮಪದವಾಕ್ಯಾರ್ಥವಿವೃತೌ
ಚತುರ್ಥೇಽಧ್ಯಾಯೇಽಸ್ಮಿಂಶ್ಚರಮಚರಣಃ ಪರ್ಯವಸಿತಃ ॥ ೩ ॥

---

ಸರ್ವೇಂದ್ರಿಯಪ್ರೇರಕೇಣ ಶ್ರೀ ಪ್ರಾಣಪತಿನೇರಿತಃ ।
ಯದವೋಚಮಹಂ ತೇನ ಪ್ರೀಯತಾಂ ಕಮಲಾಲಯಃ ॥

ಜ್ಞಾನಾಬ್ಧಿರಪ್ಯವಾದೀದ್ಯತ್ಸ್ಖಲತ್ವಂ ಸ್ವಾತ್ಮನಸ್ತದಾ ।
ಮಾದೃಶಾನಾಂ ಸ್ಖಲತ್ವಂ ಕಿಂ ವಾಚ್ಯಂ ಕ್ಷಾಮ್ಯಂತು ತದ್ಬುಧಾಃ ॥

ಸ್ವಾದಂ ಸ್ವಾದಂ ವಿಬುಧನಿಚಯೈಃ ಸೇವ್ಯಮಾನಾಂ ಸುಧಾಂ ತಾಂ
ದರ್ಶಂ ದರ್ಶಂ ಪ್ರಥಿತಚರಸನ್ನ್ಯಾಯರತ್ನಾವಳೀಂ ತಾಂ ।
ಬೋಧಂ ಬೋಧಂ ಜನಹಿತಮನುವ್ಯಾಖ್ಯಸದ್ಗ್ರಂಥಸಾರಂ
ಭಾಷಾಟೀಕಾಂ ವ್ಯರಚಯದಿಮಾಂ ತಂತ್ರಿನಾರಾಯಣಾಖ್ಯಃ ॥

ಕರ್ಣಾಟಭಾಷಾಟೀಕೇಯಂ ಸಂಪೀತನಯಚಂದ್ರಿಕಾ ।
ಅನುವ್ಯಾಖ್ಯಾನಸಾರಾರ್ಥಬೋಧಿನೀ ಲಸತಾಚ್ಚಿರಂ ॥

ಕೃತ್ಯಾನಯಾ ಯಥಾಬೋಧಂ ಕೃತಯಾ ಪ್ರೀಯತಾಂ ಹರಿಃ ।
ಶ್ರೀ ಮಧ್ವಾದಿರಾಜಾದ್ಯಾಃ ಪ್ರೀಯಂತಾಂ ಗುರವಶ್ಚ ನಃ ॥

ಆಚಾರ್ಯಃ ಪವನೋಽಸ್ಮಾಕಮಾಚಾರ್ಯಾಣೀ ಚ ಭಾರತೀ ।
ದೇವೋ ನಾರಾಯಣಃ ಶ್ರೀಶೋ ದೇವೀ ಮಂಗಲದೇವತಾ ॥

ಈ ಗ್ರಂಥವು ಸಮಾಪ್ತವಾಯಿತು.




---

* ಇವು ಮೂರು ಜಯತೀರ್ಥಶ್ರೀಮಚ್ಚರಣ ವಿರಚಿತ ಮಂಗಲಾಚರಣ ಪದ್ಯಗಳು.